# ಸಂದೇಶರತ್ನಮಾಲಾ




ಲೇಖಕರು : ಕೀರ್ತಿಶೇಷ ಮಾಧ್ವಭೂಷಣ ಬಿ. ಭೀಮರಾವ್

# ಲೇಖಕರ ಕಿರುಪರಿಚಯ

ದಾವಣಗೆರೆ ಕೀರ್ತಿಶೇಷ ಭೀಮರಾವ್‌ರವರು ತರುಣ ವಯಸ್ಕರಾಗಿದ್ದಾಗ, ಸಮಾನ ಮನಸ್ಸುಳ್ಳ ಗೌರವಾನ್ವಿತ ವ್ಯಕ್ತಿಗಳನ್ನು ತಮ್ಮ ಜೊತೆಯಲ್ಲಿ ಸೇರಿಸಿಕೊಂಡು ತತ್ವಪ್ರಚಾರದ ಉದ್ದೇಶವುಳ್ಳವರಾಗಿ, ಒಂದು ಸಂಸ್ಥೆಯನ್ನು 1934ರಲ್ಲಿ ಸ್ಥಾಪನೆ ಮಾಡಿ, ಸೂಕ್ತವಾದ ಕಟ್ಟಡವನ್ನೂ ನಿರ್ಮಿಸಿ ಸಂಘಕ್ಕೆ ಅರ್ಪಿಸಿದರು. ಇಂದಿಗೆ 85 ವರ್ಷಗಳು ಸಂದಿವೆ. ಸಂಘಕ್ಕೆ 'ಸೇವಾ' ಪದವನ್ನು ಸೇರಿಸಿ ತಾವೂ 'ಸೇವಾ' ಮನೋಭಾವವನ್ನು ಅನುಷ್ಠಾನದಲ್ಲಿರಿಸಿ-ಕೊಂಡು ತಮ್ಮ ಬದುಕಿನುದ್ದಕ್ಕೂ ನಿಸ್ವಾರ್ಥ ಸೇವೆಯನ್ನು ಸಲ್ಲಿಸಿದರು. ಪಂಡಿತರಿಂದ ಪಾಠ-ಪ್ರವಚನಗಳನ್ನು ಏರ್ಪಡಿಸಿ, ತಾವು ಸಂಪ್ರದಾಯವನ್ನನುಸರಿಸಿ, ಅವರಲ್ಲಿ ಅಧ್ಯಯನಾದಿಗಳನ್ನು ಮಾಡಿದರು. ಸಂಘದ ಬಾಲ್ಯಾವಸ್ಥೆಯಲ್ಲಿಯೇ ಹೊರತಂದ ಚೊಚ್ಚಲ ಅನುವಾದಿಸಿದ ಕೃತಿ: **'ಶ್ರೀಮದ್ಭಾಗವತ ಸಾರೋದ್ಧಾರ'**. ಅಂದಿನಿಂದ ಅವರು ತಮ್ಮ ಲೇಖನಿಗೆ ವಿರಾಮ ಕೊಡದಯೇ ನಂತರದ ದಿನಗಳಲ್ಲಿ ವಿಷ್ಣು-ರಹಸ್ಯ , ಯುಕ್ತಿ-ಮಲ್ಲಿಕಾದಿ ಗ್ರಂಥಗಳನ್ನು ಅನುವಾದಿಸಿ, ಪ್ರಕಟಿಸುತ್ತ ತತ್ವಜ್ಞಾನ ಜಾಗೃತಿಯನ್ನುಂಟು ಮಾಡುವುದಕ್ಕೋಸ್ಕರ ತಮ್ಮ ಬದುಕನ್ನೇ ಮುಡುಪಾಗಿಟ್ಟರು. ಸಂಘದ 'ಮಧ್ವರಾಜ ಮಂದಿರ'ದಲ್ಲಿ ಪ್ರವಚನವನ್ನೂ ನಡೆಸುತ್ತ , ಅಲ್ಲಿಯ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡು ಸಂಘದ ಹೆಸರನ್ನು ಚಿರಸ್ಥಾಯಿಯನ್ನಾಗಿ ಮಾಡಿದ್ದಾರೆ. ಈ ಸೇವೆಯನ್ನು ಗುರುತಿಸಿ, ಅಖಿಲಭಾರತ ಮಾಧ್ವ ಮಹಾಮಂಡಲವು ಅವರಿಗೆ **'ಮಾಧ್ವಭೂಷಣ'** ಎಂಬ ಪ್ರಶಸ್ತಿಯನ್ನು ನೀಡಿತು. ತಮ್ಮ 76ನೇ ವಯಸ್ಸಿನಲ್ಲಿ (1979) ಅವರು ದೈವಾಧೀನರಾದರು.

**ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ ಅನುಗ್ರಹ ಸಂದೇಶಃ** – 'ಸಂಸ್ಕೃತ ಬರದ ಜಿಜ್ಞಾಸುಗಳಿಗೆ ಶ್ರೀಮದಾಚಾರ್ಯರ ಸಿದ್ಧಾಂತದ ಪ್ರಮೇಯಗಳನ್ನು ತಿಳಿಯಲು ದಿ|| ಭೀಮರಾವ್‌ರವರ ಕೃತಿಗಳು ಉತ್ತಮ ಸಹಾಯಕವಾಗಿವೆ.'

ದಿ|| ಭೀಮರಾಯರು ರಚಿಸಿರುವ ಕೃತಿಗಳು ''ಮೋಕ್ಷಾಪೇಕ್ಷಿಗಳಾಗಿ ಸಾಧಕ ವರ್ಗದಲ್ಲಿರುವವರಿಗೆ ಕೈದೀವಟಿಗೆಯಂತೆ – ಅಂದರೆ ತತ್ವಜ್ಞಾನ ಸಂಪಾದನೆಯಲ್ಲಿರುವವರಿಗೆ ಬೆಳಕು ನೀಡಿ ಉಪಕರಿಸುತ್ತೆ'' ಹೀಗೆಂದು ಜ್ಞಾನಪ್ರಸಾರವನ್ನೇ ತಮ್ಮ ಧ್ಯೇಯವನ್ನಾಗಿಟ್ಟು-ಕೊಂಡಿರುವ **ಶ್ರೀ ಶ್ರೀ ಸುವಿದ್ಯೇಂದ್ರತೀರ್ಥರು** ವ್ಯಕ್ತಪಡಿಸಿದ್ದಾರೆ.

''ಇಪ್ಪತ್ತನೆಯ ಶತಮಾನದಲ್ಲಿ ಹೆಚ್ಚು ಉಪಯುಕ್ತವೆನ್ನಿಸಿರುವ ಅನೇಕ ಅನುವಾದ ಕೃತಿಗಳನ್ನು ವಿದ್ವಾಂಸರಾದ ಭೀಮರಾಯರು ರಚಿಸಿದ್ದಾರೆ... ಭಾಷೆಯ ಮೇಲೆ ಹಿಡಿತ, ಅದರ ಪರಿಣಾಮಕಾರಿಯಾದ ಬಳಕೆ ಗಮನಾರ್ಹವಾಗಿದೆ. **ನೇರ ನಿರೂಪಣೆ, ಸುಲಭ ಭಾಷೆ, ಸರಳ ಶೈಲಿ** ಮೊದಲಾದ ಕಾರಣಗಳಿಂದ ಅವು **ಹೆಚ್ಚಿನವರಿಗೆ ತಲುಪಲು ಸಾಧ್ಯವಾಗಿದೆ....''** -ಹೀಗೆಂದು, ಪ್ರಸಿದ್ಧ ಲೇಖಕರೂ, ಸಂಶೋಧಕರೂ, ವಾಗ್ಮಿಗಳೂ ಆಗಿರುವ **ಡಾ|| ಪ್ರಭಂಜನಾಚಾರ್ಯರು** ಪ್ರಶಂಸಿಸಿದ್ದಾರೆ.

॥ ಶ್ರೀಃ ॥

# ಸಂದೇಶರತ್ನಮಾಲಾ

# ನಾಸ್ತಿಕ್ಯನಿರಾಸ - ಪ್ರಮಾಣಗಳು

# ಆಗಮಸಾರ - ಮೋಕ್ಷಮಾರ್ಗ - ಮುಕ್ತಿ

ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ।
ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ॥

ಲೇಖಕರು :
ಕೀರ್ತಿಶೇಷ ಮಾಧ್ವಭೂಷಣ ಶ್ರೀ ಬಿ. ಭೀಮರಾವ್
ದಾವಣಗೆರೆ

ಪ್ರಕಾಶಕರು :
ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ (ರಿ.)
'ಮಧ್ವರಾಜ ಮಂದಿರ', ಕಸ್ತೂರಿಬಾ ಬಡಾವಣೆ
3ನೇ ತಿರುವು, ಕುವೆಂಪು ರಸ್ತೆ, ದಾವಣಗೆರೆ - 577 002

**ಸಂದೇಶರತ್ನಮಾಲಾ - ನಾಸ್ತಿಕ್ಯನಿರಾಸ-ಪ್ರಮಾಣಗಳು-ಆಗಮಸಾರ-ಮೋಕ್ಷಮಾರ್ಗ**

**ದಾವಣಗೆರೆಯ ಕೀರ್ತಿಶೇಷ ಮಾಧ್ವಭೂಷಣ ಭೀಮರಾವ್**

ಪ್ರಕಾಶಕರು :

**ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ** (ರಿ.), ದಾವಣಗೆರೆ – 577 002

ಪ್ರಥಮ ಮುದ್ರಣ : 1968 ಇಂದ 1971 (4 ಸಂಪುಟಗಳಲ್ಲಿ)

ದ್ವಿತೀಯ ಮುದ್ರಣ : 2019 (ಒಂದು ಸಂಪುಟದಲ್ಲಿ)



ಪುಟಗಳು : xvi + 512 + 8

ಪ್ರತಿಗಳು : 1000

ಬೆಲೆ : ರೂ.280/

ಪುಸ್ತಕಗಳು ದೊರೆಯುವ ಸ್ಥಳ :

1. **ಸಂಘದ ಕಾರ್ಯಾಲಯ**, ಕೆ.ಬಿ. ಬಡಾವಣೆ, ದಾವಣಗೆರೆ. ☎ 08192230340
2. **ಬಿ. ವಿ. ಪ್ರಹ್ಲಾದ**, ರಾಜಾಜಿನಗರ, ಬೆಂಗಳೂರು. Mob : 9448171859
3. **ವಂದನಾ ಬುಕ್ ಹೌಸ್**, ಎನ್. ಆರ್. ಕಾಲೋನಿ, ಬೆಂಗಳೂರು. ☎ 26770826
4. **ವೇದಾಂತ ಬುಕ್ ಹೌಸ್**, ಚಾಮರಾಜಪೇಟೆ, ಬೆಂಗಳೂರು. ☎ 26507590
5. **ಪೂರ್ಣಪ್ರಜ್ಞ ವಿದ್ಯಾಪೀಠ - ಪುಸ್ತಕ ಮಳಿಗೆ**, ಬೆಂಗಳೂರು
6. **ಉತ್ತರಾದಿಮಠ - ಪುಸ್ತಕ ಮಳಿಗೆ**, ಬೆಂಗಳೂರು
7. **ಬಿ. ಎಸ್. ರಘುನಾಥರಾವ್**, Mob : 9343718286

ಮುಖಪುಟ ವಿನ್ಯಾಸ : **ಕೆ. ಎಂ. ಶೇಷಗಿರಿ**

ಮುದ್ರಣ : **ವಾಗರ್ಥ**, ಬೆಂಗಳೂರು–19. vagartha@yahoo.com

Dr. Prabhanjanacharya M.A., Ph.D
Principal, Govt. College (Retd.)
ನಿರ್ದೇಶಕರು, ವ್ಯಾಸ ಮಧ್ವ ಪ್ರತಿಷ್ಠಾನ, ಬೆಂಗಳೂರು

# ಮುನ್ನುಡಿ

ಜಗತ್ತು ಕಂಡ ದರ್ಶನಗಳಲ್ಲಿ ಆಸ್ತಿಕ ದರ್ಶನಗಳಂತೆ ನಾಸ್ತಿಕ ದರ್ಶನಗಳೂ ಸೇರಿವೆ. ಸಾಮಾನ್ಯವಾಗಿ ಆಗಮಪ್ರಾಮಾಣ್ಯವನ್ನು ಅಂಗೀಕರಿಸಿ ದೇವರು, ಧರ್ಮ, ಅಧರ್ಮ, ಪುಣ್ಯ, ಪಾಪ, ಸ್ವರ್ಗ, ನರಕ ಹಾಗೂ ಕರ್ಮಸಿದ್ಧಾಂತ ಮೊದಲಾದವುಗಳನ್ನು ಅಂಗೀಕರಿಸುವವರು ಆಸ್ತಿಕರೆನ್ನಿಸಿದರೆ, ಅವುಗಳನ್ನು ಅಂಗೀಕರಿಸದವರು ನಾಸ್ತಿಕರು ಎನ್ನಿಸುವರು. ನಾಸ್ತಿಕ ದರ್ಶನಗಳಲ್ಲಿ ಚಾರ್ವಾಕ ದರ್ಶನಕ್ಕೆ ಅಗ್ರಸ್ಥಾನ. ಅದರ ಪ್ರವರ್ತಕರಾದವರು ಬೃಹಸ್ಪತ್ಯಾಚಾರ್ಯರು. ನಾಸ್ತಿಕ್ಯದ ಇನ್ನೊಂದು ಮೂಲ ಶುಕ್ರಾಚಾರ್ಯರು. ಅವರ ಶಿಷ್ಯ ಕಣಿಕ ಎಂಬವನಿಂದ ಶಕುನಿ ಕೌರವರಿಗೆ ಅದನ್ನು ಉಪದೇಶಿಸಿದ ವಿವರ ಶ್ರೀಮನ್ಮಹಾಭಾರತ ಹಾಗೂ ತಾತ್ಪರ್ಯನಿರ್ಣಯಗಳಲ್ಲಿ ಉಲ್ಲೇಖಿತವಾಗಿದೆ. ಬೃಹಸ್ಪತ್ಯಾಚಾರ್ಯರು ದೇವಗುರುಗಳಾದರೆ, ಶುಕ್ರಾಚಾರ್ಯರು ದೈತ್ಯ-ಗುರುಗಳು. ಇಬ್ಬರೂ ಸಹ ಪರಮಾಸ್ತಿಕರಾದ ಭಾಗವತರು ಎಂಬುದು ವಿಶೇಷ. ಅದಕ್ಕೆ ಭಗವದಾದೇಶ ಕಾರಣ ಎಂದು ಶಾಸ್ತ್ರಗಳು ಸಾರಿವೆ. ಬೌದ್ಧ, ಜೈನ ದರ್ಶನಗಳೂ ಸಹ ನಾಸ್ತಿಕ ದರ್ಶನಗಳೇ. ನಿರೀಶ್ವರ ಸಾಂಖ್ಯ ದರ್ಶನವೂ ಇದೇ ಸಾಲಿಗೆ ಸೇರುವುದು. ಇಂದು ಪ್ರಸಿದ್ಧವಿರುವ ಪೂರ್ವಮೀಮಾಂಸೆಯು ಸಹ ಒಂದು ಬಗೆಯಲ್ಲಿ ನಾಸ್ತಿಕದರ್ಶನವೇ ಆಗಿದೆ. ಎಂದರೆ, ಚಾರ್ವಾಕರದು ಅವೈದಿಕನಾಸ್ತಿಕದರ್ಶನವಾದರೆ, ಇವರದು ವೈದಿಕನಾಸ್ತಿಕದರ್ಶನ ಎನ್ನಬಹುದು. ವೇದಗಳನ್ನು ಒಪ್ಪಿಯೂ ಸಹ ಜಗತ್ತಿನ ಅಸ್ತಿತ್ವವನ್ನು ಅಲ್ಲಗಳೆಯುವ, ಬ್ರಹ್ಮನ ನಿರ್ಗುಣತ್ವವನ್ನು ಸಾರುವ ಮಾಯಾವಾದವು ಸಹ ಒಂದು ಬಗೆಯ ನಾಸ್ತಿಕದರ್ಶನ ಎನ್ನಬಹುದು; ಚಾರ್ವಾಕರು ಕಣ್ಣಿಗೆ ಕಂಡದ್ದು ಮಾತ್ರವೇ ಸತ್ಯ ಎಂದರೆ, ವೈದಿಕ ಸೋಗಿನ ಮಾಯಾವಾದಿಗಳು ಅದನ್ನು ಸಹ ಮಿಥ್ಯೆ ಎಂದು ಸಾರಿ ಅದನ್ನೂ ಮೀರಿ ನಿಂತದ್ದು ದೊಡ್ಡ ವಿಪರ್ಯಾಸ. ಅದರಂತೆ ಬ್ರಹ್ಮ ಪರಿಣಾಮವಾದವನ್ನು ಸಾರುವ ಮಾಯಾವಾದದ ಇತರ ದರ್ಶನಗಳು ಸಹ. ಪ್ರಾಚೀನ ಆಸ್ತಿಕ ದರ್ಶನಗಳಿಗೆ, ನಾಸ್ತಿಕ ದರ್ಶನಗಳು ಸವಾಲಾಗಿ ನಿಂತಿದ್ದರೆ, ಇಂದು ಅದರ ಸ್ಥಾನವನ್ನು ವಿಜ್ಞಾನ ಅಲಂಕರಿಸಿದೆ ಎಂದು ಕೆಲವರ ಭಾವನೆ. ವಿಚಾರವಾದಿಗಳು ಎಂಬ ಗುಂಪು

ಚಾರ್ವಾಕ ಮತದ ಮತ್ತೊಂದು ರೂಪ ಎನ್ನಬಹುದು. ಕಣ್ಣಿಗೆ ಕಂಡದ್ದಷ್ಟೇ ಸತ್ಯ ಎಂದು ಪ್ರತ್ಯಕ್ಷವೊಂದನ್ನೇ ಪ್ರಮಾಣವೆಂದು ವಾದಿಸಿದ ಚಾರ್ವಾಕರಂತೆ ಈ ವಿಚಾರವಾದಿಗಳು ವಿಜ್ಞಾನ ಹೇಳುವುದಷ್ಟೇ ಸತ್ಯ ಎಂಬ ವಾದವನ್ನು ಮುಂದೆ ಮಾಡಿ ಧರ್ಮಾದಿಗಳನ್ನು ವಿರೋಧಿಸುವ ಕಾರ್ಯದಲ್ಲಿ ತೊಡಗಿರುವರು. ಚಾರ್ವಾಕ ಮತದ ಪ್ರಭಾವಕ್ಕೊಳಗಾಗುವ ಜನ ಧರ್ಮಾಧರ್ಮಗಳ ಜ್ಞಾನದಿಂದ ದೂರಾದರು. ಧರ್ಮಾಧರ್ಮಗಳನ್ನು ಒಪ್ಪದ ಅವರು ಅಧರ್ಮವನ್ನು ಮಾತ್ರ ಒಪ್ಪಿದ್ದು ವಿಪರ್ಯಾಸ. ಮಡಿ-ಮೈಲಿಗೆಗಳನ್ನು ಬೇಡ ಎನ್ನುವವರು ಮೈಲಿಗೆಯನ್ನು ಮಾತ್ರ ಆಚರಿಸುವವರು. ಪುಣ್ಯ-ಪಾಪಗಳನ್ನು ನಿರಾಕರಿಸಿದ ಅವರು ಪಾಪಕಾರ್ಯಗಳ ಬಗ್ಗೆ ಜನತೆ ತೊಡಗುವಲ್ಲಿ ಪ್ರೇರೇಪಣೆ ನೀಡಿದರು. ಆಸ್ತಿಕ್ಯದ ಸೋಗಿನ ಅನೇಕ ದರ್ಶನಗಳು ಮಾಡಿದ್ದೂ ಅದೇ ಕಾರ್ಯವನ್ನೇ. ಮುಖ್ಯವಾಗಿ ದೇವರು, ಜಗತ್ತು ಹಾಗೂ ಜೀವರ ಬಗ್ಗೆ ಇವರ ನಿಲುವು ನೇತ್ಯಾತ್ಮಕವೇ ಆಗಿತ್ತು. ಮೋಕ್ಷದ ಪರಿಕಲ್ಪನೆಯಂತೂ ಅದರ ಬಗ್ಗೆ ವೈರಾಗ್ಯಭಾವವನ್ನೇ ಉಂಟು ಮಾಡುವಂತಾಗಿತ್ತು. ವೈದಿಕರ ಸೋಗಿನಲ್ಲೇ ಅವೈದಿಕ ವಿಚಾರಗಳನ್ನು ಅಂತಹವರು ಹರಡಿದರು. ಆದರಿಂದಾಗಿ ವೈದಿಕ ಸಾಹಿತ್ಯದ ಬಗ್ಗೆಯೇ ಜನರಿಗೆ ಅನಾದರ ಉಂಟಾಗುವಂತಾಯಿತು. ಆದರೆ ವೇದ, ಇತಿಹಾಸ ಹಾಗೂ ಪುರಾಣಾದಿಗಳ ಆಳವಾದ ಅಧ್ಯಯನ ಮಾಡಿದವರಿಗೆ ನಾಸ್ತಿಕ್ಯ ಎಂದೂ ಸವಾಲು ಎನ್ನಿಸುವುದೇ ಇಲ್ಲ ಎಂಬುದನ್ನು ಬ್ರಹ್ಮಸೂತ್ರ, ಭಗವದ್ಗೀತೆ ಮೊದಲಾದವುಗಳು ಸ್ಪಷ್ಟಪಡಿಸಿವೆ.

ಪ್ರಸ್ತುತ ಆಧುನಿಕ ಚಿಂತನೆಯತ್ತ ಗಮನ ಹರಿಸಿದರೆ ವಿಜ್ಞಾನವು ತತ್ತ್ವಜ್ಞಾನದ ವಿರೋಧಿ ಎಂಬ ವಾದ ಎದ್ದು ಕಾಣುವುದು. ಇಂತಹ ವಾದಕ್ಕೆ ಆಕರ್ಷಿತರಾಗುವ ಜನರು, ಅದರಲ್ಲೂ ಯುವವರ್ಗದವರು ಅಧ್ಯಾತ್ಮವು ಮಾಡಲು ಬೇರೆ ಕೆಲಸವಿಲ್ಲದ ಸೋಮಾರಿಗಳ ಪರಿಕಲ್ಪನೆ, ಜೀವನದಲ್ಲಿ ಸೋಲನ್ನು ಕಂಡ ಅಸಮರ್ಥಜನರ ಪಲಾಯನವಾದ, ಆದ್ದರಿಂದ ಇವು ದೇಶದ ಪ್ರಗತಿಗೆ ಮಾರಕ, ಸಮಾಜದ ಉನ್ನತಿಗೆ ಪ್ರತಿಬಂಧಕ ಎಂದು ಭಾವಿಸುವಂತಾಗಿದೆ. ಇದರಿಂದಾಗಿ ಧಾರ್ಮಿಕ ಶ್ರದ್ಧೆಯ ಜನರೂ ಸಹ ಧಾರ್ಮಿಕ ವಿಚಾರಗಳಲ್ಲಿ ಸಂಶಯ ಭಾವವನ್ನು ತಳಿಯುವಂತಾಗಿದೆ.

ಆದರೆ ಇದು ಸಂಪೂರ್ಣವಾಗಿ ತಪ್ಪು. 'ವಿಜ್ಞಾನ ಒಂದು ಪರಿಪೂರ್ಣವಾದ ಶಾಸ್ತ್ರ. ಆದರಿಂದ ವಿಶ್ವದ ರಹಸ್ಯವೇ ಬಯಲಾಗಿದೆ. ದೇವರು, ಧರ್ಮ ಮೊದಲಾದ ನಂಬಿಕೆಗಳು ಸುಳ್ಳು ಎಂಬುದು ಸಾಬೀತಾಗಿದೆ' ಎಂಬುದು ಸಂಪೂರ್ಣವಾಗಿ ತಪ್ಪು ತಿಳುವಳಿಕೆ. ವಿಜ್ಞಾನದ ಅರ್ಥವನ್ನಾಗಲೀ, ಅದರ ವ್ಯಾಪ್ತಿಯನ್ನಾಗಲೀ, ವಿಜ್ಞಾನಿಗಳ ಸ್ಪಷ್ಟ ನಿಲುವುಗಳನ್ನಾಗಲೀ ಅರಿಯದ ಅವಿವೇಕಿಗಳು ಮಾತ್ರವೇ ಹುಟ್ಟುಹಾಕಿರುವ ವಾದ ಸರಣಿ ಇದಾಗಿದೆ.

ವಿಜ್ಞಾನದ ಇತಿಮಿತಿಗಳನ್ನು ವಿಜ್ಞಾನಿಗಳೇ ಸಾರಿರುವರು. ಸರ್ ಆರ್ಥರ್ ಥಾಮ್ಸನ್ ಎಂಬ ವಿಜ್ಞಾನಿ ಹೇಳುವಂತೆ 'ವಿಜ್ಞಾನವು ಎಲ್ಲವನ್ನು ವಿವರಿಸಿಬಿಟ್ಟಿದೆ, ಅನಾವರಣಗೊಳಿಸಿಬಿಟ್ಟಿದೆ ಎಂಬುದು ತಪ್ಪು ತಿಳುವಳಿಕೆ. ನಿಜ ಹೇಳಬೇಕೆಂದರೆ, ವಿಜ್ಞಾನವು ಏನನ್ನೂ ವಿವರಿಸಿಯೇ ಇಲ್ಲ. ಅದರ ಗುರಿ ಏಕೆ ಎಂದು ವಿವರಿಸುವುದು ಅಲ್ಲವೇ ಅಲ್ಲ. ಅದು ಹೇಗೆ ಎಂಬ ಪ್ರಶ್ನೆಗಷ್ಟೇ ಉತ್ತರ ಹುಡುಕುವ ಕಾರ್ಯ. ಜಗತ್ತಿನ ವಿಜ್ಞಾನಿಗಳಲ್ಲಿ ಹೆಚ್ಚಿನವರು ಮೂಲತಃ ದಾರ್ಶನಿಕರು ಎಂಬುದನ್ನು ಗಮನಿಸಬೇಕು. Theory of relativity ಯಂತಹ ಮಹತ್ತ್ವವಾದ ಕೊಡುಗೆ ನೀಡಿದ ಐನ್‌ಸ್ಟೈನ್ ಸಹ ನಾಸ್ತಿಕವಾದಿ ಅಲ್ಲ. ಅದರಂತೆ, Co-ordinate Geometry ಯನ್ನು ರೂಪಿಸಿದ ಗಣಿತಶಾಸ್ತ್ರಜ್ಞ ಡಿಕಾರ್ಟ್ ಸಹ. ಅದರಂತೆ ಪೈಥಾಗೊರಸ್, ಅರಿಸ್ಟಾಟಲ್ ಮೊದಲಾದವರು ಮೂಲತಃ ದಾರ್ಶನಿಕರೇ ಆಗಿದ್ದವರು.

ಹಾಗೆ ನೋಡಿದರೆ, **ವಿಜ್ಞಾನ ಹಾಗೂ ತತ್ತ್ವಜ್ಞಾನಗಳ ಕಾರ್ಯಕ್ಷೇತ್ರ ವಿಭಿನ್ನವಾದುದು**. ವಿಜ್ಞಾನದ ಪರಿಧಿ ಕೇವಲ ಐಂದ್ರಿಕ ಪ್ರಪಂಚ ಮಾತ್ರ. ಎಂದರೆ, ಭೌತಿಕ ಜಗತ್ತಿನ ಅನ್ವೇಷಣೆಗಷ್ಟೇ ಅದರ ವ್ಯಾಪ್ತಿ ಸೀಮಿತ. ತತ್ತ್ವಜ್ಞಾನದ್ದು ಹಾಗಲ್ಲ. ಭೌತಿಕ ಜಗತ್ತಿನೊಂದಿಗೆ ಅದರ ಹಿನ್ನೆಲೆಯಲ್ಲಿನ ಅತೀಂದ್ರಿಯ ಜಗತ್ತನ್ನೂ ಸಹ ಅದು ಒಳಗೊಂಡಿದೆ. ಮುಖ್ಯವಾಗಿ ಜಗತ್ತಿನ ಮೂಲಕಾರಣದ ಅನ್ವೇಷಣೆ ತತ್ತ್ವಜ್ಞಾನದ ಮುಖ್ಯ ಗುರಿ: 'ಅಥಾತೋ ಬ್ರಹ್ಮಜಿಜ್ಞಾಸಾ'. ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ ವಿಜ್ಞಾನವು ಕೈಚೆಲ್ಲಿ ಕುಳಿತಲ್ಲಿ ತತ್ತ್ವಜ್ಞಾನ ನೆರವಿಗೆ ಧಾವಿಸುವುದು: 'Philosophy starts where Science ends'. ಆಧುನಿಕರು ತತ್ತ್ವಜ್ಞಾನವನ್ನು Metaphysics ಎಂದು ಕರೆದಿರುವುದು ಇದಕ್ಕೆ ಪೋಷಕವಾಗಿದೆ. ಭೂಮಿಯ ಮೇಲೆ ಸಂಚರಿಸುವ ಬಸ್ಸು ರೈಲುಗಳು, ಗಗನದಲ್ಲಿ ಹಾರುವ ವಿಮಾನಕ್ಕೆ ಅಡ್ಡಿಯಾಗಲು ಸಾಧ್ಯವೇ?

ಪ್ರಕೃತಿ-ಪುರುಷರಲ್ಲಿ ವಿಜ್ಞಾನದ ಜಿಜ್ಞಾಸೆ ಪ್ರಕೃತಿಗೆ ಸೀಮಿತವಾದದ್ದು. ತತ್ತ್ವಜ್ಞಾನದ್ದು ಮುಖ್ಯವಾಗಿ ಪುರುಷನ ಬಗೆಯದು. ಆದರೆ, **ವಿಜ್ಞಾನ ಎಂದೂ ಧರ್ಮ, ದೇವರು ಮೊದಲಾದ ತಾತ್ತ್ವಿಕವಿಚಾರಗಳನ್ನು ಅಲ್ಲಗಳೆದಿಲ್ಲ.** ಅಲ್ಲಗಳೆಯುವ ಉದ್ದೇಶವೂ ಅದಕ್ಕಿಲ್ಲ. ಮೊದಲೇ ಹೇಳಿದಂತೆ ವಿಜ್ಞಾನದ ವ್ಯಾಪ್ತಿಗೆ ಅವು ಬರುವುದೂ ಇಲ್ಲ. ಅದರಂತೆ ಪುಣ್ಯ-ಪಾಪ; ಸ್ವರ್ಗ-ನರಕ; ಧರ್ಮ-ಅಧರ್ಮ ಮೊದಲಾದವುಗಳ ನಿರಾಕರಣೆಯನ್ನು ಅವು ಮಾಡುವಂತಿಲ್ಲ. ಕೆಲವರು ಹಾಗೆ ತಿಳಿದಿದ್ದರೆ ಅವರಿಗೆ ವಿಜ್ಞಾನದ ಸ್ವರೂಪವೇ ತಿಳಿದಿಲ್ಲ ಎನ್ನದೇ ವಿಧಿಯಿಲ್ಲ. ಆದ್ದರಿಂದ ಅಧ್ಯಾತ್ಮ ಅವೈಜ್ಞಾನಿಕ ಎಂಬ ಭಾವವನ್ನು ಒಪ್ಪಲು ಸರ್ವಥಾ ಸಾಧ್ಯವಿಲ್ಲ.

ಹಾಗೆ ತಿಳಿದ ಜನರು ಬೇಕಾದರೆ ಅವನ್ನು ಬಿಡಲಿ ; ಆದರೆ ವಿಜ್ಞಾನ ಹೀಗೆ ಹೇಳಿದೆ ಎಂಬ ಭ್ರಮೆಯನ್ನು ಮಾತ್ರ ಎಂದೂ ಹೊಂದಬೇಕಿಲ್ಲ. ಇಂದಿನ ಅನೇಕರಲ್ಲಿಯೂ

ತತ್ತ ಜ್ಞಾನವನ್ನು ನಿಂದಿಸುವುದೇ ವೈಜ್ಞಾನಿಕದೃಷ್ಟಿ ಎಂಬ ಗಾಢ ತಪ್ಪುಕಲ್ಪನೆಯೇ ತುಂಬಿದೆ. ವಿಜ್ಞಾನದ ತಳಬುಡವನ್ನೂ ತಿಳಿಯದ ಇಂತಹ ಜನರ ಆಕ್ಷೇಪ ಎಷ್ಟೇ ಇದ್ದರೂ ಅದರಿಂದ ತತ್ತ್ವಜ್ಞಾನದ ಘನತೆಗೆ ಇನಿತೂ ಕುಂದಿಲ್ಲ.

ಮತ್ತೊಂದು ರೀತಿಯಲ್ಲಿ ವಿಚಾರ ಮಾಡಿದರೆ ವಿಜ್ಞಾನ ನಿಜಕ್ಕೂ ತತ್ತ್ವಜ್ಞಾನಕ್ಕೆ ಪೋಷಕವಾಗಿದೆ, ಪೂರಕವಾಗಿದೆ; ಎಂದೂ ವಿರುದ್ಧವಾಗಿಲ್ಲ ಎಂಬ ಸತ್ಯ ಗೋಚರಿಸುತ್ತದೆ. ವಿಜ್ಞಾನವನ್ನು ಸರಿಯಾಗಿ ತಿಳಿದು ಶಾಸ್ತ್ರವನ್ನು ಅಧ್ಯಯನ ಮಾಡಿದವರಿಗೆ, ವಿಜ್ಞಾನ ತಿಳಿಯದ ಶಾಸ್ತ್ರಜ್ಞರಿಗಿಂತ ಹೆಚ್ಚು ಶ್ರದ್ಧೆ - ವಿಶ್ವಾಸಗಳು ಶಾಸ್ತ್ರದಲ್ಲಿ ಮೂಡುತ್ತವೆ. ತತ್ತ ಜ್ಞಾನವು ವಿಧಿಸುವ ಸ್ವಚ್ಛತೆ, ದೇಹಶುದ್ಧಿ, ಆಹಾರನಿಯಮ ಮೊದಲಾದವುಗಳು ಮೇಲ್ನೋಟಕ್ಕೆ ಆಭಾಸವಾಗಿ ಕಂಡರೆ, ವೈಜ್ಞಾನಿಕದೃಷ್ಟಿಯಲ್ಲಿ ನೋಡಿದವರಿಗೆ ಅದರ ಹಿಂದಿನ ಆರೋಗ್ಯಕರ ಜೀವನದ ಪರಿಕಲ್ಪನೆ ಗಾಢವಾಗಿ ತಟ್ಟುತ್ತದೆ. ಮನೆಯಲ್ಲಿರಲಿ, ರಸ್ತೆಯಲ್ಲೂ ಸ್ವಚ್ಛತೆಯನ್ನು ಪಾಲಿಸಬಯಸುವ ಪಾಶ್ಚಾತ್ಯದೇಶಗಳು ಇದಕ್ಕೆ ಉತ್ತಮ ದೃಷ್ಟಾಂತ.

. ರಾಮಾಯಣದಲ್ಲಿ ಬರುವ ನೆರಳು ಹಿಡಿದು ಗಗನದ ಪ್ರಾಣಿಗಳನ್ನು ಕೆಳಕ್ಕೆ ಎಳೆದು ನಾಶಪಡಿಸುವ ಸಿಂಹಿಕೆಯ ಪ್ರಸಂಗದಲ್ಲಿ ಇಂದಿನ Radarನ ಪರಿಕಲ್ಪನೆಯನ್ನೂ, ರಾವಣನ ಅಸಂಖ್ಯವಾದ ಮೂಲಬಲ ಲಂಕೆಯಲ್ಲಿ ಸೀಮಿತ ಪ್ರದೇಶದಲ್ಲಿ ನೆಲೆಸಲು ಸಾಧ್ಯವಾದ್ದರಲ್ಲಿ ಇಂದಿನ Virus ಪರಿಕಲ್ಪನೆಯನ್ನೂ, ಭಾಗವತ ಸಪ್ತಮಸ್ಕಂಧದಲ್ಲಿ ಬರುವ ಋಷಭನಾಮಕ ಶ್ರೀಹರಿಯು ಭೂಮಿಯಲ್ಲಿಯೇ ಇದ್ದು ಮಳೆತರಿಸಿದ್ದರಲ್ಲಿ ಇಂದಿನ ಕೃತಕಮಳೆಯ ಪರಿಕಲ್ಪನೆಯನ್ನೂ, ಪ್ರಿಯವ್ರತರಾಜನು ಜ್ಯೋತಿರ್ಮಯವಾದ ರಥದ ನೆರವಿನಿಂದ ರಾತ್ರಿಯನ್ನೂ ಹಗಲಾಗಿಸಿದ ಪ್ರಸಂಗದ ಇಂದಿನ Solar mirror ಪರಿಕಲ್ಪನೆಯನ್ನೂ, ಶ್ರೀಕೃಷ್ಣನು ತನ್ನ ಚಕ್ರದಿಂದ ಜೀರ್ಣಶರೀರವನ್ನು ಕತ್ತರಿಸಿ ಜಾಂಬವಂತನಿಗೆ ತಾರುಣ್ಯ ನೀಡಿದ ಪ್ರಸಂಗದಲ್ಲಿ ಇಂದಿನ Plastic surgery ಪರಿಕಲ್ಪನೆಯನ್ನೂ, ದ್ರೋಣರು ದೊನ್ನೆಯಲ್ಲಿ, ದುರ್ಯೋಧನ ಮೊದಲಾದವರು ಘಟಗಳಲ್ಲಿ ಜನಿಸಿದ್ದರಲ್ಲಿ Test tube baby ಪರಿಕಲ್ಪನೆಯನ್ನೂ, ಕುರುಪಾಂಡವರ ಯುದ್ಧದ ಅಸ್ತ್ರಗಳಲ್ಲಿ ಆಧುನಿಕ ಯುಗದ ಅಣ್ವಸ್ತ್ರ (Nuclear Weapons)ಗಳ ಪರಿಕಲ್ಪನೆಯನ್ನೂ, ಅರ್ಜುನನ ಬಾಣದಿಂದ ಜಲಧಾರೆ ಉದ್ಭವಿಸಿದ್ದರಲ್ಲಿ Borewell ಪರಿಕಲ್ಪನೆಯನ್ನೂ, ಅರ್ಜುನ ಸಂಪಾದಿಸಿದ ಪಾಶುಪತಾದಿ ಅಸ್ತ್ರಗಳ ಪ್ರಯೋಗವನ್ನು ಧರ್ಮರಾಜನ ಅಪೇಕ್ಷೆಯಂತೆ ತೋರಿಸಲು ಮುಂದಾದಾಗ ನಾಗದರು ಆಗಮಿಸಿ ಅದರ ದುಷ್ಪರಿಣಾಮಗಳನ್ನು ವಿವರಿಸಿ ತಡೆದು ನಿಲ್ಲಿಸಿದ ಪ್ರಸಂಗವು ಇಂದಿನ ಅಣ್ವಸ್ತ್ರಗಳ ಪರೀಕ್ಷೆಯ ಅಪಾಯದ ಪರಿಕಲ್ಪನೆಯನ್ನೂ, ಮಾಂಧಾತರಾಜನು ತಂದೆಯ ಹೊಟ್ಟೆ ಒಡೆದು ಜನಿಸಿ ಬಂದ

ಕಥೆಯಲ್ಲಿ ಆಧುನಿಕ caesarean ಪರಿಕಲ್ಪನೆಯನ್ನೂ, ಬಾಣಾಸುರನ ಪ್ರಸಂಗದಲ್ಲಿನ ಶೈವಜ್ವರ-ವೈಷ್ಣವಜ್ವರಗಳ ಯುದ್ಧಪ್ರಸಂಗದಲ್ಲಿ ರೋಗಾಣುಗಳನ್ನು ಔಷಧಿಯಿಂದ ಕೊಲ್ಲುವ ಪರಿಕಲ್ಪನೆಯನ್ನೂ, ಅಶ್ವಿನೀದೇವತೆಗಳು ದಧೀಚಿಮುನಿಗಳಿಗೆ ಅಶ್ವಶಿರವನ್ನು ಜೋಡಿಸಿದ್ದರಲ್ಲಿ ಇಂದಿನ ಬದಲಿ ಹೃದಯಶಸ್ತ್ರಚಿಕಿತ್ಸೆಯ ಪರಿಕಲ್ಪನೆಯನ್ನು,, ರಾಮಾಯಣದ ಪುಷ್ಪಕವಿಮಾನ, ಮಹಾಭಾರತದ ಸಾಲ್ವನ ಸೌಭ ವಿಮಾನಗಳಲ್ಲಿ ಇಂದಿನ ಅತ್ಯಾಧುನಿಕ ವಿಮಾನಗಳ ಪರಿಕಲ್ಪನೆಯನ್ನೂ, ಪುಷ್ಪಕವಿಮಾನವು 'ನಾತ್ಯುಷ್ಣಂ ನಾತಿಶೀತಂ' ಆಗಿದ್ದಿತು ಎಂಬಲ್ಲಿ ಇಂದಿನ Airconditioned ವ್ಯವಸ್ಥೆಯ ಪರಿಕಲ್ಪನೆಯನ್ನೂ, ದೂರಶ್ರವಣದ ಪರಿಕಲ್ಪನೆಯನ್ನು ಇಂದಿನ Telephoneಗಳಲ್ಲಿ, ಪುರಾಣಕಾಲದ ದೂರದರ್ಶನಸಿದ್ಧಿಯ ಪರಿಕಲ್ಪನೆಯನ್ನು ಇಂದಿನ ದೂರದರ್ಶನದಲ್ಲಿ ಕಾಣದಿರಲು ಚಿಕಿತ್ಸಕಬುದ್ಧಿಯ ಚೇತನಕ್ಕೆ ಸಾಧ್ಯವೇ ಇಲ್ಲ; ಎಂದರೆ ಇವೆಲ್ಲವುಗಳ ಹಿನ್ನೆಲೆಯಲ್ಲಿ ಇಂದಿನ ತಂತ್ರಜ್ಞಾನವೇ ಅಂದೂ ಇತ್ತು ಎಂದು ಸಾಧಿಸಬೇಕಿಲ್ಲ; ಆದರೆ ಇದಕ್ಕೆ ಸಮಾನವಾದ ಅಥವಾ ಮಿಗಿಲಾದ ತಂತ್ರಜ್ಞಾನವೊಂದರ ಅಸ್ತಿತ್ವವನ್ನು ಅಂದಿನ ಜನ ಹೊಂದಿದ್ದರು ಎಂಬುದಾಗಿ ಊಹಿಸದಿರಲು ಮಾತ್ರ ಅಶಕ್ಯ ಎಂಬುದು ಖಚಿತ.

ನೂರಾರು ವರ್ಷಗಳ ಹಿಂದಿನ ದಿನಗಳಲ್ಲಿ ಇತಿಹಾಸ-ಪುರಾಣಗಳ ಪ್ರವಚನಕಾರರಿಗೆ ಎದುರಾಗುತ್ತಿದ್ದ ಅನೇಕ ಜಟಿಲ ಸಮಸ್ಯೆಗಳನ್ನು ಇಂದು ವಿವರಿಸಿ ತಿಳಿಸಲು ವಿಜ್ಞಾನದ ಪ್ರಗತಿಯಿಂದ ಸಾಧ್ಯವಾಗಿದ್ದು, ಅವುಗಳ ಬಗ್ಗೆ ಆಸ್ತಿಕ ಜನತೆಯ ಶ್ರದ್ಧೆಯನ್ನು ಹೆಚ್ಚಿಸಲು ಸಾಧ್ಯವಾಗಿದೆ. ಇವೆಲ್ಲ ಇಪ್ಪತ್ತನೇ ಶತಮಾನದ ಜನರಿಂದ ಪ್ರಕ್ಷಿಪ್ತವಾದ ಭಾಗಗಳು ಎಂದು ಅನಂತರದ ಜನ ಊಹಿಸುವಷ್ಟು ಅಪೂರ್ವವೆನ್ನಿಸುವ ಸತ್ಯಸಂಗತಿಗಳು ಎಂಬುದನ್ನು ಮನವರಿಕೆ ಮಾಡಿಕೊಡಲು ಸಹ ಸಾಧ್ಯವಾಗಿದೆ. ಇಂತಹ ಪ್ರಸಂಗಗಳು ರಾಮಾಯಣ ಮಹಾಭಾರತಗಳಲ್ಲಿ ಸಾಕಷ್ಟು ಸಿಗುತ್ತವೆ. ಈ ಹಿನ್ನೆಲೆಯಲ್ಲಿ ವಿಚಾರವಾದಿಗಳೆಂಬ ಮತ್ತೊಂದು ವರ್ಗದ ಜನರು ಎತ್ತುವ ಆಕ್ಷೇಪಗಳೂ ಅಷ್ಟೇ ಪೊಳ್ಳು ಎಂದು ತಿಳಿದರೆ ಸಾಕು. ತತ್ತ್ವಜ್ಞಾನವೆಲ್ಲ ವಿಜ್ಞಾನ ಎಂದು ವಾದಿಸುವ ಅತಿರೇಕ ಮತ್ತೆ ಕೆಲವರದು; ಆದರೆ ವಿಜ್ಞಾನಗಳ ಮತ್ತು ತತ್ತ್ವಜ್ಞಾನಗಳ ಗುರಿಗಳೇ ಬೇರೆ ಬೇರೆ, ಅವುಗಳ ಮಂಡನ ಪದ್ಧತಿಗಳೇ ಬೇರೆ ಬೇರೆ ಎಂದು ಗಮನಿಸಿದವರಿಗೆ ಅದು ತಪ್ಪು ದಾರಿ ಎಂದು ಮನವರಿಕೆಯಾಗುತ್ತದೆ. ತತ್ತ್ವಜ್ಞಾನದ ವ್ಯಾಪ್ತಿಯಲ್ಲಿ ಪ್ರಾಧಾನ್ಯ ಅತೀಂದ್ರಿಯ ವಿಷಯಗಳದ್ದಾದರೆ ವಿಜ್ಞಾನದಲ್ಲಿ ಐಂದ್ರಿಕವಾದ ಭೌತಿಕವಸ್ತುಗಳದ್ದೇ ಪ್ರಾಧಾನ್ಯ. ವಿಜ್ಞಾನವನ್ನು ವಿಜ್ಞಾನವನ್ನಾಗಿ ನೋಡುವಂತೆ, ತತ್ತ್ವಜ್ಞಾನವನ್ನು ತತ್ತ್ವಜ್ಞಾನವನ್ನಾಗಿ ಕಾಣುವುದರಲ್ಲಿ ನಿಜವಾದ ವಿವೇಕವಿದೆ. ವಿಜ್ಞಾನದ್ದು ವ್ಯಷ್ಟಿ ದೃಷ್ಟಿಯಾದರೆ,

ತತ್ತ್ವಜ್ಞಾನದ್ದು ಸಮಷ್ಟಿದೃಷ್ಟಿಯಾಗಿದೆ ಎಂಬುದು ಮತ್ತೊಂದು ಪ್ರಮುಖ ಅಂಶ. ಎಲ್ಲರಿಗೂ ತಿಳಿದಿರುವಂತೆ ಜಗತ್ತಿನಲ್ಲಿ ನಡೆಯುವ ಪ್ರತಿಯೊಂದು ಪ್ರವೃತ್ತಿಯ ಮೂಲಕಾರಣ ಜಡಪದಾರ್ಥವಾಗಿರಲು ಸಾಧ್ಯವೇ ಇಲ್ಲ; ಜ್ಞಾನ, ಇಚ್ಛಾ ಹಾಗೂ ಕ್ರಿಯಾಶಕ್ತಿಗಳನ್ನು ಹೊಂದಿರುವ ಚೇತನ ವಸ್ತುವಿನಿಂದ ಮಾತ್ರವೇ ಪ್ರವೃತ್ತಿ ಸಾಧ್ಯ. ಆದರೆ, ಅಸ್ವತಂತ್ರ ಚೇತನಕ್ಕೆ ಸ್ವಾತಂತ್ರ್ಯವಿಲ್ಲವಾದ್ದರಿಂದ ಕೇವಲ ಚೇತನದಿಂದ ಪ್ರವೃತ್ತಿಯ ನಿಯಂತ್ರಣ ಸಾಧ್ಯವಿಲ್ಲ. ಸ್ವತಂತ್ರ ಚೇತನದಿಂದಲೇ ಅದು ಸಾಧ್ಯ. ಅಂತಹ ಸ್ವತಂತ್ರ ಚೇತನ ಒಂದೇ ಆಗಿರಬೇಕು. ಭಗವಂತ ಎಂದರೆ ಅದೇ. ಉಳಿದ ಚೇತನಗಳಲ್ಲಿ ತಾರತಮ್ಯವಿದೆ-ಮೊದಲಾದ ವಿವರಗಳನ್ನು ಸೂಕ್ತ ಚಿಂತನೆಯಿಂದ ತಿಳಿಯಲು ಸಾಧ್ಯ. ಇದನ್ನು ಅಲ್ಲಗಳೆಯುವುದು ಸರ್ವಥಾ ಅಶಕ್ಯ. ವೇದಾದಿ ಸಕಲ ಶಾಸ್ತ್ರಗಳೂ ಸಹ ಇದನ್ನು ದೃಢಪಡಿಸಿವೆ. ಇಂತಹ ಭದ್ರ ವಿಚಾರಸರಣಿಯ ಹಿನ್ನೆಲೆಯಲ್ಲಿ ಭಗವಂತನ ಪಾರಮ್ಯ ಮೊದಲಾದ ಸಕಲ ತತ್ತ್ವಗಳನ್ನು ತಿಳಿಯಬೇಕು ಎಂಬ ಅಧ್ಯಾತ್ಮದ ಹೃದಯವನ್ನು ಶ್ರೀಮನ್ಮಧ್ವಾಚಾರ್ಯರು ತಮ್ಮ ಕೃತಿಗಳಲ್ಲಿ ಸ್ಫುಟವಾಗಿ ನಿರೂಪಿಸಿರುವರು. ಆಸ್ತಿಕ್ಯಕ್ಕೆ ವಿರುದ್ಧವೆನ್ನಿಸುವ ಸಕಲ ಪ್ರಶ್ನೆಗಳಿಗೂ ಸಹ ಸೂಕ್ತ ಉತ್ತರಗಳನ್ನು ನೀಡುವ ಮೂಲಕ ಸಿದ್ಧಾಂತ ಎಂಬ ಸಾರ್ಥಕ ಹೆಸರನ್ನು ಅದು ಪಡೆದಿದೆ ಎಂಬುದನ್ನು ಶ್ರೀವಾದಿರಾಜಸ್ವಾಮಿಗಳು ಸ್ಪಷ್ಟಪಡಿಸಿರುವರು.

ಈ ಹಿನ್ನೆಲೆಯಲ್ಲಿ ನಾಸ್ತಿಕ್ಯದ ಪೊಳ್ಳುತನವನ್ನು ಅರ್ಥಮಾಡಿಕೊಂಡು ಸಮಸ್ತ ಜಿಜ್ಞಾಸುಗಳು ಸಹ ನಿಜವಾದ ಅರ್ಥದಲ್ಲಿ ಆಸ್ತಿಕರಾಗಿ ಜೀವನದಲ್ಲಿ ಸಾರ್ಥಕ್ಯವನ್ನು ಪಡೆಯುವುದು ವಿವೇಕ ಎನ್ನಿಸುವುದು.

ಪ್ರಮಾಣಗಳು - ಆಗಮಪ್ರಾಮಾಣ್ಯ, ಆಗಮಸಾರ ಹಾಗೂ ಮೋಕ್ಷಮಾರ್ಗ ಮತ್ತು ಮುಕ್ತಿ ಎಂಬ ಐದು ಸಂದೇಶಗಳನ್ನು ಒಟ್ಟು ನಾಲ್ಕು ಭಾಗಗಳಲ್ಲಿ ಈ 'ಸಂದೇಶರತ್ನಮಾಲಾ' ಶ್ರೇಣಿ ನೀಡಿದೆ.

ಪ್ರಮಾಣಗಳ ಅವಶ್ಯಕತೆ ಮತ್ತು ಪ್ರಧಾನ ವಿಭಾಗಗಳು, ಪ್ರಮಾಣಗಳ ಪ್ರಾಮಾಣ್ಯ, ಅನುಪ್ರಮಾಣಗಳು, ಅನುಪ್ರಮಾಣದೋಷಗಳು ಎಂಬ ಶೀರ್ಷಿಕೆ-ಗಳನ್ನು ಪ್ರಮಾಣಗಳು-ಆಗಮಪ್ರಾಮಾಣ್ಯ ಎಂಬ ಎರಡನೆಯ ರತ್ನ ಒಳಗೊಂಡಿದೆ. ಆಗಮಪ್ರಾಮಾಣ್ಯ ಎಂಬ ವಿಭಾಗದಲ್ಲಿ ಪೌರುಷೇಯಾ-ಗಮಗಳು, ವೇದಪ್ರಾಮಾಣ್ಯಗಳು ನಿರೂಪಿತವಾಗಿವೆ. ಆಗಮಸಾರ ಎಂಬ ಮೂರನೆಯ ರತ್ನದಲ್ಲಿ ಜಗತ್ಸೃಷ್ಟಿ, ಸ್ಥಿತಿಕರ್ತಾ - ಶ್ರೀಹರಿ, ಪ್ರಳಯಕಾರಕ - ಶ್ರೀಹರಿ, ಜ್ಞಾನಾಜ್ಞಾನಬಂಧಮೋಕ್ಷಪ್ರದತ್ವ, ಅನಂತಕಲ್ಯಾಣಗುಣಪೂರ್ಣತ್ವ, ದೋಷದೂರತ್ವ, ಸಮಯಗಳ ವಿರೋಧ ಪರಿಹಾರ ಇತ್ಯಾದಿ ವಿಶೇಷ ವಿವರಗಳನ್ನು ನೀಡುವವು. ನಾಲ್ಕು ಹಾಗೂ ಐದನೆಯ ರತ್ನಗಳಲ್ಲಿ ವೈರಾಗ್ಯ, ಭಕ್ತಿ ಇತ್ಯಾದಿ

ಮೋಕ್ಷಸಾಧನಗಳು ಹಾಗೂ ಮುಕ್ತಿಯ ಸ್ವರೂಪ ನಿರೂಪಿತವಾಗಿವೆ. ಒಟ್ಟಾಗಿ ನಾಸ್ತಿಕ್ಯನಿರಾಸದಿಂದ ಪ್ರಾರಂಭವಾಗುವ ಈ ಸಂದೇಶಮಾಲೆ ಮುಕ್ತಿಯ ಸ್ವರೂಪದ ನಿರೂಪಣೆಯೊಂದಿಗೆ ಮುಕ್ತಾಯವಾಗಿ, ಸಾಮಾನ್ಯಜಿಜ್ಞಾಸುಗಳಿಗೆ ಅಗತ್ಯ-ವೆನ್ನಿಸುವ ಮುಖ್ಯ ವಿವರಗಳನ್ನು ಒಂದೆಡೆ ಒದಗಿಸುವುದು. ತತ್ತ್ವಜ್ಞಾನದ ಸಾಮಾನ್ಯ ಪರಿಚಯವನ್ನು ಹೊಂದಬಯಸುವ ಸಾಧಕರಿಗೆ ಈ ಸಂದೇಶಗಳು ತುಂಬಾ ಉಪಯುಕ್ತ ಎನ್ನುವುದರಲ್ಲಿ ಸಂಶಯವಿಲ್ಲ. ಹಿಂದೆ ನಾಲ್ಕು ಭಾಗಗಳಲ್ಲಿ ಪ್ರಕಾಶಿತವಾಗಿದ್ದ ಈ ಸಂದೇಶರತ್ನಮಾಲಾ ಕೃತಿ ಶ್ರೇಣಿ ಪ್ರಸ್ತುತ ಸಂಪುಟದಲ್ಲಿ ಒಟ್ಟಾಗಿ ಪ್ರಕಾಶಗೊಳ್ಳುತ್ತಿರುವುದು ಇನ್ನೂ ಹೆಚ್ಚು ಉಪಯುಕ್ತವೆನ್ನಿಸುವುದು.

ಈ ದೃಷ್ಟಿಯಲ್ಲಿ ಶ್ರೀ ಬಿ. ಭೀಮರಾಯರ 'ನಾಸ್ತಿಕ್ಯನಿರಾಸ' ಹಾಗೂ 'ಸಂದೇಶರತ್ನಮಾಲೆ'ಯ ಇತರ ಕೃತಿಗಳು ತುಂಬಾ ಸಾರ್ಥಕವಾದ ರಚನೆಗಳಾಗಿವೆ. ನಿರ್ಮೂಲವಾದ ವಿಚಾರಸರಣಿಗೆ ಮರುಳಾಗಿ ಆಧುನಿಕ ಯುವ ಜನತೆ ಧಾರ್ಮಿಕಪ್ರಜ್ಞೆಯಿಂದ, ಅಧ್ಯಾತ್ಮಿಕ ಚಿಂತನೆಯಿಂದ ವಂಚಿತರಾಗುವುದನ್ನು ತಪ್ಪಿಸುವ ಉದಾರ ಧ್ಯೇಯದಿಂದ ಅವರು ಬರೆದ ಈ ಕೃತಿ ತುಂಬಾ ಸ್ವಾಗತಾರ್ಹವಾದುದು.

ಒಟ್ಟಾಗಿ ಪ್ರತಿಷ್ಠಿತಸಂಸ್ಥೆಗಳಿಂದ ಆಗಬೇಕಾಗಿದ್ದ ಕಾರ್ಯವನ್ನು ತಾವೇ ಹುಟ್ಟುಹಾಕಿದ ಸಂಸ್ಥೆಯ ಮೂಲಕ ಅವರು ಮಾಡಿರುವ ಕಾರ್ಯ ತುಂಬಾ ಅಭಿನಂದನೀಯವಾದುದು. ಆ ಕಾಲಕ್ಕೆ ಯೋಗ್ಯವೆನ್ನಿಸುವ ಭಾಷೆ, ಶೈಲಿ, ನಿರೂಪಣೆ, ಉದಾಹರಣೆಗಳ ಮೂಲಕ ಅವರು ಸಾಧಿಸಿರುವ ಯಶಸ್ಸು ತುಂಬಾ ಗಮನಾರ್ಹವಾದುದು. ವೃತ್ತಿಯಲ್ಲಿ ವಕೀಲರಾಗಿದ್ದ ಅವರು ಪ್ರವೃತ್ತಿಯಲ್ಲಿ ಅಧ್ಯಾತ್ಮಚಿಂತಕರಾಗಿ ಶ್ರೀಮನ್ಮಧ್ವಾಚಾರ್ಯರ ವಿಚಾರಸರಣಿಯನ್ನು ಆಧುನಿಕರಿಗೆ ತಲುಪಿಸುವಲ್ಲಿ ಮಾಡಿದ ಪ್ರಯತ್ನ ತುಂಬಾ ಪ್ರಶಂಸನೀಯವಾದುದು. ಪ್ರಸ್ತುತ ಅವರ ಹೆಚ್ಚಿನ ಕೃತಿಗಳು ಪುನರ್ಮುದ್ರಣಗೊಂಡು ಬೆಳಕಿಗೆ ಬರುತ್ತಿರುವುದು ತುಂಬಾ ಸ್ತುತ್ಯವಾದ ಕಾರ್ಯ. ಇದಕ್ಕಾಗಿ ಅಪಾರ ಪರಿಶ್ರಮ ವಹಿಸಿರುವ ಶ್ರೀಸರ್ವಜ್ಞಾಚಾರ್ಯ ಸೇವಾಸಂಘಸಂಸ್ಥೆಗೂ, ಅದರಲ್ಲಿ ಸಕ್ರಿಯವಾಗಿ ಪಾಲ್ಗೊಂಡಿರುವ ಶ್ರೀ ಆರ್. ಜಗನ್ನಾಥರಾಯರಿಗೂ ವಿಶೇಷ ಅಭಿನಂದನೆಗಳು ಸಲ್ಲುವವು.

24.05.2019 — **ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ**

ಬೆಂಗಳೂರು — ನಿರ್ದೇಶಕರು

ವ್ಯಾಸಮಧ್ವ ಸೇವಾ ಪ್ರತಿಷ್ಠಾನ

**ಪಂ. ವಿದ್ಯಾಸಿಂಹಾಚಾರ್ಯರು,**
ಕುಲಪತಿ, ಶ್ರೀ ಸತ್ಯಧ್ಯಾನ ವಿದ್ಯಾಪೀಠ
ವಾಣಿ ವಿಹಾರ ವಿದ್ಯಾಸಂಸ್ಥೆ, ಮುಂಬೈ.

# ಮೊದಲ ನುಡಿ

ಶ್ರೀಶಃ ಶರಣಮ್
ಶ್ರೀ ಗುರುಭ್ಯೋ ನಮಃ

ಮಾಧ್ವಭೂಷಣ ಎಂಬ ಬಿರುದು ಭೂಷಿತರಾದವರು (ದಾವಣಗೆರೆ) ಶ್ರೀಯುತ ಬಿ. ಭೀಮರಾಯರು. ಅವರು ಸ್ವತಃ ಲೌಕಿಕ ವಿದ್ಯೆಯನ್ನು ಕಲಿತು ಉತ್ತಮ ವಿದ್ಯಾವಂತರಾದರೂ, ಮಧ್ವಸಿದ್ಧಾಂತದ ಅನೇಕಾನೇಕ ಗ್ರಂಥಗಳನ್ನು ನಾನಾ ಹಿರಿಯ ಪಂಡಿತರಿಂದ ಪಾಠ ಹೇಳಿಸಿಕೊಂಡು ಶಾಸ್ತ್ರ ವಿದ್ವಾಂಸರೂ ಆದರು. ತುಂಬ ಸಾತ್ವಿಕ ಸ್ವಭಾವದ ಭೀಮರಾಯರು ಮಧ್ವಸಿದ್ಧಾಂತದ ಪರಿಚಯವಿಲ್ಲದ ಜನರಿಗೆ ಪರಿಚಯ ಮಾಡಿಸಿ ಕೊಡುವ ಉದ್ದೇಶ್ಯದಿಂದ ಅನೇಕ ಗ್ರಂಥಗಳನ್ನು ಬರೆದರು. ಶಾಸ್ತ್ರ ಗ್ರಂಥಗಳ ಅನುವಾದವನ್ನೂ ಮಾಡಿದರು. ಅಂದಿನ ನಾಸ್ತಿಕ ಯುವಕರಿಗೆ ಆಸ್ತಿಕ್ಯ ಪ್ರಜ್ಞೆಯನ್ನು ಮೂಡಿಸುವದಕ್ಕಾಗಿ ಹಲವಾರು ಗ್ರಂಥಗಳನ್ನು ರಚಿಸಿದರು. ''ಸರ್ವಜ್ಞಾಚಾರ್ಯ ಸೇವಾಸಂಘ''ವೆಂಬ ಸಂಸ್ಥೆಯನ್ನು ಸ್ಥಾಪಿಸಿ ಆ ಮೂಲಕ ತುಂಬ ಲೋಕೋಪಯೋಗಿ ಕಾರ್ಯಗಳನ್ನು ಜೀವನದುದ್ದಕ್ಕೂ ಮಾಡುತ್ತ ಬಂದರು. ಅವರ ಅನವರತ ಪರಿಶ್ರಮ ಅನೇಕರನ್ನು ಬೆರಗುಗೊಳಿಸುವಂಥದು. ಶ್ರೀಮದಾಚಾರ್ಯರ ತತ್ವಗಳ ಪ್ರಚಾರವಾಗಬೇಕೆಂಬ ಅವರ ಪ್ರಾಮಾಣಿಕ ಕಳಕಳಿ ಅಂದು ಜನಜನಿತವಾಗಿತ್ತು. ಸಿದ್ಧಾಂತ ದೀಕ್ಷೆ, ನಿರಂತರ ಪಾಠ-ಪ್ರವಚನ, ಸತತ ಗ್ರಂಥಲೇಖನ, ಸಂಸ್ಥೆಯ ಸಂಸ್ಥಾಪನ, ನೂರಾರು ಸಾವಿರಾರು ಜನರಿಗೆ ಸನ್ಮಾರ್ಗ ತೋರಿ ಅವರನ್ನು ಪ್ರೋತ್ಸಾಹಿಸಿದ್ದು - ಈ ಎಲ್ಲ ಗುಣಗಳು ಶ್ರೀಯುತ ಬಿ. ಭೀಮರಾಯರನ್ನು ವಿಶೇಷ ಗೌರವಾನ್ವಿತರನ್ನಾಗಿ ಮಾಡಿದವು.

ಅವರು ಬರೆದ ಎಲ್ಲ ಗ್ರಂಥಗಳು ಇಂದಿಗೂ ಅತ್ಯಂತ ಪ್ರಸ್ತುತವಾಗಿವೆ. ನಾಸ್ತಿಕ್ಯ ತಾಂಡವವಾಡುವ, ಅಧರ್ಮವು ವಿಜೃಂಭಿಸುವ ಇಂದಿನ ಕಾಲದಲ್ಲಿ ಸಂಸ್ಕೃತವನ್ನು ಅರಿಯದ ಜನರಿಗೆ ಶ್ರೀಮದಾಚಾರ್ಯರ ತತ್ವವಾದವನ್ನು ಮನಮುಟ್ಟುವಂತೆ ತಲುಪಿಸಲು ಶ್ರೀಯುತ ಬಿ. ಭೀಮರಾಯರ ಗ್ರಂಥಗಳು ಸಹಾಯಕವಾಗಿವೆ. ವಿಷ್ಣುರಹಸ್ಯ, ಯುಕ್ತಿಮಲ್ಲಿಕಾ, ಸತ್ತತ್ವರತ್ನಮಾಲಾ, ಭಾಗವತ ಸಾರೋದ್ಧಾರ, ಭಾಗವತ ಪ್ರದೀಪಿತ ಸೂತ್ರಾರ್ಥಸಾರ, ಮಹೈತರೇಯೋಪನಿಷದ್ಭಾಷ್ಯ, ನಾಸ್ತಿಕ್ಯ

ನಿರಾಸ ಮುಂತಾದ ಗ್ರಂಥಗಳು ಅವರ ಮಾಧ್ವ ದೀಕ್ಷೆಯ ಹಾಗೂ ತತ್ವಪ್ರಚಾರದ ಕಳಕಳಿಯ ಕುಡಿಗಳು. ಉತ್ತಮ ಕೊಡುಗೆಗಳು.

ಅವರ ನಿರೂಪಣ ಶೈಲಿ ನೇರವಾದದ್ದು. ಮನಮುಟ್ಟುವಂಥದು. ಮೂಲ-ಗ್ರಂಥಗಳಿಗೆ ಕನ್ನಡಿಯನ್ನು ಹಿಡಿಯುವಂಥದು. ಗೊಂದಲಕ್ಕೆ ಎಡೆಕೊಡದೆ ತತ್ವವನ್ನು ಬೋಧಿಸುವಂಥದು.

ಆಧುನಿಕ ಹಾಗೂ ಪಾಶ್ಚಾತ್ಯ ವಿಜ್ಞಾನ ಶಾಸ್ತ್ರಗಳನ್ನು ಅಭ್ಯಸಿಸುವುದರಿಂದ ಅನೇಕ ವಿಜ್ಞಾನಿಗಳ ಗ್ರಂಥಗಳಿಂದಲೇ ನೇರವಾಗಿ ವಾಕ್ಯಗಳನ್ನು, ಸಂದರ್ಭಗಳನ್ನು ಪರಾಮರ್ಶಿಸಿ ತತ್ವವಿಶ್ಲೇಷಣಗೆ ತೊಡಗುತ್ತಾರೆ. ಶಾಸ್ತ್ರೀಯ ಗ್ರಂಥಗಳ ಅನುವಾದ ಮಾಡುವಾಗ ಆ ಯಾ ಗ್ರಂಥಗಳ ಟಿಪ್ಪಣಿಗಳ ವಿಷಯಗಳನ್ನು ಅಳವಡಿಸಿ ಅನುವಾದಿಸುತ್ತಾರೆ.

ಐದಾರು ದಶಕಗಳ ಹಿಂದೆಯೇ ಶಾಸ್ತ್ರವನ್ನು ಕನ್ನಡದಲ್ಲಿ ಮೂಡಿಸುವ ಹೊಸದಾದ ಮಹದಾಸೆಯನ್ನು ಹೊತ್ತ ವ್ಯಕ್ತಿತ್ವ ಅವರದು. ಇಂಥ ಹರಿವಾಯುಗಳ ವಿಶೇಷ ಕೃಪಾಪಾತ್ರರಾದ ಶ್ರೀಯುತ ಭೀಮರಾಯರ ಗ್ರಂಥಗಳನ್ನು ಪ್ರಕಾಶಿಸುತ್ತಿರುವುದು ತುಂಬ ಸ್ತುತ್ಯವಾದ ಕಾರ್ಯ.

ಶಾಲಾ, ಕಾಲೇಜುಗಳಲ್ಲಿ ಸಂಸ್ಕೃತವನ್ನು ಅಭ್ಯಸಿಸಿದ ಜನ ಅಂದಿನ ಸಮಾಜದಲ್ಲಿ ಸಾಕಷ್ಟು ಹೆಚ್ಚು ಸಂಖ್ಯೆಯಲ್ಲಿ ಇದ್ದರು. ಆಗಲೂ ಸ್ವಾಗತಾರ್ಹವಾಗಿರುವ ಈ ಗ್ರಂಥಗಳು ಸಂಸ್ಕೃತದ ಪರಿಚಯವಿರುವ ಜನರ ಸಂಖ್ಯೆ ಕುಸಿದ **ಇಂದಿನ ಸಮಾಜದಲ್ಲಿ ಇನ್ನೂ ಹೆಚ್ಚು ಸ್ವಾಗತಾರ್ಹವಾಗಿವೆ.**

ಈ ನಿಟ್ಟಿನಲ್ಲಿ ಶ್ರೀಯುತ ಬಿ. ಭೀಮರಾಯರು ಎಲ್ಲ ಕನ್ನಡ ಅನುವಾದದ ಗ್ರಂಥಗಳನ್ನು ಮರು ಪ್ರಕಾಶಿಸುತ್ತಿರುವವರಿಗೆ ನನ್ನ ವಿಶೇಷ ಅಭಿನಂದನೆಗಳು. ಹರಿ-ವಾಯು-ದೇವತಾ-ಗುರುಗಳು ''ಗ್ರಂಥ ಪ್ರಕಾಶನ ಕಾರ್ಯವು ನಿರ್ವಿಘ್ನ- ವಾಗಿ ಯಶಸ್ವಿಯಾಗಿ ಆಗುವಂತೆಯೂ, ಹೆಚ್ಚು ಹೆಚ್ಚು ಜನರು ಅದರ ಲಾಭ ಪಡಿಯುವಂತೆಯೂ, ತತ್ವಜ್ಞಾನದ ನಿಷ್ಠೆಯೂ ವರ್ಧಿಸುವಂತೆಯೂ ಕರುಣಿಸಲಿ'' ಎಂದು ಪ್ರಾರ್ಥಿಸುವೆ.

ಜೂನ್ 2019
ಮುಂಬೈ

ಬ್ರಹ್ಮಾತ್ಮದಾಸ
ಪರಮ ಪೂಜ್ಯ ಮಾಹುಲೀ ಗೋಪಾಲಾಚಾರ್ಯಪಾದಪದ್ಮಾರಾಧಕ
**ಪಂ. ವಿದ್ಯಾಸಿಂಹಾಚಾರ್ಯ ಮಾಹುಲೀ.**
ಕುಲಪತಿ, ಶ್ರೀ ವಾಣಿವಿಹಾರ ವಿದ್ಯಾಮಂದಿರ,
ಶ್ರೀ ಸತ್ಯಧ್ಯಾನ ವಿದ್ಯಾಪೀಠ, ಮುಂಬೈ

# ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ

(ಸ್ಥಾಪನೆ ೧೯೩೪)

## ಪ್ರಕಾಶಕರ ಅರಿಕೆ

**ನ ಮಾಧವಸಮೋ ದೇವಃ ನ ಚ ಮಧ್ವ ಸಮೋ ಗುರುಃ ।**
**ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ಕಸ್ಯ ಸಮಃ ಪುಮಾನ್ ॥**

ಸುಮಾರು 49-50 ವರ್ಷಗಳ ಪೂರ್ವದಲ್ಲಿ 'ಸಂದೇಶ ರತ್ನಮಾಲಾ' (ನಾಲ್ಕು ಭಾಗಗಳುಳ್ಳ) ಎಂಬ ಹೆಸರಿನಿಂದ ಪ್ರಕಟವಾಗಿದ್ದ ಪುಸ್ತಕಗಳನ್ನು ಒಂದೇ ಸಂಪುಟದಲ್ಲಿ ಅಳವಡಿಸಿ ಈಗ ಮರುಪ್ರಕಟನೆ ಮಾಡುತ್ತಿದ್ದೇವೆ. ಕೀರ್ತಿಶೇಷ ಭೀಮರಾವ್‌ರವರು ತಮ್ಮ ಜೀವಿತಕಾಲದಲ್ಲಿ ರಚಿಸಿದ್ದ/ಅನುವಾದಮಾಡಿದ್ದ 14 ಪುಸ್ತಕಗಳನ್ನು ಕಳೆದ ಆರು ವರ್ಷಗಳಲ್ಲಿ ಮರು ಪ್ರಕಟನೆ ಮಾಡಿ ಹೊರತಂದಿದ್ದೇವೆ. ಈಗ ಮತ್ತೊಂದು ಆ ಸಾಲಿಗೆ ಸೇರ್ಪಡೆಯಾಗುತ್ತಿದೆ.

ಸಂಘ ಸ್ಥಾಪನೆಯ ನಂತರ ಕಾರ್ಯದರ್ಶಿಗಳು 'ಮಧ್ವರಾಜ ಮಂದಿರ' ಭವನಕ್ಕೆ ಯೋಜನೆ ಹಾಕಿದರು. ಈ ಭವನಕ್ಕೆ ಅಡಿಗಲ್ಲನ್ನು ಇಡುವ ಮೂಲಕ ಶ್ರೀ ಸತ್ಯಧ್ಯಾನತೀರ್ಥರು ಸಂಘಕ್ಕೆ ಸೇರಿದವರನ್ನು ಆಶೀರ್ವದಿಸಿದ್ದರು. ಸಂಘದವರಿಗೆ ಅದು ಶ್ರೀರಕ್ಷೆಯಾಗಿದೆ. ಈ ಮಂದಿರದಲ್ಲಿ ಧಾರ್ಮಿಕ ಕಾರ್ಯಕ್ರಮಗಳು ನಡೆದುಕೊಂಡು ಬರುತ್ತಿವೆ. ಸಂಘದ ದೃಷ್ಟಿಯಿಂದ ಇಂದಿನ ಪೀಳಿಗೆಯವರು ಎರಡನೆಯ ತಲೆಮಾರಿನ ವರ್ಗದವರಾಗುತ್ತಾರೆ. ''ಈಗ ಇರುವ ಯುವಕ ವೃಂದಕ್ಕೆ 'ಸಂದೇಶ ರತ್ನಮಾಲಾ' ಪುಸ್ತಕಗಳು ಅತ್ಯಂತ ಅವಶ್ಯಕವಾಗಿವೆ - ಅವುಗಳ ಪ್ರಕಟನೆಯಾಗಬೇಕು'' ಎಂದು ಉತ್ತಮ ಶ್ರೇಣಿಯಲ್ಲಿರುವ ವಿದ್ವಾಂಸರು ಒತ್ತಾಯಪೂರ್ವಕವಾಗಿ ನಮಗೆ ಆದೇಶ ನೀಡಿದ್ದರು. ಪುನಃ ಅವರು ಒಂದೆರಡು ಬಾರಿ ಈ ಬಗ್ಗೆ ಜ್ಞಾಪಿಸಿದ್ದರು. ಆ ಪುಸ್ತಕಗಳೇ ಈಗ ಪ್ರಕಟವಾಗುತ್ತಿರುವುದಾಗಿದೆ. ಮರುಪ್ರಕಟನೆಯಾಗಿರುವ ಪುಸ್ತಕಗಳನ್ನು ಮಾಧ್ವ ಬಾಂಧವರು ಕೊಂಡು ಪ್ರೋತ್ಸಾಹ ನೀಡುತ್ತಿದ್ದಾರೆ. ಅದೇ ರೀತಿ ಈ ಪುಸ್ತಕಕ್ಕೂ ಆಸ್ತಿಕರು ಪ್ರೋತ್ಸಾಹ ನೀಡುತ್ತಾರೆಂದು ನಮಗೆ ನಂಬಿಕೆ ಇದೆ.

ಆಧ್ಯಾತ್ಮಿಕ ವರ್ಗದಲ್ಲಿ ಸತತವಾಗಿ ಸಕ್ರಿಯವಾಗಿದ್ದು ಸಂಘ 85 ವಸಂತಗಳ ಅವಧಿಯನ್ನು ಸಾರ್ಥಕಗೊಳಿಸಿ ಒಂದು ದಾಖಲೆಯನ್ನು ನಿರ್ಮಿಸಿದೆ.

ಅನೇಕ ಊರುಗಳಲ್ಲಿ ಧಾರ್ಮಿಕ ಸಂಘ ಸಂಸ್ಥೆಗಳು ಸ್ಥಾಪಿಸಲ್ಪಟ್ಟಿವೆ. ಆ ಆ ಊರಿನ ಆಸ್ತಿಕರಿಗೆ ಆ ಸಂಘ-ಸಂಸ್ಥೆಗಳು ಸಹಾಯಕವಾಗಿವೆ. ನಮ್ಮ ಸೇವಾ ಸಂಘ - ಈ ಊರಿನಲ್ಲಿರುವವರಿಗೆ ಧಾರ್ಮಿಕ ಪ್ರವೃತ್ತಿಯನ್ನುಂಟು ಮಾಡುವುದರ ಜೊತೆಗೆ, ಪರಸ್ಥಳಗಳಲ್ಲಿರುವ ಜಿಜ್ಞಾಸುಗಳಿಗೂ ಜ್ಞಾನ ಪ್ರಸಾರವಾಗುವಂತೆ ಕಾರ್ಯೋನ್ಮುಖವಾಗಿದೆ. ಈ ರೀತಿಯಾಗಿ ಮುಂದುವರೆಯಲು ಎಲ್ಲ ಮಾಧ್ವ ಬಂಧುಗಳ ಸಹಕಾರವೇ ಕಾರಣವಾಗಿದೆ. **85ನೇ ವರ್ಷದ** ವಾರ್ಷಿಕೋತ್ಸವದ ಸಂದರ್ಭದಲ್ಲಿ ಪ್ರಕಟವಾಗುತ್ತಿರುವ ಈ ಪುಸ್ತಕ ಜಿಜ್ಞಾಸುಗಳಿಗೆ ಖಂಡಿತವಾಗಿ ಸಂತೋಷವನ್ನುಂಟು ಮಾಡಿಸಿ, ಅವರುಗಳ ಜ್ಞಾನದ ಮಟ್ಟವನ್ನು ಮುಂದಿನ ಹಂತಕ್ಕೆ ಒಯ್ಯುತ್ತದೆ ಎಂದು ಆಶಿಸುತ್ತೇವೆ.

ಇಂದು ಮಾಧ್ಯಮಗಳ ಮೂಲಕ ಸುಲಭವಾಗಿ ಸಿಗುತ್ತಿರುವ ಪರದೇಶದಲ್ಲಿದ್ದ ವಿಜ್ಞಾನವಾದಿಗಳ ಹೇಳಿಕೆಗಳು 50 ವರ್ಷಗಳ ಹಿಂದೆ ದೊರಕುತ್ತಿರಲಿಲ್ಲ. ಇಂತಹ ಸನ್ನಿವೇಶದಲ್ಲಿ ಕೀರ್ತಿಶೇಷ ಬಿ. ಭೀಮರಾವ್‌ರವರು ಅಧಿಕ ಶ್ರಮವಹಿಸಿ ಪ್ರಸಿದ್ಧ ವಿಜ್ಞಾನಿಗಳು ಪ್ರಕಟಿಸಿದ್ದ ಹಲವು ಸಂಗತಿಗಳ ಮಾಹಿತಿಗಳನ್ನು ಸಂಪಾದಿಸಿ, ಸೂಕ್ತವಾದದ್ದನ್ನು ಆಯ್ದು ವಾಚಕರಿಗೆ ಒದಗಿಸಿದ್ದಾರೆ. ವಿಷಯಗಳು ವೈಶಿಷ್ಟ್ಯದಿಂದ ಕೂಡಿದೆ. ಅದೇ ಕ್ರಮದಲ್ಲಿರುವ ಇನ್ನೂ ಹಲವಾರು ವಾಕ್ಯಗಳನ್ನು ಪ್ರತ್ಯೇಕವಾಗಿ ಮೊದಲನೆಯ ಭಾಗದ ನಂತರ ಸೇರಿರುವ 'annexure' ನಲ್ಲಿಟ್ಟು ಪುಸ್ತಕದ ವಿಷಯಕ್ಕೆ ಪೋಷಕವಾಗುವಂತೆ ಪ್ರಯತ್ನಿಸಲಾಗಿದೆ. ವಾಚಕರಿಗೆ ಅದರಲ್ಲಿಯೂ ಯುವಕವರ್ಗದವರು ಮಾಡಬಹುದಾದ ಆಕ್ಷೇಪಗಳಿಗೆ, ಪರಿಹಾರ ರೂಪದಲ್ಲಿ ವಿಷಯಗಳ ಚಿಂತನೆ ಇದೆ. ಇಂದಿನ ಯುವಕ-ಯುವತಿಯರು ಅವಕಾಶ ಮಾಡಿಕೊಂಡು ತಮ್ಮ ಕೈಯಲ್ಲಿ ಅಂಟಿಕೊಂಡಂತೆ ಇರುವ mobileಗೆ ಸ್ವಲ್ಪ ವಿರಾಮಕೊಟ್ಟು, ಒಂದು ವಿಶಿಷ್ಟ ಗ್ರಂಥದಂತಿರುವ ಈ ಪುಸ್ತಕವನ್ನು ಉಪಯೋಗಿಸಿ-ಕೊಳ್ಳುವುದಾದರೆ - ಅವರು **ತಮ್ಮ ವೈಚಾರಿಕ ಸಾಮರ್ಥ್ಯವನ್ನು ಅಭಿವೃದ್ಧಿ ಮಾಡಿಕೊಳ್ಳಬಹುದು.**

''ಸರ್ವದಾ ಸುಖವಾಗಿರಬೇಕು - ದುಃಖವನ್ನು ಅನುಭವಿಸುವುದು ಬೇಡ - ಎಂಬ ಮನೋಭಿಲಾಷೆ ಎಲ್ಲರಿಗೂ ಇರುತ್ತದೆ. ಆದರೆ ಇದನ್ನು ಹೊಂದುವ ಮಾರ್ಗದ ಕಡೆ ಗಮನ ಕೊಡುವವರು ಅಲ್ಪ ಮಂದಿ. ಆ ಮಾರ್ಗವನ್ನು ತೋರಿಸುವುದೇ ಈ ಪುಸ್ತಕದ ಉದ್ದೇಶವಾಗಿದೆ. ಅಧಿಕವಾಗಿ ಹಣ ಸಂಪಾದನೆ ಮಾಡಿ, ಅದರಿಂದ ಭೌತಿಕ ವಸ್ತುಗಳನ್ನು ದೊರಕಿಸಿಕೊಂಡು ಸುಖಾನುಭವ ಪಡೆಯಬಹುದು ಎಂಬ ಅಪೇಕ್ಷೆ ಸಾಮಾನ್ಯವಾಗಿ ವ್ಯಕ್ತಿಯಲ್ಲಿರುತ್ತದೆ.

ಈ ವಸ್ತುಗಳಿಂದ ಎಲ್ಲ ಬಯಕೆಗಳು ಈಡೇರುವುದು ಅಸಾಧ್ಯವೆಂದು ಶಾಸ್ತ್ರ ವಚನಗಳಿವೆ. ಅಧ್ಯಾತ್ಮದ ಕಡೆಗೆ ದೃಷ್ಟಿಯನ್ನಿಟ್ಟು ವ್ಯಕ್ತಿಯು ಜೀವನವನ್ನು ನೆಮ್ಮದಿಯಿಂದ ನಡೆಸುವುದು ಶ್ರೇಷ್ಠವೆಂದು ಶಾಸ್ತ್ರಗಳ ಘೋಷಣೆಯಾಗಿದೆ. ಈ ತರಹವಾದ ಬದುಕಿನಲ್ಲಿ ಪಾಪ-ಪುಣ್ಯಗಳ ಗಣನೆ ಮಹತ್ತರವಾಗಿರುತ್ತದೆ. ಪುಣ್ಯ ಸಂಪಾದನೆಯನ್ನು ಗುರಿಯಾಗಿಟ್ಟುಕೊಂಡು ವ್ಯಕ್ತಿಯು ಧಾರ್ಮಿಕ ಚಿಂತನೆಗಳನ್ನು ಮಾಡುವುದಕ್ಕೆ ಪ್ರಯತ್ನಿಸುತ್ತಾನೆ. ಅಂತಹ ಸಾಧಕರಿಗೆ **ಯೋಗ್ಯ ಅಂಶಗಳನ್ನು ಈ ಪುಸ್ತಕ ತೆರೆದಿಡುತ್ತದೆ.**

ಇಂದಿನ ಕಾಲದ ಶಾಲಾ-ಕಾಲೇಜುಗಳಲ್ಲಿರುವ ವಾತಾವರಣ ಮತ್ತು ಸುಲಭವಾಗಿ ಅಂತರ್ಜಾಲ ಮಾಧ್ಯಮದಲ್ಲಿ ಲಭ್ಯವಾಗುವ ನಾನಾ ರೀತಿಯ ಚಿತ್ರಗಳು ಮತ್ತು ಜೊತೆಗಿರುವ ವಿಷಯಗಳು ಯುವಕರನ್ನು ಅಧಾರ್ಮಿಕ ಕ್ರಮಗಳನ್ನು ಅನುಸರಿಸುವಂತೆ ಮಾಡುತ್ತಿರುವುದು ಸರ್ವೇ ಸಾಮಾನ್ಯವಾಗಿದೆ. ಈ ಕಾರಣಗಳಿಂದ ನಾಸ್ತಿಕ್ಯ ವಿಚಾರಗಳೇ ಅವರ ತಲೆಯೊಳಗೆ ತುಂಬುತ್ತವೆ. "Modern Scienceನಲ್ಲಿ ಗುರುತಿಸಿಕೊಂಡಿರುವ ವಿಜ್ಞಾನಿಗಳು ನೂತನ ಸಂಗತಿಗಳನ್ನು ಪ್ರಸಾರ ಮಾಡಿದ್ದಾರೆ, ಇವುಗಳು ಹಿಂದಿನ ಕಾಲದವರ ವಿಚಾರಗಳಿಗೆ ವಿರೋಧವಾಗಿದೆ.'' ಹೀಗೆ ಅವರು ಹೇಳುತ್ತಿರುವುದೂ ಉಂಟು. ಗ್ರಂಥಕರ್ತರು ಈ ಪುಸ್ತಕದಲ್ಲಿ ಆ ವಿಜ್ಞಾನಿಗಳ ಹೇಳಿಕೆಗಳನ್ನು ವಿಶ್ಲೇಷಣೆ ಮಾಡಿ, ಯುಕ್ತಿ ಯುಕ್ತವಾಗಿ ಆಸ್ತಿಕ್ಯ ವಿಚಾರಗಳನ್ನು ಮಂಡನೆ ಮಾಡಿದ್ದಾರೆ. ಅವರು ವಕೀಲರಾಗಿದ್ದುದರಿಂದ ಸೂಕ್ತ ಆಧಾರಗಳ ಸಹಿತವಾಗಿ ಲೋಕ ನ್ಯಾಯ ನೀತಿಯನ್ನು ಅನುಸರಿಸಿ ಬರೆದಿದ್ದಾರೆ. ಈ ವಿಷಯಗಳಿಗೆ ಪೋಷಕವಾಗಿ, 'ನಾಸ್ತಿಕ್ಯನಿರಾಸ' ಭಾಗಕ್ಕೆ ಸೇರಿರುವ ಪರಿಶಿಷ್ಟದಲ್ಲಿ, "Modern Science" ಗೆ ಸಂಬಂಧಿಸಿರುವ ಆಶ್ಚರ್ಯವೆಂದು ಹೇಳಬಹುದಾಗಿರುವ ಅನೇಕ ಮಾಹಿತಿಗಳಿವೆ. **ವಿಚಾರವಂತರಿಗೆ ಈ ಪುಸ್ತಕವು ಸಹಕಾರಿಯಾಗಿದೆ.**

ಚಿಂತನೆ ಪ್ರಕ್ರಿಯೆಗೆ ಸೂಕ್ತ ಪ್ರಮಾಣ (ಆಧಾರ)ದ ಅವಶ್ಯಕತೆ ಇದೆ. ಗ್ರಂಥಕರ್ತರು 'ಪ್ರಮಾಣಗಳು' ಎಂಬ ಪುಸ್ತಕವನ್ನೇ ಬರೆದು ಪ್ರಕಟಿಸಿದ್ದಾರೆ. ಅದು ಎರಡನೆಯ ಭಾಗವಾಗಿದೆ. ವಾಚಕರ ಜ್ಞಾನಾಭಿವೃದ್ಧಿಗೆ, ಇಲ್ಲಿಯ ೩ ಮತ್ತು ೪ನೇ ಭಾಗಗಳು - 'ಆಗಮಸಾರ' ಮತ್ತು 'ಮೋಕ್ಷ ಮಾರ್ಗ' **ಸೂಕ್ತ ಮಾರ್ಗ-ದರ್ಶನ ಮಾಡುತ್ತದೆ.**

ಡಾ|| ಪ್ರಭಂಜನಾಚಾರ್ಯರು, ನಿರ್ದೇಷಕರು, ವ್ಯಾಸ ಮಧ್ವ ಪ್ರತಿಷ್ಠಾನ, ಬೆಂಗಳೂರು - ಇವರು ಸುಮಾರು 40 ವರ್ಷಗಳ ಹಿಂದೆ ದಿ|| ಭೀಮರಾವ್‌ರವರ

ಸಂಪರ್ಕ ಹೊಂದಿದ್ದವರು. ನಮ್ಮ ಕೋರಿಕೆಯಂತೆ ವಿವರವಾಗಿರುವ ಮುನ್ನುಡಿ ನೀಡಿದ್ದಾರೆ. ಶ್ರೀ ಸತ್ಯಧ್ಯಾನ ವಿದ್ಯಾಪೀಠ, ಮುಂಬೈ – ಇದರ ಸ್ಥಾಪಕರಾದ ಮಾಹುಲಿ ಗೋಪಾಲಚಾರ್ಯರು ''ಪ್ರಮಾಣಗಳು'' ಪುಸ್ತಕಕ್ಕೆ ಅಂದು ಮುನ್ನುಡಿ ನೀಡಿದ್ದರು. ಇವರ ಪುತ್ರರು ಪಂ. ವಿದ್ಯಾಸಿಂಹಾಚಾರ್ಯರು ಈಗ ಮರುಪ್ರಕಟನೆ-ಯಾಗಿರುವುದಕ್ಕೆ ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಮುನ್ನುಡಿ ಬರೆದುಕೊಟ್ಟಿದ್ದಾರೆ. ಇವರುಗಳಿಗೆ ಸಂಘದ ಪರವಾಗಿ ನಮಸ್ಕರಿಸುತ್ತಿದ್ದೇನೆ. ಇವರುಗಳ ಸಂದೇಶಗಳು **ಪುಸ್ತಕದ ಬಗೆಗೆ ಸ್ಪಷ್ಟ ಬೆಳಕು ಚೆಲ್ಲುತ್ತದೆ.**

**ಆಪ್ತ ವರ್ಗದವರು ಆರ್ಥಿಕ ಸಹಾಯವನ್ನು ಮಾಡುತ್ತಿರುವುದರಿಂದ ಕಳೆದ ೬-೭ ವರ್ಷಗಳಿಂದ ೧೫ ಪುಸ್ತಕಗಳನ್ನು ಹೊರತರುವುದಕ್ಕೆ ಸಾಧ್ಯವಾಗಿದೆ.** ಈ ಪುಸ್ತಕದ ಪ್ರಕಟನೆಗೆ ಸಹಕರಿಸಿರುವವರು : ಗ್ರಂಥಕರ್ತರ ಮೊಮ್ಮಕ್ಕಳು : ಶ್ರೀ ಹರಿಪ್ರಸಾದ್, ಬೆಂಗಳೂರು, (ಅಧಿಕ ಮಟ್ಟದಲ್ಲಿ ಸಹಕರಿಸಿದ್ದಾರೆ.) ಸಮೀಪದ ಸಂಬಂಧಿಕರು ಸಿ.ವಿ. ರಾಘವೇಂದ್ರ – ಶಿವಮೊಗ್ಗ, ಶ್ರೀ ಎಸ್.ಆರ್. ನಾಗರಾಜ್, ಶ್ರೀಮತಿ ಯಶೋದ, ಶ್ರೀಮತಿ ಸುಧಾ, ಬೆಂಗಳೂರು ; ಆಪ್ತರು – ಶ್ರೀ ಲಕ್ಷ್ಮೀಶ, ಬೆಂಗಳೂರು ಮತ್ತು ಅರಬ್ ದೇಶದ ದೋಹ ಊರಿನ ಸತ್ಸಂಗದ ಸದಸ್ಯರಾದ ಶ್ರೀ ಅರುಣ್‌ಕುಮಾರ್. ಇವರುಗಳಿಗೆ ಭಗವಂತನು ಶ್ರೀಯಸ್ಸನ್ನುಂಟು ಮಾಡಲಿ ಎಂದು ಅವನಿಗೆ ನಮಸ್ಕರಿಸಿ, ಪ್ರಾರ್ಥನೆ ಸಲ್ಲಿಸುತ್ತಿದ್ದೇನೆ.

ಶ್ರೀಯುತ ಬಿ. ವಿ. ಪ್ರಹ್ಲಾದರವರು ಪುಸ್ತಕ ಹೊರತರುವುದಕ್ಕೆ ಮುತುವರ್ಜಿ ವಹಿಸಿದ್ದಾರೆ. ಕರಡು ಪ್ರತಿಯನ್ನು ತಿದ್ದುಕೊಟ್ಟಿದ್ದಾರೆ. ಅವರಿಗೆ ಕೃತಜ್ಞತೆಗಳು.

ಮುಖಪುಟವನ್ನು ಬಹಳ ಆಕರ್ಷಕವಾಗಿ ಮಾಡಿಕೊಟ್ಟ ಶ್ರೀ ಕೆ.ಎಂ. ಶೇಷಗಿರಿ-ಯವರಿಗೂ ಸಂಸ್ಥೆಯು ಅಭಿನಂದನೆಯನ್ನು ಸಲ್ಲಿಸುತ್ತದೆ.

ವಾಗರ್ಥ ಪ್ರಿಂಟರ್ಸ್, ಬೆಂಗಳೂರು-೧೯ ಇವರು ವಿಶೇಷವಾಗಿ ಸಹಕರಿಸಿ, ಮುದ್ರಣ ಮಾಡಿಕೊಟ್ಟಿದ್ದಾರೆ. ಕೇವಲ ವ್ಯಾಪಾರ ಮನೋಭಾವವಿಲ್ಲದೆಯೇ – ಒಂದು ರೀತಿಯ ಸ್ನೇಹದಿಂದ ವರ್ತಿಸಿರುವುದು ಸಂಸ್ಥೆಯ ವಿಶೇಷ. ಇವರಿಗೆ ಕೃತಜ್ಞತೆಗಳು.

ವಿಕಾರಿ ಸಂ||
(ಆಷಾಢ ಮಾಸ)
ಜುಲೈ-2019

**ಆರ್. ಜಗನ್ನಾಥರಾವ್**
ಸಂಘದ ಕಾರ್ಯಕಾರಿ ಸಮಿತಿ ಪರವಾಗಿ

ರತ್ನ - ೧

# ನಾಸ್ತಿಕ್ಯ ನಿರಾಸ

ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ।
ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ॥

ಲೇಖಕರು :
ಕೀರ್ತಿಶೇಷ ಮಾಧ್ವಭೂಷಣ ಶ್ರೀ ಬಿ. ಭೀಮರಾವ್
ದಾವಣಗೆರೆ

# ವಿಷಯಾನುಕ್ರಮಣಿಕೆ

# ಮುನ್ನುಡಿ

(ಪ್ರಥಮ ಪ್ರಕಟಣೆಯಲ್ಲಿರುವ ನುಡಿ)

ದಾವಣಗೆರೆಯ ಸರ್ವಜ್ಞಾಚಾರ್ಯ ಸೇವಾ ಸಂಘದ ಜೀವನಾಡಿಯಾಗಿ ಮಧ್ವಸಿದ್ಧಾಂತದ ಪತಾಕೆಯನ್ನು ಎತ್ತಿಹಿಡಿದು ಅನೇಕ ಉಪಯುಕ್ತ ಶಾಸ್ತ್ರ ಗ್ರಂಥಗಳನ್ನು ಕನ್ನಡದಲ್ಲಿ ರಚಿಸಿ ಮಾಧ್ವ ಸಮಾಜಕ್ಕೆಲ್ಲಾ ಚಿರಪರಿಚಿತರಾದ ವಕೀಲ್ ಬಿ. ಭೀಮರಾಯರು 'ಸಂದೇಶ ರತ್ನಮಾಲಾ' ಎಂಬ ಗ್ರಂಥಶ್ರೇಣಿಯನ್ನು ಪ್ರಚುರಪಡಿಸಲು ಉದ್ಯಮಿಸಿರುವರು. ಈ ಗ್ರಂಥಮಾಲೆಯಲ್ಲಿ ಉಳಿದ ನಾಲ್ಕು ಹೊತ್ತಿಗೆಗಳು ಕಾಲಕ್ರಮದಲ್ಲಿ ಬೆಳಕು ಕಾಣಲಿವೆ. ಅವರ 'ನಾಸ್ತಿಕ್ಯ ನಿರಾಸ' ಎಂಬ ಈ ಗುಚ್ಛವೇ ಈ ಗ್ರಂಥಶ್ರೇಣಿಯ ಪ್ರಥಮ ಹೊತ್ತಿಗೆ. ಮಧ್ವ ಸಿದ್ಧಾಂತದ ತತ್ವಗಳನ್ನು ಎಲ್ಲರಿಗೂ ಸುಲಭವಾಗಿ ಪರಿಚಯ ಮಾಡಿಕೊಡುವ ಉದ್ದೇಶವುಳ್ಳ ಸ್ತುತ್ಯವಾದ ಈ ಉದ್ಯಮದಲ್ಲಿ 'ನಾಸ್ತಿಕ್ಯ ನಿರಾಸ' ಎಂಬ ಹೊತ್ತಿಗೆಯು ಪ್ರಥಮ ಗುಚ್ಛವಾಗಿ ಬಂದಿರುವುದು ಯುಕ್ತವಾಗಿಯೇ ಇದೆ. ಯಾವ ಆಸ್ತಿಕ ಸಿದ್ಧಾಂತಕ್ಕೂ ಮೊದಲು ನಾಸ್ತಿಕ ವಾದವನ್ನು ನಿರಾಕರಣೆ ಮಾಡುವುದು ಅತ್ಯಂತ ಆವಶ್ಯಕವು. ಪರಾತ್ಪರ ತತ್ವ ಪ್ರತಿಪಾದನೆಯನ್ನು ಮಾಡುವ 'ವಿಷ್ಣುತತ್ವ ವಿನಿರ್ಣಯ' ಎಂಬ ತಮ್ಮ ಗ್ರಂಥದಲ್ಲಿ ಶ್ರೀ ಮಧ್ವಾಚಾರ್ಯರು ಮೊದಲು ನಾಸ್ತಿಕವಾದದ ಪರಾಕಾಷ್ಠತೆಯನ್ನು ಹೊಂದಿರುವ ಚಾರ್ವಾಕ ಮತವನ್ನು ನಿರಾಕರಿಸಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.

ಆಸ್ತಿಕ ಮತ್ತು ನಾಸ್ತಿಕ ಮತಗಳು ಪ್ರಾಚೀನ ಕಾಲದಿಂದಲೂ ಬಂದಿರುವುಗಳೇ. ನಮ್ಮ ದೇಶದಲ್ಲಿಯೇ ಅಲ್ಲದೆ ಪಾಶ್ಚಾತ್ಯ ಪೌರ್ವಾತ್ಯ ಇತರ ದೇಶಗಳಲ್ಲಿಯೂ ಅವುಗಳ ಪರಸ್ಪರ ಘರ್ಷಣೆಯು ನಡೆಯುತ್ತಲೇ ಬಂದಿರುವುದು. ಸ್ಥೂಲವಾಗಿ ದೇವರನ್ನು ಒಡಂಬಡುವ ಮತವು ಆಸ್ತಿಕ, ಒಡಂಬಡದ ಮತವು ನಾಸ್ತಿಕ ಎನಿಸಿದರೂ ವಿಚಾರ ಮಾಡಿದರೆ ಆಸ್ತಿಕ ಮತಗಳಲ್ಲಿ ಇನ್ನೂ ಹಲವಾರು ಮುಖ್ಯಾಂಶಗಳಿರುವುವು ಮತ್ತು ನಾಸ್ತಿಕ ಮತಗಳು ಅವುಗಳನ್ನು ತಿರಸ್ಕರಿಸುವುವು. ಧರ್ಮಾಧರ್ಮಗಳ ಆಚರಣೆಯಿಂದ ಉಂಟಾಗುವ ಪುಣ್ಯ-ಪಾಪರೂಪವಾದ ಅದೃಷ್ಟ, ಜಡವಾದ ದೇಹದಿಂದ ಭಿನ್ನವಾದ ಜೀವರು, ಅವರುಗಳಿಗೆ ಪ್ರೇರಕನಾದ ಸರ್ವಶಕ್ತನಾದ ಈಶ್ವರ-ಇವುಗಳ ನಂಬಿಕೆಯೇ ಆಸ್ತಿಕತ್ವವು ನಮ್ಮ ದೇಶದಲ್ಲಿ. ವೇದಪ್ರಾಮಾಣ್ಯದಲ್ಲಿ ನಂಬಿಕೆಯೂ ಆಸ್ತಿಕತ್ವದ ಒಂದು ಮುಖ್ಯಾಂಶವು. ವೇದ ಪ್ರಾಮಾಣ್ಯವನ್ನು ಒಡಂಬಡದ, ಆದರೆ ಜೀವತತ್ವವನ್ನು ಒಡಂಬಡುವ ಮತಗಳೂ ನಮ್ಮ ದೇಶದಲ್ಲಿ. ನಾಸ್ತಿಕ ಮತಗಳೆಂದು ವ್ಯವಹರಿಸಲ್ಪಟ್ಟಿರುವುವು. ಮೇಲೆ ಹೇಳಿದ ಆಸ್ತಿಕ ಮತಗಳ ಯಾವ ಒಂದು ಅಂಶವನ್ನು ಮಾತ್ರ ಒಡಂಬಡದಿದ್ದರೂ ಆ ಮತವು ನಾಸ್ತಿಕ ಮತವೆನಿಸುವುದು ಎಂದು ಗ್ರಂಥಕರ್ತರು ಹೇಳಿರುವುದು ಯುಕ್ತವಾದುದೇ ಆಗಿರುವುದು.

ಹಿಂದಿನ ಕಾಲದ ನಾಸ್ತಿಕ ಮತಗಳು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ತಮ್ಮ ವಾದವನ್ನು ಪ್ರತಿಪಾದಿಸಿರುವುವು. ಆಸ್ತಿಕ ಮತಗಳೂ ಅವುಗಳನ್ನು ನಿರಾಕರಿಸಿರುವುವು. ಆದರೆ ಈಗಿನ ಕಾಲದಲ್ಲಿ ವಿಜ್ಞಾನದ ಅಭೂತಪೂರ್ವ ಬೆಳವಣಿಗೆ ಮತ್ತು ಅದರ ರೋಮಾಂಚಕರ ಪರಿಶೋಧನೆಗಳಿಂದ ಆಸ್ತಿಕ ಮತ ತತ್ವಗಳಿಗೆ ಧಕ್ಕೆ ಬಂದಿದೆ; ಮುಂದೆ ಇನ್ನೂ ಹೆಚ್ಚು ಪ್ರಮಾಣದಲ್ಲಿ ಧಕ್ಕೆ ಬರಬಹುದು ಎಂಬ ಶಂಕೆ ಜನರಲ್ಲಿ ಹೆಚ್ಚುತ್ತಿದೆ. ಇದನ್ನು ನಿವಾರಿಸುವುದೇ ಈ ಹೊತ್ತಿಗೆಯ ಮುಖ್ಯ ಉದ್ದೇಶ.

ಆಸ್ತಿಕ ವಾದಗಳು ಪ್ರತಿಪಾದಿಸುವ ಮುಖ್ಯಪ್ರಮೇಯಗಳಾದ, ದೇಹ ಭಿನ್ನರಾದ ಚೇತನರು, ಅತೀಂದ್ರಿಯಗಳಾದ ಅದೃಷ್ಟ ಮುಂತಾದುವುಗಳು, ಅವುಗಳ ಪ್ರೇರಕವಾದ ಈಶ್ವರ-ಇವುಗಳ ಅಸ್ತಿತ್ವ ಪ್ರತಿಪಾದನೆ ಮತ್ತು ಆಧುನಿಕ ವಿಜ್ಞಾನದ ಈವರೆಗಿನ ಸಂಶೋಧನೆಗಳು ಮತ್ತು ಮುಂದೆ ಆಗಬಹುದಾದ ಸಂಶೋಧನೆಗೂ ಮೇಲಿನ ತತ್ವಗಳ ಅಥವಾ ಪ್ರಮೇಯಗಳ ನಂಬಿಕೆಯನ್ನು ಬಾಧಿಸಲಾರವು ಎಂಬ ಎರಡು ಮುಖ್ಯ ವಿಷಯಗಳೇ ಈ ಹೊತ್ತಿಗೆಯ ಸಾರಾಂಶವು. ಅದನ್ನು ಗ್ರಂಥಕರ್ತರು ಪ್ರತಿಭಾವಿಶಿಷ್ಟವಾದ ರೀತಿಯಲ್ಲಿ ಪ್ರತಿಪಾನೆ ಮಾಡಿರುವರು. ಲೇಖಕರ ಈ ಪ್ರತಿಪಾದನೆಯಿಂದ ಅವರಿಗೆ ಭಾರತೀಯ ತತ್ವಶಾಸ್ತ್ರದಲ್ಲಿ ಇರುವ ಜ್ಞಾನದ ಆಳವೂ ಆಧುನಿಕ ವಿಜ್ಞಾನ ಮತ್ತು ಅದರ ಮುಂದೋಟದಲ್ಲಿ ಇರುವ ಅಪಾರ ಜ್ಞಾನವೂ ವ್ಯಕ್ತವಾಗುವುವು. ಲೌಕಿಕದಲ್ಲಿ ವಕೀಲ ವೃತ್ತಿಯನ್ನು ಅವಲಂಬಿಸಿ ಅದರಲ್ಲಿಯೂ ಪ್ರತಿಷ್ಠೆಯನ್ನು ಗಳಿಸಿ ಈ ವಿಷಯಗಳಲ್ಲಿ ಇಷ್ಟು ಉನ್ನತಮಟ್ಟದ ಜ್ಞಾನವನ್ನು ಅಳವಡಿಸಿಕೊಂಡಿರುವುದು ಆಶ್ಚರ್ಯವೇ ಸರಿ.

ವಿಚಾರ ಮಾಡಿದರೆ ನಮ್ಮ ಅನುಭವಸಿದ್ಧವಾದ ಈ ಪ್ರಪಂಚದಲ್ಲಿ ಜಡ ಮತ್ತು ಚೇತನ ಎಂಬ ಎರಡು ವಸ್ತುಗಳು ಕಂಡುಬರುವುವು. ಅವುಗಳ ಲಕ್ಷಣಗಳು ಕ್ರಮವಾಗಿ ಜ್ಞಾನರಾಹಿತ್ಯ , ಜ್ಞಾನಗ್ರಾಹಕತ್ವಗಳು. ಜ್ಞಾನವನ್ನು ಗ್ರಹಿಸುವ ಸಾಮರ್ಥ್ಯವು ಜಡವಸ್ತುಗಳಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಆದರೆ ಮನುಷ್ಯ ಮೊದಲಾದ ಪ್ರಾಣಿಗಳಲ್ಲಿ ಈ ಜ್ಞಾನಗ್ರಾಹಕ ಸಾಮರ್ಥ್ಯವು ಕಂಡುಬರುವುದು. ದೇಹಗಳು ಜಡವಾದುದರಿಂದ ಅವುಗಳಲ್ಲಿ ಜ್ಞಾನವನ್ನು ಸಾಕ್ಷಾತ್ಕರಿಸುವ ಶಕ್ತಿಯುಳ್ಳ ಒಂದು ಜಡಭಿನ್ನವಾದ ವಸ್ತುವಿರಬೇಕೆಂದು ಸಿದ್ಧಿಸುವುದು. ಇದೇ ಜೀವ ಅಥವಾ ಚೇತನತತ್ವವು. ಇಷ್ಟೇ ಅಲ್ಲದೆ ಸಮಸ್ತ ಪ್ರಾಣಿಗಳಲ್ಲಿಯೂ ಹುಟ್ಟಿದ ಕ್ಷಣದಿಂದಲೇ ಹಸಿವು, ಬಾಯಾರಿಕೆ, ಭಯ, ಅಭಯ, ಭೋಗ ಇವುಗಳ ನಿವಾರಣೆ ಮತ್ತು ಪ್ರಾಪ್ತಿಗಳ ವಿಷಯದಲ್ಲಿ ಚಟುವಟಿಕೆಗಳು ಕಂಡುಬರುವುವು. ಈ ರೀತಿಯ ವ್ಯಾಪಾರವು ಕೇವಲ ಜಡವಾದ ಮಡಿಕೆ, ಮಣ್ಣು ಮುಂತಾದುವುಗಳಲ್ಲಿ ಇರುವುದಿಲ್ಲ. ಅದು ಆ ದೇಹದಲ್ಲಿ ಆವಿಷ್ಟವಾಗಿರುವ ಚೇತನ ಸಂಬಂಧಿಯೆಂದೇ ನಿರ್ಣಯಿಸಬೇಕು. ಕಣ್ಣು ಮೊದಲಾದ ಇಂದ್ರಿಯಗಳಿಂದ ಬಾಹ್ಯ ವಸ್ತುಗಳ ಜ್ಞಾನವುಂಟಾಗುವುದು. ಆದರೆ ಆ ಜ್ಞಾನದ ಅರಿವು ಇಂದ್ರಿಯಕ್ಕೆ ಅಲ್ಲ; ಪರಂತು ದೇಹದಲ್ಲಿರುವ ಚೇತನನಿಗೆ. ಚೇತನವು ಬಾಹ್ಯ ವಸ್ತುವನ್ನು ತಿಳಿಯುವುದಲ್ಲದೆ, ಅದರ ತಿಳುವಳಿಕೆ ತನಗೆ ಇರುವುದೆಂದೂ ಗ್ರಹಿಸುವುದು. ಈ ರೀತಿಯಾದ ಜ್ಞಾನದ ಜ್ಞಾನವು (ಅನುವ್ಯವಸಾಯ) ಜಡವಸ್ತುಗಳಲ್ಲಿ ಎಂದಿಗೂ ಕಂಡು ಬರುವುದಿಲ್ಲ. ಜಡಭಿನ್ನಗಳಾದ ಚೇತನಗಳ ವಿಶೇಷ ಸಾಮರ್ಥ್ಯದಿಂದಲೇ ಈ ಅರಿವು ಗ್ರಹಣಮಾಡಲ್ಪಡುವುದು. ಅತೀಂದ್ರಿಯಗಳಾದ ಅದೃಷ್ಟ ಮುಂತಾದುವುಗಳು ಇರುವುವು ಮತ್ತು ಅವುಗಳ ವಿಷಯಕವಾದ ಸರಿಯಾದ ಜ್ಞಾನವು ಅಪೌರುಷೇಯವಾದ ವೇದಗಳು ಮತ್ತು ಅವುಗಳಿಗೆ ಅನುಸಾರಿಗಳಾದ ಶಾಸ್ತ್ರಗಳಿಂದಲೇ ಉಂಟಾಗುವುದು, ಎಂಬುದು ಆಸ್ತಿಕ ವಾದಗಳ ಮತ್ತೊಂದು ಪ್ರಮೇಯವು. ಅತೀಂದ್ರಿಯ ವಸ್ತುಗಳು, ಜಡಭಿನ್ನನಾದ ಚೇತನ ಮತ್ತು ಅವುಗಳಿಗೆ ನಿಯಾಮಕನಾದ ಈಶ್ವರ ಇವುಗಳನ್ನು ಎಲ್ಲರೂ ಒಡಂಬಡಲೇಬೇಕು ಎಂಬ ವಿಷಯದಲ್ಲಿ ಮಹಾಭಾರತದ ಮೋಕ್ಷ ಧರ್ಮದಲ್ಲಿ ಪ್ರಮಾಣತ್ವೇನ ಹೇಳಿರುವ ದೃಷ್ಟಾಂತಗಳನ್ನು ಗ್ರಂಥಕರ್ತರು ವಿವೇಚನೆ ಮಾಡಿದ್ದಾರೆ.

ಆಧುನಿಕ ವಿಜ್ಞಾನ ಮತ್ತು ಅದರ ನಾಗಾಲೋಟದ ಮುನ್ನಡೆಯು ಆಸ್ತಿಕ ಮತಗಳ ನಂಬಿಕೆಗೆ ಧಕ್ಕೆಯನ್ನುಂಟು ಮಾಡುವುದೇ ಮತ್ತು ಆ ವಿಜ್ಞಾನವನ್ನೇ ಆಶ್ರಯಿಸಿ ಶಾಶ್ವತ ಸುಖಶಾಂತಿಗಳನ್ನೂ ಪಡೆಯಬಹುದೇ ಎಂಬುದನ್ನು ಗ್ರಂಥಕಾರರು ಸುದೀರ್ಘವಾಗಿ ವಿಚಾರಮಾಡಿದ್ದಾರೆ. ಮೊದಲನೆಯದಾಗಿ ವಿಜ್ಞಾನವು ಕೇವಲ ಜಡವಸ್ತು ವಿಷಯಕವಾಗಿಯೇ ಇರುವುದು. ಆ ವಿಷಯದಲ್ಲಿ ವಿಜ್ಞಾನವು ಏನು ಸಂಶೋಧನೆ ಮಾಡಿದರೂ ಜಡಭಿನ್ನವಾದ ಚೇತನ ಮತ್ತು ಅತೀಂದ್ರಿಯಗಳಾದ ಧರ್ಮಾಧರ್ಮಗಳ ವಿಷಯದಲ್ಲಿ ವಿಜ್ಞಾನವು ಅಧಿಕಾರವಾಣಿಯಿಂದ ಏನೂ ಹೇಳಲಾರದು. ಹೀಗೆಂಬಲ್ಲಿ ಗ್ರಂಥಕರ್ತರು ಪ್ರಸಿದ್ಧ ತತ್ವಜ್ಞಾನಿಗಳ ಹಾಗೂ ಆಧುನಿಕ ಶ್ರೇಷ್ಠ ವಿಜ್ಞಾನಿಗಳ ನಿಶ್ಚಿತಾಭಿಪ್ರಾಯಗಳನ್ನು ಉದಾಹರಿಸಿರುವರು.

ವಿಜ್ಞಾನವು ಅಂತಿಮ ತತ್ವವನ್ನು ಅಥವಾ ಸತ್ಯವನ್ನು ನಿರ್ಣಯಿಸಲಾರದು. ಪ್ರಯೋಗಗಳನ್ನೇ ಅವಲಂಬಿಸಿ ಅದು ಪ್ರವೃತ್ತವಾಗುವುದರಿಂದ ಅದರ ಸಿದ್ಧಾಂತಗಳು ಮಾರ್ಪಾಡು ಹೊಂದುತ್ತಲೇ ಇರುವುದು. ಡಾಲ್ಟನ್ ಎಂಬ ವೈಜ್ಞಾನಿಕನು ಪರಮಾಣುಗಳು ಅಭೇದ್ಯ ಎಂದು ಸಿದ್ಧಾಂತ ಮಾಡಿದ್ದರೂ ಈ ಶತಮಾನದ ಆದಿಭಾಗದಲ್ಲಿ ನಡೆಸಿದ ಸಂಶೋಧನೆಗಳಿಂದ ಪರಮಾಣುಗಳು ಅಭೇದ್ಯವಲ್ಲವೆಂದೂ ಅವು ವಿದ್ಯುದಣುಗಳಿಂದ ರಚಿಸಲ್ಪಟ್ಟವೆಂದೂ ಸಿದ್ಧಮಾಡಲ್ಪಟ್ಟಿದೆ. ಹೀಗೆಯೇ ನ್ಯೂಟನ್ ಪ್ರತಿಪಾದಿಸಿದ ಗುರುತ್ವಾಕರ್ಷಣ ಸಿದ್ಧಾಂತವೂ ಐನ್‌ಸ್ಟೈನ್ ಎಂಬುವರಿಂದ ಮಾರ್ಪಟ್ಟು, ಐನ್‌ಸ್ಟೈನ್ ಸಿದ್ಧಾಂತವೂ ಇತ್ತೀಚಿನ ಹಲವು ವೈಜ್ಞಾನಿಕರಿಂದ ಮಾರ್ಪಾಡು ಹೊಂದುತ್ತಿರುವುದನ್ನೂ ಗ್ರಂಥಕರ್ತರು ನಿರೂಪಿಸಿದ್ದಾರೆ. ಇದರಿಂದ 'ವಿಜ್ಞಾನವು ಒಂದು ರಾಜನೀತಿಯೇ ಇಷ್ಟಸಾಧಕ ಪದ್ಧತಿ-ಅಥವಾ ಕ್ರಮವೇ ಹೊರತು ಒಂದು ಮತವಲ್ಲ' (Science is only a policy, not a creed) ಎಂದು ಹೇಳಲ್ಪಟ್ಟಿರುವುದರ ಔಚಿತ್ಯವನ್ನು ಮನಗಾಣಬಹುದು.

ಇಷ್ಟೇ ಅಲ್ಲದೆ ವಿಜ್ಞಾನದಲ್ಲಿ ಅತ್ಯಂತ ಪ್ರತಿಷ್ಠಿತರಾದ ಯಾವ ವೈಜ್ಞಾನಿಕರೂ ದೇವರು ಎಂಬ ತತ್ವವನ್ನು ತಿರಸ್ಕರಿಸಿಲ್ಲ; ಪರಂತು ತಮ್ಮ ವೈಜ್ಞಾನಿಕ ಆನ್ವೇಷಣೆಯಿಂದ ದೇವರ ಆಸ್ತಿತ್ವ ವಿಷಯದಲ್ಲಿ ನಂಬಿಕೆಯು ಹೆಚ್ಚಿದೆ ಮತ್ತು ಧರ್ಮಾಧರ್ಮಗಳ ವಿಷಯದಲ್ಲಿ ತಿರಸ್ಕಾರ ಮನೋಭಾವವು ವಿಜ್ಞಾನದಿಂದ ಏನೂ ಆಗಿಲ್ಲ ಎಂದು ಹೇಳಿಕೊಂಡಿರುವರು. ಈ ವಿಷಯದಲ್ಲಿ ಅತ್ಯಂತ ಪ್ರತಿಷ್ಠಿತ ವಿಜ್ಞಾನಿಗಳಾದ ಐನ್‌ಸ್ಟೈನ್‌ರವರ ಅಭಿಪ್ರಾಯವನ್ನು ಗ್ರಂಥಕರ್ತರು ಉಲ್ಲೇಖಿಸಿರುವರು. ಸರ್ ಜೇಮ್ಸ್ ಜೀನ್ಸ್ ಎಂಬುವರು 'The Universe around us' ಎಂಬ ತಮ್ಮ ಗ್ರಂಥದ ಕೊನೆಯಲ್ಲಿ ವಿಶ್ವದ ನಿರ್ಮಾಪಕನು ಅತ್ಯಂತ ಮೇಧಾವಿಯಾದ ಗಣಿತ ಶಾಸ್ತ್ರಜ್ಞನು **(The architect of the universe must be a mathematician)** ಎಂದು ಉದ್ಗಾರ ಮಾಡಿರುವರು. ಭೌತ (ಭೂತ) ಶಾಸ್ತ್ರದಲ್ಲಿ ಅತ್ಯಂತ ಕ್ರಾಂತಿಕಾರಕವಾದ ಕ್ವಾಂಟಂ ಥಿಯರಿ ಎಂಬ ಸಿದ್ಧಾಂತವನ್ನು ಪ್ರತಿಪಾದಿಸಿರುವ ಪ್ಲಾಂಕ್ ಎಂಬ ಭೌತ ವೈಜ್ಞಾನಿಕರು ಭೌತಶಾಸ್ತ್ರದಲ್ಲಿ ಅಡಕವಾಗಿರುವ ತತ್ವಶಾಸ್ತ್ರ (Philosophy of physics) ಎಂಬ ಗ್ರಂಥದಲ್ಲಿ ಕಾರ್ಯಕಾರಣಭಾವ ಎಂಬುದುಂಟೇ ಎಂಬುದನ್ನು ವಿಚಾರ ಮಾಡಿ ಕಾರಣಗಳೆಲ್ಲವೂ ತಿಳಿಯಲ್ಪಟ್ಟಿದ್ದರೆ ಕಾರ್ಯವನ್ನು ನಿಶ್ಚಯಿಸಬಹುದು ಎಂದು ಪ್ರತಿಪಾದಿಸಿ, ಸಮಸ್ತ ಕಾರಣಗಳ ಜ್ಞಾನವುಳ್ಳ ವಸ್ತುವು (ಅಂದರೆ ಈಶ್ವರನು)

ಕಾರ್ಯದ ನಿಶ್ಚಯತೆಯನ್ನು ಮನಗಾಣಬಹುದು ಎಂದು ಹೇಳಿ ಈಶ್ವರನ ಅಸ್ತಿತ್ವದಲ್ಲಿ ನಂಬಿಕೆಯನ್ನು ವ್ಯಕ್ತಪಡಿಸಿದ್ದಾರೆ. ಪ್ರಸಿದ್ಧರಾದ ವೈಜ್ಞಾನಿಕರಾಗಿದ್ದ ಸರ್ ಐಸಾಕ್ ನ್ಯೂಟನ್ ಮತ್ತು ಮೈಕೇಲ್ ಫ್ಯಾರಡೆ ಎಂಬುವರು ದೈವಭಕ್ತಿಯುಳ್ಳವರಾಗಿದ್ದರೆಂದು ಅವರ ಜೀವನ ಚರಿತ್ರೆಗಳಲ್ಲಿ ಉಲ್ಲೇಖವಿರುವುದು.

ವಿಜ್ಞಾನವನ್ನೇ ಆಶ್ರಯಿಸಿ ಶಾಶ್ವತ ಸುಖಶಾಂತಿಗಳನ್ನು ಪಡೆಯುವ ಹಂಬಲು ಕೇವಲ ಮರುಮರೀಚಿಕೆಯೇ ಸರಿ. ಪುಣ್ಯ ಪಾಪಗಳ ಅರಿವಿಲ್ಲದಿದ್ದರೆ ವಿಜ್ಞಾನದ ಮುನ್ನಡೆಯು ಎಷ್ಟು ಹಾನಿಕರ ಎಂಬುದನ್ನು ಪರಮಾಣು ಬಾಂಬ್ ಆಗಮನವು ನಮಗೆಲ್ಲಾ ಅರಿವನ್ನುಂಟು ಮಾಡಿರುವುದು. ವಿಜ್ಞಾನವು ಅತೀಂದ್ರಿಯಗಳಾದ ಅದೃಷ್ಟ ಈಶ್ವರ ಮುಂತಾದುವುಗಳನ್ನು ಅಲ್ಲಗಳೆಯಲು ಎಂದಿಗೂ ಸಾಧ್ಯವಿಲ್ಲವೆಂಬುದನ್ನು ಈ ಗ್ರಂಥವು ನಾನಾ ಯುಕ್ತಿಗಳಿಂದ ಸಮಂಜಸವಾಗಿ ಸಾಧಿಸಿರುತ್ತದೆ. ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು,

**ದೇಹಕರ್ತೃತ್ವ ಮೀಶಸ್ಯ ಜ್ಞಾತ್ವಾತತ್ಪಿತೃತಾ ಸ್ಮೃತೇ । ವಿಶೇಷ ಸ್ನೇಹಮಾಪಾದ್ಯ ಸರ್ವಕರ್ತೃತ್ವತೋಽಧಿಕಂ ॥**
**ನಿಷ್ಪಾದ್ಯ ಬಹುಮಾನಂ ಚ ತದನ್ಯತ್ರಾತಿ ದುಃಖಿತಃ । ಉತ್ಪಾದ್ಯಾಯಧಿಕ ವೈರಾಗ್ಯಂ ತದ್ಗುಣಾಧಿಕ್ಯ ವೇದನಾತ್ ॥**
**ಸರ್ವಸ್ಯ ತದ್ವಶತ್ವಾಚ್ಚ ದಾರ್ಢ್ಯಂ ಭಕ್ತೇರವಾಪ್ಯ ಚ । ಯತೇತೋಪಾಸನಾಯೈವ ವಿಶಿಷ್ಟಾಚಾರ್ಯ ಸಂಪದಾ ॥**

''ನಮಗೆ ಅಧೀನವಾಗದ, ನಮ್ಮ ಇಚ್ಛೆಯಿಂದ ಬಂದಿದ್ದಲ್ಲವಾದ, ಈ ದೇಹದ ಕರ್ತೃವಾದ ಹರಿಯನ್ನು ನಮ್ಮ ಪಿತನೆಂದು ತಿಳಿದು ಅವನಲ್ಲಿ ವಿಶೇಷವಾದ ಸ್ನೇಹರೂಪ ಭಕ್ತಿಯನ್ನು ಮಾಡಿ ಅವನೇ ಸರ್ವಕರ್ತನೆಂದು ನಿಶ್ಚಯಿಸಿ ಸಂಸಾರವು ದುಃಖ-ಸಾಧನವೆಂದರಿತು ಹರಿಯಿಂದ ಬೇರೆಯಾದ ವಸ್ತುಗಳಲ್ಲಿ ವೈರಾಗ್ಯ ಹೊಂದಿ, ಅವನು ಗುಣಪೂರ್ಣನೂ ಸರ್ವಕರ್ತನೂ ಆದುದರಿಂದ ಅವನಲ್ಲಿ ಅಧಿಕ ಭಕ್ತಿಯಿಂದ ಅವನ ಉಪಾಸನೆಯಲ್ಲಿ ತೊಡಗಬೇಕು'' ಎಂದು ಮಾಡಿರುವ ಉಪದೇಶಾನುಸಾರವಾಗಿ, ನಾಸ್ತಿಕ್ಯವಾದವು ತಿರುಳಿಲ್ಲದೆಂಬ ಬುದ್ಧಿಯುಳ್ಳವರಾಗಿ ಸರ್ವ ಸುಜನರು ಶ್ರೀಹರಿಯನ್ನೇ ಶರಣು ಹೊಂದಬೇಕು.

ಶ್ರೀ ಬಿ.ಭೀಮರಾಯರ ಈ ಹೊತ್ತಿಗೆಯು ಎಲ್ಲರಿಗೂ ಅದರಲ್ಲೂ ಈಗಿನ ಯುವಕರಲ್ಲಿಯೂ ಬುದ್ಧಿಯನ್ನು ಕೆರಳಿಸಿ ಅವರ ವಿಚಾರಧಾರೆಯು ಸರಿಯಾದ ಮಾರ್ಗದಲ್ಲಿ ಹರಿಯುವಂತೆ ಮಾಡುವುದರಲ್ಲಿ ಅತ್ಯಂತ ಯಶಸ್ವಿಯಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಈ ಗ್ರಂಥಶ್ರೇಣಿಯ ಇತರ ಹೊತ್ತಿಗೆಗಳು ಬೇಗ ಬೆಳಕು ಕಾಣುವಂತೆ ಶ್ರೀಹರಿಯು ಕರುಣಿಸಲಿ ಎಂದು ಹಾರೈಸುತ್ತೇನೆ.

1-2-1968
ಮಂಡ್ಯ

**ಬಿ.ಎ. ಕೃಷ್ಣಸ್ವಾಮಿರಾವ್**
ಪ್ರಿನ್ಸಿಪಾಲ್
ಪಿ.ಇ.ಎಸ್. ಕಾಲೇಜ್ ಆಫ್ ಸೈನ್ಸ್
ಮಂಡ್ಯ

## ಪ್ರಕಾಶಕರ ನುಡಿ
### (ಪ್ರಥಮ ಪ್ರಕಟಣೆಯಲ್ಲಿರುವ ನುಡಿ)

ಶ್ರೀ ಮಾಧವನಿಗೆ ಸಮನಾದ ದೇವನಿಲ್ಲ, ಶ್ರೀ ಮಧ್ವರಿಗೆ ಸಮರಾದ ಗುರುವಿಲ್ಲ, ಅವರ ಶಾಸ್ತ್ರಗಳಿಗೆ ಸಮವಾದ ಶಾಸ್ತ್ರವಿಲ್ಲವೆಂಬ ಆದರ್ಶ ಮಂತ್ರವನ್ನು ಆರಿಸಿಕೊಂಡು ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘವು ಉದಯವಾಗಿ ಮೂವತ್ತುಮೂರು ವರುಷಗಳಾದವು. ಈ ಮಂತ್ರದ ಜ್ಞಾನವನ್ನು ತತ್ವ ಬುಭುತ್ಸುಗಳಿಗೆ ಉಂಟುಮಾಡಿಕೊಡಲು ನಮ್ಮ ಸಂಘವು ಗದ್ದಲವಿಲ್ಲದೆ ಪ್ರಯತ್ನಿಸುತ್ತಿದೆ. ಈ ಜ್ಞಾನಕ್ಕೆ ಪ್ರಚಾರವೇ ಮುಖ್ಯ ಸಾಧನವಾಗಿದೆ. ಆದರೆ ಸಂಘದ ಪ್ರಚಾರ ರೀತಿಯೇ ಬೇರೆ ರೀತಿಯಾಗಿರುತ್ತೆ. ಪ್ರಚಾರಕ್ಕಾಗಿ ವೃತ್ತಪತ್ರಿಕೆಗಳನ್ನು ಬಳಸಿಕೊಂಡಿಲ್ಲ. ಉತ್ತಮವಾದ ಉದ್ಗ್ರಂಥಗಳನ್ನು ವಿದ್ವಾಂಸರಿಂದ ಬರೆಸಿ ಪ್ರಕಟಿಸುವುದು, ವಿದ್ವತ್ಸಭೆಗಳನ್ನು ಏರ್ಪಡಿಸುವುದು, ಉಪನ್ಯಾಸ-ಹರಿಕಥೆ-ಪುರಾಣ-ಪಾಠಪ್ರವಚನ ಇತ್ಯಾದಿಗಳನ್ನು ಏರ್ಪಡಿಸಿ, ಜ್ಞಾನಪ್ರಚಾರ ಕಾರ್ಯವನ್ನು ಸಂಘವು ಮಾಡುತ್ತಲಿದೆ. ಸಂಘದ ಮಹೋತ್ಸಾಹೀ ಸದಸ್ಯರೂ, ಹರಿವಾಯುಗಳ ಸೇವೆಯಲ್ಲಿ ದೀಕ್ಷಾಬದ್ಧರೂ ಆದ ಶ್ರೀಮಾನ್ ಬಿ. ಭೀಮರಾಯರೇ ಮಾರ್ಗದರ್ಶನ ಮಾಡುತ್ತಲಿದ್ದಾರೆ. ಸಂಘದಿಂದ ಪ್ರಸಿದ್ಧಪಡಿಸಿದ ಶ್ರೇಷ್ಠ ಗ್ರಂಥಗಳ ಪೈಕಿ ಅನೇಕ ಅವರ ಪಳಗಿದ ಲೇಖನಿಯಿಂದಲೇ ಬಂದವುಗಳಾಗಿರುತ್ತವೆ; ದೈನಂದಿನ ಮತ್ತು ಮಾಸಪತ್ರಿಕೆಗಳಲ್ಲಿ ಪ್ರಶಂಸಾತ್ಮಕ ವಿಮರ್ಶೆಗಳೂ ಬಂದಿವೆ. ಶ್ರೀ ಭೀಮರಾಯರು ಓದುಗರಿಗೆ ಚಿರಪರಿಚಿತರಾಗಿರುವರು. ಅವರ ಗ್ರಂಥಗಳ ಬಗ್ಗೆ ಪ್ರಶಂಸಾ ಪತ್ರಗಳು ಅವರಿಗೆ ವಿಪುಲವಾಗಿ ಬಂದಿರುತ್ತವೆ. ಅವುಗಳನ್ನು ಅವರು ಬಯಲಿಗೆ ತಾರದಷ್ಟು ಸೌಜನ್ಯ ತೋರಿಸುತ್ತಾರೆ. ಕೆಲವು ಮಿತ್ರರಿಗೆ ಮಾತ್ರ ಒಂದೆರಡು ತೋರಿಸಿರುತ್ತಾರೆ.

ಈ ವಿಜ್ಞಾನ ಯುಗದ (ಕಲಿಯುಗದ) ಪ್ರಭಾವದಿಂದ ನಾಸ್ತಿಕತೆಯು ತಾಂಡವಾಡುತ್ತಿದೆ, ಬೇರೂರುತ್ತಿದೆ. ಸಂಪ್ರದಾಯಸ್ಥರು ತುಂಬಾ ಕಳವಳಗೊಳ್ಳುತ್ತಿದ್ದಾರೆ. ಭಾರತ ಪುಣ್ಯ ಭೂಮಿಯಲ್ಲಿ ಹುಟ್ಟಿ, ತತ್ವಜ್ಞಾನ ಸಂಪಾದಿಸಿಕೊಳ್ಳುವ ಸದವಕಾಶವನ್ನು ಕಳೆದುಕೊಂಡು ಜೀವನವನ್ನು ವ್ಯರ್ಥಗೊಳಿಸುತ್ತಿದ್ದಾರೆಂದು ಅನುಕಂಪಪಡುತ್ತಿದ್ದಾರೆ ನಾಸ್ತಿಕತೆಯ ಪ್ರವಾಹವು ಎಲ್ಲವನ್ನು ಕೊಚ್ಚಿಕೊಂಡು ಹೋಗುತ್ತಿದೆ. ಭೌತಿಕ ವಿಜ್ಞಾನ ವಿದ್ಯೆಯು (ಅ-ವಿದ್ಯೆಯು) ಜೀವನೋಪಾಯಕ್ಕೆ ಅತ್ಯಾವಶ್ಯಕವಾಗಿ ಪರಿಣಮಿಸಿದೆ. ವೈಜ್ಞಾನಿಕ ಸಾಧನೆಗಳು, ವೇದ-ಭಾರತ ಮುಂತಾದ ಸಚ್ಛಾಸ್ತ್ರಗಳಲ್ಲಿ ನಿರ್ಣೀತವಾದ ವಿಷಯಗಳನ್ನು ದೃಢೀಕರಿಸಲು ಸಹಾಯವಾಗುತ್ತಲಿವೆ ಎಂತ ಹೇಳಬಹುದು. ಭೌತಿಕ ಶಕ್ತಿಗಳನ್ನು ನಿಯಂತ್ರಿಸಿ ಜಗತ್ತಿನ ಹುಟ್ಟು-ಇರುವಿಕೆ-ನಾಶಾದಿಗಳನ್ನು ಸ್ವತಂತ್ರವಾಗಿ ಲೀಲೆಯಿಂದ ನಡೆಸುವ ಜಗದೀಶ್ವರನ ಮಹಾ ಮಹಿಮೆಯನ್ನು ಯಥಾಶಕ್ತಿ ಗ್ರಹಿಸಲು ಸಹಾಯವಾಗಬಹುದು-ವಿಚಾರಶೀಲರಿಗೆ ಮಾತ್ರ. ಕ್ಷುದ್ರ-ದರಿದ್ರ ಭೋಗ, ವಿಲಾಸ ಸಾಧನಗಳನ್ನು ಹುಟ್ಟಿಸುವುದರಲ್ಲಿ ಮಾತ್ರ ಪ್ರಾಕೃತ ಶಕ್ತಿಗಳನ್ನು ಉಪಯೋಗಿಸಿದರೆ ಸರ್ವನಾಶ ಖಂಡಿತ. ಅದು ವಿವೇಕ ಶೂನ್ಯ ಮಾರ್ಗ.

ವಿಜ್ಞಾನ (Science) ಮತ್ತು ವೇದಾಂತಗಳ ವ್ಯಾಪ್ತಿ, ಪ್ರಯೋಜನಗಳನ್ನು ವಿಮರ್ಶೆಯಿಂದ ನಿರ್ದೇಶಿಸಿ ನಾಸ್ತಿಕ್ಯ ಪ್ರವಾಹದಿಂದ ಸುಜನರನ್ನು ಹಿಂತಿರುಗಿಸಿ, ಅವರ ಶುಭಸಂಸ್ಕಾರಗಳನ್ನು ಉದ್ಬೋಧಿಸಿ, ಧರ್ಮಮಾರ್ಗಕ್ಕೆ ಹಚ್ಚಿ, ಆತ್ಮಜ್ಞಾನ ದ್ವಾರ ಶ್ರೇಯಸ್ಸಾಧನೆಗೆ ಶ್ರಮಿಸುವ ಅವಕಾಶವನ್ನು ಕಲ್ಪಿಸುವ ಉದ್ದೇಶದಿಂದ ನಮ್ಮ ಸಂಘವು ಐದು ಸಂಚಿಕೆಗಳಲ್ಲಿ ವೇದಾದಿ ಸಚ್ಛಾಸ್ತ್ರಗಳ ಮಹಾ ಸಂದೇಶಗಳನ್ನು ಸುಜನರ ಮುಂದಿಡಲು ನಿಶ್ಚಯಿಸಿದೆ. ಈ ಮೊದಲನೇ ಸಂಚಿಕೆಯು ''ನಾಸ್ತಿಕ್ಯ ನಿರಾಸ'' ಎಂಬ ನಾಮದಿಂದ ಹೊರ ಬಂದಿದೆ. ಇಲ್ಲಿ ಹೊಸ ದೃಷ್ಟಿ ನೋಡಬಹುದು. 'ಸಂದೇಶ ರತ್ನ ಮಾಲಾ' ಎಂಬ ಹೆಸರಿನಿಂದ ಈ ಗ್ರಂಥಮಾಲೆಯು ಪ್ರಕಟವಾಗುತ್ತಿದೆ. ಸಾಧ್ಯವಾದಷ್ಟು ಕಡಿಮೆ ಬೆಲೆಗೆ ದೊರಕುವಂತೆ ಪ್ರಯತ್ನಿಸಲಾಗುವುದು. ಈ ಗ್ರಂಥಮಾಲೆಯು ಶ್ರೀಮಾನ್ ಬಿ. ಭೀಮರಾಯರ ಲೇಖನಿಯಿಂದಲೇ ಬರುತ್ತದೆ. ಅವರು ಈ ಮಹತ್ಕಾರ್ಯವನ್ನು ನಡೆಸಿಕೊಡಲು ಉದಾರ ಮನಸ್ಸಿನಿಂದ ಒಪ್ಪಿರುತ್ತಾರೆ. ಸಂಘದವರು ಅವರಿಗೆ ಚಿರಋಣಿಗಳಾಗಿದ್ದಾರೆ.

ದಾವಣಗೆರೆ
ಪ್ಲವಂಗ ಸಂ|| ಮಾಘ ಶು 9
ಗುರುವಾರ
ದಿನಾಂಕ : 8-2-68

ಎಚ್. ವೆಂಕೋಬಾಚಾರ್ಯ
ಬಿ.ಎ., ಎಲ್‌ಎಲ್.ಬಿ.
ಅಧ್ಯಕ್ಷರು
ಟಿ. ವೆಂಕೋಬಾರಾವ್
ಕರ್ಜಗಿ ಭೀಮಾಚಾರ್ಯ
ಬಿ.ಎ., ಎಂ.ಇಡಿ.
ಗೌ|| ಕಾರ್ಯದರ್ಶಿಗಳು

# ನಾಸ್ತಿಕ್ಯ ನಿರಾಸ

(ರತ್ನ - ೧)

## ಪರಿಚ್ಛೇದ ೧

## ಆಸ್ತಿಕ್ಯ-ನಾಸ್ತಿಕ್ಯಗಳ ಸ್ವರೂಪ

ಅನುಭವ ಸಿದ್ಧವಾದ ಜಗತ್ತು ಜಡ-ಚೇತನಗಳೆಂಬ ಎರಡು ವಿಭಾಗವುಳ್ಳದ್ದು. ಸಕಲ ಪ್ರಾಣಿ ದೇಹಗಳಲ್ಲಿ ದೇಹಭಿನ್ನರಾದ ಚೇತನರಿದ್ದಾರೆ. ಪುಣ್ಯ-ಪಾಪಗಳುಂಟು. ಪ್ರತಿ ಚೇತನನೂ ತನ್ನ ಪುಣ್ಯ ಪಾಪಗಳಿಗನುಸಾರವಾಗಿ ದೇಹದಿಂದ ದೇಹಾಂತರಗಳನ್ನೂ, ಸುಖದುಃಖ ರೂಪಭೋಗಗಳನ್ನೂ ಸ್ವರ್ಗ-ನರಕಾದಿ ಲೋಕಗಳನ್ನೂ ಹೊಂದುತ್ತಾನೆ. ಕರ್ಮಾನುಸಾರವಾದ ಈ ಫಲಗಳನ್ನು ಚೇತನರಿಗೆ ಕೊಡುವವನೂ, ಸರ್ವಕರ್ಮ ಪ್ರೇರಕನೂ, ಜಗತ್ತಿನ ಸೃಷ್ಟಿ, ಸ್ಥಿತಿ, ಲಯಾದಿಗಳ ಕಾರಣನೂ, ಸರ್ವನಿಯಾಮಕನೂ ಆದ ಪರಮಚೇತನನೊಬ್ಬನಿದ್ದಾನೆ. ಆತನೇ ಈಶ್ವರನು. ಈತನನ್ನು ವೇದಗಳಿಂದಲೇ ತಿಳಿಯಬೇಕು. ವೇದಗಳು ಸರ್ವೋತ್ಕೃಷ್ಟ ಪ್ರಮಾಣಗಳು. ಹೀಗೆಂಬ ಭಾವನೆಗಳಲ್ಲಿ ವಿಶ್ವಾಸವಿಡುವುದು ಆಸ್ತಿಕ್ಯವೆನಿಸುತ್ತದೆ. ಇದಕ್ಕೆ ವಿರುದ್ಧವಾದುದು ನಾಸ್ತಿಕ್ಯವು. ಪುಣ್ಯಪಾಪಗಳಿಲ್ಲ; ಪರಲೋಕಗಳಿಲ್ಲ; ವೇದಗಳು ಪ್ರಮಾಣ-ಗಳಲ್ಲ; ಇಂದ್ರಿಯಗಳಿಂದ ವಿಷಯಗಳನ್ನು ಭೋಗಿಸಿ ಸುಖಪಡುವುದೇ ಜೀವನದ ಗುರಿ; ಇತ್ಯಾದಿಯಾಗಿ ತಿಳಿಯುವುದು ನಾಸ್ತಿಕ್ಯವು. ಆಸ್ತಿಕ್ಯ ಭಾವನೆ-ಗಳಲ್ಲಿ ಎಲ್ಲವನ್ನೂ ಅಲ್ಲಗಳೆದರೆ ಮಾತ್ರ ನಾಸ್ತಿಕ್ಯವೆನಿಸುವುದೆಂದು ತಿಳಿಯ-ಬಾರದು. ಯಾವುದೊಂದು ಮುಖ್ಯ ಪ್ರಮೇಯವನ್ನು ತಿರಸ್ಕರಿಸುವುದೂ ನಾಸ್ತಿಕ್ಯವೆನಿಸುವುದು. ಈ ದೃಷ್ಟಿಯಿಂದ ನಾಸ್ತಿಕ್ಯವು ನಾನಾ ಪ್ರಭೇದಗಳುಳ್ಳದ್ದು. ನಾಸ್ತಿಕ್ಯವನ್ನು ಸಾಧಿಸಲು ಪ್ರವೃತ್ತವಾಗುವ ವಾದವು ನಾಸ್ತಿಕ್ಯವಾದವು. ಇವು ನಾನಾ ಪ್ರಕಾರವಾಗಿವೆ-ನಾಸ್ತಿಕ ಮತಗಳೆಂದು ಪ್ರಸಿದ್ಧವಾದ ಮತಗಳು, ನಾಸ್ತಿಕ್ಯವನ್ನು ಸಿದ್ಧಾಂತಗೊಳಿಸಿರುವುದಾಗಿ ಸಾರುತ್ತವೆ. ಇದರಂತೆಯೇ ಆಸ್ತಿಕ್ಯ-ವನ್ನು ಸ್ಥಾಪಿಸುವ ವಾದಗಳು ಆಸ್ತಿಕ ಮತಗಳೆಂದೂ, ವೇದಪ್ರಾಮಾಣ್ಯವನ್ನು

ಸಾಧಿಸಿ, ತನ್ಮೂಲಕ ಸಿದ್ಧಾಂತಗಳನ್ನು ವ್ಯವಸ್ಥೆಗೊಳಿಸುವುದರಿಂದ ವೈದಿಕ ಮತ-ಗಳೆಂದೂ ಕರೆಯಲ್ಪಡುತ್ತವೆ. ನಾಸ್ತಿಕ ಮತಗಳಲ್ಲಿ ನಾನಾ ಪ್ರಭೇದಗಳಿದ್ದಂತೆ ಆಸ್ತಿಕ ಮತಗಳಲ್ಲಿ ಸಹ ಭಿನ್ನ ಮತಗಳಿವೆ. ಅವುಗಳೆಲ್ಲವೂ ಆಸ್ತಿಕ ಮತಗಳೆಂದು ಕರೆಯಲ್ಪಟ್ಟರೂ, ಎಲ್ಲ ಮತಗಳ ಸಿದ್ಧಾಂತಗಳೂ ಎಲ್ಲ ಪ್ರಕಾರದಿಂದ ಯಥಾರ್ಥವನ್ನೇ (ಸತ್ಯವನ್ನೇ) ಹೇಳುತ್ತವೆಂದಲ್ಲ. ಏಕೆಂದರೆ, ಈ ಭಿನ್ನಮತ-ಗಳೆಲ್ಲವೂ ವೇದಗಳಿಗೆ ಏಕಪ್ರಕಾರದ ಪ್ರಾಮಾಣ್ಯವನ್ನು ಅಂಗೀಕರಿಸುವುದಿಲ್ಲ. ಭಾಗಶಃ ಪ್ರಾಮಾಣ್ಯವನ್ನು ಒಡಂಬಡುವುವು ಕೆಲವಾದರೆ, ಮತ್ತೆ ಕೆಲವರು ತಾವು ಹೇಳುವ ಅಭಿಪ್ರಾಯಗಳನ್ನು ಸಮರ್ಥಿಸುವ ಭಾಗಗಳನ್ನು ಮಾತ್ರ ಪ್ರಮಾಣವೆನ್ನುವರು. ಇನ್ನೂ ಕೆಲವರು ವೇದಗಳಲ್ಲಿ ಆಪಾತತಃ (ಮೇಲೆ ಮೇಲೆ ಅಂದರೆ ಅವಿಚಾರ ದಶೆಯಲ್ಲಿ) ತೋರುವ ವಿರೋಧಗಳನ್ನು ಪರಿಹರಿಸಲಾಗದೇ ಪ್ರತ್ಯಕ್ಷ, ಅನುಮಾನಗಳಿಗೆ (ಯುಕ್ತಿಗೆ) ವಿರುದ್ಧವೆಂದು ತೋರುವ ಭಾಗಗಳನ್ನು ತ್ಯಾಜ್ಯ (ಪ್ರಮಾಣವೆಂದು ಅಂಗೀಕರಿಸಲು ಅನರ್ಹ) ಗಳೆನ್ನುತ್ತಾರೆ. ಮತ್ತೆ ಕೆಲವರು, ''ವೇದಗಳು ಪ್ರಮಾಣವೆಂದು ಒಪ್ಪಿಯೂ ಸಹ, ಹೀಗೆ ನಾನಾ ಪ್ರಕಾರಗಳನ್ನು ಕಲ್ಪಿಸುವುದು ಅಪ್ರಮಾಣವೆಂದು ಹೇಳಿದಂತೆಯೇ ಸರಿ; ಆದ್ದರಿಂದ ಎಲ್ಲ ವೇದಗಳೂ ಪರಮ ಪ್ರಮಾಣಗಳೇ ಆಗಿವೆ'' ಎಂದು ವಾದಿಸಿ, ತಾವೇ ನಿಜವಾದ ವೇದ ಪ್ರಾಮಾಣ್ಯವಾದಿಗಳೆಂದು ಹೇಳಿಕೊಂಡು, ವೇದಗಳಿಂದ ಪ್ರತಿಪಾದಿಸಲ್ಪಡುವ ಸತ್ಯವು, ವ್ಯಾವಹಾರಿಕ ಮತ್ತು ಪಾರಮಾರ್ಥಿಕ ಭೇದದಿಂದ ಎರಡು ವಿಧವೆಂದು ನಿರೂಪಿಸುತ್ತಾರೆ. ವೇದಪ್ರತಿಪಾದ್ಯವಾದ ಪರತತ್ವವು (ಪರಬ್ರಹ್ಮ-ಪರಮಾತ್ಮ-ಈಶ್ವರ ಇತ್ಯಾದಿ ನಾಮಗಳಿಂದ ಹೇಳಲ್ಪಡುವುದು) ಮನ ವಚನಗಳಿಗೆ ಅಗೋಚರವೆಂದೂ, ನಿರ್ಗುಣ ನಿರಾಕಾರ ಅಖಂಡ ವಸ್ತುವೆಂದೂ ಶಬ್ದರೂಪದ ವೇದವು ಅದನ್ನು ತಿಳಿಸಿಕೊಡಲಾರೆಂದೂ ವಾದಿಸುತ್ತ, ಮಹಾವಾಕ್ಯಗಳೆಂದು ತಾವು ಕರೆಯುವ ನಾಲ್ಕಾರು ವೇದವಾಕ್ಯಗಳ ಆಧಾರದ ಮೇಲೆ ಬ್ರಹ್ಮನೊಬ್ಬನೇ ಸತ್ಯ-ಇತರವೆಲ್ಲ ಮಿಥ್ಯೆಯೆಂದು ಸಿದ್ಧಾಂತಿಸುತ್ತಾರೆ. ಇನ್ನು ಕೆಲವರು, ವೇದಗಳೆಲ್ಲವೂ ಪರಮ ಪ್ರಮಾಣವೆಂದೂ, ಅಲ್ಲಿ ಮಹಾ ವಾಕ್ಯ-ಸಾಮನ್ಯ ವಾಕ್ಯ ಅಥವಾ ವ್ಯಾವಹಾರಿಕ-ಪಾರಮಾರ್ಥಿಕಗಳೆಂಬ ವ್ಯವಸ್ಥೆಗೆ ಅವಕಾಶವೇ ಇಲ್ಲವೆಂದೂ,

ಎಲ್ಲ ವೇದಗಳೂ ಮುಖ್ಯವಾಗಿ ಪರತತ್ವ ಸ್ವರೂಪವನ್ನೇ ಪ್ರತಿಪಾದಿಸಿದರೂ, ಅಮುಖ್ಯವಾಗಿ ಆ ಪರತತ್ವಪ್ರಾಪ್ತಿಗೆ ಅವಶ್ಯಕವಾದ ಧರ್ಮ-ಅಧರ್ಮಗಳನ್ನೂ ಇತರ 'ದೇವತೆ'ಗಳನ್ನೂ ನಿರೂಪಿಸುತ್ತವೆಂದೂ, ಪ್ರಮಾಣಪೂರ್ವಕವಾಗಿ ಸಾಧಿಸಿ, ವೇದಮುಖ್ಯ ಪ್ರತೀಪಾದ್ಯನಾದ **ಈಶ್ವರನೇ ಸ್ವತಂತ್ರನೂ, ಸರ್ವಜ್ಞನೂ, ಸರ್ವಕರ್ತನೂ, ಸರ್ವ ನಿಯಾಮಕನೂ ಆಗಿದ್ದು, ಜನ್ಮಾಂತರ-ಗಳನ್ನು ಹೊಂದುತ್ತಾ ಸಂಸಾರದಲ್ಲಿ ಸುತ್ತುವ ಅಲ್ಪಚೇತನರಿಗೆ (ಜೀವರಿಗೆ) ಅವರವರ ಸ್ವರೂಪಾವಿರ್ಭಾವ ರೂಪ ಮೋಕ್ಷವನ್ನು ಕೊಡುವ ಪ್ರಭುವೆಂದೂ ಹೇಳುತ್ತಾರೆ.** ಇವರೇ 'ತತ್ವವಾದಿ'ಗಳೆಂದು ಕರೆಯಲ್ಪಡುವ 'ಪರಮಾಸ್ತಿಕರು'. ಆರಂಭದಲ್ಲಿ ನಿರೂಪಿಸಿರುವ ಆಸ್ತಿಕ್ಯ ಲಕ್ಷಣಗಳು ಈ ತತ್ವವಾದಿಗಳ ಸಿದ್ಧಾಂತಗಳನ್ನೊಳಗೊಂಡಿವೆ.

ಅನಾದಿ ಕಾಲದಿಂದ ಆಸ್ತಿಕ್ಯ-ನಾಸ್ತಿಕ್ಯ ಭಾವನೆಗಳ ಬಗ್ಗೆ ಮಾನವನ ವಿಚಾರಶಕ್ತಿಯು ವಿನಿಯೋಗವಾಗುತ್ತಲೇ ಬಂದಿದೆ. ಆಸ್ತಿಕ ಮತಗಳು ತಮ್ಮ ಸಿದ್ಧಾಂತಗಳನ್ನೂ ನಾಸ್ತಿಕ ಮತಗಳು ತಮ್ಮ ನಿರ್ಧಾರಗಳನ್ನೂ ಜನತೆಯಲ್ಲಿ ಪ್ರಚಾರ ಮಾಡುತ್ತಲೇ ಬಂದಿವೆ. ಆಸ್ತಿಕ ಮತಗಳು ಕೆಲವು ಕಾಲ ವೃದ್ಧಿಹೊಂದಿದರೆ, ಕೆಲವು ಕಾಲ ನಾಸ್ತಿಕ ಮತಗಳು ತಲೆಯೆತ್ತಿ ಮೆರೆಯುತ್ತವೆ. ಮತಗಳ ವೃದ್ಧಿಯೆಂದರೆ, ವಿವೇಕವುಳ್ಳ ಪ್ರಜೆಗಳ ಬಹು ಭಾಗವನ್ನು ತಮ್ಮ ಅನುಯಾಯಿಗಳನ್ನಾಗಿ ಪಡೆದಿರುವಿಕೆ. ಆಸ್ತಿಕ್ಯ-ನಾಸ್ತಿಕ್ಯ ಶ್ರದ್ಧೆಗಳು ಜೀವ ಸ್ವಭಾವಧರ್ಮಗಳೇ ಆಗಿರುವುದರಿಂದ, ಆ ಮತಗಳೂ ಜೀವರಂತೆ ಅನಾದಿನಿತ್ಯಗಳಾಗಿರುವುವು. ಕಾಲಗತಿಯಿಂದ ಇವುಗಳ ವೃದ್ಧಿಹ್ರಾಸಗಳು ನಡೆದಿರುತ್ತವೆ. ಮಾನವನ ಪ್ರತಿಕರ್ಮವೂ ದೇಹಾಂತರದಲ್ಲಿ ಅಥವಾ ಕಾಲಾಂತರದಲ್ಲಿ ಸುಖ ಅಥವಾ ದುಃಖಕ್ಕೆ ಕಾರಣವಾಗುವ ''ಅದೃಷ್ಟ''ವನ್ನು ಉತ್ಪಾದಿಸುತ್ತದೆ. ಕಾಲಾಂತರದಲ್ಲಿ ಸುಖ ಅಥವಾ ದುಃಖರೂಪದ ಫಲವನ್ನು ನಮ್ಮ ಕರ್ಮಗಳು ಕೊಡಬಲ್ಲವು. ಕೊಡುತ್ತವೆಂಬುದು ಸರ್ವರ ಲೋಕಾನು-ಭವಸಿದ್ಧವಾಗಿದೆ. ಅದರಂತೆ ದೇಹಾಂತರಗಳಲ್ಲಿ ಸಹ ಈ ಉಭಯವಿಧ ಫಲಭೋಗಕ್ಕೂ ನಮ್ಮ ಕರ್ಮಗಳು ಕಾರಣವಾಗುತ್ತವೆಂದು ಆಸ್ತಿಕ ವಾದಿಗಳು ಹೇಳುವರು. ನಮ್ಮ ಕರ್ಮಗಳು ನಮ್ಮಲ್ಲಿ ಉಂಟುಮಾಡುವ

ಸಂಸ್ಕಾರಗಳು ಭವಿಷ್ಯತ್ಕಾಲದ ನಮ್ಮ ಕರ್ಮಗಳ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತವೆಂಬುದೂ ಅನುಭವ ಸಿದ್ಧವೇ! ಹೀಗೆ ಈಗಿನ ನಮ್ಮ ನಾನಾ ವಿಧ ಕರ್ಮಗಳು, ಮುಂದೆ ನಮ್ಮ ಸುಖದುಃಖಗಳಿಗೆ ಕಾರಣವಾಗುವ ಸೂಕ್ಷ್ಮ 'ಶಕ್ತಿ ವಿಶೇಷ'ವನ್ನೂ , ನಮ್ಮ ಜೀವಿತದ ರೀತಿನೀತಿಗಳನ್ನು ರೂಪಿಸುವ ಸಂಸ್ಕಾರವನ್ನೂ ಉತ್ಪಾದಿಸುತ್ತವೆ. **ಇವು ಇಂದ್ರಿಯ ಗೋಚರಗಳಲ್ಲ. ಅತೀಂದ್ರಿಯ ವಸ್ತು-ವಿಶೇಷಗಳು.** ಇವುಗಳನ್ನು ಪರಸ್ಪರ ಸಮಾವೇಶಗೊಳಿಸಿ 'ಅದೃಷ್ಟ'ವೆಂದು ವ್ಯವಹರಿಸಲಾಗುತ್ತದೆ. ಕರ್ಮಜನಿತವಾದ ಅದೃಷ್ಟವು ಸುಖಹೇತುವಾದರೆ ಅದನ್ನು ಧರ್ಮ ಅಥವಾ ಪುಣ್ಯವೆಂದೂ, ದುಃಖಹೇತುವಾದರೆ ಅಧರ್ಮ ಅಥವಾ ಪಾಪವೆಂದೂ ಕರೆಯಲಾಗುತ್ತದೆ. ಅದೃಷ್ಟವನ್ನು ಹುಟ್ಟಿಸುವ ಕರ್ಮವನ್ನೇ ಪುಣ್ಯ ಅಥವಾ ಪಾಪವೆಂದೂ ಧರ್ಮ ಅಥವಾ ಅಧರ್ಮವೆಂದೂ ಕರೆಯುವುದುಂಟು. ಕಾರ್ಯ ಕಾರಣಗಳ ಅಭೇದ ವ್ಯಪದೇಶವು ಶಾಸ್ತ್ರೀಯ ವ್ಯವಹಾರದಲ್ಲಿ ಕಂಡಿದೆ. ಅದೃಷ್ಟವು ಕಾರ್ಯ ; ಅದಕ್ಕೆ ಕಾರಣವಾದುದು ಕರ್ಮ. ಆಸ್ತಿಕ ಮತಗಳು ಸಾಮಾನ್ಯವಾಗಿ ಧರ್ಮವನ್ನು ರಕ್ಷಿಸಿ, ಪ್ರೋತ್ಸಾಹಿಸುತ್ತವೆ. ನಾಸ್ತಿಕ ಮತಗಳು ಧರ್ಮವನ್ನು ನಾಶಗೊಳಿಸಿ ಅಧರ್ಮ-ವನ್ನು ಎತ್ತಿ ಹಿಡಿಯುತ್ತವೆ. ಧರ್ಮ ಗ್ಲಾನಿಯೂ ಅಧರ್ಮದ ಉತ್ಥಾನವೂ ಆದಾಗ ತಾನೇ ಅವತರಿಸಿ ಧರ್ಮ ಸಂಸ್ಥಾಪನ ಕಾರ್ಯವನ್ನು ಮಾಡುವುದಾಗಿ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಘೋಷಿಸಿರುವನು. ಆಸ್ತಿಕ-ನಾಸ್ತಿಕ ಗುಂಪುಗಳಲ್ಲಿ ಸಮಾವೇಶವಾಗುವ ನಾನಾ ಮತಗಳು ಕಾಲಗತಿಯಿಂದ ಕ್ಷಯಿಸುತ್ತಲೂ, ಪುನರುತ್ಥಾನ ಹೊಂದುತ್ತಲೂ ಸಾಗುತ್ತವೆ. ಆಸ್ತಿಕ ಮತಗಳಲ್ಲಿ ಶ್ರೇಷ್ಠವಾದ 'ತತ್ವವಾದ'ವೂ ಅನಾದಿಯಾದುದೇ. ಅದಕ್ಕೂ ಕ್ಷಯ ಉತ್ಥಾನಗಳುಂಟು. ಶ್ರೀಕೃಷ್ಣನು ಅದನ್ನೇ ಗೀತೆಯಲ್ಲಿ ಪುನಃ ಉಪದೇಶಿಸಿರುವನು. ಅದೇ 'ಯೋಗವು' - ಮೋಕ್ಷೋಪಾಯವು. 'ಸ ಕಾಲೇ ನೇಹ ಮಹತಾ ಯೋಗೋ-ನಷ್ಟಃ ಪರಂತಪ । ಸ ಏವಾಯಂ ಮಯಾತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।' (ಗೀತಾ) ಎಂಬಲ್ಲಿ ಇದನ್ನೇ ಹೇಳಿರುವನು. ಹೊಸದಾಗಿ ಏನನ್ನೂ ಹೇಳುತ್ತಿಲ್ಲವೆಂದಿದ್ದಾನೆ. ಆಸ್ತಿಕ್ಯ ಮತ್ತು ನಾಸ್ತಿಕ್ಯಗಳನ್ನು ದೈವ ಮತ್ತು ಆಸುರ ಶ್ರದ್ಧೆಗಳೆಂದು ಕರೆದು, ಆ ಶ್ರದ್ಧೆಗಳು ಜೀವರ ಸ್ವರೂಪ ಭೂತಗಳೆಂದೇ

ಹೇಳಿರುವನು. 'ದ್ವೌಭೂತ ಸರ್ಗೌಲೋಕೇಽಸ್ಮಿನ್ ದೈವ ಆಸುರ ಏವ ಚ । ಎಂಬುದಾಗಿಯೂ 'ಯೋಯಚ್ಛ್ರದ್ಧಃ ಸ ಏವ ಸಃ । ಎಂದೂ ನಿರೂಪಿಸಿ, ಜೀವ ಸ್ವಭಾವಗಳೇ ಎರಡು ವಿಧವೆಂದೂ. ಅವರವರ ಸ್ವಭಾವಾನುಸಾರವಾಗಿ ಆಸ್ತಿಕ-ನಾಸ್ತಿಕ ವಾದಗಳಲ್ಲಿ ಅಭಿರುಚಿಯುಳ್ಳವರಾಗುವರೆಂದು ಹೇಳಿದ್ದಾನೆ.

ಆಸ್ತಿಕ ವಾದವು ಅಂಗೀಕರಿಸುವ ಧರ್ಮ-ಅಧರ್ಮವೆಂಬ ವ್ಯವಸ್ಥೆಯು ವೇದಾದಿ ಶಾಸ್ತ್ರಗಳಿಂದಲೇ ಸಿದ್ಧಿಸುವುದೆಂದು ಆಸ್ತಿಕ ಮತಗಳು ಹೇಳುತ್ತವೆ. ಅಧರ್ಮಾಚರಣೆಯನ್ನು ಯತ್ನ ಪೂರ್ವಕ ಪರಿತ್ಯಾಗ ಮಾಡಿ, ಧರ್ಮ ಮಾರ್ಗವನ್ನೇ ಅವಲಂಬಿಸಲು ಒತ್ತಾಯಪಡಿಸುತ್ತವೆ. ಧರ್ಮಾಚರಣೆಯು, ಆಚರಿಸುವ ವ್ಯಕ್ತಿಯ ಹಿತವನ್ನು ಮಾತ್ರವಲ್ಲ, ಕಿಂತು ಲೋಕಹಿತವನ್ನೂ ಸಾಧಿಸುತ್ತದೆಂದು ಸಾರುತ್ತವೆ. ಅಲ್ಪ ಮಾನವನು, ಎಷ್ಟೇ ಬುದ್ಧಿ ಶಾಲಿಯಾದರೂ, ವಿವೇಕಿಯಾದರೂ ತನ್ನ ಕರ್ಮಗಳಿಂದ (ಯತ್ನಗಳಿಂದ) ತನ್ನ ಭವಿಷ್ಯತ್ಕಾಲದ (ವೃದ್ಧಾಪ್ಯಾದಿಗಳ) ಸುಖವನ್ನು ಹೇಗೆ ಸಾಧಿಸಬಹುದೆಂಬುದನ್ನು ತಿಳಿಯಲು ಅಸಮರ್ಥನು. ದುಃಖಕಾರಣಗಣಗಳಾದ ತಾಪಗಳು, ಅಧಿಭೂತ-ಅಧ್ಯಾತ್ಮ-ಅಧಿದೈವಗಳೆಂದು ಮೂರು ವಿಧವಾಗಿವೆ. **ದೇಹಕ್ಕೊದಗುವ ರೋಗಾದಿ ಉಪದ್ರವಗಳು-ಅಧಿಭೂತ ; ನಾನಾ ಪ್ರಕಾರದ ಮನೋರೋಗಗಳು-ಅಧ್ಯಾತ್ಮ; ಮತ್ತು ದೈವಿಕವಾಗಿ ಪ್ರಾಪ್ತವಾಗುವ ದುರ್ಭಿಕ್ಷ, ಕಾಡ್ಗಿಚ್ಚು, ಸಿಡಿಲು, ಅತಿವೃಷ್ಟಿ, ಚಂಡಮಾರುತ ಇತ್ಯಾದಿಗಳು ಅಧಿದೈವ.** ಈ ತ್ರಿವಿಧ ತಾಪಗಳು ಎಂದಿಗೂ ಬಾರದಂತೆ ಮಾಡಿಕೊಳ್ಳುವುದು, ವೇದಾದಿ ಶಾಸ್ತ್ರಗಳಲ್ಲಿ ಉಕ್ತವಾದ ಧರ್ಮಾನುಷ್ಠಾನವನ್ನುಳಿದು, ದುಸ್ಸಾಧ್ಯವೇ ಸರಿ. ಏಕೆಂದರೆ, ಸ್ವಬುದ್ಧಿ ಬಲದಿಂದ ಈ ದೇಹದಲ್ಲಿ ಸಹ ಸುಖವನ್ನು ಸಾಧಿಸಲರಿಯದ ಮಾನವನು, ದೇಹಾಂತರಗಳಲ್ಲಿ ತನ್ನ ಸುಖವನ್ನು ಸಾಧಿಸಿಕೊಳ್ಳುವ ಬಗೆಯನ್ನು ಅರಿತು, ಈಗ ಅನುಷ್ಠಾನ ಮಾಡುವುದೆಂತು? ಮತ್ತು ಈ ನಶ್ವರ ದೇಹಗಳೇ ತನಗೆ ಬರದಂತೆ ಮಾಡಿಕೊಂಡು ನಿತ್ಯ ಸುಖರೂಪದ ಸ್ಥಿತಿಯನ್ನು ಹೊಂದಲು ತನ್ನ ಜೀವಿತವನ್ನು ರೂಪಿಸಿಕೊಳ್ಳುವುದೆಂತು? ಆದ್ದರಿಂದ ವಿವೇಕಿಯು ಕಾರ್ಯ-ಅಕಾರ್ಯಗಳನ್ನು ನಿರ್ಣಯಿಸಿಕೊಳ್ಳುವುದರಲ್ಲಿ ಸ್ವಬುದ್ಧಿಯನ್ನು ಆಶ್ರಯಿಸದೇ ಶಾಸ್ತ್ರಗಳನ್ನೇ ಶರಣುಹೊಂದಬೇಕು. ''ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ-

ಕಾರ್ಯಾಕಾರ್ಯ ವ್ಯವಸ್ಥಿತೌ । ಜ್ಞಾತ್ವಾ ಶಾಸ್ತ್ರ ವಿಧಾನೋಕ್ತಂ ಕರ್ಮಕರ್ತು-ಮಿಹಾರ್ಹಸಿ । ಯಃ ಶಾಸ್ತ್ರ ವಿಧಿಮುತ್ಸೃಜ್ಯವರ್ತತೇ ಕಾಮಕಾರತಃ । ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂಗತಿಂ ।।'' (ಗೀತಾ)– '**ಕಾರ್ಯವಾವುದು, ಅಕಾರ್ಯವಾವುದು ಎಂಬುದನ್ನು ನಿರ್ಣಯಿಸುವುದರಲ್ಲಿ ಶಾಸ್ತ್ರವೇ ಪ್ರಮಾಣವು**; ಶಾಸ್ತ್ರವಿಧಿಯನ್ನು ತಿಳಿದು ಕರ್ಮಗಳನ್ನು ಆಚರಿಸಬೇಕು; ವಿಧಿಯನ್ನುಲ್ಲಂಘಿಸಿ, ಸ್ವೇಚ್ಛಾನುಸಾರ ವರ್ತಿಸಿದರೆ, ಇಹಪರಗಳಲ್ಲಿ ಸುಖವಿಲ್ಲ ಮತ್ತು ಮೋಕ್ಷವೆಂಬುದು ಇಲ್ಲವೇ ಇಲ್ಲ' ಎಂಬುದಾಗಿ ಶ್ರೀಕೃಷ್ಣನು ನಿರ್ಣಯಿಸಿ ಉಪದೇಶಿಸಿರುವನು. ''ಋಗ್ಯಜುಸ್ಸಾಮಾಥರ್ವಾಶ್ಚಭಾರತಂ ಪಂಚರಾತ್ರಕಂ । ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ । ಯಚ್ಚಾನುಕೂಲ-ಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಂ ।।'' ಎಂದರೆ ಋಕ್, ಯಜು, ಸಾಮ, ಅಥರ್ವಗಳೆಂಬ ನಾಲ್ಕು ವೇದಗಳು ಭಾರತ, ಪಂಚರಾತ್ರ , ಮೂಲರಾಮಾಯಣ ಮತ್ತು ಇವುಗಳನ್ನನುಸರಿಸಿ (ವಿರೋಧವಿಲ್ಲದಂತೆ) ವಿಷಯಗಳನ್ನು ಪ್ರತಿ-ಪಾದಿಸುವ ಇತರ ಪುರಾಣಾದಿ ಸರ್ವವಾಕ್ಯಗಳೂ 'ಶಾಸ್ತ್ರ'ವೆನಿಸುತ್ತವೆ ಇವುಗಳನ್ನು ಗುರುಮುಖದಿಂದ ಅಧ್ಯಯನ ಮಾಡಿ, ಸಮೀಚೀನ ಜ್ಞಾನವನ್ನು ದೊರಕಿಸಿಕೊಂಡು (ಇಹ-ಪರ-ಮೋಕ್ಷ) ಸುಖ ಸಾಧನವಾದ ಧರ್ಮಗಳನ್ನು ಫಲಾಶಾರಹಿತರಾಗಿ ಆಚರಿಸುವುದು ಸರ್ವರ ಆತ್ಯಂತಿಕ ಶ್ರೇಯಸ್ಸಿಗೆ ಕಾರಣವಾಗಿದೆ. ಹೀಗೆ, ವೇದಾದಿ ಶಾಸ್ತ್ರ ಪ್ರಾಮಾಣ್ಯ ಬುದ್ಧಿಯು ಆಸ್ತಿಕ್ಯದ ಮುಖ್ಯ ಲಕ್ಷಣವು. ವೇದ ಪ್ರಾಮಾಣ್ಯ ಸಾಧನೆಯು ಕ್ಲಿಷ್ಟವೂ ಗಹನವೂ ಆದ ವಿಷಯ. ಅದನ್ನು ಮುಂದಿನ ಗ್ರಂಥದಲ್ಲಿ ಕೆಲ ಮಟ್ಟಿಗೆ ವಿಸ್ತರಿಸಲಾಗುತ್ತಿದೆ.

**ಸಾರಾಂಶ :** ಈಶ್ವರ, ಜೀವ, ಅದೃಷ್ಟಗಳೆಂಬ ಅತೀಂದ್ರಿಯ ವಸ್ತುಗಳನ್ನೂ, ವೇದಾದಿಶಾಸ್ತ್ರ ಪ್ರಾಮಾಣ್ಯವನ್ನೂ ಅದರಿಂದ ಸಿದ್ಧವಾಗುವ ಧರ್ಮಾ-ಧರ್ಮ (ಪುಣ್ಯ ಪಾಪ)ಗಳು ಆತ್ಮೋದ್ಧಾರಕ್ಕೂ ಲೋಕ ಕಲ್ಯಾಣಕ್ಕೂ, ಉತ್ತಮ ಸಾಧನವೆಂಬುದನ್ನೂ ಅಂಗೀಕರಿಸುವುದು 'ಆಸ್ತಿಕ್ಯ'ವು ; ತದ್ವಿರುದ್ಧ-ವಾದುದು 'ನಾಸ್ತಿಕ್ಯ'ವು.

## ಪರಿಚ್ಛೇದ ೨

## ಪ್ರಾಚೀನ ನಾಸ್ತಿಕ ಮತಗಳು

ಆಸ್ತಿಕ ಮತ್ತು ನಾಸ್ತಿಕ ಮತಗಳು ಅನಾದಿ ನಿತ್ಯಗಳೆಂದೂ ಕಾಲಗತಿಯಿಂದ ವೃದ್ಧಿ ಹ್ರಾಸಗಳನ್ನು ಹೊಂದುವುವೆಂದೂ ಹೇಳಲಾಯಿತಷ್ಟೆ. ಆಸ್ತಿಕ ಮತಗಳ ಗುಂಪಿನಲ್ಲಿ 'ಷಡ್ದರ್ಶನ'ಗಳೆಂದು ಪ್ರಸಿದ್ಧಿ ಪಡೆದಿರುವ ಆರು ಮತಗಳಿವೆ. ಇವುಗಳಲ್ಲಿ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ, ನಿಯಮನಾದಿಗಳ ವಿಷಯಕ್ಕೆ ಈಶ್ವರನಿಗೆ ಕೊಡುವ ಸ್ಥಾನ ಮತ್ತು ಆತನ ಸ್ವರೂಪಧರ್ಮಗಳ ಸಂಬಂಧವಾದ ಬಹುಪರಿ ಪ್ರಭೇದಗಳಿವೆ. ಹಾಗೂ ಇತರ ನಾನಾ ಪ್ರಮೇಯ ವಿಷಯಕ-ವಾದ ತೀವ್ರ ಭಿನ್ನಾಭಿಪ್ರಾಯಗಳೂ ಇವೆ. (೧) ಗೌತಮರ 'ನ್ಯಾಯ', (೨) ಕಾಣಾದರ 'ವೈಶೇಷಿಕ', (೩) ಕಪಿಲರ 'ಸಾಂಖ್ಯ', (೪) ಪತಂಜಲಿಗಳ 'ಯೋಗ', (೫) ಜೈಮಿನಿಗಳ 'ಪೂರ್ವ ಮೀಮಾಂಸಾ' ಮತ್ತು (೬) ಬಾದರಾಯಣರ (ವೇದವ್ಯಾಸರ) 'ಉತ್ತರ ಮೀಮಾಂಸಾ' ಇವೇ ಆ ಆರು ದರ್ಶನಗಳು. ಕೊನೆಯದಾದ ಉತ್ತರ ಮೀಮಾಂಸವು, ಮೊದಲಿನ ಐದು ದರ್ಶನಗಳ ನಿರ್ಧಾರಗಳನ್ನು ಗಮನಿಸಿ, ವೇದಾನುಸಾರಿಗಳಲ್ಲದ ಪ್ರಮೇಯ-ಗಳನ್ನು ಖಂಡಿಸಿ, ವೇದಸಿದ್ಧ ನಿರ್ಣಯಗಳನ್ನು ಯುಕ್ತಿಬದ್ಧ ವಾಕ್ಯಗಳಿಂದ ಮಂಡಿಸುತ್ತದೆ. **ಈ ವಾಕ್ಯ ಸಮೂಹಗಳು 'ಬ್ರಹ್ಮಸೂತ್ರ'ಗಳೆಂಬ ನಾಮದಿಂದ ಪ್ರಸಿದ್ಧವಾಗಿವೆ.** ನಾಲ್ಕು ಅಧ್ಯಾಯಗಳಲ್ಲಿ ಅಡಕವಾಗಿರುವ ಈ ಸೂತ್ರಗಳುಳ್ಳ ಗ್ರಂಥವು, 'ವೇದಾಂತ'ವೆಂಬ ಅನ್ವರ್ಥ ನಾಮವುಳ್ಳದ್ದಾಗಿದೆ. ಇನ್ನು, ನಾಸ್ತಿಕ ಮತಗಳಲ್ಲಿ ಚಾರ್ವಾಕ, ಬೌದ್ಧ, ಜೈನ ಮತಗಳು ಪ್ರಸಿದ್ಧವಾದುವು. ಚಾರ್ವಾಕರು ಪ್ರತ್ಯಕ್ಷವನ್ನು ಮಾತ್ರ ಪ್ರಮಾಣವೆಂದು ತಿಳಿಯುತ್ತಾರೆ. ಇಂದ್ರಿಯ ಗೋಚರವಲ್ಲದ ವಸ್ತುವಿಲ್ಲವೆನ್ನುವರು. ಬೌದ್ಧರು, ಪ್ರತ್ಯಕ್ಷದೊಂದಿಗೆ ಅನುಮಾನ (ತರ್ಕ)ವನ್ನೂ ಪ್ರಮಾಣವೆಂದಂಗೀಕರಿಸಿ, ತಮ್ಮ ಮತ ತತ್ವಗಳನ್ನು ಏರ್ಪಡಿಸಿಕೊಂಡಿರುವರು. ಬುದ್ಧನ ತಂದೆಯೆನಿಸಿದ 'ಶುದ್ಧೋದನ'ನೇ 'ಜಿನ' ಎಂಬ ನಾಮವುಳ್ಳವನು. ಈತನು ಬುದ್ಧನ ಉಪದೇಶನ್ನೇ ಆಶ್ರಯಿಸಿದ್ದರೂ, ಬುದ್ಧನ ವಾಕ್ಯಗಳನ್ನು ತನಗೆ ತಿಳಿದಂತೆ ಅರ್ಥಮಾಡಿಕೊಂಡು, ಕೆಲವಂಶಗಳಲ್ಲಿ

ಭಿನ್ನವಾದ ಜೈನ ಮತವನ್ನು ಪ್ರವರ್ತಿಸಿದನು. ಬುದ್ಧನು ಸ್ವಯಂ ಯಾವ ಗ್ರಂಥವನ್ನೂ ರಚಿಸಲಿಲ್ಲ. ಆತನ ಶಿಷ್ಯ ಪ್ರಶಿಷ್ಯರೆಂಬುವರು, ಆತನ ಉಪದೇಶ ವಾಕ್ಯಗಳ ವ್ಯಾಖ್ಯಾನರೂಪ ಗ್ರಂಥಗಳನ್ನು ರಚಿಸಿದ್ದಾರೆ. ಜಿನನಿಂದ ಪ್ರತಿ-ಪಾದಿತವಾದ ತತ್ವಗಳನ್ನು ಒಪ್ಪುವವರು ಜೈನರು. ಇವರಲ್ಲಿ ಸಹ ವೇದ ವಿಶ್ವಾಸವುಳ್ಳ ಒಂದು ಚಿಕ್ಕ ಪಂಗಡವಿದೆ.

ಯದ್ಯಪಿ, ನಾಸ್ತಿಕ ವಾದವನ್ನು ನಿರಾಕರಿಸಲು ಪ್ರವೃತ್ತವಾದ ಈ ಗ್ರಂಥದಲ್ಲಿ, ಈ ಮೇಲಿನ ಮೂರು ನಾಸ್ತಿಕ ಮತಗಳ ನಿರಾಕರಣೆಯು ಅವಶ್ಯಕವೆಂದು ಹೇಳಬೇಕು. ಈ ಮತಗಳ ತತ್ವಗಳನ್ನೂ, ಆಯಾ ಮತ ಸ್ಥಾಪಕರು ಈ ತತ್ವಗಳನ್ನು ಯಾವ ಪ್ರಮಾಣಗಳಿಂದ ಹೇಗೆ ಸಾಧಿಸುವ-ರೆಂಬುದನ್ನೂ ವಿಸ್ತರಿಸಿ, ಅಲ್ಲಿರುವ ದೋಷಗಳನ್ನು ಎತ್ತಿ ತೋರಿಸಬೇಕಾದುದೂ ಯುಕ್ತವಾಗಬಹುದು. ಆದರೆ ಈ ನಾಸ್ತಿಕ ಮತತತ್ವಗಳನ್ನು ಆ ಕ್ರಮದಿಂದ ಅಭ್ಯಸಿಸಿ, ನಾಸ್ತಿಕ ಭಾವನೆಯಲ್ಲಿ ಶ್ರದ್ಧೆಯನ್ನು ಹೊಂದಿದವರಲ್ಲ ಆಧುನಿಕರು. ವಿಜ್ಞಾನಶಾಸ್ತ್ರದ ಪ್ರಗತಿಯಿಂದ ಸಾಧ್ಯವಾಗಿರುವ ಅದ್ಭುತಗಳ ಪ್ರಭಾವ-ಕ್ಕೊಳಗಾಗಿ, ಮಾನವ ಯತ್ನದಿಂದ ಸರ್ವವನ್ನೂ ಸಾಧಿಸಬಹುದೆಂದು ಭ್ರಮಿಸಿ, ಈಶ್ವರ, ಜೀವ, ಅದೃಷ್ಟ ಮೊದಲಾದ ಅತೀಂದ್ರಿಯ ವಸ್ತುಗಳೇ ಇಲ್ಲವೆಂದು ತಿಳಿದು, ವಿಷಯಭೋಗದಿಂದ ಲಭಿಸುವ ಸುಖವನ್ನೇ ಜೀವಿತದ ಗುರಿ-ಯನ್ನಾಗಿಟ್ಟುಕೊಂಡು, **ತದರ್ಥವಾಗಿಯೇ ಶ್ರಮಿಸುತ್ತಿರುವ 'ಅಭಿನವ ನಾಸ್ತಿಕ್ಯ'ದ ಖಂಡನೆಯೇ ಈ ಗ್ರಂಥದ ಮುಖ್ಯೋದ್ದೇಶವಾಗಿರುವುದರಿಂದ,** ಪ್ರಾಚೀನ ನಾಸ್ತಿಕ ಮತಗಳು ಅನುಸರಿಸುವ ವಾದಸರಣಿಯೂ, ಯುಕ್ತಿ-ಪ್ರತ್ಯುಕ್ತಿಗಳ ಖಂಡನೆಮಂಡನೆಗಳೂ ಇಲ್ಲಿ ಅವಶ್ಯಕವಾಗುವುದಿಲ್ಲ. ಆದರೂ ನಾಸ್ತಿಕವಾದವು ಹೇಯವಾದ-ಹುರುಳಿಲ್ಲದ ದುರ್ಮತವೆಂಬ ಸಾಮಾನ್ಯ ಜ್ಞಾನವುಂಟಾಗಲೆಂಬ ಉದ್ದೇಶದಿಂದ, ಅವುಗಳ ಮುಖ್ಯಾಂಶಗಳನ್ನು ಸಂಕ್ಷೇಪ-ವಾಗಿ ನಿರೂಪಿಸಲಾಗುತ್ತದೆ.

ತತ್ವತಃ ಚಾರ್ವಾಕಾದಿ ಪ್ರಾಚೀನ ನಾಸ್ತಿಕ ವಾದಗಳಿಂದ ಈಗ ಜಗತ್ತನ್ನು ವ್ಯಾಪಿಸುತ್ತಿರುವ 'ಅಭಿನವ ನಾಸ್ತಿಕ್ಯ'ವು ಭಿನ್ನವಲ್ಲ. ಕೇವಲ ಜಡವಾದವನ್ನು

(materialism) ಸಮರ್ಥಿಸುವ ವೈಜ್ಞಾನಿಕ ಪ್ರವೀಣರೆಂಬುವರು ಹೇಳುವ (news papers, magazines, radio, television ಇತ್ಯಾದಿಗಳ ದ್ವಾರಾ ಪ್ರಸಾರವಾಗುವ) ಮಾತುಗಳಲ್ಲಿ, ವೇದಾದಿಗಳಿಗಿಂತ ಅಧಿಕ ವಿಶ್ವಾಸವನ್ನು ಹೊಂದುವ ಜನತೆಯು, ಯಾವ ಪ್ರಕಾರದ ಸ್ವತಂತ್ರ ವಿಚಾರ ವಿಮರ್ಶೆಗಳ ಅಪೇಕ್ಷೆಯೂ ಇಲ್ಲದೇ, **ನಾಸ್ತಿಕ್ಯವನ್ನು ಅಂಗೀಕರಿಸಿ, ತದನುಸಾರವಾಗಿ ತಮ್ಮ ಜೀವಿತವನ್ನು ರೂಪಿಸಿಕೊಳ್ಳುತ್ತಿರುವುದು, ಈ ನವನಾಸ್ತಿಕ್ಯದ ವೈಶಿಷ್ಟ್ಯವಾಗಿದೆ.** ಪ್ರಾಚೀನರು ಶಾಸ್ತ್ರೀಯ ಕ್ರಮಬದ್ಧ ರೀತಿಯಿಂದ ನಾಸ್ತಿಕ ಮತಗಳನ್ನು ಖಂಡನೆ ಮಾಡಿದಂತೆ, ಈಗಿನ ನಾಸ್ತಿಕ್ಯವನ್ನು ಎದುರಿಸುವುದು ಕಷ್ಟ. ಈ ಕಷ್ಟಸಾಧ್ಯವಾದ ಕಾರ್ಯವನ್ನು ಸಾಧಿಸಲು ವಿಶೇಷವಾಗಿ ಲೋಕಾನುಭವವನ್ನೂ, **ವೈಜ್ಞಾನಿಕ ಪ್ರವೀಣರ ಅಭಿಪ್ರಾಯಗಳನ್ನೂ ಅವಲಂಬಿಸಿ, ಈ ಗ್ರಂಥವು ಪ್ರವೃತ್ತವಾಗಿದೆ.**

## ಚಾರ್ವಾಕ ಮತ

ದೇಹ ಭಿನ್ನವಾದ ಚೇತನವೆಂಬ ನಿತ್ಯವಸ್ತುವಿರುವುದೆಂಬಲ್ಲಿ ಯಾವ ಪ್ರಮಾಣವೂ ಇಲ್ಲ. ದೇಹಾಂತರ ಪ್ರಾಪ್ತಿ, ಕರ್ಮಬಂಧ ಮೊದಲಾದವು ಅರ್ಥವಿಲ್ಲದ ಸುಳ್ಳು ಕಲ್ಪನೆಗಳು. ಧರ್ಮಾಧರ್ಮ-ಪುಣ್ಯ ಪಾಪಗಳೆಂಬುವು ಅಜ್ಞರನ್ನು ವಂಚಿಸಲು ಕಲ್ಪಿಸಿಕೊಂಡಿರುವ ವ್ಯವಸ್ಥೆಗಳು. ಇವುಗಳನ್ನು ಪ್ರತಿಪಾದಿಸುವ ವೇದಾದಿ ಶಾಸ್ತ್ರಗಳು ಪ್ರಮಾಣಗಳಲ್ಲ. ಜಗತ್ತಿನಲ್ಲಿ ಸಕಲ ಕಾರ್ಯಗಳೂ ವಸ್ತು ಸ್ವಭಾವಾನುಸಾರವಾಗಿ ತಾವಾಗಿಯೇ ನಡೆಯುತ್ತವೆ. ಪೃಥಿವ್ಯಾದಿ ಪಂಚಭೂತಗಳ ಮಿಶ್ರಣ ಸಂಯೋಗಗಳಿಂದ ದೇಹದಲ್ಲಿ ಚೇತನ ಶಕ್ತಿಯು ತೋರುತ್ತದೆ. ಚೈತನ್ಯವೆಂದರೆ ಜ್ಞಾನ. ಜಡಭೂತಗಳಿಂದ ಜ್ಞಾನ ಶಕ್ತಿಯು ಹೇಗೆ ಉತ್ಪತ್ತಿಯಾಗುತ್ತದೆಂದು ಆಶ್ಚರ್ಯಪಡುವ ಕಾರಣವಿಲ್ಲ. ಅದು ಭೂತ ಪರಿಣಾಮದ ಸ್ವಭಾವ, ಮರ(ವೃಕ್ಷ)ದಲ್ಲಿ ಮದಶಕ್ತಿಯಿಲ್ಲ. ಆದರೂ ಅದರಿಂದ ದೊರೆಯುವ ಮದ್ಯದಲ್ಲಿ ಮದಜನಕ ಶಕ್ತಿಯು ಕಂಡು ಬರುವಂತೆ ಜ್ಞಾನಶಕ್ತಿಯೂ ಹುಟ್ಟುತ್ತದೆ. ಜ್ಞಾನಯುಕ್ತ ದೇಹವೇ ಆತ್ಮನು; ದೇಹ ಭಿನ್ನ ಅನ್ಯವಸ್ತುವಲ್ಲ. ಇಂದ್ರಿಯಗಳಿಂದ ಅಪೇಕ್ಷಿತ ವಿಷಯಗಳನ್ನು ಭೋಗಿಸುವುದರಿಂದ ದೊರೆಯುವ ಸುಖವಲ್ಲದೇ ಬೇರೆ ಸುಖವಿಲ್ಲ. ಆದ್ದರಿಂದ ದೇಹವಿರುವವರೆಗೂ, ಸುಖಸಾಧನ ವಸ್ತುಗಳನ್ನು ಸಂಪಾದಿಸಿ

ಅನುಭವಿಸುವುದೇ ಸಕಲರ ಗುರಿಯಾಗಿರಬೇಕು. ಈ ಮೊದಲಾದ ಸಿದ್ಧಾಂತ-ಗಳನ್ನು ನಿರೂಪಿಸುವುದು 'ಚಾರ್ವಾಕ' ಮತವು. ವಿಚಾರ ಶೂನ್ಯರಾದ ಸಾಮಾನ್ಯರಿಗೆ ಇವು ಸಹಜವಾಗಿ, ಬಹು ಮನೋಹರವಾಗಿ ತೋರುತ್ತವೆ. (ಚಾರು+ವಾಕ್) ಆದ್ದರಿಂದ ಈ ಮತವು ಅನ್ವರ್ಥನಾಮವುಳ್ಳದ್ದು.

ಈ ಮತ ತತ್ವಗಳನ್ನು ಸ್ವಲ್ಪ ವಿಮರ್ಶಿಸೋಣ. ಚೇತನವೆಂಬ ಜಡ ಭಿನ್ನ ವಸ್ತುವೇ ಇಲ್ಲವೆಂದರೆ, ನಮ್ಮ ಶರೀರಗಳು ತಾವೇ ಸ್ವತಂತ್ರಿಸಿ ನಾನಾ ವಿಧವಾಗಿ ಚೇಷ್ಟಿಸುವುವೆಂದು ಹೇಳಬೇಕು. ಜಗತ್ತಿನಲ್ಲಿ ಯಾವ ಜಡ ಪದಾರ್ಥವೂ ತಾನೇ ಕಾರ್ಯ ಮಾಡುವುದನ್ನು ನಾವು ಕಾಣಲಾರೆವು. ಜಡ ಭೂತಗಳ ಸಂಯೋಗ-ದಿಂದ ಹುಟ್ಟುವುದೆಂಬ ಶಕ್ತಿವಿಶೇಷವೂ ಜಡವೇ-ಜ್ಞಾನವುಳ್ಳದ್ದಲ್ಲ. ಸೂಕ್ಷ್ಮಗಳಾದ ವಿದ್ಯುದಾದಿ ಯಾವ ಜಡಶಕ್ತಿ ವಿಶೇಷವೂ ಸ್ವಯಂ ಕಾರ್ಯ ಸಮರ್ಥವಲ್ಲ. ದೇಹದಲ್ಲಿರುವ ಜ್ಞಾನೇಂದ್ರಿಯ-ಕರ್ಮೇಂದ್ರಿಯ ಶಕ್ತಿಗಳೂ ಸಹ, ಆಯುಧಾದಿ ಉಪಕರಣಗಳಂತೆ ಸಾಧನ ಮಾತ್ರಗಳೆಂಬ ಅನುಭವವು ಪ್ರತಿಯೊಬ್ಬನಿಗೂ ಇದೆ. 'ನಾನು' ಎಂಬ ಅನುಭವಗೋಚರ ವಸ್ತುವು, ಪಂಚಭೂತಗಳ ಸಂಘಟನೆಯಿಂದ ಉತ್ಪನ್ನವಾದುದಲ್ಲ. ಅದು ಪೂರ್ವಾನುಭವಯುಕ್ತ-ವಾಗಿದ್ದರೆ ಹೇಗೋ ಹಾಗೆ ಕಾರ್ಯಗಳಲ್ಲಿ ತೊಡಗುವುದನ್ನು ಕಾಣುತ್ತೇವೆ. ಕೇವಲ ಎಳೆವಯಸ್ಸಿನಲ್ಲಿ ಅದ್ಭುತ ಮೇಧಾಶಕ್ತಿಯನ್ನೂ, ಪ್ರೌಢವಿದ್ಯಾಭ್ಯಾಸಾದಿ-ಗಳಿಂದ ಸಹ ಶಕ್ತವಲ್ಲದ ಕಲಾವಿಶೇಷ ಪ್ರದರ್ಶನಗಳನ್ನೂ, ಯತ್ನಪೂರ್ವಕ ಕಂಠಪಾಠ ಮಾಡಿದಂತೆ ಪೂರ್ಣಗ್ರಂಥಗಳನ್ನೇ ಉಚ್ಚರಿಸುವುದನ್ನೂ, ಜನ್ಮಾಂತರ ಮಾತಾಪಿತೃ ಗೃಹಾದಿಗಳನ್ನು ಗುರ್ತಿಸುವುದನ್ನೂ ನೋಡುತ್ತೇವೆ. ಆಗತಾನೇ ಜನಿಸಿದ ಶಿಶುವು, 'ಇದು ನನಗೆ ಇಷ್ಟ'ವೆಂಬ ಜ್ಞಾನಸಾಧ್ಯವಾದ ಸ್ತನ್ಯಪಾನದಲ್ಲಿ ತೊಡಗುತ್ತದೆ. ಅನುಕರಣದಿಂದ (ಅನ್ಯರನ್ನು ನೋಡಿ) ಹೀಗೆ ಮೊಲೆಯನ್ನು ಹೀರುತ್ತದೆಂಬುದು ಸಹ ಕೂಡುವುದಿಲ್ಲ. ತಾಯಿಯು ಕಲಿಸಿದ ಮೇಲೆ ಅಭ್ಯಾಸ ಬಲದಿಂದ ಸ್ತನಗಳಿಂದ ಕ್ಷೀರವನ್ನು ಹೀರಿಕೊಳ್ಳುತ್ತದೆಂದೂ ಹೇಳಲು ಬಾರದು ಶಿಶು ದೇಹಗತ ಚೇತನವು. ತನ್ನ ಹಿಂದಿನ ದೇಹದಲ್ಲಿ ದೊರೆತ ಅನುಭವದಿಂದಲೇ ಹೀಗೆ ಪ್ರವೃತ್ತಿಸುವುದೆಂದು ಒಪ್ಪಬೇಕಾಗುತ್ತದೆ. ಇದರಿಂದ, ದೇಹದಲ್ಲಿ ಜ್ಞಾನಕ್ರಿಯಾಶಕ್ತಿಗಳಿಂದ ಕೂಡಿದ ಭಿನ್ನವಸ್ತುವಿದೆ

ಎಂದೂ; ಅದು ಪ್ರಾಣಿಮಾತ್ರದ ಅಂತರಾಳದಲ್ಲಿ ಹುದುಗಿರುವ (ಆಗಾಗ ಪ್ರಕಟವಾಗುವ) ನಿತ್ಯಸುಖ ಪ್ರಾಪ್ತಿರೂಪ ಗುರಿಯನ್ನು ಸಾಧಿಸಲು ನಾನಾ ದೇಹಗಳನ್ನು ಹೊಂದುತ್ತಾ, ನಾನಾವಿಧ ಅನುಭವಗಳಿಂದ, ಜ್ಞಾನಾದಿಗಳ ವಿಕಾಸವನ್ನು ಪಡೆಯುತ್ತಾ, ಸ್ವಪರಿಪೂರ್ಣತೆಯ ದಿಕ್ಕಿನಲ್ಲಿ ಸಾಗಿರುತ್ತ-ದೆಂದೂ ತಿಳಿಯಬಹುದಾಗಿದೆ.

ಚಾರ್ವಾಕರು ಪ್ರತ್ಯಕ್ಷವನ್ನು ಮಾತ್ರ ಪ್ರಮಾಣವೆನ್ನುತ್ತಾರೆ. ಪ್ರತ್ಯಕ್ಷವೆಂದರೆ ಮನ ಮೊದಲಾದ ಇಂದ್ರಿಯಗಳ ದ್ವಾರಾ ತಿಳಿಯುವುದು. ಧರ್ಮ-ಅಧರ್ಮಗಳು (ಪುಣ್ಯ-ಪಾಪಗಳು) ಪ್ರತ್ಯಕ್ಷ ಗೋಚರಗಳಲ್ಲ- ಅತೀಂದ್ರಿಯ-ವಾದ ಅದೃಷ್ಟ ವಸ್ತುಗಳು. ಅತೀಂದ್ರಿಯ (ಇಂದ್ರಿಯ ಗೋಚರವಾಗದ) ವಸ್ತುಗಳೇ ಇಲ್ಲವೆಂದು ಚಾರ್ವಾಕರು ಯಾವ ಪ್ರಮಾಣದಿಂದ ಸಾಧಿಸಬಲ್ಲರು? ಆಸ್ತಿಕರಾದರೋ ವೇದಗಳಿಂದಲೂ, ವೇದಾನುಸಾರಿಗಳಾದ ಯುಕ್ತಿಗಳಿಂದಲೂ ಅತೀಂದ್ರಿಯ ಪದಾರ್ಥಗಳ ಅಸ್ತಿತ್ವವನ್ನು ಸಾಧಿಸುತ್ತಾರೆ. ಕರ್ಮಗಳಿಂದ ಕಾಲಾಂತರದಲ್ಲಿ ಫಲಕೊಡುವ ಶಕ್ತಿವಿಶೇಷವು ಉತ್ಪನ್ನವಾಗುವುದೆಂದು, ಅನುಭವದಿಂದ ತಿಳಿಯಬಹುದು. ಧರ್ಮಾಧರ್ಮಗಳನ್ನು ಅಂಗೀಕರಿಸದವರ ವಾಕ್ಯಗಳನ್ನು ಒಂದು ಶಾಸ್ತ್ರವೆಂದಾಗಲಿ, ಅವರದ್ದೊಂದು ಮತವೆಂದಾಗಲಿ ಹೇಳಲು ಬರುವುದಿಲ್ಲ. ಏಕೆಂದರೆ ಅದು ವಿಷಯ ಪ್ರಯೋಜನ ಶೂನ್ಯ-ವಾಗುವುದು. ಪ್ರತ್ಯಕ್ಷಕ್ಕೆ ವಿಷಯವಾದುದು ಶಾಸ್ತ್ರದ ವಿಷಯವಾಗುವುದಿಲ್ಲ. ಸಿದ್ಧವಾದುದಕ್ಕೆ ಶಾಸ್ತ್ರವೇಕೆ ? ಹೇಳುವವರಿಗೂ, ಕೇಳುವವರಿಗೂ ಇಷ್ಟವಾದ ಫಲವನ್ನುದ್ದೇಶಿಸಿ, ಇತರ ಪ್ರಮಾಣಗಳು ಬೋಧಿಸದಿರುವ ಅರ್ಥವನ್ನು ಪ್ರತಿಪಾದಿಸುವ ವಾಕ್ಯಸಮುದಾಯವೇ ಶಾಸ್ತ್ರವು-ಜ್ಯೋತಿಷ, ಆಯುರ್ವೇ-ದಾದಿಗಳಂತೆ. ಚಾರ್ವಾಕನ ಶಾಸ್ತ್ರಕ್ಕೆ ಯಾವ ಪ್ರಯೋಜನವೂ ಇಲ್ಲ. ಧರ್ಮಾದಿಗಳ ಅಭಾವವನ್ನು ಸ್ಥಾಪಿಸುವುದೇ ಪ್ರಯೋಜನವೆಂದೂ ಹೇಳಲಿಕ್ಕೆ ಬರುವುದಿಲ್ಲ. ವೇದಾದಿಗಳಿಂದ, (ಆಸ್ತಿಕ ಮತತತ್ವಗಳ ಶ್ರವಣ-ಅಧ್ಯಯನ-ಅನುಯಾಯಿಗಳ ಅನುಷ್ಠಾನಾದಿಗಳಿಂದ) ಧರ್ಮಾದಿಗಳುಂಟೆಂಬ ಭ್ರಮೆ-ಯುಂಟಾಗಿ, ವೈರಾಗ್ಯ ಸಾಧನೆಗಾಗಿ ವಿಷಯಭೋಗಗಳನ್ನು ತ್ಯಜಿಸಿ, ವ್ರತಾದಿಗಳಿಂದ ದೇಹವನ್ನು ಕೃಶಗೊಳಿಸಿ ದುಃಖಪಡುವ ಜನತೆಗೆ, ಅವುಗಳ

(ಪುಣ್ಯಪಾಪಗಳ) ಅಭಾವವನ್ನು ಬೋಧಿಸಿ, ವಿಷಯಭೋಗದಿಂದ ಸುಖಿ-ಗಳಾಗುವಂತೆ ಮಾಡುವ ಲೋಕೋಪಕಾರವೇ ಪ್ರಯೋಜನವೆಂದು ಚಾರ್ವಾಕನು ಹೇಳಲು ಬರುವುದಿಲ್ಲ. ಧರ್ಮಾಧರ್ಮಗಳು, ಯಥಾರ್ಥ-ವಾಗಲಿ ಅಥವಾ ಭ್ರಮೆಯಾಗಲಿ, ಹೇಗಾದರೂ ಲೋಕಮರ್ಯಾದೆಗಳ ರಕ್ಷಣೆಗೂ, ಅವುಗಳನ್ನು ಪಾಲಿಸತಕ್ಕವರ ಹಿತಕ್ಕೂ ಕಾರಣವಾಗುತ್ತವೆ. ಪುಣ್ಯ-ಪಾಪಗಳ ಭೀತಿಯೇ ಇಲ್ಲದಿರಲು, ಬಲ್ಲಿದರು ಬಲಹೀನರ ದ್ರವ್ಯ ಭಾರ್ಯಾದಿ-ಗಳನ್ನು ಅಪಹರಿಸಲಿಚ್ಛಿಸಿ, ಪರಸ್ಪರ ಹಿಂಸೆ ವಂಚಕತನ ಮೊದಲಾದವುಗಳಿಗೆ ಕಾರಣವಾಗಿ, ಲೋಕೋಪಕಾರದ ಬದಲು ಅಪಕಾರವನ್ನೇ ಎಸಗಿದಂತೆ ಆಗುತ್ತದೆ. **ವಿಷಯಾಶೆಯು ಪ್ರಾಣಿ ಮಾತ್ರಕ್ಕೆ ಸಹಜವಾದುದು. ಸ್ವಾರ್ಥ ಸಾಧನೆಯನ್ನು ಯಾರೂ ಕಲಿಸಿಕೊಡಬೇಕಾಗಿಲ್ಲ. ಧರ್ಮಾದಿಗಳ ಪಾಲನೆಯೇ ಲೋಕಹಿತ ಸಾಧಕವೆಂದೂ, ತನ್ನ ಹಿತವು ಲೋಕಹಿತವನ್ನವಲಂಬಿಸಿದೆಯೆಂದೂ ತಿಳಿಯದ ವಿನಹ ಯಾರೂ ಲೋಕೋಪಕಾರದಲ್ಲಿ ತೊಡಗನು-ಸ್ವಾರ್ಥವನ್ನು ಬಿಡನು.** ಹೀಗೆ ಧರ್ಮಾದಿಗಳ ಅಭಾವವನ್ನು ಉಪದೇಶಿಸುವುದರಿಂದ ಪರಸ್ಪರ ಹಿಂಸಾದಿಗಳೇ ಸಂಭವಿಸುವುದರಿಂದ, ಉಪದೇಶಕನಿಗೂ ಹಿತವಾಗದು. ಧರ್ಮಾದಿಗಳನ್ನು ಅಂಗೀಕರಿಸದೇ ಲೋಕದಲ್ಲಿ ಯಾವ ವಿಧವಾದ ನೈತಿಕ ನಿಯಮಗಳನ್ನೂ (Moral Codes) ಎತ್ತಿ ಹಿಡಿದು ಸಮರ್ಥಿಸ-ಲಾಗುವುದಿಲ್ಲ - ತಳಪಾಯವಿಲ್ಲದ ಗೋಡೆಯಂತೆ ಕುಸಿದುಬೀಳುತ್ತವೆ. ಪ್ರತಿಯೊಬ್ಬನಲ್ಲಿ ಅಂತಃ ಪುಣ್ಯ ಪಾಪಗಳ ಭೀತಿಯಿದ್ದರೆ ಮಾತ್ರ ನೀತಿ-ನಿಯಮಗಳ ಅನುಷ್ಠಾನವು ಸಾಧ್ಯ. ಕಾನೂನು ನಿರ್ಬಂಧಗಳಿಂದ ಮಾನವನ ಕೃತಿಗಳನ್ನು ನಿಯಂತ್ರಿಸುವುದು ದುಸ್ಸಾಧ್ಯ. ಪ್ರಚಲಿತ ಪರಿಸ್ಥಿತಿಗಳೇ ಇದಕ್ಕೆ ಸಾಕ್ಷಿ. ಜಗತ್ತಿನ ಎಲ್ಲ ರಾಷ್ಟ್ರಗಳಿಂದ ಒಟ್ಟು ಪ್ರತಿವರ್ಷವೂ ಲಕ್ಷಾವಧಿ ಪುಟಗಳಾಗುವಷ್ಟು ಕಾನೂನುಗಳು ರಚಿಸಲ್ಪಡುತ್ತವೆ. ಅವುಗಳ ಬಹುಭಾಗವು ನಿರ್ಮಾತರಿಗೂ, ಜಾರಿಯಲ್ಲಿ ತರಬೇಕಾದ ಪೋಲೀಸು ಮುಂತಾದ ಅಧಿಕಾರಿಗಳಿಗೂ, ನ್ಯಾಯಾಲಯಗಳ ಅಧ್ಯಕ್ಷರಿಗೂ ತಿಳಿಯದು. ಪ್ರಜೆಗಳು ಅವುಗಳನ್ನು ಪಾಲಿಸುವುದೆಂತು ? ಅಲ್ಲದೇ, ಸಂಬಂಧಪಟ್ಟ ಪ್ರಜಾ-ವರ್ಗದವರು ಹಾಗೆ ಏರ್ಪಡುವ ಕಾನೂನುಗಳನ್ನು ಮುರಿಯುವುದು

(ತಪ್ಪಿಸಿಕೊಳ್ಳುವುದು-ತಮಗೆ ಅನ್ವಯಿಸಿದಂತೆ ಮಾಡಿಕೊಳ್ಳುವುದು) ಹೇಗೆಂಬ ಸಮಸ್ಯೆಯನ್ನು ಪರಿಹರಿಸಿಕೊಳ್ಳುವುದರಲ್ಲಿಯೇ ತಮ್ಮ ವಿಶಿಷ್ಟ ಬುದ್ಧಿಶಕ್ತಿಯನ್ನು ವಿನಿಯೋಗಿಸುತ್ತಾರೆ. ನ್ಯಾಯವಾದಿಗಳ (ಅವಕಾಶವಿದ್ದಲ್ಲಿ ನ್ಯಾಯಾಧೀಶರ) ಸಲಹೆಗಳನ್ನೂ ಈ ಬಗ್ಗೆ ಪಡೆಯುವರು. ಎಲ್ಲ ಸರಕಾರಗಳು ರಾಜ್ಯದಲ್ಲಿ ಶಿಸ್ತು-ಕ್ರಮಗಳನ್ನು (Law and Order) ಕಾಪಾಡುವ ಶಕ್ತಿಯನ್ನೇ ಕಳೆದು-ಕೊಂಡು, ಸರ್ವತ್ರ ಅಶಾಂತಿಯೇ ತಾಂಡವಿಸುತ್ತಿದೆ. ಯಾರ ಮಾನ-ಪ್ರಾಣ ಆಸ್ತಿಗಳಿಗೂ ಉಳಿವಿಲ್ಲದ ಕಾಲ ಸಮೀಪಿಸುತ್ತಿದೆ. ಹೀಗೆ ಜಗತ್ತಿನ ಅಶಾಂತಿಗೆ ಕಾರಣವಾದ ಧರ್ಮಾ ಧರ್ಮಗಳ ಅಭಾವವನ್ನು ಉಪದೇಶಿಸುವ ಚಾರ್ವಾಕಮತವು ಹೇಯವಾದುದು - ವಿವೇಕಿಗಳಿಂದ ಅಂಗೀಕರಿಸಲು ಅರ್ಹವಾದುದಲ್ಲ.

ಹೀಗೆ ಚಾರ್ವಾಕ ಮತವು ವಿಷಯಪ್ರಯೋಜನ ರಹಿತವಾಗಿದ್ದು, ಅದೊಂದು ಶಾಸ್ತ್ರವೇ ಅಲ್ಲವಾಗಿದ್ದರೂ, ಹಿಂದೆ ಶಾಸ್ತ್ರವೆಂದು ಪರಿಗಣಿಸಲ್ಪಟ್ಟಿತ್ತು. ಇದಕ್ಕೆ ಕಾರಣವೂ ಇತ್ತು. ಭಾರತೀಯರಲ್ಲಿ (ಜನಸಾಮಾನ್ಯದಲ್ಲಿ) ರೂಢ-ಮೂಲವಾಗಿರುವ ಶಾಸ್ತ್ರಗೌರವ ಬುದ್ಧಿಯನ್ನು ದುರುಪಯೋಗ ಮಾಡಿಕೊಂಡು, ಕೆಲವು ದುರ್ಜನರು (ಅನ್ಯಥಾ ಜ್ಞಾನಿಗಳು) ಚಾರ್ವಾಕಮತವೂ ಶಾಸ್ತ್ರಾಧಾರ-ವುಳ್ಳದ್ದೆಂದು ಹೇಳಿಕೊಂಡು. 'ಜಗತ್ತು ಯಾರಿಂದ ಹುಟ್ಟಿತೆಂಬುದನ್ನು ಯಾರು ಹೇಳಬಲ್ಲರು-ಯಾರು ಹೇಳುವರು?' ಎಂಬರ್ಥವನ್ನು ಹೇಳುವಂತೆ ತೋರುವ 'ಋಗ್ವೇದ' ವಾಕ್ಯವನ್ನೂ, 'ಪ್ರಾಣಿಗಳು ತಿನ್ನುವ ಅನ್ನದ ಸೂಕ್ಷ್ಮಭಾಗವು ಮನಸ್ಸಾಗಿ ಪರಿಣಮಿಸುವುದು' ಇತ್ಯಾದಿ ಹೇಳುವ ಛಾಂದೋಗ್ಯೋ-ಪನಿಷದ್ವಾಕ್ಯವನ್ನೂ, 'ಮನುಷ್ಯನ ಶರೀರ ನಾಶದೊಂದಿಗೆ ಅದರಲ್ಲಿ ತೋರುತ್ತಿದ್ದ ಚೈತನ್ಯವೂ ನಾಶಹೊಂದುವುದು' ಎಂಬರ್ಥಕ್ಕೆ ಅವಕಾಶವಿರುವ ಬೃಹದಾರಣ್ಯ-ಕೋಪನಿಷತ್ತನ್ನೂ, ಪುರಾಣಗಳಲ್ಲಿ ಅಲ್ಲಲ್ಲಿ ಕಂಡುಬರುವ ನಾಸ್ತಿಕ್ಯಸಾಧಕ ವಾಕ್ಯಗಳನ್ನೂ ಅಜ್ಞ ಜನತೆಯ ಮುಂದಿಟ್ಟು ಮರುಳುಗೊಳಿಸಿದರೆಂದು ತಿಳಿದುಬರುತ್ತದೆ. ಈ ವಿಧ ವಾಕ್ಯಗಳ ಗಂಭೀರವಾದ ತಾತ್ಪರ್ಯಾರ್ಥಗಳನ್ನು ಗ್ರಹಿಸದೆಯೂ, ಸಂಶಯಗಳನ್ನು ಮುಂದಿಡುವ (ಪೂರ್ವಪಕ್ಷ ರೂಪ) ವಾಕ್ಯಗಳನ್ನು ಸಿದ್ಧಾಂತ ವಾಕ್ಯಗಳೆಂದೇ ವಾದಿಸುತ್ತಲೂ, ತಮ್ಮದೂ ಒಂದು

ಶಾಸ್ತ್ರವೆಂದೇ ಜನತೆಗೆ ಬೋಧಿಸಿದರು. ಈ ಮತಕ್ಕೆ 'ಬೃಹಸ್ಪತಿ ಸೂತ್ರ'ವು ಮುಖ್ಯಾಧಾರವೆಂದು ಹೇಳಲಾಗುತ್ತದೆ. ಈ ಗ್ರಂಥವು ಎಲ್ಲಿಯೂ ಇಲ್ಲ- ಇದ್ದಿದ್ದರೆ ಕಾಲಗತಿಯಿಂದ ನಾಶವಾಗಿರಬೇಕು. ಈ ಮತವನ್ನು ಖಂಡಿಸುವ ಅನ್ಯಮತ ಗ್ರಂಥಗಳಲ್ಲಿ, ಈ ಮತ ಪ್ರಕ್ರಿಯೆಗಳು ವಿಸ್ತರಿಸಲ್ಪಟ್ಟಿರುವುದು ಕಂಡುಬರುತ್ತದೆ. ನೈಯಾಯಿಕರ 'ನ್ಯಾಯ ಮಂಜರಿ', ಮೀಮಾಂಸಕರ 'ಶ್ಲೋಕವಾರ್ತಿಕಾ' ಎಂಬುವು ಇವುಗಳಲ್ಲಿ ಕೆಲವು.

## ಬೌದ್ಧಮತ

ಬುದ್ಧದೇವನು ಈ ಮತ ಪ್ರವರ್ತಕನು. ಈತನು ರಚಿಸಿರುವ ಯಾವ ಗ್ರಂಥವೂ ಉಪಲಬ್ಧವಿಲ್ಲ. ಆತನ ಶಿಷ್ಯಪ್ರಶಿಷ್ಯರನೇಕರು ಆತನ ಉಪದೇಶ- ಗಳನ್ನು ವಿಸ್ತರಿಸಿ ವ್ಯಾಖ್ಯಾನಗಳನ್ನು ರಚಿಸಿರುವರು. ಇವುಗಳಿಂದ, 'ಭಾವನಾ ಚತುಷ್ಟಯ'ಗಳೆಂದು ಕರೆಯಲಾಗಿರುವ ನಾಲ್ಕು ಉಪದೇಶಗಳನ್ನು ಬುದ್ಧನು ನೀಡಿದನೆಂದು ತಿಳಿದು ಬರುತ್ತದೆ. 'ಸರ್ವವೂ ಕ್ಷಣಿಕ, ಸ್ವಲಕ್ಷಣ, ದುಃಖ ಮತ್ತು ಶೂನ್ಯ' ಎಂಬಿವೇ ಆ ಉಪದೇಶಗಳನ್ನು ಸಂಗ್ರಹಿಸಿದ ನಾಲ್ಕು ಮಾತುಗಳೆಂದು ಹೇಳಲಾಗುತ್ತದೆ. ಆತನ ಅನುಯಾಯಿಗಳು ಇವುಗಳನ್ನು ಬೇರೆ ಬೇರೆ ವಿಧವಾಗಿ ಅರ್ಥಮಾಡಿಕೊಂಡ ಕಾರಣದಿಂದ, ಬೌದ್ಧರಲ್ಲಿ ವೈಭಾಷಿಕರು, ಸೌತ್ರಾಂತಿಕರು, ಮಾಧ್ಯಮಿಕರು ಮತ್ತು ಯೋಗಾಚಾರರೆಂಬ ಒಳಪಂಗಡಗಳು ಏರ್ಪಟ್ಟವು. ಇವರಲ್ಲಿ ಮಾಧ್ಯಮಿಕರು ಮುಖ್ಯರು. ಸರ್ವವೂ ಕ್ಷಣಿಕವೆಂಬ ಮೊದಲಿನ ಉಪದೇಶವು ಪ್ರತ್ಯಕ್ಷದಿಂದಲೇ ಸಿದ್ಧವೆನ್ನುತ್ತಾರೆ. ಹೇಗೆಂದರೆ ಪ್ರತ್ಯಕ್ಷವು ವರ್ತಮಾನ ಕಾಲ ಸಂಬಂಧವುಳ್ಳದ್ದು. ವರ್ತಮಾನ ಕಾಲವೆಂಬುದು ಒಂದು ಕ್ಷಣ ಮಾತ್ರ . ಹಿಂದನ ಕ್ಷಣಗಳು ಭೂತಕಾಲವು ; ಮುಂದಿನ ಕ್ಷಣಗಳು ಭವಿಷ್ಯತ್ಕಾಲವು. ಪ್ರತ್ಯಕ್ಷವು ವರ್ತಮಾನ ಕ್ಷಣದಲ್ಲಿರುವ ವಸ್ತುವನ್ನು ಮಾತ್ರ ಗ್ರಹಿಸುತ್ತದೆ. ಅದೇ ವಸ್ತುವು ಭೂತ ಭವಿಷ್ಯತ್ಕಾಲ ಸಂಬಂಧವುಳ್ಳದ್ದೆಂಬ ಜ್ಞಾನವು ಪ್ರತ್ಯಕ್ಷದಿಂದ ಹುಟ್ಟುವುದಿಲ್ಲ. 'ಹಿಂದೆ ನೋಡಿದ ವಸ್ತುವೇ ಇದು' ಎಂಬ ಜ್ಞಾನವು ಪ್ರತ್ಯಭಿಜ್ಞೆಯೆಂದು ಕರೆಯಲ್ಪಡುತ್ತದೆ. ಹಿಂದೆ ಕಂಡ ವಸ್ತುವೇ ಈಗಲೂ ಮುಂದೆಯೂ ಕಾಣಲ್ಪಡುವುದರಿಂದ, ಪ್ರತ್ಯಭಿಜ್ಞೆಯು ಕ್ಷಣಿಕತ್ವವನ್ನು

ನಿರಾಕರಿಸುತ್ತದೆಂದು ತಿಳಿಯುವುದು ಸರಿಯಲ್ಲ. ಏಕೆಂದರೆ ಪ್ರತ್ಯ-ಭಿಜ್ಞೆಯು ಪ್ರತ್ಯಕ್ಷದಿಂದ ಉಂಟಾದುದಲ್ಲ. ಆದ್ದರಿಂದ ಸರ್ವವೂ (ಜಗತ್ತೆಲ್ಲವೂ) ಕ್ಷಣಿಕವೇ ಸರಿ.

ಚಾರ್ವಾಕರಂತೆ ಬೌದ್ಧರು ಪ್ರತ್ಯಕ್ಷವನ್ನು ಮಾತ್ರ ಪ್ರಮಾಣವೆಂದು ಹೇಳದೇ ಅನುಮಾನ (ತರ್ಕ-ಯುಕ್ತಿ-reason) ಸಹ ಪ್ರಮಾಣವೆಂದು ಅಂಗೀಕರಿಸಿರುವುದರಿಂದ, ಅನುಮಾನದಿಂದ ಪ್ರತ್ಯಭಿಜ್ಞೆಗೆ ಪ್ರಾಮಾಣ್ಯವನ್ನು ಸಾಧಿಸಿ, ಆ ಮೂಲಕ ಕ್ಷಣಿಕತ್ವವನ್ನು ನಿರಾಕರಿಸಬಹುದೆಂಬುದನ್ನೂ, ಅವರು ಒಪ್ಪುವುದಿಲ್ಲ. ಈ ವಿಚಾರದಲ್ಲಿ ಬೌದ್ಧರ ವಾದವು ಹೀಗಿದೆ-ಇಂದ್ರಿಯಗಳು ಕ್ಷಣಿಕ ವಸ್ತುಗಳನ್ನು ಮಾತ್ರ ಗ್ರಹಿಸಬಲ್ಲವು-ನಿತ್ಯವಸ್ತುಗಳನ್ನಲ್ಲ. ಜ್ಞಾನವು ನಿತ್ಯವಸ್ತುಗಳನ್ನು ಗ್ರಹಿಸಬಲ್ಲದೆಂದೂ ಹೇಳಲಾಗದು ಈಗ ಕಾಣುವ ವಸ್ತುವು ಮುಂದೆಯೂ ತೋರುವುದರಿಂದ, ಕ್ಷಣಿಕವಲ್ಲೆಂದು ಸಿದ್ಧವಾಗುವುದಿಲ್ಲ. ಹುಟ್ಟಿದ ಕ್ಷಣದಲ್ಲಿಯೇ ನಾಶವಾಗುವುದು ವಸ್ತು ಸ್ವಭಾವವೇ ಆಗಿದೆ. ನಷ್ಟವಾದ ವಸ್ತುವು ಸ್ವಸದೃಶ (ತನ್ನಂತೆಯೇ ಇರುವ) ಸಂತಾನವನ್ನೂ ಉತ್ಪಾದಿಸುತ್ತದೆ. ತಾನೇ ನಾಶಹೊಂದಿ, ಸ್ವಸದೃಶ ಸಂತಾನವನ್ನು ಹುಟ್ಟಿಸುವುದಕ್ಕೆ ಅದು ಬೇರೊಂದು ಕಾರಣವನ್ನೂ ಅಪೇಕ್ಷಿಸುವುದಿಲ್ಲ. ಆದ್ದರಿಂದ ನಿತ್ಯತ್ವದ ಭ್ರಮೆಯುಂಟಾಗಿ, ಅದೇ ವಸ್ತುವನ್ನು ನೋಡುತ್ತಿರುವೆವೆಂಬ ರೂಪದ ಪ್ರತ್ಯಭಿಜ್ಞೆಯುಂಟಾಗುತ್ತದೆ.

ಪ್ರತಿಯೊಂದು ವಸ್ತುವೂ ತನ್ನದೇ ಆದ (ಇತರ ವಸ್ತುಗಳಿಂದ ವಿಲಕ್ಷಣವಾದ) ಸ್ವಭಾವವುಳ್ಳದ್ದು. 'ಸ್ವಲಕ್ಷಣ'ವೆಂಬ ಉಪದೇಶವು, ವಸ್ತುಗಳಲ್ಲಿ ಅನುಗತವಾದ ಯಾವ ಧರ್ಮವೂ ಇಲ್ಲವೆಂದೇ ತಿಳಿಸುತ್ತದೆ. ನ್ಯಾಯ, ವೈಶೇಷಿಕಾದಿ ಇತರ ದರ್ಶನಕಾರರು ಒಪ್ಪುವಂತೆ ಸಂಸಾರವು ಸಾಮಾನ್ಯವಾಗಿ ದುಃಖಮಯವಾದುದು. ಹೀಗೆಂಬುದು ಸರ್ವರ ಅನುಭವದಿಂದಲೂ ತಿಳಿದು ಬರುತ್ತದೆ. ಇದನ್ನೇ ಬುದ್ಧನು 'ದುಃಖ'ವೆಂಬ ಉಪದೇಶದಿಂದ ತಿಳಿಸಿರುತ್ತಾನೆ.

ಬೌದ್ಧರಲ್ಲಿ ಮುಖ್ಯರಾದ ಮಾಧ್ಯಮಿಕರು 'ಶೂನ್ಯ'ವೆಂಬ ನಾಲ್ಕನೇ ಉಪದೇಶವನ್ನು ಹೀಗೆ ಗ್ರಹಿಸಿರುವರು-ಕಪ್ಪೆ ಚಿಪ್ಪನ್ನು (ಶಿಂಪು) ನೋಡಿ,

ಬೆಳ್ಳಿಯೆಂದು ಭ್ರಮಿಸಿದ ಮನುಷ್ಯನು, ಭ್ರಮೆಯು ಕಳೆದನಂತರ, 'ಬೆಳ್ಳಿಯನ್ನು ನೋಡಲಿಲ್ಲ' ಎಂದರೆ, ಬೆಳ್ಳಿಯೆಂಬ ವಸ್ತು ಸಹಿತವಾದದ್ದನ್ನು ನೋಡಲಿಲ್ಲವೆಂಬ ಜ್ಞಾನವುಳ್ಳವನಾಗುವನಷ್ಟೆ. ಇಲ್ಲಿ ಬೆಳ್ಳಿಯ ಆರೋಪಕ್ಕೆ ಆಶ್ರಯವಾದ (ಅಧಿಷ್ಠಾನ) ಶಿಂಪು, ಅದಕ್ಕೂ-ಅದರಲ್ಲಿ ಆರೋಪಿತವಾದ ಬೆಳ್ಳಿಗೂ ಇರುವ ಸಂಬಂಧ, 'ಇದು ಬೆಳ್ಳಿ' ಎಂಬ ಜ್ಞಾನ ಮತ್ತು ಈ ಜ್ಞಾನವುಳ್ಳ ಪುರುಷ, ಹೀಗಿರುವ ಈ ನಾಲ್ಕರಲ್ಲಿ ಯಾವುದೊಂದು ಅಸತ್ಯವೆಂದು ತಿಳಿದರೂ, ಆ ಎಲ್ಲವೂ ಅಸತ್ಯವೆಂದೇ ತಿಳಿಯುವುದು ವಿಹಿತವಾದುದು. ಆದ್ದರಿಂದ ಇಲ್ಲದ ಬೆಳ್ಳಿಯನ್ನು ನೋಡಿದೆನೆಂದು ತಿಳಿದು, ನಂತರ ನೋಡಲಿಲ್ಲವೆಂದು ಹೇಗೆ ತಿಳಿಯುತ್ತಾನೋ, ಅದರಂತೆ ಜಗತ್ತು ಸಹ ಇದ್ದಂತೆ ತೋರಿ ನಂತರ ಯಾವಾಗ್ಯೂ ಇಲ್ಲದುದೇ (ಶೂನ್ಯವೇ) ಆಗುತ್ತದೆ. ಜಗತ್ತು ಇಲ್ಲವೇ ಇಲ್ಲ. ಸತ್ ಎಂದರೆ ಇರುವ ವಸ್ತು. ಇಲ್ಲದ ವಸ್ತುವನ್ನು ಕಾರಣ ಕಲಾಪಗಳಿಂದ ಹುಟ್ಟಿತೆಂದು ವ್ಯವಹರಿಸುವುದು ವಿರುದ್ಧ. ಇರುವ ವಸ್ತುವನ್ನು ಇಲ್ಲ (ಅಸತ್) ಎಂದೂ ಹೇಳಲಾಗುವುದಿಲ್ಲ. ಎಲ್ಲ ಕಾಲದಲ್ಲಿ ಇರಲು ಅನರ್ಹವಾದುದನ್ನು ಹುಟ್ಟಿತೆಂದು ವ್ಯವಹರಿಸುವುದೂ ವಿರುದ್ಧವೇ. (ಸತ್-ಅಸತ್) ಇರುವುದು-ಇಲ್ಲದಿರುವುದು ಎಂದು ಒಂದಕ್ಕೇ ಎರಡನ್ನೂ ಹೇಳುವುದೂ ಯುಕ್ತವಲ್ಲ ಹೀಗೆ ವಸ್ತುವನ್ನು ನಿರೂಪಿಸುವುದೇ ಸಾಧ್ಯವಿಲ್ಲದಿರಲು, ಜಗದ್ವಸ್ತುವಿಗೆ ಪಾರಮಾರ್ಥಿಕ ಸತ್ಯತ್ವವನ್ನು ಸಾಧಿಸುವುದು ದುಸ್ಸಾಧ್ಯವೇ ಸರಿ. **ವಸ್ತುವನ್ನು 'ಇದೇ' ಎಂದು ವ್ಯವಹರಿಸುವುದು ಕಲ್ಪನೆ ಮಾತ್ರ. ಮಾಧ್ಯಮಿಕರು ಇದನ್ನು 'ಸಂವೃತಿ' ಎಂದು ಕರೆಯುವರು. ಅವಿದ್ಯೆಯೆಂದೂ ಹೇಳುವುದುಂಟು.** ಲೋಕವ್ಯವಹಾರವೆಲ್ಲವೂ ಸಂವೃತಿಯಿಂದಾದ ಕಲ್ಪನೆಯೇ ಸರಿ. ಕ್ಷಣಿಕವಾದುದನ್ನು ಸತ್ಯವೆಂದು ತಿಳಿಯುವುದು ಸಂವೃತಿ. ಇದರಿಂದ ಸಂಸ್ಕಾರ ಹುಟ್ಟುತ್ತದೆ. ಇದು ವಸ್ತುಗಳಲ್ಲಿ (ವಿಷಯಗಳಲ್ಲಿ) ಉಂಟಾಗುವ ಪ್ರೀತಿ-ಅಪ್ರೀತಿರೂಪವಾದುದು. ಇದರಿಂದ ಗರ್ಭಗತ ಶಿಶುವಿಗೆ 'ನಾನು' ಎಂಬ ಜ್ಞಾನ ಹುಟ್ಟುತ್ತದೆ. ಇದೇ 'ಆಲಯ-ವಿಜ್ಞಾನ'ವು. ಸಂವೃತಿಯಿಂದ ಉಂಟಾದ ಸಂಸ್ಕಾರವೇ ಇದರ ಕಾರಣ. ಸಂಸ್ಕಾರವು 'ಸರ್ವವೂ ಕ್ಷಣಿಕ-ಸ್ವಲಕ್ಷಣ-ದುಃಖ-ಶೂನ್ಯ'ಗಳೆಂಬ 'ಭಾವನಾ-ಚತುಷ್ಟಯ'ದಿಂದ ನಾಶ ಹೊಂದುತ್ತದೆ. ಆಗ 'ನಾನು' ಎಂಬ ಜ್ಞಾನದಿಂದಲೇ

ಉಂಟಾದ ಸಂಸಾರವೂ ನಾಶಹೊಂದಿ 'ನಿರ್ವಾಣ' ಉಂಟಾಗುತ್ತದೆ. ಇದೇ ಮುಕ್ತಿಯು.

ಈ ವಾದಸರಣಿಯಲ್ಲಿರುವ ದೋಷವು ಸ್ಪಷ್ಟವಿದೆ. ಆಲಯ ವಿಜ್ಞಾನ-ವೆಂದು ಕರೆಯಲ್ಪಡುವ 'ನಾನು' ಎಂಬ ಜ್ಞಾನವು ಸಂಸ್ಕಾರದಿಂದ ಉತ್ಪನ್ನವಾದ ವಿಷಯ ಪ್ರೀತಿರೂಪವಾದುದೆಂದು ಹೇಳಿದರೆ, 'ನಾನು' ಎಂಬ ಜ್ಞಾನದ ಮೊದಲು, ಯಾವ ವಸ್ತುವಿಗೆ ಸಂವೃತಿಯಿಂದ ಸಂಸ್ಕಾರವುಂಟಾಯಿ-ತೆಂಬುದನ್ನು ತಿಳಿಯಬೇಕಲ್ಲವೇ? ಮತ್ತು 'ನಾನು' ಎಂಬುದು ಭಾವನಾ ಚತುಷ್ಟಯದಿಂದ ನಾಶಹೊಂದುವುದೆಂದು ಹೇಳುವುದರಿಂದ, ಪೂರ್ವ-ದಲ್ಲಿರಲಿಲ್ಲ- ಮುಂದೆ ಉಳಿಯುವುದಿಲವೆಂದು ಹೇಳಿದಂತಾಗುವುದಿಲ್ಲವೇ? ನಾನೆಂಬ ಜ್ಞಾನವೇ ಅಳಿಸಿಹೋದರೆ ನಿರ್ವಾಣವೆಂಬ ಮುಕ್ತಿಯು ಪುರುಷಾರ್ಥ-ವಾಗಲಾರದು. **'ತನ್ನ' ನಾಶರೂಪದ ನಿರ್ವಾಣವನ್ನು ಯಾರೂ ಇಚ್ಛಿಸುವುದಿಲ್ಲ.** ಪ್ರಾಣಿ ಮಾತ್ರದಲ್ಲಿ ನಿರೂಢವಾಗಿರುವ ನಿತ್ಯಸುಖಾಪೇಕ್ಷೆಯು ಅರ್ಥವಿಲ್ಲದ, ಎಂದೂ ಸಾಧಿಸಲಾಗದ, ಬಿಸಿಲು ಕುದುರೆಯೆಂದೇ ತಿಳಿಯಬೇಕಾಗುವುದು. ಹೀಗೆ ಅಸಮರ್ಪಕವಾದ ಮತ್ತು ನಾನಾ ದೋಷಯುಕ್ತವಾದ ಈ ಮತವು, ಭಾರತೀಯ ಬಹುಭಾಗದ ಜನತೆಯಿಂದ ತಿರಸ್ಕೃತವಾಗಿ, ತತ್ವಜ್ಞಾನದ ನೆಲೆವೀಡೆಂದು ಜಗತ್ಪ್ರಸಿದ್ಧವಾದ ಭಾರತ ದೇಶವನ್ನು ತೊರೆದು, ಪರದೇಶಗಳಲ್ಲಿ ಮಾತ್ರ ತಲೆ ಎತ್ತಿಕೊಂಡಿದೆ.

## ಜೈನಮತ

ಶುದ್ಧೋದನ ಮತ್ತು 'ಜಿನ' ಎಂಬ ನಾಮಗಳುಳ್ಳ ಬುದ್ಧನ ತಂದೆಯೇ ಈ ಮತ ಪ್ರವರ್ತಕನು. ಬುದ್ಧನ ಉಪದೇಶಗಳನ್ನೇ ಈತನು ಆಶ್ರಯಿಸಿದ್ದರೂ, ಅವುಗಳನ್ನೇ ಶಬ್ದಾಂತರಗಳಿಂದ ಅಲ್ಪ ಪ್ರಭೇದಗಳೊಡನೆ ಅನ್ಯ ಮತ ರೂಪದಿಂದ ಪ್ರವರ್ತಿಸಿದನು. 'ತತಸ್ತು ಬುದ್ಧೋದಿತ ಪಕ್ಷಸಂಸ್ಥಃ ಜಿನೋಽಪಿ ಚಕ್ರೇ-ಮತಮನ್ಯದೇವ' ಇತ್ಯಾದಿಯಾಗಿ ಪ್ರಾಚೀನರು ನಿರೂಪಿಸಿರುವರು. ಜಿನನನ್ನು ಅರ್ಹನ್, ಜಿನೇಶ್ವರ, ತೀರ್ಥಂಕರ, ಪರಮೇಷ್ಠಿ, ವೀತರಾಗ, ಪರಮಾತ್ಮ

ಎಂದೂ ಕರೆಯುವರು. ಜಿನ ಮತ್ತು ತೀರ್ಥಂಕರ ಶಬ್ದಗಳನ್ನು ಭೀನ್ನಾರ್ಥ-ಗಳಲ್ಲಿಯೂ ಉಪಯೋಗಿಸುವರು. ಕರ್ಮದಿಂದ ಬಿಡುಗಡೆ ಹೊಂದಿದವರು 'ಜಿನ'ರು. ಇಂಥವರಲ್ಲಿ ೨೪ ಜನರು ಮಾತ್ರ ಕೃತಯುಗದಲ್ಲಿ ತೀರ್ಥಂಕರರೆನಿಸಿ ಈ ಮತ ಪ್ರವರ್ತಕರೆನಿಸಿದರು. 'ಮಹಾವೀರ'ನು ೨೪ನೇ ತೀರ್ಥಂಕರನು-ಬುದ್ಧನಿಗಿಂತ ಬಹು ಹಿಂದಿನವನು. ಅನಾದಿಯಾ ಈ ಮತವು ಕಾಲಗತಿಯಿಂದ ಲುಪ್ತವಾಗಿದ್ದು, ಈ ಕಲಿಯುಗದಲ್ಲಿ ಬುದ್ಧನ ತಂದೆಯಾದ ಜಿನನಿಂದ ಎತ್ತಿಹಿಡಿಯಲ್ಪಟ್ಟಿತು. ಪ್ರತಿಭಾವಂತರ ಪ್ರಚಾರದಿಂದ ಅನುಯಾಯಿಗಳ ಸಂಖ್ಯೆಯೂ ಬೆಳೆಯಿತು. ಜೈನರು ತೀರ್ಥಂಕರರನ್ನು ದೇವರೆಂದೇ ಪೂಜಿಸುವರು.

ಜೈನರಲ್ಲಿ ಶ್ವೇತಾಂಬರ, ದಿಗಂಬರರೆಂಬ ಎರಡು ಪಂಗಡಗಳಿವೆ. ತಾತ್ವಿಕವಾಗಿ ಉಭಯರಲ್ಲಿ ಯಾವ ಭೇದವೂ ಕಾಣುವುದಿಲ್ಲ. ಈ ಪಂಗಡಗಳುಂಟಾಗುವುದಕ್ಕೆ ಕಾರಣವಾದ ಭಿನ್ನಾಭಿಪ್ರಾಯಗಳು ಹೀಗಿವೆ : ತೀರ್ಥಂಕರರು ಆಹಾರವಿಲ್ಲದೇ ಜೀವಿಸುವರೆಂದು ದಿಗಂಬರರೂ, ಆಹಾರ-ದಿಂದ ಜೀವಿಸುವರೆಂದು ಶ್ವೇತಾಂಬರರೂ ತಿಳಿಯುತ್ತಾರೆ. ಶ್ವೇತಾಂಬರರು ಹೇಳುವಂತೆ ಮಹಾವೀರನ ಗರ್ಭಪಿಂಡವು 'ದೇವಾನಂದೆ'ಯ ಗರ್ಭದಿಂದ 'ತ್ರಿಶಿಲೆ'ಯ ಗರ್ಭಕ್ಕೆ ತರಲ್ಪಡಲಿಲ್ಲವೆಂದೂ, ವಸ್ತ್ರವನ್ನು ಧರಿಸಿದ (ಆಶ್ರಯಿಸಿದ) ಸನ್ಯಾಸಿಯು ಮೋಕ್ಷವನ್ನು ಹೊಂದಲಾರನೆಂದೂ, ಸ್ತ್ರೀಯರಿಗೆ ಮೋಕ್ಷ-ವಿಲ್ಲೆಂದೂ, ದಿಗಂಬರರು ತಿಳಿಯುತ್ತಾರೆ.

ಜೈನಶಾಸ್ತ್ರವು ೧೨ ಅಂಗ, ೧೪ ಪೂರ್ವಗಳೆಂದು ಎರಡು ವಿಧ. ಇವು ಖಿಲವಾಗುತ್ತ ಬಂದು ಕೆಲವಂಶಗಳು ಮಾತ್ರ ಉಳಿದಿರುತ್ತವೆಂದು ಹೇಳುತ್ತಾರೆ. ಈ ಕಾರಣದಿಂದ ಇವುಗಳ (ಅಂಗ-ಪೂರ್ವಗಳ) ನಾಮಗಳನ್ನು ಇಲ್ಲಿ ಉಲ್ಲೇಖಿಸುವುದು ಅನಾವಶ್ಯಕ. ದೊರೆಯುವ ಜೈನಗ್ರಂಥಗಳಲ್ಲಿ ಈ ಮುಂದಿನವು ಮುಖ್ಯವಾದುವು. ಕ್ರಿ.ಶ. ೧ನೇ ಶತಮಾನದಲ್ಲಿ ಉಮಾಸ್ವಾಮಿ-ಯಿಂದ ರಚಿತವಾದ 'ತತ್ವಾರ್ಥಾಧಿಗಮ ಸೂತ್ರ'ವೆಂಬುದು ಪುರಾತನ-ವಾದುದು. ಸಿದ್ಧಸೇನ ದಿವಾಕರನ 'ನ್ಯಾಯಾವತಾರ' (೬ನೇ ಶತಮಾನ); ಪ್ರಭಾಚಂದ್ರನ 'ಪ್ರಮೇಯ ಕಮಲಮಾರ್ತಂಡ' (೯ನೇ ಶತಮಾನ);

ಅನಂತವೀರ್ಯನ 'ಪರೀಕ್ಷಾ ಮುಖಸೂತ್ರ ಲಘುವೃತ್ತಿ' (೧೧ನೇ ಶತಮಾನ); ಹೇಮಚಂದ್ರನ 'ಯೋಗಶಾಸ್ತ್ರ', ನೇಮಿಚಂದ್ರನ 'ಗೋಮಟಸಾರ', 'ತ್ರಿಲೋಕ-ಸಾರ', 'ಲಭಿಸಾರ' ಇತ್ಯಾದಿಗಳು (೧೨ನೇ ಶತಮಾನ); ಮತ್ತು ಶ್ಲೋಕವಾರ್ತಿಕ, ನ್ಯಾಯಕುಮುದ ಚಂದ್ರೋದಯ, ಜಿನಸೇನ ಮಹಾಪುರಾಣ, ಪದ್ಮಪುರಾಣ, ಸರ್ವಾರ್ಥ ಸಿದ್ಧಿ ಮೊದಲಾದ ಅನೇಕ ಗ್ರಂಥಗಳೂ ಇವೆ.

ಜೈನಮತ ಸಂಗ್ರಹವು ಹೀಗಿದೆ : ಅರ್ಥಕ್ರಿಯಾಕಾರಿ ವಸ್ತುವು ಸತ್ಯ, ಎಂಬುದು ಸರಿಯಲ್ಲ. ಸ್ವಾಪ್ನ ವಸ್ತುಗಳೂ ಅರ್ಥಕ್ರಿಯಾಕಾರಿಗಳಾಗಿವೆ. ಅನುಭವಗೋಚರವಾಗುವ ಎಲ್ಲ ವಸ್ತುಗಳೂ, ವಿವಕ್ಷಾ ಭೇದದಿಂದ, ಸತ್ಯ, ಅಸತ್ಯ ಇತ್ಯಾದಿ ನಾನಾ ಪ್ರಕಾರದಿಂದ ನಿರೂಪಿಸಲ್ಪಡಬಹುದು. ಸತ್, ಅಸತ್, ಸದಸತ್, ಸದಸದ್ವಿಲಕ್ಷಣ, ಸತ್ತಾದರೂ ಸದ್ವಿಲಕ್ಷಣ, ಅಸತ್ತಾದರೂ ಅಸದ್ವಿಲಕ್ಷಣ, ಸದಸತ್ತಾದರೂ ಸದಸದ್ವಿಲಕ್ಷಣ; ಹೀಗೆ ಜಗತ್ಸ್ವರೂಪವು ಸಪ್ತಪ್ರಕಾರವುಳ್ಳದ್ದು. **ಈ ನಿರೂಪಣೆಯು 'ಸಪ್ತಭಂಗಿವಾದ'ವೆಂದು ಕರೆಯಲ್ಪಟ್ಟಿದೆ.** ಅಜೀವ ವಸ್ತುಗಳಿಗೆ ಜ್ಞಾನವಿಲ್ಲ. ಅವುಗಳನ್ನು ತಿಳಿಯುವವನೇ ಜೀವ ಅಥವಾ ಆತ್ಮನು. ಜಡವಸ್ತುಗಳೆಲ್ಲವೂ ಪರಮಾಣುಗಳಿಂದ ಆದವುಗಳು. ಪರಮಾಣವು ಯಾವ ಪರಿಣಾಮವನ್ನಾಗಲಿ, ಗುಣಭೇದವನ್ನಾಗಲಿ ಹೊಂದುವ ಶಕ್ತಿಯುಳ್ಳದ್ದು. ವಸ್ತುಗಳು ಕ್ಷಣಿಕವಲ್ಲ. ಸಮ್ಯಗ್ದರ್ಶನ, ಮಿಥ್ಯಾದರ್ಶನವೆಂದು ಜ್ಞಾನವು ಎರಡು ವಿಧ. ಮಿಥ್ಯಾದರ್ಶನವು ಸಂಸಾರ ಪರಂಪರೆಗೆ ಕಾರಣ. ಸಮ್ಯಕ್ ದರ್ಶನ, ಸಮ್ಯಕ್ಜ್ಞಾನ ಮತ್ತು ಸಮ್ಯಕ್ ಚಾರಿತ್ರಗಳೆಂಬುವು 'ರತ್ನತ್ರಯ'-ವೆಂದು ಕರೆಯಲಾಗುತ್ತವೆ. ರತ್ನತ್ರಯದಿಂದಲೇ ಮೋಕ್ಷವು. ಕರ್ಮಪಾಶದಿಂದ ವಿಮುಕ್ತನಾಗುವುದೇ ಮೋಕ್ಷವೆನಿಸುವುದು.

ಜೀವರು ಅಸಂಖ್ಯಾತರಾಗಿದ್ದಾರೆ. ಬುದ್ಧರು, ಯೋಗಸಿದ್ಧರು ಮತ್ತು ಮುಕ್ತರೆಂದು ಜೀವರು ತ್ರಿವಿಧರು. ಧರ್ಮವು ಸಕಲ ಪ್ರವೃತ್ತಿಗೆ ಕಾರಣ-ವಾದುದು. ಅದು ಜಗತ್ತನ್ನು ವ್ಯಾಪಿಸಿದೆ. ಅಧರ್ಮವೂ ಜಗದ್ವ್ಯಾಪಕವೇ. ಧರ್ಮವು ಜಗತ್ತಿನ ಸ್ಥಿತಿಕಾರಣವು. ಭೂ, ಜಲ, ತೇಜಸ್ಸು, ವಾಯು, ಪರಮಾಣು ಮತ್ತು ಸಂಘಾತವೆಂಬ ರೂಪಗಳಿಂದ ಜಡಜಗತ್ತು 'ಪುದ್ಗಲ'ವೆಂದು

ಕರೆಯಲ್ಪಡುತ್ತದೆ. ಕಾಲವು, ಭೂತ-ವರ್ತಮಾನ-ಭವಿಷ್ಯಗಳೆಂಬ ವ್ಯವಹಾರಕ್ಕೆ ಕಾರಣವಾಗಿ ಅಣುರೂಪದಿಂದಿರುವುದು. ಅನಂತ ವಿಸ್ತಾರವುಳ್ಳ ಆಕಾಶವು (ದೇಶವು) ಲೋಕಕಾಶ-ಅಲೋಕಾಕಾಶವೆಂದು ಎರಡು ವಿಧ.

ಮೋಕ್ಷೋಪಯೋಗಿಗಳಾದ ವಸ್ತುಗಳು ಏಳು. ಜ್ಞಾನ, ದರ್ಶನ, ಸುಖ, ವೀರ್ಯಗಳುಳ್ಳದ್ದು 'ಜೀವ'; ಜಡವಾದುದು 'ಅಜೀವ'; ಉಪಕರಣಗಳಾದ ಇಂದ್ರಿಯಗಳು 'ಆಸ್ರವ'; ಜೀವನ ಸುಖಾದಿ ಗುಣಗಳಿಗೆ ಪ್ರತಿಬಂಧಕವಾದ 'ಘಾತಕ'; ದೇಹ - ಸುಖ - ದುಃಖಾದಿಗಳಿಗೆ ಕಾರಣವಾದುದು 'ಚತುಷ್ಟಯ' ವೆಂದು ಕರೆಯಲ್ಪಡುವ ಎರಡು ವಿಧದ 'ಬಂಧ' ; ಮೋಕ್ಷ ಸಾಧಕವಾದ ತಪಸ್ಸು 'ನಿರ್ಜರ'; ಮತ್ತು ಆತ್ಮಸ್ವರೂಪದ ಆವಿರ್ಭಾವ ರೂಪವಾದ 'ಮೋಕ್ಷ'. ಈ ಎಲ್ಲವೂ ಒಂದೊಂದು ಪ್ರಕಾರದಿಂದ ಮೋಕ್ಷದಲ್ಲಿ ಅನುಭವಿಸಲ್ಪಡುವ ಆನಂದಕ್ಕೆ ಉಪಯುಕ್ತವಾಗುತ್ತವೆ. ಹಿಂದೆ ಹೇಳಿದ ರತ್ನ-ತ್ರಯವೇ ಮೋಕ್ಷಕ್ಕೆ ಸಾಧನ.

ಚೇತನಾಚೇತನಾತ್ಮಕ ಜಗತ್ತಿಗೆ ಈಶ್ವರನಿಲ್ಲ. ಪ್ರತಿಜೀವನೂ ಉಕ್ತ ಸಾಧನಗಳಿಂದ ತನ್ನ ಸ್ವರೂಪದ ಆವಿರ್ಭಾವವನ್ನು ತಾನೇ ಸ್ವಪ್ರಯತ್ನದಿಂದ ಸಾಧಿಸಿಕೊಳ್ಳಬೇಕು. ಜೀವ ಸ್ವರೂಪವು ತಾನು ಹೊಂದುವ ದೇಹದಷ್ಟೇ ಪರಿಮಾಣವುಳ್ಳದ್ದು. ಅಣು - ಮಹತ್ತಾದ (ಇರುವೆ - ಗಜ ಮೊದಲಾದ) ದೇಹಗಳನ್ನು ಜೀವನು ಕರ್ಮಾನುಸಾರವಾಗಿ ಹೊಂದುತ್ತಾನೆ. ಸಂತತ ಊರ್ಧ್ವ ಗಮನವೇ ಜೀವನ ಗುರಿಯು.

ವೇದಾದಿ ಶಾಸ್ತ್ರಗಳು ಪ್ರಮಾಣಗಳಲ್ಲ-ಯುಕ್ತಿ ಸಿದ್ಧವಾಗುವ ಈ ಮೇಲಿನ ಸಿದ್ಧಾಂತಗಳಿಗೆ ವಿರುದ್ಧವಾಗಿ ಹೇಳುವುದರಿಂದ ಅವು ಪ್ರಮಾಣಗಳಲ್ಲ. ಜಿನನಿಂದ ಪ್ರವರ್ತಿಸಲ್ಪಟ್ಟು, ವ್ಯಾಖ್ಯಾನಕಾರರಿಂದ ವಿಸ್ತರಿಸಲ್ಪಟ್ಟ ಜೈನಮತ ಸಿದ್ಧಾಂತಗಳು ಈ ಮೇಲೆ ಸಂಗ್ರಹಿಸಲ್ಪಟ್ಟಂತೆ ಇದ್ದರೂ, ಪ್ರಾಚೀನರು ವೇದಪ್ರಾಮಾಣ್ಯವನ್ನು ಮೊದಲಿಗೆ ಸ್ಥಾಪಿಸಿ, ಇವುಗಳನ್ನು ನಾನಾ ಯುಕ್ತಿ-ಗಳಿಂದಲೂ, ನ್ಯಾಯಬದ್ಧ ವೇದಾದಿ ಪ್ರಮಾಣಗಳಿಂದಲೂ ಖಂಡಿಸಿ, ಆಸ್ತಿಕ್ಯವನ್ನು ರಕ್ಷಿಸಿದರು. ಈ ಅವೈದಿಕ ಜೈನಮತವು, ಈ ಕಾರಣದಿಂದ,

ಭಾರತೀಯ ಪ್ರಜೆಗಳಿಂದ ತಿರಸ್ಕರಿಸಲ್ಪಟ್ಟಿತು. ಅಂತೆಯೇ ಈ ಮತೀಯರು ಅಲ್ಪಸಂಖ್ಯಾತರಾಗಿ ಉಳಿದುಕೊಂಡಿರುವರು. ಕಾಲಕ್ರಮದಲ್ಲಿ ಬಹು-ಸಂಖ್ಯಾತರಾದ ಆಸ್ತಿಕರ ಸಹವಾಸ, ಭಾವನೆಗಳ ಅನುಕರಣ, ಮೊದಲಾದವುಗಳ ಪ್ರಭಾವದಿಂದ ಅನೇಕ ಆಸ್ತಿಕ್ಯ ಲಕ್ಷಣಗಳು ಜೈನರಲ್ಲಿ ಬೆಳೆದು, ಈಗ ಅನೇಕಾಂಶಗಳಲ್ಲಿ ವೈದಿಕ ಮತಸಾಮ್ಯವು ಕಂಡುಬರುತ್ತಿದೆ. ಜೈನ ಮತವು ನಾಸ್ತಿಕ ಮತವೆಂದು ಹೇಳಲಾಗದಷ್ಟು ರೂಪಾಂತರ ಹೊಂದಿದೆ. ಇತ್ತೀಚಿನ ಈ ಮತೀಯ ವಿದ್ವಾಂಸರ ಅಭಿಪ್ರಾಯಗಳು ಈ ವಿಷಯಕ್ಕೆ ಬೆಂಬಲ ಕೊಡುತ್ತವೆ. ಕೆಲವರು, ಕೆಲವು ವೇದಭಾಗಗಳನ್ನು ಪ್ರಮಾಣವೆಂದು ಅಂಗೀಕರಿಸುವವರೆಗೂ ಹೋಗಿದ್ದಾರೆ. ವೇದಪ್ರಮಾಣವಾದಿಗಳಂತೆ, ಅನಂತಚತುರ್ದಶಿ ಮೊದಲಾದ ಹಲವು ವ್ರತನಿಯಮಗಳನ್ನೂ ಆಚರಿಸುತ್ತಾರೆ. ಹೀಗಿದ್ದರೂ, ವೇದಗಳಿಗೆ ಪ್ರಾಮಾಣ್ಯವನ್ನು ಅಂಗೀಕರಿಸದಿರುವ ಮೊದಲಾದ ಮುಖ್ಯ ನಾಸ್ತಿಕ್ಯ ಲಕ್ಷಣಗಳು ಸ್ಪಷ್ಟವಾಗಿ ತೋರುತ್ತವೆ.

## ಪರಿಚ್ಛೇದ ೩

## ವಿಜ್ಞಾನ ಮತ್ತು ಮಾನವನ ಗುರಿ

ದುಃಖ ಸ್ಪರ್ಶವಿಲ್ಲದ ನಿತ್ಯ ಸುಖಾನುಭವವೇ ಮಾನವನ ಗುರಿ. ಆಧುನಿಕ ವಿಜ್ಞಾನವು ಈ ಗುರಿಯನ್ನು ಮುಟ್ಟಿಸಲು ಸಮರ್ಥವೇ ಮತ್ತು ಆ ದಿಕ್ಕಿನಲ್ಲಿ ಮಾನವನನ್ನು ಕೊಂಡೊಯ್ಯುತ್ತಿದೆಯೇ ಎಂಬುದನ್ನು ಇಲ್ಲಿ ಸ್ವಲ್ಪ ವಿಸ್ತಾರವಾಗಿವೇ ವಿಮರ್ಶಿಸಲಾಗುತ್ತದೆ : ನಿತ್ಯ ಸುಖವೆಂಬುದಿಲ್ಲ. ಅದೊಂದು ಕಲ್ಪಿತ ಭ್ರಮೆಯೆಂದು ವಾದಿಸುವವರೂ ಇದ್ದಾರೆ. ಹೀಗಾದರೆ ಪರ್ಯವ-ಸಾನದಲ್ಲಿ ಈ ವಾದವು ನಾಸ್ತಿಕ್ಯವನ್ನೇ ನಿರೂಪಿಸುವುದೆಂದು ಪ್ರಾಪ್ತವಾಗುತ್ತದೆ. ಪೂರ್ಣಗೊಳಿಸಲಾಗದ ಮಾನವನ ಎಲ್ಲ ಆಶೆ-ಆಕಾಂಕ್ಷೆಗಳು ಈ ದೇಹದೊಂದಿಗೆ ನಷ್ಟವಾಗುವುವೆಂದು ಒಪ್ಪಬೇಕಾಗುತ್ತದೆ. ಜನ್ಮಾಂತರಗಳಿಲ್ಲವೆಂದೂ, ಅತ-ಏವ, ದೇಹದಿಂದ ದೇಹಾಂತರಗಳನ್ನು ಹೊಂದುವ, ದೇಹಭಿನ್ನ ನಿತ್ಯಚೇತನ-ವೆಂಬ ವಸ್ತುವೇ ಇಲ್ಲವೆಂದೂ ಪ್ರಾಪ್ತವಾಗುತ್ತದೆ. ಆದ್ದರಿಂದ **ನಿತ್ಯಸುಖವು,**

**ಮಾನವನ ಗುರಿಯೆಂದೊಪ್ಪುವುದು ಸಹ, ಆಸ್ತಿಕ್ಯದ ಮುಖ್ಯ ಲಕ್ಷಣಗಳ-ಲ್ಲೊಂದಾಗಿದೆ.** ಆಸ್ತಿಕ್ಯ ಬುದ್ಧಿಯು ಭಾರತೀಯ ಸಂಸ್ಕೃತಿಯು ತಳಹದಿಯು. ಆದ್ದರಿಂದಲೇ ಅನಾದಿಕಾಲದಿಂದ ಭಾರತೀಯರು, ಪುಣ್ಯ ತೀರ್ಥಕ್ಷೇತ್ರಗಳಿಗೆ ಪುಣ್ಯಕಾಲಗಳಲ್ಲಿ ಯಾತ್ರೆಗಳನ್ನು ಕೈಗೊಂಡು, ಸ್ನಾನ, ದೇವತಾದರ್ಶನ, ದಾನ, ಸಾಧುಸೇವಾದಿಗಳಲ್ಲಿ ಪ್ರವೃತ್ತರಾಗುವುದು ಕಂಡುಬಂದಿದೆ. ಛತ್ರ ದೇವಾಲಯಾದಿಗಳ ನಿರ್ಮಾಣ, ದಾನ ಧರ್ಮಗಳಲ್ಲಿ ಶ್ರದ್ಧೆ, ಮೊದಲಾದ ನಿಸ್ಸ್ವಾರ್ಥ ಪ್ರವೃತ್ತಿಯುಳ್ಳವರಾಗಿರುವರು. ಕಾಲಗತಿಯಿಂದ ಈ ವಿಧ ಪ್ರವೃತ್ತಿಯುಳ್ಳ ಜನರು ವಿರಳರಾಗುತ್ತಿದ್ದಾರೆ. 'ದೇವರು-ಧರ್ಮ' ಎಂದರೆ ಮೂಗು ಮುರಿಯುವ ಯುವಕರ ತಂಡಗಳು ಬೆಳೆಯಲಾರಂಭಿಸಿವೆ. ಗುರುಹಿರಿಯರು ಪೂಜ್ಯಸ್ಥಾನಗಳಿಂದ ಚ್ಯುತರಾಗುತ್ತಿದ್ದಾರೆ; ನೀತಿನಿಯಮ-ಗಳು ಮಾಯವಾಗುತ್ತಿವೆ. ಜನರು ಸ್ವಾರ್ಥಸಾಧನೆಗಾಗಿ, ಪುಣ್ಯಪಾಪಗಳ ಭೀತಿಯಿಲ್ಲದ ವಂಚಕತನದ ಸ್ವಚ್ಛಂದ ವರ್ತನೆಯುಳ್ಳವರಾಗುತ್ತಿರುವರು. ಆಸ್ತಿಕ್ಯರೂಪದ ತಳಹದಿಯು ಕುಸಿದುಬಿದ್ದು, ಪರಮ ಪವಿತ್ರವಾದ ನಮ್ಮ ಆರ್ಷೇಯ ಸಂಸ್ಕೃತಿಯು ನಾಶಹೊಂದುವುದೆಂಬ ಭೀತಿಯು ಆವರಿಸುತ್ತದೆ. ಹೀಗಿದ್ದರೂ, 'ದೇವರೆಲ್ಲಿದ್ದಾನೆ-ಪಾಪಪುಣ್ಯಗಳೆಂಬುವು, ಅಜ್ಞರನ್ನು ತಮ್ಮ ಅಧೀನದಲ್ಲಿಟ್ಟುಕೊಂಡು ಸ್ವಾರ್ಥವನ್ನು ಸಾಧಿಸಲು ಬುದ್ಧಿಶಾಲಿಗಳೆಂಬ ಅಲ್ಪಸಂಖ್ಯೆಯವರು ಅವರ ಮೇಲೆ ಹೇರಿದ ಕುಕಲ್ಪನೆಗಳು' ಎಂದು ಮುಂತಾಗಿ ವಾದಿಸುವ ಬಾಯಿ ಬಡಾಯಿಗಳು ಸಹ, ತಮ್ಮ ನಾನಾ ಪ್ರಯತ್ನಗಳನ್ನು ನಿಯಂತ್ರಿಸುವ ಅದೃಷ್ಟಶಕ್ತಿಯನ್ನು ಆಂತರಿಕವಾಗಿ ತಿರಸ್ಕರಿಸಲು ಶಕ್ತರಾಗದೇ, ಪರಂಪರಾ ಪ್ರಾಪ್ತವಾದ ಸತ್ಸಂಪ್ರದಾಯಗಳನ್ನು ತ್ಯಜಿಸಿದ್ದರೂ, ಮಹಾತ್ಮ-ರೆಂದೂ ಅತಿಮಾನುಷ ಶಕ್ತಿಯುತರೆಂದೂ ತಮ್ಮ ಚಿತ್ರ ಕೃತಿಗಳಿಂದ ಪ್ರಸಿದ್ಧರಾಗುತ್ತಿರುವ ವ್ಯಕ್ತಿಗಳ ಬೆನ್ನುಹತ್ತಿ ಅವರ ಅನುಗ್ರಹಾರ್ಥವಾಗಿ ದ್ರವ್ಯವನ್ನು ವೆಚ್ಚಮಾಡಿ ತಿರುಗುವುದನ್ನು ಕಾಣುತ್ತೇವೆ. ಪ್ರತ್ಯಕ್ಷಾದಿಗಳಿಂದ ಗ್ರಹಿಸಲಾಗದ (ಅತೀಂದ್ರಿಯ) ಶಕ್ತಿಗಳಿರುವುವೆಂಬ, ಅಂತರಂಗದಲ್ಲಿ ಬೇರೂರಿರುವ, ಭಾವನೆಯನ್ನು ತೊಡೆದುಹಾಕಲು ಅಸಮರ್ಥರಾಗಿರುವ-ರೆಂಬಲ್ಲಿ ಇತರ ಅನೇಕ ನಿದರ್ಶನಗಳನ್ನು ಕಾಣಬಹುದು. ಈ ಭಾವನೆಯು

ಮಾನವನ ನೈಸರ್ಗಿಕ ಧರ್ಮವೆಂದೇ ತಿಳಿಯುವಷ್ಟು ಪ್ರಬಲವಾಗಿದೆ. ಇದನ್ನು ಯೋಗ್ಯ ಉಪಾಯಗಳಿಂದ ಉದ್ಬೋಧನೆಗೊಳಿಸಿ, ನಮ್ಮ ಸಂಸ್ಕೃತಿಯನ್ನು ರಕ್ಷಿಸುವ ತೀವ್ರ ಯತ್ನದಲ್ಲಿ ತೊಡಗಬೇಕಾದ ಪರಿಸ್ಥಿತಿಯುಂಟಾಗಿದೆ.

ಭೌತಿಕ ವಿಜ್ಞಾನವು ಈ ಶತಮಾನದಲ್ಲಿ, ವಿಶೇಷವಾಗಿ ಕಳೆದ ೪೦-೫೦ ವರ್ಷಗಳಲ್ಲಿ, ಅದ್ಭುತ ಪ್ರಗತಿಯನ್ನು ಸಾಧಿಸಿದೆ. ವಿದ್ಯುದಾದಿ ''ಪ್ರಾಕೃತ ಶಕ್ತಿ''ಗಳನ್ನು ವಶಪಡಿಸಿಕೊಂಡು, ಮಾನವನು ಸಾಧಿಸಿರುವ ಕೃತಿಗಳು ಅಪ್ರಾಕೃತ ಶಕ್ತಿಗಳ (Spiritual) ಅಸ್ತಿತ್ವವನ್ನೇ ತಿರಸ್ಕರಿಸುತ್ತಿವೆ. ಪ್ರಕೃತಿಯು ತನ್ನ ವಿಶಿಷ್ಟ ಶಕ್ತಿಗಳನ್ನು ಮಾನವನ ಅಧೀನಗೊಳಿಸುವಳೆಂಬ ಮೋಹಕ್ಕೆ ವಿಜ್ಞಾನವು ಎಡೆಗೊಟ್ಟಿದೆ. ಅಧೀನವಾದರೂ, ಅವುಗಳ ದುರುಪಯೋಗದಿಂದ ಮಾನವವರ್ಗವು ಆತ್ಮನಾಶವನ್ನೇ ತಂದುಕೊಳ್ಳುವ ಸಂಭವವಿರುತ್ತೆಂಬುದನ್ನು ಮರೆಯಲಾಗದು. ಅಣುಬಾಂಬು ಮೊದಲಾದ ವಿನಾಶಕ ಅಸ್ತ್ರಗಳ ನಿರ್ಮಾಣವು ನೀಡುತ್ತಿರುವ ಎಚ್ಚರಿಕೆಯಿಂದ ಗಮನಿಸಬೇಕು. ನೂತನ ಶಕ್ತಿಗಳು ಮಾನವನ ವಶವಾಗುತ್ತ ಹೋದಂತೆ, ಅವುಗಳ ದುರುಪಯೋಗದ ಸಂಭವವೂ ಹೆಚ್ಚುತ್ತ ಸಾಗುವುದೆಂಬುದನ್ನು ಲಕ್ಷಿಸಬೇಕು. ಮಾನವನ ಹಿತಕ್ಕಾಗಿಯೇ ಇವುಗಳನ್ನು ಉಪಯೋಗಿಸುವಂತಾಗಲು, ಹಿತ-ಅಹಿತ; ಸುಗುಣ-ದುರ್ಗುಣ; ಪುಣ್ಯ-ಪಾಪಗಳ ವಿವೇಕವು ಅತ್ಯವಶ್ಯಕ. ಪ್ಲೇಟೋ ಎಂಬ ಪಾಶ್ಚಾತ್ಯ ವೇದಾಂತಿಯು (Philosopher), 'It is not the life of knowledge, not even if it included all the sciences, that creates happiness and well being, but a single branch of knowledge-the science of good and evil' — 'ಜ್ಞಾನಯುಕ್ತವಾದ ಜೀವಿತವು- ನಾನಾ ಶಾಖೆಗಳುಳ್ಳ ವಿಶಿಷ್ಟ ವಿಜ್ಞಾನಶಾಸ್ತ್ರದ ಜ್ಞಾನಸಹಿತವಾದರೂ-ಸುಖ ಶಾಂತಿಗಳನ್ನುಂಟು ಮಾಡುವುದಿಲ್ಲ; ಶುಭಾಶುಭ ವಿಜ್ಞಾನವು ಮಾತ್ರ ಸುಖ ಶಾಂತಿಗಳನ್ನು ಕೊಡಬಲ್ಲದು' ಎನ್ನುತ್ತಾನೆ. ವೈಜ್ಞಾನಿಕ ಅದ್ಭುತ ಸಾಧನೆಗಳಿಂದ ಜನತೆಯು ಮೋಹಗ್ರಸ್ತವಾಗಿದ್ದರೂ ಉಚ್ಚ ವಿಜ್ಞಾನಿಗಳಲ್ಲಿ ಹಲವರು, ವಿಶ್ವಚಾಲಕ ಅಚಿಂತ್ಯ ಶಕ್ತಿಯೊಂದಿರುವುದೆಂಬುದನ್ನು ತಿರಸ್ಕರಿಸಲಾಗದೇ ಪ್ರಕಾರಾಂತರ-ದಿಂದ ಅಂಗೀಕರಿಸುತ್ತಾರೆ. ಐನ್‌ಸ್ಟಿನ್ ಎಂಬ ಸುಪ್ರಸಿದ್ಧ ವಿಜ್ಞಾನಿಯು

ಹೀಗೆ ಹೇಳುತ್ತಾನೆ :- 'My religion consists of a humble admiration of the illimitable superior spirit who reveals Himself in the slight details we are able to perceive with our frail and feeble minds. The deeply emotional conviction of the presence of a superior reasoning power which is revealed in the incomprehensible universe forms my idea of God.'— ''ವಿಶ್ವವು ಅನಂತ ವಿಸ್ತಾರವುಳ್ಳದ್ದು; ಮಾನವನ ಬುದ್ಧಿಶಕ್ತಿಯು ಅದನ್ನು ಪೂರ್ಣವಾಗಿ ಗ್ರಹಿಸಲಾರದು; ಮಾನವನ ವಿಚಾರಶಕ್ತಿಯನ್ನು ಅತಿ ಕ್ರಮಿಸಿದ (ಅಪಾರವೂ ವಿಲಕ್ಷಣವೂ ಆದ) ಒಂದು ಜ್ಞಾನಶಕ್ತಿಯು ಇರುವುದೆಂಬ ನಿಶ್ಚಿತ ಅರಿವು ಆತ್ಮಾಂತರಾಳದಲ್ಲಿ ಪ್ರತಿಭಾತವಾಗುತ್ತದೆ; ವಿಶ್ವವ್ಯಾಪ್ತವಾದ ಈ ಉತ್ಕೃಷ್ಟ ಚೇತನವು, ನಮ್ಮ ಅಭದ್ರವೂ ದುರ್ಬಲವೂ ಆದ ಮನಸ್ಸಿನಿಂದ ಗ್ರಹಿಸುವ ಏಕದೇಶದ ಅತ್ಯಲ್ಪ ವಿವರಗಳಲ್ಲಿ, ಆವಿಷ್ಕರಿಸಿ ಮಿಣುಕುವುದನ್ನು ಗಮನಿಸ-ಬಹುದು. ಇದು ನನ್ನ ದೇವರು-ಈ 'ಆಶ್ಚರ್ಯ'ವನ್ನು ನಮ್ರಭಾವದಿಂದ ಗೌರವಿಸಬೇಕೆಂಬುದು ನನ್ನ 'ಮತ'.'' **ಐನ್‌ಸ್ಟಿನ್ ಮಹಾಶಯನು ಇಲ್ಲಿ, ವಿಜ್ಞಾನಶಾಸ್ತ್ರದ ಪರಿಮಿತಿಯನ್ನೂ, ಅದರಿಂದ ದೊರೆಯುವ ಆ 'ಅಪ್ರಮೇಯ'ನ ಮಹಿಮಾಜ್ಞಾನವನ್ನೂ ನಿರೂಪಿಸಿರುವನು.** ಜೀನ್ಸ್ ಎಂಬ ಮತ್ತೊಬ್ಬ ಪ್ರಸಿದ್ಧ ವಿಜ್ಞಾನಿಯು ತನ್ನ 'Mysterious Universe' (ಗೂಢ ದುರ್ಬೋಧ ವಿಶ್ವ) ಎಂಬ ಗ್ರಂಥದಲ್ಲಿ, ವೈಜ್ಞಾನಿಕ ನಿರ್ಣಯಗಳ ಬಗ್ಗೆ ಹೀಗೆ ನುಡಿದಿರುವನು :—

"Everything that has been said and every conclusion that has been tentatively put forward is, quite frankly; speculative and uncertain. We have tried to discuss whether present day science has anything to say on certain difficult questions which are, perhaps, set for ever, beyond the reach of human understanding. We cannot claim to have discerned more than a very faint glimmer at the best, perhaps it was wholly illusory; for; certainly we had to strain our eyes very hard to see anything at all. So that our main contention can hardly be that the science of today has a pronouncement to make. Perhaps; it ought

rather to be that science should leave off making pronouncements; the river of knowledge has, too often; turned back on itself." — ''ಹೇಳಲಾದ ವಿಷಯಗಳು, ಮುಂದಿಡಲಾದ ತಾತ್ಕಾಲಿಕ ನಿರ್ಧಾರಗಳು, ಈ ಎಲ್ಲವೂ, ನಿಷ್ಕಪಟದಿಂದ ಹೇಳುವುದಾದರೆ, ಅನಿಶ್ಚಿತ ಊಹೆಗಳೇ ಸರಿ. ಆಧುನಿಕ ವಿಜ್ಞಾನವು, ಕೆಲವು ದುರ್ಭರ ಸಮಸ್ಯೆಗಳ ಬಗ್ಗೆ ಏನು ಹೇಳಬಲ್ಲದೆಂಬುದನ್ನು ನಾವು (ವಿಜ್ಞಾನಿಗಳು) ಚರ್ಚಿಸಲು ಯತ್ನಿಸಿದ್ದೇವೆ. ಆದರೆ ಈ ಸಮಸ್ಯೆಗಳ ಪರಿಹಾರವು, ಪ್ರಾಯಃ ಎಂದೂ ಮಾನವ ಬುದ್ಧಿಗೆ ನಿಲುಕದವುಗಳೆಂದು ತಿಳಿಯಬೇಕಾಗಿದೆ. ಹೆಚ್ಚೆಂದರೆ ನಾವು, ಈ ಸಮಸ್ಯೆಗಳ ಕ್ಷೀಣ ಪ್ರಕಾಶವನ್ನು ಮಾತ್ರ ಗುರ್ತಿಸಿರುವೆವೆಂದು ಹೇಳಬಹುದು. ಬಹುಶಃ ಅದೂ ನಮ್ಮ ಕಲ್ಪನೆ ಮಾತ್ರವಿರಬಹುದು. ಏಕೆಂದರೆ, ನಮ್ಮ ದೃಷ್ಟಿಯನ್ನು (ವಿಜ್ಞಾನಜನ್ಯ ಜ್ಞಾನಶಕ್ತಿಯನ್ನು) ಬಹು ತೀಕ್ಷ್ಣವಾಗಿ ಉಪಯೋಗಿಸಿ ಯತ್ನಿಸಿದ್ದೇವೆ. **ವಿಜ್ಞಾನಶಾಸ್ತ್ರವು ಯಾವ ವಿಷಯಕ್ಕೇ ಆಗಲಿ, 'ಇದು ತತ್ತ್ವ-ಹೀಗೆಯೇ ಸರಿ' ಎಂಬ ನಿಶ್ಚಿತಾಭಿಪ್ರಾಯವನ್ನು ತಿಳಿಸಲು ಸಮರ್ಥವಲ್ಲೆಂಬುದು ನಮ್ಮ ಗ್ರಹಿಕೆಯಾಗಿದೆ.** ಇಷ್ಟು ಮಾತ್ರವಲ್ಲ- ವಿಜ್ಞಾನ-ಶಾಸ್ತ್ರವು ನಿರ್ಣಯಾತ್ಮಕ ಘೋಷಣೆಗಳನ್ನು ಮಾಡುವ ಹವ್ಯಾಸವನ್ನೇ ಪರಿತ್ಯಜಿಸಬೇಕೆಂಬುದು ನಮ್ಮ ವಾದವಾಗಿರತಕ್ಕದ್ದು. ಜ್ಞಾನಪ್ರವಾಹವು ಅನೇಕ ವೇಳೆ ಹಿಂತಿರುಗಿ ಪ್ರವಹಿಸುತ್ತದೆ (ತನ್ನನ್ನು ತಾನೇ ವಿರೋಧಿಸುತ್ತದೆ.)'' ಹೀಗೆ ಈ ವಿಜ್ಞಾನಿಯು, ಸತ್ಯವನ್ನು-ತತ್ವವನ್ನು ಕಾಣುವುದರಲ್ಲಿ, ವಿಜ್ಞಾನದ ಶಕ್ತಿ ಸಾಮರ್ಥ್ಯಗಳನ್ನು ವಿವೇಚಿಸಿರುವನು.

ಹೀಗೆಯೇ, ಇನ್ನೂ ಅನೇಕ ಪಾಶ್ಚಾತ್ಯ ವೇದಾಂತಿಗಳ ಹಾಗೂ ಸುಪ್ರಸಿದ್ಧ ವಿಜ್ಞಾನಿಗಳ ಅಭಿಪ್ರಾಯಗಳನ್ನು ಉದಾಹರಿಸಬಹುದು. ಎಡ್ಡಿಂಗ್‌ಟನ್, ಮರ್ಫಿ, ಪ್ಲ್ಯಾಂಕ್, ಜೋಡ್, ಸುಸ್ಸೇನ್ ಸ್ಟೆಬಿಂಗ್, ಪ್ರೊ. ಆನ್ರಾಡೆ, ರಸ್ಸೆಲ್ ಇತ್ಯಾದಿ ಪಾಶ್ಚಾತ್ಯ ಮಹಾಮತಿಗಳು, ವಿಜ್ಞಾನ ಶಾಸ್ತ್ರವು ಎಷ್ಟುಪರಿಯಿಂದ ಮುಂದುವರಿದರೂ, ಜ್ಞಾನಸಮುದ್ರದ ಬಿಂದು ಮಾತ್ರವನ್ನು ಗ್ರಹಿಸಬಲ್ಲದೆಂದು ಅಭಿಪ್ರಾಯಪಟ್ಟಿರುವರು. ಗ್ರಂಥವಿಸ್ತಾರ ಭಯದಿಂದ ಅವುಗಳನ್ನು ಇಲ್ಲಿ ಉಲ್ಲೇಖಿಸಲಾಗುವುದಿಲ್ಲ.

ವೈಜ್ಞಾನಿಕ ಪ್ರವೀಣರು ನಿರ್ಮಿಸಿರುವ, ಸೂಕ್ಷ್ಮದರ್ಶಕ, ದೂರದರ್ಶಕ, ದೂರಶ್ರವಣ, ಛಾಯಾಗ್ರಹಣ, ಅಣುವಿಶ್ಲೇಷಣ-ಪ್ರಕಾಶಕಿರಣ ವಿಶ್ಲೇಷಣ, ಶಬ್ದಪ್ರಸಾರಣ ಮೊದಲಾದ ನಾನಾ ಯಂತ್ರೋಪಕರಣಗಳಿಂದ ಅದ್ಭುತಗಳನ್ನು ಸಾಧಿಸಿದ್ದಾರೆ. ವಿಶ್ವದಲ್ಲಿರುವ ನಾನಾ ಶಕ್ತಿವಿಶೇಷಗಳು ಪ್ರವೃತ್ತಿಸುವ ಪ್ರಕಾರ ನಿಯಮಗಳನ್ನು ಅರಿತಿರುವೆವೆನ್ನುತ್ತಾರೆ. ಸೂಕ್ಷ್ಮ ಪ್ರಾಕೃತ ಶಕ್ತಿಗಳನ್ನು ನಾನಾ ಪ್ರಕಾರದಿಂದ ಉಪಯೋಗಿಸಿಕೊಂಡು ಲೋಕಾಂತರ ಸಂಚಾರವೇ ಮೊದಲಾದ ಅತ್ಯದ್ಭುತಗಳನ್ನೂ ಸಾಧಿಸುವುದರಲ್ಲಿದ್ದಾರೆ. ವಿಜ್ಞಾನಿಗಳು ತಾವು ಗ್ರಹಿಸಿದ ತಾತ್ಪೂರ್ತಿಕ ನಿರ್ಧಾರಗಳನ್ನು ಆಧಾರವಾಗಿಟ್ಟುಕೊಂಡು ಮುಂದುವರಿಯು-ತ್ತಾರೆಂಬುದು ಸ್ಪಷ್ಟವಿದೆ. ಆ ನಿರ್ಧಾರಗಳು ಅಂತಿಮ ಸತ್ಯಗಳೆಂದು (ultimate truths) ತಿಳಿಯಲು ಬರುವುದಿಲ್ಲ. ಹೀಗೆಂದ ಮಾತ್ರಕ್ಕೆ ಅವು ಸುಳ್ಳೆಂದಾಗಲಿ, ನಿಷ್ಪ್ರಯೋಜನಗಳೆಂದಾಗಲಿ ಹೇಳಿದಂತಲ್ಲ. ಉದಾಹರಣೆಗೆ, ಅಣುವು (atom) ಅವಿಭಾಜ್ಯ ಮೂಲವಸ್ತುವೆಂದು ಗ್ರಹಿಸಿ, ಈ ಆಧಾರದ ಮೇಲೆ ನಿರ್ಮಿತವಾದ ಭೌತಶಾಸ್ತ್ರವು (Physics) ನಿರರ್ಥಕವಲ್ಲ; ಮತ್ತು ರಸಾಯನಿಕ (Chemistry) ಶಾಸ್ತ್ರದ ಸೂತ್ರಗಳು (formula) ಮೊದಲಾದವು ವ್ಯರ್ಥವಲ್ಲ. ಅವು ಪ್ರಯೋಗಶಾಲೆಗಳಲ್ಲಿ ಅದ್ಯಾಪಿ ಸಫಲವಾಗಿ ಉಪಯೋಗಿಸಲ್ಪಡುತ್ತವೆ. ವಿಜ್ಞಾನವು ಬಹು ಮುಂದುವರಿದು, ಅಣು (atom) ಮೂಲವಸ್ತುವೆಂಬ ತತ್ತ್ವವು ಬಿದ್ದುಹೋಗಿದೆ-ಸುಳ್ಳಾಗಿದೆ. ಇದರಂತೆ, ಗುರುತ್ವಾಕರ್ಷಣ ಶಕ್ತಿ ಮತ್ತು ವಿಶ್ವವಸ್ತುಗಳ ಪರಸ್ಪರ ಪರಿಣಾಮವಾದಗಳು (Law of gravitation and theory of relativity) ಮೊದಲಾದ ಅನೇಕ ವೈಜ್ಞಾನಿಕ ತತ್ವಗಳು, ಇತ್ತೀಚಿನ ಪ್ರಗತಿಯಿಂದ ರೂಪಾಂತರಗೊಂಡಿವೆ. ಇದರಿಂದ, ಒಂದು ಮಟ್ಟದ ಪ್ರಗತಿಯಲ್ಲಿ ಕಾಣಲಾದ ನಿಯಮಗಳು ಅಬಾಧಿತ ಕೊನೆಯ ಸಿದ್ಧಾಂತಗಳಲ್ಲ-ವೆಂದು ತಿಳಿಯಬಹುದಾಗಿದೆ. ವೈಜ್ಞಾನಿಕ ವಾದಗಳು ಆತ್ಯಂತಿಕ ಸತ್ಯಗಳಲ್ಲ ಮತ್ತು ಕೆಲವು ಸಂದರ್ಭಗಳಲ್ಲಿ ಭ್ರಾಮಕಗಳಾಗಿರಲು ಸಹ ಅವಕಾಶವಿದೆ.

ನಾಲ್ಕು ವರ್ಷದಿಂದ[1] ಆರಂಭವಾಗಿ ಕೋಟ್ಯಂತರ ವರ್ಷಗಳ ದೂರದಲ್ಲಿ-ರುವುವೆಂದು ವಿಜ್ಞಾನಿಗಳು ತಿಳಿದಿರುವ ಆಕಾಶಗತ ಜ್ಯೋತಿರ್ವಸ್ತುಗಳು, ಅವು

1. 1,86,000 ಮೈಲಿಗಳ ದೂರವನ್ನು ಒಂದು ಸೆಕೆಂಡಿನಲ್ಲಿ ಪ್ರಕಾಶಕಿರಣವು ಸಂಚರಿಸುತ್ತದೆ. ಹೀಗೆ ಒಂದು ವರ್ಷದಲ್ಲಿ ಕಿರಣವು ಸಾಗುವ ದೂರವನ್ನು 'ಒಂದು ವರ್ಷದೂರ'ವೆಂದು ವೈಜ್ಞಾನಿಕರು ಕರೆಯುವರು.

ಸಂಚರಿಸುವ ವೇಗ, ಅವುಗಳ ಪರಿಮಾಣ, ತೂಕ (mass, weight) ಮೊದಲಾದ ವಿಷಯಗಳ ಸಂಬಂಧವಾದ ವಿಜ್ಞಾನಿಗಳ ವಾದವು ಕೇವಲ ಊಹೆಗಳನ್ನಾಶ್ರಯಿಸಿದೆ. ಆಧುನಿಕ ಖಗೋಳಶಾಸ್ತ್ರ ಪ್ರವೀಣರಿಗೆ ಕಿರಣ ವಿಶ್ಲೇಷಣ ಶಾಸ್ತ್ರವು (ವಿಜ್ಞಾನಶಾಖೆಯು) (spectroscopy) ಬಹುಮಟ್ಟಿಗೆ ಆಧಾರವಾಗಿದೆ. ಈ ಶಾಖೆಯ ಉಪಕರಣಗಳು, ಸಯುಕ್ತಿಗ ಊಹಾ-ಪೋಹಗಳನ್ನು ಕಲ್ಪಿಸಲು, ತೀಕ್ಷ್ಣಬುದ್ಧಿಯುಳ್ಳ ಪರಿಣತರಿಗೆ ಸಹಾಯಕವಾಗಿವೆ. ಈ ಪ್ರವೀಣರು ನಾನಾ ಪರೀಕ್ಷೆ ಪ್ರಯೋಗಗಳಿಂದ ಸಿದ್ಧವಾಗುವುವೆಂದು ಸಾರುವ ಹಲವು ನಿಯಮಗಳನ್ನು, ಅದೇ ಖಗೋಳ (modren astronomy) ಶಾಸ್ತ್ರದಲ್ಲಿ ಪ್ರವೀಣರಾದ ಇತರರು ಸಂದೇಹಾಸ್ಪದಗಳೆಂದು ಹೇಳುತ್ತಿರುವುದನ್ನು ಗಮನಿಸಬಹುದು. ಆಂಥೋನಿ ಟಕರ್ ಎಂಬ ಪ್ರಚಲಿತ ಆಕಾಶಯುಗದ (space age) ಪ್ರಸಿದ್ಧ ವಿಜ್ಞಾನಿಯು ಹೇಳುವ ಈ ಮುಂದೆ ಉದಹರಿಸುವ ವಾಕ್ಯಗಳು, 'ವಿಜ್ಞಾನಿಗಳು ಯಾವ ವಿಷಯಗಳನ್ನೂ ಸಿದ್ಧಾಂತಗಳೆಂದು ಹೇಳುವುದನ್ನೇ ಪರಿತ್ಯಾಗ ಮಾಡುವುದು ಅವಶ್ಯಕ'ವೆಂದು ಜೀನ್ಸ್‌ರವರ ಈ ಮೊದಲು ಉದಹರಿಸಿದ ಅಭಿಪ್ರಾಯವನ್ನು ಸಮರ್ಥಿಸುತ್ತವೆ. ಟಕರ್ ಮಹಾಶಯನ ವಾಕ್ಯಗಳು ಹೀಗಿವೆ : 'The whole of existing cosmological theory rests on a discovery made forty years ago by an American Astronomer, E. P. Hubble who showed that there is a direct observational relationship between the distance of an Astronomical object and the way its visible spectrum is shifted towards the longer wave length end. It was found that this red-shift could be used to determine velocities, much as the changing pitch of a passing train whistle can be used for the same purpose, ... It seemed that a fundamental secret had been unlocked. However, it has now become important not to discover whether things began with a bang .... but whether *the red-shift really means what it has been thought to mean*' (The Hindu 13-2-1966). 'ವಿಶ್ವದ ಉತ್ಪತ್ತಿ ಮೊದಲಾದ ವಿಷಯಗಳಿಗೆ

ಸಂಬಂಧಿಸಿದಂತೆ ಬೆಳೆದಿರುವ ವಿಜ್ಞಾನಿಗಳ ವಾದಗಳು, ಈಗ ೪೦ ವರ್ಷಗಳ ಕೆಳಗೆ, ಇ.ಪಿ. ಹಬ್ಬಲ್ ಎಂಬ ಅಮೆರಿಕಾ ದೇಶದ ಖಗೋಳ ಶಾಸ್ತ್ರಜ್ಞನು, ಕಂಡುಹಿಡಿದ ನೂತನ ಸಿದ್ಧಾಂತವನ್ನು ಆಧರಿಸಿವೆ. ಆಕಾಶದಲ್ಲಿರುವ ನಕ್ಷತ್ರಾದಿಗಳಿಂದ ಹೊರಟು ಭೂಮಿಯನ್ನು ಮುಟ್ಟುವ ಪ್ರಕಾಶ ಕಿರಣಗಳನ್ನು ಪ್ರಯೋಗ ಶಾಲೆಯಲ್ಲಿ ವಿಶ್ಲೇಷಣಗೊಳಿಸಿದರೆ, ದೊರೆಯುವ ವಿವಿಧ ವರ್ಣಸಮೂಹದ ದೃಶ್ಯಗಳಲ್ಲಿ ಗಮನಿಸಬಹುದಾದ ನಿಯಮ ವಿಶೇಷದಿಂದ, ಭೂ-ಗಗನ ವಸ್ತುಗಳ ದೂರಕ್ಕೂ, ರೋಹಿತದಲ್ಲಿನ ಕೆಂಪುಬಣ್ಣವು ಹೆಚ್ಚು ಅಗಲದ ಅಲೆಗಳ ತುದಿಯತ್ತ ಸರಿಯುವುದಕ್ಕೂ, ನಿರ್ದಿಷ್ಟವಾದ ಒಂದು ಸಂಬಂಧವಿರುವುದು ಕಂಡುಬರುತ್ತದೆ. ಈ ರೋಹಿತದ ಸರಿಯುವಿಕೆಯನ್ನು (red-shift) ಆ ಗಗನ ವಸ್ತುವಿನ ಸಂಚಾರ ವೇಗವನ್ನು ನಿರ್ಧರಿಸಲು ಸಹ ಉಪಯೋಗಿಸಬಹುದೆಂದೂ ತಿಳಿಯಲಾಯಿತು. ಓಡುತ್ತಿರುವ ರೈಲು-ಬಂಡಿಯ ವೇಗವನ್ನು ಗೊತ್ತುಮಾಡಲು, ಅದರಿಂದ ಹೊರಟು ನಮಗೆ ಕೇಳಿಬರುವ ಸಿಳ್ಳುಶಬ್ದದ (whistle) ಸ್ವರಸ್ಥಾಯಿಯ (pitch) ವ್ಯತ್ಯಾಸಗಳನ್ನು ಉಪಯೋಗಿಸುವಂತೆ, ಅದನ್ನು ಉಪಯೋಗಿಸಿಕೊಳ್ಳಬಹುದೆಂದು ಈತನ ಹೊಸ ಆವಿಷ್ಕಾರ (discovery). ಇದರಿಂದ ಅತಿ ಮುಖ್ಯವಾದ ಮೂಲತತ್ವವು ಬಯಲಿಗೆ ಬಂತೆಂದು ವಿಜ್ಞಾನಿಗಳಿಂದ ತಿಳಿಯಲಾಯಿತು. ಆದರೆ, ಇತ್ತೀಚಿನ ಪ್ರಯೋಗ ಪರೀಕ್ಷೆಗಳಿಂದ ಈ ಮೂಲ ತತ್ತ್ವದ ಬಗ್ಗೆ ಸಂಶಯವೆದ್ದಿದೆ. ಈಗ, ವಿಶ್ವವು ಒಂದು ಅದ್ಭುತ ಆಸ್ಫೋಟನೆಯಿಂದ ಆರಂಭವಾಯಿತೇ ಹೇಗೆ ಎಂಬುದಕ್ಕಿಂತ, ಮೇಲೆ ವಿವರಿಸಿದ ರೋಹಿತ ಸ್ಥಳಾಂತರಕ್ಕೆ (red-shiftಗೆ) ಕಲ್ಪಿಸಲಾದ ಅರ್ಥವು (ನಿಯಮ ಸೂಚಕತ್ವವು) ಸರಿಯೇ ಎಂಬುದು ಪ್ರಧಾನ ಪ್ರಶ್ನೆಯಾಗಿದೆ.' ವೈಜ್ಞಾನಿಕ ವಾದಗಳು ಪ್ರಗತಿಯ ವೇಗಾನುಸಾರವಾಗಿ ಬದಲಾಗುತ್ತ ಹೋಗುತ್ತವೆ. ಕಿರಣ, ವಿದ್ಯುದಾದಿ ಪ್ರಾಕೃತ ಶಕ್ತಿಗಳು, ವಿಜ್ಞಾನಿಗಳು ಕಂಡು ಗ್ರಹಿಸಿರುವ ನಿಯಮಗಳಿಗನುಸಾರವಾಗಿ, ವಿಶ್ವದಲ್ಲಿ ಸರ್ವತ್ರ ವರ್ತಿಸುವುವೆಂಬಲ್ಲಿ ಯಾವ ಆಧಾರವೂ ಇಲ್ಲ. ಈಗ ತಿಳಿದಿರುವ ಅಥವಾ ಮುಂದೆ ತಿಳಿಯಬಹುದಾದ ನಿಯಮಗಳನ್ನು ಆಧಾರವಾಗಿಟ್ಟು-ಕೊಂಡು, ಗ್ರಹನಕ್ಷತ್ರಾದಿಗಳ ದೂರ, ವೇಗ, ಪರಿಮಾಣ, ತೂಕ, ಸ್ಥಿತಿಗತಿಗಳನ್ನು

ನಿರ್ಧರಿಸುವುದು ಸರಿಯಾಗಲಾರದು. ಅನಿರೀಕ್ಷಿತ ಪರಿಸ್ಥಿತಿಗಳಿಂದ ತಪ್ಪು ಕಲ್ಪನೆಗಳಿಗೆ ಅವಕಾಶವಿರುತ್ತೆಂಬುದನ್ನು ಮರೆಯಬಾರದು. ವಿಜ್ಞಾನಿಗಳು ತಮ್ಮ ಪ್ರಯೋಗ ಪರೀಕ್ಷೆಗಳಲ್ಲಿ ಉಪಯೋಗಿಸುವ, ದಿಗ್ದರ್ಶಕ, ವೇಗಸೂಚಕ, ಕಾಲಸೂಚಕ, ಕಿರಣ ವಿಶ್ಲೇಷಕಾದಿ ವಿವಿಧ ಯಂತ್ರೋಪಕರಣಗಳು, ವಿಶ್ವದಲ್ಲಿರುವ ನಾನಾ ಕೇಂದ್ರಗತ ವಿಶೇಷ ಶಕ್ತಿಗಳ ಪ್ರಭಾವಕ್ಕೊಳಪಟ್ಟರೂ, ಸರ್ವತ್ರ ಏಕಪ್ರಕಾರವಾಗಿ ಕೆಲಸ ಮಾಡುತ್ತವೆಂಬುದು ಕೇವಲ ಊಹೆಯಾಗಿದೆ. ಇದೇ ರೀತಿಯ ನಾನಾ ಕಾರಣಗಳಿಂದ ಗ್ರಹ ನಕ್ಷತ್ರಾದಿಗಳ ವಿಷಯದಲ್ಲಿ ವಿಜ್ಞಾನಿಗಳು ಮಂಡಿಸುವ ವಾದಗಳು ನಿಶ್ಚಿತ ಸಿದ್ಧಾಂತಗಳೆಂದು ತಿಳಿಯಲು ಬರುವುದಿಲ್ಲ. ಈ ಮುಂದೆ ವಿವರಿಸುವ ಕೆಲವು ನಿದರ್ಶನಗಳು, ಹೀಗೆಂಬ ಅಭಿಪ್ರಾಯವನ್ನು ಸಮರ್ಥಿಸುತ್ತವೆ. ೩-೪ ವರ್ಷಗಳ ಹಿಂದೆ ರಷ್ಯಾ ದೇಶದ ಮಾಸಪತ್ರಿಕೆಯೊಂದರಲ್ಲಿ ಪ್ರಕಟವಾದ ಪ್ರಹಸನರೂಪದ ಕಥೆಯೊಂದನ್ನು ಇಲ್ಲಿ ಗಮನಿಸಬಹುದು. ಅದೇನೆಂದರೆ : ರಾಕೆಟ್ಟಿನಲ್ಲಿ (ಗಗನಯಾನ) ಲೋಕಾಂತರಗಳಿಗೆ ಪ್ರಯಾಣ ಮಾಡಲುದ್ಯುಕ್ತನಾದ ೨೫ ವರ್ಷದ ಒಬ್ಬ ತರುಣನನ್ನು ೨೦ ವರ್ಷದ ಆತನ ಪತ್ನಿಯು, ೬ ತಿಂಗಳ ಗಂಡು ಮಗುವಿನೊಂದಿಗೆ ನಿಲ್ದಾಣಕ್ಕೆ ಬಂದು ಬೀಳ್ಕೊಡುತ್ತಾಳೆ. ಆ ಯಾತ್ರಿಕನು ನಾನಾ ಗ್ರಹಗಳಿಗೆ ಹೋಗಿ ೨ ವರ್ಷದ ನಂತರ ತಿರುಗಿ ಬರುತ್ತಾನೆ. ನಿಲ್ದಾಣದಲ್ಲಿ ಆತನನ್ನು ಎದುರುಗೊಳ್ಳಲು, ಪತ್ನಿಯು ಮಗನೊಂದಿಗೆ ಬಂದಿರುವಳು. ಅವರನ್ನು ಗುರ್ತಿಸುವುದು ಸಹ ಆತನಿಗೆ ಕಷ್ಟವಾಗುತ್ತದೆ. ಹೆಂಡತಿಯು ೫೫ ವರ್ಷದ ವೃದ್ಧಳಾಗಿಯೂ, ಮಗನು ೩೫ ವರ್ಷದ ಪ್ರಾಯದವನೂ ಆಗಿರುತ್ತಾರೆ.' ಈ ಕಥೆಯನ್ನು ಸಚಿತ್ರವಾಗಿ ಪ್ರಕಟಿಸಿತ್ತು-ಆ ಪತ್ರಿಕೆ. ಇದು ಈಗ ಕಥೆ ಮಾತ್ರ . ಗ್ರಹನಕ್ಷತ್ರಾದಿಗಳ ಸಂಚಾರವು ವಿಜ್ಞಾನಿಗಳಿಗೆ ಸಾಧಿಸಿದಾಗ ಸತ್ಯವೂ ಆಗಬಹುದಲ್ಲವೆ! ಕಾಲ-ದೇಶ ಪ್ರಮಾಣಗಳು ಸಹ ವಿಶ್ವದಲ್ಲಿ ಏಕಪ್ರಕಾರವಾಗಿರುವುದಿಲ್ಲವೆಂದು ತೋರುತ್ತದೆ. ಈ ಸಂದರ್ಭದಲ್ಲಿ ಪುರಾಣೋಕ್ತ ವಿಷಯವೊಂದು ಸ್ಮರಣೆಗೆ ಬರುತ್ತದೆ. 'ಕೃತಯುಗದ ರೇವತ ರಾಜನು, ತನ್ನ ಮಗನಾದ ರೇವತೀದೇವಿಗೆ ಯೋಗ್ಯ ವರನು ದೊರೆಯದಿದ್ದ ಕಾರಣ, ವಿಧಿಲಿಖಿತವನ್ನು ತಿಳಿಯಲು ವಿಧಿಯ (ಬ್ರಹ್ಮನ) ಸಮೀಪಕ್ಕೆ

ಮಗಳೊಂದಿಗೆ ಹೋಗುತ್ತಾನೆ. ಸತ್ಯಲೋಕದಲ್ಲಿ ಬ್ರಹ್ಮದರ್ಶನಕ್ಕಾಗಿ ಒಂದು ಮುಹೂರ್ತ (೨ ಘಳಿಗೆ ೪೮ ನಿಮಿಷ) ಕಾಯಬೇಕಾಗುತ್ತದೆ. ನಂತರ ತಾನು ಬಂದ ಕಾರ್ಯವನ್ನು ವಿಜ್ಞಾಪಿಸಿಕೊಳ್ಳಲು, ಬ್ರಹ್ಮದೇವನು 'ನೀನು ನೋಡಿದ ವರಗಳ ಪೈಕಿ ಈಗ ಭೂಮಿಯಲ್ಲಿ ಯಾರೂ ಇಲ್ಲ ; ಅವರ ಸಂತತಿಗಳೂ ನಷ್ಟವಾಗಿವೆ ; ಈಗ ಅಲ್ಲಿ ದ್ವಾಪರಯುಗ ನಡೆಯುತ್ತಿದೆ ; ಶ್ರೀಕೃಷ್ಣನ ಅಣ್ಣ ಬಲರಾಮನಿಗೆ ಕೊಟ್ಟು ನಿನ್ನ ಮಗಳ ವಿವಾಹ ಮಾಡು ಹೋಗು' ಎನ್ನುತ್ತಾನೆ. ಭೂಲೋಕಕ್ಕೆ ಬಂದು ಅದರಂತೆ ನಡೆದುಕೊಳ್ಳುತ್ತಾನೆ. ಭೂಲೋಕ-ಸತ್ಯಲೋಕಗಳ ಕಾಲ ಪ್ರಮಾಣದಲ್ಲಿರುವ ಮಹದಂತರವು ಇದರಿಂದ ತಿಳಿಸಲಾಗುತ್ತದೆ. ಬ್ರಹ್ಮದೇವನ ಒಂದು ಹಗಲಿನಲ್ಲಿ ಕೃತ, ತ್ರೇತ, ದ್ವಾಪರ, ಕಲಿಗಳೆಂಬ ನಾಲ್ಕು ಯುಗಗಳು ಒಂದು ಸಾವಿರಾವರ್ತಿ ಸುತ್ತಿರುವುವೆಂದು ಹೇಳಲಾಗುತ್ತದೆ. ವಿಜ್ಞಾನಿಗಳು, ಒಂದೊಂದು ನಕ್ಷತ್ರವೂ ಸಾವಿರಾರು ಸೂರ್ಯರಿಗಿಂತ ದೊಡ್ಡದೆಂದೂ, ಸೂರ್ಯನನ್ನು ಸುತ್ತುವಂತೆ, ಅದರ ಸುತ್ತಲೂ ಸುತ್ತುವ ಗ್ರಹಗಳಿರಬೇಕೆಂದೂ, ತಮಗೆ ತಿಳಿದಿರುವ ಸೌರವಿಶ್ವ-ದಂತಿರುವ, ಅಸಂಖ್ಯಾತ ವಿಶ್ವಗಳಿರುವುವೆಂದೂ ಬಗೆಯುತ್ತಾರೆ. ಭೌತ, ರಸಾಯನಿಕ ಶಾಸ್ತ್ರ ನಿಯಮಗಳು ಸರ್ವತ್ರ ಏಕಪ್ರಕಾರವಾಗಿರುವುವೆಂದು ತಿಳಿದು, ಅವುಗಳನ್ನು ಸರ್ವತ್ರ ಅನ್ವಯಿಸುತ್ತ ಮಂಗಳಾದಿ (Mars) ಗ್ರಹಗಳ ದೂರ, ಅವುಗಳ ವಾಯುಮಂಡಲ, ಸಸ್ಯ, ಜಲ, ಶೀತೋಷ್ಣಾದಿಗಳ ಪರಿಸ್ಥಿತಿಗಳನ್ನು ನಿರ್ಧರಿಸುತ್ತಾರೆ. ವಿಶ್ವವೀಕ್ಷಣೆಯಲ್ಲಿ ತೊಡಗಿರುವ ದಕ್ಷ ವೈಜ್ಞಾನಿಕರು, ಇತ್ತೀಚೆಗೆ ಈ ನಮ್ಮ ನಿಯಮಗಳು ಸರ್ವತ್ರ ಅನ್ವಯಿಸುವುವೋ ಅಥವಾ ಅನ್ಯಲೋಕಗಳಲ್ಲಿ (ಸೌರವಿಶ್ವಗಳಲ್ಲಿ) ಭೌತರಸಾಯನಿಕಾದಿ ಶಾಸ್ತ್ರ ನಿಯಮಗಳು ಬೇರೆಯಾಗಿರುವುವೋ ಎಂದು ಶಂಕಿಸಲಾರಂಭಿಸಿರುವರು. ವಾಲ್ಟರ್ ಸಲ್ಲಿವನ್ ಎಂಬ ವಿಜ್ಞಾನಿಯು ಪ್ರಕಟಿಸಿರುವ ಒಂದು ಲೇಖನದಲ್ಲಿ (೨೩-೧೨-೧೯೬೫ನೇ ಹಿಂದೂ ಪತ್ರಿಕೆಯನ್ನು ನೋಡಬಹುದು) ಹೀಗೆಂದಿರುವನು : "one of the three founders of the 'steady state' concept of the universe has renounced that theory in favour of not one but many oscillating universes, each with its own laws of physics...Dr. Hoyle at the Cambridge

University has renounced the steady state concept...Thus physics and chemistry in another universe would be quite different from what they are in this one"—''ವಿಶ್ವವು ಸದಾ ಸಮಸ್ಥಿತಿಯಲ್ಲಿರುವುದೆಂಬ ಗ್ರಹಿಕೆಯುಳ್ಳ (ಹಾಗೆ ಭಾವಿಸುವ) ಮೂಲಸಿದ್ಧಾಂತ ಸ್ಥಾಪಕರಾದ ಮೂವರು ಪ್ರವೀಣರ ಪೈಕಿ ಒಬ್ಬರು ಈ ಸಿದ್ಧಾಂತವನ್ನು ತಿರಸ್ಕರಿಸಿ, ತಂತಮ್ಮ ಪ್ರತ್ಯೇಕ ಭೌತಶಾಸ್ತ್ರ ನಿಯಮಗಳುಳ್ಳ, ಚಿರಸ್ಥಾಯಿಗಳಲ್ಲದ ತೂಗಾಡುವ ಬಹು ವಿಶ್ವಗಳಿರುವುವೆಂಬ ಭಾವನೆಯುಳ್ಳವರಾಗಿದ್ದಾರೆ. ಕೇಂಬ್ರಿಡ್ಜ್ ವಿಶ್ವವಿದ್ಯಾಲಯದ ಡಾ।। ಹಾಯಿಲ್‌ಎಂಬುವರು ಮೂಲಸ್ಥಾಪಕರ ಸಿದ್ಧಾಂತವನ್ನು ತಳ್ಳಿಹಾಕಿದ್ದಾರೆ. ಈ ನಮ್ಮ ವಿಶ್ವದಲ್ಲಿರುವುದಕ್ಕಿಂತ ಅತ್ಯಂತ ಭಿನ್ನವಾದ ಭೌತ ರಸಾಯನಿಕ (physics and chemistry) ನಿಯಮಗಳು ಮತ್ತೊಂದರಲ್ಲಿರಬೇಕಾಗುವುದು'' ಇತ್ಯಾದಿ ವಾದಗಳನ್ನು ವಿಜ್ಞಾನಿಗಳು ಮುಂದಿಡುತ್ತಲಿದ್ದಾರೆ. ಹೀಗೆಯೇ ಭೂಮಿಗೆ ಅತಿ ಸಮೀಪ ಗ್ರಹವೆಂದು ಹೇಳಲಾಗುವ ಚಂದ್ರನ ವಿಚಾರವಾಗಿ, ಅದರ ಮೇಲೆ ಹೋಗಿ ಇಳಿಯುವ ವಿಶ್ವಾಸವನ್ನು ಹೊಂದಿರುವ ವೈಜ್ಞಾನಿಕರು, ತಮ್ಮ ವಿವಿಧ ವೀಕ್ಷಣೆ ಪ್ರಯೋಗಗಳ ನಾನಾ ಘಟ್ಟಗಳಲ್ಲಿ ಭಿನ್ನ ಭಿನ್ನ ಅಭಿಪ್ರಾಯಗಳನ್ನು ಹೊಂದುತ್ತಲಿರುವರು ಅಮೆರಿಕಾದ ಪ್ರವೀಣರು ಒಂದು ಪ್ರಕಾರವಾಗಿ ಹೇಳಿದರೆ ರಷ್ಯಾದವರು ಮತ್ತೊಂದು ಪ್ರಕಾರವಾಗಿ ಹೇಳುವುದನ್ನೂ ಕಾಣುತ್ತೇವೆ. ಕೆಲವು ವಿಷಯಗಳಲ್ಲಿ ಉಭಯ ಪ್ರವೀಣರಲ್ಲಿ ಏಕಾಭಿಪ್ರಾಯವೂ ಇರುವುದುಂಟು. ಚಂದ್ರನಲ್ಲಿ ನೀರಿಲ್ಲ-ವಾಯುಮಂಡಲವಿಲ್ಲ, ಎಂಬ ಸಾಮಾನ್ಯ ನಂಬಿಕೆ ವಿಜ್ಞಾನಿಗಳಿಗಿದೆ. ಆದರೆ ಭಿನ್ನಾಭಿಪ್ರಾಯವುಳ್ಳ ವಿಜ್ಞಾನಿಗಳೂ ಕೆಲವರಿದ್ದಾರೆ. ಚಂದ್ರಮಂಡಲ-ವನ್ನು 'ಘನತೋ ಯಾತ್ಮಕಂ ವಿದ್ಧಿ'-ಘನೀಭೂತಜಲದಿಂದ ತುಂಬಿದ್ದೆಂದು ತಿಳಿ ಎಂದು ಪುರಾಣದಲ್ಲಿ (ವಾಯು ಪುರಾಣ) ಹೇಳುವಂತಿದೆ. ಚಂದ್ರನ ಮೇಲುಮೈ , ಮಾನವನು ಚಂದ್ರನ ಮೇಲಿಳಿಯಲು ಅವಕಾಶ ಕೊಡುವುದಿಲ್ಲ. ರಾಕೆಟ್ಟು ಸಮೇತ ಒಳಗೆ ಹುಗಿದು ಹೋಗುತ್ತಾನೆಂದು ವಿಜ್ಞಾನಿಗಳು ೧-೨ ವರ್ಷದ ಹಿಂದಿನವರೆಗೂ ತಿಳಿದಿದ್ದರು. 'ಲ್ಯೂನಾ ೧೩' ಎಂಬ ಚಂದ್ರ-ಸಂಬಂಧಿ ರಷ್ಯ್ನ ರಾಕೆಟ್ಟು ಈ ಭಾವನೆಯನ್ನು ತೊಡೆದುಹಾಕಿತು.

ರಷ್ಯಾದ 'ಟಾಸ್' ಪತ್ರಿಕೆಯು ೩೦-೧೨-೧೯೬೬ ರಲ್ಲಿ ಹೀಗೆ ಪ್ರಕಟಿಸಿತು : 'The landing disproved earlier theories that the moon's surface was made of dust and would not support a landing space craft' - 'ಚಂದ್ರನ ಮೇಲುಮ್ಮೈಯು ಧೂಳು ಮಾತ್ರವಾಗಿದ್ದು ಗಗನಯಾನ-ವನ್ನು ಧರಿಸುವ ಶಕ್ತಿ ಇಲ್ಲದ್ದೆಂಬ ಆ ಹಿಂದಿನ ಭಾವನೆಗಳನ್ನು ತಪ್ಪೆಂದು (ಲ್ಯೂನಾ-೧೩ ಅಲ್ಲಿ ಇಳಿದು) ಸಾಧಿಸಿದೆ.' ಐನ್‌ಸ್ಟಿನ್ನರ (theory of relativity) ವಾದವನ್ನು ಪ್ರಿನ್ಸ್‌ಟನ್ ವಿಶ್ವವಿದ್ಯಾಲಯದ (Princeton University) ಭೌತಶಾಸ್ತ್ರ ಪ್ರೊಫೆಸರ್ ಡಾ|| ರಾಬರ್ಟ್ ಡಿಕೇ ಎಂಬಾತನು ಮೊದಲು ಸಡಿಲಿಸಿದನು. ಈಚೆಗೆ ಡಾ|| ನೇರ್ಲಿಕರ್ ಮೊದಲಾದ ಇತರರು ಆ ತತ್ವವನ್ನು ರೂಪಾಂತರಗೊಳಿಸಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಐನ್‌ಸ್ಟಿನ್ನರ ವಾದಕ್ಕೆ ಬುಧಗ್ರಹದ ಸಂಚಾರಪಥವು ತಮ್ಮ ಹೊಸ ತತ್ವವನ್ನು ಪಾಲಿಸುತ್ತದೆಂಬುದು ಆಧಾರಸ್ತಂಭದಂತಿತ್ತು . ಬುಧಗ್ರಹಪಥವು, ಸೂರ್ಯ ಗ್ರಹದ ಧ್ರುವಪ್ರದೇಶಗಳಲ್ಲಿ, ಹರವಿ ಸಮಮಾಡಿದಂತಿರುವ ಅದರ ಆಕಾರ ಪ್ರಭಾವದಿಂದ ಆದುದಲ್ಲದೇ, ಐನ್‌ಸ್ಟಿನ್ನರು ಹೇಳುವ ನಿಯಮದಿಂದಲ್ಲವೆಂದು ಡಾಕ್ಟರ್ ರಾಬರ್ಟ್ ಡಿಕೇ ತೋರಿಸಿ, ಅವರ ವಾದದ ಆಧಾರಸ್ತಂಭವನ್ನೇ ಕಳಚಿದರೆಂದು ತಿಳಿಯಲಾಗಿದೆ. ಹೀಗೆಯೇ ಇನ್ನೂ ಅನೇಕ ಉದಾಹರಣೆ-ಗಳಿಂದ, ವಿಜ್ಞಾನಿಗಳು ಹೇಳುವುದೆಲ್ಲವನ್ನೂ ಸತ್ಯವೆಂದೇ ನಂಬಿಕೊಳ್ಳಲು ಸಾಧ್ಯವಿಲ್ಲೆಂದು ತೋರಿಸಬಹುದು. ಮೇಲಾಗಿ, ವಿಜ್ಞಾನ ಶಾಸ್ತ್ರವು ಕೇವಲ ಪ್ರಾಕೃತ ವಸ್ತುಗಳ-ಸೂಕ್ಷ್ಮ ಶಕ್ತಿವಿಶೇಷಗಳ ವಶೀಕರಣದಲ್ಲಿಯೇ ಪ್ರವೃತ್ತಿಸುತ್ತಿದೆ. ಅದು ನಿತ್ಯ ಸುಖರೂಪದ ಮಾನವ ಗುರಿಯನ್ನು ಸಾಧಿಸಬಲ್ಲುದೇ ಎಂಬ ಮುಖ್ಯಾಂಶವನ್ನು ಗಮನಿಸೋಣ.

ವೈಜ್ಞಾನಿಕ ಪ್ರಗತಿಯಿಂದ ಸಾಧಿಸಲಾಗಿರುವ ಮತ್ತು ಸಾಧಿಸಲಿರುವ ಸುಖಸಾಧಕ ಪರಿಸ್ಥಿತಿಗಳನ್ನು ವಿಮರ್ಶಿಸುವಾ. ವಿದ್ಯುಚ್ಛಕ್ತಿಯನ್ನು ಅದ್ಭುತ ರೀತಿಯಲ್ಲಿ ಬಳಸಲಾಗುತ್ತಿದೆ. ವಿಮಾನ ಯುಗವು ಕಳೆದು ಗಗನ ಯುಗವು (Space age) ಮುಂದುವರಿಯುತ್ತಿದೆ. ಚಂದ್ರಗ್ರಹದಲ್ಲಿ ಮಾನವನು ಸಧ್ಯದಲ್ಲಿ ಇಳಿಯಲಿರುವನೆಂದು ಘೋಷಿಸಲಾಗುತ್ತಿದೆ. ನಾನಾ ವಿಧ

ಯಂತ್ರೋಪಕರಣಗಳಿಂದ ಸಜ್ಜುಗೊಳಿಸಲ್ಪಟ್ಟ ಉಪಗ್ರಹಗಳು (Satellites) ಭೂಮಿಯನ್ನು ಸುತ್ತುತ್ತಿವೆ. ಪೃಥ್ವಿಯ ಒಂದು ಭಾಗದಿಂದ ಇತರ ಭಾಗಗಳಿಗೆ ವಾರ್ತೆಗಳನ್ನು ಮುಟ್ಟಿಸಲು ಉಪಗ್ರಹಗಳ ಬಳಕೆಯಾಗುತ್ತಿದೆ. ಅಂಥ ಉಪಗ್ರಹಗಳ ದ್ವಾರಾ ಭೂಮಿಯ ನಾನಾ ಭಾಗಗಳಲ್ಲಿ ನಡೆಯುವ, ಪ್ರಮುಖ ಕ್ರೀಡಾದಿ ರಂಗಗಳ ಕಾರ್ಯಗಳು ಟೆಲಿವಿಜನ್ ಸ್ಕ್ರೀನ್ ಮೇಲೆ ಪ್ರದರ್ಶಿಸಲ್ಪಡುತ್ತಿವೆ. ಸೂರ್ಯನ ಗತಿಯನ್ನೂ ಮೀರುವ (ಭೂಮಿಯಲ್ಲಿ ೧ ಗಂಟೆಗೆ ಸುಮಾರು ೧೦೦೦ ಮೈಲಿ) ವೇಗದಿಂದ ಸಂಚರಿಸುವ ವಿಮಾನಗಳಲ್ಲಿ ಮಾನವನ ಸಂಚಾರ ನಡೆದಿದೆ. ಉಪಗ್ರಹಗಳಲ್ಲಿ ಕೂತು ೬೦ ನಿಮಿಷ-ಗಳಿಗೊಂದಾವರ್ತಿ ಭೂಪ್ರದಕ್ಷಿಣೆ ಮಾಡುವುದು ಶಕ್ಯವಾಗಿದೆ. ಗಗನದಲ್ಲಿ ಬಿಡಲಾಗುವ ರಾಕೆಟ್‌ಗಳ ಗತಿಗಳನ್ನು ಭೂಮಿಯಿಂದಲೇ, ರೇಡಿಯೋ ಮೂಲಕ, ನಿಯಂತ್ರಿಸಲಾಗುತ್ತದೆ. ಭೂಮಿಯ ಗುರುತ್ವಾಕರ್ಷಣವನ್ನು ಗೆದ್ದು ಮಾನವನು ಗಗನದಲ್ಲಿ ನಡೆಯುವ ಸಾಹಸವನ್ನೂ ತೋರಿದ್ದಾನೆ. ಛಾಯಾಗ್ರಹಣ (Photography) ಕಲೆಯು ವಿಚಿತ್ರವಾಗಿ ಮುಂದರಿದಿದೆ. ರೇಡಿಯೋ ದ್ವಾರಾ ಚಂದ್ರನ ಹಿಂಬದಿಯ ಚಿತ್ರಗಳನ್ನು ಭೂಮಿಗೆ ತರಿಸಲಾಗಿದೆ. ಕ್ಷ-ಕಿರಣಗಳ ಸಹಾಯದಿಂದ (X-ray) ದೇಹದೊಳಗಿನ ದೃಶ್ಯಗಳ ಛಾಯಾ ಗ್ರಹಣ ಮಾಡಲಾಗುತ್ತದೆ. ದೂರದರ್ಶಕ, ಸೂಕ್ಷ್ಮದರ್ಶಕ ಯಂತ್ರಗಳು ವಿಶ್ವದ ನಾನಾ ಅದ್ಭುತಗಳನ್ನು ಮಾನವದೃಷ್ಟಿಗೆ ತಂದೊಡ್ಡಿವೆ. ವೈದ್ಯ ಶಾಸ್ತ್ರದಲ್ಲಿ (Medical Science) ಅಣುಶಕ್ತಿಯ ಪ್ರಭಾವದಿಂದ ಅದ್ಭುತ ಕಾರ್ಯಗಳನ್ನು ಸಾಧಿಸಲಾಗಿದೆ - ಆಶ್ಚರ್ಯಕರವಾದ ಚಿಕಿತ್ಸೆಗಳನ್ನು ಕಂಡು ಹಿಡಿದು ಪ್ರಯೋಗಿಸಲಾಗುತ್ತಿದೆ. ಜೀವಶಾಸ್ತ್ರವೇ (Biology) ಮೊದಲಾದ ನಾನಾ ವಿಭಾಗಗಳಲ್ಲಿ ಬಹುಪರಿಯ ಪ್ರಗತಿಯಾಗಿದೆ. ಸ್ತ್ರೀಯರು, ಇಚ್ಛಾನುಸಾರ ಗಂಡು ಅಥವಾ ಹೆಣ್ಣು ಮಗುವನ್ನು ಪಡೆಯುವುದು; ವೇದಾಂತ, ಸಾಹಿತ್ಯ , ವಿಜ್ಞಾನಾದಿ ನಾನಾ ವಿದ್ಯೆಗಳಲ್ಲಿ ತಮಗೆ ಇಚ್ಛಿತವಾದ ವಿದ್ಯೆಯಲ್ಲಿ ಪರಿಣತರಾದ ಮಕ್ಕಳನ್ನು ಉತ್ಪಾದನೆ ಮಾಡುವುದು; ಈ ಮೊದಲಾದ ಸಾಮರ್ಥ್ಯವನ್ನು ಮಾನವನು, ಸಮೀಪ ಭವಿಷ್ಯದಲ್ಲಿಯೇ ದೊರಕಿಸಿಕೊಳ್ಳುವನೆಂಬ ಆಶೆಯನ್ನು ವಿಜ್ಞಾನಿಗಳು ಹೊಂದಿದ್ದಾರೆ. ದೇಹದೊಳಗಿನ ಹೃದಯಕೋಶವೇ ಮೊದಲಾದ

ನಾನಾ ಅವಯವಗಳನ್ನು ತೆಗೆದು ದೃಢವಾದ ಕೃತಕ ಅವಯವಗಳನ್ನು ಜೋಡಿಸುವ ಯತ್ನಗಳು ಸಫಲವಾಗುತ್ತಿವೆ. ಹೆಚ್ಚೇನು! ಸತ್ತವರನ್ನು ಬದುಕಿಸುವ ಯತ್ನಗಳೂ ಭರದಿಂದ ಸಾಗಿವೆ. ಗರ್ಭಧಾರಣೆಯನ್ನೇ ತಡೆಗಟ್ಟಿ ಜನಸಂಖ್ಯೆ-ಯನ್ನು ನಿಯಂತ್ರಿಸುವ ಕಾರ್ಯವೂ ಸಾಗಿದೆ. ಭೌತಶಾಸ್ತ್ರ (Physics) ಮೊದಲಾದ ವಿಜ್ಞಾನದ ನಾನಾ ಶಾಖೆಗಳು, ಶಾಖೋಪಶಾಖೆಗಳಾಗಿ ಕವಲೊಡೆದು, ಒಂದೊಂದರಲ್ಲಿಯೂ ವಿಶಿಷ್ಟ ಪಾಂಡಿತ್ಯವನ್ನು ದೊರಕಿಸಿಕೊಂಡ (Specialists and Experts) ಪ್ರವೀಣರ ಸಂಖ್ಯೆಯು ಬೆಳೆಯುತ್ತಿದೆ. ವಿಜ್ಞಾನ ಶಾಸ್ತ್ರದ ಒಂದೊಂದು ಉಪಶಾಖೆಯೂ ಅಪಾರವಾಗಿ ಬೆಳೆಯುತ್ತಿದೆ-ಇಡೀ ಜೀವಮಾನವನ್ನೇ ವಿನಿಯೋಗಿಸಿದರೂ ಅದರ ಪೂರ್ಣ-ಜ್ಞಾನವನ್ನು ಪಡೆಯುವುದು ದುಸ್ಸಾಧ್ಯ. ಹೀಗೆ ವಿಸ್ತಾರಗೊಳ್ಳುತ್ತಿರುವ ವಿಜ್ಞಾನ-ಶಾಸ್ತ್ರದಲ್ಲಿ ಪರಿಣತರಾಗುವುದನ್ನೇ ಜೀವನದ ಮುಖ್ಯ ಗುರಿಯನ್ನಾಗಿಟ್ಟು-ಕೊಂಡು ಪ್ರಾಕೃತ ಶಕ್ತಿಗಳನ್ನು ವಶಗೊಳಿಸಿಕೊಳ್ಳುತ್ತ ಸಾಗಿದರೆ ಮಾನವ ಗುರಿಯನ್ನು (ನಿತ್ಯ ನಿರ್ದುಃಖ ಸುಖವನ್ನು) ಹೊಂದಲಾದೀತೆ? ಇಹಜೀವನ ಸುಖ ಸಾಮಗ್ರಿಗಳನ್ನು ಬೆಳೆಸಿಕೊಳ್ಳಬಹುದು-ಅಷ್ಟು ಮಾತ್ರದಿಂದ ಅಪೇಕ್ಷಿತ ನಿರ್ದುಃಖಾನಂದವು ಪ್ರಾಪ್ತವಾಗಲಾರದು-ತಾಪತ್ರಯಗಳು ನಿರ್ಮೂಲ-ವಾಗಲು ಶಕ್ಯವಿಲ್ಲ. ಭೋಗ ಸಾಮಗ್ರಿಗಳೊಂದಿಗೆ ವಿನಾಶಕರ ಅಸ್ತ್ರಾದಿಗಳ ನಿರ್ಮಾಣವೂ ನಡೆದಿರುತ್ತದೆಂಬುದನ್ನು ನೆನಪಿನಲ್ಲಿಡಬೇಕು. ಭೋಗ ಸಾಮಗ್ರಿಗಳ ಉತ್ಪಾದನೆಯೊಂದಿಗೆ ದುಃಖ ಕಾರಣಗಳೂ ಹುಟ್ಟಿಕೊಳ್ಳುತ್ತ-ವೆಂಬುದನ್ನೂ ಮನಗಾಣಬಹುದು. ಮಾನವನು ಸಮಾಜ ಜೀವಿಯು-ಏಕಾಂಗಿಯಾಗಿ ಜೀವಿಸಲಾರನು. ಪ್ರತಿ ವ್ಯಕ್ತಿಗೂ ಭೋಗ್ಯ ವಸ್ತುಗಳು (ಸುಖ ಸಾಧನಗಳು) ಸಮಾನವಾಗಿ ದೊರೆಯುವಂತೆ ಮಾಡುವ ಯತ್ನವು ಎಂದಿಗೂ ಕೈಗೂಡಲಾರದು. ದೇಹ ಸಾಮರ್ಥ್ಯ, ಬುದ್ಧಿಶಕ್ತಿ, ಧೈರ್ಯ ಸಾಹಸಾದಿ ಗುಣಗಳು ಎಲ್ಲ ಮಾನವರಲ್ಲಿ ಏಕಪ್ರಕಾರವಾಗಿಲ್ಲ-ಬಹುಪ್ರಕಾರದ ತರತಮ ಭಾವಗಳಿವೆ. ಅಧಿಕ ಸುಖಸಾಧನೆಗಳನ್ನು ದೊರಕಿಸಿಕೊಳ್ಳುವ ಯತ್ನದಲ್ಲಿ, ಪರಸ್ಪರ ವ್ಯಕ್ತಿಗಳಲ್ಲಿ-ಜನಾಂಗಗಳಲ್ಲಿ ಸಹ ಮಾತ್ಸರ್ಯಾದಿಗಳಿಂದ ಘೋರ ಘರ್ಷಣೆಗಳಾಗುವುದರಲ್ಲಿ ಸಂಶಯವಿಲ್ಲ. ಶಕ್ತರಾದವರು, ಅಶಕ್ತರನ್ನು ತಿಳಿದು

ಸ್ವಾರ್ಥಸಾಧಕರಾಗುತ್ತಾರೆ. ವಿಷಯಭೋಗಜನ್ಯ ಸುಖವು ತೃಪ್ತಿಜನಕವಲ್ಲ. ಅಗ್ನಿಯಲ್ಲಿ ಹೋಮಿಸುವ ಘೃತದಂತೆ ವಿಷಯಭೋಗವು ಭೋಗದಾಶೆಯನ್ನು ಪ್ರಜ್ವಲಗೊಳಿಸುತ್ತದೆ. ಇಷ್ಟಿದ್ದಾಗ ಮತ್ತಷ್ಟು ಬೇಕು; ಅಷ್ಟೂ ದೊರೆತರೆ ಇನ್ನೂ ಬೇಕೆಂಬ ದುರಾಶೆಯು ತಪ್ಪುವುದಿಲ್ಲ. ತನ್ನ ಯೋಗ್ಯತೆಗೆ ದೊರೆತದ್ದರಿಂದ ಸಂತುಷ್ಟನಾಗಬೇಕೆಂಬ ನೀತಿಗೆ ಆಧಾರವಿಲ್ಲದಂತಾಗುತ್ತದೆ. ಸ್ವಾರ್ಥತ್ಯಾಗ, ಪ್ರಾಮಾಣಿಕತೆ, ಸತ್ಯ ಮೊದಲಾದ ಗುಣಗಳಿಗೆ ಜಗತ್ತಿನಲ್ಲಿ ಸ್ಥಾನವಿಲ್ಲ-ದಂತಾಗುತ್ತದೆ. ಅಸತ್ಯ , ಅನೀತಿ, ಪರಸ್ಪರ ಹಿಂಸೆ ಮೊದಲಾದವು ಜಗತ್ತನ್ನು ವ್ಯಾಪಿಸಿ, ಉಲ್ಬಣ ದುಃಖಕ್ಕೆ ಕಾರಣವಾಗುತ್ತವೆ. ಅಹಿಂಸೆ, ಸೌಜನ್ಯ, ಔದಾರ್ಯ, ದಯೆ, ಋಜುತ್ವ (ಮನ, ವಚನ, ಕ್ರಿಯೆಗಳಲ್ಲಿ ಏಕಪ್ರಕಾರತೆ) ಮೊದಲಾದವನ್ನು ಸದ್ಗುಣಗಳೆಂದು ವ್ಯವಹರಿಸುವುದು ಅರ್ಥಶೂನ್ಯ-ವಾಗುತ್ತದೆ. ತನ್ನಿಂದ ನಿರ್ಮಿತವಾದ ಯಂತ್ರಗಳಂತೆ, ಮಾನವನು ಒಂದು ಯಂತ್ರಪ್ರಾಯನಾಗುತ್ತಾನೆ. ಸದ್ಗುಣ, ಸಂಗೀತ, ಸಾಹಿತ್ಯ , ಸೌಂದರ್ಯ, ಪ್ರೇಮ, ವಿಶ್ವದ ಅನಂತ್ಯ ಮೊದಲಾದವುಗಳಿಂದ ಮಾನವನು ಆಕರ್ಷಿತನಾಗಿ ಆನಂದಿಸುವ ಭಾಗ್ಯವನ್ನು ಕಳೆದುಕೊಳ್ಳುತ್ತಾನೆ. ಇವುಗಳು ಮಾನವನನ್ನು ಏಕೆ ಆಕರ್ಷಿಸುವುವೆಂಬ ಮೂಲಕಾರಣವನ್ನು ವಿಜ್ಞಾನವು (Science) ಎಂದಿಗೂ ಕಾಣಲಾರದು. **'ಮಾನವ ಸ್ವಭಾವವು' ವಿಜ್ಞಾನದ ವ್ಯಾಪ್ತಿಯನ್ನು ಮೀರಿದ ವಸ್ತುವು. ಪ್ರಾಕೃತ (ಪ್ರಕೃತಿ ನಿರ್ಮಿತ) ವಾದರೂ ಅತಿ ಸೂಕ್ಷ್ಮವಾದ್ದರಿಂದ ಮನಸ್ತತ್ವವೂ ಸಹ ವೈಜ್ಞಾನಿಕ ಪ್ರಯೋಗಗಳಿಗೆ ಗೋಚರಿಸದು.** ಮನಃಶಾಸ್ತ್ರವು (Psychology) ವಿಜ್ಞಾನದ ಒಂದು ಶಾಖೆಯೆಂದು ಹೇಳುವವರಿದ್ದಾರೆ. ಅದಕ್ಕೆ ಯಾವ ವಿಧದ ವೈಜ್ಞಾನಿಕ ತಳಹದಿಯೂ (Scientific basic) ಇಲ್ಲವೆಂದು ತಿಳಿಯುವವರೂ ಇದ್ದಾರೆ. ಜಡ-ಮನಸ್ಸು (Matter and Spirit)ಗಳೆಂಬ ವಿಭಾಗವು, ಒಂದೇ ಮೂಲ ಜಡಶಕ್ತಿಯ ಸ್ಥೂಲ ಸೂಕ್ಷ್ಮ ವಿಕಾರ ನಿಮಿತ್ತವಾದುದಲ್ಲದೇ ವಿಲಕ್ಷಣ ಭಿನ್ನವಸ್ತು (ತತ್ವ)ಗಳೆಂಬ ಕಾರಣ-ದಿಂದಲ್ಲವೆಂಬ ವಾದವನ್ನು ಮಂಡಿಸುವ ವಿಜ್ಞಾನಿಗಳೂ ಇರುವರು. ಮನಸ್ಸು-ಚೇತನ (Mind and Spirit) ಗಳ ವ್ಯತ್ಯಾಸವನ್ನು ಒಪ್ಪದವರೂ ಇದ್ದಾರೆ. (Matter and energy ಅಥವಾ Matter and radiation) ಜಡಶಕ್ತಿ

ಅಥವಾ ಜಡ-ಪ್ರಸರಣ (ಒಂದು ಕೇಂದ್ರದಿಂದ ಉಷ್ಣತೆ ಮತ್ತು ಪ್ರಕಾಶ ಕಿರಣಾದಿಗಳು ಅಲೆಗಳ ರೂಪದಲ್ಲಿ ಹೊರಬಿದ್ದು ಹರಡಿಕೊಳ್ಳುವುದು) ಎಂಬೀರೂಪದ ಎರಡೇ ತತ್ವಗಳು ವಿಶ್ವದ ಮೂಲವೆಂದು ವಿಜ್ಞಾನಿಗಳು ತಿಳಿದಿದ್ದ ಒಂದು ಘಟ್ಟವೂ ಇತ್ತು. ಇವೆರಡೂ ಒಂದೇ ತತ್ವದ (ಮೂಲವಸ್ತುವಿನ) ರೂಪಾಂತರಗಳೆಂದು ಈಚೆಗೆ ಭಾವಿಸಲಾಗುತ್ತಿವೆ. ಇದು ಕೇವಲ (ಶುದ್ಧ) ಜಡವಾದವು (Stark materialism). ಈ ಮೂಲ ಜಡತ್ವವನ್ನು, ಒಂದು ದೃಷ್ಟಿಯಿಂದ; ವೇದಾಂತಿಗಳ 'ಪ್ರಕೃತಿ ತತ್ವ'ವೆನ್ನಬಹುದು ಮಾನವನು, ವಿಜ್ಞಾನ (Science)ದಿಂದ ಪ್ರಕೃತಿ ಸ್ವಾಮ್ಯವನ್ನು ಸಾಧಿಸುತ್ತ, ಸುಖ ಸಾಧನಗಳೆಂಬ ಭ್ರಮೆಯಿಂದ, ನಾನಾ ಐಹಿಕ ಸೌಕರ್ಯಗಳನ್ನು ಕಲ್ಪಿಸಿಕೊಳ್ಳುವುದರಲ್ಲಿಯೇ ಆಸಕ್ತನಾಗುತ್ತಿದ್ದಾನೆ. ಈ ವಿಧ ಸೌಕರ್ಯಗಳಿಂದ ಸುಖಾನುಭವವನ್ನು ಪಡೆಯುವ ಬದಲು, ಅಶಾಂತಿ ಮತ್ತು ದುಃಖಗಳನ್ನೇ ಹೆಚ್ಚಿಸಿಕೊಳ್ಳುತ್ತಿದ್ದಾನೆ. ಕೋಟ್ಯಾಧೀಶರೆಂಬ ಹಲವು ಶ್ರೀಮಂತರು, ಸರ್ವಪ್ರಾಣಿಗಳಿಗೆ ಸ್ವಭಾವ-ಸಿದ್ಧವಾದ ನಿದ್ರಾಸುಖದಿಂದ ಸಹ ವಂಚಿತರಾಗಿ, ಔಷಧದ ಸೇವನೆಯಿಂದ ನಿದ್ರೆಯನ್ನು ತಂದುಕೊಳ್ಳುವರೆಂಬ ಸತ್ಯವಾರ್ತೆಯು ಈ ವಿಷಯಕ್ಕೆ ಸ್ಪಷ್ಟವಾದ ನಿದರ್ಶನವಲ್ಲವೇ! ಗಗನಯಾತ್ರೆಯನ್ನು ಸಾಧಿಸಿ ಗ್ರಹ ನಕ್ಷತ್ರಗಳಲ್ಲಿ ಸಂಚರಿಸಿದರೂ ಮಾನವನಿಗೆ ಸುಖವು ದೊರೆಯದು. ಮನಃಶಾಂತಿಯೇ ಸುಖದ ಮೂಲವು. ಅಲ್ಲದಿದ್ದರೆ ಭೋಗ ಸಾಮಗ್ರಿಗಳಿಂದ ಸುಖ ದೊರೆಯುವುದೆಂತು ? ಸುಖವು ಆಂತರಿಕ ವಸ್ತು-ಹೊರಗಿನಿಂದ ಬರತಕ್ಕದ್ದಲ್ಲ. **ವಿಜ್ಞಾನವು ಬಹಿಃಪ್ರವೃತ್ತಿಯನ್ನು ಬೆಳೆಸುತ್ತದೆ- ಅಂತರ್ಮುಖಿಯಾದರೆ ಮಾತ್ರ ಮಾನವನಿಗೆ ಸುಖ ಲಭಿಸೀತು.**

ವಿಜ್ಞಾನದಿಂದ ಮಾನವನ ವಿಚಾರಶಕ್ತಿಯು ಬೆಳೆಯುತ್ತದೆಂಬುದು ನಿಜ. ಬುದ್ಧಿಯೂ ತೀಕ್ಷ್ಣವಾಗುತ್ತದೆ. ಪ್ರತಿ ಕಾರ್ಯಕ್ಕೂ ಕಾರಣವನ್ನು ತಿಳಿಯಬೇಕೆಂಬ ಹಂಬಲವು ಹೆಚ್ಚುತ್ತದೆ. ಕಾರಣಕ್ಕೆ ಕಾರಣಾಂತಗಳನ್ನು ಕಲ್ಪಿಸುತ್ತ, ಮೂಲ ಕಾರಣವನ್ನು ತಿಳಿಯಬೇಕೆಂಬ-ಸತ್ಯವನ್ನು ಕಾಣಬೇಕೆಂಬ ಗುರಿಯುಳ್ಳದ್ದು ವಿಜ್ಞಾನಶಾಸ್ತ್ರ, ಎಂಬಲ್ಲಿ ಸಂಶಯವಿಲ್ಲ. ತಾನು ಊಹೆಯಿಂದ ಕಲ್ಪಿಸಿದ ಕಾರಣವು ಸರಿಯೆಂದು ಪರೀಕ್ಷೆ ಪ್ರಯೋಗಗಳಿಂದ ಸ್ಥಿರಪಟ್ಟಾಗ, ವಿಜ್ಞಾನಿಗೆ

ಒಂದು ಪ್ರಕಾರದ ಉಲ್ಲಾಸ-ಆನಂದಗಳು ದೊರೆಯುತ್ತವೆಂಬುದೂ ನಿಜ. ಆದರೆ ಅವು ತಾತ್ಕಾಲಿಕವಾದವುಗಳು. ವಿಶ್ವದಲ್ಲಿ ಸಂಭವಿಸುವ (ಗ್ರಹ ನಕ್ಷತ್ರಾದಿಗಳ ಚಲನ, ಪ್ರಕಾಶಗಳು-ಭೂಮಿಯಲ್ಲಿಯೇ ಸಂಭವಿಸುವ) ನಾನಾ ಘಟನೆಗಳ ಕಾರಣವನ್ನೂ, ಅದಕ್ಕೆ ಕಾರಣಾಂತರಗಳನ್ನೂ, ವಿಜ್ಞಾನಿಗಳು ಸೂಕ್ಷ್ಮ ಯಂತ್ರೋಪಕರಣಗಳಿಂದ ಅರಿತು, ಪ್ರಾಕೃತ ಶಕ್ತಿ ವಿಶೇಷಗಳು ಪಾಲಿಸುವ ನಿಯಮಗಳನ್ನು ಕಂಡುಹಿಡಿಯಬಹುದು. ಆದರೆ ಆ ಕಾರಣಗಳು ಹಾಗೇಕೆ ಪ್ರವೃತ್ತವಾಗುತ್ತವೆ-ಆ ನಿಯಮಗಳನ್ನೇಕೆ ಪಾಲಿಸುತ್ತವೆ ಎಂಬುದನ್ನು ಮಾತ್ರ ಎಂದಿಗೂ ತಿಳಿಯಲಾರರು. ಸಂಗ್ರಹವಾಗಿ ಹೇಳುವುದಾದರೆ, ವಿಜ್ಞಾನಿಗಳು ವಸ್ತು ಸ್ಥಿತಿಯನ್ನು ತಿಳಿದು ನಿರೂಪಿಸಬಲ್ಲರು-ಅಲ್ಲದೇ ಮೂಲಕಾರಣವಾದ ಜ್ಞಾನವಿಶಿಷ್ಟವಾದ ವಿಚಿತ್ರ ಶಕ್ತಿಯನ್ನು ತಿಳಿಯಲಾರರು. ಪ್ರಕೃತಿಯನ್ನೂ, ಅದರ ಸೂಕ್ಷ್ಮ ಸ್ಥೂಲ ವಿಕಾರಗಳನ್ನೂ ಪ್ರಚೋದಿಸಿ, ನಿಯಂತ್ರಿಸಿ ಸಕಲ ಜಗದ್ವ್ಯಾಪಾರಗಳನ್ನೂ ನಡೆಯಿಸುವ ಅದ್ಭುತ ಶಕ್ತಿ (ಚೇತನ) ವಿಶೇಷವು ಇರಬೇಕೆಂದು ಊಹಿಸಬಹುದಾದರೂ, ಅದನ್ನು ಮಾನವನು ತನ್ನ ಮನ ಮೊದಲಾದ ಯಾವ ಇಂದ್ರಿಯಗಳಿಂದಲೂ ಕಾಣಲಾರನು. ಅದು ಅತೀಂದ್ರಿಯವಾದುದು - ಅವ್ಯಕ್ತವು. ಪೂರ್ಣವು - ಸ್ವತಂತ್ರವು - ಸ್ವೇಚ್ಛೆಯಿಂದ ಮಾತ್ರ ಅನ್ಯರಿಗೆ ಗೋಚರಿಸುವುದು. ವಿಜ್ಞಾನದ ವ್ಯಾಪ್ತಿಗೆ ಒಳಪಟ್ಟಿದ್ದಲ್ಲ. ಆದ್ದರಿಂದ ವಿಜ್ಞಾನಿಗಳು ಅದನ್ನು ಅರಿಯುವ ಅಥವಾ ಕಾಣುವ ಸಂಭವವೇ ಇಲ್ಲ.

ಹೀಗೆ ದೇಹೇಂದ್ರಿಯಗಳಿಂದ ಭೋಗಿಸಲ್ಪಡಬಹುದಾದ ನಾನಾ ಸಾಮಗ್ರಿಗಳನ್ನು ವಿಜ್ಞಾನದಿಂದ ಸಿದ್ಧಗೊಳಿಸಿದರೂ, ಮಾನವನು ಸಹಸ್ರಾರು ವರ್ಷಕಾಲ ಬದುಕುವಂತಾದರೂ, ಹುಟ್ಟಿದ ಯಾರೂ ಮೃತರಾಗದಂತೆಯೂ ಮಕ್ಕಳನ್ನೇ ಪಡೆಯದಂತೆ ಮಾಡಿಕೊಂಡರೂ ಅಪೇಕ್ಷಿತ ಸುಖವು ಮಾತ್ರ ದೊರೆಯಲಾರದು. ನೈತಿಕ ಜೀವನ, ಪರಸ್ಪರ ಪ್ರೇಮ, ಪ್ರಾಣಿದಯೆ, ಪರೋಪಕಾರ ಮೊದಲಾದವುಗಳು ಕಾಲಕ್ರಮದಲ್ಲಿ ಜಗತ್ತಿನಿಂದ ಅದೃಶ್ಯ-ವಾಗುವುವು. ತದ್ವಿಪರೀತವಾದ ಸ್ವಚ್ಛಂದ ವೃತ್ತಿ, ವಂಚಕತನ, ಮಾತ್ಸರ್ಯ, ದುರಹಂಕಾರ, ಸ್ವಾರ್ಥತೆ. ಕಾಮಕ್ರೋಧಾದಿಗಳು ತಾಂಡವಿಸುವುವು ವಿನಾಶಕ

ಶಸ್ತ್ರಾಸ್ತ್ರಗಳ ನಿರ್ಮಾಣವು ತಡೆಯಿಲ್ಲದೇ ಸಾಗುವುದು. ಈ ಭೂಲೋಕವೆಲ್ಲ ಒಂದೇ ಸರ್ಕಾರಕ್ಕೊಳಪಟ್ಟರೂ, ನಾನಾ ಪ್ರದೇಶದ ವಿವಿಧ ಪ್ರಜೆಗಳ ಆಶೆ ಆಕಾಂಕ್ಷೆಗಳು ಭಿನ್ನ ಭಿನ್ನಗಳಾಗಿಯೇ ಉಳಿದು, ಅವುಗಳನ್ನು ಈಡೇರಿಸಿ ಶಾಂತಿಯನ್ನು ಸ್ಥಾಪಿಸುವುದು ಆ ಒಂದು ಸರ್ಕಾರಕ್ಕೆ ಎಂದಿಗೂ ಶಕ್ಯವಾಗದು. ಸಮತಾವಾದವು, ಮನುಷ್ಯ ಸ್ವಭಾವಗಳಲ್ಲಿ ಸಮತ್ವವನ್ನು ಸಾಧಿಸಲಾರದು. ವಿಚಿತ್ರ ವೈವಿಧ್ಯವುಳ್ಳ ಜಗತ್ತಿಗೆ ವಿಜ್ಞಾನವು ಎಷ್ಟು ಪ್ರಗತಿಗೊಂಡರೂ, ಸುಖಶಾಂತಿಗಳನ್ನು ದೊರಕಿಸಲು ಸಮರ್ಥವಲ್ಲ. ಇಂದ್ರಿಯಾತೀತವಾದ ವಿಶಾಲ ಜಗತ್ತಿನ ತುದಿಯನ್ನು ಸಹ ಸ್ಪರ್ಶಿಸದ ಜಡವಾದವು (materialism) ಎಷ್ಟು ಮುಂದರಿದರೂ ಮಾನವನ ಗುರಿಯು ದೂರದಲ್ಲಿಯೇ ಉಳಿಯುವುದು. ದೇಹ ಭಿನ್ನವಾದ ಜ್ಞಾನಶಕ್ತಿಯುಳ್ಳ ಚೇತನ ಸ್ವರೂಪವನ್ನು ತಿಳಿಯಬೇಕು. ವೈಜ್ಞಾನಿಕ ಪ್ರಗತಿಯನ್ನು ಸಾಧಿಸುತ್ತಿರುವುದೂ ಚೇತನವಲ್ಲವೇ! ಅಪಾರ ವಿಶ್ವದಲ್ಲಿನ ಅದ್ಭುತ ಶಕ್ತಿಗಳನ್ನು ನಿಯಂತ್ರಿಸುವ ಪರಮ ಚೇತನವನ್ನೂ ತಿಳಿಯಬೇಕು. ಈ ದೇಹಗತ ಚೇತನ ಮತ್ತು ಪರಮ ಚೇತನರ ಪರಸ್ಪರ ಸಂಬಂಧವನ್ನು ನಿರ್ಧರಿಸಿಕೊಳ್ಳಬೇಕು. ಉಭಯ ಚೇತನಗಳ ಸ್ವಭಾವ ಸಂಬಂಧಗಳನ್ನು ಅತಿಕ್ರಮಿಸದಂತೆ ದೇಹಗತ ಚೇತನನು (ಜೀವನು) ತನ್ನ ಜೀವಿತವನ್ನು ಸಾಗಿಸಬೇಕು. ತನ್ನ ಸ್ವಭಾವ ಧರ್ಮವನ್ನು (ಸ್ವಯೋಗ್ಯತೆಯನ್ನು) ಎಂದಿಗೂ ಅತಿಕ್ರಮಿಸಬಾರದು. ತನ್ನ ಸ್ವಭಾವ ಸ್ಥಿತಿಯನ್ನು ಹೊಂದಿ, ನಿತ್ಯವೂ ಆ ಸ್ಥಿತಿಯಲ್ಲಿ ಉಳಿಯುವುದೇ ಮಾನವನ ಗುರಿ. ಇದನ್ನು ಸಾಧಿಸಿದಾಗ, ಜಡದೇಹಗಳ ಸಂಬಂಧವಾಗುವುದು ನಿಂತು ಹೋಗುವುದು-ಸ್ವಸ್ವರೂಪದ ಆವಿರ್ಭಾವದಿಂದ ನಿತ್ಯಾನಂದ ಸ್ಥಿತಿಯನ್ನು ಹೊಂದುವನು. ಹೀಗೆಂಬುದೇ ಸತ್ಯವೆಂದು ವೇದಗಳು, ವೇದಜ್ಞಾನಿಗಳಾದ ಪ್ರಾಚೀನ ಋಷಿವರ್ಯರು, ಅನೇಕ ಅದ್ಭುತಗಳಿಂದ ಜಗತ್ತನ್ನು ಬೆರಗುಗೊಳಿಸಿದ ಪ್ರಾಚೀನ ಯೋಗೀಶ್ವರರು, ಕಾಲಕಾಲಕ್ಕೆ ನಮ್ಮ ಈ ಭರತ ಖಂಡದಲ್ಲಿ ಅವತರಿಸಿ ಬಂದ ಮಹಾತ್ಮರು, ಸಾಧುಸತ್ಪುರುಷರು ಘೋಷಿಸಿರುವರು. ಸತ್ಯವನ್ನು ತಿಳಿದು, ಹಿತ-ಅಹಿತಗಳಿಗೆ ಕಾರಣವಾದ ಧರ್ಮ-ಅಧರ್ಮಗಳನ್ನೂ ತಿಳಿದು, ಧರ್ಮಾಚರಣಪರ-ನಾಗುವುದೇ ಮಾನವ ಗುರಿಯನ್ನು ಸಾಧಿಸಬಲ್ಲದು. ಪ್ರಖ್ಯಾತ ವಿಜ್ಞಾನಿಯಾದ

ಐನ್‌ಸ್ಟಿನ್ ಮಹಾಶಯನೂ, **'Science without religion is lame; Religion without science is blind'**–**'ಜ್ಞಾನಯುಕ್ತ ಧರ್ಮಾಚರಣೆ-ಯಿಲ್ಲದ ವಿಜ್ಞಾನವು (ಗುರಿಯನ್ನು ಮುಟ್ಟಲಾರದು) ಹೇಳವನಂತೆ; ವಿಜ್ಞಾನವಿಲ್ಲದ (ವಿಚಾರರಹಿತ-ಸಯುಕ್ತಿಕ ಜ್ಞಾನವಿಲ್ಲದ) ಧರ್ಮಾಚರಣೆಯು ಕಣ್ಣಿಲ್ಲದ (ಸತ್ಯವನ್ನು-ತತ್ವವನ್ನು ಕಾಣಲಾರದ) ಕುರುಡನಂತೆ'** ಎಂಬುದಾಗಿ ತನ್ನ ನಿರ್ಧಾರವನ್ನು ನಿರೂಪಿಸಿರುವನು. ಪ್ರಮಾಣದಿಂದ ದೃಢೀಕರಿಸಲ್ಪಟ್ಟ ಧರ್ಮ-ಜ್ಞಾನವೇ ನಿತ್ಯಸುಖವನ್ನು ಸಾಧಿಸಬಲ್ಲದು-ಅಂಧಶ್ರದ್ಧೆಯಲ್ಲ; ಆತ್ಮ ಜ್ಞಾನ ಶೂನ್ಯವಾದ ಜಗತ್ತಿನ ವಿಜ್ಞಾನವು, ಎಷ್ಟು ಗಾಢವೂ-ವಿಸ್ತಾರವೂ ಆಗಿದ್ದರೂ, ಗುರಿಯನ್ನು ಸಾಧಿಸಲಾರದು. ವಿಜ್ಞಾನವು ಕೇವಲ ಬಾಹ್ಯ ಜಗದ್ವಿಷಯಕವು (objective) ; ಆತ್ಮಜ್ಞಾನವು ತನ್ನನ್ನೇ ಕುರಿತಾದುದು (ವಿಷಯವಾಗುಳ್ಳದ್ದು) (subjective). ಐನ್‌ಸ್ಟಿನ್ನನು ಹೀಗೂ ನುಡಿದಿರುವನು– 'The normal objective of my thought affords no insight into the dark places of human will and feeling' – ಎಂದರೆ, 'ನನ್ನ ಆಲೋಚನಾಶಕ್ತಿಗೆ ಗೋಚರಿಸುವ ಯಾವ ಯಥಾಸ್ಥಿತ (normal) ಗುರಿಯೂ ಅಥವಾ ವಿಷಯವೂ, ಮಾನವನ ಸಂಕಲ್ಪ-ವಿಕಲ್ಪ, ಆಶೆ-ಆಕಾಂಕ್ಷೆಗಳ, ಹಾಗೂ ಅನುಕಂಪಾದಿ ನಾನಾ ಮನೋಭಾವಗಳ (ಸಂವೇದನೆಗಳ) ಒಳಗಿನ ಗಾಢಾಂಧಕಾರದೊಳಗೆ ಯಾವ ವಿಧ ಪ್ರಕಾಶವನ್ನೂ ಬೀರುವುದಿಲ್ಲ-ಪರಿಜ್ಞಾನ-ವನ್ನುಂಟು ಮಾಡುವುದಿಲ್ಲ.' ಆದ್ದರಿಂದ **ಚೇತನಾದಿ ಅತೀಂದ್ರಿಯ ವಸ್ತುಗಳು ವಿಜ್ಞಾನ ಗೋಚರವಲ್ಲವೆಂದು ತಿಳಿಯಬಹುದಾಗಿದೆ.**

ಹೀಗೆ ಆತ್ಮಜ್ಞಾನವನ್ನು ದೊರಕಿಸಲು ಅಸಮರ್ಥವಾದ ಕೇವಲ ಭೌತಿಕ (ಪ್ರಾಕೃತ ಜಗತ್ಸಂಬಂಧಿಯಾದ) ವಿಜ್ಞಾನದಿಂದ, ಇಹಸುಖವೂ ಲಭಿಸದೇ ಇರುತ್ತಿರಲು, ಮಾನವ ಗುರಿಯಾದ ನಿತ್ಯಸುಖವನ್ನು ಸಾಧಿಸಬಹುದೆಂದು ತಿಳಿದು, ಮಿತಿಮೀರಿದ ವೈಜ್ಞಾನಿಕ ಪ್ರಗತಿಗಾಗಿಯೇ ಸರ್ವ ಪ್ರಯತ್ನದಿಂದ ಆ ದಿಕ್ಕಿನಲ್ಲಿಯೇ ಧಾವಿಸುವುದು ಬಿಸಿಲು ಕುದುರೆಯನ್ನು ಬೆನ್ನು ಹತ್ತಿದಂತೆಯೇ ಸರಿಯೆಂಬ ನಿಶ್ಚಯವನ್ನು, ವಿವೇಕಪೂರ್ಣ ವಿಮರ್ಶೆ-ಯಿಂದ ಮುಟ್ಟಬಹುದು.

## ಪರಿಚ್ಛೇದ ೪

# ಅತೀಂದ್ರಿಯ ವಿಶ್ವ

## ಅದೃಷ್ಟ-ಜೀವ-ಈಶ್ವರ

ವಿಶ್ವದಲ್ಲಿ ಅತೀಂದ್ರಿಯ ವಸ್ತುಗಳಿವೆಯೇ? ದೇಹಭಿನ್ನರಾದ ಚೇತನ-ರಿರುವರೇ? ಜಗತ್ತಿನ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ಕಾರಣವಾದ ಪರಮ ಚೇತನವೊಂದಿರುವುದೇ? ಇರುವುದಾದರೆ ಅದು, ಸ್ವತಂತ್ರವೂ ಸರ್ವಜ್ಞವೂ, ನಿತ್ಯವೂ, ಅಚಿಂತ್ಯಾದ್ಭುತ ಶಕ್ತಿಯುಳ್ಳದ್ದೂ ಆಗಿರಬೇಕಲ್ಲವೇ? ಪ್ರತಿ ಪ್ರಾಣಿ ದೇಹದಲ್ಲಿದ್ದು ನಾನಾ ಪ್ರಕಾರದ ಜ್ಞಾನವಿಶಿಷ್ಟ ಕಾರ್ಯಗಳನ್ನು ನಿರ್ವಹಿಸುವ ದೇಹಭಿನ್ನ ಚೇತನಗಳ ಸ್ವಭಾವ ಧರ್ಮಗಳೇನು? ಇತ್ಯಾದಿ ಸಮಸ್ಯೆಗಳಿಗೆ ಸಮರ್ಪಕವಾದ ಉತ್ತರಗಳನ್ನು ದೊರಕಿಸಿಕೊಳ್ಳಬೇಕಾದುದು ಅವಶ್ಯಕ-ವಲ್ಲವೇ? ಈ ಸಮಸ್ಯೆಗಳ ಪರಿಹಾರೋಪಾಯವನ್ನು ನಮ್ಮ ಪ್ರಾಚೀನ ಜ್ಞಾನಿಗಳು ಹೀಗೆ ನಿರೂಪಿಸುವರು :—ಈ ವಿಷಯಕ ಯಥಾರ್ಥ ಜ್ಞಾನಕ್ಕಾಗಿ (ಸತ್ಯವನ್ನು ತಿಳಿಯಲು) ವೇದಾದಿ ಶಾಸ್ತ್ರಗಳನ್ನೇ ಶರಣು ಹೊಂದಬೇಕು. ಇವುಗಳ ಪ್ರಾಮಾಣ್ಯವನ್ನೂ, ಅವುಗಳಿಂದ ಬೋಧ್ಯವಾದ ಪ್ರಮೇಯಗಳನ್ನೂ ತಿಳಿದು ಗ್ರಹಿಸಲು, ಸದ್ಗುರುವನ್ನು ಆಶ್ರಯಿಸಿ ಅಭ್ಯಾಸ ಮಾಡಬೇಕಾದುದೂ ಗುರ್ವನುಗ್ರಹವನ್ನು ಸಂಪಾದಿಸಬೇಕಾದುದೂ ಅತ್ಯವಶ್ಯಕ. ಶಾಸ್ತ್ರಗಳಾದರೂ, ಈಶ್ವರಾದಿ ಅತೀಂದ್ರಿಯ ವಸ್ತುಧರ್ಮಗಳನ್ನು ಅಂಧಶ್ರದ್ಧೆಯಿಂದ ನಂಬಿ-ಕೊಳ್ಳಬೇಕೆಂದು ಹೇಳದೇ ಅನೇಕ ನಿದರ್ಶನಗಳನ್ನು ಮುಂದಿಟ್ಟು ಯುಕ್ತಿಯುಕ್ತ-ವಾಗಿ ಪ್ರತಿಪಾದಿಸುತ್ತವೆ. ಯಥಾರ್ಥಜ್ಞಾನ ಸಾಧನಗಳಾದ ಪ್ರಮಾಣಗಳು, ಪ್ರತ್ಯಕ್ಷ-ಅನುಮಾನ-ಆಗಮಗಳೆಂದು ಮೂರು ವಿಧವಾಗಿವೆ. ತಾರ್ಕಿಕರೇ ಮೊದಲಾದವರು ಹೇಳುವ ಅನ್ಯಪ್ರಮಾಣಗಳು ಈ ಮೂರರಲ್ಲಿ ಸಮಾವೇಶ-ಗೊಳ್ಳುತ್ತವೆ. ಪ್ರಮಾಣ ಲಕ್ಷಣಗಳನ್ನು ಇಲ್ಲಿ ನಿರೂಪಿಸುವುದು, (ವಿಷಯಾಂತರ ಪ್ರವೇಶ ಶಂಕೆಯಿಂದ) ಅಪ್ರಕೃತವೆನಿಸುವುದು. ದೋಷರಹಿತವಾದ, ಇಂದ್ರಿಯ-ವಿಷಯ ಸಂಬಂಧದಿಂದ ಹುಟ್ಟುವ ಜ್ಞಾನವು ಪ್ರತ್ಯಕ್ಷವು. ಪ್ರತ್ಯಕ್ಷದಿಂದ ಇಂದ್ರಿಯಾತೀತ ವಸ್ತುಗಳು ಸಿದ್ಧಿಸುವುದಿಲ್ಲ. ಅನುಮಾನದಿಂದ

(ಯುಕ್ತಿ-ತರ್ಕ; reason-logic) ಇಂದ್ರಿಯಾತೀತ ವಸ್ತುಗಳನ್ನು ಸಾಧಿಸ-ಬಹುದಾದರೂ ತದ್ವಿರುದ್ಧವನ್ನೂ ಸಾಧಿಸಲು ಬರುತ್ತದೆ. ಆಗಮ ಸಹಾಯವಿಲ್ಲದ ಕೇವಲ ತರ್ಕವು ಯಾವ ನಿಶ್ಚಯವನ್ನೂ ಸಾಧಿಸಲಾರದು. ಇದನ್ನೇ ಶುಷ್ಕ ತರ್ಕವೆನ್ನುವರು. ಹೀಗೆ ಪ್ರತ್ಯಕ್ಷ ಅನುಮಾನಗಳಿಂದ ಅತೀಂದ್ರಿಯ ವಸ್ತುಗಳ ಇರುವಿಕೆಯು ಸಿದ್ಧಿಸುವುದಿಲ್ಲವಾದ್ದರಿಂದ, ಅವು ಇರುವುದಾದರೆ ಆಗಮ ಪ್ರಮಾಣದಿಂದಲೇ ಸಿದ್ಧಿಸಬೇಕೆಂದು ಪರಿಶೇಷ-ದಿಂದಲೂ ಪ್ರಾಪ್ತವಾಗುತ್ತದೆ. ಸತ್ಯವನ್ನೇ ಬೋಧಿಸುವ ವಾಕ್ಯವು ಆಗಮವು. **ಪುರುಷ ಕೃತವಲ್ಲದ ಅನಾದಿನಿತ್ಯ ವೇದವಾಕ್ಯಗಳು ಶ್ರೇಷ್ಠ ಪ್ರಮಾಣಗಳೆಂದು ಆಸ್ತಿಕರ ವಾದ.** ಪುರುಷ ನಿರ್ಮಿತ ವಾಕ್ಯಗಳು ಹಾಗಲ್ಲ. ಪುರುಷನಲ್ಲಿರುವ ಅಜ್ಞಾನಾದಿ ದೋಷಗಳು ಆತನ ವಾಕ್ಯಗಳಲ್ಲಿರುತ್ತವೆಂಬುದು ಲೋಕಾನುಭವ ಸಿದ್ಧವಾಗಿದೆ. ಯಾವನೊಬ್ಬ ಪುರುಷನನ್ನು ಸರ್ವಜ್ಞನೆಂದು ಸಾಧಿಸಲು ಬರುವುದಿಲ್ಲ. ಎಲ್ಲರೂ, ತಂತಮ್ಮ ಮತಾಚಾರ್ಯರನ್ನು ಸರ್ವಜ್ಞರೆಂದು ಬಗೆಯುತ್ತಾರೆ. ಆದರೆ ಅವರೆಲ್ಲರೂ ಸರ್ವಜ್ಞರಲ್ಲ. ಏಕೆಂದರೆ ಅವರಲ್ಲಿ ಏಕವಾಕ್ಯತೆಯಿಲ್ಲ. ಅಷ್ಟು ಮಾತ್ರವಲ್ಲ-ಪರಸ್ಪರ ವಿರುದ್ಧವಾದ ಅಭಿಪ್ರಾಯ-ಗಳು, ಮುಖ್ಯ ವಿಷಯಗಳಲ್ಲಿ ಸಹ, ಎದ್ದು ತೋರುತ್ತವೆ. ನಿತ್ಯವಾದ ಪುರುಷಕೃತವಲ್ಲದ (ಅಪೌರುಷೇಯ) ವಾಕ್ಯಗಳಲ್ಲಿ ಯಾವ ದೋಷವೂ ಇರಲವಕಾಶವಿಲ್ಲ. **ವೇದಗಳು ಈ ಪ್ರಕಾರದ ನಿರ್ದುಷ್ಟ ಪ್ರಮಾಣಗಳೆಂದು ತತ್ವವಾದಿಗಳಾದ ಆಸ್ತಿಕರು ಅಂಗೀಕರಿಸುತ್ತಾರೆ.** ವೇದಾರ್ಥಗಳನ್ನೇ ನಿರೂಪಿಸುವ ಭಾರತ, ಪಂಚರಾತ್ರ, ಮೂಲರಾಮಾಯಣಗಳ ಸಮೇತವಾದ ಋಕ್, ಯಜು, ಸಾಮ, ಅಥರ್ವಗಳೆಂಬ ನಾಲ್ಕು ವೇದಗಳು 'ಶಾಸ್ತ್ರ'ವೆಂದು ಕರೆಯಲ್ಪಡುತ್ತವೆ. ಮತ್ತು ಇವುಗಳಿಗೆ ವಿರೋಧವಿಲ್ಲದಂತೆ ವಿಷಯಗಳನ್ನು ಪ್ರತಿಪಾದನೆಮಾಡುವ ಪೌರುಷೇಯ ಗ್ರಂಥ (ವಾಕ್ಯ ಸಮೂಹ)ಗಳು ಸಹ ಶಾಸ್ತ್ರಗಳೇ ಮತ್ತು ಇವುಗಳ ಸಮೂಹವೇ 'ಆಗಮ'ವೆಂಬ ನಾಮದ ಮೂರನೇ ಪ್ರಮಾಣವು.

ಆಗಮ ಪ್ರಮಾಣವನ್ನು ಬಿಟ್ಟರೆ ನಾಸ್ತಿಕವಾದವೇ ನಿಲ್ಲುವುದು-ಅನ್ಯ ಪ್ರಮಾಣಗಳಿಂದ ಇಂದ್ರಿಯಾತೀತಗಳಾದ ಅದೃಷ್ಟ-ಜೀವ-ಈಶ್ವರಾದಿಗಳು

ಸಿದ್ಧಿಸುವುದಿಲ್ಲವಾದ್ದರಿಂದ. ಪ್ರಾಕೃತವಾದರೂ, ಸೂಕ್ಷ್ಮತರಗಳಾದ ಮಹತ್ತತ್ತ್ವ, ಸತ್ತ್ವರಜಸ್ತಮೋಗುಣ ಮೊದಲಾದವು ಸಹ ಇಂದ್ರಿಯಾತೀತಗಳೇ. ಅಪ್ರಾಕೃತ-ಗಳಾದ, ಜೀವಚೇತನ, ಈಶ್ವರ, ಅದೃಷ್ಟನಿಯಾಮಕ ಚೇತನವರ್ಗ ಮೊದಲಾದ ವಸ್ತುಗಳು ಸರ್ವಪ್ರಕಾರದಿಂದ ಅತೀಂದ್ರಿಯಗಳೇ. ಆಗಮ ಪ್ರಾಮಾಣ್ಯ-ವನ್ನುಳಿದು ಆಸ್ತಿಕವಾದವೂ ನಿಲ್ಲದು. ಹೀಗೆಂದ ಮಾತ್ರಕ್ಕೆ, ಪ್ರತ್ಯಕ್ಷ ಮತ್ತು ಅನುಮಾನ ಪ್ರಮಾಣಗಳಿಂದ, ಆಸ್ತಿಕ ವಾದವನ್ನು ಸ್ಥಾಪಿಸಲು, ಯಾವ ಸಹಾಯವೂ ದೊರೆಯದೆಂದು ತಿಳಿಯಲಾಗದು. ಆಗಮೋಕ್ತ ಅತೀಂದ್ರಿಯ ವಸ್ತುಗಳಿರುವುವೆಂಬಲ್ಲಿ ಮತ್ತು ಆಗಮ ಸಹಕೃತ ಅನುಮಾನಗಳು ಯಥಾರ್ಥಜ್ಞಾನಜನಕಗಳೆಂಬಲ್ಲಿ, ಪ್ರತ್ಯಕ್ಷ ಅನುಮಾನಗಳು ಸುಸ್ಪಷ್ಟ ಜ್ಞಾಪಕಗಳಾಗುತ್ತವೆ. ಆದ್ದರಿಂದ, ಈ ಪ್ರಕಾರದ ಸಹಕಾರವನ್ನು ವಿಜ್ಞಾನಿಗಳಿಂದ ಸಹ ಅಂಗೀಕೃತವಾದ ಪ್ರಾಮಾಣ್ಯವುಳ್ಳ ಪ್ರತ್ಯಕ್ಷ ಅನುಮಾನಗಳಿಂದ ಪಡೆದು, ಹೇರಳವಾದ ದೃಷ್ಟಾಂತಗಳಿಂದ ನಾಸ್ತಿಕವಾದವನ್ನು ನಿರಾಕರಿಸಬಹುದು. ಉದಾಹರಣೆಗಾಗಿ ಈ ಮುಂದೆ ಕೆಲವು ದೃಷ್ಟಾಂತಗಳನ್ನು ವಿಮರ್ಶಿಸಲಾಗುತ್ತದೆ.

(೧) ಪುರುಷ ರೇತಸ್ಸು ನೂತನ ಶರೀರಕ್ಕೆ ಕಾರಣವು. ಅಲ್ಲದಿದ್ದರೆ ಸಂತಾನ ಪ್ರಾಪ್ತಿಗಾಗಿ ಸ್ತ್ರೀಯರಲ್ಲಿ ರೇತಸ್ಸೇಚನೆ ಮಾಡುವ ಪ್ರವೃತ್ತಿಯೇ ಕೂಡುವುದಿಲ್ಲ. ಇದರಿಂದ, 'ರೇತಸ್ಸೇಕ ಮಾಡಿದರೆ ಶರೀರೋತ್ಪತ್ತಿ ; ಇಲ್ಲವಾದರೆ ಇಲ್ಲ' ಎಂಬ ಅನುಮಾನಕ್ಕೆ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಶರೀರಕ್ಕೆ ರೇತಸ್ಸು ಕಾರಣ-ವೆಂಬುದು ಪ್ರತ್ಯಕ್ಷಸಿದ್ಧವಲ್ಲ. ಮೃತಶರೀರದಲ್ಲಿ ಬಿಡಲ್ಪಟ್ಟ ರೇತಸ್ಸು ಶರೀರವಾಗಿ ಪರಿಣಾಮ ಹೊಂದುವುದಿಲ್ಲ; ಸಜೀವ ದೇಹದಲ್ಲಿ ಸಹ ಎಲ್ಲ ಕಾಲದಲ್ಲಿ ಎಲ್ಲರಲ್ಲಿ ಶರೀರೋತ್ಪತ್ತಿಯಾಗುವುದಿಲ್ಲ-ಬಂಜೆ ಮೊದಲಾದವರಲ್ಲಿ ಯಾವ ಕಾಲಕ್ಕೂ ಆಗುವುದಿಲ್ಲ. ರೇತಸ್ಸೇಚನ ಮಾತ್ರದಿಂದ, ಬಂಜೆಯಲ್ಲದಿದ್ದರೂ ಗರ್ಭಧಾರಣವಾಗುವುದಿಲ್ಲ. ಇದರಿಂದ, ಶರೀರ ಪ್ರಾಪ್ತಿಗಾಗಿ ಪುರುಷ-ರೇತಸ್ಸನ್ನಾಶ್ರಯಿಸಿದ ಅದೃಷ್ಟಸಹಿತ ಜೀವನೊಬ್ಬನಿರಬೇಕು ಮತ್ತು ಆ ರೇತಸ್ಸು ಶರೀರವಾಗಿ ಪರಿಣಾಮ ಹೊಂದುವಂತೆ ಪ್ರೇರಿಸುವ ಈಶ್ವರನಿರಬೇಕು (ನಿಯಾಮಕ ಶಕ್ತಿ ಇರಬೇಕು) ಎಂದು ಸಿದ್ಧವಾಗುತ್ತದೆ. ಬಂಜೆಯಲ್ಲಿ ಗರ್ಭಕೋಶದ ಪರಿಸ್ಥಿತಿಯಲ್ಲಿ ದೋಷವಿರುವುದೆಂದೂ, ಆ ದೋಷದ

ಸ್ವಭಾವವನ್ನು ವಿಜ್ಞಾನಿಯು ಹೇಳಬಹುದಾದರೂ, ಆ ದೋಷದ ಮೂಲ-ಕಾರಣವನ್ನಾಗಲಿ, ಆ ಪರಿಸ್ಥಿತಿಯು ಆ ಸ್ತ್ರೀಯಲ್ಲಿಯೇ ಏಕೆ ಉಂಟಾಯಿ-ತೆಂಬುದನ್ನಾಗಲಿ ಹೇಳಲಾರನು-ತಿಳಿಯಲಾರನು. ಹೀಗೆಯೇ, ಈ ವಿಧ ಗರ್ಭ ದೋಷವಿಲ್ಲದ ಸ್ತ್ರೀಯರಲ್ಲಿ ರೇತಸ್ಸೇಚನದಿಂದ ಏಕೆ ಗರ್ಭಧಾರಣೆ-ಯಾಗುವುದಿಲ್ಲವೆಂಬುದರ ಮೂಲಕಾರಣವನ್ನೂ ಹೇಳಲಾರನು. ಜಡವಾದ ರೇತಸ್ಸು ಜೀವವಾಗಿ (life) ಪರಿವರ್ತನೆ ಹೊಂದುವುದಿಲ್ಲ. ರೇತಸ್ಸು ಮತ್ತು ಸ್ತ್ರೀಶೋಣಿತಗಳ ಸಂಯೋಗದಿಂದ ಸ್ತ್ರೀ ಗರ್ಭದ ಹೊರಗೆ (ಅನ್ಯತ್ರ test-tube ಪರೀಪಕ್ವ ನಳಿಗೆ ಮೊದಲಾದ ವ್ಯವಸ್ಥಿತ ಸ್ಥಳ ವಿಶೇಷಳಲ್ಲಿ) ವಿಜ್ಞಾನಿಗಳು ಬೆಳೆಸಬಹುದಾದ ಶರೀರಗಳಿಂದ ಸಹ ಜಡ ಶುಕ್ಲ-ಶೋಣಿತ-ಗಳೇ ಶರೀರೋತ್ಪತ್ತಿಗೆ ಕಾರಣಗಳೆಂದು ಭ್ರಮಿಸಬಾರದು. ರೇತೋಗತ ಜೀವಾಣುಗಳೇ ಕಾರಣವೆಂದೂ ತಿಳಿಯಕೂಡದು. ಏಕೆಂದರೆ ಜೀವಾಣುಯುಕ್ತ ರೇತಸ್ಸಿನಿಂದಲೂ ಅನೇಕವೇಳೆ ಗರ್ಭದಾರಣೆಯಾಗುವುದಿಲ್ಲ ಮತ್ತು ಒಮ್ಮೆ ಗರ್ಭಧಾರಣೆಯಾದ ಮೇಲೆ, ಅದೇ ಗರ್ಭಕೋಶದಲ್ಲಿ ಶುಕ್ಲ ಶೋಣಿತಗಳ ಸಂಯೋಗದಿಂದ ಮತ್ತೊಂದು ಗರ್ಭದ (ಶರೀರೋತ್ಪತ್ತಿಯ ಮೂಲವಾದ ಭ್ರೂಣ ಅಥವಾ ಪಿಂಡದ) ಉತ್ಪತ್ತಿಯಾಗುವುದಿಲ್ಲ. ಜಡ-ಜೀವಗಳು ವಿಲಕ್ಷಣ ಸ್ವಭಾವವುಳ್ಳವು. ಜಡದಿಂದ ಜೀವಸ್ವರೂಪದ ಉತ್ಪತ್ತಿಯಿಲ್ಲ. ಜೀವವು ಜಡಪರಿಣಾಮವಲ್ಲ. ಆದರೆ ವಿಜ್ಞಾನಿಗಳು ಹೀಗೆಂದು ತಿಳಿದಿದ್ದರು. ಈಗಲೂ ಇದನ್ನು ನಂಬುವರು ಅನೇಕರಿದ್ದಾರೆ.

ವಾನ್ ಹೆಲ್ಮಂಟ್ (Flemish) ಎಂಬ ವಿಜ್ಞಾನಿಯು, 'Dig a hole in a brick; fill it with ground basil grass; place a second brick so that it completely cover the hole; put the bricks in the sun and within a few days, the scent of the basil acting as a ferment will change the grass into real scorpions' ಎಂದರೆ, 'ಒಂದು ಇಟ್ಟಿಗೆಯಲ್ಲಿ ಒಂದು ರಂಧ್ರವನ್ನು ಮಾಡಿ, ಅದರಲ್ಲಿ ಅರೆದ ತುಳಸಿ ಮತ್ತು ಹುಲ್ಲನ್ನು ತುಂಬಿ, ಮತ್ತೊಂದು ಇಟ್ಟಿಗೆಯನ್ನು, ರಂಧ್ರವನ್ನು ಮುಚ್ಚುವಂತೆ, ಅದರ ಮೇಲಿಟ್ಟು, ಎರಡೂ ಇಟ್ಟಿಗೆಗಳನ್ನು ಬಿಸಿಲಿನಲ್ಲಿಟ್ಟರೆ,

ಕೆಲವು ದಿನಗಳೊಳಗಾಗಿ, ತುಳಸಿಯ ವಾಸನೆಯಿಂದ ಹುಳಿತು ಉಬ್ಬಿ (ಉಕ್ಕಿ-ಬಂದು) ಅದರ ಉದ್ರೇಕದಿಂದ ಹುಲ್ಲು ಪುಡಿಯು ಸಜೀವ ಚೇಳುಗಳಾಗಿ ಪರಿಣಾಮಗೊಳ್ಳುತ್ತದೆ' ಎಂದು ಪ್ರಯೋಗದಿಂದ ತೋರಿಸಿದನು. ಇದರಂತೆ ಕೊಳಕು ಬಟ್ಟೆಗಳ ಹುಳಿಯುಬ್ಬರದಿಂದ ಗೋಧಿ ಕಾಳುಗಳು ಇಲಿಗಳಾಗುವು-ವೆಂದೂ ಸಾಧಿಸಿದನು. ಆಧುನಿಕ ವಿಜ್ಞಾನಿಗಳು, ಸೂಕ್ಷ್ಮ ಸೇಂದ್ರಿಯ ವಸ್ತುಗಳು (Microscopic organisms) ತಮ್ಮಷ್ಟಕ್ಕೆ ತಾವೇ (Spontaneous) ಉತ್ಪನ್ನವಾಗುವುವೆಂದು ಕೆಲವು ಪ್ರಯೋಗಗಳಿಂದ ತಿಳಿದು, ಜಡ-ಚೇತನ ಭೇದವನ್ನೇ ಅಲ್ಲಗಳೆಯುತ್ತಿರುವರು. ಆದರೆ ಆಗ್ರಹರಹಿತ ಪ್ರಾಮಾಣಿಕ ವಿಜ್ಞಾನಿಗಳು (Unbiased honest scientists) ಜೀವೋತ್ಪತ್ತಿಯ ವಿಷಯದಲ್ಲಿ ತಮಗೇನೂ ತಿಳಿಯದೆಂದು ಒಪ್ಪುತ್ತಾರೆ. (Louis Pasteur) ಲೂಯಿ ಪ್ಯಾಶ್ಚರ್ ಎಂಬ ವಿಜ್ಞಾನಿಯು, ಹುಲ್ಲಿಂದ-ಗೋಧ ಧಾನ್ಯಗಳಿಂದ, ಚೇಳು-ಇಲಿಗಳು ಹುಟ್ಟುವುದಿಲ್ಲವೆಂದೂ, ಹಿಂದಿನ ವಿಜ್ಞಾನಿಗಳ ಪ್ರಯೋಗದಲ್ಲಿ ಅಲ್ಲಿದ್ದ ಪರಮಾಣು ಸ್ವರೂಪದ ಜೀವಗಳಿಗೆ, ತುಳಸಿ, ಕೊಳಕು ಬಟ್ಟೆಗಳ ಹುಳಿಯಿಂದ ಕೊಳೆತ (ಮಲೆತ) ಹುಲ್ಲು ಧಾನ್ಯಾದಿಗಳು (ಜಡಪದಾರ್ಥಗಳು) ಶರೀರಗಳಾದವೆಂದು ತೋರಿಸಿ, **'Life proceeds from life and not from inanimate matter'** —'ಜೀವದಿಂದ ಜೀವದ ಪ್ರಾದುರ್ಭಾವ-ವಲ್ಲದೇ, ಅಚೇತನ ವಸ್ತುವಿನಿಂದಲ್ಲ' ಎಂದು ಸಾರಿದನು. ಜೀನ್ ರೋಸ್ಟೆಂಡ್ ಎಂಬ ಫ್ರೆಂಚ್ ಅಕೆಡೆಮಿಯ ಜೀವಶಾಸ್ತ್ರ ಪ್ರವೀಣನು (biologist), 'From what we know about the exceptional character of Proto-plasm, it seems that its origin required the concurrence of highly improbable circumstances; about **the origin of life we know nothing'**—ನಮಗೆ ತಿಳಿದಿರುವ ಜೀವಾಣುವಿನ (Proto-plasm - ಬೆಳೆಯುವುದು (growth) ಮೊದಲಾದ ಲಕ್ಷಣಗಳಿಂದ ಪ್ರಾಣ-ವುಳ್ಳದ್ದೆಂದು ಗುರ್ತಿಸಬಹುದಾದ ಅತಿ ಸೂಕ್ಷ್ಮವಸ್ತು) ಅಸಾಧಾರಣ ಲಕ್ಷಣ-ಗಳಿಂದ, ನಮ್ಮ ಕಲ್ಪನೆಗೆ ನಿಲುಕದ ಅಸಂಭಾವ್ಯ ಸನ್ನಿವೇಶಗಳ ಯೋಗವು (ಕೂಡುವಿಕೆಯು) ಅವಶ್ಯಕವೆಂದು ಕಂಡುಬರುತ್ತದೆ; ಆದ್ದರಿಂದ ಜೀವದ ಮೂಲವನ್ನು ನಾವು ತಿಳಿದಿರುವುದಿಲ್ಲ-ಅದರ ಅಭಿವ್ಯಕ್ತಿ ಕಾರಣ-ಪ್ರಾಣಿ

**ದೇಹಗಳಲ್ಲಿ ಅದರ ಉದಯ, ಹೇಗೆ ಸಂಭವಿಸುವುದೆಂಬ ಬಗ್ಗೆ ನಮಗೇನೂ ಗೊತ್ತಿಲ್ಲ'** ಎಂದಿರುತ್ತಾನೆ.

ಆಗಮಗಳಾದರೋ, ಜಡ ವಿಲಕ್ಷಣನಾದ ಜೀವನು (ಚೇತನನು) ದೇಹ ಸಂಬಂಧವನ್ನು ಹೊಂದಿ ಹುಟ್ಟುವ ಕ್ರಮವನ್ನು, ಹೀಗೆ ನಿರೂಪಿಸುತ್ತವೆ :— 'ತತೋ ರೇತಸ್ಸಿಚಮೇವಾನುಪ್ರವಿಶತ್ಯಥಮಾತರಂ ಅಥ ಪ್ರಸೂಯತೇ-ಸ್ಥಾವರಾಣಿ ದಿವಃ ಪ್ರಾಪ್ತಃ ಸ್ಥಾವರೇಭ್ಯಶ್ಚ ಪುರುಷಂ । ಪುರುಷಾತ್ ಸ್ತ್ರಿಯಮಾಪನ್ನಃ ತತೋ ದೇಹಂ ಯಥಾಕ್ರಮಂ । ದೇಹೇನ ಜಾಯತೇ ಜಂತುಃ ಇತಿ ಸಾಮಾನ್ಯತೋ ಜನಿಃ । ವಿಶೇಷ ಜನನಂ ಚಾಪಿ ಪ್ರೋಚ್ಯಮಾನಂ ನಿ ಬೋಧಮೇ। ಸ್ಥಾನ್ನುಷ್ವಥಾಪಿ ಪುರುಷೇ ಪ್ರಮದಾಯಮಥಾ ಪಿವಾ । ಗರ್ಭೇವಾ ಬಹಿರೇವಾಥ ಕ್ವಚಿತ್ ಸ್ಥಾನಾಂತರೇಷು ಚ ॥' (ಆಗಮ ವಾಕ್ಯಗಳು) ಇವುಗಳ ಅರ್ಥ :— 'ಲೋಕಾಂತರಗಳಿಂದ ತನ್ನ ಕರ್ಮಾನುಸಾರ ಭೂಮಿಗೆ ಬಂದ ಜೀವನು ಮೊದಲಿಗೆ ಅನ್ನಾದಿಗಳ ದ್ವಾರಾ ಪಿತೃದೇಹವನ್ನು ಪ್ರವೇಶಿಸುತ್ತಾನೆ ; ಆ ಪುರುಷನ ರೇತಸ್ಸನ್ನಾಶ್ರಯಿಸಿ ಮಾತೃಗರ್ಭದಲ್ಲಿ ಬರುತ್ತಾನೆ; ನಂತರ ಹುಟ್ಟುತ್ತಾನೆ. ಆಕಾಶಮಾರ್ಗದಿಂದ ಭೂಮಿಯಲ್ಲಿ (ಧಾನ್ಯಾದಿ) ಸ್ಥಾವರಗಳನ್ನು ಹೊಂದಿ, ಅವುಗಳಿಂದ ಪುರುಷನನ್ನೂ, ಪುರುಷನಿಂದ ಸ್ತ್ರೀಯನ್ನೂ ಹೊಂದಿ, ಅಲ್ಲಿ ದೇಹವನ್ನು ಪಡೆದು, ಜೀವನು ಕಾಲಕ್ರಮದಲ್ಲಿ ಬೆಳೆದ ಆ ದೇಹದಿಂದ ಜನಿಸುತ್ತಾನೆ (ಮಾತೃಗರ್ಭದಿಂದ ಹೊರಗೆ ಬರುತ್ತಾನೆ) ಇದು ಸರ್ವಸಾಮಾನ್ಯ (ಸಾಧಾರಣ) ಉತ್ಪತ್ತಿ ಕ್ರಮವು. ಅಸಾಧಾರಣ ಅಥವಾ ವಿಶೇಷ ಕ್ರಮದ ಉತ್ಪತ್ತಿಯೂ ಇದೆ. ಕೆಲವು ಜೀವರು ಸ್ಥಾವರಗಳಿಂದಲೇ ಹುಟ್ಟುವರು (ಪುರುಷ-ಸ್ತ್ರೀ ಸಂಬಂಧವಿಲ್ಲದಂತೆ-ಶುಕಾದಿಗಳಂತೆ); ತಂದೆಯಿಂದ ಮಾತ್ರ ಜನಿಸುವರು ಕೆಲವರು (ಮಾಂಧಾತ ಚಕ್ರವರ್ತಿ ಮೊದಲಾದವರಂತೆ); ತಾಯಿಯಿಂದ ಮಾತ್ರ ಹುಟ್ಟುವರು ಕೆಲವರು (ಆಸ್ತಿಕಾದಿಗಳಂತೆ); ತಂದೆ ತಾಯಿಗಳ ಅನ್ಯೋನ್ಯ ದರ್ಶನ ಮಾತ್ರದಿಂದ ಜನಿಸುವರು ಕೆಲವರು (ವಿದುರ, ಪಾಂಡು ಮೊದಲಾದವರಂತೆ); ಸ್ಥಾನಾಂತರದಲ್ಲಿ ಕೆಲವರು (ಯಜ್ಞ ಕುಂಡದಲ್ಲಿ ದ್ರೌಪದಿಯಂತೆ) ಹುಟ್ಟುವರು; ಪೂರ್ವಸಿದ್ಧ ದೇಹವನ್ನು ಪ್ರಸವಕಾಲದಲ್ಲಿ ಪ್ರವೇಶಿಸಿ ಜನಿಸುವರು ಕೆಲವರು (ಶ್ರೀಮದಾನಂದತೀರ್ಥರಂತೆ); ಮತ್ತು

ದ್ರೋಣಾಚಾರ್ಯ ಮೊದಲಾದವರಂತೆ 'ಬಹಿಃ' (ದೇಹದ ಹೊರಗೆ) ಜನಿಸುವುದೇ ಮೊದಲಾದ ನಿದರ್ಶನಗಳು ಸಾಧಾರಣ ಕ್ರಮದ ಅಪವಾದಗಳು (exceptions) ಮಾತ್ರವಾಗಿದ್ದು ಈಶ್ವರನ ಅಚಿಂತ್ಯ ಶಕ್ತಿ ದ್ಯೋತಕಗಳು.

ರೇತಸ್ಸಿನಿಂದ ಪ್ರಾಣಿಗಳ ಉತ್ಪತ್ತಿಯಾಗುವ ಪ್ರಕಾರ-ಸಂಭವ-ಅಸಂಭವಗಳ ವಿವೇಚನೆ ವಿಮರ್ಶೆಗಳಿಂದ, ರೇತಸ್ಸನ್ನಾಶ್ರಯಿಸಿದ ಅಣು-ಸ್ವರೂಪದ ಚೇತನವೊಂದಿರಬೇಕೆಂದೂ, ಅದು (ಆ ಜೀವನು) ಮಾತೃಗರ್ಭದಲ್ಲಿ ಉತ್ಪನ್ನವಾದ ಶರೀರವನ್ನು ಹೊಂದಿ, ಬೆಳೆದು, ಜನಿಸಿ, ಅಭಿವೃದ್ಧಿ ಹೊಂದಿ ನಾನಾ ಕರ್ಮಗಳಲ್ಲಿ ತೊಡಗಲು ಅವಶ್ಯಕವಾದ ಅದೃಷ್ಟಯುಕ್ತ-ನಾಗಿರಬೇಕೆಂದೂ, ಅದೃಷ್ಟವನ್ನು ಉದ್ಬೋಧಿಸಿ, ಜೀವನು ತದನುಸಾರವಾದ ಪ್ರವೃತ್ತಿಯನ್ನೂ, ಫಲಭೋಗವನ್ನೂ ಹೊಂದುವಂತೆ ಯೋಜಿಸುವ ಸ್ವತಂತ್ರ ಚೇತನ (ಈಶ್ವರ) ನಿರಬೇಕೆಂದೂ, ತಿಳಿಯಬೇಕಾಗುತ್ತದೆ. ಯಾವನೊಬ್ಬ ಜೀವನೂ, ಪಶು, ಪಕ್ಷಿ, ಮಾನವಾದಿ ನಾನಾ ಪ್ರಾಣಿ ದೇಹಗಳಲ್ಲಿ ತನಗೆ ಅಪೇಕ್ಷಿತವಾದ ದೇಹವನ್ನು ಸ್ವೇಚ್ಛೆಯಿಂದ ಹೊಂದಲು ಸ್ವತಂತ್ರನಲ್ಲ-ಸಮರ್ಥನೂ ಅಲ್ಲ. **ನಮ್ಮ ದೇಹವು ನಾವು ಆರಿಸಿಕೊಂಡದ್ದಲ್ಲವೆಂಬುದು ಎಲ್ಲರ ಅನುಭವ ಸಿದ್ಧವಾಗಿದೆ.** ಸ್ತ್ರೀ ಪುರುಷ ಭೇದವು ಸರ್ವತ್ರ ಕಂಡುಬರುತ್ತದೆ. ಸ್ತ್ರೀತ್ವ-ಪುರುಷತ್ವಗಳೂ ಸ್ವೇಚ್ಛೆಯಿಂದ ಬಂದುವಲ್ಲ. ಜೀವನನ್ನು, ಪುರುಷ-ದೇಹದ ರೇತಸ್ಸನ್ನು ಹೊಂದಿಸುವುದೂ ಈಶ್ವರೇಚ್ಛೆಯೇ ಆಗಿರಬೇಕು. ಯಾವ ಜೀವನಿಗೆ ಯಾವ ದೇಹವನ್ನು ಹೊಂದಿಸಬೇಕೆಂಬಲ್ಲಿ ಯಾವ ಕ್ರಮವೂ ಇಲ್ಲದಿದ್ದರೆ, ಎಲ್ಲ ಜೀವರೂ ಈಶ್ವರನೆಂಬ ಉನ್ಮತ್ತನ ಕೈವಶರೆಂದು ತಿಳಿಯ-ಬೇಕಾಗುವುದು. ಈಶ್ವರನು ಜೀವರುಗಳ ಅದೃಷ್ಟಾನುಸಾರವಾಗಿ ದೇಹಗಳನ್ನಿತ್ತು, ರಕ್ಷಿಸಿ ಅವರವರ ಗತಿಗಳನ್ನು ಹೊಂದಿಸುವ ಸಮವರ್ತಿಯು-ಅದೃಷ್ಟ-ಪ್ರೇರಕನು. ಹೀಗೆ ಜೀವ-ಅದೃಷ್ಟ-ಈಶ್ವರರೆಂಬ ಅತೀಂದ್ರಿಯ ತತ್ವಗಳು, ಆಗಮ ಸಹಕಾರವುಳ್ಳ ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಸಿದ್ಧವಾಗುತ್ತವೆ.

(೨) ವಾತ ಪಿತ್ತಾದಿ ಧಾತುಗಳು ಸಜೀವ ಶರೀರದಲ್ಲಿ ಮಾತ್ರ ವಿಕಾರ ಹೊಂದುತ್ತವೆ-ಮೃತ ಶರೀರದಲ್ಲಿ ವಿಕಾರಗೊಳ್ಳುವುದಿಲ್ಲ. ಅಪಥ್ಯ ಸೇವನಾದಿ

ಕಾರಣಗಳಿದ್ದರೂ, ಎಲ್ಲರಲ್ಲಿ ವಿಕಾರ ಹೊಂದುವುದಿಲ್ಲ. ವಿಕಾರಿ ಕಾರಣಗಳಿದ್ದರೂ (ವ್ಯತ್ಯಾಸ ಹೊಂದಿ ರೋಗಗಳನ್ನುಂಟು ಮಾಡುವ ಕಾರಣಗಳಿದ್ದರೂ) ವಿಕಾರ ಹೊಂದದಿರುವುದು, ಅದೃಷ್ಟವನ್ನೂ ಈಶ್ವರನನ್ನೂ ಸಾಧಿಸುತ್ತದೆ. ವೈದ್ಯಶಾಸ್ತ್ರ (Medical Science), ಪ್ರಾಣಿಶಾಸ್ತ್ರ (Biology) ಮೊದಲಾದವುಗಳಿಂದ ವಿಕಾರಿ ಕಾರಣಗಳಲ್ಲಿ ಸೂಕ್ಷ್ಮ ವ್ಯತ್ಯಾಸಗಳನ್ನು ಗುರ್ತಿಸಬಹುದೆಂದು ಹೇಳಿದರೂ, ಈ ವಿಧ ವಿಲಕ್ಷಣ ಪರಿಸ್ಥಿತಿಗಳುಂಟಾಗಲು ಮೂಲಕಾರಣ-ವಾವುದೆಂಬ ಪ್ರಶ್ನೆಯು ನಿರುತ್ತರವಾಗಿಯೇ ಉಳಿಯುತ್ತದೆ. ಒಂದೇ ರೋಗದಿಂದ ಪೀಡಿತರಾದ ಅನೇಕರಿಗೆ ಒಂದೇ ಔಷಧ ಸೇವನೆಯಿಂದ ಗುಣವಾಗುವುದಿಲ್ಲ. ಒಂದು ರೋಗವು ಒಬ್ಬನಿಗೇ ಭಿನ್ನ ಕಾಲಗಳಲ್ಲಿ ಬಂದರೆ, ಅದೇ ಹಿಂದಿನ ಔಷಧಿಯು ನಾಟುವುದಿಲ್ಲ. ಏಕೆ ಗುಣ ಕೊಡುವುದಿಲ್ಲವೆಂಬುದರ ಮೂಲ ಕಾರಣವು ರೋಗಿಯ ಅದೃಷ್ಟವನ್ನೇ ಸೂಚಿಸುತ್ತದೆ. 'ಔಷಧ ಶ್ರೇಷ್ಠಂ ರೋಗಿ ಕರ್ಮಾನುಕೂಲಂ ಫಲಂ ದದಾತಿ' ಇತ್ಯಾದಿ ಆಗಮಗಳು ಈ ವಿಮರ್ಶೆಗೆ ಬೆಂಬಲ ನೀಡುತ್ತವೆ.

(೩) ವಟ ಬೀಜದಿಂದ ವಟವೃಕ್ಷವು ಹುಟ್ಟುತ್ತದೆ. ಆದರೆ ಹುರಿದ ಬೀಜದಿಂದ ಹುಟ್ಟುವುದಿಲ್ಲ ಮತ್ತು ಹುರಿಯದಿದ್ದರೂ ಎಲ್ಲಾ ಬೀಜಗಳಿಂದಲೂ ಹುಟ್ಟುವುದಿಲ್ಲ. ಈ ದೃಷ್ಟಾಂತದ ವಿಷಯಕ್ಕೆ ಸಹ ಸಸ್ಯ ಶಾಸ್ತ್ರಜ್ಞರು ನಾನಾ ಕಾರಣಗಳನ್ನ ಹೇಳಬಹುದು-ಹೇಳುತ್ತಾರೆ. ಹುರಿಯದಿದ್ದ ಎಲ್ಲ ಬೀಜಗಳಿಗೂ ಏಕಪ್ರಕಾರದ ಭೂಗುಣ, ವಾಯು, ಪ್ರಕಾಶ ಕಿರಣಗಳು, ಗೊಬ್ಬರ ಇತ್ಯಾದಿ ಸೌಕರ್ಯಗಳುಳ್ಳ ಸಮಾನ ಸನ್ನಿವೇಶಗಳನ್ನು ಏರ್ಪಡಿಸಿದರೂ, ಕೆಲವು ಬೀಜಗಳು ಅಂಕುರಿಸುವುದೇ ಇಲ್ಲ. ಎಲ್ಲ ಬೀಜಗಳೂ ಒಂದೇ ವೃಕ್ಷದಲ್ಲಿ ಬಿಟ್ಟ ಒಂದೇ ಹಣ್ಣಿನಿಂದ ತೆಗೆದುಕೊಳ್ಳಲ್ಪಟ್ಟಿದ್ದರೂ, ಅವೆಲ್ಲವೂ ಅಂಕುರಿಸುವುದಿಲ್ಲ. ಬೀಜಗಳಲ್ಲಿರುವ ಈ ವೈಲಕ್ಷಣ್ಯಕ್ಕೂ ಸೂಕ್ಷ್ಮವಾದ ಇತರ ಕಾರಣಗಳನ್ನು ವಿಜ್ಞಾನಿಗಳು ಹೇಳಿದರೂ-ಮುಂದೆ ಹೊಸ ಕಾರಣಗಳನ್ನು ಕಂಡುಹಿಡಿದರೂ, ಆ ಸೂಕ್ಷ್ಮ ಕಾರಣಗಳಿಗೂ ಪುನಃ ಕಾರಣವನ್ನು ಅರಸಿದರೆ, ಆ ಬೀಜದ ಸ್ವಭಾವವೇ ಹಾಗೆ ಎಂದು ಮಾತ್ರ ಹೇಳಿ ಸುಮ್ಮನಾಗಬೇಕಾಗುತ್ತದೆ. ಬೀಜಗಳ ಪರಸ್ಪರ ಭಿನ್ನ ಸ್ವಭಾವಗಳಿಗೆ ಕಾರಣವನ್ನು ಪ್ರಶ್ನಿಸಿದರಂತೂ ಏನೂ

ಹೇಳಲಾಗುವುದಿಲ್ಲ. ವಟ ಬೀಜದಿಂದ ವಟ ವೃಕ್ಷವಲ್ಲದೇ ಅಶ್ವತ್ಥವೃಕ್ಷವು ಹುಟ್ಟುವುದಿಲ್ಲ. ಇದು ಬೀಜದ ಸ್ವಭಾವ. ಕೆಲವು ಬೀಜಗಳಿಂದ ಅಂಕುರೋತ್ಪತ್ತಿಯೇ ಆಗದಿರಲು, ಅದೃಷ್ಟಯುಕ್ತ ಜೀವ ಚೇತನವು ಆ ಬೀಜಗಳನ್ನು ಆಶ್ರಯಿಸದಿರುವುದೇ ಕಾರಣವೆಂದು ಒಪ್ಪಬೇಕಾಗುತ್ತದೆ. ಅಂಕುರಿಸಿ ಬೆಳೆದ ಅನೇಕ ವಟ ವೃಕ್ಷಗಳಲ್ಲಿ (ಅಥವಾ ಅಶ್ವತ್ಥಾದಿ ಇತರ ವೃಕ್ಷಗಳಲ್ಲಿ) ನಾನಾ ಪ್ರಕಾರದ ವೈವಿಧ್ಯಗಳು ಎದ್ದು ತೋರುತ್ತವೆ. ಈ ವೈವಿಧ್ಯಗಳಿಗೆ ವೃಕ್ಷದೇಹದಿಂದಿರುವ ಆಯಾ ಜೀವರ ಅದೃಷ್ಟ ವಿಶೇಷಗಳೂ, ಅವುಗಳ ಆವಿರ್ಭಾವಕ್ಕೆ (ಪ್ರಕಟವಾಗಲಿಕ್ಕೆ) ಅವಶ್ಯಕವಾದ ಈಶ್ವರಶಕ್ತಿಯೂ ಕಾರಣಗಳೆಂದು ಸಿದ್ಧವಾಗುತ್ತದೆ.

(೪) ತುಪ್ಪದಿಂದ ಶರೀರವು ಪುಷ್ಟಿಗೊಳ್ಳುತ್ತದೆ. ಆದರೆ ಮೃತ ಶರೀರವಾಗಲಿ, ಎಲ್ಲ ಜೀವಚ್ಛರೀರಗಳಾಗಲಿ ಪುಷ್ಟಿಗೊಳ್ಳುವುದಿಲ್ಲ. ಧೂಮಸಂಸ್ಕಾರದಿಂದ ವೃಕ್ಷಗಳಲ್ಲಿ ಪುಷ್ಪಫಲಾದಿಗಳ ಉತ್ಪತ್ತಿಯು ಕಂಡುಬರುತ್ತದೆ. ಒಣಗಿದ (ಮೃತವಾದ) ವೃಕ್ಷಗಳಲ್ಲಾಗಲಿ, ಒಣಗದ ಎಲ್ಲ ವೃಕ್ಷಗಳಲ್ಲಾಗಲಿ ಧೂಮ-ಸಂಸ್ಕಾರವು ಪುಷ್ಪಾದಿಗಳನ್ನು ಹುಟ್ಟಿಸುವುದಿಲ್ಲ. ಈ ಮೊದಲಾದ ಪ್ರತ್ಯಕ್ಷ ಸಿದ್ಧ ಅನುಭವಗಳ ಕಾರಣಾನ್ವೇಷಣದಲ್ಲಿ ತೊಡಗಿದರೆ, ಜೀವ, ಈಶ್ವರ ಅದೃಷ್ಟಗಳೆಂಬ ಅತೀಂದ್ರಿಯ ವಸ್ತುಗಳ ಅಸ್ತಿತ್ವವು ಸಿದ್ಧವಾಗುತ್ತದೆ.

(೫) ಕೆಲವು ಮಾನವರಿಗೆ ಪೂರ್ವಜನ್ಮ ಸ್ಮರಣೆಯುಂಟಾಗುತ್ತದೆ. ಹೀಗೆ ಬರುವ ಜನ್ಮಾಂತರ ಸ್ಮರಣೆಯು 'ಜಾತಿಸ್ಮೃತಿ' ಎಂದು ಕರೆಯಲ್ಪಡುತ್ತದೆ. ನಾನಾದೇಶಗಳಲ್ಲಿ ಇಂತಹ ನೂರಾರು ಉದಾಹರಣೆಗಳು ದೊರೆಯುತ್ತವೆ. ಜಾತಿ ಸ್ಮೃತಿಯುಳ್ಳ ವ್ಯಕ್ತಿಯು ಈ ಹಿಂದಿನ ಜನ್ಮದಲ್ಲಿ ತಾನಿದ್ದ ಸ್ಥಳ, ತನ್ನ ತಂದೆ, ತಾಯಿ, ಪತ್ನಿ ಮೊದಲಾದವರನ್ನೂ, ತಾನು ಮರಣ ಹೊಂದಿದ ಸಂದರ್ಭಗಳನ್ನೂ ಹೇಳುತ್ತಾನೆ. ಇಂಥ ಹೇಳಿಕೆಗಳು ಪರೀಕ್ಷೆಯಲ್ಲಿ ನಿಜವೆಂದು ಕಂಡುಬಂದಿವೆ-ಇನ್ನೂ ಕೆಲವರಿಗೆ ಇಂಥ ಪುಣ್ಯದಿಂದ ಸ್ವರ್ಗವನ್ನೂ, ಪಾಪದಿಂದ ನರಕವನ್ನೂ ಅನುಭವಿಸಿದೆನೆಂಬ ಸ್ಮರಣೆಯೂ ಬರುವುದುಂಟು. ಜಾತಿಸ್ಮೃತಿಯು ಕೆಲವರಿಗೆ ಮಾತ್ರ ಕಾರಣ (ಸಾಧನ) ವಿಶೇಷಗಳಿಂದ

ಉಂಟಾಗುತ್ತದೆ-ಸರ್ವರಿಗೂ ಅಲ್ಲ. ಆಧುನಿಕ ವಿಜ್ಞಾನಿಗಳು ಸಹ ಇಂಥ ಅನೇಕ ನಿದರ್ಶನಗಳನ್ನು ತೀಕ್ಷ್ಣವಾಗಿ ಪರೀಕ್ಷಿಸಿ, ದೊರೆತ ರುಜುವಾತುಗಳಿಂದ (Proofs) ಜಾತಿ ಸ್ಮೃತಿಯಿಂದ ದೊರೆತ ಅನುಭವಗಳ ಸತ್ಯತೆಯನ್ನು ಮನಗಂಡಿರುವರು. ಕೆಲವು ವಿಶ್ವವಿದ್ಯಾಲಯಗಳಲ್ಲಿ (Rajasthan University in India-for instance) ಈ ವಿಷಯ ಪರಿಶೋಧನೆಗಾಗಿ ಪ್ರತ್ಯೇಕ ಶಾಖೆಯನ್ನು ಏರ್ಪಡಿಸಿ (Para-Psychological Research Institute) ಮನಃಶಾಸ್ತ್ರ ಪ್ರವೀಣರನ್ನು ನೇಮಕ ಮಾಡಿದ್ದಾರೆ. ಇವರು ಅಮೇರಿಕಾ, ಯೂರೋಪ್ ಮುಂತಾದ ದೇಶಗಳಲ್ಲಿ ಜಾತಿಸ್ಮೃತಿಯುಳ್ಳ ವ್ಯಕ್ತಿಗಳ ಅನುಭವಗಳನ್ನು ಪರೀಕ್ಷಿಸಲು ಸಂಚರಿಸುತ್ತಲಿರುವರು. ಜಾತಿ-ಸ್ಮೃತಿಯು, ದೇಹಭಿನ್ನ ಜೀವ ಮತ್ತು ಜನ್ಮಾಂತರಗಳನ್ನು ಸಾಧಿಸಿಕೊಡುತ್ತದೆ. 'ಜಡವಾದ'ದಲ್ಲಿ ದುರಾಗ್ರಹವುಳ್ಳ ಮನಃಶಾಸ್ತ್ರ ಪ್ರವೀಣರೆಂಬ ಕೆಲವರು ಈ ವಿಷಯದಲ್ಲಿ ಮುಂದಿಡಬಹುದಾದ ಯುಕ್ತಿವಾದಗಳು ಅಂಗೀಕಾರಾರ್ಹ-ಗಳಲ್ಲ. ದೇಹಭಿನ್ನ ಜೀವನಿಗೆ ಜನ್ಮಾಂತರಗಳುಂಟೆಂಬ ಪ್ರಮೇಯವು ಶಾಸ್ತ್ರ ಸಮ್ಮತಿಯುಳ್ಳದ್ದಾಗಿದೆ ಆದ್ದರಿಂದ ಇದನ್ನು ವಿರೋಧಿಸುವ ಯುಕ್ತಿವಾದಗಳು ಶುಷ್ಕ ತರ್ಕಗಳೇ ಸರಿ.

(೬) ಅಯಸ್ಕಾಂತದಲ್ಲಿರುವ ಶಕ್ತಿ ವಿಶೇಷವನ್ನು (Magnetic action) ಸ್ವಲ್ಪ ಗಮನಿಸೋಣ. ಅಯಸ್ಕಾಂತವು (Magnet) (ಸೂಜಿಗಲ್ಲು) ತನ್ನ ವ್ಯಾಪ್ತಿಗೊಳಪಟ್ಟ ಕಬ್ಬಿಣದ ವಸ್ತುಗಳನ್ನು ಚಲಿಸುವಂತೆ ಮಾಡುತ್ತದೆ. ಅಚೇತನವಾದ ಕಬ್ಬಿಣದ ವಸ್ತುವು ಸ್ವತಃ ಅನ್ಯಪ್ರೇರಕ ಶಕ್ತಿಯ ಸಹಾಯವಿಲ್ಲದೇ, ಚಲನಕ್ರಿಯೆಯಲ್ಲಿ ಅಸಮರ್ಥವಾದುದು. ಸೂಜಿಗಲ್ಲಿನ ಪ್ರಭಾವದಿಂದ ಕಬ್ಬಿಣವಲ್ಲದ ಇತರ ಜಡವಸ್ತುಗಳು ಚಲಿಸುವುದಿಲ್ಲ ಮತ್ತು ಆಯಸ್ಕಾಂತದಂತೆ ಜಡವಾದ ಇತರ ಜಡವಸ್ತುಗಳಲ್ಲಿ, ಇತರ ಜಡವಸ್ತುಗಳನ್ನು ಚಲಿಸುವ ಸಾಮರ್ಥ್ಯವೂ ಇಲ್ಲ. ಸೂಜಿಗಲ್ಲಿನಲ್ಲಿ ಮಾತ್ರ ಈ ವಿಧ ಶಕ್ತಿಯು ಏಕೆ ಕಂಡು ಬರುತ್ತದೆಂಬಲ್ಲಿ, 'ಅದು ಅದರ ಸ್ವಭಾವ' ಎಂದಿಷ್ಟೇ ವಿಜ್ಞಾನಿಗಳು ಹೇಳಬೇಕು. ಲೋಹಾಕರ್ಷಶಕ್ತಿ (Magnet-ಲೋಹಮಣಿ) ಮತ್ತು ವಿದ್ಯುತ್ ಸಂಬಂಧ ವಿಜ್ಞಾನಶಾಖೆಗಳು (Magnetism and Electricity) ಈಚೆಗೆ ಅತಿಶಯವಾಗಿ

ಪ್ರಗತಿಗೊಂಡಿವೆ. ಈ ಶಾಖೆಗಳಲ್ಲಿ ನಿಸ್ಸೀಮ ಪರಿಣತರು ಈ ಶಕ್ತಿಗಳ ವಿಷಯದಲ್ಲಿ ಹೇಳುವ-ಹೇಳಬಹುದಾದ ಯಾವ ವಿವರಣೆಗಳೂ, ಈ ಶಕ್ತಿಗಳ ಮೂಲವಾದ ಈಶ್ವರೀ ಶಕ್ತಿಯನ್ನು ನಿರಾಕರಿಸಲಾರವು. ಅವೆಲ್ಲವೂ ವಸ್ತುಸ್ಥಿತಿಯ ಸೂಕ್ಷ್ಮ-ಸೂಕ್ಷ್ಮತಮ ನಿರೂಪಣೆಗಳಾಗಬಹುದಲ್ಲದೇ, ವಸ್ತುಸ್ಥಿತಿಯು ಹಾಗಿರುವುದರ ಕಾರಣವಾಗುವುದಿಲ್ಲ. ಆದರ ಸ್ವಭಾವವೇ ಹಾಗೆಂದು ಹೇಳಿದರೆ, ಅದು ಸಮರ್ಪಕವಾದ ಉತ್ತರವಲ್ಲ. ವಸ್ತು ಸ್ವಭಾವಗಳನ್ನು ನಿಯಂತ್ರಿಸುವ ಅದ್ಭುತ ಚೇತನ ಶಕ್ತಿಯೊಂದು ಇರುವುದೆಂಬ ವಾದವನ್ನು ನಿರಾಕರಿಸಿದಂತಲ್ಲ-ಸುಳ್ಳೆಂದು ಸಾಧಿಸಿದಂತಲ್ಲ. ಆಯಸ್ಕಾಂತದಲ್ಲಿ ತೋರುವ ಶಕ್ತಿಯು ಈಶ್ವರಾಧೀನವೆಂದು ಹೇಳುವುದು ಯಾವ ದೃಷ್ಟಿಯಿಂದಲೂ ಭ್ರಮಾತ್ಮಕವಲ್ಲ-ಆಗಮಸಿದ್ಧವೂ ಆಗಿದೆ. ಹೀಗೆಯೇ 'ಸೂರ್ಯಕಾಂತ'ವೆಂಬ ಶಿಲಾವಿಶೇಷದಿಂದ ಅಗ್ನಿಯು ಪ್ರಕಟವಾಗುತ್ತದೆ. ಸೂರ್ಯಕಿರಣಗಳನ್ನು ಕೇಂದ್ರೀಕರಿಸುವುದರಿಂದ (Focussing sun's rays) ಉಷ್ಣವು ಅಧಿಕವಾಗಿ ದಹನ ಶಕ್ತಿಯು ಅಗ್ನಿರೂಪದಿಂದ ಪ್ರಕಟವಾಗುವುದೆಂಬುದು ನಿಜ. ಆದರೆ ಸೂರ್ಯ ಕಾಂತ ಶಿಲೆಯಲ್ಲಿ ಮಾತ್ರ ಈ ವಿಧ ಶಕ್ತಿಯು ಪ್ರಕಟವಾಗುವುದರ ಮೂಲ ಕಾರಣವನ್ನೂ, ಸೂರ್ಯಕಿರಣಗಳು ಪ್ರಕಾಶಕ ಮತ್ತು ದಾಹಕ ಶಕ್ತಿಯ ಮೂಲ ಕಾರಣವನ್ನೂ, ವಿಜ್ಞಾನವು ತಿಳಿಯಲಾರದು. 'ಪ್ರಕಾಶ' (Light) ವಿಷಯಕವಾದ ವೈಜ್ಞಾನಿಕ ಪ್ರಗತಿಯನ್ನು ಇಲ್ಲಿ ಸಂಗ್ರಹವಾಗಿ ಗಮನಿಸುವುದು ಅಪ್ರಕೃತವಾಗಲಿಕ್ಕಿಲ್ಲ.

ಭೌತಶಾಸ್ತ್ರವು (Physics) ಪ್ರಕಾಶವನ್ನು (Light) ವಿಶ್ವದ ಮೂಲ ತತ್ವವೆಂದು ಪ್ರತಿಪಾದಿಸಿತ. ಆ ಪೂರ್ವದಲ್ಲಿ (Matter and energy or radiation) ಕಣ-ಪರಮಾಣುಗಳ ಸಂಘಾತದಿಂದಾದ ಮೂಲಭೂತ ಜಡವಸ್ತು ಮತ್ತು ಶಾಖ-ಪ್ರಕಾಶಗಳನ್ನು ಪ್ರಸರಿಸುವ ಶಕ್ತಿ , ಈ ಎರಡು ವಿಶ್ವದ ಮೂಲ ತತ್ವಗಳೆಂದು ಭಾವಿಸಲಾಗಿತ್ತು. ಸರ್ ವಿಲಿಯಂ ಬ್ರ್ಯಾಗ್ (Sir William Bragg) ಎಂಬ ಪ್ರಸಿದ್ಧ ವಿಜ್ಞಾನಿಯು, ತನ್ನ 'Universe of Light' ಎಂಬ ಗ್ರಂಥದಲ್ಲಿ, 'We may rightly speak of light as constituting the universe, when we give the word the full meaning'

ಎಂದರೆ ಪ್ರಕಾಶ (Light) ವೆಂಬ ಶಬ್ದಕ್ಕೆ ಅದರ ಪೂರ್ಣವಾದ ಅರ್ಥವನ್ನು ಗ್ರಹಿಸುವುದಾದರೆ, ವಿಶ್ವವು ಅದರಿಂದಲೇ ಆದುದೆಂದು (ಪ್ರಕಾಶವೇ ವಿಶ್ವವೆಂದು) ಹೇಳಬಹುದು. ಅದು ಸತ್ಯವೇ ಆಗುವುದು ಎಂದು ವಿಶ್ವಸ್ವರೂಪ-ವನ್ನು ನಿರೂಪಿಸಿರುವನು. ಈ ವೈಜ್ಞಾನಿಕ ಅಭಿಪ್ರಾಯದೊಂದಿಗೆ ಬೈಬಲ್ಲಿನ (Bible) 'And God said let there be light and there was light' - 'ಪ್ರಕಾಶವುಂಟಾಗಲಿ ಎಂದನು, ದೇವನು-ಬೆಳಕುಂಟಾಯಿತು' ಎಂಬ ವಾಕ್ಯವನ್ನೂ, 'ತದೈಕ್ಷತ ಬಹುಸ್ಯಾಂ ಪ್ರಜಾಯೇಯೇತಿ ತತ್ತೇಜೋಽಸೃಜತ'- 'ಬ್ರಹ್ಮನು ಸೃಷ್ಟಿಗಾಗಿ ಇಚ್ಛಿಸಿದನು- ಬಹುರೂಪಿಯಾಗುವೆನೆಂದನು- ಮೊದಲಿಗೆ ತೇಜಸ್ಸನ್ನು ಸೃಷ್ಟಿಸಿದನು' ಎಂಬ ವೇದವಾಕ್ಯವನ್ನೂ ಲಕ್ಷಿಸಬಹುದು. ತೇಜೋಭಿಮಾನಿಯಾದ ಮಹಾಲಕ್ಷ್ಮೀ ದೇವಿಯನ್ನು ಸೃಷ್ಟಿಕಾರ್ಯದಲ್ಲಿ ಪರಮಾತ್ಮನು ನಿಯೋಜಿಸಿದನೆಂಬ ರಹಸ್ಯಾರ್ಥವುಳ್ಳ ಈ ವೇದವಾಕ್ಯವು ಬಹ್ವರ್ಥಗರ್ಭಿತವಾಗಿದೆ.

ಪ್ರಕಾಶ ಕಿರಣಗಳು ನಾನಾ ಪ್ರಕಾರದ ಪ್ರಭೇದವುಳ್ಳವಾಗಿವೆ. ಹಳದಿ, ಕೆಂಪು ಮೊದಲಾದ ವರ್ಣಭೇದಗಳು ಮಾತ್ರವಲ್ಲ. ಇನ್‌ಫ್ರಾರೆಡ್, ಅಲ್ಟ್ರಾವಯಲೆಟ್, ಎಕ್ಸ್‌ರೇ, ಗಾಮಾರೇ, (Infra-red, Ultra-violet, X-ray, Gama ray) ಇತ್ಯಾದಿ ವಿಶೇಷ ಪ್ರಭಾವವುಳ್ಳ ಸೂಕ್ಷ್ಮತರ ಕಿರಣಗಳೂ ಇವೆ. ಅಲೆಗಳ ರೂಪದಿಂದ ಇವು ವಿಶ್ವದಲ್ಲಿ ವ್ಯಾಪಿಸಿರುತ್ತವೆ. ಇವುಗಳಲ್ಲದೇ ಇತರ ನಾನಾ ಶಕ್ತಿ ವಿಶೇಷಗಳೂ ವಿಶ್ವವ್ಯಾಪಕಾದವುಗಳಿವೆ. ಇವುಗಳ ಅಲೆಗಳು ಭಿನ್ನ ಭಿನ್ನವಾದ ಅಳತೆಯುಳ್ಳವು. ಮತ್ತು ಇವುಗಳ ಸಂಭವದ ಅಂತರದಲ್ಲಿಯೂ ಭೇದವಿದೆ. (Their wave-lengths and frequencies differ) ಇವುಗಳನ್ನು ವಿಜ್ಞಾನಿಗಳು ಸೂಕ್ಷ್ಮ ಉಪಕರಣಗಳಿಂದ ಅಳತೆ ಮಾಡುವರು. ಅವುಗಳ ಗುಣ ಕ್ರಿಯಾದಿಗಳನ್ನೂ ಆ ಸಂಬಂಧದ ನಿಯಮಗಳನ್ನೂ ಕಂಡುಹಿಡಿದು, ಆ ಶಕ್ತಿಗಳನ್ನು ಉಪಯೋಗಿಸಿಕೊಂಡು ನಾನಾ ಅದ್ಭುತ ಕಾರ್ಯಗಳನ್ನು ಸಾಧಿಸುವರು. ಭೌತಶಾಸ್ತ್ರ(Physics) ಮತ್ತು ರಸಾಯನಶಾಸ್ತ್ರ (Chemistry) ಪ್ರವೀಣರು, ವಸ್ತುಗಳ (ನಾನಾ ಶಕ್ತಿಗಳ) ಗುಣ ಕ್ರಿಯೆಗಳನ್ನು ನಿರ್ಧರಿಸಲಿಕ್ಕಾಗಿ, ಅತಿ ಸೂಕ್ಷ್ಮ ಉಪಕರಣಗಳನ್ನು ಸಿದ್ಧಗೊಳಿಸಿದ್ದಾರೆ.

ಅವುಗಳಲ್ಲಿ ಅತಿ ಸೂಕ್ಷ್ಮ ಕಾಲ, ಪರಿಮಾಣ, ವೇಗ, ತೂಕ ಇತ್ಯಾದಿಗಳನ್ನು ಅಳೆಯುವುವು ಕೆಲವು ಸೂಕ್ಷ್ಮದರ್ಶಕಗಳು (Microscopes), ದೂರದರ್ಶಕ-ಗಳು (Telescopes), ದೂರಶ್ರವಣಗಳು (Radia-telephones), ಸೂಕ್ಷ್ಮ ಛಾಯಾಗ್ರಾಹಕಗಳು, (Radio-photography) ಇತ್ಯಾದಿ ವಿಸ್ಮಯಕಾರಕ ಉಪಕರಣಗಳೂ ಇವೆ. ಇವೆಲ್ಲ ಸಾಧನಗಳಿಂದ, ನೋಡಲ್ಪಡುವ ಪರೀಕ್ಷಿಸಲ್ಪಡುವ-ತಿಳಿಯಲ್ಪಡುವ ವಸ್ತುಗಳ ಸಂಬಂಧವಾದ ಅತಿಶಯ ವಿಶೇಷಗಳನ್ನು ತಿಳಿಯಬಹುದಾದರೂ, ನೋಡುವ, ಪರೀಕ್ಷಿಸಿ ತಿಳಿಯುವ ಜ್ಞಾನ ವಿಶಿಷ್ಟ ವಸ್ತುವಿನ ಬಗ್ಗೆ ಏನನ್ನೂ ತಿಳಿಯಲಾಗುವುದಿಲ್ಲ. ಚಂದ್ರನನ್ನೋ, ನಕ್ಷತ್ರವನ್ನೋ ಪರೀಕ್ಷಿಸಿ, ಅದರ ಪ್ರಕಾಶ, ದೂರ, ಪರಿಮಾಣ, ತೂಕ, ವೇಗಗಳನ್ನು ತಿಳಿದು, ಅದರ ನಾನಾ ಮುಖಗಳ ಚಿತ್ರಗಳನ್ನೂ ದೊರಕಿಸ-ಬಹುದು. ಆದರೆ ಅದನ್ನು 'ನಾವು ನೋಡುವುದರ' ವಿಷಯಕ್ಕೆ ವಿಜ್ಞಾನವು (Science) ನಮಗೆ ಏನನ್ನೂ ತಿಳಿಸಲಾರದು. ಸರ್ ಚಾರ್ಲ್ಸ್ ಷೆರಿಂಗ್ ಟನ್ (Sir Charles Sherrington) ಎಂಬ ಶ್ರೇಷ್ಠ ವಿಜ್ಞಾನಿಯು, 'As to our seeing the star,it says nothing-that is where science forsakes us' ಎಂದು ಹೇಳಿರುವನು. ವಿಜ್ಞಾನ ಮತ್ತು ಅದರ ಕುಶಲೋಪಯೋಗ ಚಾತುರ್ಯಗಳು (Science and technology) ಅದ್ಭುತವಾಗಿ ಬೆಳೆದಿವೆ. ಮಾನವನು ತನ್ನ ಬುದ್ಧಿಕೌಶಲ್ಯದಿಂದ ಮಾಡಬಹುದಾದ ವಿವಿಧ ಕಾರ್ಯಗಳನ್ನು, ಯಾವ ತಪ್ಪುಗಳಿಗೆ ಅವಕಾಶವಿಲ್ಲದಂತೆ ಶೀಘ್ರವಾಗಿ ನಿರ್ವಹಿಸುವ (ಸ್ವಯಂ ಅಗಾಧ ಜ್ಞಾನವಿದ್ದಂತೆ ವ್ಯಾಪಾರ ಮಾಡುವ) ಯಂತ್ರಗಳು (Computers-ತೊಡಕಿನ ಲೆಕ್ಕಗಳನ್ನು ಲೀಲೆಯಿಂದ ಉತ್ತರಿಸುವ ಯಂತ್ರ ಮೊದಲಾದವು) ಸಿದ್ಧಗೊಳಿಸಲ್ಪಟ್ಟಿವೆ. ವಿದ್ಯಾರ್ಥಿಗಳು ಐಚ್ಛಿಕ ವಿಷಯಗಳನ್ನು ಆರಿಸಿಕೊಳ್ಳುವ, ಉಪಜೀವನಕ್ಕಾಗಿ ಯಾವ ಕಸಬನ್ನು ಕೈಗೊಳ್ಳಬೇಕೆಂಬ, ವಿವಾಹ ವಿಷಯಕವಾದ, ದಾಂಪತ್ಯಜೀವನಕ್ಕೆ ಸಂಬಂಧಿಸಿದ, ಮೊದಲಾದ ನಾನಾ ಸಮಸ್ಯೆಗಳಿಗೆ ಸರಿಯಾದ ಪರಿಹಾರಗಳನ್ನು ಹೇಳುವ ಯಂತ್ರಗಳಿವೆ. ಆದರೆ ವಸ್ತುತಃ ಈ ಯಾವ ಯಂತ್ರಗಳೂ ಜ್ಞಾನವುಳ್ಳವುಗಳಲ್ಲ - ಜಡವಸ್ತುಗಳೇ ಆಗಿವೆ. (ಜ್ಞಾನವುಳ್ಳ ಮನುಷ್ಯ)

ಪ್ರವೀಣರು ತಮ್ಮ ಅನುಭವಗಳನ್ನು ವ್ಯವಸ್ಥಿತವಾಗಿ, ದೀರ್ಘಕಾಲ ಶ್ರಮದಿಂದ, ಅವುಗಳಲ್ಲಿ ತುಂಬುತ್ತಾರೆ. ಹೀಗೆ ಸಿದ್ಧವಾದ ಯಂತ್ರವು ತನ್ನ ಕೆಲಸವನ್ನು ಕ್ಷಣಕಾಲದಲ್ಲಿ ಮಾಡಬಲ್ಲದು. ಚೇತನತ್ವವಿರುವುದರಿಂದ ಅಲ್ಲ. (Venus-4) 'ಶುಕ್ರಗ್ರಹ-೪' ಎಂಬ ರಷ್ಯನ್ ವಿಜ್ಞಾನಿಗಳು ಹಾರಿಬಿಟ್ಟ ಯಂತ್ರ ವಿಶೇಷವು, ತನ್ನೊಳಗೆ ಸ್ಥಾಪಿಸಲ್ಪಟ್ಟಿದ್ದ ನಾನಾ ಸೂಕ್ಷ್ಮ ಉಪಕರಣಗಳೊಂದಿಗೆ, ೧೮-೧೦-೬೭ರಲ್ಲಿ ಶುಕ್ರ ಗ್ರಹದ ಮೇಲಿಳಿದು, ಅಲ್ಲಿನ ವಾಯುಮಂಡಲದ ಒತ್ತಡ (Pressure), ನಿಬಿಡತೆ (Density), ಉಷ್ಣಮಾನ (Temperature), ಅದರಲ್ಲಿನ ಅನಿಲ ವಿಶೇಷಗಳು ಮತ್ತು ಅವುಗಳ ಪರಿಮಾಣ ಮೊದಲಾದ ನಾನಾ ಸೂಕ್ಷ್ಮ ವಿಷಯಗಳನ್ನು ರೇಡಿಯೋ ದ್ವಾರಾ ಭೂಮಿಗೆ ತಿಳಿಸಿತು. ಇಂತಹ ಅದ್ಭುತಗಳನ್ನು ವೈಜ್ಞಾನಿಕ ಪ್ರವೀಣರು, ದಿನದಿನಕ್ಕೂ ಮುಂದಡಿ ಇಡುತ್ತಾ ಸಾಧಿಸುತ್ತಿರುವರು. ಈ ಎಲ್ಲವೂ ಮಾನವ ಬುದ್ಧಿಯ ವಿಕಾಸವಲ್ಲದೇ ಜಡ ಯಂತ್ರೋಪಕರಣಗಳ ಬುದ್ಧಿಪೂರ್ವಕ ವ್ಯಾಪಾರಗಳಲ್ಲ. ಮನಸ್ಸು, ಆಲೋಚನಾಶಕ್ತಿ , ಮೊದಲಾದವುಗಳು ಸಹ ಚೇತನಪ್ರೇರಿತಗಳಾಗಿಯೇ ಕೆಲಸ ಮಾಡುವುವು. ಆದರೆ ಜ್ಞಾನ ಮತ್ತು ಜ್ಞಾನಕಾರ್ಯಗಳು ಸಹ ಜಡಶಕ್ತಿಗಳ ರೂಪಾಂತಗಳೆಂದು ಭಾವಿಸುವ ಕೇವಲ ಜಡವಾದಿಗಳಾದ (Pure materialists) ವಿಜ್ಞಾನಿಗಳೂ ಇರುವರು. ಇವರು ಅತಿ ವಿರಳರು. ವೈಜ್ಞಾನಿಕ ಪ್ರಗತಿಯನ್ನು ಸಾಧಿಸುವ ಮತ್ತು ಆ ಬಗ್ಗೆ ಅವಶ್ಯಕವಾದ ಸೂಕ್ಷ್ಮ ವಿಷಯಗಳನ್ನು ಗ್ರಹಿಸುವ ದೇಹೇಂದ್ರಿಯಗಳಿಂದ ಭಿನ್ನವಾದ ಚೇತನವಿರುವುದೆಂದೂ, ವಿಶ್ವಸಂಚಾಲಕ ಪರಮಚೇತನ (Supreme spirit) ವಿರುವುದೆಂದೂ ತಿಳಿಯುವ ತತ್ವಜ್ಞಾನಿಗಳೂ ವಿಜ್ಞಾನಿಗಳಲ್ಲಿ (Scientific Philosophers) ಬಹು ಮಂದಿ ಇರುವರು. ಹೀಗಿದ್ದರೂ ಜನ ಸಾಮಾನ್ಯತೆಯಲ್ಲಿ ನಾಸ್ತಿಕ್ಯವು ಬೆಳೆಯುತ್ತಿರುವುದು ಆಶ್ಚರ್ಯಕರ ಮತ್ತು ಶೋಚನೀಯ.

ಪ್ರಕೃತ, ಸೂರ್ಯಕಾಂತ ಶಿಳೆಯ ಧರ್ಮಗಳನ್ನು ನಿಯಂತ್ರಿಸುವ ಈಶ್ವರೀ ಶಕ್ತಿಯನ್ನು , ಪರ್ಯವಸಾನದಲ್ಲಿ ಒಪ್ಪಲೇಬೇಕಾಗುವುದು. ಲೋಕಾನುಭವ-ಸಿದ್ಧವಾದ ಇನ್ನೂ ಕೆಲವು ನಿದರ್ಶನಗಳನ್ನು ಲಕ್ಷಿಸಬಹುದು.

(೭) ಜಲಪಾನದಿಂದ ತೃಷೆಯು (ನೀರಡಿಕೆಯು) ಪರಿಹಾರವಾಗುವು-ದೆಂಬುದು ಎಲ್ಲರ ಅನುಭವಸಿದ್ಧವಷ್ಟೆ. ಈ ಅನುಭವವನ್ನು ವಿಮರ್ಶಿಸ-ಬಹುದು. ನೀರಡಿಕೆಯುಂಟಾಗುವ ಪ್ರಕಾರ ಮತ್ತು ನೀರಿನಿಂದ ಅದರ ಪರಿಹಾರವಾಗುವ ರೀತಿಯನ್ನು ಪ್ರಾಣಿದೇಹ ವಿಜ್ಞಾನಶಾಖೆಯು ವಿವರಿಸುತ್ತದೆ. ದೇಹವು ತನ್ನ ಕಾರ್ಯಗಳನ್ನು ನಿರ್ವಹಿಸಲು, ದೇಹದಲ್ಲಿ ನಿರ್ದಿಷ್ಟ ಪ್ರಮಾಣದ ಜಲವಿರಬೇಕು. ಅದರಲ್ಲಿ ಕೊರತೆಯುಂಟಾಗಲು ದಾಹ (ತೃಷೆಯು) ತೋರುತ್ತದೆ. ಆಗ ನೀರನ್ನು ಕುಡಿದರೆ ದಾಹವಡಗುತ್ತದೆ. ಕುಡಿದ ನೀರು ಪರಿಣಾಮಗೊಂಡು (ರೂಪಾಂತರವನ್ನು ಹೊಂದಿ) ನರ, ಮಾಂಸಖಂಡ ಮೊದಲಾದ ನಾನಾ ಅವಯವಗಳನ್ನು ಉಪಚಯಗೊಳಿಸಿ, ಅಧಿಕ ಪ್ರಮಾಣ-ದಲ್ಲಿರುವ ಲವಣಾದಿಗಳನ್ನೂ ದೇಹದೊಳಗಿನ ಕೆಲವು ಮಲಾಂಶಗಳನ್ನೂ ಮೂತ್ರರೂಪದಿಂದ ಹೊತ್ತು ಹೊರಗೆ ಸಾಗಿಸುತ್ತದೆ. ಈ ಕಾರ್ಯವನ್ನು ಜಲವು ಮೃತ ಶರೀರದಲ್ಲಿ ಮಾಡಲು ಸಮರ್ಥವಲ್ಲ-ಎಲ್ಲ ಜೀವಚ್ಛರೀರಗಳಲ್ಲಿಯೂ ಅಲ್ಲ ಮತ್ತು ಏಕಪ್ರಕಾರದಿಂದಲೂ ಅಲ್ಲ. ನೀರು, ಹೀಗೆ ರೂಪಾಂತರ ಹೊಂದಿ, ತನ್ನ ಕಾರ್ಯವನ್ನು ಮಾಡಲು, ದೇಹದೊಳಗೆ ಕೆಲವು ವಿಶಿಷ್ಟ ಪರಿಸ್ಥಿತಿಗಳಿರಬೇಕಾಗುತ್ತದೆ. ಆ ವಿಧದ ಪರಿಸ್ಥಿತಿಗಳಿದ್ದರೂ ಎಲ್ಲ ಪ್ರಾಣಿಗಳಿಗೆ ತಪ್ಪದೇ ನೀರಡಿಕೆಯುಂಟಾಗುವುದೆಂಬ ನಿಯಮವಿಲ್ಲ ಮತ್ತು ಜಲಪಾನದಿಂದ ಎಲ್ಲರಿಗೆ, ಎಲ್ಲ ಕಾಲಗಳಲ್ಲಿ ಏಕಪ್ರಕಾರದ ತೃಪ್ತಿಯುಂಟಾಗುವುದೆಂಬ ನಿಯಮವೂ ಇಲ್ಲ. ಮಹಾ ಜ್ವರದಿಂದ ಹುಟ್ಟಿದ ದಾಹವು ಎಷ್ಟು ನೀರು ಕುಡಿದರೂ ಉಪಶಮನವಾಗುವುದಿಲ್ಲ. ಹಸಿವು-ನೀರಡಿಕೆಗಳನ್ನುತ್ಪಾದಿಸುವ (ಅಶನಾ ಪಿಪಾಸೆಗಳನ್ನು ನಿಯಂತ್ರಿಸುವ) ಪ್ರಾಣದೇವನ ಎರಡು ರೂಪ-ಗಳಿಂದಾಗುವ ಭಾವಗಳಿವು ಎಂದು ಉಪನಿಷತ್ತುಗಳು ಹೇಳುತ್ತವೆ. 'ತೃಪ್ತಿ' ಎಂದು ಕರೆಯಲಾಗುವ ಮನೋಭಾವವು, ಹೇಗೆ, ಏಕೆ ಉಂಟಾಗುತ್ತ-ದೆಂಬುದನ್ನು ವಿಜ್ಞಾನ ಶಾಸ್ತ್ರವು ಕಾರಣಗಳನ್ನೂ ತಿಳಿಯಲಾರದು. ನಾನಾ ಪ್ರಕಾರದ ಅನುಭವಗಳು ಚೇತನಕ್ಕೆ ಮಾತ್ರ-ಜಡಕ್ಕಲ್ಲ. ಜಡಕ್ಕೆ (ಸ್ಥೂಲಸೂಕ್ಷ್ಮ ವಿಶೇಷಗಳುಳ್ಳ ಜಡತತ್ವಗಳಿಗೆ-ವಸ್ತುಗಳಿಗೆ) ಜ್ಞಾನವಿಲ್ಲ-ಜ್ಞಾನಯುಕ್ತವಾದಂತೆ ಅವುಗಳ ಕ್ರಿಯೆಗಳು ತೋರಿದರೆ, ಆ ಕ್ರಿಯಾಪ್ರೇರಕ ಚೇತನವಿರಲೇಬೇಕೆಂದು

ಅಂಗೀಕರಿಸಬೇಕಾಗುತ್ತದೆ. **ನಾನಾ ತತ್ವಗಳನ್ನು ನಿಯಂತ್ರಿಸುವ ಚೇತನವರ್ಗವು (ದೇವತಾ ಸಮುದಾಯವು) ಈಶ್ವರಾಧೀನವೆಂದೂ ಆತನೇ ಸ್ವತಂತ್ರ, ಸರ್ವ ನಿಯಾಮಕನೆಂದೂ ತಿಳಿದು ಬರುತ್ತದೆ.** 'ಬುದ್ಧಿರ್ಜ್ಞಾನಮ ಸಂಮೋಹಃ ಕ್ಷಮಾಸತ್ಯಂ ದಮಃ ಶಮಃ । ಸುಖಂ ದುಃಖಂ ಭವೋऽಭಾವೋ ಭಯಂ ಚಾಭಯ ಮೇವ ಚ । ಅಹಿಂಸಾ ಸಮತಾ ತುಷ್ಟಿಃ ತಪೋದಾನಂ ಯಶೋऽಯಶಃ। ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥' (ಗೀತಾ) - 'ಬುದ್ಧಿ (ವಿವೇಕ), ಜ್ಞಾನ, ನಿಶ್ಚಯಜ್ಞಾನ, ಕ್ಷಮಾ, ಸತ್ಯ , ದಮ (ಇಂದ್ರಿಯ ನಿಗ್ರಹ), ಶಮ (ಶಾಂತಿ-ಏಕಾಗ್ರತೆ), ಸುಖ, ದುಃಖ, ಭವ (ಉತ್ಪತ್ತಿ-ದೇಹ ಸಂಬಂಧ), ಸ್ಥಿತಿ, ಲಯ, ಭಯ, ಅಭಯ, ಅಹಿಂಸೆ, ಸಮತ್ವ, ತುಷ್ಟಿ(ತೃಪ್ತಿ), ತಪಸ್ಸು, ದಾನ, ಕೀರ್ತಿ, ಅಪಕೀರ್ತಿ ಇವೇ ಮೊದಲಾದ ವಿವಿಧ ಭಾವಗಳು (ಧರ್ಮಗಳು) ಪ್ರಾಣಿಗಳಿಗೆ ನನ್ನಿಂದಲೇ ಉಂಟಾಗುವುವು' ಎಂಬ ಶ್ರೀಕೃಷ್ಣನ ಪ್ರತಿಜ್ಞಾವಾಕ್ಯವನ್ನು ಇಲ್ಲಿಗಮನಿಸಬಹುದು. ಜಲಪಾನದಿಂದ ಲಭಿಸುವ ತೃಪ್ತಿಯನ್ನು ಈಶ್ವರನಿಂದಲೇ ಪ್ರಾಣಿಗಳು ಹೊಂದುತ್ತವೆ. ಅದು ಎಲ್ಲರಿಗೆ ಎಲ್ಲ ಸಂದರ್ಭಗಳಲ್ಲಿ ದೊರೆಯುವುದಿಲ್ಲವೆಂಬುದರಿಂದ, ಜೀವ ಮತ್ತು ಅದೃಷ್ಟಗಳೂ ಸಿದ್ಧವಾಗುತ್ತವೆ.

(೮) ಯಾವುದೊಂದು ಪ್ರಾಣಿಯು ಮೃತವಾದ ನಂತರ ಅದರ ದೇಹವು ವಿಕಾರಹೊಂದಿ, ಪೃಥ್ವಿ ಮೊದಲಾದ ಪಂಚಭೂತಗಳಲ್ಲಿ ಸೇರಿ ಹೋಗುತ್ತದೆ. ಜೀವವಿರುವ ದೇಹವು ಹೀಗೆ ವಿಕಾರಗೊಳ್ಳುವುದಿಲ್ಲ ಮತ್ತು ಭೂತಗಳಲ್ಲಿ ಸೇರುವುದಿಲ್ಲ-ನಮ್ಮ ಇಚ್ಛೆಯಿಂದಲೂ ಹೀಗೆ ಸೇರುವುದಿಲ್ಲ. ದೇಹದಲ್ಲಿರುವ ಪಂಚಭೂತಗಳ ಅಂಶಗಳು ನಮ್ಮ ಅಧೀನಗಳಲ್ಲ. ಇದರಿಂದ ಸಹ ಅದೃಷ್ಟ ಮತ್ತು ನಿಯಾಮಕ ಈಶ್ವರನನ್ನು ತರ್ಕಿಸಿ ತಿಳಿಯಬಹುದು.

(೯) ಗಣಪತಿ, ಸೂರ್ಯ ಮೊದಲಾದ ನಾನಾ ದೇವತೆಗಳಲ್ಲಿ ವಿಶ್ವಾಸವಿರುವ ಅನೇಕರು, ಸಂತಾನ ಸಂಪದಾದಿಗಳ ಪ್ರಾಪ್ತಿಗಾಗಿ ದೇವತೆಗಳನ್ನು ಪೂಜಿಸು-ವುದನ್ನು ಕಾಣುತ್ತೇವೆ. ಅಂಥವರು ಇಚ್ಛಿತ ಫಲಗಳನ್ನೂ ಹೊಂದುತ್ತಾರೆ. ಆದರೆ, ಹಾಗೆ ಪೂಜಿಸಿ ಯಾಚಿಸುವ ಎಲ್ಲರಿಗೆ, ಎಲ್ಲ ಕಾಲ ದೇಶಗಳಲ್ಲಿ ಇಚ್ಛಿತ

ಫಲಗಳು ದೊರೆಯುವುದಿಲ್ಲ. ಇದರಿಂದ ಜೀವ, ಅದೃಷ್ಟ, ಈಶ್ವರರೆಂಬ ಅತೀಂದ್ರಿಯ ವಸ್ತುಗಳನ್ನು ಸಾಧಿಸಬಹುದು.

(೧೦) ಮೃತನಾದೊಡನೆ ದೇಹದ ಸರ್ವ ಚೇಷ್ಟೆಗಳೂ ನಿಂತುಹೋಗುತ್ತವೆ. ನಿರ್ಜೀವ ದೇಹದಲ್ಲಿ ಯಾವ ಚೇಷ್ಟೆಯೂ (ಕ್ರಿಯೆಯೂ) ಇರುವುದಿಲ್ಲ. ದೇಹದ ನಾನಾ ಕ್ರಿಯೆಗಳಿಗೆ ಕಾರಣವಾದ ಚೇತನವು ಅಲ್ಲಿಲ್ಲದಿರುವುದೇ ಅದಕ್ಕೆ ಕಾರಣವೆಂದು ಹೇಳದೇ ಗತ್ಯಂತರವಿಲ್ಲ. ಹಿಂದಿನ ಕ್ಷಣದಲ್ಲಿ ನಾನಾ ವ್ಯಾಪಾರಗಳನ್ನು ನಿರ್ವಹಿಸುತ್ತಿದ್ದ ದೇಹವು ಸಹಸಾ ನಿಶ್ಚೇಷ್ಟಿತವಾಗುವುದೇಕೆ? ತಂತಿಯೊಳಗಿನ ವಿದ್ಯುತ್ಪ್ರವಾಹವು ನಿಲ್ಲಲು, ವಿದ್ಯುತ್ತಿನ ತೀವ್ರತೆಯ ಅಧಿಕ್ಯ (voltage), ಸಂಬಂಧ ವಿಚ್ಛೇದ ಇತ್ಯಾದಿ ಕಾರಣಗಳನ್ನು ವಿಜ್ಞಾನಿಗಳು ನಿರೂಪಿಸುವಂತೆ, ಪಂಚಭೂತಗಳ (ನಾನಾ ಪ್ರಾಕೃತ ಶಕ್ತಿಗಳ ಅಥವಾ ವಸ್ತುಗಳ) ಸಂಘಾತದಿಂದ ಚೇತನಶಕ್ತಿಯು ಹುಟ್ಟಿದ್ದಾಗಿದ್ದರೆ, ಅದು ಅದೃಶ್ಯವಾಗಲು ಕಾರಣವನ್ನು ಹೇಳಬೇಕಲ್ಲವೇ? ವಿಜ್ಞಾನಿಗಳು ಈ ವಿಷಯದಲ್ಲಿ ಅಸಮರ್ಥ-ರಾಗಿರುವರು. ನಾನಾ ಊಹೆಗಳಿಂದ ನಿರೂಪಿಸುವ ಕಾರಣಗಳ ಮೂಲಕಾರಣ-ವನ್ನು ಎಂದಿಗೂ ತಿಳಿಯಲಾರರು. ದೃಢಕಾಯರಾದ ಅನೇಕರ ಮರಣಕ್ಕೆ ಕಾರಣವನ್ನು ಹೇಳಲಾರರು ಮತ್ತು ನಾನಾ ರೋಗಗಳಿಂದ ಪೀಡಿತರಾದ, ದೇಹದ ಒಳಹೊರಗಿನ ಅಂಗಗಳು ನಶಿಸಿ ಹೋದ ಅನೇಕರು, 'ಹೇಗೆ ಬದುಕಿರುವರೆಂಬುದನ್ನೇ, ನಾವು ತಿಳಿಯೆವು' ಎಂದು ಪ್ರಸಿದ್ಧ ಡಾಕ್ಟರು ಹೇಳಿದಾಗಲೂ, ಬದುಕಿರುವರು-ಗುಣ ಹೊಂದಿ ದೃಢಾಂಗರೂ ಆಗರುವರು. ಆದ್ದರಿಂದ ಈ ನಿದರ್ಶನವೂ ಸಹ ಜೀವ, ಅದೃಷ್ಟ ಮತ್ತು ಇವುಗಳ ಸ್ವತಂತ್ರ ನಿಯಾಮಕ ಈಶ್ವರ-ಇವುಗಳನ್ನು ಸಾಧಿಸಿ ಕೊಡುತ್ತದೆ.

ಈ ವಿಧದ ಇನ್ನೂ ಅನೇಕ ನಿದರ್ಶನಗಳನ್ನು ಉದಾಹರಿಸಬಹುದು. ಅವುಗಳನ್ನು ವಿಮರ್ಶಿಸಿದರೆ ಅತೀಂದ್ರಿಯ ವಸ್ತುಗಳು ಸಿದ್ಧಿಸುವುದರಲ್ಲಿ ಸಂದೇಹವಿಲ್ಲ. ಏವಂ ಚ ಆಗಮ ಸಹಾಯವಿಲ್ಲದ ಕೇವಲ ತರ್ಕದಿಂದ ಜೀವ, ಈಶ್ವರ, ಅದೃಷ್ಟಾದಿ ಇಂದ್ರಿಯಾತೀತ ವಸ್ತುಗಳೇ ಇಲ್ಲವೆಂದು ನಿಶ್ಚಯಿಸಲು ಸಾಧ್ಯವಿಲ್ಲೆಂಬುದನ್ನು ಮನಗಾಣಬಹುದು. ಹೀಗಿರಲು ನಾಸ್ತಿಕವಾದವನ್ನು

ತರ್ಕದಿಂದ ಸಮರ್ಥಿಸುವುದು ದುಸ್ಸಾಧ್ಯವೇ ಸರಿ. ನಾಸ್ತಿಕ್ಯವನ್ನು ನಿರಾಕರಿಸಲು ಪ್ರವೃತ್ತವಾದ 'ಮೋಕ್ಷಧರ್ಮ'ವೆಂಬ ಮಹಾಭಾರತ ಭಾಗದಿಂದ ಎತ್ತಿ, ಈ ಮೇಲಿನ ನಿದರ್ಶನಗಳನ್ನು ಉದಾಹರಿಸಲಾಗಿದೆ.[2] 'ಯದಿ ಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್' ಇಲ್ಲಿರುವ ವಿಷಯಗಳೇ ಅನ್ಯತ್ರ ಪ್ರತಿಪಾದಿಸಲ್ಪಡುತ್ತವೆ; ಇಲ್ಲಿ (ಭಾರತದಲ್ಲಿ) ಇಲ್ಲದ್ದು ಬೇರೆಲ್ಲಿಯೂ ಇಲ್ಲ' ಎಂಬ ಪ್ರಾಚೀನ ಜ್ಞಾನಿಗಳ ವಾಕ್ಯವು ಎಷ್ಟು ಅರ್ಥಪೂರ್ಣ ಮತ್ತು ಸತ್ಯವೆಂಬುದನ್ನು ಈ ನಿದರ್ಶನಗಳ ವಿಮರ್ಶೆಯಿಂದ ತಿಳಿಯಬಹುದು. ಮಹಾ ಭಾರತದ (ಮೋಕ್ಷ ಧರ್ಮಭಾಗದ) ಈ ವಾಕ್ಯಗಳ ಮೇಲಿನ ವ್ಯಾಖ್ಯಾನಗಳನ್ನು ಗುರುದ್ವಾರಾ ಅಧ್ಯಯನ ಮಾಡಿದರೆ, ಪ್ರಾಚೀನರು ಲೋಕಾನುಭವಗಳನ್ನು, ಆಧುನಿಕ ವಿಜ್ಞಾನಿಗಳಿಗಿಂತ, ತೀಕ್ಷ್ಣವೂ ಗಾಢವೂ ಆದ ವಿಮರ್ಶೆಗೊಳಪಡಿಸಿ ನಿರ್ಣಯಗಳನ್ನು ಸಾಧಿಸಿರುವರೆಂಬುದು ಸ್ಪಷ್ಟವಾಗುತ್ತದೆ.

## ಪರಿಚ್ಛೇದ ೫

## ಈಶ್ವರಾಚಿಂತ್ಯ ಶಕ್ತಿ

### ಜೀವೇಶ್ವರ ಸಂಬಂಧ ಮತ್ತು ನಿತ್ಯಸುಖದ ಮಾರ್ಗ

ಹಿಂದಿನ ಪರಿಚ್ಛೇದದಲ್ಲಿ 'ಮೋಕ್ಷ ಧರ್ಮ' ವಾಕ್ಯ ಪ್ರಸಕ್ತ ನಿದರ್ಶನಗಳ ವಿಮರ್ಶೆಯಿಂದ ಜೀವ, ಈಶ್ವರಾದಿ ಇಂದ್ರಿಯಾತೀತ ವಸ್ತುಗಳು ಸಿದ್ಧಿಸುವುವೆಂದೂ, ಇವು ವಿಜ್ಞಾನ ಶಾಸ್ತ್ರದ ವ್ಯಾಪ್ತಿಗೆ ಒಳಪಡುವುದಿಲ್ಲವೆಂದೂ,

2. ''ರೇತೋ ಧಾತುರ್ವಟಕಣಿಕಾ ಘೃತ ಧೂಮಾಧಿವಾಸನಮ್ । ಜಾತಿಸ್ಮೃತಿ ರಯಸ್ಕಾಂತಃ ಸೂರ್ಯ ಕಾಂತೋಽಂಬುಭಕ್ಷಣಮ್ । ಪ್ರೇತ್ಯಭೂತಾ ಪ್ಯಯಶ್ಚೈವ ದೇವತಾಭ್ಯುಪಯಾಚನಮ್ । ಮೃತೇ ಕರ್ಮನಿವೃತ್ತಿಶ್ಚ ಪ್ರಮಾಣಮಿತಿ ನಿಶ್ಚಯಮ್ । ಇತಿ ಮೋಕ್ಷ ಧರ್ಮವಚನಾನ್ನ ನಾಸ್ತಿಕ್ಯವಾದೋ ಯುಜ್ಯತೇ ॥'' ಸೂತ್ರಭಾಷ್ಯದಲ್ಲಿ ಶ್ರೀಮನ್ಮಧ್ವಾಚಾರ್ಯರು 'ಓಂ ಶಾಸ್ತ್ರ ಯೋನಿತ್ವಾತ್ ಓಂ' ಎಂಬ ಸೂತ್ರದ ವ್ಯಾಖ್ಯಾನದಲ್ಲಿ ನುಡಿದಿರುವ ವಾಕ್ಯ.

ಹೇಳಲಾಯಿತಷ್ಟೆ. ಇನ್ನೂ ಅನೇಕ ಪ್ರತ್ಯಕ್ಷಸಿದ್ಧ ವಿಷಯಗಳೂ ಲೋಕಾನುಭವ-ಗಳೂ, ಚೇತನಾಚೇತನಾತ್ಮಕ ವಿಶ್ವವನ್ನು ಅಚಿಂತ್ಯವಾದ ಅದ್ಭುತ ಶಕ್ತಿಯೊಂದು ಸರ್ವಪ್ರಕಾರದಿಂದ ನಿಯಂತ್ರಿಸುತ್ತಿರುವುದೆಂದು ಸಾಧಿಸುತ್ತವೆ. ಬ್ರಹ್ಮ, ಪರಮಾತ್ಮ, ವಿಷ್ಣು ಇತ್ಯಾದಿ ನಾನಾ ನಾಮಗಳಿಂದ ವ್ಯವಹರಿಸಲ್ಪಡುವ ಈ ಅದ್ಭುತ ಈಶ್ವರೀ ಶಕ್ತಿಯು, ದೇಶಕಾಲಗಳಿಂದ ಅಪರಿಚ್ಛಿನ್ನವಾದ (ವ್ಯಾಪ್ತವಾದ) ಸರ್ವಜ್ಞ ಸ್ವತಂತ್ರ ವಸ್ತುವೆಂದೂ ತಿಳಿದುಬರುತ್ತದೆ. ಜೀವ ಚೇತನರೆಲ್ಲರೂ ಸರ್ವದಾ ಸರ್ವಪ್ರಕಾರದಿಂದ ಈ ವಸ್ತುವಿನ (ಈಶ್ವರನ) ಅಧೀನರೆಂದೂ, ಈ ಸ್ವತಂತ್ರ ಪ್ರಭುವು ಜೀವರ ಯೋಗ್ಯತೆಯನ್ನೂ ಅವರ ಪೂರ್ವ ಕರ್ಮಗಳನ್ನೂ (ಅದೃಷ್ಟವನ್ನೂ) ಅನುಸರಿಸಿ, ಅವರಿಂದ ವಿವಿಧ ಕರ್ಮಗಳನ್ನು ಮಾಡಿಸಿ, ಅವುಗಳ ಫಲರೂಪವಾದ ಸುಖದುಃಖಗಳನ್ನು ಉಣಿಸುವನೆಂದೂ, ಕರ್ಮಾನುಸಾರವಾದ ನಾನಾ ದೇಹಗಳನ್ನು ಹೊಂದಿಸಿ, ನಿತ್ಯವಾದ ಅವರವರ ಸ್ವರೂಪ ಸ್ಥಿತಿಗಳನ್ನು ದೊರಕಿಸುವನೆಂದೂ ತಿಳಿಯಬಹುದಾಗಿದೆ. ಹೀಗೆ ಜೀವೇಶ್ವರರ ಸ್ವರೂಪ ಮತ್ತು ಪರಸ್ಪರ ಸಂಬಂಧವನ್ನೂ, ಮಾನವನ ಮುಖ್ಯ ಗುರಿಯಾದ ನಿತ್ಯಸುಖದ ಮಾರ್ಗವನ್ನೂ, ತಿಳಿಸಿಕೊಡುವ ಹಲವಾರು ಅನುಭವಗಳನ್ನು ಈ ಪರಿಚ್ಛೇದದಲ್ಲಿ ಗಮನಿಸಿ ವಿಮರ್ಶಿಸಲಾಗುತ್ತದೆ.

ಮೂಲಭೂತವಾದ ಒಂದು ಅದ್ಭುತ ಶಕ್ತಿಯ ರೂಪಾಂತರಗಳಾದ (ವಿಕಾರಗಳಾದ) ನಾನಾ ಶಕ್ತಿಗಳು, ವಿಶ್ವದಲ್ಲಿ ಕಾಣಬಹುದಾದ ನಾನಾ ಅದ್ಭುತಗಳಿಗೆ, ಕಾರಣವಾಗಿವೆ. ಈ ಮೂಲಶಕ್ತಿಯು ವಿಶ್ವವ್ಯಾಪಕವಾಗಿದ್ದು, ಗ್ರಹ, ಸೂರ್ಯ, ನಕ್ಷತ್ರಾದಿ ಸಕಲ ವಿಶ್ವಗತ ವಸ್ತುಗಳ ಉತ್ಪತ್ತಿ, ಸ್ಥಿತಿ, ಲಯಗಳಿಗೂ ಅವುಗಳ ಕ್ರಿಯೆಗಳಿಗೂ ಕಾರಣವೆಂದು ಅನೇಕ ವಿಜ್ಞಾನಿಗಳು ಭಾವಿಸುತ್ತಾರೆ.[3] ಅಪರಿಮಿತ ಜ್ಞಾನವುಳ್ಳ ಪರಮಚೇತನವು (Supreme

3. ಈ ಮೂಲಶಕ್ತಿಯನ್ನು ಪ್ರಾಚೀನರು ಸ್ವಭಾವ-ಪ್ರಕೃತಿ-ಪ್ರಧಾನ-ಮಾಯಾ ಇತ್ಯಾದಿ ಶಬ್ದಗಳಿಂದ ಕರೆದಿರುವರು. ಇದರ ವಿಕೃತ ರೂಪಗಳು ಪೃಥಿವ್ಯಾದಿ ಪಂಚಭೂತಗಳು. ಬ್ರಹ್ಮಾಂಡದಲ್ಲಿರುವ ಸಕಲ ವಸ್ತುಗಳೂ ಇವುಗಳಿಂದಲೇ ಆದವುಗಳೆಂಬುದು ನಿಜ. ಆದರೆ, ಪ್ರಕೃತಿಯು ಅಚೇತನ—ಎಂದರೆ ಜ್ಞಾನ ಪೂರ್ವಕವಾದ ಸ್ವತಂತ್ರ ಪ್ರವೃತ್ತಿಯುಳ್ಳದ್ದಲ್ಲ-ಈಶ್ವರಾಧೀನವಾದ ವಸ್ತು-ಜಗದ್ವಸ್ತುಗಳಿಗೆ ಉಪಾದಾನ ಕಾರಣಮಾತ್ರ-ಗಡಿಗೆಗೆ ಮಣ್ಣಿನಂತೆ.

spirit) ಒಂದು ಇರಲಿಕ್ಕೇ ಬೇಕೆಂದು ಊಹಿಸುವ ಪ್ರವೀಣರೂ ಇರುವರೆಂದು ಈ ಹಿಂದೆ ಹೇಳಲಾಗಿದೆಯಷ್ಟೆ-ಅವರು ಬಹು ವಿರಳ. ಈ ಉಭಯ ಮತಗಳಲ್ಲಿ, ಲೋಕಾನುಭವಗಳು, ಯಾವುದನ್ನು ಸಮರ್ಥಿಸುವುವೆಂಬುದನ್ನು ಸ್ವಲ್ಪ ವಿಸ್ತಾರವಾಗಿಯೇ ಪರಾಮರ್ಶಿಸುವುದು ಅತ್ಯವಶ್ಯಕ.

''ಕ್ರಿಯಾ ವಿಶಿಷ್ಟವಾದ ಈ ದೇಹವೇ ನಾನು; ನಾನು ಭೋಗಿಸುವ ಎಲ್ಲ ವಸ್ತುಗಳು ನನ್ನವು'' ಎಂಬ ಭಾವವು ತಾರತಮ್ಯದಿಂದ ಎಲ್ಲ ಪ್ರಾಣಿಗಳಲ್ಲಿ ಕಂಡುಬರುತ್ತದೆ. ಭೋಗ್ಯ ವಸ್ತುಗಳು ನಮ್ಮ ಅಧೀನವೆಂದೂ, ಅವುಗಳ ಭೋಗದಿಂದ ಸುಖವಾಗುತ್ತದೆಂದೂ ತಿಳಿದು ಭೋಗಿಸುತ್ತೇವೆ. ಆದರೆ, ನಿಯಮೇನ (ತಪ್ಪದೇ) ಸುಖವನ್ನು ಪಡೆಯುವುದಿಲ್ಲ. ಭೋಗ ಕಾಲದಲ್ಲಿ ತೋರುವ ತಾತ್ಕಾಲಿಕ ಸುಖಾನುಭವವು ಪರಿಣಾಮದಲ್ಲಿ ದುಃಖವನ್ನೇ ತಂದೊಡ್ಡುತ್ತದೆಂಬ ಅನುಭವವೂ ಇದೆ. ವಿಷಯಭೋಗದಿಂದ ದೊರೆಯುವ ಸುಖವು ಕ್ಷಣಿಕವೆಂಬುದೂ ಅನುಭವಸಿದ್ಧವೇ ಆಗಿದೆ. ಈ ಸುಖವೇ ಪ್ರತಿ ಕ್ಷಣದಲ್ಲಿಯೂ ದೊರೆಯುವಂತೆ ಮಾಡಿಕೊಂಡರೆ, ಅದೇ ನಮ್ಮ ಗುರಿಯಾದ 'ನಿತ್ಯ ಸುಖ'ವೆಂದು ಭಾವಿಸುವುದು ಕೇವಲ ಭ್ರಮೆ. ನಿರಂತರ ಭೋಗಕ್ಕೆ ಅವಶ್ಯಕವಾದ ಭೋಗ್ಯ ವಸ್ತುಗಳನ್ನು ದೊರಕಿಸಿಕೊಳ್ಳುವುದು ಅಸಾಧ್ಯ. ದೇಹೇಂದ್ರಿಯಗಳಲ್ಲಿ ನಿರಂತರ ಭೋಗ ಸಾಮರ್ಥ್ಯವೂ ಇಲ್ಲ. ಕಾಲಗತಿಯಿಂದ ಇಂದ್ರಿಯಗಳು ಕುಂಠಿತವಾಗುತ್ತವೆ-ಒಂದೊಂದಾಗಿ ನಮ್ಮ ವಶ ತಪ್ಪುತ್ತವೆ-ದೇಹವೂ ನಷ್ಟವಾಗುತ್ತದೆ. ನಶ್ವರವಾದ ಈ ದೇಹವನ್ನೇ ನಿತ್ಯವನ್ನಾಗಿ ಮಾಡಿಕೊಳ್ಳುವುದಾಗಲಿ, ನಿತ್ಯ ಭೋಗಶಕ್ತಿಯುತವನ್ನಾಗಿ ಪರಿವರ್ತಿಸಿ-ಕೊಳ್ಳುವುದಾಗಲಿ ಅಸಾಧ್ಯವೆಂದೂ ಸ್ವಭಾವ ವಿರುದ್ಧವೆಂದೂ ಎಲ್ಲರೂ ಒಪ್ಪಬೇಕು. ಆದ್ದರಿಂದ ವಿಷಯಭೋಗಜನ್ಯ ಸುಖದಲ್ಲಿ, ವಿವೇಕವುಳ್ಳ ಮಾನವನು (ವಿವೇಕರಹಿತ ಪಶುಗಳಂತೆ) ಆಸಕ್ತನಾಗಬಾರದು — ಅದನ್ನೇ ಅಪೇಕ್ಷಿತ ಸುಖವೆಂದು ಭ್ರಮಿಸಬಾರದು. ಈ ಲೋಕಾನುಭವವನ್ನೇ ಶ್ರೀಕೃಷ್ಣನು ಗೀತೆಯಲ್ಲಿ, 'ಯೇ ಹಿ ಸಂಸ್ಪರ್ಶಜಾ ಭೋಗಾಃ ದುಃಖ ಯೋನಯ ಏವ ತೇ । ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥' ನಾನಾ ವಿಷಯಭೋಗಗಳು ದುಃಖಕ್ಕೇ ಕಾರಣಗಳಾಗಿವೆ-ತಜ್ಜನ್ಯ ಸುಖಾನುಭವಗಳು

ಉತ್ಪತ್ತಿ – ವಿನಾಶಗಳುಳ್ಳವು – ವಿವೇಕಿಯು ಅವುಗಳಲ್ಲಿ ಆಸಕ್ತನಾಗುವುದಿಲ್ಲ'–ವೆಂದು ಹೇಳಿರುವನು.

ಇದೂ ಅಲ್ಲದೇ ಸುಖಾರ್ಥವಾಗಿ ಮಾಡುವ ನಮ್ಮ ಯತ್ನಗಳು ಅನೇಕ ವೇಳೆ ಇಚ್ಛಿತ ಸುಖವನ್ನು ದೊರಕಿಸುವುದಿಲ್ಲ. ಆ ಯತ್ನಗಳ ಫಲವಾಗಿ ದುಃಖವೇ ಲಭಿಸುವುದೂ ಉಂಟು. ಆಗ ನಮ್ಮ ಪರಾಧೀನತೆಯನ್ನು ಅರಿಯುತ್ತೇವೆ. ಪುರುಷಪ್ರಯತ್ನವು ವ್ಯರ್ಥವಾಗಿ ಸುಖ ದೊರೆಯದಿರುವುದಕ್ಕೆ ಯತ್ನದಲ್ಲಿರುವ ದೋಷವೇ ಕಾರಣವೆಂದೂ, ದೋಷರಹಿತವಾಗಿದ್ದರೆ ಸುಖವು ತಪ್ಪದೇ ಲಭಿಸುವುದೆಂದೂ ತಿಳಿಯುವವರೇ ಅಧಿಕ ಸಂಖ್ಯೆಯಲ್ಲಿರುವರು. ಹೀಗೆ ತಿಳಿಯುವುದೂ ನಾಸ್ತಿಕ್ಯದ ಒಂದು ಲಕ್ಷಣವೇ ಸರಿ. ಪುರುಷ ಪ್ರಯತ್ನವು ವ್ಯರ್ಥವಲ್ಲ–ನಿಜ. ಆದರೆ ಇಚ್ಛಿತ ಫಲ ಸಾಧನೆಯಲ್ಲಿ ಅದಕ್ಕೆ ಸ್ವತಂತ್ರ ಸ್ಥಾನವಿಲ್ಲ–ಈಶ್ವರನೇ ಫಲದಾತನು, ನಮ್ಮ ಯತ್ನಾನುಸಾರ ಫಲವನ್ನು ಕೊಡುತ್ತಾನೆ. ಯತ್ನ ಮಾಡಿಸುವವನೂ ಆತನೇ–ಆತನ ಶಕ್ತಿ . ಪ್ರೇರಣೆಗಳಿಲ್ಲದೇ ನಮ್ಮಿಂದ ಯತ್ನಗಳೂ ನಡೆಯವು. ಯತ್ನದಲ್ಲಿರುವ ದೋಷಗಳಿಗೆ ನಮ್ಮ ಅಜ್ಞಾನವೇ ಕಾರಣ–ಇದನ್ನು ನಿಮಿತ್ತಮಾಡಿ ಈಶ್ವರನು ಪ್ರೇರಣೆ ಮಾಡುತ್ತಾನೆ. ಒಂದು ಫಲವನ್ನು ಉದ್ದೇಶಿಸಿ ಮಾಡುವ ಯತ್ನವು, ಯೋಗ್ಯ ಕಾಲ ದೇಶಗಳಲ್ಲಿ ಯೋಗ್ಯ ಪ್ರಕಾರದಿಂದ ಮಾಡಲ್ಪಡಬೇಕಲ್ಲವೇ! ಇವುಗಳನ್ನು ಸರಿಯಾಗಿ ತಿಳಿಯದಿದ್ದರೆ ಆ ಯತ್ನವು ಅಜ್ಞಾನವೆಂಬ ದೋಷಯುಕ್ತವಾಗುವುದು–ಅದು ಫಲಕಾರಿಯಾಗುವುದಿಲ್ಲ. ಜನ್ಮಾಂತರದಲ್ಲಿ ಸುಖರೂಪವಾದ ಫಲವನ್ನು ದೊರಕಿಸುವ ಉದ್ದೇಶದಿಂದ ಮಾಡುವ ಯತ್ನಗಳು ಯಾವ ಕಾಲ ದೇಶಗಳಲ್ಲಿ ಹೇಗೆ ಆಚರಿಸಲ್ಪಡಬೇಕೆಂಬುದನ್ನು ತಿಳಿಯುವುದಂತೂ ಬಹು ಕಷ್ಟ. ಅದಕ್ಕಾಗಿ ಶಾಸ್ತ್ರಗಳನ್ನೇ ಆಶ್ರಯಿಸಬೇಕಾಗುವುದು. ಶಾಸ್ತ್ರಜ್ಞಾನವು ಪೂರ್ಣವಾಗಿಲ್ಲದಿದ್ದರೆ, ಯತ್ನಗಳಲ್ಲಿ ಅಜ್ಞಾನವೆಂಬ ದೋಷವು ತಪ್ಪದೇ ಸೇರಿಕೊಳ್ಳುತ್ತದೆ. ಆಗ ಅಪೇಕ್ಷಿತ ಸುಖವೆಂಬ ಫಲವು ಲಭಿಸುವುದಿಲ್ಲ. ಹೀಗೆ **ಆಗಮ ಜ್ಞಾನದಿಂದ ಮಾತ್ರ ಪರಿಹಾರವಾಗುವ ಈ ಅಜ್ಞಾನವು** ಜೀವರಿಗೆ ಹೇಗೆ ಸಂಬಂಧಿಸಿತು–ಎಂದಿನಿಂದ ಇತ್ಯಾದಿ ಸಮಸ್ಯೆಗಳ ಪರಿಹಾರವೂ ಅವಶ್ಯಕ. ಅಜ್ಞಾನ ಪರಿಹಾರಕ್ಕಾಗಿ ನಾವು ಮಾಡುವ ಯತ್ನಗಳೂ ಸಹ ಈಶ್ವರನ ಶಕ್ತಿ, ಪ್ರೇರಣೆಗಳಿಂದಲೇ ನಡೆಯಬೇಕು–ಪರಿಹಾರರೂಪ ಫಲವನ್ನೂ ಆತನೇ ಕರುಣಿಸಬೇಕು.

ಇದೇ ವಿಷಯಕ್ಕೆ ಸಂಬಂಧಿಸಿದಂತೆ ಲೋಕಾನುಭವವನ್ನೂ ವಿಮರ್ಶಿಸ-ಬೇಕು. ಎಲ್ಲರೂ ಸುಖಕ್ಕಾಗಿಯೇ ಯತ್ನಿಸುತ್ತಾರೆ-ದುಃಖಕ್ಕಾಗಿ ಯಾರೂ ಎಂದೂ ಯತ್ನಿಸುವುದಿಲ್ಲ. ಯತ್ನದ ಸಿದ್ಧಿಯಿಂದ ಲಭಿಸುವ ಫಲಭೋಗವೇ ಸುಖವು-ಇದರಿಂದಲೇ ಮನಃಶಾಂತಿಯು. ಅಂತತಃ ಮನಃಶಾಂತಿಯೇ ಸುಖ ಸ್ಥಿತಿಯೆಂದು ಪ್ರಾಪ್ತವಾಗುತ್ತದೆ. ಹೀಗಿದ್ದರೂ, ಎಲ್ಲರೂ ಮನಃಶಾಂತಿ ರೂಪ ಸುಖಕ್ಕಾಗಿ ಯತ್ನಿಸುವುದಿಲ್ಲ. ಇಂದ್ರಿಯಗಳಿಂದ ವಿಷಯಗಳನ್ನು ಭೋಗಿಸು-ವಾಗ ಉಂಟಾಗುವ ಕ್ಷಣಕಾಲದ ತೃಪ್ತಿಯೇ ಸುಖವೆಂದು ತಿಳಿದು, ಸುಖಸಾಧನ ವಸ್ತುಗಳನ್ನು ಸಂಪಾದಿಸಿ ಇಂದ್ರಿಯಗಳನ್ನು ತೃಪ್ತಿಗೊಳಿಸಲಿಕ್ಕಾಗಿ ಯತ್ನಿಸುತ್ತಾರೆ. ಇಂದ್ರಿಯ ನಿಗ್ರಹಾದಿ ಅನ್ಯಸಾಧನೆಗಳಿಂದ ಮನಃಶಾಂತಿಯನ್ನು ದೊರಕಿಸಲು ಯತ್ನಿಸುವವರು ವಿರಳ. ಲೋಕದಲ್ಲಿ ಎಲ್ಲರೂ ಒಂದೇ ವಿಧದ ಸುಖಕ್ಕಾಗಿ ಯತ್ನಿಸುವುದೂ ಇಲ್ಲ-ಹಾಗೆ ಯತ್ನಿಸಿದರೂ ಒಂದೇ ಪ್ರಕಾರದ ಯತ್ನವನ್ನೂ ಮಾಡುವುದಿಲ್ಲ. ಹಾಗೆ ಮಾಡಿದವರೆಲ್ಲರಿಗೂ ಆ ಸುಖವು ದೊರೆಯುವುದೂ ಇಲ್ಲ. ತಮ್ಮ ಉದ್ದೇಶಕ್ಕೆ ವಿರುದ್ಧವಾದ ದುಃಖವೂ ಕೆಲವರಿಗೆ ಅದೇ ಯತ್ನದಿಂದ, ಲಭಿಸುವುದನ್ನೂ ಕಾಣುತ್ತೇವೆ. ವಿದ್ಯಾ ಸಂಪಾದನೆಗಾಗಿ ನಡೆಸುವ ಯತ್ನಗಳಲ್ಲಿ ಸಹ ಫಲ ವೈವಿಧ್ಯವನ್ನು ಕಾಣುತ್ತೇವೆ. ಒಂದು ದಂಪತಿಗಳಿಂದ ಜನಿಸಿದ ಅನೇಕ ಮಕ್ಕಳು ಒಂದೇ ಪ್ರಕಾರದ ಆಹಾರ - ವಿಹಾರ - ಸೌಕರ್ಯಗಳಿರುವ ವಾತಾವರಣದಲ್ಲಿ ಬೆಳೆದು, ಒಬ್ಬ ಗುರುವಿನಿಂದಲೇ ಶಿಕ್ಷಿತರಾದರೂ, ಸಮಾನ ವಿದ್ಯಾವಂತರಾಗುವುದಿಲ್ಲ. ವಿವಿಧವಾದ ಆಶೆ ಆಕಾಂಕ್ಷೆಗಳುಳ್ಳವರಾಗುತ್ತಾರೆ. ಅವರಲ್ಲಿ ಬಹು ವಿಧದ ತಾರತಮ್ಯಗಳು ಎದ್ದು ತೋರುತ್ತವೆ. ಇವುಗಳ ಕಾರಣಗಳನ್ನು ಹುಡುಕಿದರೆ, ವ್ಯಕ್ತಿಶಃ ಭಿನ್ನ ಭಿನ್ನ ಕಾರಣಗಳನ್ನು ಕಾಣುತ್ತೇವೆ. ವೈಯಕ್ತಿಕವಾದ ಆ ಕಾರಣಗಳಿಗೆ ಕಾರಣಗಳನ್ನು ಅರಸುತ್ತ ಹೋಗಬೇಕು. ಮನಃಶಾಸ್ತ್ರಜ್ಞರೂ, ಪ್ರಾಣಿ ಶಾಸ್ತ್ರಜ್ಞರೂ, ಕಾರಣಗಳಿಗೆ ಕಾರಣಾಂತರಗಳನ್ನು ನಿರೂಪಿಸಬಹುದಾದರೂ, ಸಮರ್ಪಕವಾದ ಮೂಲಕಾರಣವನ್ನು ಕಾಣಲಾರೆವು. ಕಾರಣ ಪರಂಪರೆಗೆ ನಿಲುಗಡೆಯೇ ದೊರೆಯದು. **ಈ ಅನವಸ್ಥಾ ರೂಪ ದೋಷದ ಪರಿಹಾರವು 'ಅದೃಷ್ಟ'ವನ್ನು ಅಂಗೀಕರಿಸುವುದರಿಂದಲೇ ಸಾಧ್ಯ.** ಆಯಾ ಜೀವರು ತಮ್ಮ ಅದೃಷ್ಟ ಮತ್ತು ಪೂರ್ವ ಸಂಸ್ಕಾರಗಳ ಪ್ರಭಾವದಿಂದಲೇ,

ವಿವಿಧವಾಗಿ ಯತ್ನಿಸಿ, ವಿವಿಧ ಫಲಗಳನ್ನು ಹೊಂದುವರೆಂದು ಒಪ್ಪದೇ ಗತ್ಯಂತರವಿಲ್ಲ. ದೇಹ ಭಿನ್ನ ಜೀವನು ನಿತ್ಯನೆಂದೂ, ಜನ್ಮಾಂತರಗಳುಂಟೆಂದೂ ಸಹ, ಈ ವಿಧದ ಅನೇಕ ಲೋಕಾನುಭವಗಳು ಸ್ಪಷ್ಟವಾಗಿ ಸೂಚಿಸುತ್ತವೆ. ಅದೃಷ್ಟ ಮತ್ತು ಸಂಸ್ಕಾರಗಳ ವೈವಿಧ್ಯಕ್ಕೆ ಕಾರಣವನ್ನು ಅರಸಿದರೆ, ನಾನಾ ಜೀವರುಗಳ ಸ್ವಭಾವಗಳೇ ತರತಮಭಾವಯುಕ್ತಗಳಾಗಿರಬೇಕೆಂದೂ ಹೇಳಬೇಕಾಗುತ್ತದೆ. ಅತೀಂದ್ರಿಯ ವಸ್ತು ವಿಷಯದಲ್ಲಿ ಪ್ರಧಾನ ಪ್ರಮಾಣವಾದ 'ಆಗಮ'ವನ್ನೂ, ಆಗಮಾನುಕೂಲ್ಯವುಳ್ಳ ಪ್ರತ್ಯಕ್ಷ ಮತ್ತು ಅನುಮಾನಗಳನ್ನೂ ಆಶ್ರಯಿಸಿ, ಆಗ್ರಹವಿಲ್ಲದೇ, ಸಾವಧಾನಚಿತ್ತರಾಗಿ ಗಾಢವಾಗಿ ವಿಮರ್ಶಿಸಿದರೆ, ಜೀವ ಸ್ವಭಾವ ಮತ್ತು ಅದೃಷ್ಟಗಳನ್ನು ನಿಮಿತ್ತ ಕಾರಣಗಳನ್ನಾಗಿಟ್ಟುಕೊಂಡು, ಸ್ವತಂತ್ರನೂ ಸರ್ವಶಕ್ತನೂ ಆದ ಈಶ್ವರನು, ಜೀವರನ್ನು ನಾನಾ ಯತ್ನಗಳಲ್ಲಿ ತೊಡಗಿಸಿ, ಸಿದ್ಧಿ-ಅಸಿದ್ಧಿಗಳನ್ನೂ, ಸುಖದುಃಖ ರೂಪ ಫಲಗಳನ್ನೂ ಕೊಡುವ ಮುಖ್ಯ ಮೂಲಕಾರಣನೆಂದು ತಿಳಿಯಬಹುದಾಗಿದೆ. ಹೀಗಿದ್ದರೂ, ಅಲ್ಪ ಮಾನವನು ದೇಹಾದಿಗಳು ತನ್ನ ಅಧೀನವೆಂದೂ, ಸುಖದುಃಖಾದಿ-ಗಳನ್ನು ಪಡೆಯುವುದರಲ್ಲಿ ತಾನೇ ಸ್ವತಂತ್ರನೆಂದೂ ತಿಳಿಯುವುದು ಮಹಾ ಮೋಹದ ವಿಜೃಂಭಣವಲ್ಲವೇ!

ಮಾನವನು ತಿಳಿದೂ ತಿಳಿಯನು; ಕಂಡೂ ಕಾಣನು (ಕಣ್ಣಿದ್ದರೂ ಕುರುಡನೂ); ಕೇಳಿಯೂ ಕೇಳನು; ಉಪದೇಶಗೊಂಡರೂ ಶಿಕ್ಷಿತನಾಗನು- ಈ ಎಲ್ಲವೂ ಮಹಾತ್ಮನಾದ ವಿಷ್ಣುವಿನ ಅಚಿಂತ್ಯ ಶಕ್ತಿಯ ಪ್ರಭಾವವಲ್ಲದೇ ಬೇರೆ ಏನು ? ಅನ್ಯರಿಗೆ ಜ್ಞಾನೋಪದೇಶ ಮಾಡುವರು-ಸ್ವಯಂ ಮುಗ್ಧರಾಗಿರುವರು; ಇತರರ ಹಾನಿ ಲಾಭಗಳನ್ನು ಅರಿಯುವರು-ತಮ್ಮದನ್ನೇ ತಿಳಿಯರು; ಅನ್ಯರ ರೋಗಗಳನ್ನು ತಿಳಿದು ಪರಿಹರಿಸುವರು-ತಮ್ಮ ರೋಗವನ್ನು ತಿಳಿಯರು; ಅನ್ಯರ ಮೇಲೆ ನಾನಾ ವಾಮಾಚಾರಗಳನ್ನು ಪ್ರಯೋಗಿಸುವರು (ಮಾರಣ, ವಶೀಕರಣಾದಿ ಶಕ್ತಿಗಳನ್ನು); ಅವುಗಳಿಂದ ತಮ್ಮ ಮೇಲೆ ಆಗುವ ದುಷ್ಪರಿಣಾಮಗಳನ್ನಾಗಲೀ, ಅನ್ಯರು ತಮ್ಮ ಮೇಲೆ ಪ್ರಯೋಗಿಸುವ ತತ್ಸದೃಶ ಶಕ್ತಿಗಳನ್ನಾಗಲಿ ತಿಳಿಯರು; ಒಬ್ಬ ಗುರುವಿನಲ್ಲಿ ಉಪದೇಶ ಹೊಂದುವ ನಾನಾ ಶಿಷ್ಯರು ವಿಚಿತ್ರ ಬುದ್ಧಿಗಳುಳ್ಳವರಾಗುವರು. ಈ ಎಲ್ಲಕ್ಕೂ ಸರ್ವಶಕ್ತನಾದ ಆ

ಮಹಾತ್ಮನ (ಈಶ್ವರನ) ಇಚ್ಛೆಯೇ ಕಾರಣವು. ವೃಕ್ಷಾದಿಗಳಲ್ಲಿ, ಸೂರ್ಯಾದಿ-ಗಳ ದರ್ಶನದಿಂದ, ಚಿಗುರು, ಎಲೆ, ಪುಷ್ಪಾದಿಗಳ ವಿಕಾಸವಾಗುತ್ತದೆ; ಅಚೇತನಗಳಾದ ಪ್ರಾಣಿ ದೇಹಗಳು ನಾನಾ ವಿಧವಾಗಿ ಚೇಷ್ಟಿಸುತ್ತವೆ; ನಾನಾ ಪ್ರಾಣಿ ದೇಹಗಳಲ್ಲಿ ಕಾಣಿಸಿಕೊಳ್ಳುವ ಒಂದೇ ರೋಗದ ನಿವಾರಣೆಗಾಗಿ ಪ್ರಯೋಗಿಸಲ್ಪಡುವ ಒಂದೇ ಔಷಧಿಯು ಫಲಭೇದಗಳನ್ನುಂಟು ಮಾಡುತ್ತದೆ (ರೋಗವನ್ನು ಪರಿಹರಿಸುತ್ತದೆ - ಪರಿಹರಿಸುವುದಿಲ್ಲ - ಉಗ್ರಗೊಳಿಸುತ್ತದೆ)[4]; ಗೋಮಯಾದಿಗಳಲ್ಲಿ ಸಹಸ್ರಾರು ಪ್ರಾಣಿಗಳು, ಮಾತಾಪಿತೃಗಳಿಲ್ಲದೆ ಹುಟ್ಟಿಕೊಳ್ಳುತ್ತವೆ; ಹಸು ಮೊದಲಾದ ಪ್ರಾಣಿಗಳು ಭಕ್ಷಿಸಿದ ತೃಣಾದಿ ವಸ್ತುಗಳು ಕ್ಷೀರ-ರಕ್ತ ಮೊದಲಾದ ರೂಪದಿಂದ ವಿವಿಧವಾಗಿ ಪರಿಣಾಮಗೊಳ್ಳುತ್ತವೆ; ಕೂದಲು, ಉಗುರು ಮೊದಲಾದವು ದೇಹದ ಸ್ಥಾನ ವಿಶೇಷಗಳಲ್ಲಿ ಮಾತ್ರ ಹುಟ್ಟುತ್ತವೆ - ಎಲ್ಲ ಕಡೆಗಳಲ್ಲಿಯಾಗಲಿ, ನಮ್ಮ ಇಚ್ಛಾನುಸಾರವಾಗಿ ಆಗಲಿ ಅಲ್ಲ; ಬೀಜವು ಅಂಕುರಿಸುತ್ತದೆ - ಕೆಲವು ಅಂಕುರಗಳು ಬೆಳೆದು ವೃಕ್ಷ-ಗಳಾಗುತ್ತವೆ-ಎಲ್ಲವೂ ಅಲ್ಲ-ಕೆಲವು ಬೀಜಗಳು ಅಂಕುರಿಸುವುದೇ ಇಲ್ಲ-ಬೀಜಗಳನ್ನು ಬಿತ್ತದೇ ಭೂಮಿಯಲ್ಲಿ (ಭೂಮಿಯಿಂದಲೇ) ಸಸ್ಯಗಳು ಹುಟ್ಟುತ್ತವೆ-ಕೇವಲ ಜಲದಿಂದಲೂ ಹುಟ್ಟುತ್ತವೆ-ನಮ್ಮ ಇಚ್ಛಾನುಸಾರ ಹುಟ್ಟುವುದಿಲ್ಲ; ರಜಸ್ವಲೆಯಾದ ಸ್ತ್ರೀಯಲ್ಲಿ ಸಹ ರೇತಸ್ಸೇಚನದಿಂದ ಗರ್ಭೋತ್ಪತ್ತಿಯಾಗುವುದಿಲ್ಲ; ಶುಕ್ಲ ಶೋಣಿತಗಳ ಸಂಯೋಗದಿಂದ ಉತ್ಪನ್ನ-ವಾದ ಗರ್ಭವು ಪಿಂಡವಾಗಿ ಅದರಲ್ಲಿ ನಾನಾ ಅವಯವಗಳು ವ್ಯವಸ್ಥಿತವಾಗಿ ರೂಪಗೊಳ್ಳುತ್ತವೆ; ಒಬ್ಬ ದಂಪತಿಗಳ ಸಮಾನ ಶುಕ್ಲಶೋಣಿತ ಸಂಯೋಗದಿಂದ ಸ್ತ್ರೀ, ಪುರುಷ, ನಪುಂಸಕ ಭೇದವುಳ್ಳ ಗರ್ಭ ನಿಷ್ಪತ್ತಿಯಾಗುತ್ತದೆ-ಕುರುಡ, ಕಾಣ (ಒಕ್ಕಣ್ಣ). ಖಂಜ (ಹೆಳವ) ಇತ್ಯಾದಿ ದೋಷಯುಕ್ತವಾದ ಅವಯವಗಳು

4. ರೋಗಗಳು ಹಿಂದಿನ ಪಾಪಗಳ ಫಲರೂಪವಾದುವು. ಪಾಪವು ಭೋಗದಿಂದ, ಉತ್ತಮರ ಅನುಗ್ರಹ, ಪ್ರಾಯಶ್ಚಿತ್ತಾದಿಗಳಿಂದ ನಷ್ಟವಾದೊಡನೆ ರೋಗವು ಗುಣಮುಖವಾಗುತ್ತದೆ. ಆ ಕಾಲದಲ್ಲಿ ರೋಗಿಯು ಸೇವಿಸುತ್ತಿರುವ ಔಷಧಿ ಅಥವಾ ಚಿಕಿತ್ಸೆಯು ರೋಗ ಪರಿಹಾರದಲ್ಲಿ ನಿಮಿತ್ತ ಮಾತ್ರವು. ಈ ಕಾರಣದಿಂದಲೇ ಒಬ್ಬನಿಗೆ ಗುಣ ಕೊಟ್ಟ ಔಷಧಿಯು ಮತ್ತೊಬ್ಬನಿಗೆ ಗುಣ ಕೊಡುವುದಿಲ್ಲ. ಒಂದು ರೋಗಕ್ಕೆ ನಾನಾ ಔಷಧಿಗಳು ಪ್ರಸಿದ್ಧಿ ಪಡೆಯುತ್ತವೆ.

ರೂಪಗೊಳ್ಳುತ್ತವೆ. ಈ ಎಲ್ಲಕ್ಕೂ ಸ್ವತಂತ್ರ ಈಶ್ವರೇಚ್ಛೆಯೇ ಮುಖ್ಯ ಕಾರಣವೆಂದು ಅಂಗೀಕರಿಸಲೇಬೇಕಾಗುವುದು ಅಧೋಮುಖವಾಗಿ ಬಿದ್ದುಕೊಂಡಿರುವ ಮೃದುವಾದ ಗರ್ಭವು, ಜಠರಾಗ್ನಿಯ ತಾಪ, ಶ್ವಾಸ ನಿರೋಧಾದಿಗಳಿಂದ ಪೀಡಿತವಾದರೂ ಜೀವಂತ ಉಳಿಯುತ್ತದೆ; ಅಪಕ್ವ ಗರ್ಭದ ಪಾತವಾಗುತ್ತದೆ-ಪಕ್ವವಾದರೂ ಪ್ರಸವವಾಗುವುದಿಲ್ಲ-ತಾಯಿಯ ಇಚ್ಛಾನುಸಾರವಾಗಿ ಗರ್ಭವು ಹೊರಗೆ ಬರುವುದಿಲ್ಲ-ಸೂತಿಕಾವಾಯುವು ಆಕೆಯ ಅಧೀನವಲ್ಲ. ಈ ಎಲ್ಲಕ್ಕೂ ಈಶ್ವರೇಚ್ಛೆಯೇ ಮೂಲಕಾರಣವು. ಪ್ರಸವ ಕಾಲದಲ್ಲಿ ಋಜು ಮಾರ್ಗದಿಂದ ಹೊರಗೆ ಬರದೇ ಅಡ್ಡ ತಿರುಗಿ ವಕ್ರ ಮಾರ್ಗವನ್ನು ಹಿಡಿದು ನಾನಾ ವಿಪತ್ತುಗಳಿಗೆ ಕಾರಣವಾಗುತ್ತದೆ; ಜನಿಸಿದೊಡನೆ ಶಿಶುವು ಅಳುತ್ತದೆ-ಸ್ತನ್ಯಪಾನ ಮಾಡುತ್ತದೆ-ವಿವಿಧವಾಗಿ ಚೇಷ್ಟಿಸುತ್ತದೆ. ಈ ಎಲ್ಲವೂ ದೇಹ ಭಿನ್ನನಾದ ಜೀವನನ್ನೂ, ದೇಹಾಂತರ ಪ್ರಾಪ್ತಿಯನ್ನೂ, ಅದೃಷ್ಟವನ್ನೂ, ಈ ಸರ್ವವನ್ನೂ ನಿಯಂತ್ರಿಸುವ ಸ್ವತಂತ್ರ ಈಶ್ವರನನ್ನೂ ಸಾಧಿಸಿಕೊಡುತ್ತವೆ.[5] ವೃಕ್ಷ, ಪತ್ರ, ಪುಷ್ಪಾದಿಗಳಲ್ಲಿ ಚಿತ್ರ ವಿಚಿತ್ರವಾದ ಆಕಾರಗಳಿವೆ-ವಿಚಿತ್ರ ವರ್ಣಗಂಧಗಳಿವೆ. ಈ ವೈಚಿತ್ರ್ಯ ಕಾರಣಗಳನ್ನು ಪರ್ಯಾಲೋಚಿಸಿದರೆ ಸಹ, **ಸರ್ವಶಕ್ತನಾದ ಈಶ್ವರೇಚ್ಛೆಯೇ ಈ ವಿಚಿತ್ರ ಜಗತ್ತಿನ ಮೂಲಕಾರಣವೆಂದು ಅಂಗೀಕರಿಸಬೇಕಾಗುವುದು.** 'ಬಹುಚಿತ್ರಜಗದ್ಬಹುಧಾಕರಣಾತ್ ಪರಶಕ್ತಿರನಂತ ಗುಣಃ ಪರಮಃ' ಎಂದರು ಪ್ರಾಜ್ಞ ಶಿಖಾಮಣಿಗಳು-ಅದೆಷ್ಟು ಯುಕ್ತಿಯುಕ್ತ ನಿರ್ಣಯವಿದು!

ಇನ್ನೂ ಅನೇಕ ಲೋಕಸಿದ್ಧ ವಿಷಯಗಳನ್ನು ಗಮನಿಸಬಹುದು. ಬಹು ಭಾರವಾದ ದೊಡ್ಡ ಮರದ ತೊಲೆಗಳು ನೀರಲ್ಲಿ ತೇಲುತ್ತವೆ-ಕಲ್ಲಿನ ಸಣ್ಣ ಕಣವೂ ಸಹ ಮುಳುಗುತ್ತದೆ. ಈ ಉಭಯ ವಸ್ತುಗಳ (density) ಸಾಂದ್ರತೆ ಅಥವಾ ನಿಬಿಡತೆಯ ವೈಲಕ್ಷಣ್ಯವನ್ನು, ಇದರ ಕಾರಣವೆಂದು ವಿಜ್ಞಾನಿಗಳು ಹೇಳುತ್ತಾರೆ. ಹೀಗೆಂಬುದು ನಿಜ; ಆದರೆ ವಸ್ತುಗಳ ಸಾಂದ್ರತೆಯಲ್ಲಿ ವೈಚಿತ್ರ್ಯವುಂಟಾಗಲು ಕಾರಣವೇನೆಂಬುದನ್ನು, ಪುನಃ ಪ್ರಶ್ನೆಗೆ

5. ಈ ಹಿಂದೆ ಚಾರ್ವಾಕ ಮತತತ್ವಗಳ ವಿಮರ್ಶೆಯಲ್ಲಿ ಪುಸ್ತಕವಾಗಿರುವ ವಿವರಗಳನ್ನು ಇಲ್ಲಿ ನೋಡಿಕೊಳ್ಳಬಹುದು.

ಅವಕಾಶವಿಲ್ಲದಂತೆ, ವಿಜ್ಞಾನಿಗಳು ನಿರೂಪಿಸಲಾರರು. ಉಷ್ಣತೆ-ಒತ್ತಡ (temperature-pressure) ಇತ್ಯಾದಿ ನಾನಾ ಶಕ್ತಿ ಪ್ರಯೋಗ ಪರಿಣಾಮಗಳಿಂದಾದುದೆಂದು ಮುಂತಾಗಿ ಭೂತತ್ವಶಾಸ್ತ್ರಜ್ಞರು (geologists) ನಿರೂಪಿಸುವ ಮತ್ತು ನೂತನ ಶೋಧನೆಗಳಿಂದ ಕಲ್ಪಿಸಬಹುದಾದ ಯಾವ ಕಾರಣಗಳೂ ಅಂತಿಮ ಕಾರಣಗಳೆಂದು ನಿಶ್ಚಯಿಸಲು ಬಾರದೇ ವಸ್ತು ಸ್ವಭಾವಗಳೇ ವೈಚಿತ್ರ್ಯದ ಮೂಲಕಾರಣವೆಂದು ಹೇಳಬೇಕಾಗುತ್ತದೆ. ಜಡ ಶಕ್ತಿಗಳು ಬುದ್ಧಿಪೂರ್ವಕವಾದ ಪ್ರವೃತ್ತಿಯುಳ್ಳವುಗಳಲ್ಲವೆಂಬುದು ವಿಜ್ಞಾನ ಶಾಸ್ತ್ರಸಿದ್ಧವೇ ಆಗಿದೆ. ಹೀಗಿರುವಾಗ ಜಗದ್ವಸ್ತುಗಳ ವಿವಿಧ ಸ್ವಭಾವಗಳಿಗೆ-ಅವುಗಳ ವಿಚಿತ್ರ ಗುಣ ಧರ್ಮಗಳಿಗೆ ಕಾರಣವಾದುದೂ, ಜಗದ್ವಸ್ತುಗಳ ನಾನಾ ಪ್ರಕಾರದ ಸೃಷ್ಟಿ, ಸ್ಥಿತಿ, ಲಯಾದಿಗಳನ್ನು ನಿರ್ವಹಿಸುವುದೂ ಆದ (ವಿಶ್ವದ ಸೃಷ್ಟಿ, ಸ್ಥಿತಿ, ಲಯಾದಿಗಳು ಅವ್ಯಾಹತವಾಗಿ ಸರ್ವಕಾಲದಲ್ಲಿ ಸಾಗಿರುತ್ತದೆಂಬುದು ಎಲ್ಲರೂ ಒಪ್ಪಬೇಕಾದ ಒಪ್ಪಿರುವ ವಿಷಯವೇ ಆಗಿದೆ) ಶಕ್ತಿಯು, ಜ್ಞಾನಪೂರ್ಣವಾದುದೂ, ಸ್ವತಂತ್ರವೂ, ಅನಂತ ವಿಚಿತ್ರ ಶಕ್ತಿಯುಳ್ಳದ್ದೂ ಆಗಿರಬೇಕೆಂದು ಅಂಗೀಕರಿಸಲೇಬೇಕಲ್ಲವೇ! ಸೃಷ್ಟಿ ಮೊದಲಾದ ಕಾರ್ಯಗಳನ್ನು ನಿರ್ವಹಿಸಲು ಪ್ರಾಕೃತ ಶಕ್ತಿಗಳು ಸ್ವಯಂ ಸಮರ್ಥಗಳಲ್ಲ. ಆದರೂ ವಿಶ್ವದಲ್ಲಿ ಈ ಶಕ್ತಿಗಳು (ಅವುಗಳಿಂದ ಸಂಭವಿಸುವ ನಾನಾ ಕಾರ್ಯಗಳಲ್ಲಿ) ಜ್ಞಾನಪೂರ್ವಕ ಪ್ರವರ್ತಿಸುತ್ತಿರುವಷ್ಟು', ನಿಯಮಬದ್ಧವಾಗಿ ನಡೆದುಕೊಳ್ಳುವುದನ್ನು ಕಾಣುತ್ತೇವೆ. ವಿದ್ಯುದಾದಿಗಳು ತಮ್ಮ ನಿಯಮಗಳನ್ನು ಎಂದೂ ಮೀರವು-ಗ್ರಹನಕ್ಷತ್ರಾದಿಗಳು ತಮ್ಮ ಪಥಗಳನ್ನೂ ವೇಗಗಳನ್ನೂ ಬದಲಿಸವು, ಇತ್ಯಾದಿ ಅದ್ಭುತಗಳನ್ನು ವಿಶ್ವವೀಕ್ಷಣೆಯಲ್ಲಿ ಗಮನಿಸಬಹುದು. ಈ ವಿಧ ನಿಯಮ ಪಾಲನೆಯು, ಆಯಾ ವಸ್ತುಗಳ ಅಥವಾ ಶಕ್ತಿಗಳ ಸ್ವಭಾವ ಧರ್ಮವೆಂದು ಹೇಳಿದರೆ, ಅವುಗಳ ಸ್ವಭಾವಗಳನ್ನೂ ನಿಯಂತ್ರಿಸುವ, ಆದ್ದರಿಂದಲೇ 'ಸ್ವಭಾವ'ನೆಂದು ಕರೆಯಲ್ಪಡುವ ಈಶ್ವರನ ಸಾಮರ್ಥ್ಯದಿಂದ, ಎಂದೇ ತಿಳಿಯಬೇಕಾಗುವುದು. ಈ ಪ್ರಸಂಗದಲ್ಲಿ, ವಸ್ತು ಸ್ವಭಾವ ಮತ್ತು ಅವುಗಳ ಗುಣಧರ್ಮಗಳ ವಿಷಯವಾಗಿ ವೈಜ್ಞಾನಿಕ ಪ್ರವೀಣರ ನಿರೂಪಣೆ-ಯನ್ನು ಸ್ವಲ್ಪಮಟ್ಟಿಗೆ ವಿಸ್ತರಿಸುವುದು ಉಪಯುಕ್ತವಾಗುತ್ತದೆ. ವಾಚಕರು,

ಈ ವಿಷಯಾಂತರ ಪ್ರವೇಶವನ್ನು ಮನ್ನಿಸಿ, ಅದರ ಲಾಭವನ್ನು ಪಡೆಯುವ-ರೆಂಬಲ್ಲಿ ಸಂದೇಹವಿಲ್ಲ.

ಈ ಮುಂದಿನ ನಿರೂಪಣೆಯು ವೈಜ್ಞಾನಿಕ ಪ್ರಗತಿಯ ನಾನಾ ಘಟ್ಟಗಳನ್ನು ಕ್ರಮದಿಂದ ಅನುಸರಿಸುತ್ತದೆ. ಜಗತ್ತಿನಲ್ಲಿರುವ ಪ್ರತಿಯೊಂದು ಪದಾರ್ಥವೂ ಅಸಂಖ್ಯಾತ ಸೂಕ್ಷ್ಮ ಕಣಗಳಿಂದ ಕೂಡಿದ್ದಾಗಿದೆ. ಪ್ರತಿ ಕಣವೂ ಭಿನ್ನ ಧರ್ಮಗಳುಳ್ಳ ಪರಮಾಣು (atoms) ಗಳಿಂದ ಆದುದು. ಉದಾ : ಜಲಕಣವು ಜಲಧರ್ಮವುಳ್ಳದ್ದಾದರೆ, ಅದರ ಉತ್ಪತ್ತಿಗೆ ಕಾರಣಗಳಾದ ಆಮ್ಲಜನಕ ಮತ್ತು ಜಲಜನಕ (oxygen and hydrogen) ಪರಮಾಣುಗಳ ಧರ್ಮಗಳೇ ಬೇರೆ-ಜಲಧರ್ಮಗಳಲ್ಲ. ಈ ಪರಮಾಣುಗಳು (೨ ಜಲಜನಕ, ೧ ಆಮ್ಲಜನಕ ಪರಮಾಣುಗಳು), ಉಷ್ಣಾಂಶ, ಒತ್ತಡ ಇತ್ಯಾದಿಗಳ ವಿಶಿಷ್ಟ ಪರಿಸ್ಥಿತಿಯಲ್ಲಿ ಸಂಯೋಗಗೊಂಡರೆ ಜಲಕಣದ ಉತ್ಪತ್ತಿಯಾಗುತ್ತದೆ. ಭಂಗಾರ, ಗಂಧಕ, ಇದ್ದಿಲು (carbon) ಇತ್ಯಾದಿ ಅನೇಕ ಪದಾರ್ಥಗಳು ಭಿನ್ನ ಧರ್ಮವುಳ್ಳ ಪರಮಾಣುಗಳ ಸಂಯೋಗದಿಂದ ಆದವುಗಳಲ್ಲ. ಇಂಥ ವಸ್ತುಗಳು ಮೂಲತತ್ವಗಳೆಂದು (Elements) ಕರೆಯಲ್ಪಡುತ್ತವೆ. ಪುನಃ ಈ ಮೂಲ-ತತ್ವಗಳು ಪರಸ್ಪರ ವಿವಿಧ ಪ್ರಮಾಣಗಳಲ್ಲಿ ಸಂಯೋಗಹೊಂದಿ, ಅಸಂಖ್ಯಾತ ನೂತನ ವಸ್ತುಗಳ ಉತ್ಪತ್ತಿಯಾಗುತ್ತದೆ. ಹೀಗೆಂಬುದು ರಸಾಯನ ಶಾಸ್ತ್ರದ (Chemistry) ಸಿದ್ಧಾಂತ. ಈ ಮೂಲ ತತ್ವಗಳ (Elements) ಸಂಖ್ಯೆಯು, ವಿಜ್ಞಾನಿಗಳು ನೂತನ ತತ್ವಗಳನ್ನು ಗುರ್ತಿಸುತ್ತ ಸಾಗಿದಂತೆ, ಏರುತ್ತಾ ಸಾಗಿದೆ. ಪದಾರ್ಥಗಳ ಮೂಲಕ್ಕಿರುವ ಪರಮಾಣುಗಳನ್ನು (Atoms) ವಿಜ್ಞಾನಿಗಳು ಬಹುಕಾಲ ಅವಿಭಾಜ್ಯವೆಂದೇ ತಿಳಿದಿದ್ದರು. ಪರಮಾಣುಗಳ ರಚನೆಯ ಬಗ್ಗೆ ಭೌತಶಾಸ್ತ್ರಜ್ಞರು (Physicists) ನಾನಾ ಊಹಾಪೋಹಗಳಲ್ಲಿ ತೊಡಗಿ ಅವುಗಳ ಸತ್ಯತೆಯನ್ನರಿಯಲು ನಾನಾ ವಿಧ ಪರೀಕ್ಷೆ ಪ್ರಯೋಗಗಳನ್ನು ನಡೆಸುತ್ತ ಬಂದರು. ಅವಿಭಾಜ್ಯವೆಂದು ಭಾವಿಸಲಾಗಿದ್ದ ಪರಮಾಣುವನ್ನೂ ಭೇದಿಸಿದರು. ಅಂದಿನಿಂದ 'ಅಣುಯುಗ'ದ (Atomic age) ಆರಂಭ-ವಾಯಿತು. ಎಲೆಕ್ಟ್ರಾನ್, ಪ್ರೋಟಾನ್ ಮತ್ತು ನ್ಯೂಟ್ರಾನ್ (Electron, Proton and Neutron) ಎಂದು ಕರೆಯಲಾದ ಸೂಕ್ಷ್ಮತರ ಅಣುಗಳಿಂದ

'ಪರಮಾಣು'ವು ರಚಿತವಾದುದೆಂದು ಸಿದ್ಧಾಂತಿಸಲಾಯಿತು. ಇವುಗಳಲ್ಲಿ ಎಲೆಕ್ಟ್ರಾನ್ ಎಂಬುದು ಒಂದು ಪ್ರಮಾಣದ ('ಏಕ' ಎಂದು ಗಣಿಸಲಾಗುವ) ನಿಷೇಧಕ ವಿದ್ಯುಚ್ಛಕ್ತಿಯನ್ನು (A unit charge of negative electricity) ಧರಿಸಿರುವುದೆಂದೂ, ಪ್ರೋಟಾನ್ ಎಂಬುದು ಏಕಸಂಖ್ಯೆಯ ನಿಶ್ಚಿತ ವಿದ್ಯುಚ್ಛಕ್ತಿಯ (A unit charge of positive electricity) ಧಾರಕವೆಂದೂ, ನ್ಯೂಟ್ರಾನ್ ಎಂಬುದು ವಿದ್ಯುದ್ಧಾರಕವಲ್ಲವೆಂದೂ ಹೇಳಲಾಗುತ್ತದೆ. ಪರಮಾಣುವಿನ ಕೇಂದ್ರದಲ್ಲಿ, ಪ್ರೋಟಾನ್ ಮತ್ತು ನ್ಯೂಟ್ರಾನ್ ಎಂಬುವು ಭದ್ರವಾಗಿ ಪರಸ್ಪರ ಕೂಡಿಕೊಂಡಿದ್ದು, ಇವುಗಳ ಸುತ್ತಲೂ ಎಲೆಕ್ಟ್ರಾನ್‌ಗಳು ಅಚಿಂತ್ಯವಾದ ವೇಗದಿಂದ ನಿರ್ದಿಷ್ಟ ಪಥಗಳಲ್ಲಿ (Fixed arbits) ಸುತ್ತುವು-ವೆಂದೂ ತಿಳಿಯಲಾಗಿದೆ. ಈ ಪಥಗಳು ಭಿನ್ನ ಮೂಲತತ್ತ್ವಗಳ (Elements) ಪರಮಾಣುಗಳಲ್ಲಿ ಭಿನ್ನ ಭಿನ್ನವಾಗಿರುತ್ತವೆ ಮತ್ತು ಪರಮಾಣುಗಳಲ್ಲಿರುವ ಸೂಕ್ಷ್ಮತರ ಅಣುಗಳಾದ ಎಲೆಕ್ಟ್ರಾನ್ ಮೊದಲಾದವುಗಳು ಭಿನ್ನ ಸಂಖ್ಯೆ-ಯಲ್ಲಿರುತ್ತವೆ. ಉದಾ :—ಜಲಜನಕ ಪರಮಾಣುವಿನಲ್ಲಿ ಒಂದು ಪ್ರೋಟಾನ್ ಸುತ್ತಲೂ ಒಂದೇ ಎಲೆಕ್ಟ್ರಾನ್ ಸುತ್ತುತ್ತದೆ-ಅಲ್ಲಿ ನ್ಯೂಟ್ರಾನ್ ಇಲ್ಲವೇ ಇಲ್ಲ. ಹೀಲಿಯಂ (Helium) ಎಂಬ ತತ್ತ್ವದ (Element) ಪರಮಾಣುವಿನಲ್ಲಿ ಮಧ್ಯದಲ್ಲಿ ಎರಡು ನ್ಯೂಟ್ರಾನ್ ಮತ್ತು ಎರಡು ಪ್ರೋಟಾನ್‌ಗಳಿದ್ದು, ಸುತ್ತಲೂ ಎರಡು ಎಲೆಕ್ಟ್ರಾನ್‌ಗಳು ಸುತ್ತುತ್ತವೆ. ಪರಮಾಣುವಿನಲ್ಲಿ ಎಲೆಕ್ಟ್ರಾನ್‌ಗಳ ಸಂಖ್ಯೆಯನ್ನು ವ್ಯತ್ಯಾಸಗೊಳಿಸಬಹುದು. ಸಾಮಾನ್ಯವಾಗಿ ಪರಮಾಣುವು ಸಾಮ್ಯ ಸ್ಥಿತಿಯಲ್ಲಿರುತ್ತದೆ. ಆದರೆ, ಆದರೊಳಗಿನ ಎಲೆಕ್ಟ್ರಾನ್‌ಗಳ ಸಂಖ್ಯೆಯನ್ನು ಹೆಚ್ಚಿಸಿದಾಗ ಅಥವಾ ಕಡಿಮೆ ಮಾಡಿದಾಗ, ಪರಮಾಣುವು ನಿಶ್ಚಿತ ಅಥವಾ ನಿಷೇಧಕ (Positive or negative) ವಿದ್ಯುತ್ತಿನ ವಾಹಕ-ವಾಗುತ್ತದೆ (gets charged). ಕೇಂದ್ರದಲ್ಲಿರುವ ಪ್ರೋಟಾನ್ ಮತ್ತು ನ್ಯೂಟ್ರಾನ್‌ಗಳ ಭದ್ರ ಜೋಡಿಯನ್ನು ಭೇದಿಸುವುದು-ಚದುರಿಸುವುದೂ ಸಾಧ್ಯ . ಆಗ ಹಗುರಾದ ತತ್ತ್ವಗಳನ್ನು (light elements) ಗುರುತತ್ತ್ವಗಳನ್ನಾಗಿ (heavier elements) ಮಾರ್ಪಡಿಸಬಹುದು ಅಥವಾ ಗುರುತತ್ತ್ವಗಳನ್ನು ಹಗುರು ತತ್ತ್ವಗಳನ್ನಾಗಿ ಮಾಡಬಹುದು. ಒಂದು ಲೋಹವನ್ನು ಸುವರ್ಣಾದಿ

ಅನ್ಯಲೋಹವನ್ನಾಗಿ ರೂಪಾಂತರಗೊಳಿಸಬಹುದೆಂದೂ ಹೇಳಲಾಗಿದೆ. ಹೀಗೆ ಪರಮಾಣುವಿನ ರಚನೆಯನ್ನು ಬದಲಿಸಲಿಕ್ಕಾಗಿ, ಅದನ್ನು ಭೇದಿಸಿದಾಗ, ಒಳಗೆ ಅಚಿಂತ್ಯವೇಗದಿಂದ ಸುತ್ತುತ್ತಿರುವ ಎಲೆಕ್ಟ್ರಾನ್‌ಗಳ ಶಕ್ತಿಯು ಬಿಡುಗಡೆ ಹೊಂದುವುದು - ಕೇಂದ್ರಗತ (mass) ಶಕ್ತಿಸಮೂಹವು ಕ್ಷೀಣಿಸುತ್ತದೆ- ಅದರೊಂದಿಗೆ ಪರಮಾಣುವಿನ ಧಮ (ಗುಣ)ವೂ ಬದಲಾಗುತ್ತದೆ. ಪ್ರತಿ ಪರಮಾಣುವೂ ಒಂದು ಸೌರವಿಶ್ವದಂತಿದೆ. ಎಲೆಕ್ಟ್ರಾನ್‌ಗಳು ಕೇಂದ್ರದಿಂದ ದೂರವಿದ್ದು, ಮಧ್ಯದ ಪ್ರದೇಶವು ಬಯಲಾಗಿರುತ್ತದೆ — ಸೂರ್ಯನ ಸುತ್ತಲೂ ಗ್ರಹಗಳು ಸುತ್ತುತ್ತಿದ್ದರೂ ಮಧ್ಯೆ ಅಪಾರವಾದ ಆಕಾಶದ ಬಯಲಿರುವಂತೆ ಎಂದು ತಿಳಿಯಬಹುದು. ಇದನ್ನು ಎಡ್ಡಿಂಗ್‌ಟ‌ (Eddington) ಎಂಬಾತನು, ತನ್ನ 'The nature of the physical universe' 'ಜಗತ್ತಿನಸ್ವರೂಪ' ಎಂಬ ಗ್ರಂಥದಲ್ಲಿ ಹೀಗೆ ನಿರೂಪಿಸಿರುವನು:— 'The scientific table is mostly emptiness. Sparsely scattered in that emptiness are numerous electric charges rushing about with great speed. But their combined bulk amounts to less than a billionth of the table itself. Not withstanding its strange construction, it turns out to be an entirely efficient table' ಎಂದರೆ - 'ವಿಜ್ಞಾನಿಯು ಉಪಯೋಗಿಸುವ ಮೇಜು ಕೇವಲ ಬಯಲೇ ಸರಿ. ಆ ಬಯಲಿನಲ್ಲಿ, ಅಲ್ಲಲ್ಲಿ ಚದುರಿ ವೇಗದಿಂದ ಧಾವಿಸುತ್ತಿರುವ ಸೂಕ್ಷ್ಮತಮಗಳಾದ ಅಸಂಖ್ಯಾತ ವಿದ್ಯುತ್‌ಧಾರಕ ಕಣಗಳು ಮಾತ್ರ ಇವೆ. ಅವೆಲ್ಲವುಗಳ ಒಟ್ಟು ಗಾತ್ರವು. ಆ ಮೇಜಿನ ಗಾತ್ರದಲ್ಲಿ ಕೋಟ್ಯಂತ ಮಾತ್ರವಿರುವುದು. ಮೇಜಿನ ರಚನೆಯು ಹೀಗಿದ್ದರೂ, ಅದು ತನ್ನಿಂದಾಗಬೇಕಾದ ಕಾರ್ಯದ ವಿಷಯಕ್ಕೆ, ಅತ್ಯಂತ ಸಮರ್ಪಕ ವಸ್ತುವಾಗಿದೆ.' ಹೀಗೆ ವಿಜ್ಞಾನಿಗಳು ವಸ್ತುಸ್ವಭಾವ ಧರ್ಮಗಳಿಗೆ, ಪರಮಾಣುಗಳ ವಿಲಕ್ಷಣ ರಚನೆ ಮುಂತಾದ ಕಾರಣಗಳನ್ನು ಹೇಳಿದರೂ, ಎಲೆಕ್ಟ್ರಾನ್ ಮೊದಲಾದವುಗಳ ಸ್ವರೂಪವನ್ನಾಗಲಿ, ಕೇಂದ್ರಗತ ಸೂಕ್ಷ್ಮತಮ ಕಣಗಳ ಸುತ್ತಲೂ ಎಲೆಕ್ಟ್ರಾನ್‌ಗಳು ಏಕೆ ಸುತ್ತುತ್ತವೆ ಮತ್ತು ಅಚಿಂತ್ಯವಾದ ವೇಗವು ಹೇಗೆ ಉಂಟಾಗುತ್ತದೆಂಬುದನ್ನಾಗಲಿ ಹೇಳಲಾರರು. ಮತ್ತು ನಾನಾ ಮೂಲತತ್ವಗಳ

(elements) ಪರಮಾಣುಗಳ ರಚನೆಯು ವಿಲಕ್ಷಣವಾಗಿರುವುದರ ಕಾರಣ-ವನ್ನೂ ಹೇಳಲಾರರು. ವಿಜ್ಞಾನಿಗಳು ದೊರಕಿಸಿಕೊಂಡಿರುವ ಪರಮಾಣುಭಂಜಕ ಉಪಕರಣಗಳಿಂದ ಇನ್ನೂ ಮುಂದೆ ಸಾಗಿ ಪರಮಾಣು ಕೇಂದ್ರವನ್ನೂ (nucleus) ಸಹ ಒಡೆದು ಅದರಲ್ಲಿ ವಿಲಕ್ಷಣವಾದ ಹೊಸ ಕಣಗಳ ಗುಂಪನ್ನೂ ಗುರ್ತಿಸಿರುವರಂತೆ.[6] ಇದರಿಂದ ಅನೇಕ ಹೊಸ ಹೊಸ ಕಲ್ಪನೆಗಳಿಗೆ ಅವಕಾಶವಾಗಿದೆ. ಇದೂ ಅಲ್ಲದೇ, ಪರಮಾಣುವಿನ ಕೇಂದ್ರದ ಸುತ್ತಲೂ ಸುತ್ತುವ ಎಲೆಕ್ಟ್ರಾನ್ ಎಂಬುದು ಎರಡು ವಿಧದ ಧರ್ಮವುಳ್ಳದ್ದೆಂದೂ ಹೇಳಲಾಗುತ್ತದೆ. ಹೇಗೆಂದರೆ-ಎಲೆಕ್ಟ್ರಾನ್, ಪದಾರ್ಥದ ಸೂಕ್ಷ್ಮ ಕಣವಾಗಿಯೂ ಅಲೆ ಅಥವಾ ತರಂಗದಂತೆಯೂ ವರ್ತಿಸಬಲ್ಲದು (a wave or material particle). ಆದರೆ ಒಂದೇ ಕಾಲದಲ್ಲಿ ಎರಡೂ ವಿಧದಿಂದ ವರ್ತಿಸುವುದಿಲ್ಲ. ಎಲೆಕ್ಟ್ರಾನ್‌ಗಳೇ ಏಕೆ, ಎಲ್ಲ ಜಡವಸ್ತುಗಳ (ಶಕ್ತಿಗಳ) ಸೂಕ್ಷ್ಮ ಕಣಗಳೂ ಹೀಗೆ ದ್ವಿವಿಧವಾಗಿ ವರ್ತಿಸಬಲ್ಲವು. ಡಾ|| ಬ್ರೋಗ್ಲಿ ಎಂಬಾತನು ತನ್ನ 'matter and light' (ವಸ್ತು ಮತ್ತು ಕಿರಣ) ಎಂಬ ಗ್ರಂಥದಲ್ಲಿ ಹೀಗೆ ಹೇಳುತ್ತಾನೆ :— "We can no longer imagine the electron as being just a minute corpuscle of electricity, we must associate a wave with it; and this wave is not a fiction; its length can be measured and its interference calculated in advance. In fact, a whole group of phenomena was in this way predicted before being actually discovered." ಎಂದರೆ – ನಾವು, ಇನ್ನು ಮೇಲೆ, ಎಲೆಕ್ಟ್ರಾನನ್ನು ಕೇವಲ ಸೂಕ್ಷ್ಮ ವಿದ್ಯುತ್ಕಣವೆಂದು ಬಗೆಯಲಾರೆವು; ಅದರೊಂದಿಗೆ (ವಿದ್ಯುತ್ಕಣವೆಂಬ ಭಾವನೆಯೊಂದಿಗೆ) ತರಂಗ ವಿಶಿಷ್ಟ-ವಾದುದೆಂದೂ ಚಿಂತಿಸಬೇಕು; ಈ ತರಂಗಯುಕ್ತವೆಂಬ ಭಾವನೆಯು ಕಲ್ಪಿತವಲ್ಲ; ಆ ತರಂಗದ ಅಗಲವನ್ನು (ಅಗಲವು ಎಷ್ಟು ಉದ್ದವಿದೆ

---

6. 'The advent of bigger and bigger atom smashers and accelerators gave the physicists the power to crack open the nucleus, out-spilling a mass of strange new particles' (Indian Express-31-8-67)

ಎಂಬುದನ್ನು) ಅಳೆಯಬಹುದು ; ಮತ್ತು ಅದರ ಪ್ರವೇಶವನ್ನು (ಅಡ್ಡ ಬರುವಿಕೆಯ ಪರಿಣಾಮವನ್ನು) ಮುಂಗಡವಾಗಿ ತಿಳಿದು ಲೆಕ್ಕಿಸಬಹುದು. ವಸ್ತುತಃ, ಈ ಭಾವನೆಗಳ ಆಧಾರದ ಮೇಲೆ ಅನೇಕ ಅದ್ಭುತ ಸಂಭವಗಳ ಸಮೂಹವನ್ನು, ಕಂಡುಹಿಡಿಯುವ ಮೊದಲೇ ತಿಳಿಯಲಾಗಿತ್ತು. (ಹೀಗಾಗುವುದೆಂಬ ಭವಿಷ್ಯವನ್ನು ಅರಿತಿದ್ದೆವು). ಹೀಗೆಯೇ ಪ್ರಕಾಶವೂ (Light) ಸಹ 'ಕಿರಣ ಕಣ'ಗಳಾಗಿಯೂ, ಹರಿಯುವ (radiating) ತರಂಗಗಳಾಗಿಯೂ ಪ್ರವರ್ತಿಸುತ್ತದೆ. ಡಾ|| ಸುಸೆನ್ ಸ್ಟೆಬ್ಬಿಂಗ್ ಎಂಬ ವಿಜ್ಞಾನಿಯು ತನ್ನ 'Philosophy and Physics' (ತತ್ವಜ್ಞಾನ ಮತ್ತು ಭೌತಶಾಸ್ತ್ರವೆಂಬ) ಗ್ರಂಥದಲ್ಲಿ ಈ ವಿಷಯವನ್ನು ಹೀಗೆ ಸ್ಪಷ್ಟ-ಗೊಳಿಸಿರುವನು:— 'That energy and radiation belong to the physical, that is, the material world is indisputable. Sunlight possesses inertia and is bent in a gravitational field.' ಎಂದರೆ, ಶಕ್ತಿ ಮತ್ತು ಅದರ (ತರಂಗರೂಪ) ಪ್ರಸಾರಗಳು ಭೌತಿಕ (ಜಡ) ಜಗತ್ತಿಗೆ ಸೇರಿದವುಗಳೆಂಬುದು ನಿರ್ವಿವಾದವಾಗಿದೆ. ಸೂರ್ಯಪ್ರಕಾಶವೂ ಜಡತ್ವವುಳ್ಳದ್ದು-ಜಡವಸ್ತುಗಳ ಗುರುತ್ವಾಕರ್ಷಣೆಗೊಳಪಟ್ಟ ದೇಶದಲ್ಲಿ ಬಾಗಿ ಮುಂದೆ ಸಾಗುತ್ತದೆ (ಕಿರಣಗಳು ಋಜು (ನೇರ) ಮಾರ್ಗವನ್ನು ತೊರೆದು ಭಗ್ನ ರಶ್ಮಿಗಳಾಗುತ್ತವೆ).

ಈ ಪ್ರಕಾರದ ವಿಜ್ಞಾನ ಪ್ರಗತಿಯು ಜಡವಿಶ್ವದ ರಚನೆಯನ್ನು ಅರಿಯುವುದರಲ್ಲಿ ತೊಡಗಿರುತ್ತದೆಯಲ್ಲದೇ, ಪರಮಾಣುಗಳಲ್ಲಿರುವ ಸೂಕ್ಷ್ಮ ಕಣಗಳನ್ನಾರಂಭಿಸಿ, ವಿಶಾಲ ವಿಶ್ವದಲ್ಲಿ ಸರ್ವತ್ರ ವ್ಯಾಪಿಸಿ, ಬುದ್ಧಿ-ಪೂರ್ವಕ ಸ್ವತಂತ್ರ ಪ್ರವೃತ್ತಿಯುಳ್ಳ ತತ್ವವನ್ನು ತಿಳಿಯುವುದರಲ್ಲಿ ಅಲ್ಲ. ಅಥವಾ ಪರಿಮಿತ ಜಡದೇಹಗಳಲ್ಲಿದ್ದು ಅವುಗಳ ದ್ವಾರಾ ನಾನಾವಿಧ ಕಾರ್ಯಗಳನ್ನು ಮಾಡುವ ಜ್ಞಾನ, ಇಚ್ಛೆ ಮತ್ತು ಕ್ರಿಯಾಶಕ್ತಿಗಳುಳ್ಳ ವಸ್ತುವನ್ನು ತಿಳಿಯುವುದರಲ್ಲಿ ಸಹ ಅಲ್ಲ.

ಪ್ರಕೃತ, ತೇಲುವ ಮರ-ಮುಳುಗುವ ಕಲ್ಲು ಮೊದಲಾದ ವಸ್ತುಗಳ ಸ್ವಭಾವ ಧರ್ಮಗಳನ್ನೂ, ಆ ವಸ್ತುಗಳಿರುವವರೆಗೂ ಆ ಧರ್ಮಗಳಿರಲು

ಅವಶ್ಯಕವಾದ ಅವುಗಳ ರಚನಾ ವೈಚಿತ್ರ್ಯಗಳನ್ನೂ ನಿಯಂತ್ರಿಸಿ, ವಿಶ್ವದ ಸೃಷ್ಟ್ಯಾದಿಗಳನ್ನು ಲೀಲೆಯಿಂದ ಅನಾದ್ಯನಂತ ಕಾಲಗಳಲ್ಲಿ ನಡೆಯಿಸುವ ಅಚಿಂತ್ಯಾದ್ಭುತ ಶಕ್ತಿಯೊಂದನ್ನು (ಪರಮ ಚೇತನನ್ನು) ಅಂಗೀಕರಿಸದೇ ಗತ್ಯಂತರವಿಲ್ಲ. ಕೆಲವು ಪ್ರಾಣಿಗಳು ಜಲದಲ್ಲಿ ಕಣ್ಣಿನಿಂದ ನೋಡಲಾರವು; ಕೆಲವು ಭೂಮಿಯ ಮೇಲಿದ್ದೂ ನೋಡಲಾರವು; ಇನ್ನು ಕೆಲವು ಪ್ರಾಣಿಗಳಿಗೆ ರಾತ್ರಿ ಕಾಲದಲ್ಲಿ ನೋಡುವ ಶಕ್ತಿಯು ಉಡುಗಿ ಹೋಗುತ್ತದೆ; ಮತ್ತೆ ಕೆಲವಕ್ಕೆ ಹಗಲಿನಲ್ಲಿ ನೋಡುವ ಶಕ್ತಿಯು ಹೋಗಿ ರಾತ್ರಿಯಲ್ಲಿಯೇ ಸ್ಪಷ್ಟವಾಗಿ ನೋಡುವ ಸಾಮರ್ಥ್ಯವುಂಟಾಗುತ್ತದೆ. ಕೆಲವು ವಿಚಿತ್ರ ಪ್ರಾಣಿಗಳು ಭೂಮಿಯ ಮೇಲೂ, ಜಲದೊಳಗೂ ಅದೇ ಕಣ್ಣಿನಿಂದ ನೋಡಬಲ್ಲವು. ರೆಕ್ಕೆಗಳಿಲ್ಲದೇ ಹಾರುವ ಪ್ರಾಣಿಗಳಿವೆ-ಕೆಲವಕ್ಕೆ ದೊಡ್ಡ ರೆಕ್ಕೆಗಳಿದ್ದರೂ ಹಾರಲಾರವು. ಭೂ-ಜಲ ಆಕಾಶಗಳಲ್ಲಿರುವ ವಿಶೇಷ ಪರಿಸ್ಥಿತಿಗಳಿಗೆ ಹೊಂದಿಕೊಂಡು ಜೀವಿಸುವ ವಿವಿಧ ಪ್ರಾಣಿಗಳೂ ಜನಿಸುತ್ತವೆ. ಈ ವಿಧ ವಿಚಿತ್ರ ವಸ್ತುಗಳ ನಿರ್ಮಾಣವು ವಿಚಿತ್ರ ಶಕ್ತಿಯುಳ್ಳ ಈಶ್ವರನಿಂದಲ್ಲದೇ ಅನ್ಯರಿಂದ ಸಾಧ್ಯವಿಲ್ಲ. ಸೃಷ್ಟಿ ಮಾತ್ರವಲ್ಲ-ಈ ವಿಧ ಚಿತ್ರವಿಚಿತ್ರವಾಗಿ ಚೇಷ್ಟಿಸುವವನೂ, ಆ ಈಶ್ವರನೇ ಆಗಿರುವನೆಂದು ಯೋಗ್ಯ ವಿಮರ್ಶೆಯಿಂದ ಮನಗಾಣಬಹುದು. ಸರ್ವಾಂತರ್ಯಾಮಿಯಾದ ಆತನು ಚೇಷ್ಟಿಸಿದರೇ, ಜೀವಜಡಾತ್ಮಕ ವಿಶ್ವವು ಚೇಷ್ಟಿಸುವುದೆಂದೂ ಸಿದ್ಧವಾಗುತ್ತದೆ.

ಇವೇ ಮೊದಲಾದ ಲೋಕಸಿದ್ಧ ವಿಷಯಗಳನ್ನೂ, ಜಗತ್ತಿನಲ್ಲಿ ಬೆಳೆಯುತ್ತಿರುವ ವೈಜ್ಞಾನಿಕ ಪ್ರಗತಿಯ ನಿಮಿತ್ತವಾದ ನಾಸ್ತಿಕ್ಯ ಭಾವನೆಗಳು ನಿರಾಧಾರಗಳೆಂಬ ಪ್ರಸಿದ್ಧ ವಿಜ್ಞಾನಿಗಳ ಅಭಿಪ್ರಾಯಗಳನ್ನೂ, ಜೀವ, ಅದೃಷ್ಟ, ಈಶ್ವರಾದಿ ಇಂದ್ರಿಯಾತೀತ ವಸ್ತುಗಳು ವಿಜ್ಞಾನದ (Science) ಎಲ್ಲೆಗೆ ಒಳಪಟ್ಟವುಗಳಲ್ಲವೆಂಬ ಮುಖ್ಯಾಂಶವನ್ನು ಲಕ್ಷ್ಯದಲ್ಲಿಟ್ಟು ವಿಮರ್ಶಿಸಬೇಕಾದ ಅನೇಕ ಲೋಕಾನುಭವಗಳನ್ನೂ, ಗಾಢವಾಗಿ ಪರ್ಯಾಲೋಚಿಸುವುದರಿಂದ, ನಾಸ್ತಿಕ ವಾದಗಳಾವುವೂ ವಿವೇಕಿಗಳಿಂದ ಗ್ರಾಹ್ಯವಲ್ಲವೆಂದೂ ಮಾನವ ಗುರಿಯಾದ ನಿತ್ಯಸುಖದ ಪ್ರಾಪ್ತಿಗಾಗಿ, ನಾಸ್ತಿಕ್ಯವನ್ನು ಸರ್ವಪ್ರಕಾರದಿಂದ ತ್ಯಜಿಸಬೇಕಾದುದು ಅತ್ಯವಶ್ಯಕವೆಂದೂ ಸಿದ್ಧವಾಗುತ್ತದೆ. ಆದ್ದರಿಂದ

ಮೊಟ್ಟಮೊದಲು, ವಿಜ್ಞಾನದ ತೀವ್ರ ಪ್ರಗತಿಯು ಹೀಗೆಯೇ ಸಾಗಿ, ಪರಿಪೂರ್ಣತೆ (perfection) ಯನ್ನು ಹೊಂದಿದರೆ, ಮಾನವನಿಗೆ ಅಸಾಧ್ಯವಾದುದು ಯಾವುದೂ ಉಳಿಯುವುದಿಲ್ಲ-ಪ್ರಾಕೃತ ಶಕ್ತಿಗಳೆಲ್ಲವನ್ನೂ ಪೂರ್ಣವಾಗಿ ವಶಪಡಿಸಿಕೊಂಡು ಏನನ್ನಾದರೂ ಮಾಡಬಲ್ಲನೆಂಬ ದುರ್ಭಾವನೆಯನ್ನು (ತಪ್ಪು ಕಲ್ಪನೆಯನ್ನು) ತೊರೆಯಬೇಕು. ಈ ಪ್ರಕಾರದ ಸಿದ್ಧಿಯು ಎಂದಿಗೂ ಲಭಿಸದು. ತನ್ನನ್ನು ತಾನೇ ತಿಳಿಯದ ಅಲ್ಪ ಮಾನವನು ವಿಶ್ವ ಸಾಮ್ಯವನ್ನು ಸಾಧಿಸುವುದೆಂತು! ಸ್ವಭಾವದಿಂದಲೇ ನಾಶವುಳ್ಳ ದೇಹಾದಿಗಳನ್ನು ನಿತ್ಯ-ಗೊಳಿಸಬಲ್ಲನೇ! ಗ್ರಹ ನಕ್ಷತ್ರಾದಿಗಳು ಸಹ ನಾಶವಾಗುತ್ತವೆ. ಅವುಗಳನ್ನೆಲ್ಲ, ನಿತ್ಯವಾಗಿರುವಂತೆ ಮಾಡಬಲ್ಲನೇ- ಅವುಗಳನ್ನು ಸೃಷ್ಟಿಸಿ, ಅವುಗಳಿಂದ ಅದ್ಭುತ ಕಾರ್ಯಗಳನ್ನು ಮಾಡಿಸಬಲ್ಲನೇ- ಎಂದೂ ಸಾಧ್ಯವಿಲ್ಲ 'ಈಶ್ವರೋಹಮಹಂ ಭೋಗೀ ಸಿದ್ಧೋಹಂ ಬಲಿವಾನ್ ಸುಖೀ'-ನಾನು ಸರ್ವಶಕ್ತನು, ನಾನು ಸರ್ವವನ್ನೂ ಭೋಗಿಸುವ ಸಿದ್ಧನು; ನಾನು ಬಲ-ಸುಖಗಳಿಂದ ಪೂರ್ಣನು, ಇತ್ಯಾದಿ ಭಾವನೆಗಳ ಮೋಹಜಾಲಕ್ಕೆ ಸಿಕ್ಕು, 'ಮಾಮ ಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂಗತಿಂ' ನನ್ನನ್ನು ಯಾವ ಕಾಲಕ್ಕೂ ಹೊಂದದೇ, ಹೇ! ಅರ್ಜುನ, ಅಧೋಗತಿಯನ್ನೇ (ಸುಖಲೇಶವಿಲ್ಲದ-ದುಃಖ ಪೂರ್ಣವಾದ ಗತಿಯನ್ನೇ) ಹೊಂದುವರೆಂದು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ನಿರ್ಣಯಿಸಿ ಹೇಳಿರುವುದನ್ನು ಸದಾ ನೆನಪಿನಲ್ಲಿಡಬೇಕು. **'ನಾನು' ಎಂಬ ಚೇತನ ವಸ್ತುವು ವಿಜ್ಞಾನದಿಂದ ಎಂದಿಗೂ ತಿಳಿಯಲ್ಪಡತಕ್ಕದ್ದಲ್ಲ.** ಹೀಗಿರಲು ವಿಶ್ವನಿಯಾಮಕ-ನಾದ ಈಶ್ವರನನ್ನು ವಿಜ್ಞಾನವು ತಿಳಿಸಿಕೊಡುವುದೆಂದು! ಅಲೆಕ್ಸಿಸ್ ಕ್ಯಾರೆಲ್ ಎಂಬ ಪ್ರಸಿದ್ಧ ವಿಜ್ಞಾನವಾದಿಯು ತನ್ನ 'Man the unknown'-'ಅಜ್ಞೇಯ ಮಾನವ' ಎಂಬ ಗ್ರಂಥದಲ್ಲಿ, 'In learning the secret of the constitution and of the properties of matter, we have gained the mastery of almost everything which exists, on the surface of the earth, **excepting ourselves**' ಎಂದರೆ, ವಸ್ತು ರಚನಾರಹಸ್ಯವನ್ನೂ ಅದರ ಧರ್ಮಗಳನ್ನೂ (ಗುಣಗಳನ್ನೂ) ತಿಳಿಯುವ ಜ್ಞಾನಸಂಪಾದನೆಯಲ್ಲಿ ತೊಡಗಿ, ಭೂಮಿಯಲ್ಲಿರುವ ಪ್ರಾಯಃ ಸಮಸ್ತ

ವಸ್ತುಗಳ ಮೇಲಿನ ಸ್ವಾಮ್ಯವನ್ನು (ಜ್ಞಾನ ಲಾಭವನ್ನೂ ಅವುಗಳನ್ನು ಉಪಯೋಗಿಸಿಕೊಳ್ಳುವ ಶಕ್ತಿಯನ್ನೂ) ದೊರಕಿಸಿಕೊಂಡಿರುತ್ತೇವೆ; ಆದರೆ ನಮ್ಮನ್ನು ಮಾತ್ರ ನಾವು ತಿಳಿಯಲಿಲ್ಲ-ನಾವು ನಮ್ಮನ್ನೇ ಜಯಿಸಲಿಲ್ಲ' ಎಂದಿದ್ದಾನೆ. ಅದೇ ಗ್ರಂಥದ ಮತ್ತೊಂದೆಡೆ ಹೀಗೆಂದಿರುವನು : 'obviously science follows no plan. It develops at random. Its progress depends on fortuitous conditions, such as the birth of men of genius, the form of their mind, the direction taken by their curiosity. Men of science do not know where they are going. They are guided by chance and by subtle reasoning. The principles of the greatest convenience and of the least effort, the pleasure procured by speed, change and comfort are the determining factors in the success of new inventions and our choice has, in no way, been influenced by a consideration of the higher interests of humanity' ಎಂದರೆ, ವಿಜ್ಞಾನವು ನಿರ್ದಿಷ್ಟ ಧ್ಯೇಯ ಸಾಧನೆಗಾಗಿ ಯಾವುದೊಂದು ವ್ಯವಸ್ಥೆಯನ್ನೂ ಅನುಸರಿಸುವುದಿಲ್ಲವೆಂಬುದು ಸ್ಪಷ್ಟ. ಅದು ಗೊತ್ತು ಗುರಿಯಿಲ್ಲದೆ ಬೆಳೆಯುತ್ತಿದೆ. ಅದರ ಪ್ರಗತಿಯು, ಪ್ರತಿಭಾಶಾಲಿಗಳ ಜನ್ಮ-ಅವರ ಮನೋ ಒಲವಿನ ಆಕೃತಿ-ಅವರ ಕುತೂಹಲಗಳು ಹಿಡಿಯುವ ಮಾರ್ಗ, ಇವೇ ಮೊದಲಾದ ಅದೃಷ್ಟ ನಿರ್ಮಿತ (ದೈವಿಕ) ಪರಿಸ್ಥಿತಿಗಳನ್ನು, ಅವಲಂಬಿಸಿರುತ್ತದೆ. ತಾವು ಎತ್ತ ಸಾಗಿರುವರೆಂಬುದನ್ನು ವಿಜ್ಞಾನಿಗಳು ಅರಿಯರು. ಅವರು, ಆಕಸ್ಮಿಕ ಸಂಭವಗಳಿಂದಲೂ, ಸೂಕ್ಷ್ಮ ವಿಚಾರ ಶಕ್ತಿಯಿಂದಲೂ, ಮುಂದೆ ತೋರುವ ಮಾರ್ಗವನ್ನು ಹಿಡಿಯುತ್ತಾರೆ. ಅಲ್ಪ ಶ್ರಮದಿಂದ ಅನುಕೂಲ ಬಾಹುಲ್ಯವನ್ನು ಪಡೆಯುವುದು, ವೇಗಜನ್ಯ (ತ್ವರಾಲಭ್ಯ) ಹರ್ಷ, ಭಿನ್ನ ಪರಿಸ್ಥಿತಿ, ಜೀವನ ಸೌಕರ್ಯಗಳೆಂಬ ಭಾವುಕ ತತ್ವಗಳು ವೈಜ್ಞಾನಿಕ ಹೊಸ ಕಲ್ಪನೆಗಳ ಆವಿರ್ಭಾವಗಳನ್ನು ನಿರ್ಧರಿಸುವ ಹೇತುಗಳಾಗಿವೆ. (ವಿಜ್ಞಾನಿಗಳಾದ) ನಮ್ಮ ಆಯಿಕೆಯು, ಯಾವ ಪ್ರಕಾರ-ದಿಂದಲೂ, ಉನ್ನತ ಮಾನವ ಹಿತಗಳ ವಿವೇಚನೆಯ ಪ್ರಭಾವಕ್ಕೆ ಒಳ-ಪಟ್ಟಿರುವುದಿಲ್ಲ. ಇದೇ ವಿಜ್ಞಾನಿಯು, ವೈಜ್ಞಾನಿಕ ಪ್ರಗತಿಯ ಪರಿಣಾಮಗಳನ್ನು

ವಿವೇಚಿಸುವ ಪ್ರಸಂಗದಲ್ಲಿ ಹೀಗೆಂದಿರುವನು : "Thus, the enormous advance gained by the sciences of inanimate matter over those of living things is one the greatest catostrophes ever suffered by humanity. The environment born of our intelligence and our inventions is adjusted neither to our stature nor to our shapes, we are unhappy. We degenerate morally and mentally. The groups and the nations in which industrial civilization has attained its highest development are precisely those who are becoming weaker and whose return to barbarism is the most rapid." 'ಹೀಗೆ, ವಿಜ್ಞಾನದ ನಾನಾ ಶಾಖೆಗಳು, ಚೇತನ ವಸ್ತುಗಳಕಿಂತ ಅಚೇತನ ವಸ್ತುಗಳ ಮೇಲೆ ಸಾಧಿಸಿರುವ ಮಹತ್ತರ ಪ್ರಗತಿಯು, ಮಾನವಲೋಕಕ್ಕೆ ಬಂದೊದಗಿರುವ ಮಹಾವಿಪತ್ತು-ಗಳಲ್ಲಿ ಹಿರಿದಾಗಿದೆ. ನಮ್ಮ ಬುದ್ಧಿ ಮತ್ತು ನೂತನ ಗಳಿಕೆಗಳ (ಹೊಸ ಶೋಧನೆಗಳ) ಪ್ರಭಾವದಿಂದ ಉಂಟಾಗಿರುವ ದೇಶಕಾಲ ಪರಿಸ್ಥಿತಿಗಳ ವಾತಾವರಣವು, ನಮ್ಮ ಸ್ಥಿತಿ-ಸ್ವರೂಪಗಳಿಗೆ ಹೊಂದಿಕೊಳ್ಳುವಂಥದಲ್ಲ; ನಾವು ಸುಖಿಗಳಾಗಿಲ್ಲ; ನೈತಿಕವಾಗಿಯೂ ಮಾನಸಿಕನಾಗಿಯೂ ಹೀನಸ್ಥಿತಿಗೆ ಇಳಿಯುತ್ತಿದ್ದೇವೆ. ನಾನಾ ಉದ್ಯಮಗಳಿಂದ ರೂಪಗೊಂಡಿರುವ ನಾಗರೀಕತೆ-ಯಲ್ಲಿ ಅತಿ ಮುಂದರಿದ ಸಮಾಜ ಮತ್ತು ಜನಾಂಗಗಳೇ ದುರ್ಬಲಗಳಾಗುತ್ತ (ಮಾನವತ್ವವನ್ನೇ ಕಳೆದುಕೊಳ್ಳುತ್ತ) ಅತಿ ವೇಗವಾಗಿ ಕಾಡುಜನರ ಸ್ಥಿತಿಗೆ ಹಿಂದಿರುಗುತ್ತಿರುವುವು.'

ಈ ಅಭಿಪ್ರಾಯಗಳನ್ನು ಇನ್ನೂ ಅನೇಕ ವಿಜ್ಞಾನಿಗಳು ಸಮರ್ಥಿಸುತ್ತಾರೆ. ಹೀಗೆ, ವಿಜ್ಞಾನದ ಪ್ರಗತಿಯಿಂದ ಮಾನವ ಜಗತ್ತಿನಲ್ಲಿ ರೂಪಗೊಳ್ಳುತ್ತಿರುವ ನವನಾಗರೀಕತೆಯೆಂಬುದು, ವೈಜ್ಞಾನಿಕ ಪ್ರವೀಣರ ಇಚ್ಛೆಗೆ ವಿರೋಧವಾಗಿ, ಬಲಾತ್ಕಾರದಿಂದ ಅವರನ್ನೂ ಜಗತ್ತನ್ನೂ ನಾಸ್ತಿಕ್ಯದಲ್ಲಿ ತಳ್ಳಿ ಮಹಾ ವಿಪತ್ತುಗಳಿಗೆ ಕಾರಣವಾಗುತ್ತಿದೆ. ನಾಸ್ತಿಕ್ಯದಿಂದ ಐಹಿಕ ಸುಖವೂ ಇಲ್ಲ-ಪಾರತ್ರಿಕ ಸುಖವಂತೂ ಇಲ್ಲವೇ ಇಲ್ಲ; ಹೀಗೆಯೇ ಮುಂದುವರಿಯುವುದರಿಂದ ಸುಖವು ದೊರೆಯುವುದೆಂಬ ಭ್ರಮೆ ಮಾತ್ರ ಭದ್ರವಾಗುತ್ತಿದೆ. ದೇಹ ಭಿನ್ನನಾದ

ಚೇತನ, ಆತನಿಗೆ ಜನ್ಮಾಂತರಗಳು ಮತ್ತು ನಶ್ವರ ದೇಹ ಸಂಬಂಧವಿಲ್ಲದ ನಿತ್ಯಸ್ಥಿತಿ, ಹಾಗೂ ಸರ್ವನಿಯಾಮಕನೂ, ಸರ್ವಾಂತರ್ಯಾಮಿಯೂ, ಸ್ವತಂತ್ರನೂ, ಸರ್ವಜ್ಞನೂ, ಅತ ಏವ ದುಃಖಾಜ್ಞಾನಾದಿ ಸಕಲ ದೋಷರಹಿತ ಶುದ್ಧ ಸ್ವರೂಪನೂ ಆದ ಈಶ್ವರ, ಧರ್ಮಾಧರ್ಮಗಳು ಎಂಬೀ ಮೊದಲಾದ ಇಂದ್ರಿಯಾತೀತ ಪದಾರ್ಥಗಳ ಕಲ್ಪನೆಗೆ ಸಹ ಅವಕಾಶವಿಲ್ಲದ ಈ ವಾತಾವರಣದಲ್ಲಿ, ನಿತ್ಯಸುಖದ ಹೆಸರೇ ಇಲ್ಲ. ಹೀಗಿರಲು ಅದರ ಪ್ರಾಪ್ತಿಗಾಗಿ ಯತ್ನಗಳು ಹೇಗೆ ತಾನೇ ನಡೆಯುವುವು?

ಆದ್ದರಿಂದ ನಿತ್ಯಾನಂದಸ್ಥಿತಿ ರೂಪದ ಮಹಾ ಗುರಿಯನ್ನು ಮುಟ್ಟಬೇಕೆಂಬ ಇಚ್ಛೆಯುಳ್ಳವರು (ಮುಮುಕ್ಷುಗಳು) ಈ ದುಷ್ಟ ವಾತಾವರಣದ ಪ್ರಭಾವ-ಕ್ಕೊಳಗಾಗದೇ ಆತ್ಮಜ್ಞಾನಕ್ಕಾಗಿ (ಜೀವೇಶ್ವರರ - ಸ್ವಸ್ವರೂಪ ಮತ್ತು ಅಂತರ್ಯಾಮಿಯಾದ ಪರಮಾತ್ಮನ ಸ್ವರೂಪಗಳ ಜ್ಞಾನಕ್ಕಾಗಿ) ದುಡಿಯಬೇಕು. ವಿಜ್ಞಾನಿಗಳ ಹೊಸ ಶೋಧನೆಗಳನ್ನೂ (inventions) ಅವುಗಳಿಂದ ಸಾಧಿಸಲಾಗುವ ಅದ್ಭುತಗಳನ್ನೂ, ಈಶ್ವರನ ಅಚಿಂತ್ಯಾದ್ಭುತ ಮಹಿಮಾ-ದ್ಯೋತಕಗಳೆಂಬ ದೃಷ್ಟಿಮಾತ್ರದಿಂದ ಯಥೋಚಿತವಾಗಿ ಗಮನಿಸಬೇಕಲ್ಲದೇ, ಗೊತ್ತು ಗುರಿಯಿಲ್ಲದೇ ಹಿತಾಹಿತಗಳ ವಿವೇಕವಿಲ್ಲದೇ ಧಾವಿಸುತ್ತಿರುವ ವೈಜ್ಞಾನಿಕ ಪ್ರಗತಿ ಮಾರ್ಗದಲ್ಲಿ ತಾವೂ ಧುಮುಕಿ ತಮ್ಮ ಜೀವಿತವನ್ನು ವ್ಯರ್ಥಗೊಳಿಸಬಾರದು. ಈ ಹಿಂದೆ ವಿವೇಚಿಸಲಾದ ಲೋಕಾನುಭವಗಳನ್ನೂ ತತ್ಸದೃಶ್ಯಗಳಾದ ಇತರ ನಿದರ್ಶನಗಳನ್ನೂ ಸುದೀರ್ಘವಾಗಿ ವಿಮರ್ಶಿಸಬೇಕು. ಬಹು ಕೋಟಿ ಯೋಜನ ವಿಸ್ತಾರವಾದ ಅದ್ಭುತ ವಿಶ್ವದಲ್ಲಿ ವ್ಯಾಪಾರ ಮಾಡುವ ಅನಂತಚೇತನ ಶಕ್ತಿಗಳ ತಾರತಮ್ಯಗಳನ್ನೂ, ಈ ಎಲ್ಲವನ್ನೂ ನಿಯಂತ್ರಿಸುವ **ಈಶ್ವರ ಶಕ್ತಿಯನ್ನೂ ಶಕ್ಯನುಸಾರ ಗ್ರಹಿಸಿ ಭಾವಿಸುತ್ತ, ತನ್ನ ಅಲ್ಪತೆಯನ್ನೂ ಪರಾಧೀನತೆಯನ್ನೂ ಅರಿಯಬೇಕು.** ವಿಷಯ ಭೋಗದಿಂದಲೇ ಸುಖವೆಂಬ ಮಿಥ್ಯಾಜ್ಞಾನವನ್ನು ಪರಿತ್ಯಜಿಸಬೇಕು. ಸರ್ವ ವಿಧದಿಂದ ಮುಖ್ಯ ಗುರಿಯಾದ ಮುಕ್ತಿಗಾಗಿ ಶ್ರಮಿಸಬೇಕು.

## ಪರಿಚ್ಛೇದ ೬

## ಮೋಕ್ಷ ಮಾರ್ಗ

### ತತ್ವವಾದಿಗಳ ವಾದಸರಣಿ

ಹಿಂದಿನ ಪರಿಚ್ಛೇದಗಳಲ್ಲಿ, ಆಧುನಿಕ ವಿಜ್ಞಾನ ಶಾಸ್ತ್ರದ ವ್ಯಾಪ್ತಿಯು ಜಡ ತತ್ವವನ್ನು ಮಾತ್ರ ಅಳವಡಿಸುವುದೆಂದೂ, ಜೀವ-ಈಶ್ವರ- ಧರ್ಮಾಧರ್ಮ-ಗಳೇ ಮೊದಲಾದ ಅತೀಂದ್ರಿಯ ವಸ್ತುಗಳು ವಿಜ್ಞಾನಗೋಚರಗಳಲ್ಲವೆಂದೂ, ವಿಜ್ಞಾನ ಪ್ರಗತಿಯು ಸುಖ ಸೌಕರ್ಯಗಳನ್ನು ಅತಿಶಯಗೊಳಿಸುತ್ತಿದ್ದರೂ ಸುಖವೆಂಬುದು ಮಾತ್ರದೂರ ಸರಿಯುತ್ತಿರುವುದೆಂದೂ ಪ್ರತಿಪಾದಿಸ-ಲಾಯಿತು. ಸುಖವೆಂಬುದು ಆತ್ಮಾನುಭವರೂಪವಾದುದು-ಆಂತರಿಕವು-ಮನಃಶಾಂತಿಯಿಲ್ಲದೇ ದೊರೆಯದು. ಅಶಾಂತನಿಗೆ ಯಾವುದರಿಂದಲೂ ಸುಖವಿಲ್ಲ. 'ಅಶಾಂತಸ್ಯ ಕುತಃ ಸುಖಂ' ಎಂದಿರುವನು ಶ್ರೀಕೃಷ್ಣ-ಗೀತೆಯಲ್ಲಿ. ಪ್ರಚಲಿತ ವಿಜ್ಞಾನಯುಗವು ಜಗತ್ತಿನಲ್ಲಿ ಅಶಾಂತಿಯನ್ನೇ ಹಬ್ಬಿಸುತ್ತಿದೆ. ಆತ್ಮ ವಿನಾಶವನ್ನೇ ಸಮೀಪಿಸುತ್ತಿರುವಷ್ಟು ಭಯಭ್ರಾಂತನಾಗಿದ್ದಾನೆ ಮಾನವ. ಈ ಪರಿಸ್ಥಿತಿಯು ಹೀಗೆಯೇ ಮುಂದುವರಿದರೆ, ಭಯಂಕರ ಮಾರಕಾಸ್ತ್ರಗಳ ತೂರಾಟದಿಂದ ಮಾನವಕುಲ ನಾಶವಾದರೂ ಆಶ್ಚರ್ಯವಲ್ಲ. **ಸುಖ ಸಾಧನೆಯು ವಿಜ್ಞಾನದ ಗುರಿಯಲ್ಲ**. ಪ್ರತಿಯೊಬ್ಬನಿಗೂ ತಾನು ಉನ್ನತ ಸ್ಥಾನದಲ್ಲಿರಬೇಕೆಂಬ ಬಯಕೆ! ಗೊತ್ತಾದ ಗುರಿಯಿಲ್ಲದೇ ಮುನ್ನುಗ್ಗುತ್ತಿರುವ ವಿಜ್ಞಾನಕ್ಕೆ ಸುಖವು ಲಭಿಸಬಹುದೇ? ಎಂದಿಗೂ ಇಲ್ಲ. ಹೀಗಿದ್ದ ಮಾತ್ರದಿಂದ ಸರ್ವರೂ ಹೀಗೆಂದು ತಿಳಿದು ವಿಜ್ಞಾನ ಮಾರ್ಗವನ್ನು ತ್ಯಜಿಸುವುದಿಲ್ಲ-ಪೂರ್ಣವಾಗಿ ತ್ಯಜಿಸಬೇಕೆಂದೂ ಅಲ್ಲ. ಈ ಹಿಂದೆ ಸೂಚಿಸಿದಂತೆ, ದೈವೀಸ್ವಭಾವದ ಮುಮುಕ್ಷುಗಳು, ವಿಜ್ಞಾನದಿಂದ ಸಾಧಿಸಲಾಗುತ್ತಿರುವ ಅದ್ಭುತಗಳಿಂದ ಮರುಳಾಗಿ, ಅದರಲ್ಲಿಯೇ ಪ್ರವೀಣರಾಗಲು ತಮ್ಮ ಜೀವಿತಕಾಲವನ್ನು ಧಾರೆ ಎರೆದು ವ್ಯರ್ಥಗೊಳಿಸಬಾರದು. ಕಾಲಗತಿಯಿಂದ ಜನಬಾಹುಲ್ಯವು ಆ ದಿಕ್ಕಿನಲ್ಲಿಯೇ ಧಾವಿಸುವುದು. ಆದರೆ ವಿವೇಕಿಗಳು ಆತ್ಮಜ್ಞಾನ ಮತ್ತು ತಲ್ಲಭ್ಯ ನಿತ್ಯಸುಖಗಳ ಪ್ರಾಪ್ತಿಗಾಗಿ ಯೋಗ್ಯ ಕಾಲವನ್ನು ವಿನಿಯೋಗಿಸಿ ಯತ್ನಿಸಬೇಕು.

ಮಾನವನು ಹಿಂದೆಂದೂ ಸಾಧಿಸಲಾಗದಿದ್ದ ವಿಶೇಷ ಪ್ರಗತಿಯನ್ನು ವಿಜ್ಞಾನದಿಂದ ಸಾಧಿಸಿರುವನೆಂಬ ಹೆಮ್ಮೆಯ ಘೋಷಣೆಗಳು, ಧರ್ಮ ಶ್ರದ್ಧೆಯುಳ್ಳ ಜನರನ್ನು ಸಹ ಮುಗ್ಧಗೊಳಿಸುತ್ತಿವೆ. ಇವು ದುರಹಂಕಾರದ ಕೂಗುಗಳಲ್ಲದೇ ಸತ್ಯವಲ್ಲ. ಈ ಹಿಂದಿನ ಕಲಿಯುಗದಲ್ಲಿ ಇದೇ ಪರಿಸ್ಥಿತಿ-ಗಳಿದ್ದಿರಬೇಕೆಂದು ಭಾವಿಸಲು ಆಧಾರಗಳು ದೊರೆಯುತ್ತವೆ. ಕಲಿಯುಗವು, ಕೃತ, ತ್ರೇತ, ದ್ವಾಪರ ಮತ್ತು ಕಲಿಗಳೆಂಬ ನಾಲ್ಕು ಯುಗಗಳಲ್ಲೊಂದು. ಈ ಯುಗಗಳು ಕ್ರಮದಿಂದ ಒಂದಾದಮೇಲೆ ಮತ್ತೊಂದರಂತೆ ಬರುತ್ತವೆ. ಇವು ಕಾಲಚಕ್ರದ ಗಣನಾ ವಿಭಾಗಗಳು. ಈ ನಾಲ್ಕು ಯುಗಗಳಿಂದ ಒಟ್ಟು ೪೩,೨೦,೦೦೦ ವರ್ಷಗಳಾಗುತ್ತವೆ. ಆದರಲ್ಲಿ ಕಲಿಯುಗವೇ ಅತಿ ಚಿಕ್ಕದು. ಕೇವಲ ೪,೩೨,೦೦೦ ವರ್ಷಗಳು ಮಾತ್ರ, ಅದರ ಆದ್ಯಂತ ಕಾಲ. ಹೀಗೆ ಸುಮಾರು ೪೦ ಲಕ್ಷ ವರ್ಷಗಳು ಗತಿಸಿದ ನಂತರ ಒಂದಾವರ್ತಿ ಕಲಿಯುಗ ಬರುತ್ತದೆ. ಹೀಗಿರುವಾಗ ಹಿಂದಿನ ಕಲಿಯುಗದ ಪರಿಸ್ಥಿತಿಗಳನ್ನು ಈಗ ಊಹಿಸಿ ತಿಳಿಯುವುದು ದುಸ್ಸಾಧ್ಯವೇ ಸರಿ. ಯಾವ ಪುರಾತ ತತ್ವ ಶೋಧಕನೂ (archeologist) ತಿಳಿಯಲಾರನು. ಚರಿತ್ರೆಯು ಪುನರಾವೃತ್ತಿಯುಳ್ಳದ್ದು (History repeats itself); 'ಧಾತಾ ಯಥಾ ಪೂರ್ವಮಕಲ್ಪಯತ್' - ಸೃಷ್ಟಿಕರ್ತನು ಮೊದಲಿನಂತೆಯೇ ಎಲ್ಲವನ್ನೂ ಮಾಡಿದನು, ಎಂಬೀ ಮೊದಲಾದ ಪ್ರಾಚೀನ ಜ್ಞಾನಿಗಳ ನುಡಿಗಳೂ, ಹಿಂದಿನ ಕಲಿಯುಗದಲ್ಲಿಯೂ ಈಗಿನ ಪರಿಸ್ಥಿತಿಗಳು ಇದ್ದುವೆಂದು ಭಾವಿಸಲು ಆಧಾರವಾಗುತ್ತವೆ. ಯದ್ಯಪಿ, ಆಸ್ತಿಕರು ಆದರಿಸುವ ಶಾಸ್ತ್ರ ಮತ್ತು ಪುರಾಣ ಗ್ರಂಥಗಳಲ್ಲಿ ಕಲಿಯುಗದ ವರ್ಣನೆಗಳಿವೆ. ಅವುಗಳಲ್ಲಿ ಕಲಿಯುಗ ಪ್ರಾರಂಭದಲ್ಲಿಯೇ (ಕೇವಲ ಮೊದಲಿನ ಸುಮಾರು ಐದು ಸಾವಿರ ವರ್ಷಗಳಲ್ಲಿ) ಸಾಧಿಸಲಾಗಿರುವ ಅಣ್ವಸ್ತ್ರ ಮೊದಲಾದ ಅದ್ಭುತಗಳನ್ನು ಮಾನವನು ಈಗ ಸಾಧಿಸಿಲ್ಲವೇ ಎಂದು ಶಂಕಿಸಬಾರದು. ಇವುಗಳನ್ನು ಉಲ್ಲೇಖಿಸದಿರುವುದರಿಂದ ಅವರ ತ್ರಿಕಾಲ ದರ್ಶಿತ್ವಕ್ಕೆ ಯಾವ ಹಾನಿಯೂ ಇಲ್ಲ. ಕೇವಲ ಧರ್ಮಾಧರ್ಮಗಳ ದೃಷ್ಟಿಯಿಂದ ಯುಗ ಪರಿಸ್ಥಿತಿಗಳನ್ನು ವರ್ಣಿಸುತ್ತಾರಲ್ಲದೇ ರಾಕೆಟ್, ಅಣುಬಾಂಬುಗಳ ನಿರ್ಮಾಣಗಳನ್ನಲ್ಲ. ಕಲಿಯುಗದಲ್ಲಿ ನಾಸ್ತಿಕ್ಯವು ತಾಂಡವಿಸುವುದೆಂಬುದನ್ನು

ಬಹುಪರಿಯಿಂದ ಚಿತ್ರಿಸಿದ್ದಾರೆ. ಕಳೆದ ಐವತ್ತು ವರ್ಷಗಳ ಹಿಂದಿನ ಧಾರ್ಮಿಕ ವಾತಾವರಣದಲ್ಲಿ ಆಗಿರುವ ಏರುಪೇರುಗಳನ್ನು ಗಮನಿಸಿರುವ ಹಿರಿಯರು, ಪುರಾಣಾದಿಗಳಲ್ಲಿ ವರ್ಣಿಸಿರುವ ಅನೇಕ ಪರಿವರ್ತನೆಗಳನ್ನು, ಈ ಕಾಲದಲ್ಲಿ ಗುರ್ತಿಸಿ, ಅವುಗಳ ಸತ್ಯತೆಯನ್ನು ಮನಗಂಡಿರುತ್ತಾರೆ. ಇನ್ನು, ವೇದ ಪುರಾಣಾದಿಗಳಲ್ಲಿ ಪ್ರಸಕ್ತವಾದ ಭೂಗೋಳ ಖಗೋಳ ವಿಚಾರಗಳು, ಆಧುನಿಕ ವೈಜ್ಞಾನಿಕ ಪ್ರವೀಣರು ಸಾಧಿಸಿರುವ ಸಿದ್ಧಾಂತಗಳಿಂದ, ಸುಳ್ಳು ಮಾಡಲ್ಪಟ್ಟಿರುತ್ತ-ವೆಂದು ತಿಳಿದು, ಶಾಸ್ತ್ರ ಪ್ರಾಮಾಣ್ಯವನ್ನು ಶಂಕಿಸುವುದೂ ಯುಕ್ತವಲ್ಲ. ಮುಂದಿನ ಗ್ರಂಥದಲ್ಲಿ ಆಗಮ ಪ್ರಾಮಾಣ್ಯ ವಿಷಯವು ಪ್ರಸಕ್ತವಾಗುವುದರಿಂದ ಈ ವಿಧ ಸಂಶಯಗಳ ಪರಿಹಾರವನ್ನು ಅಲ್ಲಿ ವಿಸ್ತರಿಸಲಾಗುತ್ತದೆ. **ಏವಂ ಚ ನಾಸ್ತಿಕ್ಯದ ಮುಖ್ಯ ಲಕ್ಷಣಗಳಲ್ಲಿ ಒಂದಾದ ವೇದಾದಿ ಶಾಸ್ತ್ರಗಳ ಅಪ್ರಾಮಾಣ್ಯದ ಕಡೆಗೆ ಮನಸ್ಸು ಒಲಿದು ಹರಿಯದಂತೆ, ಆಸ್ತಿಕರು ಎಚ್ಚರವುಳ್ಳವರಾಗಬೇಕು.**

ಪ್ರಥಮ ಪರಿಚ್ಛೇದದಲ್ಲಿ ಆಸ್ತಿಕ್ಯದ ಲಕ್ಷಣಗಳನ್ನು ಸಂಗ್ರಹವಾಗಿ ನಿರೂಪಿಸಲಾಗಿದೆಯಷ್ಟೆ. ಆಸ್ತಿಕವಾದಿಗಳಲ್ಲಿ ಶ್ರೇಷ್ಠರಾದ ತತ್ವವಾದಿಗಳ ಸಿದ್ಧಾಂತಗಳು ಆ ಎಲ್ಲ ಲಕ್ಷಣಗಳನ್ನು ಪೂರ್ಣವಾಗಿ ಹೊಂದಿವೆ. ಹೀಗೆಂಬುದು ಅವರ ವಾದಸರಣಿಯನ್ನು ಅನುಲಕ್ಷಿಸುವುದರಿಂದ ಸ್ಪಷ್ಟವಾಗಿ ಕಂಡುಬರುತ್ತದೆ. ಅದು ಹೀಗಿದೆ :—

ಜಗತ್ತಿನಲ್ಲಿ ಜಡ-ಚೇಡನ ವಿಭಾಗವು ಅನುಭವ ಸಿದ್ಧವಾಗಿದೆ. 'ನಾನು' ಎಂಬ ಅನುಭವಕ್ಕೆ ವಿಷಯವಾಗುವ. ದೇಹಭಿನ್ನ ವಸ್ತುವೇ ಚೇತನವು. **ದೇಹವೇ ನಾನೆಂದು ತಿಳಿದು ಪ್ರವೃತ್ತಿಸುವುದು ಕೇವಲ ಭ್ರಮೆ.** ವಿವೇಕಿಯು ಹಾಗೆಂದೂ ತಿಳಿಯುವುದಿಲ್ಲ. ದೇಹಾದಿಗಳು 'ನನ್ನವು' ಎಂದು ಅನುಭವ-ವಲ್ಲದೇ 'ನಾನೇ' ಎಂದಲ್ಲ. ಅಚೇತನಗಳ ಸಂಘಾತವು ಚೇತನತ್ವವನ್ನು ಹೊಂದಲಾರದು. ಅಚೇತನಗಳಲ್ಲಿ ಜ್ಞಾನ, ಇಚ್ಛೆ ಮತ್ತು ಕ್ರಿಯಾಶಕ್ತಿಗಳಿಲ್ಲ. ಹೀಗಿರುವುದರಿಂದ ಅವು ಪರಸ್ಪರ ಮೇಳನವಾಗುವುದಾದರೂ ಹೇಗೆ ಸಾಧ್ಯ ? **ಜ್ಞಾನ-ಇಚ್ಛೆ-ಕ್ರಿಯಾಶಕ್ತಿಗಳುಳ್ಳ ವಸ್ತುವೇ ಚೇತನವು.** ಚೇತನೇಚ್ಛೆಯಿಂದಲೇ ಅಚೇತನಗಳ ಮೇಳನವಾದರೂ ಆಗಬೇಕು. ಆ ಮೇಳನದಿಂದ ಚೇತನದ

ಉತ್ಪತ್ತಿಯಾಗುವುದಿಲ್ಲ ಹಾಗಾಗುವುದೂ ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಜಡಚೇತನಗಳು ಸ್ವಭಾವದಿಂದಲೇ ಭಿನ್ನ ವಸ್ತುಗಳು. ಚಕ್ಷುರಾದಿ (ಕಣ್ಣು ಮೊದಲಾದ) ಇಂದ್ರಿಯಗಳಿಗೆ ಗೋಚರಿಸುವ ಜಗತ್ತೆಲ್ಲವೂ ಜಡವೇ ಆಗಿದೆ. ಪ್ರಾಣಿ ಮಾತ್ರದ ದೇಹಗಳೆಲ್ಲವೂ ಜಡವೇ. ಆದರೂ ಆ ದೇಹಗಳಿಂದ ಆಗುವ ನಾನಾ ಕ್ರಿಯೆಗಳಿಂದ, ಅಲ್ಲಿ ಸ್ವಾಭಾವಿಕವಾಗಿಯೇ ಕ್ರಿಯಾಶಕ್ತಿ ಇಲ್ಲದ ದೇಹಗಳನ್ನು ಕ್ರಿಯಾ ವಿಶಿಷ್ಟವನ್ನಾಗಿ ಮಾಡುವ, ಚೇತನವಿರಲೇಬೇಕೆಂದು ಸಿದ್ಧವಾಗುತ್ತದೆ. ದೇಹವು ಯಾವುದೇ ಅವಸ್ಥೆಯಲ್ಲಿದ್ದರೂ, ಅದರಲ್ಲಿ ಚೇತನವಿದ್ದರೆ, ನಾನಾ ಪ್ರಕಾರದ ಚೇಷ್ಟೆಗಳು ಅದರಿಂದ ಸಂಭವಿಸುತ್ತವೆ. ಚೇತನವಿಲ್ಲದ ದೇಹವು ಸರ್ವಕ್ರಿಯಾಶೂನ್ಯವಾಗಿ ಮೃತಶರೀರ (ಶವ-ಹೆಣ) ವೆನಿಸುತ್ತದೆ. ಚೇತನವಿದ್ದ ದೇಹದಿಂದ ಸುಖ ಪ್ರಾಪ್ತಿಗೂ ದುಃಖ ನಿವೃತ್ತಿಗೂ ಯತ್ನಗಳು ನಡೆಯುತ್ತವೆ. ಈ ಯತ್ನಗಳ ಫಲರೂಪವಾದ ಸುಖದುಃಖಗಳನ್ನು ದೇಹಗತ ಚೇತನವು ಅನುಭವಿಸುತ್ತದೆ. ಇದೇ ದೇಹ ಭಿನ್ನವಾದ 'ಜೀವ'ನೆಂದು ಕರೆಯಲ್ಪಡುವ ವಸ್ತುವು. ಜೀವನು ದೇಹಸಹಿತನಾಗಿ ಹುಟ್ಟಿದ ಕೂಡಲೇ ಕಂಡುಬರುವ ಮಾತೃಸ್ತನ್ಯಪಾನಾದಿ ಪ್ರವೃತ್ತಿಗಳು, ಜಾತಿಸ್ಮೃತಿ (ದೇಹಾಂತರ ಅನುಭವಗಳ ಸ್ಮರಣೆ) ಇತ್ಯಾದಿ ಲೋಕಸಿದ್ಧ ಅನುಭವಗಳಿಂದ, ಪ್ರತಿಜೀವನೂ ಪೂರ್ವ ಕರ್ಮಗಳ ಸಂಸ್ಕಾರಗಳಿಂದ ಯುಕ್ತನಾಗಿಯೇ ದೇಹಾಂತರಗಳನ್ನು ಹೊಂದುತ್ತಾನೆಂದೂ ಸಿದ್ಧವಾಗುತ್ತದೆ. ಜಗತ್ತಿನಲ್ಲಿ ಅಸಂಖ್ಯಾತವಾದ ವಿವಿಧ ಪ್ರಾಣಿ ದೇಹಗಳನ್ನು ಕಾಣುತ್ತೇವೆ. ಸ್ತ್ರೀ ಪುರುಷ ಭೇದವುಳ್ಳ ೮೪ ಲಕ್ಷ ವಿವಿಧ ಪ್ರಾಣಿದೇಹಗಳಿರುವುವೆಂದು ಹೇಳಲಾಗುತ್ತದೆ. ಸೂಕ್ಷ್ಮ ವೈಜ್ಞಾನಿಕ ಉಪಕರಣ-ಗಳಿಂದ ಇದಕ್ಕೂ ಅಧಿಕ ಸಂಖ್ಯೆಯ ಯೋನಿಗಳನ್ನು ಗುರ್ತಿಸಬಹುದೆಂದೂ ತೋರಬಹುದು. **ಈ ವಿವಿಧ ದೇಹಗಳನ್ನು ಜರಾಯುಜ, ಅಂಡಜ, ಉದ್ಭಿಜ್ಜ ಮತ್ತು ಸ್ವೇದಜಗಳೆಂದು ನಾಲ್ಕು ದೊಡ್ಡ ವಿಭಾಗಗಳಲ್ಲಿ ಸಮಾವೇಶಗೊಳಿಸ-ಬಹುದು.** ಜರಾನಾಮಕ ಚರ್ಮದ ಹೊದ್ದಿಕೆಯಲ್ಲಿದ್ದು, ಮಾತೃ ಗರ್ಭದಿಂದ ಪ್ರಸವಿಸುವುವು '**ಜರಾಯುಜ**'ಗಳು ; ತತ್ತಿಗಳ ರೂಪದಿಂದ ಹುಟ್ಟಿ ನಂತರ ತತ್ತಿಯನ್ನು ಭೇದಿಸಿಕೊಂಡು ಹೊರಗೆ ಬರುವುವು '**ಅಂಡಜ**'ಗಳು; ಅಂಕುರ ರೂಪದಿಂದ ಭೂಮಿಯನ್ನು ಭೇದಿಸಿಕೊಂಡು ಹೊರಗೆ ಬಂದು ನಂತರ

ಬೆಳೆಯುವುವು '**ಉದ್ಭಿಜ್ಜ**'ಗಳು ಮತ್ತು ಬೆವರು ಮುಂತಾದ್ದರಲ್ಲಿ ಹುಟ್ಟುವ ಕೃಮಿಜಾತಿಯ ಪ್ರಾಣಿದೇಹಗಳು '**ಸ್ವೇದಜ**'ಗಳು. ಈ ಪ್ರಾಣಿ ದೇಹಗಳಲ್ಲಿದ್ದು ಚೇಷ್ಟಿಸುವ ಜೀವರು ಅನಂತರಾಗಿದ್ದಾರೆ. ಒಬ್ಬನ ಸುಖದುಃಖಾದಿ ಅನುಭವಗಳು ಮತ್ತೊಬ್ಬನಿಗಿಲ್ಲ. ದೇಹಗತ ಜೀವನು ಸ್ವೇಚ್ಛೆಯಿಂದ ತನ್ನ ದೇಹವನ್ನು ಹೊಂದುವುದಿಲ್ಲ-ಅಲ್ಲಿ ತನ್ನ ಇಚ್ಛೆ ಬರುವವರೆಗೂ ಇರುವುದೂ ಇಲ್ಲ ಅಥವಾ ತನ್ನ ಇಚ್ಛಾನುಸಾರವಾಗಿ ಅದನ್ನು ಬಿಡುವುದೂ ಇಲ್ಲ-ಬಿಡಲು ಸಮರ್ಥನೂ ಅಲ್ಲ. ಈ ಎಲ್ಲವೂ ಅನ್ಯೇಚ್ಛೆಯಿಂದಲೇ ಸಂಭವಿಸುವುವೆಂಬುದು ಸರ್ವಾನುಭವ ಸಿದ್ಧವು-ಆ ಅನ್ಯೇಚ್ಛೆಯೇ ಈಶ್ವರೇಚ್ಛೆಯು. ಆತನೇ ಪರಮಾತ್ಮ - ಹರಿ, ವಿಷ್ಣು, ಬ್ರಹ್ಮ, ನಾರಾಯಣ ಇತ್ಯಾದಿ ಅನಂತ ನಾಮಗಳುಳ್ಳವನು. ಈತನು ಸರ್ವಕರ್ತನೂ ಸ್ವತಂತ್ರನೂ ಸರ್ವಜ್ಞನೂ ಆದುದರಿಂದಲೇ ಅನಂತರ ಜೀವರುಗಳ ಯೋಗ್ಯತೆ ಮತ್ತು ಅದೃಷ್ಟಗಳನ್ನು ಅನುಲಕ್ಷಿಸಿ ಭಿನ್ನ ಭಿನ್ನ ದೇಹಗಳ ಸಂಬಂಧವನ್ನು ಹೊಂದಿಸುವನೆಂದು ತಿಳಿಯಬೇಕು. ಹೀಗೆ ಭಿನ್ನ ಕಾಲಗಳಲ್ಲಿ ಭಿನ್ನ ಭಿನ್ನ ದೇಹಗಳನ್ನು ಹೊಂದುತ್ತಾ ವಿವಿಧ ಕರ್ಮಗಳಲ್ಲಿ ತೊಡಗಿ, ಸುಖ ದುಃಖಾದಿ ಬಹು ಭಿನ್ನ ಅನುಭವಗಳನ್ನು ಪಡೆಯುವ ಜೀವರು ಪರಸ್ಪರ ಭಿನ್ನರೂ ಅಸಂಖ್ಯಾತರೂ ಆಗಿರುವರೆಂದು ಸಿದ್ಧಿಸುತ್ತದೆ. ದೇಹ-ಯೋಗ-ವಿಯೋಗ; (ಜನನ ಮರಣಗಳು) ಸುಖದುಃಖಾದಿ ಅನುಭವಗಳ ಪ್ರಾಪ್ತಿ ; ಜಾಗರ-ಸ್ವಪ್ನ-ಸುಷುಪ್ತಿ ನಿದ್ರೆ-ಮೋಹಾದಿ (ಮೂರ್ಛೆ ಮೊದಲಾದ) ನಾನಾ ಅವಸ್ಥೆಗಳನ್ನು ಹೊಂದಿ, ಅಲ್ಲಿ ಬಹುಪರಿಯ ಅನುಭವಗಳನ್ನು ಹೊಂದುವುದು; ಜಯ-ಪರಾಜಯ, ಲಾಭ-ಹಾನಿ, ಕೀರ್ತಿ-ಅಪಕೀರ್ತಿಗಳು ಯತ್ನಾನುಸಾರ ದೊರೆಯದಿರುವುದು; ಬಲಾತ್ಕಾರವಾಗಿ ಪ್ರೇರಿತನಾದಂತೆ ತನ್ನ ಇಚ್ಛೆಗೆ ವಿರುದ್ಧವಾದ ಕಾರ್ಯಗಳಲ್ಲಿ ತೊಡಗುವುದು; ಇವೇ ಮೊದಲಾದ ಮಾನವನ ಅನುಭವಗಳು **ಜೀವರುಗಳ ಅಲ್ಪಜ್ಞತೆ, ಅಲ್ಪಶಕ್ತಿತ್ವ, ಪರಾಧೀನತೆ-ಗಳನ್ನು ಸುಸ್ಪಷ್ಟವಾಗಿ ತಿಳಿಸಿ ಕೊಡುತ್ತವೆ.** ಇದರಿಂದ ಜೀವರು ಯಾರ ಅಧೀನರು-ಸರ್ವಜ್ಞತ್ವ, ಸರ್ವಶಕ್ತಿತ್ವ ಮತ್ತು ಸರ್ವಸ್ವಾತಂತ್ರ್ಯವುಳ್ಳವನೊಬ್ಬನನ್ನು ಅಂಗೀಕರಿಸಲೇಬೇಕೆ ಎಂಬ ಪ್ರಶ್ನೆಗಳ ಸಮರ್ಪಕ ಪರಿಹಾರವು ಅವಶ್ಯಕ-ವಾಗುತ್ತದೆ. ಇದು ಸ್ವತಃ ಪ್ರಮಾಣಗಳಾದ ಅತ ಏವ ಅನ್ಯಪ್ರಮಾಣಗಳ

ಅಪೇಕ್ಷೆ ಇಲ್ಲದೇ ಇಂದ್ರಿಯಾತೀತ ವಸ್ತುಗಳ ಯಥಾರ್ಥ ಜ್ಞಾನವನ್ನು ದೊರಕಿಸಲು ಸ್ವಯಂ ಸಮರ್ಥಗಳಾದ ಆಗಮಗಳಿಂದಲೇ ಸಾಧ್ಯ . ಆದರೆ, ಅಲ್ಲಿ ಈ ವಿಷಯದಲ್ಲಿ ಹೇಳಲಾಗುವ ನಿರ್ಣಯಗಳ ಸತ್ಯತೆಯನ್ನು ಪ್ರತ್ಯಕ್ಷ-ಅನುಮಾನ-ಅನುಭವಗಳಿಂದ ಬಹುಮಟ್ಟಿಗೆ ಮನಗಾಣಲು ಶಕ್ಯವಿದೆ. ಚೇತನಾಚೇತನಾತ್ಮಕವಾದ ಈ ವಿಶ್ವದ ಉತ್ಪತ್ತಿ , ಸ್ಥಿತಿ, ನಾಶ, ನಿಯಮಗಳು ಮತ್ತು (ಚೇತನ ವರ್ಗದ) ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಲ್ಲವೂ ಪರಮಾತ್ಮನಿಂದಲೇ ಸಂಭವಿಸುವುವೆಂದು, ಆಗಮಗಳು ಸಾರುತ್ತವೆ. ಮಂದಮತಿಗಳಿಗೆ ಅಲ್ಲಿ, ಅವಿಮರ್ಶೆಯಿಂದ ಮೇಲೆ ತೋರುವ, ಪರಸ್ಪರ ವಿರೋಧಾದಿಗಳನ್ನು ಪರಿಹರಿಸಿ, ಸಂಶಯ ವಿಪರ್ಯಾಸಗಳಿಗೆ ಅವಕಾಶ-ವಿಲ್ಲದಂತೆ ನಿರ್ಣಯಗಳನ್ನು ನಿರೂಪಿಸಲು ಪ್ರವೃತ್ತವಾದ ಬ್ರಹ್ಮ ಮೀಮಾಂಸಾ ಶಾಸ್ತ್ರವೂ (ಬ್ರಹ್ಮ ಸೂತ್ರಗಳು) ಇದನ್ನೇ (ಹೀಗೆಂದೇ) ಸಾಧಿಸುತ್ತದೆ. ಈ ನಿರ್ಣಯಗಳು ಪ್ರಸಕ್ತ ಪ್ರಶ್ನೆಗಳಿಗೆ, ಸಕಲ ಜೀವರು, ದೇಹಯೋಗ ವಿಯೋಗ ಮೊದಲಾದ ಎಲ್ಲ ವಿಷಯದಲ್ಲಿ ಈಶ್ವರಾಧೀನರೆಂದೂ, **ಈಶ್ವರನೊಬ್ಬನೇ ಸರ್ವಕಾಲದಲ್ಲಿ ಸರ್ವತ್ರ ಸರ್ವಜ್ಞನಾದ, ಸಮಾಧಿಕ ರಹಿತನಾದ ಸ್ವತಂತ್ರ ಪ್ರಭುವೆಂದೂ** ಉತ್ತರ ಹೇಳುತ್ತವೆ.

ಈ ಮೊದಲು ಉಕ್ತವಾದ ಪ್ರತ್ಯಕ್ಷಸಿದ್ಧ ವಿಷಯಗಳಿಂಹದಲೂ ಅನುಭವಗಳಿಂದಲೂ ಜೀವರು ಸರ್ವವಿಧದಿಂದ ಪರಾಧೀನರೆಂಬುದು ಸಿದ್ಧವೇ ಆಗಿದೆ. ಹೀಗೆಂದ ಮಾತ್ರಕ್ಕೆ ಜೀವ ಪ್ರಯತ್ನವು ವ್ಯರ್ಥವೆಂದಾಗಲಿ ಅದಕ್ಕೆ ಯಾವ ಸ್ಥಾನವೂ ಇಲ್ಲವೆಂದಾಗಲಿ ಹೇಳಿದಂತಲ್ಲ. ಜಡದಲ್ಲಿಲ್ಲದ, ಜೀವಸ್ವಭಾವವೇ ಆಗಿರುವ. ಕ್ರಿಯಾಶಕ್ತಿಯು ಅಭಿವ್ಯಕ್ತವಾಗುವುದೇ 'ಯತ್ನ'ವು. ಯತ್ನವೂ, ಜೀವಸ್ವರೂಪಗಳೇ ಆದ ಇಚ್ಛಾಜ್ಞಾನಗಳೂ ಸಹ, ಈಶಾಧೀನಗಳೇ ಆಗಿವೆ. ಈಶ್ವರೇಚ್ಛಾಶಕ್ತಿಗಳ ಸಹಾಯವಿಲ್ಲದೇ ಜೀವರಿಂದ ಯಾವ ಕ್ರಿಯೆಗಳೂ ಸಂಭವಿಸುವುದಿಲ್ಲ. ಹೀಗೆ ಈಶೇಚ್ಛಾಶಕ್ತಿಯಿಂದಲೇ ಜೀವಪ್ರಯತ್ನಗಳು ನಡೆದರೂ ಜೀವೇಚ್ಛಾನುಸಾರವಾದ ಫಲಗಳು ದೊರೆಯುತ್ತ-ವೆಂಬ ನಿಯಮವಿಲ್ಲ. **ಕರ್ಮಫಲದಾತನು ಈಶ್ವರನೇ ಆಗಿರುವನು.** ಈಶೇಚ್ಛಾನುಸಾರವಾದ ಇಚ್ಛೆಯೇ ಜೀವರಿಗಿದ್ದರೆ, ಸಫಲಗಳಾಗುವ ಯತ್ನಗಳೇ

ನಡೆಯುತ್ತವೆ. ಅಜ್ಞಾನಾವಸ್ಥೆಯಲ್ಲಿ ಸಂಸಾರದಲ್ಲಿ ಸುತ್ತುತ್ತಿರುವ ಜೀವನು ಈಶೇಚ್ಛೆಯನ್ನು ತಿಳಿಯಲು, ಜೀವರು ಹೇಗೆ ವರ್ತಿಸಬೇಕೆಂಬುದನ್ನು ತಿಳಿಸುವ, (ವಿಧಿ-ನಿಷೇಧ ರೂಪದ) ಇದನ್ನು ಮಾಡು-ಇದನ್ನು ಬಿಡು ಎಂಬ ಈಶ್ವರನ ಆಜ್ಞೆಗಳನ್ನು ಸಾರುವ, ಶಾಸ್ತ್ರಗಳನ್ನುಳಿದು ಅನ್ಯಮಾರ್ಗವಿಲ್ಲ. ಈಶನ ಶಾಸನಗಳನ್ನು ತಪ್ಪದೇ ಪಾಲಿಸುವ ಜೀವನನ್ನು ಯೋಗ್ಯವಾದ ಯತ್ನಗಳಲ್ಲಿ ತೊಡಗಿಸಿ, ಅವುಗಳ ಫಲರೂಪವಾದ ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ಸಕಲ ಪುರುಷಾರ್ಥಗಳನ್ನು ಆಯಾ ಕಾಲಗಳಲ್ಲಿತ್ತು, ಈಶನು ತಪ್ಪದೇ ರಕ್ಷಿಸುತ್ತಾನೆ-ಆಜ್ಞಾಧಾರಕ ಭೃತ್ಯನನ್ನು ಸರ್ವಪ್ರಕಾರದಿಂದ ರಕ್ಷಿಸುವ ಪ್ರಭುವಿನಂತೆ. ಜೀವೇಚ್ಛೆಯೂ ಈಶನ ಇಚ್ಛಾಧೀನವೇ ಆಗಿರುವುದರಿಂದ, ಸ್ವಗತಿ ಸಾಧಕಗಳಾದ ಇಚ್ಛೆಗಳನ್ನೇ ಕೊಡೆಂದು ಆತನನ್ನೇ ಶರಣು ಹೊಂದಿ, ಆತನ ಪ್ರೇರಣೆಯಂತೆಯೇ ನಡೆಯುವನೆಂಬ ದೃಢನಿಶ್ಚಯವುಳ್ಳವ-ನಾಗಬೇಕು. ಸರ್ವ ವಿಧದಿಂದ ತಾನು ಈಶ್ವರಾಧೀನನೆಂದೂ, ಆತನೇ ತನ್ನ ರಕ್ಷಕನೆಂಬ ದೃಢ ವಿಶ್ವಾಸವನ್ನು ಹೊಂದುವುದೂ ಮೋಕ್ಷಸಾಧಕವಾದ ಶರಣಾಗತಿಯೆನಿಸುವುದು.

ಪರಸ್ಪರ ಭಿನ್ನರಾದ ಅಸಂಖ್ಯಾತ ಜೀವರಿರುವುದು ಲೋಕಾನುಭವ ಸಿದ್ಧವೆಂದು ಹೇಳಲಾಯಿತಷ್ಟೆ. ಇವರಲ್ಲಿ ಕಂಡುಬರುವ ಬಹುಪ್ರಕಾರದ ತರತಮಭಾವಗಳು ತಾತ್ಕಾಲಿಕ ಮಾತ್ರವಲ್ಲ. ತಾರತಮ್ಯಕ್ಕೆ ಕಾರಣಗಳಾದ ಅವರವರ ಅದೃಷ್ಟಗಳಿಗೂ, ಅವುಗಳಿಗೆ ಕಾರಣಗಳಾದ ಅವರ ಜನ್ಮಾಂತರ ಕರ್ಮಗಳಿಗೂ ಮೂಲಕಾರಣವಾದುದು, ಅವರವರ ಸ್ವಭಾವಸಿದ್ಧ ಗುಣಗಳೇ ಆಗಿರುತ್ತವೆಂದು ಅಂಗೀಕರಿಸಲೇಬೇಕು. ಜೀವಸ್ವರೂಪ ಯೋಗ್ಯತೆಗಳೇ ತಾರತಮ್ಯಯುಕ್ತವಾಗಿವೆ. ಸರ್ವನಿಯಾಮಕನಾದ ಈಶ್ವರನು ಜೀವರ ಯೋಗ್ಯತೆಗಳನ್ನು ಅತಿಕ್ರಮಿಸದಂತೆ ಅವರವರಿಗೆ ಯೋಗ್ಯವಾದ ಕರ್ಮಗಳನ್ನು ಅವರಿಂದ ಮಾಡಿಸಿ, ನಶ್ವರ ಪ್ರಾಕೃತದೇಹ ಸಂಬಂಧದಿಂದ ಮೋಚನೆಮಾಡಿ, ಅವರವರ ಸ್ವರೂಪ ಸ್ಥಿತಿಯನ್ನು ಹೊಂದಿಸುತ್ತಾನೆ. ಜ್ಞಾನಾನಂದಾದಿ ಸ್ವರೂಪವುಳ್ಳ ಜೀವರು ತಮ್ಮ ಸ್ವರೂಪದ ಪೂರ್ಣ ಆವಿರ್ಭಾವವನ್ನು ಹೊಂದಿ ನಿತ್ಯಾನಂದ ಸ್ಥಿತಿಯನ್ನು ಪಡೆಯುತ್ತಾರೆ. ವಿಶ್ವಚಾಲಕನಾದ ತಾನು ಸೃಷ್ಟಿ, ಲಯಾದಿ ಕಾರ್ಯಗಳಲ್ಲಿ

ಜೀವರನ್ನು ಅವರ ಯೋಗ್ಯತಾನುಸಾರವಾಗಿ ಉಪಯೋಗಿಸಿಕೊಳ್ಳುತ್ತಾನೆ. ಸರ್ವಕರ್ತನಾದ ತಾನು ಅವರಲ್ಲಿದ್ದು, ಆ ಕಾರ್ಯಗಳನ್ನು ಅವರ ದ್ವಾರಾ ಮಾಡಿ, ಮಾಡಿಸಿ, ಅವರನ್ನು ಉದ್ಧರಿಸುತ್ತಾನೆ. ಇದು ಆ ಸ್ವತಂತ್ರ ಪ್ರಭುವಿನ ಲೀಲೆ. ಈ ಕಾರ್ಯದಲ್ಲಿ ಆತನ ನಿತ್ಯಭಾರ್ಯಳಾದ, ಸರ್ವದೇಶ-ಸರ್ವ ಕಾಲಗಳಲ್ಲಿ ಆತನೊಂದಿಗೇ ಇರುವ ಮಹಾಲಕ್ಷ್ಮಿಯು ಮುಖ್ಯ ಸಾಧನಭೂತಳಾಗಿರುವಳು-ಗ್ರಹನಕ್ಷತ್ರಾದಿ ಸಕಲ ಲೋಕಾತ್ಮ ವಿಶ್ವದ ರಚನೆಗೆ ಉಪಾದಾನ ಕಾರಣವಾದ ಮೂಲಜಡ ಪ್ರಕೃತಿಯ ನಿಯಾಮಕಳು-ಜೀವರಂತೆ ಈಕೆಯೂ ಪರಮಾತ್ಮನ ಅಧೀನಳೇ ಆಗಿರುವಳು. ಪರಮಾತ್ಮನು ಮಾತ್ರ ಪೂರ್ಣ ಸ್ವತಂತ್ರನು-ಯಾರ ಅಧೀನನೂ ಅಲ್ಲ-ಆತನ ಸಮರೂ ಅಧಿಕರೂ ಯಾರೂ ಇಲ್ಲ-ಎಲ್ಲಿಯೂ ಯಾವ ಕಾಲದಲ್ಲಿಯೂ ಇಲ್ಲ. ಲೋಕದಲ್ಲಿ ಸ್ತ್ರೀ ಪುರುಷ ಸಂಬಂಧದಿಂದ ಪ್ರಾಣಿಗಳ ಸೃಷ್ಟಿಯೂ, ಜಲ ಭೂ ಬೀಜಗಳ ಸಂಯೋಗದಿಂದ ಸ್ಥಾವರ ಸೃಷ್ಟಿಯೂ, ಸ್ಥಿತಿ (ಪಾಲನೆ) ಸಂಹಾರ, ಜ್ಞಾನ, ನಿಯಮನಾದಿಗಳು ಲೋಕದಿಂದ ಲೋಕಕ್ಕೆ (ಅನ್ಯರಿಂದ ಅನ್ಯರಿಗೆ) ಸಂಭವಿಸುವುದೂ ಕಂಡುಬರುತ್ತದೆ. ಇದು ನಮ್ಮಲ್ಲಿ ಈಶ್ವರನ ಸರ್ವಕರ್ತೃತ್ವ ವಿಷಯಕ್ಕೆ ಭ್ರಮೆಯನ್ನುಂಟುಮಾಡಬಾರದು. ಕಾರ್ಯಕಾರಣಗಳಲ್ಲಿ, ಜನ್ಯ-ಜನಕರಲ್ಲಿ, ಪಾಲ್ಯ-ಪಾಲಕರಲ್ಲಿ (ಸರ್ವತ್ರ) ಸರ್ವಶಕ್ತನಾದ ಈಶ್ವರನೇ ನಿಂತು ಸರ್ವವನ್ನೂ ನಿರ್ವಹಿಸುವನೆಂಬುದನ್ನು ಮರೆಯಲಾಗದು. ಆತನೇ ಸರ್ವಕರ್ತನು-ಅನ್ಯರು ಪರಾಧೀನ (ಅಸ್ವತಂತ್ರ) ಅವಾಂತರ ಕರ್ತರು ಹೀಗೆ, ಸಾರ್ವಜ್ಞ್ಯ ಸ್ವಾತಂತ್ರ್ಯ ಅಚಿಂತ್ಯಶಕ್ತಿಮತ್ವ ಮೊದಲಾದ ಸ್ವಾಭಾವಿಕ ಧರ್ಮ-ಗಳಿಂದ ಪೂರ್ಣವಾದ ಸ್ವತಂತ್ರ ವಸ್ತುವು ಒಂದೇ ಇರಬೇಕಲ್ಲದೇ ತತ್ಸದೃಶವಾದ ಅನೇಕ ವಸ್ತುಗಳಿರಲು ಸಾಧ್ಯವಿಲ್ಲ-ಉತ್ತಮವಾದುದಂತೂ ದೂರವೇ ಉಳಿಯಿತು. ಉತ್ತಮವಾದುದಿದ್ದರೆ ಇದನ್ನು ಸ್ವತಂತ್ರವೆಂದೂ ಅನಂತ ಶಕ್ತಿಯುಳ್ಳದ್ದೆಂದೂ ಹೇಳುವುದು ಅರ್ಥವಿಲ್ಲದ ಮಾತು ಮತ್ತು ಇದರ ಸ್ವಾತಂತ್ರ್ಯಾದಿಗಳು ನಿತ್ಯವಾಗಲಾರವು-ಸರ್ವ ಕರ್ತೃತ್ವವಂತೂ ಕೂಡುವುದೇ ಇಲ್ಲ. ಸಮಾನವಾದ ಎರಡು ಪೂರ್ಣ ವಸ್ತುಗಳಿರಲು ಸಹ ಶಕ್ಯವಿಲ್ಲ. ಚೇತನಾ ಚೇತನಾತ್ಮಕ ವಿಶ್ವದ ಸೃಷ್ಟ್ಯಾದಿ ಅಷ್ಟ ಕರ್ತೃತ್ವವನ್ನು ಉಭಯರೂ

ನಿರ್ವಹಿಸಬೇಕಾಗುವುದು. ಇದರಿಂದ ಅವ್ಯವಸ್ಥೆಯೂ, ಪರಸ್ಪರ ವಿರೋಧ-ಗಳೂ, ಪ್ರಭುತ್ವ ಬಾಹುಲ್ಯದ ನಾನಾ ಪ್ರಕಾರದ ದೋಷಗಳೂ ಅನಿವಾರ್ಯವಾಗುತ್ತವೆ. ನಾನಾ ಪ್ರಭುತ್ವಗಳಿಂದ ಭಯದುಃಖಾದಿಗಳು, ಪ್ರಭುಗಳಿಗೂ ಪ್ರಜೆಗಳಿಗೂ, ಲೋಕದಲ್ಲಿ ಕಂಡಿವೆ. ಈ ರೂಪದ ಯುಕ್ತಿಗಳಿಂದ ಮಾತ್ರವಲ್ಲ-ವೇದಾದಿ ಆಗಮ ಪ್ರಮಾಣಗಳಿಂದ ಸಹ, ಸರ್ವಗುಣ-ಪೂರ್ಣನೂ, ಅಜ್ಞಾನ ಭಯ ದುಃಖಾದಿ ಸರ್ವದೋಷ ವಿದೂರವೂ ಆದ ಏಕೈಕ ವಸ್ತುವೇ ವಿಶ್ವವನ್ನು ಸರ್ವಪ್ರಕಾರದಿಂದ ತನ್ನ ವಶದಲ್ಲಿಟ್ಟುಕೊಂಡು, ಲೀಲೆಯಿಂದ ಪ್ರಭುತ್ವವನ್ನು ನಡೆಸುತ್ತದೆಂದು ಸಿದ್ಧವಾಗುತ್ತದೆ.

ಪೂರ್ಣಜ್ಞಾನ, ಪೂರ್ಣಶಕ್ತಿಗಳುಳ್ಳ ಸ್ವತಂತ್ರ ಪುರುಷನು, ಸಹಜವಾಗಿ ಪೂರ್ಣಾನಂದವುಳ್ಳವನೂ ಆಗಿರುವನು. ಜ್ಞಾನಾನಂದಾದಿ ಗುಣಗಳು ಆತನ ಸ್ವಭಾವಸಿದ್ಧ ಗುಣಗಳೆಂದರೆ, ಆತನು ತದ್ರೂಪನೇ ಆಗಿರುವನೆಂದು ಪ್ರಾಪ್ತವಾಗುತ್ತದೆ. ಆತನ ಸ್ವರೂಪವು ಜ್ಞಾನಾದಿ ಗುಣಾತ್ಮಕವಲ್ಲದೇ, ಪ್ರಾಕೃತವಾದುದಲ್ಲ. ನಿತ್ಯವಾದ ಜೀವಸ್ವರೂಪವೇ ಚಿದಾತ್ಮಕವು; ಆದರಿಂದಲೇ ಚೇತನನೆಂದು ಕರೆಯಲ್ಪಡುವನು ಹೀಗಿರಲು, ಪರಮಾತ್ಮನು ತನ್ನ ಗುಣಗಳಿಂದ ಭಿನ್ನವಾದ, ದುಃಖಾಜ್ಞಾನಗಳಿಗೆ ಆಕರವಾದ, ಪ್ರಾಕೃತ (ಜಡ) ದೇಹವುಳ್ಳವನೆಂದು ಹೇಳಲಾದೀತೇ? ಹಾಗಿದ್ದರೆ, ಜೀವ-ಜಡತತ್ವಗಳ ಸ್ವಭಾವ ನಿಯಾಮಕನೂ, ಜೀವರಿಗೆ ಜಡದೇಹಗಳ ಯೋಗವನ್ನು ನಿಶ್ಶೇಷವಾಗಿ ಪರಿಹರಿಸಿ, ಸ್ವಸ್ವರೂಪಗಳಿಂದಿರುವ ನಿತ್ಯಸ್ಥಿತಿಯನ್ನು ಹೊಂದಿಸುವ ಸಾಮರ್ಥ್ಯವುಳ್ಳವನೂ ಆಗಲಾರನು. ಆದ್ದರಿಂದ ಪರಮಾತ್ಮನು ನಿತ್ಯ-ಜ್ಞಾನಾನಂದ ಸ್ವರೂಪನೂ, ಅಶೇಷ ದೋಷದೂರನೂ ಆದ ಸರ್ವೋತ್ತಮ ಸ್ವತಂತ್ರ ಪ್ರಭುವೆಂಬ ನಿಶ್ಚಯ ಜ್ಞಾನವನ್ನು ದೊರಕಿಸಿಕೊಳ್ಳುವುದು ಮಾನವನ ಮುಖ್ಯ ಕರ್ತವ್ಯವಾಗಿದೆ. ಇದನ್ನು ಸಾಧಿಸದೇ ಈ ಹಿಂದೆ ಹೇಳಿದ 'ಮೋಕ್ಷಸಾಧಕ ಶರಣಾಗತಿ'ಯು ಲಭಿಸದು. **'Freedom from bondage is possible only through attuning all our actions to the Divine will'** — ನಮ್ಮ ಎಲ್ಲ ಕ್ರಿಯೆಗಳು ಈಶ್ವರೇಚ್ಛಾನುಸಾರಿಗಳಾದರೆ ಮಾತ್ರ ಪ್ರಾಕೃತ ಬಂಧದ ಬಿಡುಗಡೆಯು ಶಕ್ಯ. ಅಪಾರ ಮಹಿಮನೆಂಬ ಜ್ಞಾನಪೂರ್ವಕ

ಈಶ್ವರನನ್ನು ಹೀಗೆ ಶರಣು ಹೊಂದುವುದೇ ಭಕ್ತಿಯು-ಇದನ್ನು ಪಡೆದವನೇ ಶ್ರೇಷ್ಠ ಭಕ್ತನು.

ಜಗತ್ತಿನಲ್ಲಿ ಸಕಲ ವಸ್ತುಗಳೂ ಗುಣದೋಷಗಳುಳ್ಳವಾಗಿವೆ. ಅವುಗಳಲ್ಲಿ ಗುಣದೋಷಗಳು ವಿವಿಧ ಪ್ರಮಾಣದಲ್ಲಿ ಕೂಡಿಕೊಂಡಿವೆ. ಕೆಲವು ಗುಣಾಧಿಕ್ಯವುಳ್ಳವು; ಮತ್ತೆ ಕೆಲವು ದೋಷಾಧಿಕ್ಯವುಳ್ಳವು. ಏವಂ ಚ, ಎಲ್ಲಿ ಗುಣವೋ ಅಲ್ಲಿ ದೋಷ-ಎಲ್ಲಿ ದೋಷವೋ ಅಲ್ಲಿ ಗುಣ, ಎಂಬ ಅನ್ಯೋನ್ಯ ವ್ಯಾಪ್ತಿಯು ಸರ್ವತ್ರ ಕಂಡುಬರುತ್ತದೆ. ಹೀಗೆಯೇ, ಸುಖ ದುಃಖ-ಜ್ಞಾನ ಅಜ್ಞಾನಗಳೂ, ಒಂದಿದಲ್ಲಿ ಮತ್ತೊಂದೆಂಬ ವ್ಯಾಪ್ತಿಯುಳ್ಳವುಗಳೆಂದೂ ಕಂಡುಬರುತ್ತದೆ. ದೋಷವಿಲ್ಲದ ಕೇವಲ ಗುಣವುಳ್ಳ ವಸ್ತುವನ್ನು ಕಾಣಲಾರೆವು. ವಸ್ತುಗತ ಗುಣಗಳು ನಮ್ಮನ್ನು ಆಕರ್ಷಿಸುತ್ತವೆ-ದೋಷಗಳು ಹಿಂದಟ್ಟುತ್ತವೆ. ಹೀಗಿದ್ದರೂ, ದೋಷಗಳು ಅಲ್ಪವಾಗಿದ್ದು ಗುಣಗಳೇ ಅಧಿಕವಾಗಿರುವ ವಸ್ತುಗಳಲ್ಲಿ (ಅವು ಚೇತನವಾಗಿರಲಿ-ಅಚೇತನವಾಗಿರಲಿ) ಒಂದು ಬಗೆಯ ಸ್ವಾಭಾವಿಕ ಸ್ನೇಹವುಂಟಾಗುತ್ತದೆ. ಇದನ್ನು (ಈ ಮನೋ ಭಾವವನ್ನು) ಪ್ರೀತಿ, ಪ್ರೇಮ, ಭಕ್ತಿ, ಕೃಪೆ, ವಾತ್ಸಲ್ಯ ಇತ್ಯಾದಿ ನಾಮಗಳಿಂದ ವ್ಯವಹರಿಸುತ್ತೇವೆ. ಸದ್ಗುಣಗಳ ಆಕರ್ಷಕ ಶಕ್ತಿಯು ಸ್ವಾಭಾವಿಕವಾದುದು. ನಮ್ಮನ್ನು ಆಕರ್ಷಿಸುವ ವಸ್ತುಭೇದದಿಂದ, ಅದರಲ್ಲುಂಟಾಗುವ ಸ್ನೇಹವು ಭಿನ್ನನಾಮಗಳಿಂದ ಕರೆಯಲ್ಪಡುತ್ತದೆ. ಪ್ರಕೃತಿ ಸೌಂದರ್ಯ, ಕಲಾಪೂರ್ಣ ಚಿತ್ರ, ಸುಂದರ ಸುವಾಸಿತ ಪುಷ್ಪಗಳು, ಸಂಗೀತ, ಸಾಹಿತ್ಯ ಮೊದಲಾದವುಗಳಲ್ಲಿ ನಮಗುಂಟಾಗುವ ಸ್ನೇಹವನ್ನು, ಸಾಮಾನ್ಯವಾಗಿ 'ಪ್ರೀತಿ' ಎಂಬ ಶಬ್ದದಿಂದ ವ್ಯವಹರಿಸುತ್ತೇವೆ. ಸ್ನೇಹಿತ, ಪತ್ನಿ, ಪುತ್ರ, ಭ್ರಾತೃ ಮುಂತಾದ ವ್ಯಕ್ತಿಗಳಲ್ಲಿ ಕಂಡುಬರುವ ಸದ್ಗುಣಗಳ ನಿಮಿತ್ತವಾದ ಸ್ನೇಹವನ್ನು 'ಪ್ರೇಮ'ವೆನ್ನುತ್ತೇವೆ. ಸದ್ಗುಣಗಳು ಅವರಲ್ಲಿ ಅಧಿಕವಾಗಿ ಪ್ರಕಟವಾಗುತ್ತಾ ಹೋದಂತೆ, ನಮ್ಮ ಪ್ರೇಮವೂ ಅಧಿಕವಾಗುತ್ತದೆ-ದೃಢವೂ ಆಗುತ್ತದೆ. ಅವರಲ್ಲಿ ದೋಷಗಳೇ ಅಧಿಕವಾಗಿ ಕಾಣುತ್ತ ಬಂದರೆ ದ್ವೇಷವೂ ತಿರಸ್ಕಾರ ಬುದ್ಧಿಯೂ ಅಧಿಕವಾಗುತ್ತದೆ. ಹೀಗೆಯೇ, ವಯೋಧಿಕರಲ್ಲಿಯೂ ಮಾತಾಪಿತೃಗಳಲ್ಲಿಯೂ ಜ್ಞಾನಾಧಿಕರಲ್ಲಿಯೂ ನಮಗುಂಟಾಗುವ ಸ್ನೇಹವನ್ನು 'ಭಕ್ತಿ' ಎನ್ನುತ್ತೇವೆ.

ಇದು, ಅವರಲ್ಲಿ ಪೂಜ್ಯ ಬುದ್ಧಿಯನ್ನೂ, ಕೃತಜ್ಞತೆಯನ್ನೂ ಅವರ ಸೇವೆಗಾಗಿ ಉತ್ಸಾಹವನ್ನೂ ಉಂಟುಮಾಡುತ್ತದೆ. ಇನ್ನು, ಕಿರಿಯರಲ್ಲಿ ಅಸಹಾಯಕರಲ್ಲಿ, ದರಿದ್ರರಲ್ಲಿ, ನಾನಾ ಬಗೆಯ ದುಃಖಕ್ಕೆ ಈಡಾದವರಲ್ಲಿ ಉಂಟಾಗುವ ಸ್ನೇಹಭಾವವನ್ನು ವಾತ್ಸಲ್ಯ, ಕೃಪೆ ಇತ್ಯಾದಿ ನಾಮಗಳಿಂದ ಕರೆಯುತ್ತೇವೆ. ಈ ಪ್ರಕಾರದ ಗುಣದೋಷ ನಿಮಿತ್ತವಾದ ಸ್ನೇಹ-ದ್ವೇಷ-ಉದಾಸೀನ ಭಾವಗಳು, ಆ ಗುಣದೋಷಗಳಿರುವವರೆಗೆ ಮಾತ್ರ-ಅವುಗಳ ಜ್ಞಾನ ನಮಗಿರುವವರೆಗೆ ಮಾತ್ರ ಎಂಬುದು ಅನುಭವ ಸಿದ್ಧವಾದುದು. **ವಸ್ತುಗಳಿಗೆ ಸ್ವಭಾವಸಿದ್ಧ ಗುಣದೋಷಗಳಿರುವಂತೆ ಆಗಂತುಕ ಗುಣದೋಷಗಳೂ ಇರುತ್ತವೆ.** ಅಲ್ಲದೇ ಒಂದೊಂದು ಗುಣ-ದೋಷವೂ ಭಿನ್ನ ಭಿನ್ನ ವಸ್ತುಗಳಲ್ಲಿ ಭಿನ್ನ ಭಿನ್ನ ಪ್ರಮಾಣದಲ್ಲಿರುತ್ತದೆ. ಬಹು ಗುಣಗಳನ್ನೂ ಹೊಂದಿದ್ದು. ಒಂದೊಂದು ಗುಣವೂ ಇತರ ವಸ್ತುಗಳಿಗಿಂತ ಅಧಿಕ ಪ್ರಮಾಣದಲ್ಲಿದ್ದರೆ, ಅಂಥ ವಸ್ತುವಿನಲ್ಲಿ ಅಧಿಕ ಪ್ರೇಮ ಹುಟ್ಟುತ್ತದೆ. ಆ ಸದ್ಗುಣಗಳು, ಆಗಂತುಕಗಳಲ್ಲದೇ ಸ್ವಾಭಾವಿಕವೂ ನಿತ್ಯವೂ ಆಗಿದ್ದರೆ ಇನ್ನೂ ಅತಿಶಯವಾದ ನಿರಂತರ ಪ್ರೇಮವುಂಟಾಗುತ್ತದೆ. ದೋಷವೇ ಇಲ್ಲದಂತೆ ಕೇವಲ ಸದ್ಗುಣಗಳ ಮೂರ್ತಿಯೇ ಆದ ಮತ್ತು ಒಂದೊಂದು ಗುಣವೂ, ಸರ್ವ ಗುಣಾತ್ಮಕವೂ ಅನಂತವೂ ಅಪಾರವೂ ಆಗಿರುವ, ಲೋಕ ವಿಲಕ್ಷಣವೇ ಆದ ಒಂದು ವಸ್ತುವಿದ್ದಲ್ಲಿ, ಅದು ಈ ಪ್ರಕಾರದ ಪೂರ್ಣತ್ವವುಳ್ಳದ್ದೆಂಬ ದೃಢ ಜ್ಞಾನವಾದಾಗ, ಅದರಲ್ಲಿ ಎಷ್ಟು ಅಪಾರವಾದ ನಿಶ್ಚಲಪ್ರೇಮವುಂಟಾಗಬಹುದು! ಆ ವಸ್ತು, ತನ್ನನ್ನು ಸರ್ವವಿಧದಿಂದ ರಕ್ಷಿಸಿ, ದೇಹದಿಂದ ದೇಹಾಂತರಗಳನ್ನು ಹೊಂದುತ್ತಾ, ದುಃಖಮಯವಾದ ಸಂಸಾರದಲ್ಲಿ ಸುತ್ತುವುದರಿಂದ ಬಿಡುಗಡೆಮಾಡಿ, ನಿತ್ಯಾನಂದ ಸ್ಥಿತಿಯನ್ನು ಹೊಂದಿಸುವುದೆಂಬ ಜ್ಞಾನವಾದರೆ, ಅದನ್ನು ಯಾವ ಕೃತಜ್ಞನು ಪೂಜಿಸಿ, ಸೇವಿಸಿ, ಸರ್ವಸಮರ್ಪಣೆ ಮಾಡಲಿಕ್ಕಿಲ್ಲ! ಈಶ್ವರನ ಮಹಾಮಹಿಮೆಗಳು ಅಸಂಖ್ಯಾತವೂ, ಅನಂತವೂ, ಅಪಾರವೂ ಆಗಿರುವುದರಿಂದ ಎಲ್ಲ ಜೀವರೂ ಅವುಗಳನ್ನು ಏಕಪ್ರಕಾರವಾಗಿ ಗ್ರಹಿಸಲಾರರು-ಎಲ್ಲವನ್ನೂ ತಿಳಿಯಲಾರರು-ಒಂದೊಂದನ್ನೂ ಪೂರ್ಣವಾಗಿ ತಿಳಿಯಲಾರರು-ತರತಮಭಾವಯುಕ್ತವಾದ ಸ್ವರೂಪಗಳುಳ್ಳವರಾದ್ದರಿಂದ ತಂತಮ್ಮ

ಯೋಗ್ಯತಾನುಸಾರವಾಗಿ ಮಾತ್ರ ತಿಳಿಯಬಲ್ಲರು - ಆತ್ಮವಿಕಾಸದ ನಾನಾ ಹಂತಗಳಲ್ಲಿ ತದನುಸಾರವಾಗಿ ಸ್ವರೂಪ ಯೋಗ್ಯತೆಗಿಂತ ಅಲ್ಪವಾಗಿಯೇ ಗ್ರಹಿಸುವರು. ಈಶ್ವರನ ಮಹಿಮಾಜ್ಞಾನಾನುಸಾರವಾದ ಪ್ರೇಮವೂ ಅವರಲ್ಲಿ ಉದಯವಾಗಿ, ಜ್ಞಾನವು ವೃದ್ಧಿಹೊಂದಿದಂತೆ-ದೃಢವಾದಂತೆ, ಪ್ರೇಮವೂ ವೃದ್ಧಿಯಾಗುತ್ತದೆ-ದೃಢವಾಗುತ್ತದೆ, ಈ ಪ್ರೇಮವು ನಾನಾ ಪ್ರಕಾರದ ಸಹಸ್ರಾರು ವಿಘ್ನಗಳಿಂದ ಉಪಹತಿಯನ್ನು ಹೊಂದದೇ, ಪತ್ನೀಪುತ್ರ ಸ್ವದೇಹಾದಿ ಈಶ್ವರೇತರ ಸಕಲ ವಸ್ತುಗಳಲ್ಲಿರುವ ಸ್ನೇಹಕ್ಕಿಂತ ಅಧಿಕವಾದುದೂ ನಿರಂತರವೂ ಆಗಿ ಪ್ರವಾಹದಂತೆ ಅವಿಚ್ಛಿನ್ನವಾಗಬೇಕು. ಈ ಪ್ರಕಾರದ ಶ್ರೇಷ್ಠ ಭಕ್ತಿಯೇ ಪರಮಾತ್ಮನ ಪರಮ ಪ್ರಸಾದವನ್ನು ದೊರಕಿಸುತ್ತದೆ. ಅದರಿಂದ ಜೀವಸ್ವರೂಪವು ಪೂರ್ಣಾವಿರ್ಭಾವಗೊಂಡು, ನಶ್ವರ ದೇಹ ಸಂಬಂಧರಹಿತವಾದ ನಿತ್ಯಸ್ಥಿತಿ-ಯನ್ನು ಹೊಂದುತ್ತದೆ. ಪ್ರಾಕೃತ ದೇಹಗಳಿಂದ ಆಚ್ಛಾದಿತವಾದ ಅವಸ್ಥೆಯಲ್ಲಿ (ಸಂಸಾರದಲ್ಲಿ ಸುತ್ತುವಾಗ) ಅನುಭವಿಸಲು ಅವಕಾಶವಿಲ್ಲದ (ಶಕ್ಯವಲ್ಲದ) ಸ್ವರೂಪಸ್ಥಿತ ಪೂರ್ಣಾನಂದವನ್ನು, ಆಗ ಜೀವನು ಅನುಭವಿಸುವನು-ಇದೇ ಮೋಕ್ಷವು-ಸನ್ಮುಕ್ತಿಯು-ಸಂಸಾರಿ ಜೀವರ ಕಲ್ಪನೆಗಳಿಗೂ ನಿಲುಕದ ಮಹಾ-ವೈಭವವುಳ್ಳ ಅವಸ್ಥೆಯು ಮುಕ್ತಜೀವನು ಸತ್ಯಸಂಕಲ್ಪನು - ಯಾವ ಯತ್ನ ಶ್ರಮಾದಿಗಳೂ ಇಲ್ಲದೇ ಸಂಕಲ್ಪ ಮಾತ್ರದಿಂದ ಅಪೇಕ್ಷಿತ ಸರ್ವಸಿದ್ಧಿಯುಳ್ಳವನಾಗಿರುವನು.

ಸಂಸಾರಾವಸ್ಥೆಯಲ್ಲಿ (ಪ್ರಾಕೃತ ದೇಹಯುಕ್ತನಾಗಿದ್ದಾಗ) ಜೀವನು ತನ್ನ ಪರಾಧೀನತೆಯನ್ನು ಪ್ರತಿಕ್ಷಣದಲ್ಲಿ ಮನಗಾಣುತ್ತಿರುವನಷ್ಟೆ. ಮುಕ್ತನಾದ ಮೇಲಾದರೂ ಸ್ವತಂತ್ರನಾಗುವನೋ ಹೇಗೆಂಬ ಪ್ರಶ್ನೆಯನ್ನು, ತತ್ವವಾದಿಗಳು ಇಲ್ಲವೆಂದೇ ಉತ್ತರಿಸುತ್ತಾರೆ. ಇದೇನೂ ಆಶ್ಚರ್ಯವಲ್ಲ ಮತ್ತು ಯುಕ್ತಿ ಯುಕ್ತವೂ ಆಗಿದೆ. ಜ್ಞಾನ, ಇಚ್ಛೆ, ಕ್ರಿಯಾ ಶಕ್ತಿಗಳೇ ಜೀವ ಸ್ವರೂಪವಾಗಿವೆ. ಈ ಶಕ್ತಿಗಳು ಜಡವಸ್ತುಗಳಲ್ಲಿಲ್ಲ-ಚಿತ್ರವಿಚಿತ್ರ ಪದಾರ್ಥಗಳಿಂದ ತುಂಬಿದ ವಿಶ್ವಸೃಷ್ಟಿಯ ಮೂಲವಾದ (ಉಪಾದಾನ ಕಾರಣದ ಮೂಲವಾಗಿರುವ) ಜಡಪ್ರಕೃತಿಯಲ್ಲಿ ಸಹ ಇಲ್ಲ. ಜೀವ ಸ್ವರೂಪ ಭೂತಗಳಾದ ಈ ಶಕ್ತಿಗಳು ಈಶ್ವರನ ಪ್ರಚೋದಕ ಶಕ್ತಿಯನ್ನುಳಿದು ಪ್ರಕಟವಾಗುವುದಿಲ್ಲ-ಕಾರ್ಯ-

ಸಮರ್ಥಗಳಲ್ಲ. ಹಾಗೆ ಸ್ವಯಂ ಸಮರ್ಥಗಳಾಗಿದ್ದರೆ, ಜೀವನು ಸಂಸಾರಾವಸ್ಥೆಯಲ್ಲಿಯೂ ಸ್ವತಂತ್ರನಾಗಿರಬೇಕು. ಜಡದೇಹಾದಿಗಳು ಆತನ ಸ್ವಾತಂತ್ರ್ಯವನ್ನು ಉಡುಗಿಸಲು ಸಮರ್ಥಗಳಲ್ಲ-ಕರ್ತೃತ್ವಶಕ್ತಿ ಶೂನ್ಯಗಳಾದ್ದ-ರಿಂದ. ಸಂಸಾರಿ ಜೀವನಾದರೋ ತನ್ನ ಇಚ್ಛೆಯಂತೆ ದೇಹಗಳನ್ನು ಹೊಂದುವುದಿಲ್ಲ-ಬಿಡುವುದೂ ಇಲ್ಲ-ಅನೇಕ ವೇಳೆ ತನ್ನ ಇಚ್ಛೆಗೆ ವಿರುದ್ಧವಾಗಿ ಅನ್ಯ ಶಕ್ತಿಯಿಂದ ಬಲಾತ್ಕರಿಸಲ್ಪಟ್ಟವನಂತೆ ವರ್ತಿಸುತ್ತಾನೆ. ತನ್ನ ಯತ್ನಾನು-ಸಾರವಾದ ಫಲಗಳನ್ನೂ ಹೊಂದುವುದಿಲ್ಲ. ತಾನು ತಿಳಿಯಬೇಕೆಂದಾಶಿಸುವ ಎಲ್ಲವನ್ನೂ ತಿಳಿಯಲೂ ಅಸಮರ್ಥನಾಗಿರುವನು. ನಾನಾ ಪರಿಯ ದುಃಖಗಳಿಗೆ ಕಾರಣವಾದ ಪ್ರಾಕೃತ ದೇಹಬಂಧವನ್ನೇ, ಸ್ವತಂತ್ರನಾಗಿದ್ದರೆ ತೊಡೆದುಹಾಕುತ್ತಿದ್ದನು. ಈ ವಿಧ ಪರಿಸ್ಥಿತಿಯಲ್ಲಿರುವ ಜೀವನು ಸ್ವರೂಪದಿಂದ ಸಹ ಅನ್ಯಾಧೀನನೆಂದು ಸಿದ್ಧವಾಗುತ್ತದೆ. ಸ್ವಯಂ ಅಸಮರ್ಥವಾದ ಪ್ರಕೃತಿಯು ಜೀವಸ್ವರೂಪವನ್ನು ಆಚ್ಛಾದಿಸಿ ಬಂಧಿಸಿರುವುದು ಸಹ ಸ್ವತಂತ್ರ ಚೇತನೇಚ್ಛೆಯಿಂದಲೇ ಎಂದೂ ಸಿದ್ಧವಾಗುತ್ತದೆ. ಬಂಧಕನೇ ಮೋಚಕ-ನಾಗಬೇಕೆಂಬುದು ಸಹ ಯುಕ್ತಿ ಯುಕ್ತವೇ ಅಲ್ಲವೇ! ಮ್ಯಾಜಿಸ್ಟ್ರೇಟರ ಆಜ್ಞೆಯಿಂದ ಬಂಧಿಸಲ್ಪಟ್ಟ ಪುರುಷನನ್ನು, ಮ್ಯಾಜಿಸ್ಟ್ರೇಟರಲ್ಲದೇ ಅನ್ಯರು ಯಾರೂ ಬಿಡಿಸಲಾರರಷ್ಟೆ. ಪ್ರಕೃತ, ಜೀವಸ್ವರೂಪವೇ ಈಶಾಧೀನ-ವಾಗಿರುವಾಗ, ಸ್ವರೂಪಸ್ಥಿತಿಯನ್ನು ಹೊಂದಿದ (ಮುಕ್ತನಾದ) ಜೀವನು ಸ್ವತಂತ್ರನಾಗುವುದು ಹೇಗೆ? ಮುಕ್ತನೂ ಸಹ ಪರಮಾತ್ಮನ ಅಧೀನನಾಗಿಯೇ ಸ್ವಾನಂದವನ್ನನುಭವಿಸುವನು - ಇಚ್ಛಿತ ನಾನಾ ಭೋಗಗಳುಳ್ಳವನೂ ಆಗಿರುವನು. ಆದರೆ ಸಂಸಾರಿ ಜೀವನಂತೆ ವಿಧಿ ನಿಷೇಧಗಳಿಂದ ಬದ್ಧನಲ್ಲ. ಮಾಡು-ಬಿಡು ಎಂಬ ನಿಯಮಗಳು ಮುಕ್ತನಿಗೆ ಅನ್ವಯಿಸುವುದಿಲ್ಲ-ನಿಯಮಗಳ ಉಲ್ಲಂಘನೆಯು ಭೌತಿಕದೇಹ ಪ್ರಾಪ್ತಿಗೆ ಕಾರಣವಾಗುವುದಿಲ್ಲ-ದುಃಖಕ್ಕೂ ಕಾರಣವಾಗುವುದಿಲ್ಲ. ಮುಕ್ತನು ಸ್ವೇಚ್ಛಾ ವಿಹಾರಿಯು-ಈ ಅರ್ಥದಲ್ಲಿ ಮಾತ್ರ ಸ್ವತಂತ್ರನೆಂದರೂ ಎನ್ನಬಹುದು. ಮುಕ್ತನ ಇಚ್ಛೆಯು ಸರ್ವದಾ ಈಶ್ವರೇಚ್ಛೆಗೆ ಅನುಸಾರವಾಗಿಯೇ ಇರುವುದು-ಸ್ವಯೋಗ್ಯತೆಯನ್ನು ಎಂದೂ ಅತಿಕ್ರಮಿಸುವುದಿಲ್ಲ. ಈಶ್ವರೇಚ್ಛೆಯು ಎಂದೂ ವ್ಯರ್ಥವಾಗತಕ್ಕದ್ದಲ್ಲ-

ಸ್ವತಂತ್ರನಾದ್ದರಿಂದ. ಈ ಕಾರಣದಿಂದಲೇ ಮುಕ್ತನೂ ಸತ್ಯಸಂಕಲ್ಪನು – ಈಶಾಧೀನನು.

ಈಶೇಚ್ಛಾನುಗುಣವಾದ ಇಚ್ಛೆಯುಳ್ಳವರಾಗುವುದೇ ನಮಗೆ ಒಂದು ಪ್ರಕಾರದ ಸ್ವಾತಂತ್ರ್ಯವೆನ್ನಬಹುದು. ನಮ್ಮ ಬಯಕೆ-ಆಶೆ-ಸಂಕಲ್ಪಗಳನ್ನು ಈಶಾಧೀನಗೊಳಿಸುವ ಯತ್ನದಲ್ಲಿ ತೊಡಗಿದಾಗಲೆಲ್ಲಾ, ನಮ್ಮ ತಪ್ಪು-ಕೊರತೆ-ದುರ್ಬಲತೆಗಳನ್ನು ಬಹುಮಟ್ಟಿಗೆ ನಮ್ಮ ಹತೋಟಿಯಲ್ಲಿಟ್ಟುಕೊಳ್ಳುವ ಸಾಮರ್ಥ್ಯವನ್ನು ಪಡೆಯುತ್ತೇವೆಂಬುದನ್ನು ಸ್ವಾನುಭವದಿಂದ ತಿಳಿಯ-ಬಹುದು. ಹೀಗೆ ಈಶಾಧೀನ ಭಾವನೆಯುಂಟಾದಾಗ ನಮ್ಮ ಕರ್ತವ್ಯಗಳ ಮಾರ್ಗವು ಸ್ಪಷ್ಟವಾಗಿ ತೋರುತ್ತದೆ-ಸ್ವಚ್ಛವಾಗುತ್ತದೆ. ಆಗ ನಾವು ಹೇಗೆ ವರ್ತಿಸಿದರೂ ಯಾವ ಕಳವಳ, ಚಿಂತೆ, ವ್ಯಾಕುಲಗಳೂ ಉಂಟಾಗುವುದಿಲ್ಲ-ಆಶಾಭಂಗಕ್ಕೆ ಅವಕಾಶವೇ ಇರುವುದಿಲ್ಲ. ಎಲ್ಲವೂ ಈಶ್ವರ ಕೃತವೆಂಬ ಭಾವನೆಯಿರಲು, ನಮ್ಮನ್ನು ನಿಂದಿಸುವ, ಟೀಕಿಸುವ, ವ್ಯಥೆಗೊಳಿಸುವ ಎಲ್ಲರೂ, ನಮಗೆ ಪಾಠಕಲಿಸುವ ಈಶ್ವರ ಪ್ರತಿನಿಧಿಗಳೆಂದೇ ತೋರುತ್ತಾರೆ. ಅವರ ವಿಷಯಕ್ಕೆ ನಮ್ಮಲ್ಲಿರುವ ಎಲ್ಲ ವಿರೋಧ ಭಾವನೆಗಳೂ, ಕೋಪಾದಿಗಳೂ ಮಾಯವಾಗುತ್ತವೆ. ನಾವು ಈಶ್ವರನ ಕೈಯೊಳಗಿನ ಉಪಕರಣ ಮಾತ್ರರೆಂಬ ಭಾವನೆಯನ್ನು ಹೊಂದಿದರೆ, ಆಗ ಒಂದು ಪ್ರಕಾರದ, ನೂತನವೂ ವಿಶಾಲವೂ ಆದ, ಸ್ವಾತಂತ್ರ್ಯದ ಅನುಭವವಾಗುತ್ತದೆ. ಸ್ವತಂತ್ರನಾದ ಈಶ್ವರನೇ ನಮ್ಮ ದ್ವಾರಾ ಸರ್ವವನ್ನೂ ಮಾಡುವನೆಂಬ ಅನುಸಂಧಾನವಿದ್ದರೆ, ಈ ಸ್ವಾತಂತ್ರ್ಯಾನುಭವವು ಅನುಪಪನ್ನವಲ್ಲ-ಅಯಥಾರ್ಥವೂ ಅಲ್ಲ. ನಮ್ಮ ಕೈಲಿರುವ ಲೇಖಣಿ ಮೊದಲಾದ ಉಪಕರಣಗಳಂತೆ, ನಾವು (ಜೀವ ಸ್ವರೂಪಗಳು) ಪರಮಾತ್ಮನ ಕೈಲಿರುವ ಸಾಧನ ಸಾಮಗ್ರಿ ಮಾತ್ರರೆಂಬ ಭಾವನೆಯಿಂದ, ಈಶ್ವರಾಧೀನರಾದರೆ, ಅದನ್ನೇ ನಿಜವಾದ ಸ್ವಾತಂತ್ರ-ವೆನ್ನಬಹುದು. ಆಗ, ಲಾಭಾಲಾಭ-ಜಯಾಪಜಯ-ಸುಖದುಃಖಗಳೆಂಬ ದ್ವಂದ್ವಗಳಿಂದ ಮುಕ್ತರಾಗುತ್ತೇವೆ. ಯತ್ನ ವಿಫಲತೆಯಿಂದ ಉಂಟಾಗುವ ವ್ಯಾಕುಲ, ಚಿತ್ತ ಚಾಂಚಲ್ಯ, ನೈರಾಶ್ಯಗಳು ನಮ್ಮನ್ನು ಸ್ಪರ್ಶಿಸವು-ನಿರ್ಭಯ ಪ್ರವೃತ್ತಿಯುಳ್ಳವರಾಗುತ್ತೇವೆ. ಮುಕ್ತಿಯಲ್ಲಿ ಈ ಲಕ್ಷಣಗಳು ಸ್ವಾಭಾವಿಕವೂ,

ನಿತ್ಯವೂ, ಪರಿಪೂರ್ಣವೂ ಆಗಿರುತ್ತವೆ. ಇದಲ್ಲವೇ ಸ್ವಾತಂತ್ರ್ಯವು! ಈ ಮಾರ್ಗವನ್ನು ಬಿಟ್ಟು, 'ಈಶ್ವರೋಽಹಂ-ಬಲವಾನ್-ಸುಖೀ-ಕೋಽನ್ಯೋಽಸ್ತಿ ಸದೃಶೋ ಮಯಾ' ಇತ್ಯಾದಿ ಭಾವನೆಗಳುಳ್ಳವರಾಗಿ, ಎಲ್ಲಕ್ಕೂ ನಾವೇ ಸ್ವತಂತ್ರರೆಂದು ತಿಳಿದರೆ, ಪ್ರತಿಕ್ಷಣದಲ್ಲಿ; ಕೋಪ, ತಾಪ, ಭಂಗ (frustration) ಗಳಿಗೆ ತುತ್ತಾಗಿ ದುಃಖಿಸಬೇಕಾಗುವುದಿಲ್ಲವೇ?

ಯದ್ಯಪಿ, ಸಂಸಾರಿ ಜೀವರಿಗೆ, ಈ ಪ್ರಕಾರವಾದ ಈಶಾಧೀನ ಭಾವನೆಯನ್ನು ಪಡೆಯುವುದೂ, ತಾವೇ ತಮ್ಮನ್ನು ಪರಮಾತ್ಮನಲ್ಲಿ ಅರ್ಪಿಸಿಕೊಳ್ಳುವುದೂ, ಕಷ್ಟ ಸಾಧ್ಯವೇ. ಆದರೂ ಅದೇ ಗುರಿಯು-ಅದಕ್ಕಾಗಿ ಸತತವಾದ ಯತ್ನವನ್ನು ಮಾಡಲೇಬೇಕು. ಹೀಗೆ ಯತ್ನ ಮಾಡುವಾಗ ಸ್ವೇಚ್ಛೆಯಿಂದಲೇ (ನಮ್ಮ ಇಚ್ಛೆಯಿಂದಲೇ) ಯತ್ನ ಮಾಡುತ್ತಿರುವೆವೆಂಬ ಸ್ವತಂತ್ರಕರ್ತನೆಂಬ ಭಾವನೆಯು (egoism) ತಲೆ ಎತ್ತುತ್ತಲೇ ಇರುತ್ತದೆ. ಇದು ಸತ್ಯವಲ್ಲ; ಏಕೆಂದರೆ, ಪರಮಾತ್ಮನ ಇಚ್ಛೆಯಿಂದಲೇ ನಮ್ಮ ಇಚ್ಛೆಯು ಉದ್ಭವಿಸಿ, ಯತ್ನವನ್ನೂ ಆತನೇ ಮಾಡಿಸುತ್ತಿರುತ್ತಾನೆ. ಒಂದು ದೃಷ್ಟಿಯಿಂದ ಈ ಅಯಥಾರ್ಥಭಾವನೆಯೂ ನಮ್ಮ ಶ್ರೇಯಸ್ಸಾಧಕವೆಂದೇ ಹೇಳಬೇಕು. ಅದಿಲ್ಲದಿದ್ದರೆ, ಸರ್ವಸಮರ್ಪಣ ರೂಪದ ಅನನ್ಯ ಶರಣಾಗತಿಯನ್ನು ಸಾಧಿಸುವುದರಲ್ಲಿ ಉತ್ಸಾಹರಹಿತರಾಗಿ ಪರಮಾತ್ಮನಿಂದ ವಿಮುಖರಾಗುವ ಪ್ರಸಂಗವೇ ಬಂದೀತು. ಅದು ಹೇಗೆ ಇರಲಿ-ಈ ತಪ್ಪು ಭಾವನೆಯನ್ನು ಕ್ರಮೇಣ (ಅಭ್ಯಾಸ ಬಲದಿಂದ) ತೊಡೆದು ಹಾಕಬೇಕು. ಈ ಅಭ್ಯಾಸದ ಮಾರ್ಗಾನುಸರಣೆಯಲ್ಲಿ, ಈಶ್ವರೇಚ್ಛಾನುಸಾರವಲ್ಲದ ನಮ್ಮ ಇಚ್ಛೆ ಮತ್ತು ಪ್ರಯತ್ನಗಳು ವ್ಯರ್ಥವೆಂಬ ಪಾಠವನ್ನೂ ಕಲಿಯಬಹುದು. ನಾವು ತಿಳಿಯಲಿ-ಬಿಡಲಿ ಅಥವಾ ಒಪ್ಪಲಿ-ಒಪ್ಪದಿರಲಿ, ಸರ್ವ ಜೀವರು ಈಶ್ವರನ ಕೈಗೊಂಬೆಗಳೆಂಬುದು ಮಾತ್ರ ಸತ್ಯ-ನಿತ್ಯ. **ಈ ಸತ್ಯದ ಅರಿವು ದೃಢವೂ ನಿರಂತರವೂ ಆಯಿತೆಂದರೆ, ಮುಗಿಯಿತು ನಮ್ಮ ಸಾಧನೆ.** ಅಪಾರ ಮಹಿಮನಾದ ಈಶ್ವರನ ಕೈವಾಡವನ್ನು ಸರ್ವತ್ರ ಕಂಡು, ಆಗ ಆತನನ್ನೇ ಅನನ್ಯ ಭಾವದಿಂದ ಶರಣುಹೊಂದುತ್ತೇವೆ. ನಮ್ಮ ಭಕ್ತಿಯು ಪಕ್ವವಾಗಿ ಆತನ ಪರಮಪ್ರಸಾದಕ್ಕೆ ಪಾತ್ರರಾಗುವೆವು. ಆತನ ಕೃಪಾದೃಷ್ಟಿಯು ಬೀಳುವ

ಮಾತ್ರದಿಂದ, ಅಪ್ರಾಕೃತನಾದ ಆ ಜ್ಞಾನಾನಂದ ಮೂರ್ತಿಯ ಸಾಕ್ಷಾತ್ಕಾರ-ವಾಗುವುದು. ಆ ಕಾಲದಲ್ಲಿ ಪ್ರಾರಂಭವಾಗಿರುವ ಕರ್ಮದ ಫಲವನ್ನು ಮಾತ್ರ (ಪ್ರಾರಬ್ಧ ಕರ್ಮ) ಭೋಗಿಸಿ, ಅಂತಿಮ ಭೌತಿಕ ದೇಹವನ್ನು ಬಿಟ್ಟು ಹೊರಟು ನಿತ್ಯಸ್ಥಿತಿಯನ್ನು ಹೊಂದುತ್ತೇವೆ-ತಿರುಗಿ ಎಂದೂ ಬಾರೆವು, ಈ ದುಃಖ=ಮಯ ದೇಹಕ್ಕೆ. ಇದೇ ಮನುಷ್ಯತ್ವವನ್ನು ತೊರೆದು ದೇವತ್ವವನ್ನು ಹೊಂದುವುದೆಂಬುದರ ಭಾವ.

ಪೂರ್ವೋಕ್ತವಾದ ಸರಣಿಯಿಂದ ನಿಷ್ಪನ್ನವಾಗುವ ಮಾನವ ಗುರಿಯ ಸಾಧನ ಮಾರ್ಗವನ್ನು ಸಂಗ್ರಹವಾಗಿ ಹೀಗೆ ನಿರೂಪಿಸಬಹುದು :— ಈಶ್ವರನ ಲೋಕ ವಿಲಕ್ಷಣಗಳಾದ ಅದ್ಭುತ ಮಹಿಮೆಗಳನ್ನು ಪ್ರತಿಪಾದಿಸುವ ಸಚ್ಛಾಸ್ತ್ರ-ಗಳನ್ನು ಶ್ರವಣಮಾಡಬೇಕು-ಗುರುಗಳಿಂದ ತಿಳಿದು ಅಭ್ಯಾಸ ಮಾಡಬೇಕು; ಈಶ್ವರನ ಪೂರ್ಣತ್ವ-ಸರ್ವೋತ್ತಮತ್ವಗಳ ವಿಷಯದಲ್ಲಿ ಉಂಟಾಗುವ ಸಕಲ ಸಂಶಯಗಳ-ವಿರೋಧಗಳ ಪರಿಹಾರವನ್ನು **ವಿಮರ್ಶಾತ್ಮಕ ಮನನದಿಂದ ದೊರಕಿಸಿಕೊಳ್ಳಬೇಕು; ನಿಶ್ಚಯ ಜ್ಞಾನದಿಂದಲೇ ಸಾಧ್ಯವಾದ ನಿಶ್ಚಂಚಲ ಮನಸ್ಸಿನಿಂದ ಈಶ್ವರ ಧ್ಯಾನದಲ್ಲಿ ತೊಡಗಬೇಕು.** ಧ್ಯಾನದ ಸಿದ್ಧಿಯೇ ಸಮಾಧಿಯು-ಎಂದರೆ ಬಾಹ್ಯ ಜಗತ್ತಿನ ಪರಿವೆಯಿಲ್ಲದೆ, ತನ್ನ ಹೃದಯ ಸ್ಥಿತನಾದ ಈಶ್ವರನಲ್ಲಿಯೇ ಮನಸ್ಸು ಸ್ಥಿರವಾಗಿ ನಿಲ್ಲುವಿಕೆ. ಅಭ್ಯಾಸ ಬಲದಿಂದ ಅಪ್ರಯತ್ನವಾಗಿ, ಮನಸ್ಸು ಧ್ಯಾನಮಗ್ನವಾಗಿ ಈಶ್ವರನಲ್ಲಿ ನಿಂತು, ಆತನನ್ನೇ ವಿಷಯೀಕರಿಸುತ್ತಿರಲು, ಧ್ಯಾನಯೋಗದಿಂದ ಪ್ರಸನ್ನನಾದ ಈಶ್ವರನು ತನ್ನ ಸಚ್ಚಿದಾನಂದಾತ್ಮಕವಾದ ದಿವ್ಯರೂಪವನ್ನು ಸಂದರ್ಶಿಸುವನು. ಹೀಗೆ ದರ್ಶನ ಪಡೆಯುವುದನ್ನು, ಬ್ರಹ್ಮದರ್ಶನ - ಈಶ್ವರ ಸಾಕ್ಷಾತ್ಕಾರ - ಅಪರೋಕ್ಷ - ಬ್ರಹ್ಮಾಪರೋಕ್ಷ - ದಿವ್ಯದರ್ಶನ - ಬ್ರಹ್ಮಜ್ಞಾನ - ಆತ್ಮಜ್ಞಾನ, ಇತ್ಯಾದಿ ನಾಮಗಳಿಂದ ಕರೆಯುವರು. ಸಾರಾಂಶ : **ಶ್ರವಣ-ಮನನ-ಧ್ಯಾನಗಳೇ ಬ್ರಹ್ಮಸಾಕ್ಷಾತ್ಕಾರಕ್ಕೆ ಮುಖ್ಯ ಸಾಧನಗಳು. ಈ ಮೂರು ಹಂತಗಳಲ್ಲಿಯೂ ಭಕ್ತಿಯು ಇರಬೇಕು-ಇರುತ್ತದೆ.** ಪರಮಾತ್ಮನ ಮಹಿಮೆಗಳನ್ನು ತಿಳಿಯುವುದೇ ಶ್ರವಣವು. ಅದರಿಂದ ಪರಮಾತ್ಮನಲ್ಲಿ ಸ್ನೇಹದ ಉದಯವಾಗುತ್ತದೆ. ಬಹು ಶಾಸ್ತ್ರಗಳ ಶ್ರವಣದಿಂದ, ಹಾಗೂ ಬಹುವಾರ ಶ್ರವಣದಿಂದ, ಆ ಸ್ನೇಹವು

ಅಭಿವೃದ್ಧಿ ಹೊಂದುತ್ತದೆ. ಮನನದಿಂದ ಮಹಿಮಾ ಜ್ಞಾನವು ದೃಢವಾಗುತ್ತ ಸಾಗಿದಂತೆ, ಸ್ನೇಹವೂ ದೃಢಗೊಳ್ಳುತ್ತದೆ. ಧ್ಯಾನದಲ್ಲಿ ಈ ದೃಢಭಕ್ತಿಯು ಉತ್ಕಟಾವಸ್ಥೆಯನ್ನು ಹೊಂದಿ ಆನಂದಪ್ರದವಾಗುತ್ತದೆ. ಈ ಭಕ್ತಿಯಿಂದ ಪ್ರಸನ್ನನಾದ ಈಶ್ವರನು ತನ್ನ ದರ್ಶನ ಭಾಗ್ಯವನ್ನು ಕರುಣಿಸುತ್ತಾನೆ- ದಿವ್ಯ ದರ್ಶನದಿಂದ ಭಕ್ತನು ಅಲೌಕಿಕವಾದ ಆನಂದವನ್ನು ಅನುಭವಿಸುತ್ತಾನೆ. ನಂತರ, ಈ ಹಿಂದೆ ನಿರೂಪಿಸಿದಂತೆ, ಪ್ರಾರಬ್ಧಕರ್ಮ ಭೋಗವು ಮುಗಿದೊಡನೆಯೇ, ನಿತ್ಯಾನಂದಸ್ಥಿತಿ ರೂಪವಾದ ಸ್ವಸ್ವರೂಪದ ಆವಿರ್ಭಾವವನ್ನು ಹೊಂದಿ ಮುಕ್ತನೆನಿಸುತ್ತಾನೆ.

ಈವರೆಗೆ ತತ್ವವಾದಿಗಳ ವಾದಸರಣಿಯನ್ನು ಸಂಕ್ಷೇಪವಾಗಿ ನಿರೂಪಿಸ-ಲಾಯಿತು. ವಾಚಕರು ಇದರಿಂದ, ಅದು ಯುಕ್ತಿಯುಕ್ತವೆಂಬುದನ್ನು ಮನಗಾಣಬಹುದೆಂದು ನಂಬಲಾಗಿದೆ. **ಕೇವಲ ಯುಕ್ತಿಗಳಿಂದ ಸಿದ್ಧಾಂತಿಸಲು ಅಶಕ್ಯವೆಂಬುದನ್ನು ತತ್ವವಾದಿಗಳೂ ಒಪ್ಪುವರು.** ಆದರೂ ಆಗಮಾನುಸಾರಿ-ಗಳಾದ (ವಿರೋಧಿಸಿದ) ತರ್ಕಗಳಿಂದ ಮೂಲಭೂತ ಪ್ರಮೇಗಳನ್ನು ಸಾಧಿಸಬಹುದೆನ್ನುವರು. ಈ ಪರಿಚ್ಛೇದದಲ್ಲಿ ಇದನ್ನೇ ದಿಗ್ದರ್ಶನರೂಪದಿಂದ ಯತ್ನಿಸಲಾಗಿದೆ. ಪ್ರಥಮ ಪರಿಚ್ಛೇದದ ಆರಂಭದಲ್ಲಿ ನಿರೂಪಿಸಲಾದ ಆಸ್ತಿಕ್ಯದ ಮುಖ್ಯ ಲಕ್ಷಣಗಳ ಸಂಬಂಧವಾದ ಇತರ ಅನೇಕ ವಿಧ ಸಂಶಯಗಳ ಪರಿಹಾರವು ಅವಶ್ಯಕವೆನಿಸಬಹುದು. ಈ ಗ್ರಂಥಮಾಲೆಯ ಮುಂದಿನ ಸಂಪುಟಗಳಲ್ಲಿ ಯೋಗ್ಯ ಪರಿಹಾರವನ್ನು ವಾಚಕರು ಹೊಂದುವವರೆಂಬ ಭರವಸೆ ಇದೆ. ಆದರೆ, ವಿಜ್ಞಾನ ಶಾಸ್ತ್ರವಾಗಲಿ, ಪ್ರತ್ಯಕ್ಷ ಮತ್ತು ಅನುಮಾನ ಪ್ರಮಾಣಗಳಾಗಲಿ, ನಾಸ್ತಿಕ್ಯವನ್ನು ಸಾಧಿಸಲಾರವು-ಜೀವ, ಅದೃಷ್ಟ ಈಶ್ವರಾದಿ ಇಂದ್ರಿಯಾತೀತ ವಸ್ತುಗಳ ಅಭಾವವನ್ನು ಸ್ಥಾಪಿಸಲು ಅಸಮರ್ಥಗಳಾಗಿವೆ, ಎಂಬ ಪ್ರಧಾನಾಂಶವನ್ನು ವಾಚಕರು, ಈ ಸಂಪುಟ(ರತ್ನ-೧)ದಿಂದ, ಮನಗಂಡರೆ, ಗ್ರಂಥಕರ್ತನ ಶ್ರಮವು ಸಫಲವೇ ಸರಿ.

ನಮ್ಮ ಈ ಭರತಖಂಡವು ಅನಾದಿಕಾಲದಿಂದ ಅಧ್ಯಾತ್ಮ ವಿದ್ಯೆಯ ನೆಲವೀಡೆನಿಸಿದೆ. ಈ ವಿದ್ಯೆಯ (ತತ್ವಜ್ಞಾನದ) ಪರಿರಕ್ಷಣೆಗಾಗಿಯೇ ಇಲ್ಲಿ

ಅನೇಕ ಭಗವದವತಾರಗಳಾಗಿವೆ. ಕಾಲಕಾಲಕ್ಕೆ ಮಹಾಮಹಿಮರಾದ ದೇವತೆ-ಗಳು ಮತ್ತು ಋಷಿಗಳು ಭಗವದಾಜ್ಞಾನುಸಾರ ಅವತರಿಸಿ ಅಜ್ಞಾನಾಂಧ-ಕಾರವನ್ನು ಪರಿಹರಿಸಿ ಸುಜ್ಞಾನವನ್ನು ಸ್ಥಾಪಿಸಿದ್ದಾರೆ. ಭಗವದನುಗ್ರಹಕ್ಕೆ ವಿಶೇಷ ಪಾತ್ರವೆನಿಸಿದ ಈ ಭೂಭಾಗದಲ್ಲಿ ಜನಿಸಿದ ಪ್ರಜೆಗಳು, ಅವರಿಂದ ಉಪದಿಷ್ಟವಾದ ಸಿದ್ಧಾಂತಗಳನ್ನು ಗ್ರಹಿಸಿ, ಅಪಾರ ಜ್ಞಾನಭಂಡಾರಗಳಾದ, ಅನಾದಿ ನಿತ್ಯಗಳಾದ ವೇದಗಳ ಅರ್ಥನಿರ್ಣಯಗಳನ್ನು ಪ್ರತಿಪಾದಿಸುವ ಬ್ರಹ್ಮ ಮೀಮಾಂಸಾದಿ (ವೇದಾಂತ ಸೂತ್ರಗಳೇ ಮೊದಲಾದ) ಶಾಸ್ತ್ರ ಗ್ರಂಥಗಳನ್ನು , ಆದರಪೂರ್ವಕ ಯೋಗ್ಯ ಗುರುಗಳ ದ್ವಾರಾ, ಅಧ್ಯಯನಾದಿಗಳಿಂದ ಸೇವಿಸಿ, ಆತ್ಮೋದ್ಧಾರಕ್ಕಾಗಿಯೂ, ಲೋಕಹಿತಕ್ಕಾಗಿಯೂ ದುಡಿಯಬೇಕಾದುದು, ಅವರ ಪ್ರಧಾನ ಕರ್ತವ್ಯವಾಗಿದೆ. ಪ್ರಾಚೀನ ಮಹಾತ್ಮರು ತಮ್ಮ ಜೀವಿತವನ್ನೇ ಮೀಸಲಾಗಿಟ್ಟು, ಸಾಮಾನ್ಯರಿಂದ ದುಸ್ಸಾಧ್ಯವಾದ ತೀವ್ರ ವೈರಾಗ್ಯ , ತಪಸ್ಸು, ಶಾಸ್ತ್ರಾಧ್ಯಯನಾದಿ ಸಾಧನೆಗಳಿಂದ ಸಂಪಾದಿಸಿ, ಪ್ರತಿಷ್ಠಿಸಿ, ಪ್ರಚಾರಗೊಳಿಸಿದ ಶ್ರೇಷ್ಠ ತತ್ವಜ್ಞಾನವು ಮಲಿನಗೊಂಡು ನಿರುಪಯುಕ್ತವಾಗದಂತೆ, ಪರಿರಕ್ಷಣೆ ಮಾಡುವ ದೊಡ್ಡ ಜವಾಬ್ದಾರಿಯೂ ಭಾರತೀಯ ಪ್ರಜೆಗಳ ಮೇಲಿದೆ. ಇದನ್ನು ನಿರ್ವಹಿಸಲು ತರುಣರು ಮುಂದೆ ಬರಬೇಕು-ಅವರೇ ಸಮರ್ಥರು. ಭಾವೀ ಪ್ರಜೆಗಳಲ್ಲಿ ಜ್ಞಾನ ಸಂತತಿಯ ವಿಚ್ಛೇದವಾಗದಂತೆ, ಸರ್ವಪ್ರಯತ್ನವನ್ನೂ ಕೈಗೊಂಡು ಕಾರ್ಯ ಸಾಧಕರಾಗಬೇಕು. ಈಶ್ವರಾನುಗ್ರಹದಿಂದ ಭಾರತೀಯ ತರುಣರಲ್ಲಿ ಈ ವಿವೇಕದ ಉದಯವಾಗುವುದು ನಿಶ್ಚಯ. ಆದರೆ, ಎಂದು? ಕಾಲವು ಮಿಂಚಿ ಹೋಗದಂತೆ, ಶೀಘ್ರದಲ್ಲಿಯೇ ಆಗಲೆಂಬುದು ಗ್ರಂಥಕರ್ತನ ಆಶೆ-ಅದನ್ನು ನಡೆಸಿಕೊಡೆಂದು ಜಗದೊಡೆಯನಲ್ಲಿ ಪ್ರಾರ್ಥನೆ.

॥ ಓಂ ತತ್ಸತ್ ॥

# Annexure

## (ರತ್ನ 1 ರ ಪರಿಶಿಷ್ಟ)

**ಹಿನ್ನಲೆ :** ಪ್ರತ್ಯಕ್ಷಕ್ಕೆ ಗೋಚರವಾಗುತ್ತಿರುವ ವಿಜ್ಞಾನ ಕ್ಷೇತ್ರದ ಬೆಳವಣಿಗೆಯು ಇಂದಿನ ಯುವಕ-ಯುವತಿಯರನ್ನು ಲೌಕಿಕ ಮಾರ್ಗದಲ್ಲಿ ಆತುರದಿಂದ ಕರೆದೊಯ್ಯುತ್ತಿದೆ. ಎಲ್ಲ ವರ್ಗದವರ ಕೈಯಲ್ಲಿ ಇಂದು ನೂತನ ಆವಿಷ್ಕಾರದ ಮೊಬೈಲ್‌ಗಳು, ಟ್ಯಾಬಲೆಟ್‌ಗಳು, ಲ್ಯಾಪ್‌ಟಾಪ್‌ಗಳು ಸೇರಿ, ಅವರುಗಳ ದೃಷ್ಟಿಯೂ ವಿಜ್ಞಾನ ಕ್ಷೇತ್ರಕ್ಕೆ ಹೊಂದಿಕೊಂಡು, ತತ್ವಜ್ಞಾನ ಕ್ಷೇತ್ರದ ಕಡೆ ಅವರು ಗಮನ ಹರಿಸುವುದಿಲ್ಲ. ಮನುಷ್ಯರ ಸಹಜ ಪ್ರವೃತ್ತಿಯು ಸುಖಾಪೇಕ್ಷೆಯಾಗಿರುತ್ತೆ. ವಿಜ್ಞಾನದ ಸಲಕರಣೆಯಿಂದ ಸುಖ ದೊರಕುತ್ತದೆ ಎಂದು ತಿಳಿದಿರುತ್ತಾರೆ. ಆದರೆ ಅದು ತಾತ್ಕಾಲಿಕವೆಂಬ ಅರಿವು ಸಹಜವಾಗಿ ಅವರಿಗೆ ಉಂಟಾಗುವುದಿಲ್ಲ.

ಈ ಯುವ ವರ್ಗದವರಿಗೆ ಪೂರ್ವಕಾಲದಿಂದಲೂ ಬಂದಿರುವ ಆಚರಣೆ ಇತ್ಯಾದಿಗಳಲ್ಲಿ ನಿರುತ್ಸಾಹವಿರುತ್ತದೆ. ಈ ಆಚರಣೆಗೆ ಸಂಬಂಧಿಸಿದ ತತ್ವಜ್ಞಾನವು ಕಲ್ಪಿತವೆಂದು ಕೆಲವು ಯುವಕರು ಟೀಕಿಸುತ್ತಾರೆ. ಅವರುಗಳಲ್ಲಿ ಕೆಲವರು ಅದನ್ನು ನಿಂದಿಸುತ್ತಾರೆ. ಭಾರತೀಯ ಉತ್ಕೃಷ್ಟ ಪರಂಪರೆಗೆ ನೂತನ ಆವಿಷ್ಕಾರದ ಸಲಕರಣೆಗಳು ಸೆಡ್ಡು ಹೊಡೆಯುತ್ತಿದೆ. ಮುನ್ನುಡಿ ನೀಡಿರುವ ಹಿರಿಯ ವಿದ್ವಾಂಸರಾದ ಡಾ।। ಪ್ರಭಂಜನಾಚಾರ್ಯರು ಈ ನಿಟ್ಟಿನಲ್ಲಿ ವಿಶ್ಲೇಷಣೆ ಮಾಡಿದ್ದಾರೆ.

ತತ್ವಜ್ಞಾನ ಕ್ಷೇತ್ರ ಮತ್ತು ವಿಜ್ಞಾನ ಕ್ಷೇತ್ರ ಇವೆರಡು ಪರಸ್ಪರ ಬೇರೆ ಬೇರೆಯಾಗಿವೆ. ವ್ಯಕ್ತಿಗತ ಅಂತಃಕರಣದ ಭಾವನೆಗಳು ಸುಖ, ದುಃಖ - ಇವುಗಳು ಹುಟ್ಟುವ ಪ್ರಕ್ರಿಯೆಗಳು ಪ್ರತ್ಯಕ್ಷಕ್ಕೆ ಗೋಚರವಾಗದಿರುವ ವಿಷಯಗಳು. ಇವು ವಿಜ್ಞಾನ ಕ್ಷೇತ್ರದ ಪರಿವಿಡಿಯಲ್ಲಿ ಬರುವುದಿಲ್ಲ. ವ್ಯಕ್ತಿಯ ನೈತಿಕ ಬೆಳವಣಿಗೆ ಎಂಬುದು ಪ್ರತ್ಯೇಕ ಮಾರ್ಗದಲ್ಲಿದೆ. ವಿಜ್ಞಾನವಾದಿಗಳು ಮತ್ತು ವಿಚಾರವಂತರು ಈ ವಿಷಯಗಳನ್ನು ಗೋಷ್ಠಿಗಳಲ್ಲಿ ಚಿಂತನೆ ಮಾಡಿದ್ದಾರೆ. ಪ್ರತ್ಯೇಕವಾಗಿಯೂ ಪ್ರಖ್ಯಾತ ವಿಜ್ಞಾನಿಗಳು ಚರ್ಚಿಸಿದ್ದಾರೆ. ಚರ್ಚೆಯ ಸಾರಾಂಶವನ್ನು Science Magazines ಗಳಲ್ಲಿ ಮತ್ತು ಇನ್ನಿತರ ಮಾಧ್ಯಮಗಳಲ್ಲಿ ಪ್ರಕಟಿಸಿದ್ದಾರೆ. ಆ ರೀತಿ ಬರಹಗಳಲ್ಲಿರುವ ಮುಖ್ಯಾಂಶ-ಗಳನ್ನು ಸಂಗ್ರಹಿಸಿ ವಾಚಕರ ಮುಂದಿಡುತ್ತಿದ್ದೇವೆ. ವಿಜ್ಞಾನಿಗಳ ಅಭಿಪ್ರಾಯಗಳು ಏಕಪ್ರಕಾರವಾಗಿ ಇರುವುದನ್ನು ಗಮನಿಸಬಹುದು.

ವೇದ, ಪುರಾಣ, ಇತಿಹಾಸ ಗ್ರಂಥಗಳಲ್ಲಿ ಸಹಸ್ರಾರು ವರ್ಷಗಳ ಪೂರ್ವದಲ್ಲಿ ತಿಳಿಸಲ್ಪಟ್ಟಿರುವ ವಿಶೇಷ ಅಂಶಗಳನ್ನು ಇತ್ತೀಚಿನ ಕಾಲದಲ್ಲಿ ವಿಜ್ಞಾನಿಗಳಿಂದ ಅದೇ ಅಂಶಗಳನ್ನು ನೂತನವೆಂದು ಕಂಡು ಹಿಡಿದಿರುವುದನ್ನು ತತ್ವವಾದಿಗಳು ಅಲ್ಲಲ್ಲಿ ತಿಳಿಸಿರುವುದು ಗಮನಾರ್ಹವಾಗಿದೆ. ಡಾ।। ಪ್ರಭಂಜನಾಚಾರ್ಯರು ಈ ಬಗ್ಗೆ ದೀರ್ಘವಾದ ಪಟ್ಟಿ ಕೊಟ್ಟಿದ್ದಾರೆ.

ತತ್ವವಾದಿಗಳು ಮತ್ತು ವಿಜ್ಞಾನ ಕ್ಷೇತ್ರದಲ್ಲಿ ಪರಿಣಿತರು - ಇವರುಗಳ ಹೇಳಿಕೆಗಳ ಎಲ್ಲ ವಿವರಗಳನ್ನು ನೀಡಿದರೆ ಈ ಬರಹವು ದೀರ್ಘವಾಗುತ್ತದೆ ಎಂಬ ಕಾರಣದಿಂದ ತಿಳಿಸುತ್ತಿಲ್ಲ. ಸ್ಥೂಲವಾಗಿ ಮುಂದೆ ವಿಷಯಗಳನ್ನು ನಿರೂಪಿಸಲಾಗಿದೆ. ಆಂಗ್ಲಭಾಷೆ-ಯಲ್ಲಿರುವ ವಾಕ್ಯಗಳನ್ನು ಕನ್ನಡದಲ್ಲಿ ಅನುವಾದ ಮಾಡಿರುವುದಿಲ್ಲ.

**1. ವಿದ್ವಾಂಸರುಗಳು ಮತ್ತು ವಿಜ್ಞಾನವಾದಿಗಳ ಆಯ್ದ ಹೇಳಿಕೆಗಳು :** ವೈಜ್ಞಾನಿಕ ಪ್ರಗತಿಯಿಂದಾಗಿ ಅಧ್ಯಾತ್ಮದಲ್ಲಿ ಒಲವು ಕಳೆದು ಕೊಳ್ಳುತ್ತಿರುವ ಒಂದು ವಿಶಿಷ್ಟವರ್ಗ ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಿ ಕಾಣಸಿಗುತ್ತದೆ. ದೇವರು, ಧರ್ಮ ಮೊದಲಾದ ಅತೀಂದ್ರಿಯ ವಸ್ತುಗಳನ್ನೆಲ್ಲ ಕೇವಲ ಕಲ್ಪನೆಗಳೆಂದು ಏಕಮುಖವಾಗಿ ನಿಶ್ಚಯಿಸುತ್ತಾರೆ. ಆದರೆ ವಿಜ್ಞಾನವು ಪರಿಪೂರ್ಣವಲ್ಲ. ಅದಕ್ಕೆ ನಿಲುಕದ ವಸ್ತುಗಳ ಸಂಖ್ಯೆ ಅಪಾರ - ಎಂಬ ಹಿರಿಯ ವಿಜ್ಞಾನಿಗಳ ಘೋಷಣೆಗಳು ಇಂಥವರ ಕಿವಿಗೆ ಬೀಳುವುದೇ ಇಲ್ಲ.

'ಕೇವಲ ತರ್ಕವು' ಒಂದು ವಸ್ತುವನ್ನು ಸಿದ್ಧಪಡಿಸಲು ಅಸಮರ್ಥ-ವಾಗುವಂತೆ, ಅದನ್ನು ಅಲ್ಲಗಳೆಯುವುದಕ್ಕೂ ಅಸಮರ್ಥವೇ ಆಗಿದೆ. ಗಗನದ ವೈಶಾಲ್ಯವನ್ನು ಕೇವಲ ಯುಕ್ತಿಯು ಎಂದೂ ಅಳೆಯಲಾರದು. ಹುಟ್ಟು ಕುರುಡನಿಗೆ ಬೆಳಕಿನ ಅನುಭವವನ್ನು ಸಹಸ್ರಗಟ್ಟಲೆ ಯುಕ್ತಿಗಳು ಸಹ ಎಂದೂ ತಂದುಕೊಡಲಾರವು. ಇಂತಹ ಅಂಶಗಳನ್ನು ಮೇಲೆ ತಿಳಿಸಿರುವ ವರ್ಗದವರು ಗಮನಿಸುವುದೇ ಇಲ್ಲ.

ವಿಜ್ಞಾನದ ಬೆಳವಣಿಗೆಯು ತತ್ವಜ್ಞಾನದ ಬಗ್ಗೆ ಅಪನಂಬಿಕೆ ಹುಟ್ಟಿಸುತ್ತಿದೆ ಮತ್ತು ಅವೆರಡೂ ಪರಸ್ಪರ ವಿರುದ್ಧಗಳೆಂದು ಭಾವಿಸುತ್ತಿದ್ದಾರೆ. ತತ್ವಜ್ಞಾನವು ಕಲ್ಪಿತ, ವಿಜ್ಞಾನವು 'ಯಥಾರ್ಥ'ವೆನ್ನುವ ಭಾವನೆ ಮೂಡುತ್ತಿದೆ. ಆದರೆ ವಿಜ್ಞಾನ ಮತ್ತು ತತ್ವಜ್ಞಾನ ಕ್ಷೇತ್ರಗಳು ಬೇರೆ ಬೇರೆಯಾಗಿವೆ. ಹಾಗಿದ್ದರೂ ನಿಜವಾದ ವಿಜ್ಞಾನ ಸಂಶೋಧನೆಯು ತತ್ವಜ್ಞಾನದಲ್ಲಿಯೇ ಪರ್ಯವಸಾನವಾಗುವುದು. **(ಕೃಪೆ :** 'ವ್ಯಾಸ-ಮಧ್ವ' ಮಾಸಪತ್ರಿಕೆ)

**2. ವಿಜ್ಞಾನದ ವಿಷಯಗಳು :** ಸ್ಥೂಲವಾಗಿ ಭೂಗೋಳ, ಖಗೋಳಕ್ಕೆ ಸಂಬಂಧಿಸಿರುವ ವಿಷಯಗಳು ಮತ್ತು ಈ ಶರೀರಕ್ಕೆ ಸಂಬಂಧಿಸಿದ ರಕ್ತಚಲನೆ ಇತ್ಯಾದಿ ಭೌತಿಕ ಪ್ರಪಂಚ. ಇವುಗಳಲ್ಲಿರುವ ಶಕ್ತಿ , ಇವುಗಳ ಸ್ವರೂಪಗಳು ವಿವಿಧ ರೀತಿಯ ಆಹಾರಗಳ ಸೇವನೆಯಿಂದ ಶರೀರದಲ್ಲಿ ಆಗುವ ಪರಿಣಾಮಗಳು ಇತ್ಯಾದಿ ಇತ್ಯಾದಿ.

**ತತ್ವಜ್ಞಾನದ ವಿಷಯಗಳು :-** ಚೇತನಗಳು ಶರೀರವನ್ನು ಹೊಂದುವ ಕ್ರಮಗಳು, ಚೇತನರ ಸ್ವಭಾವ, ಸುಖದುಃಖ, ಕರ್ಮ ಮೃತ್ಯುವಿನ ನಂತರದ ಜೀವನ ಸ್ಥಿತಿ, ಗತಿ, ಸಾಧನ, ಧರ್ಮ, ಭಗವಂತನ ಪ್ರಾಪ್ತಿ, ಅಂತಃಕರಣದ ಪರಿಣಾಮಗಳಿಂದ ಉಂಟಾಗುವ ಭಕ್ತಿಯ ವಿಶೇಷ ಇತ್ಯಾದಿ ಇತ್ಯಾದಿ.

ವಿಶ್ವನಿಯಾಮಕನಾಗಿರುವ ಮಹಾಚೈತನ್ಯ , ದೇಹನಿಯಾಮಕರಾಗಿರುವ ತತ್ವಾಭಿಮಾನಿ ದೇವತೆಗಳು ಹಾಗೂ ಜೀವ ಚೈತನ್ಯ. ಅವರ ಸ್ವರೂಪ ಇತ್ಯಾದಿ ಅನೇಕ

ಅಂಶಗಳ ಯಥಾರ್ಥ ವಿಚಾರಗಳನ್ನು ಅಲ್ಲಗಳೆಯುವ ಶಕ್ತಿಯು ವಿಜ್ಞಾನ ಪ್ರಪಂಚಕ್ಕಿಲ್ಲ. ವಿಜ್ಞಾನದ ಸಂಶೋಧನೆಗಳೆಲ್ಲವೂ ಇಂದ್ರಿಯ ಗಮ್ಯವಾದವುಗಳು. ಆದರೆ ತತ್ವಜ್ಞಾನದಿಂದ ಬರುವ ಜ್ಞಾನವು ಇಂದ್ರಿಯ ಗಮ್ಯವಾದದ್ದನ್ನು ಮತ್ತು ಇಂದ್ರಿಯ ಅಗಮ್ಯವಾದುದನ್ನು (ಅತೀಂದ್ರಿಯವಾದ) ಅನುಭವಕ್ಕೆ ತಂದು-ಕೊಡುತ್ತದೆ. ಮನಸ್ಸಿನ ಪ್ರವೃತ್ತಿಗಳಿಗೆ, ಭಾವುಕ ಭಕ್ತಿಗೆ, ದಾರ್ಶನಿಕವಾದ ವೈಚಾರಿಕ ಹಿನ್ನಲೆಯನ್ನು ಒದಗಿಸುವುದೇ ತತ್ವಜ್ಞಾನ. ಈ ವಿಶ್ವದ ವಿಕಾಸದಲ್ಲಿ ಪ್ರಕೃತಿ, ಕಾಲ, ಸ್ವಭಾವ, ಕರ್ಮ ಮುಂತಾದವುಗಳ ಪಾತ್ರವಿದೆ - ಎಂದು ಶ್ರೀಮದಾಚಾರ್ಯರು ವಿವರವಾಗಿ ನಿರೂಪಿಸಿದ್ದಾರೆ. ಈ ಜಗತ್ತು ಬಹು ವಿಚಿತ್ರವಾದದ್ದು ಮತ್ತು ಅತ್ಯಂತ ಕರಾರು ವಾಕ್ ಎಂದೆನಿಸಿರುವ ನಿರ್ದಿಷ್ಟ ನಿಯಮಗಳನ್ನು ಅನುಸರಿಸುತ್ತಿದೆ - ಎಂದು ಎಲ್ಲ ವಿಜ್ಞಾನಿಗಳೂ ಸಹ ಅಂಗೀಕರಿಸಿದ್ದಾರೆ. ಒಂದು ಪರಮಾಣುವಿನ ಅದ್ಭುತ ಶಕ್ತಿಯನ್ನು ಗಮನಿಸಿ ವಿಜ್ಞಾನ ಬೆರಗಾಗುತ್ತದೆ. ಇಂತಹ ಶಕ್ತಿಯ ಹಿನ್ನಲೆಯ ರಹಸ್ಯವನ್ನು ತತ್ವಜ್ಞಾನವು ಅರಿವು ಮಾಡಿಕೊಡುತ್ತದೆ. ಜೊತೆಯಾಗಿ ಇವುಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡು ನಿರ್ವಿಕಾರನಾಗಿರುವ ಭಗವಂತನ ಮಹಾತ್ಮೆಯನ್ನೂ ತತ್ವಜ್ಞಾನವು ತಿಳಿಸಿಕೊಡುತ್ತದೆ.

ವಿಜ್ಞಾನದ ಸಂಶೋಧನೆಗಳು - ಆವಿಷ್ಕಾರಗಳು ಭೌತಿಕ ಪ್ರಪಂಚದ ವ್ಯಾಪ್ತಿಯಲ್ಲಿದ್ದು ಇಂದ್ರಿಯ ಜನ್ಯ-ತಾತ್ಕಾಲಿಕ ಸುಖವನ್ನು ಅನುಭವಕ್ಕೆ ತಂದು ಕೊಡುತ್ತವೆ.

ತತ್ವಜ್ಞಾನದ ದೃಷ್ಟಿಯು ಅನ್ಯ ರೀತಿಯಲ್ಲಿದೆ. ಅಂದರೆ ಆ ಜ್ಞಾನವು ನಮ್ಮೊಳಗಿರುವ ಆಂತರಿಕ ಪ್ರಜ್ಞೆಯನ್ನು ಅಭಿವೃದ್ಧಿಪಡಿಸಿ ಶಾಶ್ವತ ಸುಖ ನೀಡುವಂತಹ ಮಾರ್ಗದ ಕಡೆಗೆ ಕರೆದೊಯ್ಯುತ್ತದೆ. (**ಕೃಪೆ** : 'ತತ್ವವಾದ' ಮಾಸಪತ್ರಿಕೆ - ಮೇ 2017)

**3.** ವಿಜ್ಞಾನ ನೀಡುವ ಯಂತ್ರಗಳ ಸಿದ್ಧಿ ಸೀಮಿತ (limited), ತಾತ್ಕಾಲಿಕ (temporary) ಮತ್ತು ಅಪರಿಪೂರ್ಣ (incomplete). ಇದಲ್ಲದಯೇ ಹಲವು ವಿಜ್ಞಾನ ಸಂಶೋಧನೆಗಳು ನೀತಿರಹಿತರಿಂದ ದುರ್ಬಳಕೆಯಾಗಿ ಮಾರಕಾಸ್ತ್ರವಾಗಿ ಪರಿಣಮಿಸಿದೆ. ಅಪಾಯದ ಭಯವಿದೆ. ತತ್ವಜ್ಞಾನವು ನೀಡುವ ಮಂತ್ರಸಿದ್ಧಿ ಹಾಗಿರುವುದಿಲ್ಲ. ಅದು ಶಾಶ್ವತ ಮತ್ತು ಕಾರಕ. ಆದ್ದರಿಂದಲೇ ತತ್ವಜ್ಞಾನದ ಸಿದ್ಧಿ, ವಿಜ್ಞಾನದಿಂದ ಉಂಟಾಗುವ ಫಲವನ್ನು ಮೀರಿರುತ್ತದೆ. (ಆಧ್ಯಾತ್ಮ ವಿದ್ಯೆಯು ವಿಜ್ಞಾನದ ವಲಯದಲ್ಲಿ metaphysics). ಅನೇಕ ವಿಜ್ಞಾನಿಗಳು ತಿಳಿಸಿರುವ ಒಂದು ಅಂಶ - 'Philosophy starts where Science ends'.

**4.** ಈ ಜಗತ್ತು ಬಹು ವಿಚಿತ್ರವಾದುದು. ಇದರ ರಹಸ್ಯಗಳ ಸಂಶೋಧನೆ-ಯನ್ನಷ್ಟೇ ವಿಜ್ಞಾನಿಗಳು ನಡೆಸುತ್ತಿದ್ದಾರೆ. ಒಂದು ಪರಮಾಣುವಿನ ಅದ್ಭುತ ಶಕ್ತಿಯನ್ನು

ನೋಡಿಯೇ ವಿಜ್ಞಾನವು ಬೆರಗಾಗುತ್ತದೆ. ನಮ್ಮ ಈ ಶರೀರದ ಒಂದೊಂದು ಅವಯವಗಳಿಗೆ ಉಂಟಾಗುವ ತೊಂದರೆ / ವ್ಯಾಧಿಗಳಿಗೆ ಪರೀಕ್ಷೆ / ಪರಿಹಾರ ಸೂಚಿಸುವ ಪ್ರತ್ಯೇಕವಾಗಿರುವ, ಡಾಕ್ಟರ್ / ಸ್ಪೆಶಲಿಸ್ಟ್ ಇದ್ದಾರೆ. ಆಯಾಯ ಅಂಗಾಂಗಳ ಒಳಭಾಗದಲ್ಲಿ ಉಂಟಾಗಿರುವ ವ್ಯತ್ಯಾಸವನ್ನು ರೋಗಿಗೆ ಆ 'ಸ್ಪೆಶಲಿಸ್ಟ್' ತಿಳಿಸಬಹುದು. ಅರ್ಥಾತ್ ಅಂಗಾಂಗಳ ರಹಸ್ಯವನ್ನು ಒಂದು ಹಂತದವರಿಗೆ ತಿಳಿಸಬಹುದು. ಹೀಗಿದ್ದ ಮೇಲೆ ಆ ರಹಸ್ಯಗಳನ್ನು ಅಲ್ಲಿ ಸೃಷ್ಟಿ ಮಾಡಿ, ಆರೋಗ್ಯದ ದೆಶೆಯಲ್ಲಿ ಆ ಅಂಗಾಂಗಳು ವ್ಯಕ್ತಿಯ ಹಿಡಿತದಲ್ಲಿರುವ ಹಾಗೆ ಏರ್ಪಡಿಸಿರುವ ದೇವರು ಎಂತಹ ಮಹಾತ್ಮನಾಗಿದ್ದಾನೆ!

ಹೃದಯ ಭಾಗದಲ್ಲಿ ರಕ್ತನಾಳಗಳಲ್ಲಿ ರಕ್ತ ಸರಿಯಾಗಿ ಸಂಚಾರವಾಗದೆಯೇ ಬೇರೊಂದು ರಕ್ತನಾಳವನ್ನು ಜೋಡಿಸಿ ಆ ಭಾಗದಲ್ಲಿ ಆಪರೇಷನ್ ಮಾಡುವ ಕ್ರಮ (By-pass surgery) ಈಗ ಸಾಧಾರಣ ವಿಷಯವೆಂದೆನಿಸಿದೆ. ಹೃದಯ ಭಾಗದ ರಕ್ತನಾಳ ಇರುವ ರೀತಿಯಲ್ಲಿಯೇ ಅವರವರ ಕಾಲಿನಲ್ಲಿ ಇನ್ನೊಂದು ರಕ್ತನಾಳವನ್ನು (ಸ್ಪೆಪ್ನಿ) ದೇವರು ಎಲ್ಲರ ಶರೀರದಲ್ಲಿ ಇಟ್ಟಿದ್ದಾನೆ! ಆ ರಕ್ತನಾಳವನ್ನು ಕಾಲಿನಿಂದ ಬೇರ್ಪಡಿಸಿ, ಹೃದಯಭಾಗದಲ್ಲಿ ಜೋಡಿಸಿ ಅಲ್ಲಿ ಸೂಕ್ತ ರಕ್ತಚಾಲನೆಯಾಗುವ ಹಾಗೆ ಡಾಕ್ಟರ್ ಮಾಡುತ್ತಾರೆ. ಈ ರೀತಿಯಾಗಿ Extra (ಅಧಿಕವಾದ) ರಕ್ತನಾಳವನ್ನು ನಮ್ಮ ಶರೀರದಲ್ಲಿಟ್ಟಿರುವ ಭಗವಂತ ಎಂಥಾ ದಯಾಮಯಿ!

ಹಾಗೆಯೇ ನಮ್ಮ ಒಂದೊಂದು ಇಂದ್ರಿಯಗಳ working Pattern (ಕಾರ್ಯದ ರೀತಿ) ಅದ್ಭುತವಾಗಿದೆ. ಒಂದೊಂದು ಕಣ್ಣಿನಲ್ಲಿಯೂ ಅಸಂಖ್ಯ ನರಮಂಡಲಗಳಿವೆ. ನೋಡುವ ವಸ್ತುವು ಅನೇಕ ಬಣ್ಣಗಳುಳ್ಳದ್ದಾಗಿದ್ದರೆ, ಬೇರೆ ಬೇರೆ ಬಣ್ಣಗಳನ್ನು Identify (ಗುರುತಿಸಿ) ಮಾಡುವುದಕ್ಕೆ ಬೇರೆ ಬೇರೆ ನರಮಂಡಲಗಳು ಕೆಲಸ ಮಾಡುತ್ತವೆ!

ನಾವು ತಿನ್ನುವ ಪದಾರ್ಥಗಳು / ವ್ಯಂಜನಗಳು ಒಂದೇ ದ್ವಾರದಲ್ಲಿ ಉದರ ಸೇರಿದರೂ, ನಂತರದ ಕಾರ್ಯಚಟುವಟಿಕೆಯಿಂದ ಶಿರದಿಂದ ಪಾದದವರೆವಿಗೂ ಎಲ್ಲ ಅಂಗಾಂಗಳಿಗೆ ಶಕ್ತಿ-ಸಾಮರ್ಥ್ಯವನ್ನುಂಟು ಮಾಡುತ್ತವೆ. ಹೀಗೆ ಶರೀರದ ಭಾಗಗಳಲ್ಲಿ ಎಂಥಹ ರಹಸ್ಯವಾಗಿ ಚಟುವಟಿಕೆಗಳನ್ನು ಪ್ರತಿಕ್ಷಣದಲ್ಲಿ ಏರ್ಪಡಿಸಿರುವ ಭಗವಂತನ ಕಾರುಣ್ಯವೆಷ್ಟಿದೆ!

ಗರ್ಭಧಾರಣೆಯ ನಂತರ, ಗರ್ಭಕೋಶದಲ್ಲಿ ಮಗುವಿನ ಶರೀರದ ಬೆಳವಣಿಗೆಯನ್ನು ಭಾಗವತದಲ್ಲಿ ವಿವರವಾಗಿ ನಿರೂಪಿಸಲಾಗಿದೆ. ಈ ಬೆಳವಣಿಗೆಯ ಬಗೆಗೆ ತಾಯಿಯು ಏನನ್ನೂ arrange (ಏರ್ಪಾಡು) ಮಾಡುವುದಿಲ್ಲ. ಆಕೆಗೆ ಆ ಗರ್ಭಸ್ಥ ಶಿಶುವಿನ ಬೆಳವಣಿಗೆ ಕ್ರಮದಲ್ಲಿ ಯಾವ ಅನುಭವವುಂಟಾಗುವುದಿಲ್ಲ. ಆ ವಿಷಯ ಒಂದು ಆಶ್ಚರ್ಯವಾದರೆ, ಇನ್ನೊಂದು ಆಶ್ಚರ್ಯವೇನೆಂದರೆ ತಾಯಿಯು

ತಿನ್ನುವ ಖಾರದ/ಹುಳಿಯ ಪದಾರ್ಥಗಳು ಆ ಶಿಶುವಿನ ದೇಹದಲ್ಲಿ ಬದಲಾವಣೆ ಉಂಟಾಗದಂತೆ ಗರ್ಭಕೋಶದ ವ್ಯವಸ್ಥೆಯಿದೆ-ಎಂದರೆ ಎಷ್ಟೊಂದು ರಹಸ್ಯಗಳು ನಮ್ಮ ಶರೀರದಲ್ಲಿ ಹುದುಗಿದೆ – ಎನ್ನುವುದು ಅತ್ಯಾಶ್ಚರ್ಯ ಸಂಗತಿಯಾಗಿದೆ. ಹೀಗೆ ವಿಶ್ವದ ಹುಟ್ಟು ಮೊದಲಾದ ಎಲ್ಲ ಚಟುವಟಿಕೆಗಳನ್ನು ನಿಯಂತ್ರಿಸುವವನು ಶ್ರೀ ಹರಿಯೇ ಆಗಿದ್ದಾನೆ.

ಎಲ್ಲ ವ್ಯಕ್ತಿಗಳಲ್ಲಿರುವ ರಕ್ತ ವರ್ಗವು ಒಂದೇ ವರ್ಗದಲ್ಲಿಲ್ಲ ಎಂಬ ವಿಷಯವು ಎಲ್ಲರಿಗೂ ತಿಳಿದಿರುವುದಾಗಿದೆ. ನಾವು ತೆಗೆದುಕೊಳ್ಳುವ ಆಹಾರ ಒಬ್ಬರ ಶರೀರದಲ್ಲಿ "B ಗುಂಪಿನ (Group)" ರಕ್ತಕ್ಕೆ ಪೋಷಕವಾದರೆ, ಮತ್ತೊಬ್ಬರ ಶರೀರದಲ್ಲಿ ಅದೇ ಆಹಾರ – ಇನ್ನೊಂದು ಗ್ರೂಪ್ (A ವರ್ಗ ಅಥವ O ವರ್ಗ ಇತ್ಯಾದಿ) ರಕ್ತಕ್ಕೆ ಪೋಷಕವಾಗುತ್ತದೆ. ಶರೀರದಲ್ಲಿರುವ ವ್ಯವಸ್ಥೆಯು ಒಂದೇ ರೀತಿಯಾಗಿರುವ ಆಹಾರವನ್ನು ಬೇರೆ ಬೇರೆ ಗ್ರೂಪ್ ಸೇರಿರುವ ರಕ್ತಕ್ಕೆ ಪೋಷಕವಾಗುವಂತೆ ಏರ್ಪಟ್ಟಿದೆ. ಅವರವರ ಜೀವನ ಪೂರ್ತಿ ಈ ಅದ್ಭುತ ವ್ಯವಸ್ಥೆ ಶರೀರದಲ್ಲಿ ಬದಲಾವಣೆಯಾಗದೆಯೇ ಮುಂದುವರೆದಿರುತ್ತದೆ. ವಿಜ್ಞಾನವು ವಿಷಯವನ್ನು ತಿಳಿಸಿಕೊಡುತ್ತದೆ. ಆದರೆ ಏಕೆ, ಹೇಗೆ ಎನ್ನುವ ಪ್ರಶ್ನೆಗಳಿಗೆ ವಿಜ್ಞಾನಿಗಳಿಂದ ಸೂಕ್ತ ಉತ್ತರ ದೊರಕುತ್ತಿಲ್ಲ.

**5.** ಹಿಂದಿನ ಒಂದೆರಡು ದಶಕಗಳಲ್ಲಿ ನಡೆದ ಸಂಶೋಧನೆಯಿಂದ ತಿಳಿಸಲ್ಪಟ್ಟ ವಿಷಯ : ಎಲ್ಲ ವ್ಯಕ್ತಿಗಳ ಮೈ ಬಣ್ಣ, ಕಪ್ಪಾಗಿರುವ ಅಥವಾ ಕಂದು ಬಣ್ಣದ ಕಣ್ಣಿನ ಗುಡ್ಡೆಗಳುಳ್ಳ ಮುಖ, ತಲೆಯಲ್ಲಿರುವ ಕೂದಲು ಗುಂಗುರು ರೀತಿಯಲ್ಲಿರುವ ಮತ್ತು ವಯಸ್ಸು 50–60ರಲ್ಲಿ ಆರೋಗ್ಯ ಸ್ಥಿತಿಯಲ್ಲಿ ಉಂಟಾಗುವ ಬದಲಾವಣೆಗಳು (ಕ್ಯಾನ್ಸರ್ ನಂತಹ ವ್ಯಾಧಿಗಳು) – ಇವುಗಳವಿವರಗಳನ್ನು ಅಡಗಿಸಿಕೊಂಡಿರುವ ಡಿ.ಎನ್.ಎ. (DNA) ಜನನ ಕಾಲದಲ್ಲಿಯೇ ವ್ಯಕ್ತಿಯ ಶರೀರದಲ್ಲಿ ಸೇರಿರುವುದಾಗಿದೆ. ಅಂದರೆ ಡಿ.ಎನ್.ಎ.ಗಳು ನಮ್ಮ ನಮ್ಮ ವಂಶವಾಹಿ ತಂತುಗಳೆಂದು ಗುರುತಿಸಲ್ಪಟ್ಟಿವೆ. ವ್ಯಕ್ತಿಯ ಸ್ಥಿತಿ–ಗತಿಗಳನ್ನು ನಿರ್ಧರಿಸುವ ಆ ಡಿ.ಎನ್.ಎ.ಗಳಲ್ಲಿ ಅತ್ಯಂತ ಸೂಕ್ಷ್ಮ-ಕಣಗಳಲ್ಲಿ 30 ಲಕ್ಷಕ್ಕೂ ಅಧಿಕವಾಗಿರುವ ನ್ಯೂಕ್ಲಿಯೈ ಆ್ಯಸಿಡ್‌ಗಳು ಒಂದಕ್ಕೊಂದು ಹೊಂದಿಕೊಂಡಿರುತ್ತವೆ. ನಂತರ ಮುಂದಿನ ವರ್ಷಗಳಲ್ಲಿ ಆ ಶರೀರದ ಇಂದ್ರಿಯಗಳಲ್ಲಿ ಆ ಗುಣಗಳು ವ್ಯಾಪ್ತಿಯಾಗುತ್ತವೆ. ಈ ಡಿ.ಎನ್.ಎ.ಗಳು ಇಂಥಹ ವಿವರಗಳನ್ನು ಹೇಗೆ ಅಡಗಿಸಿ ಇಟ್ಟುಕೊಂಡಿವೆ – ಎಂಬುದು ಇನ್ನೂ ರಹಸ್ಯವಾಗಿಯೇ ಉಳಿದಿದೆ.

ವಿಶ್ವ ಕಾಣಿಸಿಕೊಂಡಿರುವುದರ ಬಗೆಗೆ – ಶತಮಾನಗಳಿಂದ ಜಿಜ್ಞಾಸೆ ನಡೆಯುತ್ತಾ ಬಂದಿದೆ. ಇತ್ತೀಚೆಗೆ ವಿಜ್ಞಾನಿಗಳ ತಂಡವೊಂದು – ''ತೇಲುತ್ತಿರುವ ವಿಶ್ವಗಳಿವೆ'' (ಐಲೆಂಡ್ ಯೂನಿವರ್ಸ್) – ಗೆಲಾಕ್ಸಿ ಎಂದರೆ ಕೋಟಿಗಟ್ಟಲೆ ನಕ್ಷತ್ರಗಳ ದೊಡ್ಡ ಸಮೂಹಗಳಿವೆ ಮತ್ತು ಗೆಲಾಕ್ಸಿಗಳ ಗುಚ್ಛವೇ (cluster) ಇದೆ ಎಂದು ಸಮರ್ಥಿಸಿದ್ದಾರೆ. ಸಹಸ್ರಾರು ಗೆಲಾಕ್ಸಿಗಳ ಸೂಪರ್ ಕ್ಲಸ್ಟರ್‌ಗಳೂ ಇವೆ – ಎಂದಿದ್ದಾರೆ.

ಹಾಗೆಯೇ ಆ ವಿಜ್ಞಾನಿಗಳು ವಿಶೇಷವಾದ ಸೂಕ್ಷ್ಮ ವೈಜ್ಞಾನಿಕ ಸಾಧನಗಳಿಂದ ಮತ್ತು ವಿಶೇಷ ಉಪಗ್ರಹಗಳು ಅಂತರಿಕ್ಷದಲ್ಲಿ ತೆಗೆದು ಕಳುಹಿಸಿರುವ ಚಿತ್ರ (Photo) ಗಳಿಂದ ತಿಳಿಯಬಹುದಾದ ವಿಷಯವೇನೆಂದರೆ ನಮಗೆ ಬೇರೇನೋ ವಸ್ತುವಿನ ಅಧೀನದಲ್ಲಿ ಈ ಗೆಲಾಕ್ಸಿಗಳ ಸೂಪರ್ ಕ್ಲಸ್ಟರ್‌ಗಳು ನಿಯಂತ್ರಣವಾಗುತ್ತಿವೆ'' ಎಂದಿದ್ದಾರೆ. ಅದನ್ನು ಅದೃಶ್ಯವಸ್ತುವೆಂದು ಕರೆದರು. ಒಂದು ಹೆಜ್ಜೆ ಮುಂದುವರೆದು ಅವರುಗಳು ಒಂದು ಅವ್ಯಕ್ತ ಶಕ್ತಿ ಎಂಬುದು ಇದೆ ಎಂದು ಅಂಗೀಕರಿಸಲೇ ಬೇಕಾಗುತ್ತದೆ ಎಂದಿದ್ದಾರೆ. (**ಕೃಪೆ** : ತರಂಗ ಏಪ್ರಿಲ್ 2019)

**6.** ಇತ್ತೀಚಿನ ಅಮೇರಿಕ ದೇಶದ ಪ್ರಸಿದ್ಧ ವಾರ್ತಾಪತ್ರಿಕೆಯಾದ **'New-York Times'** ನಲ್ಲಿ ಪ್ರಕಟಿತ ಹಲವು ಅಂಶಗಳು 'Deccan Herald' ತಾ|| 4-5-2019ರ 'Science' ಅಂಕಣದಲ್ಲಿ ಮರುಪ್ರಕಟವಾಗಿದೆ):

Scientists and Philosophers had gathered for a debate on "fresh insights" (that means latest discoveries) into working of nature. Arguments and discussions lead to the point - 'Science itself is inadequate - it cannot provide all the answers that we seek - Research can never solve certain mysteries of the universe and the human mind' (This was the subject matter in the above said convention.) A common theme is that although Science works, it can never hope to reveal the nature - "as it really is". Rather we can only know the world as it appears from "Our perspective". Science can never produce a "GODS EYE VIEW" of the world. One of the philosophers emphasized that scientists accept that there are limitations in this behalf. Scientists say - we must admit that there exists some mysteries, which science may never be able to solve.

(ಸಾರಾಂಶ : ಅತ್ಯದ್ಭುತ ಜಗತ್ತಿನ ವಸ್ತುಸ್ಥಿತಿಯನ್ನು ವಿಜ್ಞಾನ ವಾದಿಗಳು ಅವರವರ ದೃಷ್ಟಿಕೋನಗಳಿಂದ ಮತ್ತು ತಮ್ಮ ಇತಿ-ಮಿತಿಗಳೊಂದಿಗೆ ತಿಳಿಸಬಹುದು. ಹಲವು ಗಹನ ರಹಸ್ಯ ಸಂಗತಿಗಳನ್ನು ವಿಜ್ಞಾನವು ತೆರೆದಿಡಲು ಶಕ್ಯವಾಗಿರುವುದಿಲ್ಲ).

**7. 'ತತ್ವವಾದ'** ಮಾಸಪತ್ರಿಕೆ (ಏಪ್ರಿಲ್, ಮೇ 2019)ರಲ್ಲಿ ಪ್ರಕಟಿಸಿರುವ ಬರಹದ ಸಾರಾಂಶ:

ವಿಜ್ಞಾನ ಮತ್ತು ಆಧ್ಯಾತ್ಮಿಕತೆಗಳು ಪರಸ್ಪರ ವಿರೋಧವಾಗಿದೆ ಎಂಬ ಅಭಿಪ್ರಾಯವು ಬಹುಮಟ್ಟಿಗೆ ಬುದ್ಧಿಹೀನವಾದದ್ದು. ಇವೆರಡೂ ಸದಾ ಕಾಲ ಪರಸ್ಪರ ಸಮಾಗಮದಲ್ಲಿರುತ್ತದೆ.

ಮ್ಯಾಕ್ಸ್‌ಪ್ಲಾಂಕ್ ವಿಜ್ಞಾನಿಯು (ಜರ್ಮನಿ ದೇಶ) ''ಕ್ರಾಂತಿಕಾರಕ-ವೆಂದೆನಿಸಿರುವ ಕ್ವಾಂಟಮ್'' ಸಿದ್ಧಾಂತವನ್ನು ಪ್ರವರ್ತನ ಮಾಡಿದ. ಇದು ಪರಮಾಣು ಮತ್ತು ಉಪ ಪರಮಾಣುವಿನ ಪ್ರಕ್ರಿಯೆಗಳಿಗೆ ಸಂಬಂಧವಾದದ್ದು. ಈ ವಿಜ್ಞಾನಿಯು ಗಮನಾರ್ಹವಾಗಿರುವ ಹೇಳಿಕೆ ನೀಡಿದ್ದಾನೆ – ''ವಿಜ್ಞಾನವು ಪ್ರಕೃತಿಯ ಕಟ್ಟಕಡೆಯ ರಹಸ್ಯವನ್ನು ಬಿಡಿಸಲಾಗುವುದಿಲ್ಲ. ಒಂದು ಭಾಗದ ರಹಸ್ಯವನ್ನು ಮಾತ್ರ ನಾವು ಬಿಡಿಸಲು ಪ್ರಯತ್ನಿಸುತ್ತಿದ್ದೇವೆ. ಆಧ್ಯಾತ್ಮ ಬೋಧಕರು ಮೌನ, ನಿಶ್ಚಲತೆಗಳಿಂದ ಈ ಶ್ರೇಷ್ಠರಹಸ್ಯವನ್ನು ಶೋಧಿಸುವುದಕ್ಕಾಗಿ ತಮ್ಮನ್ನು ತಾವೇ ಇದರಲ್ಲಿ ಮುಳುಗಿಕೊಂಡಿದ್ದರು – ನಂತರ ಸ್ಪಷ್ಟ ನಿರ್ಣಯಕ್ಕೆ ಬಂದರು. ವಿಜ್ಞಾನ ಮತ್ತು ಆಧ್ಯಾತ್ಮಿಕತೆಗಳು ಒಂದಕ್ಕೊಂದು ಹೊಂದಿಕೊಂಡಿರುವಂತಹದ್ದು ಮತ್ತು ಕೇವಲ ವಿಜ್ಞಾನವು ಯಾರಿಗೂ ಪೂರ್ಣ ಮಾಹಿತಿ ನೀಡಲಾರದು''.

ಇನ್ನೊಬ್ಬ ಪ್ರಸಿದ್ಧ ವಿಜ್ಞಾನಿಯಾಗಿದ್ದ ಐನ್‌ಸ್ಟೀನ್ ತನ್ನ ಸಿದ್ಧಾಂತವನ್ನು 1905ರಲ್ಲಿ ಪ್ರಕಟಿಸಿದ. ''ದ್ರವ್ಯರಾಶಿ ಮತ್ತು ಪದಾರ್ಥಗಳ ಕ್ರಿಯೆಯನ್ನು ನಡೆಸಬಲ್ಲ ಶಕ್ತಿ'' – ಇವುಗಳ ಸಮೀಕರಣ ವಿಷಯವೇ ಆ ಸಿದ್ಧಾಂತದ ತಿರುಳು (Equivalance of mass and energy). ಬೆಳಕಿನ ವೇಗ ಪ್ರತಿ ಸೆಕೆಂಡಿಗೆ 1,86,000 ಮೈಲಿಗಳು = E.[$E=Mc^2$]. ರಾಬರ್ಟ್‌ಜಂಕ್ ಎಂಬ ಪರಮಾಣ್ವಕ ವಿಜ್ಞಾನಿಯು ರಚಿಸಿರುವ ಪುಸ್ತಕ : Brighter Than Thousand Suns. ಪರಮಾಣುವಿನಲ್ಲಿ ''ಅಡಕ- ವಾಗಿರುವ'' ಉಜ್ವಲ ಪ್ರಕಾಶ-ಶಕ್ತಿಗಳ ಬಗ್ಗೆ ಚಿಂತನೆಯು ಈ ಪುಸ್ತಕದಲ್ಲಿದೆ.

ಆಧ್ಯಾತ್ಮಿಕ ತತ್ವಗಳನ್ನು ಚಿಂತಿಸುವವರಿಗೆ ಈ 'findings' ಪ್ರಯೋಜನಕ್ಕೆ ಬರುತ್ತದೆ. ಜಡ ಪದಾರ್ಥದ ಅಗಾಧ ಶಕ್ತಿ ಇತರೆ ಮಾಹಿತಿಗಳು – ಭಗವಂತನ ಅಚಿಂತ್ಯ ಸಾಮರ್ಥ್ಯಗಳ ಬಗೆಗೆ ಅವರ ಚಿಂತನೆ ಮುಂದುವರೆಯುತ್ತದೆ.

**8. ತತ್ವವಾದ-ಇಂಗ್ಲೀಷ್** ಮಾಸಪತ್ರಿಕೆ ಆಗಸ್ಟ್ 2010ರಲ್ಲಿ ಪ್ರಕಟಿತ – ಪ್ರೊ॥ ಆರ್.ಆರ್. ಮಂಗಸುಲಿಯವರಿಂದ ಲೇಖನ :

ಅನೇಕ ಪ್ರಸಿದ್ಧ ವಿಜ್ಞಾನವಾದಿಗಳ ನಿರ್ಣಯಾತ್ಮಕವಾದ ಹೇಳಿಕೆಗಳನ್ನು 'Science and Philosophy' ಎಂಬ ಶೀರ್ಷಿಕೆಯ ಅಡಿಯಲ್ಲಿ ಲೇಖಕರು ಸಂಗ್ರಹಿಸಿದ್ದಾರೆ. ಅದರಲ್ಲಿ ಆಯ್ದ ಭಾಗ :

Our sense of reality is one that includes objects of perception around us including this visible universe. "Inference is the argument that depends upon faultless reasoning..." Scientists say - "with the invention of quantum theory, they can find some examples that establish consciousness. (in a

blurred manner)." Still their points in this behalf would be more or less similar to that of a few statements of vedas.

Physics (Branch of science) studies the world around us. Mainly it deals with the objects of matter and is limited to percepts bound by space, time and matter. Our senses can deal with these objects. Newton (16th century) discovered the law of "gravitational force'. Einstein (20th century) invented his classical theory of relativity.

Einstein's considered view : "objects require space and space occupied by the object can be described by length, width and depth. An event is discribed by the factor 'TIME'. Our senses are incapable of finding any extra element even though they are mathematically viable. Science is based on the study of nature and hence its reality is limited to this universe of matter, space and time"

Scientists say that mind is product of matter, but add that the mind and feelings are not deterministic. Mind is a riddle and has remained inexplicable.

Our knowledge of the world starts with measurements, scientists say that no measurement is precise. There exists many phenomena in nature that cannot be perceived or measured. Later Scientists have come out with 'Scientific predictions' touching the subject - QUANTUM MECHANICS'. Activities of electrons, protons etc., are impossible to present to our perceptive faculties directly. How the movement of these tiny particles is regulated? what are the forces that control the stability and behaviour of these particles? These points remain unanswered to the satisfaction of intelligent people. Only predictions are made. Thus "quantum theory" has introduced speculations in science. How and when creation took place? A Scientist cannot refute role of God though he cannot establish Him by any of the known physical laws. There are 'many unknowns' in the way of unification of fields of nature.

The Author of this article refers to the opinions furnished by (1) Einstein (2) Heisenberg, (3) Schrodniger (4) Born (5) Feynman (6) Maxwell - who were great scientists and nobel laureates.

A few points noted in the above paras are collected from writings of above scientists. They have also dealt with (1) Gravitational Force, (2) Electric Force, (3) Electro magnetic Force and (4) Nuclear Force. They have come out with mathematical equations to evaluate these forces. Space provides fields for the various forces. There is no empty space without field. The state of affairs in a tiny space less than (-13) cm (..0.13 zeros 1 cm) has been visualized. (i.e., tiny space of nucleus of atom). Classical Physics stops at this tiny space. "If we want to understand creative process, we have to turn to metaphysics. The said nobel laureate honestly declares : "I do not know a number of things. Physics cannot fulfill the urge for complete knowledge. Scientific knowledge exposes new vistas of nature - however it fails to remove all kinds of ignorance"

Mr. Mangasuli also deals with a few points relating to our Sastra - Vedic concepts : Vedas are valid documents. Ancient Rishis have recorded their experiences and affirmed the transcendental things like God, morality (Dharma) and the worlds beyond our perceptive faculties. Consciousness cannot be proved only by logical arguments (ತರ್ಕ) Mind is the connecting link between sense faculties and the soul. Mind when tranquilized by meditation builds rapport with inner soul and gives vent to pure knowledge that is intuition. The intuitive knowledge may be the one that is earned earlier in previous births or fresh manifestations. This valid knowledge is apprehended by individual Self called SAKSHI.

Mathematical equations may be quoted out of this category. (Physics of 21st century is based on mathematical equations). Intuition should not be confused with speculation. Speculation

may go wrong where as 'Intuitive knowledge' is linked to inner organ of chaitanya (Sakshi). Mere speculation has no place in Philosophy.The truths expressed in vedas are the outcome of intution of Vedic Rishis of high caliber, intelligence and serene mind. They have conquered the sense faculties and mind and are capable of securing knowledge linked to other words. The truths that they have taught are based on their experiences and manifestations of past lives. We, therefore, cannot question the validity of Vedas. They are as valid as direct perception. The indwelling God is present everywhere and is the cause of this universe. Vedic literature describes HIM as Brahman or Atman. His complete description however is beyond the intelligence of any living being including devatas.

ಸೂಚನೆ : ಮೇಲಿನ ವಿಷಯಗಳು/ವಾಕ್ಯಗಳು ದೀರ್ಘವಾಗಿವೆ. ಅವು ಆಯ್ದ ವಾಕ್ಯಗಳಾಗಿವೆ. ಉನ್ನತ ಶ್ರೇಣಿಯ ನೊಬೆಲ್ ಪಾರಿತೋಷಕವನ್ನು ಪಡೆದಿರುವ Scientists ಗಳ ಲೇಖನಗಳಾಗಿವೆ. ಪಾರಿಭಾಷಿಕ ಶಬ್ದಗಳು ಅಧಿಕವಾಗಿರುವುದರಿಂದ ಅವುಗಳ ಅನುವಾದ ಅಥವಾ ಸಾರಾಂಶ ನೀಡಲಾಗುತ್ತಿಲ್ಲ. ಮುಂದಿನ ಪುಟಗಳಲ್ಲಿರುವ ವಿಷಯಗಳು/ವಾಕ್ಯಗಳು ವಿಜ್ಞಾನ ಕ್ಷೇತ್ರದಲ್ಲಿ ಪರಿಣಿತರೆಂದು ಗುರುತಿಸಲ್ಪಟ್ಟ ಅನೇಕ ಪ್ರಸಿದ್ಧ Scientists ಮತ್ತು ತಜ್ಞರಿಂದ ಕಳೆದ 30-35 ವರ್ಷಗಳಲ್ಲಿ ತಿಳಿಸಲ್ಪಟ್ಟಿರುವುದಾಗಿದೆ. ಇಂದಿನ ಯುವ ವರ್ಗದಲ್ಲಿ ಕೆಲವರಿಗೆ "Modern Science ಕ್ಷೇತ್ರವು ನೂತನ ಆವಿಷ್ಕಾರಗಳನ್ನೊಳಗೊಂಡಿದೆ. ಡಾ॥ ಭೀಮರಾವ್ ರವರು 50-60 ವರ್ಷಗಳ ಪೂರ್ವದಲ್ಲಿ ಪ್ರಕಟಿತ ಮಾಹಿತಿಗಳನ್ನು ಆಧರಿಸಿ ಬರೆದಿರುವುದಾಗಿದೆ. ಈ ಕ್ಷೇತ್ರದಲ್ಲಿ 2-3 ದಶಕಗಳಲ್ಲಿ ಬಹಳಷ್ಟು ನೂತನ ವಿಷಯಗಳು ಬೆಳಕಿಗೆ ಬಂದಿದೆ. ಈ ವಿಷಯಗಳು ತತ್ವವಾದಿಗಳಿಗೆ ಆತಂಕಗಳನ್ನು ತಂದೊಡ್ಡಿದೆ," - ಎಂದು ಎತ್ತುವ ಆಕ್ಷೇಪಗಳಿಗೆ ಮುಂದಿನ ಪುಟಗಳಲ್ಲಿರುವ ವಿಷಯಗಳು ಸಮಾಧಾನ ನೀಡುತ್ತವೆ.

ಪ್ರಚಲಿತ ವಿಜ್ಞಾನಿಗಳು ಬರೆದು ಪಾಶ್ಚಿಮಾತ್ಯ ದೇಶದಲ್ಲಿ ಪ್ರಕಟಿಸಿರುವ Science and Philosophy ಸಂಬಂಧಿಸಿದ ಹಲವು ಪುಸ್ತಕಗಳ ಹೆಸರುಗಳನ್ನು ಈ ಕೆಳಗೆ ತಿಳಿಸಲಾಗಿದೆ :

1) Philosophy of Science (2002)
2) Mirror of creation (1990)

3) (a) The Hidden face of God
(b) The Science of God
4) Physics and beyond (1991)
5) Einsteen and God (1999)
6) The Scientific Basis for a Rational world (1992)
7) The conscious mind: In search of a fundamental Theory (1997)
8) Atheism and Theism (2003)
9) The Universe in a Nutshall (2001)
10) Nature's Destiny (1998)
11) A brief History of Time (1988)
12) Is there a God? (1997)
13) Cosmic Beginnings and Human Ends (1994)
14) Great Thinkers on Great Questions
15) God sent and God freshed
16) Cosmos, Bios and Theos (God)
17) The origin and Growth of Religion (1990)
18) Brighter than thousand suns.
19) Mapping the secrets of the Universe and the Origins of life.
20) How the mind works (1985).

ಹೀಗೆ ಅನೇಕ ಪುಸ್ತಕಗಳು 1970ರ ನಂತರ ಪ್ರಕಟವಾಗಿವೆ. ಹಿಂದಿನ ಪುಟಗಳಲ್ಲಿ ಈ ಪುಸ್ತಕಗಳಲ್ಲಿರುವ ಕೆಲವು ಆಯ್ದ ವಾಕ್ಯಗಳನ್ನು ತಿಳಿಸಲಾಗಿದೆ. ಮುಂದಿನ ಪುಟಗಳಲ್ಲಿ ಇನ್ನು ಕೆಲವು ಆಯ್ದ ಪ್ಯಾರಾಗಳನ್ನು ಕೊಡಲಾಗುತ್ತಿದೆ. ಇವೆಲ್ಲವೂ 'modern science'ಗೆ ಸಂಬಂಧಿಸಿದ ಪುಸ್ತಕಗಳಿಂದ ಸಂಗ್ರಹಿಸಲಾಗಿದೆ. ಎಣಿಕೆಗೆ ಸಿಗಲಾರದಷ್ಟು ಅದ್ಭುತ ಅಂಶಗಳು ಪ್ರಪಂಚದಲ್ಲಿದೆ. ''ಅಗೋಚರ ಶಕ್ತಿ''ಯೊಂದು ಕ್ರಮಬದ್ಧವಾಗಿ ನಿಯಮನ ಮಾಡುತ್ತಿರುವುದು ಅತ್ಯಂತ ಸತ್ಯವಾಗಿದೆ - ಎಂಬ ನಿರ್ಣಯ ಮುಂದಿನ ವಾಕ್ಯಗಳಿಂದ ಗೋಚರವಾಗುತ್ತದೆ.

Selected sentences from a few magazines and books are noted herein below :

**I** - Nature : This is a general word attributed to number of happenings in the world. Scientists say that all events and phenomena have an explanation - in the form of 'cause and effect'. Every effect has a cause. They believe that the world, as revealed by 'modern science' and its operations follow

fundamental mathematical principles and can be categorized under definite laws and theories. These laws of nature are very 'precise' and describe certain regularities in the Universe.

Scientists have been stunned by the one-to-one, coordination between the 'programs' of nature. They believe that the laws of nature are manifestations of a sophisticated mind. The laws of nature are the laws that gave birth to the universe and keep it running. The logical orderly nature of the universe has to be rooted in an unchanging rational ground. The simplest explanation for the order and rationality of the world and its laws is a 'free being' of infinite power and knowledge.

The study of the origin of laws of nature is linked with the origin on universe, energy, space, time, life and mind. A noted philosopher expresses that the foundational frame work of 'modern science' with the key idea of laws of nature was born and bred in the theistic world vision. There exists 'INTELLECTUAL SUPERSTRUCTURE' and this sort of thinking provides a systematic rationale for the foundations of Science. It's starting point and core principle is an 'Equation of God'. Interestingly the great scientists who founded Modern Science - Newton, Maxwell, Einstein and numerous others, were prophets of this theory - that means they passionately proclaimed the root-and-fruit embeddedness of science and religion. Great thinkers believe and affirm existence of Super-natural Force - GOD-an infinite, omnipotent, omniscient, omnipresent and personal being. This 'Infinite Intelligence' is the root cause for the establishment of universe etc. This Entity of Infinite intelligence unifies and empowers all things. This mysterious and fascinating reality can be directly encountered in our experience at all levels.

Great scientists and thinkers have discussed and have made interactive study of the world under the following heads: (1) The laws of nature, (2) Modern cosmological accounts of the origin of Universe, (3) The quantum microcosmos, (4) Space,

time, motion and matter, (5) the origin of life, conciousness and mind and (6) The existence of an 'Infinite Intelligence.'

**II.** One of the items for interactive study among scientist is electron. Framed questions are : why does each electron continue to maintain a specific charge shared with all other electrons and equal to that of 1836 times bigger opposite charged proton? What makes it to emit energy? What tells two electrons to shootout a photon when they run into each other? Above all what enables each electron to enjoy a natural life span of ten billion trillion years?

A common answer is that the world, which included electron and proton etc., simply follow the laws of nature. Great thinkers do not stop at this level. There is need to apply higher level of thought. The thought should tell us how utterly extraordinary it is that the 'Physical Constituents' of this world obey any laws at all ? Why an earth, stones etc., and stars should follow uniform laws of motion? Why does water have, and continue to have, all the properties such as cohesiveness, solvency, law of viscocity etc., that are essential for it to serve as the cradle of life? How do the nucleic acids like DNA and proteins know that they can communicate and construct? What compels organisms to adapt to enviornment? Why should these and all the other particles and forces, galaxies and cells etc., that make up our world follow instructions? Were they 'programmed' to obey orders, march in step? Trillions of quarks and cells, billions of galaxies - all of them doing what they are told to! But by whom and how? Do the laws exist independently?

Let us grant that there exist 'laws of nature'. But how it is possible for a material thing to follow any Law whatsoever? How can an **'Inanimate thing'** be made to do anything? A grain of sand, which has a size of 100 microns for instance, is made up of a million atoms and each atom is about a millionth of a millimeter. **"Each Atom is a universe"** in its own rights with protons and neutrons!

**Conclusion : The existence of the Laws of Nature is the single greatest mystery uncovered by Science. Those scientists who have reflected most fully on the laws of nature, from Newton to Einstein to Hawking - have come to the obvious and inescapable conclusion that the laws of nature were constituted by the 'Infinite Intelligence.'**

**A) Words from Hawking :** (21st Century) : The overwhelming impression is - One of order. The more we discover about the universe, the more we find that it is governed by Rational Laws. What breathes fire into the equations of Science and gives a universe for them to describe? The answer to the question of Why the Universe exists, he said - would reveal to us "the mind of God".

**(B) Words of Einstein :** Anyone seriously engaged in the pursuit of Science becomes convinced that the laws of nature manifest the existence of Spirit vastly superior to that of human persons.

**(C) Words of Richard Swinburne :** God is not invoked to explain the facts explained by Science, but to explain the fact that Science can explain.

**III. A few notable facts :**

1) The observable universe is made up of a staggering 100 to 200 galaxies. These galaxies are themselves made up of 100 to 200 billion stars (average). The billions of galaxies behave in accordance with the laws of cosmology.

2) Nature is a network of intelligent systems.

3) At the very heart of intelligence is the ability to create, process and synthesize informations.

4) Embedded intelligence is entirely in-built and information storage in encoded form.

5) Universe itself with its laws and fields and force - is the ultimate signal of Intelligence. All kinds of intelligence would originate and culminate in an "Infinite intelligence".

6) With a framework of precise symmetries to the exhaustibly resourceful DNA - builds the living world.

a) DNA is the biological language of life. Each cell contains $10^{12}$ bits of information and each cell contains three and a half billon nucleotide bases says Scientist Schroeder - has more information than three complete sets of Encyclopedia Britannica. Every cell in the body, (other than sex and blood cells) makes **two thousand proteins every second** from hundreds of amino acides. Everyone has to agree that this is highly complex process. It is reported in "Scientific American" - A super computer programmed with the rules for protein folding **would take $10^{127}$ years to generate** the final folded form of a protein with just 100 amino acids. (i.e., Billions of years by a super computer). Same process is done in seconds for 'Real Proteins' in our body.

B) The origin of life is closely related to 'Nature'. This nature is not simply a matter of proteins and acids, but of the extraordinary phenomenon of autonomous, intelligent, self replicating agents and one cannot explain in full about the incredibly intelligent symbol- processing system i.e., DNA.

C) Thus we are led to the conclusion that **"life of any kind cannot come from non-life."** It is a mystery how such already complex structures came together. Therefore the possibility of a Creator of God represents a Satisfactory solution to this problem.

**IV.** Extracts from books referred earlier regarding Conciousness and 'I':

A) The Brain has 100 Billion Neurons that use dendrons and axons to send information across one quadrillion synapses. The 100 billion neurons do 100 million mips i.e., millions of instructions per second. Each neuron does **1000 instructions precisely timed pulses per second**.

We are conscious and aware of being conscious. In addition we are clearly conscious that our consciousness is quite different from anything material or physical. We are also quite aware

that our thoughts and feeling of happiness etc., do not have physical properties such as a kind of shape or size. Suppose if we open up brain we cannot see a thought! We may just see neural activity only. But seeking the thought is the 'mode we experience the same'. **Conscious thought has a reality of its own.**

Aspects of human subjective consciousness are deeply mysterious. Foremost scientist says: "We do not know and we do not understand the intercacies of brain functions. We have no idea at all about how the brain converts a mass of electrical and chemical signals into what we are individually familar with as consciousness and thought patterns. The thought comes first and as a result causes certain brain events. There exists continuous interaction between Mind and the Brain - Similar to that of conductor who leads with the orchestra. The radio ceases to function when its batteries runout. If brain dis-order occurs, it affects the functioning of the mind only."

B) The factor 'I' : Every one has unique feeling (experience) of happiness or sorrow and also has thinking ability and /or judging an event. It is the self, the centre of our experiences - which gives the identity of being the same person 'Throughout our Lives,' although the physical components of our bodies change constantly. Every one has feeling of His Existence. It is 'I' who thinks but the thinker cannot be separated from the thought.

Specialists can say that specific brain events causes various mental acts. But in reality - it is "I" who is conscious and "Does" the thinking. The "I" Factor cannot be located in any part of the brain. Nevertheless we cannot seriously deny the existence of the Self- that is "I". Thinking and willing are not physical in nature.

Every one has sufficient experience in saying : It is 'I' who am conscious, it is 'I' who selects properly. The 'self', like it's acts cannot be reduced to the physical entity.

A non-beliver of metaphysics may say that there is no 'I' separate from body and nervous system. This kind of approach is totally untenable, if he looks seriously to understand Science subject. Every person constantly experiences the clear awareness of being an 'I' of being not just conscious, but self-consciousness. We can also put forth before the above said non-believer the findings of neuroligists. For example : physiologically the process of seeing involves the transformation of visual data from electromagnetic vibrations to nerve signals in the brain to perceptions in the mind that are subjective sensations of shape and or colour. This way of processing is really baffling. The said non-beliver must apply his mind seriously at the physiological facts. There exists peculiar relation between eye and then brain and mind and no one can explain this satisfactorily. Eye specialist says : the retina in the eye portion of the body is about one centimeter square and one-half milimeter thick has 100 million neurons. A chain of chemical reactions is triggered off when a retinal cell absorbs light. One needs to examine as to how the retina processes are conducted in a systematic way. (The process is already noted above in this para). The retina is capable of processing ten one-million-point images every second. In order to understand roughly - a "Robot vision" program" has to perform 1000 million computer instructions per second to match the above said retina function. Similarly each organ in our body has unique way of functioning and thus transmits the results to the brain, which in turn makes the person 'I' to think or act.

It will be wrong to uttter that these functions of body organs are 'natural phenomena'. A simple answer will be - "For a robot to deliver results or act - an analyst or a programmer has to come out with unique computer programming and in the same way one has to visualise that there should be a programmer for Retina (eye's inner portion) to perform the

above said processing. In order to deal with such subject, it requires a different angle of vision i.e., "consideration of seeing with conceptual comprehension."

In other words - we can recognize and become aware of God's existence just by perceiving the happenings in our body and also the things around us. This is an act of seeing things - as created with precise programms in our body, as requiring God's existence to explain its existence, as manifesting the Infinite here and now. **"GOD IS NOT ABSTRACT AND REMOTE, BUT HE IS CONCRETE AND IMMEDIATE"**

**V.** Looking things around us, we find mist-laden mountains, water falls and flowers of various colours etc., and we say nature is bursting with activity at every instant. These are the things we see in Nature. (This topic is discussed already). The cells of all living plants and animals are data warehouses. We are only a few steps away from recognizing and manifestation of GOD in and through the intricate order and ceaseless hum of activity underlying all things.

All scientifically literate persons in these days accept that every object in this universe is unique, constantly active and also laden with information. Awareness of this uniqueness, activity etc., in all entities takes such persons to another sphere - where we come to know an immediate and **concrete manifestation of Infinite creativity, intelligence and energy** - and that is to see God here and now.

**VI.** Specific writings of Great scientists :

(Prominent among them are : Max Planck - Father of Quantum Physics; Max Born, Paul A.M. Dirae, Arthur Compton, warner Heisenberg - all Quantum Physicists; Chanes H Townes - Nobel laureate; Lord william Kelvin, J.J. Thompson and others)

1) Einstein thought of God as a centre of consciousness and intelligence.
2) Those who say that the study of Science makes a man an atheist (ನಾಸ್ತಿಕ) must be rather silly.
3) There can never be any real opposition between religion and Science, for one is the complement of the other.
4) Every advance of Science deepens Scientist's feeling that - "great are the works of lord".
5) Most beautiful system of the Sun, Planets and comets clearly establishes the domination of an intelligent and powerful being.
6) Faith begins with a realization that a supreme intelligence brought the Universe into being and created man. A true Scientist will have this faith, for it is incontrovertible that where there is a plan of orderly execution of events there is intelligence - 'In the beginning of God.'
7) God is a mathematician of a very high order and He used advanced mathematics in constructing the Universe.
8) Rationality or intelligibility of the world lies behind all Scientific work of higher order.
9) Absolute nothingness cannot produce Something
10) Life or its origin cannot be reduced solely and simply to biology or chemistry
11) All living beings - from microbes to plants to animals are autonomus agents - this agency involves self motion, self-generation, self replication, qualities - that cannot be reduced entirely to Unintelligent matter.
12) The person 'I' cannot be found inside his/her brain or nervous system and have existed continously though numerous cellular transformations and changes of brain state have occured during his/her life time.

13) Modern Science has declared : 'A world of wonder that manifests the **presence and action of Infinite Intelligence at every level**'

14) The genesis and growth of life on earth are unmistakable manifestations of extraordinary intelligence, beauty and power...

15) The phrase 'Big Bang' - coined by an antagonist of the theory is misleading. There was no explosion involved, because an explosion implies pieces flying out into space, whereas the Big Bang was the event that created space! Great austronomers have clearly stated that 'Space' came to be being at the same time as the galaxies. Big-Bang' phrase an imaginary concept!

Conclusion : So far in this annexure we have made attempts to extract relevant sentences, Paragraphs from periodical magazines and a few Science books in random manner just to establish existing co-ordination between Modern Science and Philosophy (religion) This supports the main text matter.

A seminar was held in America for exchange of views among scientists and Philosophers during the year 2000 and susequently certain aspects of this seminar was Published. Prominent religious themes of the world were Placed by participating philosophers and thinkers. One of the speakers dealt with Indian religions and he upheld Madhwa Philosophy. His statement in this behalf is note worthy :

"In terms of intellectual regor and scholarly breadth and depth, **Madhvacharya** was the most fascinating of Hindu sage philosophers and is the greatest theistic thinker of all times"

2018-19 ಈ ಎರಡು ವರ್ಷಗಳ ಉಡುಪಿ ಪರ್ಯಾಯಪೀಠಸ್ಥರಾಗಿರುವ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದಂಗಳವರು ಶ್ರೀ ಕೃಷ್ಣನ ಸನ್ನಿಧಿಯಲ್ಲಿ ಒಂದು ವಿಶೇಷ ಉತ್ಸವವನ್ನು ಈ ಜೂನ್ ಮಾಸದಲ್ಲಿ ಏರ್ಪಡಿಸಿದ್ದರು. ಆ ಸಂದರ್ಭದಲ್ಲಿ ಅವರು ಅನೇಕ ವಿಚಾರಗೋಷ್ಠಿಗಳನ್ನೂ ಹಮ್ಮಿಕೊಂಡಿದ್ದರು. ತಾ॥ 2-6-2019ರಂದು

ಶ್ರೀ ಉತ್ತರಾದಿ ಮಠದ ಪೀಠಾಧಿಪತಿಗಳಾದ ಶ್ರೀ ಸತ್ಯಾತ್ಮತೀರ್ಥರವರ ಅಧ್ಯಕ್ಷತೆಯಲ್ಲಿ **'ಜ್ಞಾನ-ವಿಜ್ಞಾನ'** ಶೀರ್ಷಿಕೆಯಲ್ಲಿ ಒಂದು ಗೋಷ್ಠಿಯನ್ನು ಏರ್ಪಡಿಸಿ, ಇಂದಿನ ಪ್ರಖ್ಯಾತ ಸಂಸ್ಥೆಗಳಲ್ಲಿರುವ (ISRO, IISc, Technical College ಗಳಲ್ಲಿ) ಉನ್ನತ ಹುದ್ದೆಗಳಲ್ಲಿರುವ ವಿಜ್ಞಾನ ವೃತ್ತದಲ್ಲಿರುವ ಪರಿಣಿತರುಗಳನ್ನು ಆಹ್ವಾನಿಸಿ ಅವರವರ ಅಭಿಪ್ರಾಯಗಳನ್ನು ಮಂಡಿಸುವುದಕ್ಕೆ ಏರ್ಪಡಿಸಿದ್ದರು. ಅವರೆಲ್ಲರೂ ತಮ್ಮ ತಮ್ಮ ವಿಚಾರ ಮಂಡನೆ ಮಾಡುತ್ತಾ ವಿಜ್ಞಾನ ಕ್ಷೇತ್ರದಲ್ಲಿ ಪರೀಕ್ಷೆಗೆ ಒಳಪಟ್ಟು, ಹಲವು ನಿರ್ಣಯವಾದ ಅಂಶಗಳನ್ನು ತಿಳಿಸಿ, ಅವುಗಳು ತತ್ವಶಾಸ್ತ್ರದಲ್ಲಿರುವ ಅನೇಕ ವಿಷಯಗಳಿಗೆ ಪೋಷಕವಾಗಿವೆ ಎಂದು ಧೃಡೀಕರಿಸಿದರು. ನಾವುಗಳು ಉತ್ತಮವಾದ ಮತ್ತು ಸಾತ್ವಿಕವಾದ ಭಾವನೆ- ಯುಳ್ಳವರಾಗಿ ವೈದಿಕ ವರ್ತುಲದಲ್ಲಿರುವುದನ್ನು ಅಭ್ಯಾಸ ಮಾಡುವುದು ಉಚಿತವಾಗುತ್ತದೆ - ಎಂದು ಹೇಳಿದರು. ಹಿರಿಯ ವಿದ್ವಾಂಸರೊಬ್ಬರು ತತ್ವವಾದವನ್ನು ಸಂಕ್ಷಿಪ್ತವಾಗಿ ತಿಳಿಸಿದರು. ಅಧ್ಯಕ್ಷತೆ ವಹಿಸಿದ್ದ ಶ್ರೀ ಶ್ರೀಪಾದಂಗಳವರು ತಮ್ಮ ಸಂದೇಶದಲ್ಲಿ ವಿಜ್ಞಾನವಾದಿಗಳು ತಿಳಿಸಿದ ವಿಷಯ ಮತ್ತು ತತ್ವಶಾಸ್ತ್ರಗಳಲ್ಲಿರುವುದನ್ನು ಸಮನ್ವಯ ಮಾಡಿ ಭಗವಂತನು ಮಾಡುತ್ತಿರುವ ಅನಂತ ಉಪಕಾರಗಳನ್ನು ನಿತ್ಯದಲ್ಲಿ ಸ್ಮರಿಸುವ ಅವಶ್ಯಕತೆಯನ್ನು ಒತ್ತಿ ಹೇಳಿದರು. ಈ ಕಾರ್ಯಕ್ರಮ internet (ಯು-ಟ್ಯೂಬ್) ನಲ್ಲಿ ರೆಕಾರ್ಡ್ ಆಗಿದೆ. ಜಿಜ್ಞಾಸುಗಳು ಉಪಯೋಗಿಸಿಕೊಳ್ಳಬಹುದು.

ರತ್ನ - ೨

# ಪ್ರಮಾಣಗಳು, ಆಗಮ ಪ್ರಾಮಾಣ್ಯ

ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ।
ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ॥

ಲೇಖಕರು :
ಕೀರ್ತಿಶೇಷ ಮಾಧ್ವಭೂಷಣ ಶ್ರೀ ಬಿ. ಭೀಮರಾವ್
ದಾವಣಗೆರೆ

# ವಿಷಯಾನುಕ್ರಮಣಿಕೆ

## ಭಾಗ 1-ಪ್ರಮಾಣಗಳು



## ಭಾಗ 2-ಆಗಮ ಪ್ರಮಾಣ್ಯ

# ಮುನ್ನುಡಿ

**(ಪ್ರಥಮ ಪ್ರಕಟಣೆಯಲ್ಲಿರುವ ನುಡಿ)**

(ನ್ಯಾಯವೇದಾಂತ ವಿದ್ವಾನ್ ಪಂಡಿತರತ್ನ ಪಂಡಿತರಾಜ
ಎಂ.ಆರ್. ಗೋಪಾಲಾಚಾರ್ಯ, ಎಂ.ಎ., ಇವರಿಂದ)

ಶ್ರೀಮಾನ್ ಬಿ. ಭೀಮರಾಯರು ಬಹುಕಾಲದಿಂದ ಒಳ್ಳೇ ಲೇಖಕರೆಂದು ಖ್ಯಾತಿ ಪಡೆದಿದ್ದಾರೆ. ಭಾಗವತ, ಬ್ರಹ್ಮಸೂತ್ರ, ಗೀತೆ ಮೊದಲಾದವುಗಳ ಮೇಲೆ ಗ್ರಂಥಗಳನ್ನು ಬರೆದು ಜಿಜ್ಞಾಸು ವರ್ಗದಿಂದ ಮನ್ನಣೆಯನ್ನು ಹೊಂದಿದ್ದಾರೆ. 'ನಾಸ್ತಿಕ್ಯ ನಿರಾಸ' ಗ್ರಂಥವಂತೂ ನವಯುವಕರಿಗೆ ತುಂಬಾ ಪ್ರಿಯವಾಗಿದೆ. ಪ್ರಕೃತ ಈ ಗ್ರಂಥವೂ ಆಧುನಿಕ ಜಿಜ್ಞಾಸುಗಳಿಗೆ ಕೈದೇವಿಗೆ ಇದ್ದಂತೆ ಇದೆ. ಇದರ ಭಾಗ (1) ಪ್ರಮಾಣಗಳ ವಿಷಯವನ್ನೂ ಭಾಗ (2) ಆಗಮ ಪ್ರಾಮಾಣ್ಯ ವಿಷಯವನ್ನೂ ಪ್ರಸ್ತಾಪಿಸುತ್ತವೆ. ಹೇಳಬೇಕಾದ ವಿಷಯಗಳನ್ನು ವಿಶದವಾಗಿಯೂ ಆದಷ್ಟು ಸರಳವಾಗಿಯೂ ಪ್ರತಿಪಾದಿಸಲು ಶ್ರೀ ಭೀಮರಾಯರು ಎಲ್ಲ ಶಕ್ಯ ಪ್ರಯತ್ನವನ್ನೂ ಮಾಡಿದ್ದಾರೆ. ಪ್ರತಿಪಾದ್ಯ ವಿಷಯಗಳು ಅತ್ಯಂತ ಗಹನವಾದುದರಿಂದ ಕೆಲವು ಪಾರಿಭಾಷಿಕ ಲೋಪ ದೋಷಗಳು ಅಪರಿಹಾರ್ಯವಾಗಿವೆ. ಆದರೂ ನಮ್ಮ ಸಿದ್ಧಾಂತವನ್ನು ತಿಳಿದುಕೊಳ್ಳಬೇಕೆನ್ನುವವರಿಗೆ ಈ ಗ್ರಂಥವು ಸಾಕಷ್ಟು ಉದ್ಬೋಧಕವಾಗಿದೆ. ಹೆಚ್ಚು ವಿಚಾರವನ್ನು ಮುಂದುವರಿಸಲು ನಿಶ್ಚಯವಾಗಿಯೂ ಪ್ರಚೋದಕ ವಾಗಿದೆ. ವೈಜ್ಞಾನಿಕ ಪ್ರವೀಣರ ಹಾಗೂ ಪಾಶ್ಚಾತ್ಯ ತತ್ವಜ್ಞಾನಿಗಳ ಅಭಿಪ್ರಾಯಗಳನ್ನೂ ಅಲ್ಲಲ್ಲಿ ಉದಹರಿಸಿ ವಿಷಯಗಳ ವಿಮರ್ಶೆಯನ್ನು ಮುಂದರಿಸಿರುವುದು ಆಧುನಿಕ ವಿದ್ಯಾವಂತ ತರುಣರಿಗೆ ವಿಶೇಷ ಸಹಾಯವಾಗುವುದರಲ್ಲಿ ಸಂಶಯವಿಲ್ಲ.

ವೇದಗಳ ನಿತ್ಯತ್ವ ಮತ್ತು ಅಪೌರುಷೇಯತ್ವ ಸಮರ್ಥನೆಯನ್ನು ಚಾರಿತ್ರಿಕ, ಶಾಸ್ತ್ರೀಯ, ಹಾಗೂ ವೈಜ್ಞಾನಿಕ ದೃಷ್ಟಿಕೋಣಗಳಿಂದ ವಿಮರ್ಶಿಸಿ, ಸಾಧಿಸಿರುವುದು ಭಾಗ (2)ರ ವೈಶಿಷ್ಟ್ಯ. ಅಲ್ಲಿ ಬಹು ಉಪಯುಕ್ತ ವಿಷಯಗಳನ್ನು ಸಂಗ್ರಹಿಸಿ ನಿರೂಪಿಸಿದ್ದಾರೆ. ವೇದಾದಿ ಆಗಮ ಪ್ರಾಮಾಣ್ಯ ವಿಷಯದಲ್ಲಿ ಬಂದೊದಗುತ್ತಿರುವ ನಾನಾ ಸಂಶಯಗಳ ಪರಿಹಾರ ಮಾರ್ಗವನ್ನು ಮನಮುಟ್ಟುವಂತೆ ವಿವರಿಸಿದ್ದಾರೆ. ಇದರಿಂದ, ಕ್ಷೀಣವಾಗುತ್ತ ಸಾಗಿರುವ ವೇದ ಪ್ರಾಮಾಣ್ಯ ಬುದ್ಧಿಯನ್ನು ಉಜ್ಜೀವಿಸಿ, ಆಧುನಿಕ ತರುಣರಿಗೆ ಶಾಸ್ತ್ರ ವಿಷಯಕ ಶ್ರದ್ಧಾಭಕ್ತಿಗಳನ್ನು ದೊರಕಿಸಲು ಬಹು ಸಹಾಯವಾಗಿದೆ.

ಈ ಹೊತ್ತಿಗೆಯನ್ನು ಬರೆದ ರಾಯರಿಗೆ ನಮ್ಮ ಸಮಾಜವು ತುಂಬಾ ಕೃತಜ್ಞವಾಗಿರಬೇಕು. ಇದನ್ನು ಪ್ರಕಟಿಸುವ ಅವರ ಉದ್ದೇಶ್ಯ ದ್ರವ್ಯಾರ್ಜನೆಯಲ್ಲ - ಆದರೆ ಸಿದ್ಧಾಂತ ಪ್ರಚಾರ. ದೊರೆಯುವ ದ್ರವ್ಯ ಶ್ರೀ ಸರ್ವಜ್ಞಾಚಾರ್ಯ ಸೇವಾಸಂಘಕ್ಕೆ ದೊರೆತು ಸತ್ಕಾರ್ಯಗಳಿಗೆ ವಿನಿಯೋಗವಾಗುವುದು. ಶ್ರೀ ಭೀಮರಾಯರು ಚಿರಕಾಲ ಬಾಳಿ ನಮ್ಮ ಸಿದ್ಧಾಂತ ಸೇವೆಯ ಅಸಾಧಾರಣ ಭಾಗ್ಯವನ್ನು ಪಡೆಯಲೆಂದು ಶ್ರೀ ಹರಿವಾಯುಗಳಲ್ಲಿ ನನ್ನ ವಿನಮ್ರ ಪ್ರಾರ್ಥನೆ.

**ಮಾಹುಲಿ ಗೋಪಾಲಾಚಾರ್ಯ**

ಜನವರಿ 1969 ಬೊಂಬಾಯಿ

# ಪ್ರಮಾಣಗಳು

### ರತ್ನ - ೨ ; ಭಾಗ - ೧

### ಪರಿಚ್ಛೇದ ೧

## ಪ್ರಮಾಣಗಳ ಅವಶ್ಯಕತೆ ಮತ್ತು ಪ್ರಧಾನ ವಿಭಾಗಗಳು

ಈ ಹಿಂದಿನ ಗ್ರಂಥದ (೧ನೇ ರತ್ನದ) ಆರನೇ ಪರಿಚ್ಛೇದದಲ್ಲಿ ತತ್ವವಾದಿಗಳ ವಾದಸರಣಿಯನ್ನು ನಿರೂಪಿಸಲಾಗಿದೆಯಷ್ಟೆ. ಅದು ಸಪ್ರಮಾಣ-ವೆಂಬುದನ್ನೂ ಮತ್ತು ತತ್ವವಾದಿಗಳ ಸಿದ್ಧಾಂತಗಳು ಯಾವ ಪ್ರಮಾಣಗಳಿಂದ ಹೇಗೆ ಸತ್ಯವೆಂದು ಸಿದ್ಧವಾಗುತ್ತವೆಂಬುದನ್ನೂ ತಿಳಿಯಲು, ಮೊದಲಿಗೆ ಪ್ರಮಾಣಗಳ ಸ್ವರೂಪವನ್ನರಿಯಬೇಕಾದುದು ಅತ್ಯವಶ್ಯಕ. ಯಾವುದೊಂದು ವಸ್ತುವನ್ನು ಅಥವಾ ವಿಷಯವನ್ನು ಇದ್ದಂತೆ ತಿಳಿಯುವುದು (ಯಥಾರ್ಥ ಜ್ಞಾನವು) ಪ್ರಮಾಣವು. ಅದನ್ನು ವಸ್ತುಸ್ಥಿತಿಗೆ ವಿರುದ್ಧವಾಗಿ ಅಥವಾ ಸಂಶಯರೂಪದಿಂದಾಗಲಿ, ಗ್ರಹಿಸುವ ಜ್ಞಾನವು (ವಿಪರೀತ ಅಥವಾ ಸಂಶಯ ಜ್ಞಾನವು) ಪ್ರಮಾಣವೆನಿಸುವುದಿಲ್ಲ. ಯಥಾರ್ಥಜ್ಞಾನವನ್ನುಂಟು ಮಾಡುವ ಸಾಧನಗಳೂ ಪ್ರಮಾಣಗಳೆಂದೇ ಕರೆಯಲ್ಪಡುತ್ತವೆ. ಪ್ರಮಾಣಗಳು ಯಾವುವು ಎಂಬುದನ್ನು ಮೊದಲು ನಿಶ್ಚಯಿಸಿಕೊಳ್ಳದೇ ಸತ್ಯಾನ್ವೇಷಣೆಯಲ್ಲಿ ತೊಡಗುವುದು ವ್ಯರ್ಥವೇ ಸರಿ. ಯಥಾರ್ಥಜ್ಞಾನವೇ ಪ್ರಧಾನ ಪ್ರಮಾಣವು. ಚೇತನವು ತನ್ನನ್ನೂ ಮತ್ತು ತನ್ನಿಂದ ಭಿನ್ನವಾದ ಇತರ ವಸ್ತುಗಳನ್ನೂ ತಿಳಿಯುವ ಸಾಮರ್ಥ್ಯವುಳ್ಳದ್ದು - ಜ್ಞಾನವು ಅದರ ಸ್ವಭಾವ. ಕಾಣುವ, ಕೇಳುವ ಮೊದಲಾದ ವಿವಿಧ ಶಕ್ತಿಗಳೂ ಚೇತನ ಸ್ವರೂಪವೇ ಆಗಿವೆ. ಜ್ಞಾನದ ಅನುಭವವುಳ್ಳವನೂ ಚೇತನನೇ. ಈ ಕಾರಣದಿಂದ ಅನುಭವವನ್ನೂ ಜ್ಞಾನವೆಂದೇ ವ್ಯವಹರಿಸುವುದೂ ಉಂಟು. ಪ್ರಾಕೃತ ದೇಹಬಂಧದಲ್ಲಿರುವ ಚೇತನನಿಗೆ (ಜೀವನಿಗೆ) ತನ್ನಿಂದ ಭಿನ್ನವಾದ ಇತರ ವಸ್ತುಗಳ ಜ್ಞಾನವು ಬಹುವಾಗಿ[1] ಅನ್ಯ ಸಾಧನಗಳ ಸಹಾಯದಿಂದಲೇ ಉಂಟಾಗುವುದೆಂಬುದು

1. ನೇರವಾಗಿ ಚೇತನ ಸ್ವರೂಪವೇ ಗ್ರಹಿಸುವ ಸುಖ-ದುಃಖ, ಕಾಲ ಮೊದಲಾದವುಗಳಿವೆ. ಈ ವಿವರಗಳು ಕ್ರಮದಿಂದ ಮುಂದೆ ಪ್ರಸಕ್ತವಾಗುತ್ತವೆ.

ಎಲ್ಲರ ಅನುಭವದಲ್ಲಿದೆ. ಈ ಸಾಧನಗಳು ಯಾವುವು ಮತ್ತು ಎಷ್ಟು ಪ್ರಕಾರ, ಎಂಬುದನ್ನು ಮೊದಲಿಗೆ ನಿರ್ಧರಿಸಿಕೊಂಡು ಯಾವುದೇ ವಿಚಾರ-ವಿಮರ್ಶೆಗಳಲ್ಲಿ ತೊಡಗಬೇಕಾದುದು ಅವಶ್ಯಕ. ಈ ವ್ಯವಸ್ಥಿತ ಮಾರ್ಗವನ್ನು ಬಿಟ್ಟರೆ, ನಿರರ್ಥಕ ವಾಗ್ವಾದಗಳಲ್ಲಿ ವಿಚಾರಶಕ್ತಿಯ ಅಪವ್ಯಯವಾಗಿ ಯಾಥಾರ್ಥ ಜ್ಞಾನಲಾಭವಾಗುವ ಸಂಭವವೇ ಇಲ್ಲದಂತಾಗುತ್ತದೆ. ಈ ವಿಷಯದಲ್ಲಿ ಪ್ರಸಿದ್ಧ ಜರ್ಮನ್ ತತ್ವಜ್ಞಾನಿಯಾದ ಮಾರ್ಕ್ಸ್ ಮುಲ್ಲರ್ ಎಂಬಾತನು, ತನ್ನ 'Six systems of Indian Philosophy' (ಭಾರತೀಯ ಷಡ್ದರ್ಶನಗಳು) ಎಂಬ ಗ್ರಂಥದಲ್ಲಿ ಹೀಗೆ ನುಡಿದಿರುವನು: 'An examination of the authorities of human knowledge, ought of course, to form the introduction to every system of philosophy and to have clearly seen this, is, as it seems to me, a very high distinction of Indian Philosophy. How much useless controversy would have been avoided, particularly among, Jewish, Mahomadan and Christian Philosophers, if a proper place had been assigned in limine, to the question of what constitutes our legitimate or our only possible channels of knowledge, whether Perception, Inference, Revelation or anything elese?' ಎಂದರೆ, ಯಾವುದೊಂದು ತತ್ವನಿಶ್ಚಯಕ್ಕಾಗಿ ಪ್ರವೃತ್ತವಾದ ದರ್ಶನಕ್ಕೂ, ಜ್ಞಾನಸಾಧನ ಪ್ರಮಾಣಗಳ ವಿಮರ್ಶಾತ್ಮಕ ಪರೀಕ್ಷೆಯು, ಪ್ರಾರಂಭದಲ್ಲಿರಬೇಕಾದುದು ಅವಶ್ಯಕ. ಇದನ್ನು ಮನಗಂಡು ಪ್ರವೃತ್ತವಾಗಿರುವುದು ಭಾರತೀಯ ತತ್ವಶಾಸ್ತ್ರದ ಗೌರವಾರ್ಹ ವೈಶಿಷ್ಟ್ಯವೆಂದು ನನಗೆ ತೋರುತ್ತದೆ. ಪ್ರತ್ಯಕ್ಷ, ಅನುಮಾನ, ಪ್ರಕಾಶಿತ ವಾಕ್ಯಸಮೂಹ (Revelation) ಅಥವಾ ಬೇರೆ ಯಾವುದಾದರೂ ಆಗಲಿ, ಇಷ್ಟೇ ಪ್ರಮಾಣಗಳೆಂದೂ, ಇವುಗಳಿಂದ ಮಾತ್ರ ಸತ್ಯವನ್ನು ಸಾಧಿಸಬಹುದೆಂದೂ (ವಿಷಯ ಪ್ರವೇಶಕ್ಕೆ ಮೊದಲೇ) ನಿಶ್ಚಯಿಸಿಕೊಳ್ಳುವುದಕ್ಕೆ ಯೋಗ್ಯಸ್ಥಾನವನ್ನು ಕೊಟ್ಟಿದ್ದರೆ, ವಿಶೇಷವಾಗಿ, ಯಹೂದಿ (Jew) ಮಹಮ್ಮದೀ ಮತ್ತು ಕ್ರೈಸ್ತ ತತ್ವಶಾಸ್ತ್ರಗಳಲ್ಲಿ, ಅಲ್ಲಿ ಕಂಡುಬರುವ ವ್ಯರ್ಥ ವಾದಗಳಿಗೆ ಅವಕಾಶವಿರುತ್ತಿರಲಿಲ್ಲ.''

ಹೀಗೆ ಯಥಾರ್ಥಜ್ಞಾನ ಮತ್ತು ಜ್ಞಾನ ಸಾಧನಗಳು ಪ್ರಮಾಣ-ಗಳೆನಿಸುತ್ತವೆ. ಇವುಗಳಲ್ಲಿ ಯಥಾರ್ಥಜ್ಞಾನವು ಕೇವಲ ಪ್ರಮಾಣವೆಂದೂ, ಜ್ಞಾನಸಾಧನಗಳು ಅನುಪ್ರಮಾಣಗಳೆಂದೂ ಕರೆಯಲ್ಪಡುತ್ತವೆ. ಜ್ಞಾನ ಸಾಧನಗಳು ಯಾವುವೆಂಬುದನ್ನು ನಿರ್ಧರಿಸಿಕೊಳ್ಳುವ ಮೊದಲು, ಈ ಉಭಯ ಪ್ರಮಾಣಗಳ ಪ್ರಾಮಾಣ್ಯವನ್ನು (ಪ್ರಮಾಣತ್ವವನ್ನು) ತಿಳಿಯಬೇಕು. ಅವುಗಳಿಂದ ಸಿದ್ಧವಾಗುವ ಗ್ರಹಿಸಲಾಗುವ ವಿಷಯವು ಯಥಾರ್ಥವೇ (ಸತ್ಯವೇ ಸರಿ) ಎಂದು ಏಕೆ ಅಂಗೀಕರಿಸಬೇಕು, ಅನ್ಯಥಾ (ತಿಳಿಯಲಾದ ವಸ್ತು ಅಥವಾ ವಿಷಯವು ಬೇರೆ ರೀತಿ) ಇರಲಾರದೇ ಎಂಬುದನ್ನೂ ನಿರ್ಧರಿಸಿಕೊಳ್ಳಬೇಕಲ್ಲವೇ?

## ಪರಿಚ್ಛೇದ ೨

## ಪ್ರಮಾಣಗಳ ಪ್ರಾಮಾಣ್ಯ

ವಸ್ತುವನ್ನು ಗ್ರಹಿಸುವ ಶಕ್ತಿಯೇ ಜ್ಞಾನವೆನಿಸುವುದು. ಇದು ಚೇತನ ಸ್ವರೂಪವೇ ಆಗಿದೆ. ಚೇತನ ಭಿನ್ನವಾದ ಯಾವ ವಸ್ತುವಿಗೂ ತಿಳಿಯುವ ಶಕ್ತಿಯಿಲ್ಲ- ಜ್ಞಾನವಿಲ್ಲ. **ಚೇತನವು ತನ್ನನ್ನೂ ಇತರ ಸರ್ವವನ್ನೂ ತಿಳಿಯಬಲ್ಲದು.** ತನ್ನನ್ನು ತಾನು ತಿಳಿಯಬಲ್ಲನೆಂಬಲ್ಲಿ ಕರ್ತೃ - ಕರ್ಮಗಳೆರಡೂ ಚೇತನನೇ ಆಗಿರುವನು. ನಾನೆಂದು-ನನ್ನನ್ನು ತಿಳಿದಿದ್ದೇನೆಂಬ ಅನುಭವವು ಸರ್ವರಿಗೂ ಇದೆ. ಚೇತನನು ತನ್ನ ಜ್ಞಾನದಿಂದ ಅಭಿನ್ನನೇ ಆಗಿದ್ದರೂ, ಚೇತನ ಮತ್ತು ಅವನ ಜ್ಞಾನ, ಎಂಬುದಾಗಿ ಅವುಗಳನ್ನು ಭಿನ್ನ ಪದಾರ್ಥಗಳಾಗಿದ್ದಂತೆ ವ್ಯವಹರಿಸಲು ಅವಕಾಶಕೊಡುವ ವಿಶೇಷವೆಂಬ ಧರ್ಮವೂ ಚೇತನ ಸ್ವಭಾವವೇ ಆಗಿದೆ - ಚೇತನ ಭಿನ್ನವಲ್ಲ. ದೇಹೇಂದ್ರಿಯಾದಿ ಆವರಣಗಳಿಂದ ಬದ್ಧನಾದ ಚೇತನನೂ (ಸಂಸಾರಿ ಜೀವನೂ) ಸಹ, ತನ್ನಿಂದ ಭಿನ್ನಗಳಾದ ಇತರ ವಸ್ತುಗಳನ್ನೂ ತಿಳಿಯುತ್ತಾನೆ. ತನ್ನಿಂದ ಭಿನ್ನಗಳೆಂದೇ ಅವುಗಳನ್ನು ಗ್ರಹಿಸುತ್ತಾನೆ. ಭೇದವೆಂಬುದು ವಸ್ತುಸ್ವಭಾವ ಧರ್ಮವೇ ಆಗಿದೆ. ಸಕಲ ವಸ್ತುಗಳೂ ದೇಶ-ಕಾಲ ಸಂಬಂಧವುಳ್ಳವುಗಳಾಗಿವೆ. ಈಗ ಇಲ್ಲಿ ಈ ವಸ್ತುವನ್ನು ನೋಡುತ್ತೇನೆ;

ಆಗ ಅಲ್ಲಿದ್ದ ಆ ವಸ್ತುವನ್ನು ಕಂಡೆನು ಇತ್ಯಾದಿ ರೂಪದಿಂದ (ಪ್ರಕಾರವಾಗಿಯೇ) ಎಲ್ಲರಿಗೂ ವಸ್ತು ವಿಷಯಕ ಜ್ಞಾನವುಂಟಾಗುತ್ತದೆ. ಚಕ್ಷುರಾದಿ ಇಂದ್ರಿಯಗಳಿಂದ ಏಕಾಗ್ರತೆಯಿಂದ ಒಂದೇ ವಸ್ತುವನ್ನು ಗ್ರಹಿಸುವಾಗ ಸಹ (ಇತರ ವಸ್ತುಗಳನ್ನು ಪ್ರತ್ಯೇಕವಾಗಿ ಗ್ರಹಿಸದಿರುವಾಗ ಸಹ) ಆ ವಸ್ತುವನ್ನು ವಸ್ತು ಸಾಮಾನ್ಯದಿಂದ (generality of objects) ಭಿನ್ನವೆಂದೇ ಗ್ರಹಿಸುತ್ತೇವೆ. ಹೀಗೆಯೇ ಅನೇಕ ಭಿನ್ನ ವಸ್ತುಗಳನ್ನು ಗ್ರಹಿಸುವಾಗ ಸಹ ಒಂದೊಂದೂ ಸರ್ವ ಭಿನ್ನವೆಂದೇ ಚೇತನನಿಗೆ ಗೋಚರಿಸುತ್ತದಲ್ಲದೇ ಅನ್ಯಥಾ ಅಲ್ಲವೇ ಅಲ್ಲ.

ಎಲ್ಲ ಜ್ಞಾನವೂ ಸವಿಶೇಷವೇ ಅಗಿರುವುದು-ನಿರ್ವಿಶೇಷವಲ್ಲ. ನಿರ್ವಿ-ಶೇಷ, ನಿರ್ಧರ್ಮಕ - ನಿರ್ವಿಕಲ್ಪ - ನಿರ್ಗುಣ (devoid of attributes of any kind whatsoever) ವಸ್ತುಗಳೇ ಇಲ್ಲ. ನಿರ್ವಿಶೇಷವೆಂಬುದು ಶೂನ್ಯದಿಂದ ಭಿನ್ನವಲ್ಲ - ಅಸತ್ತೇ ಸರಿ. ನರವಿಷಾಣ - ಗಗನಕುಸುಮ ಇತ್ಯಾದಿಗಳ ಕಲ್ಪನೆಯುಂಟಾಗುವುದಷ್ಟೆ. ಅದು ಅಸದ್ವಸ್ತುಗಳ ಜ್ಞಾನವಲ್ಲವೇ? ಎಂಬ ಸಂಶಯವು ಯುಕ್ತವಲ್ಲ. ಅವು ಜ್ಞಾನದಿಂದ ಗ್ರಹಿಸಲಾದ ವಸ್ತುಗಳಲ್ಲ. ನರ - ಕುಸುಮ ಮೊದಲಾದ ಸದ್ವಸ್ತುಗಳ ಜ್ಞಾನದಲ್ಲಿ, ವಿಷಾಣ - ಗಗನ ಮೊದಲಾದ ಅನ್ಯತ್ರವಿರುವ ಸತ್ಯ ವಸ್ತುಗಳ ಜೋಡಣೆಯ (ಎಲ್ಲಿಯೂ ಇಲ್ಲದ) ಕಲ್ಪನೆ ಮಾತ್ರ. ವಿಷಾಣರಹಿತ ನರಾದಿ ವಸ್ತುಗಳನ್ನು ಗ್ರಹಿಸುವುದರಿಂದ ಸತ್ಯವಾದ ನರಾದಿ ವಸ್ತುಗಳಿಗೆ ವಿಷಾಣ (ಕೋಡು)ಗಳಿಲ್ಲವೆಂಬ ಜ್ಞಾನವೇ ಉಂಟಾಗುತ್ತದೆ. ಅದು ಸತ್ಯವೇ. ಆದ್ದರಿಂದ ಜ್ಞಾನಗೋಚರವಾಗುವ ವಸ್ತುವು ಸತ್ಯವೆಂಬ ನಿಯಮಕ್ಕೆ ಅಪೋಹವಿಲ್ಲ-ಜ್ಞಾನ ಪ್ರಾಮಾಣ್ಯಕ್ಕೆ ಕುಂದಿಲ್ಲ-ಕೊಂಕಿಲ್ಲ. ಇನ್ನು, ಸಿಂಪಿನಲ್ಲಿ ಬೆಳ್ಳಿ, ಹಗ್ಗದಲ್ಲಿ ಸರ್ಪ ಇತ್ಯಾದಿ ಭ್ರಮೆಗಳಲ್ಲಿ ಜ್ಞಾನಗೋಚರವಾಗುವ ಬೆಳ್ಳಿ, ಸರ್ಪ ಮೊದಲಾದವುಗಳನ್ನೂ ಸತ್ಯವೆಂದು ತಿಳಿಯಬೇಕಾಗುವುದಲ್ಲವೇ? ಎಂಬ ಸಂಶಯದ ಪರಿಹಾರವಾಗದೇ ಜ್ಞಾನಕ್ಕೆ ಪ್ರಾಮಾಣ್ಯವು ಸಿದ್ಧಿಸುವುದಿಲ್ಲ. ಈ ಅಂಶವನ್ನು ಸ್ವಲ್ಪ ದೀರ್ಘವಾಗಿಯೇ ಈ ಮುಂದೆ ವಿಮರ್ಶಿಸಲಾಗುವುದು.

ಮಾನವ ದೇಹದಲ್ಲಿ ಜ್ಞಾನಜನಕ ಕರಣಗಳು (ಸಾಧನಗಳು) ಆರು ವಿಧವಾಗಿವೆ. ನೋಡುವ, ಕೇಳುವ, ವಾಸನೆ ನೋಡುವ (ಗಂಧವನ್ನು

ತಿಳಿಯುವ), ರುಚಿ ನೋಡುವ, ಮೃದುತ್ವ-ಕಠಿಣತ್ವಗಳನ್ನು ತಿಳಿಯುವ (ಸ್ಪರ್ಶಿಸುವ) ಸಾಮರ್ಥ್ಯವುಳ್ಳ, ಚಕ್ಷು, ಶ್ರೋತ್ರ, ಘ್ರಾಣ, ರಸನ, ಸ್ಪರ್ಶಗಳೆಂದು ಕರೆಯಲ್ಪಡುವ ಐದು ಜ್ಞಾನೇಂದ್ರಿಯಗಳು ಮತ್ತು ಮನಸ್ಸು ಇವೇ ಆ ಆರು ಕರಣಗಳು. ರೂಪ, ಶಬ್ದ, ಗಂಧ, ರಸ, ಸ್ಪರ್ಶಗಳೆಂಬ ಗುಣಗಳುಳ್ಳ ವಸ್ತುಗಳು, ಕ್ರಮವಾಗಿ ಮೇಲೆ ಹೇಳಿದ ಪಂಚ ಜ್ಞಾನೇಂದ್ರಿಗಳಿಂದ ಗ್ರಹಿಸಲು ಯೋಗ್ಯ ವಿಷಯಗಳಾಗುತ್ತವೆ. ಯಾವುದೊಂದು ಇಂದ್ರಿಯವೂ ತನಗೆ ಯೋಗ್ಯವಲ್ಲದ ವಿಷಯಗಳನ್ನು ಗ್ರಹಿಸಲಾರದು. ಇಂದ್ರಿಯಗಳ ದ್ವಾರಾ ವಸ್ತುಗಳನ್ನು ತಿಳಿಯುವವನು ದೇಹಗತನಾದ ಚೇತನವೇ (ಜೀವನೇ). ಇಂದ್ರಿಯಕ್ಕೂ ಸ್ವಯೋಗ್ಯ ವಿಷಯಕ್ಕೂ ಯೋಗ್ಯ ಸಂಬಂಧವು (ಸನ್ನಿಕರ್ಷವು) ಏರ್ಪಟ್ಟಿರ-ಬೇಕು. ಉದಾ:- ಚಂದ್ರಲೋಕದಲ್ಲಿ ಆಗುವ ಶಬ್ದವು ನಮಗೆ ಕೇಳುವುದಿಲ್ಲ- ಅಲ್ಲಿರುವ ಸೂಕ್ಷ್ಮ ವಸ್ತುಗಳು ಕಾಣುವುದೂ ಇಲ್ಲ. ಕಣ್ಣಿಗೆ ಅತಿ ಸಮೀಪ-ವಾಗಿರುವ (ಕಣ್ಣುಗುಡ್ಡೆಯ ಮೇಲಿಡಲಾದ) ವಸ್ತುವನ್ನು ಕಣ್ಣು ನೋಡಲಾರದು. ಈ ಮೊದಲಾದ ದೋಷಗಳು ಸನ್ನಿಕರ್ಷದಲ್ಲಿರಕೂಡದು. ಇಂದ್ರಿಯವೂ ನಿರ್ದುಷ್ಟವಾಗಿರಬೇಕು. ನೋಡುವ, ಕೇಳುವ ಇತ್ಯಾದಿ ಶಕ್ತಿಗಳು ಇಂದ್ರಿಯಗಳು; ದೇಹದಲ್ಲಿ ಅವುಗಳು ಆಶ್ರಯಿಸಿರುವ ಸ್ಥಾನಗಳು ಗೋಳಕವೆನಿಸುತ್ತವೆ. ಇಂದ್ರಿಯಗಳೂ ಅವುಗಳ ಸ್ಥಾನಗಳಾದ ಗೋಳಕಗಳೂ ಕೂಡಿಯೇ ಇಂದ್ರಿಯಗಳೆಂದು ವ್ಯವಹರಿಸಲ್ಪಡುತ್ತವೆ. **ವಿಷಯಗ್ರಹಣ ಶಕ್ತಿಯೂ ಅದರ ಗೋಳಕವೂ ದೋಷರಹಿತವಾಗಿದ್ದರೆ ಮಾತ್ರ ನಿರ್ದುಷ್ಟೇಂದ್ರಿಯವೆಂದು** ಕರೆಯಲ್ಪಡುತ್ತವೆ. ಕಾಮಾಲೆ ರೋಗವಿದ್ದರೆ ಎಲ್ಲವೂ ಹಳದಿಯಾಗಿ ಕಾಣುತ್ತದೆ - ಪೊರೆ ಬಂದಿದ್ದರೆ ಕಾಣುವುದೇ ಇಲ್ಲ, ಅಥವಾ ಮಸಕಾಗಿ ಕಾಣುತ್ತದೆ-ಗೋಳಕ ದುಷ್ಟವಾದ್ದರಿಂದ; ಗೋಳಕವು ನಿರ್ದುಷ್ಟೇಂದ್ರಿಯವಾಗಿದ್ದರೂ ಹುಟ್ಟು ಕುರುಡನಿಗೆ ನೋಡುವ ಶಕ್ತಿಯೇ ಇರುವುದಿಲ್ಲ. ನಿರ್ದುಷ್ಟೇಂದ್ರಿಯ ವಿಷಯ ಸನ್ನಿಕರ್ಷ ಮಾತ್ರದಿಂದ ಆತ್ಮನಿಗೆ ವಸ್ತು ಜ್ಞಾನವಾಗುವುದಿಲ್ಲ-ಇಂದ್ರಿಯಕ್ಕೂ ಮನಸ್ಸಿಗೂ ಸಂಬಂಧವಿರಬೇಕು. ಮನಸ್ಸು ಅನ್ಯತ್ರ ಆಸಕ್ತವಾಗಿರುವಾಗ ಗಡಿಯಾರವು ಗಂಟೆಬಡಿದರೂ, ಅದರ ಮುಂದೆಯೇ ಕುಳಿತಿರುವ ಕಿವುಡನಲ್ಲದ ಮನುಷ್ಯ ಸಹ ಗಂಟೆಯ

ಶಬ್ದವು ಕೇಳದಿರುವುದುಂಟು. ಕಣ್ಣಿದ್ದೂ ಕಾಣದಿರುವ ಪ್ರಸಂಗಗಳೂ ಉಂಟು. ಇತ್ಯಾದಿ ಅನುಭವಗಳು ಮನಸ್ಸಿನ ಸಂಪರ್ಕದ ಅವಶ್ಯಕತೆಯನ್ನು ಸಾಧಿಸುತ್ತವೆ. ಇಷ್ಟಿದ್ದರೂ, ಮನಸ್ಸು ಆತ್ಮನ ಸಂಪರ್ಕರಹಿತವಾಗಿದ್ದರೆ, ಜ್ಞಾನೋದಯವಾಗುವುದಿಲ್ಲ. ಜ್ಞಾನಪ್ರಕಾಶವನ್ನು ಪಡೆಯುವವನು ಆತ್ಮನೇ. ಎಲ್ಲವನ್ನು ತಿಳಿಯುವವನು ತಾನೇ. ಆದ್ದರಿಂದ ಆತ್ಮನು ಸಾಕ್ಷೀ ಎಂದೂ ಸಹ ಕರೆಯಲ್ಪಡುತ್ತಾನೆ. ಸಾಕ್ಷಾತ್ತಾಗಿ ತಾನೇ ಎಲ್ಲವನ್ನೂ ತಿಳಿಯುವ ಆತ್ಮನು ತನ್ನನ್ನೂ, ಪರಮಾತ್ಮನನ್ನೂ ತಿಳಿಯುವ - ಕಾಣುವ, ಸಾಮರ್ಥ್ಯವುಳ್ಳವನೂ ಆಗಿದ್ದಾನೆ. ಆದರೆ ಇಲ್ಲಿ ಮನ ಮೊದಲಾದ ಇಂದ್ರಿಯಗಳ (ಸಾಧನಗಳ - ಕರಣಗಳ) ಉಪಯೋಗವಿಲ್ಲ - ನೇರವಾಗಿ ತಾನೇ ತಿಳಿಯುತ್ತಾನೆ. ಸಾಕ್ಷೀ ಶಬ್ದದ ಮುಖ್ಯ ಪ್ರವೃತ್ತಿ ನಿಮಿತ್ತವು ಇಲ್ಲಿದೆ ಎನ್ನಬಹುದು. ದೇಹದಲ್ಲಿರುವ ಸಕಲೇಂದ್ರಿಯ ಶಕ್ತಿಗಳೂ ಜೀವಸ್ವರೂಪದಲ್ಲಿವೆ. ಆ ಶಕ್ತಿಗಳು ಸ್ವರೂಪೇಂದ್ರಿಯ-ಗಳೆಂದು ಕರೆಯಲ್ಪಡುತ್ತವೆ. ದೇಹಗತ ಇಂದ್ರಿಯಗಳು ಕುಂಠಿತವಾಗಬಹುದು - ವಿವಿಧ ವಿಕಾರಗಳಿಗೆ ಒಳಗಾಗಬಹುದು. ಸ್ವರೂಪೇಂದ್ರಿಗಳಾದರೋ ನಿತ್ಯವೂ ನಿರ್ವಿಕಾರವೂ, ನಿರ್ದುಷ್ಟವೂ ಆಗಿರುವುವು.

ಹೀಗೆ ಎಲ್ಲ ಜ್ಞಾನವೂ ಆತ್ಮನಿಗೇ ಆದರೂ, ಪ್ರತ್ಯಕ್ಷವನ್ನು ಸಪ್ತವಿಧವೆಂದೂ ನಿರೂಪಿಸುವುದುಂಟು. ಕರಣಗಳ ಸಹಾಯವಿಲ್ಲದೇ ನೇರವಾಗಿ ಸಾಕ್ಷಿ-ಯಿಂದಲೇ ಗ್ರಹಿಸಲ್ಪಡುವುದು ಮುಖ್ಯ ಪ್ರತ್ಯಕ್ಷವು. **ಸಾಕ್ಷಿಯು ಮನಸ್ಸಿನ ದ್ವಾರಾ ಗ್ರಹಿಸುವುದು** ಮತ್ತು ಚಕ್ಷುರಾದಿ ಐದು ಇಂದ್ರಿಯಗಳ ಸಹಾಯದಿಂದ ಮನೋದ್ವಾರಾ ಗ್ರಹಿಸುವುದು, ಎಂಬ ಆರು ವಿಧ ಪ್ರತ್ಯಕ್ಷಗಳೂ ಇವೆ. ಈ ಏಳು ವಿಧ ಪ್ರತ್ಯಕ್ಷಗಳೂ ಪ್ರಮಾಣಗಳು - ಯಥಾರ್ಥ ಜ್ಞಾನವನ್ನುಂಟು ಮಾಡತಕ್ಕವುಗಳೇ. ಮುಖ್ಯ ಪ್ರತ್ಯಕ್ಷವನ್ನು ''ಅಪರೋಕ್ಷ''ವೆಂದೂ ಉಳಿದವು-ಗಳನ್ನು ''ಪರೋಕ್ಷ''ಗಳೆಂದೂ ವ್ಯವಹರಿಸುವುದುಂಟು. ಸ್ವಯಂ ಅಲ್ಲದೇ, ಅನ್ಯದ್ವಾರಾ ಆಗುವ ಪ್ರತ್ಯಕ್ಷವಾದ್ದರಿಂದ ''ಪರೋಕ್ಷ''ವೆನಿಸುವುದು. ಇದನ್ನೇ ಪ್ರಕಾರಾಂತರದಿಂದ, ಅನುಭವ ಮತ್ತು ಬಾಹ್ಯವೆಂಬುದಾಗಿ ಜ್ಞಾನವು ದ್ವಿವಿಧ-ವೆಂದೂ ಹೇಳಲಾಗುತ್ತದೆ. ಬಾಹ್ಯಜ್ಞಾನವೆಂದರೆ ಆತ್ಮ ಸ್ವರೂಪವಲ್ಲದ (ಆತ್ಮನಿಂದ ಹೊರಗಿನದಾದ) ಮನಸ್ಸು ಮೊದಲಾದ ಪ್ರಾಕೃತೇಂದ್ರಿಯಗಳ ದ್ವಾರಾ ಆತ್ಮನಿಗೆ

ಉಂಟಾದುದು. ಅನುಭವವೆಂಬುದು ಕೇವಲ ಸಾಕ್ಷಿಯಿಂದಾದ ಜ್ಞಾನವು. ಇವುಗಳಲ್ಲಿ ಅನುಭವೇ ಬಲಿಷ್ಠವು. ಏಕೆಂದರೆ ಅದು ಯಾವಾಗಲೂ ಯಥಾರ್ಥವೇ ಆಗಿರುವುದು. ಬಾಹ್ಯ ಜ್ಞಾನವು, ಇಂದ್ರಿಯ, ಸನ್ನಿಕರ್ಷ ಮೊದಲಾದ ದೋಷಗಳಿಂದ ಅಪ್ರಮಾಣವೂ ಆಗಬಹುದು.[2] ಅನುಭವ ಸಿದ್ಧವಾದುದು. ಸರ್ವತ್ರ ಯಥಾರ್ಥವೇ ಆಗಿರುವುದು.

ಉಕ್ತವಾದ ಸಪ್ತವಿಧ ಪ್ರತ್ಯಕ್ಷಗಳಲ್ಲಿ ಸಾಕ್ಷಿ ಪ್ರತ್ಯಕ್ಷವು ಸರ್ವತ್ರ ಯಥಾರ್ಥವೆಂಬುದನ್ನೂ, ಇತರ ಪ್ರತ್ಯಕ್ಷಗಳು ಸಂಶಯ-ಭ್ರಾಂತಿಗಳನ್ನು ಹುಟ್ಟಿಸಬಹುದೆಂಬುದನ್ನೂ ಲೋಕಾನುಭವಗಳ ವಿಮರ್ಶೆಯಿಂದ ತಿಳಿಯ-ಬಹುದು. **ಸಾಕ್ಷಿಯೇ ಸ್ವಯಂ ಗ್ರಹಿಸುವ ಅನೇಕ ವಸ್ತು-ವಿಷಯಗಳಿವೆ.** ಉದಾ:- ಸುಖ - ದುಃಖ, ಧರ್ಮ - ಅಧರ್ಮ, ಕಾಲ - ಕ್ಷಣಲವಾದಿ ಕಾಲ ವಿಭಾಗಗಳು. ಆತ್ಮಸ್ವರೂಪ - ನಾನು ನನ್ನದೆಂಬ ಅನುಭವ, ನಿದ್ರೆಯಲ್ಲಿ ಅನುಭವಿಸುವ ಸುಖ, ಪ್ರಮಾಣಗಳ ಪ್ರಾಮಾಣ್ಯ - ಅಪ್ರಾಮಾಣ್ಯಗಳು, ಇತ್ಯಾದಿ. ಇವುಗಳಲ್ಲಿ ಯಾವುದನ್ನೂ ಚಕ್ಷುರಾದಿ ಇಂದ್ರಿಯಗಳು ಗ್ರಹಿಸಲಾರವೆಂಬುದು ಸ್ಪಷ್ಟವಿದೆ - ಇವುಗಳನ್ನು ಮನಸ್ಸಿನಿಂದ ಗ್ರಹಿಸುವೆವೋ ಹೇಗೆ ಎಂಬುದನ್ನು ವಿಮರ್ಶಿಸೋಣ. ಮೊದಲಿಗೆ ಮನಸ್ಸಿನ ಸ್ವಭಾವ - ಶಕ್ತಿಗಳೇನೆಂಬುದನ್ನು ತಿಳಿಯಬೇಕು. ಭಾರತೀಯ ತತ್ವಶಾಸ್ತ್ರಗಳಂತೆ ಮನಸ್ಸು ಎಂಬುದು ಆತ್ಮಾಧೀನವಾದ ಒಂದು ಕರಣ ಮಾತ್ರ - ಸಾಧನ ಸಾಮಗ್ರಿ - ಇಂದ್ರಿಯ. ಅದು ಪ್ರಕೃತಿ ನಿರ್ಮಿತವಾದ ಸೂಕ್ಷ್ಮತತ್ವ - ಪೃಥಿವ್ಯಾದಿಗಳಂತೆ ಸ್ಥೂಲ ಪ್ರಾಕೃತ ವಸ್ತುವಲ್ಲ. ಜಡತತ್ವವಾದ್ದರಿಂದ ಮನಸ್ಸು, ಸ್ವಯಂ ಜ್ಞಾನವನ್ನುಂಟುಮಾಡಲಾರದು. ಮನಸ್ಸಿನಿಂದ ಆಗುವ ಕಾರ್ಯಗಳು ಹೀಗಿವೆ. ಚಕ್ಷುರಾದಿ ಇಂದ್ರಿಯಗಳ ದ್ವಾರಾ ಬಾಹ್ಯ ಜಗತ್ತಿನೊಂದಿಗೆ ಆಗುವ ಸಂಪರ್ಕದಿಂದ ಹುಟ್ಟುವ ಸಂಸ್ಕಾರಗಳನ್ನು (impressions) ಕೂಡಿಟ್ಟು-ಕೊಳ್ಳುವುದು; ಅವುಗಳನ್ನು ವಿಂಗಡಿಸಿ ಪ್ರತ್ಯೇಕ ಖಾನೆಗಳಲ್ಲಿಯೋ ಎಂಬಂತೆ ಶೇಖರಿಸುವುದು; ಅವು ಏಕಕಾಲದಲ್ಲಿ ಆತ್ಮನನ್ನು ಮುತ್ತದಂತೆ ಅವುಗಳನ್ನು

2. ಅನುಪ್ರಮಾಣ ದೋಷಗಳನ್ನು ಮುಂದೆ ಪ್ರತ್ಯೇಕ ಪರಿಚ್ಛೇದದಲ್ಲಿ ವಿಸ್ತರಿಸಲಾಗಿದೆ.

ತಡೆಹಿಡಿದು ರಕ್ಷಿಸುವುದು; ಉದ್ಬೋಧಗೊಳಿಸಲಾದ ಸಂಸ್ಕಾರಗಳನ್ನು ಮಾತ್ರ ಆತ್ಮನ ಸ್ಮರಣೆಗೆ ತಂದುಕೊಡುವುದು; ಆತ್ಮನಲ್ಲಿ ಮನಸ್ಸೇ ನಾನು ಎಂಬ ಭ್ರಾಂತಿಯುಂಟಾಗಲು ಕಾರಣವಾಗುವುದು, ಇತ್ಯಾದಿ. ಮನಸ್ಸಿನ ಈ ಕಾರ್ಯಗಳಾದರೂ ನಿಯಾಮಕ ಚೇತನ ಶಕ್ತಿಯಿಂದಲೇ ಆಗುತ್ತವೆ. ಮುಖ್ಯ ಮನೋನಿಯಾಮಕನು, ಸರ್ವನಿಯಾಮಕ ಈಶ್ವರನೇ. ಹೀಗಿರುವುದರಿಂದ ಜಡತತ್ವವಾದ ಮನಸ್ಸು ಸುಖದುಃಖಾದಿ ಪೂರ್ವೋಕ್ತ ವಸ್ತುಗಳನ್ನು ಸ್ವಯಂ ಗ್ರಹಿಸಲು ಅಸಮರ್ಥವಾದುದು. ಇಚ್ಛೆ, ಜ್ಞಾನ, ಸುಖ, ದುಃಖ, ಭಯ, ಅಭಯ, ಕೃಪೆ ಮೊದಲಾದವು ಮನಸ್ಸಿನ ಸ್ವತಂತ್ರ ವ್ಯಾಪಾರಗಳಲ್ಲ. ಪಾಶ್ಚಾತ್ಯ ತತ್ವವಾದಿಗಳು ಮತ್ತು ವಿಜ್ಞಾನಿಗಳು ಮನಸ್ಸಿನ ಹಿಂಬದಿಯಲ್ಲಿ-ಅದರ ಆಚೆ-ಏನಾದರೂ ಇದೆಯೇ, ಮನಸ್ಸಿನಿಂದ ಈ ವಿಧ ವ್ಯಾಪಾರಗಳು ಹೇಗೆ ನಡೆಯುತ್ತವೆಂಬುದನ್ನು ಪರಿಷ್ಕರಿಸಿಲ್ಲ - ತಿಳಿದಿಲ್ಲ. ವೇದಾಂತವಾದರೋ ಮನಸ್ಸು ಚಕ್ಷುರಾದಿಗಳಂತೆ ಆತ್ಮನಿಗೆ ಉಪಕಾರವಾದ ಸಾಧನ ಸಾಮಗ್ರಿ ಮಾತ್ರವೆಂದು ನಿಶ್ಚಯಿಸಿರುತ್ತದೆ.

'ನನಗೆ ಇಷ್ಟವಾದ ಪ್ರತಿಕ್ರಿಯೆಯು ಸುಖ-ತದ್ವಿರುದ್ಧವಾದುದು ದುಃಖ; ವಸ್ತುವಿದ್ದಲ್ಲಿ ದೇಶ-ಗಣನೆಯಿದ್ದಲ್ಲಿ ಕಾಲ; ಸುಖಸಾಧನವಾಗುವ ಕರ್ಮವು ಧರ್ಮ-ದುಃಖ ಸಾಧನವಾಗುವುದು ಅಧರ್ಮ; ಇತ್ಯಾದಿ ತರ್ಕಗಳಿಂದ (ಅನುಮಾನದಿಂದ) ಪೂರ್ವೋಕ್ತ ವಸ್ತುಗಳನ್ನು ಆತ್ಮನು ಗ್ರಹಿಸುತ್ತಾನೆಂದು ತಿಳಿಯಲು ಬರುವುದಿಲ್ಲ. ಏಕೆಂದರೆ ಹೊಗೆ ಇದ್ದಲ್ಲಿ ಬೆಂಕಿ ಇತ್ಯಾದಿ ಬಾಹ್ಯ ಪ್ರತ್ಯಕ್ಷದಿಂದಾದ ವಸ್ತುಜ್ಞಾನ ಮತ್ತು (ಹೊಗೆ-ಬೆಂಕಿಗಳ) ವ್ಯಾಪ್ತಿ ಜ್ಞಾನವಿದ್ದರೆ ಮಾತ್ರ ಅನುಮಾನವು ಜ್ಞಾನಜನಕವಾಗುತ್ತದೆ. ತರ್ಕಿಸುವ ಶಕ್ತಿ ಇಲ್ಲದವರು ಸಹ, ದೇಶ-ಕಾಲಗಳನ್ನು, ಸುಖ-ದುಃಖಾದಿಗಳನ್ನು ಸಾಮಾನ್ಯವಾಗಿ ತಿಳಿದೇ ತಿಳಿಯುತ್ತಾರೆ. ಇದರಿಂದ, ಇವುಗಳ ಜ್ಞಾನವು ಅನುಮಾನದಿಂದ ಉಂಟಾದುದಲ್ಲವೆಂದು ತಿಳಿಯಬರುತ್ತದೆ. ಇನ್ನು, ಆಗಮದಿಂದ (ವೇದಾದಿ-ಗಳಿಂದ) ಸುಖಾದಿಗಳ ಜ್ಞಾನವಾಗುವುದಿಲ್ಲ. ಸುಖದುಃಖಾದಿಗಳ ಹೇತು-ಗಳನ್ನು ಆಗಮವು ವಿಶೇಷವಾಗಿ ತಿಳಿಸುತ್ತದೆಯಾದರೂ, ಆತ್ಮನು ಸ್ವಯಂ ಅನುಭವದಿಂದಲೇ ಸುಖಾದಿಗಳನ್ನು ಅರಿಯುತ್ತಾನೆಂಬುದು ಸ್ಪಷ್ಟವೇ ಇದೆ.

ಜ್ಞಾನವೆಂಬುದು, ತಿಳಿಯುವವನೆಂಬ (ಜ್ಞಾತೃ) ಚೇತನನಲ್ಲಿ, ತಿಳಿಯಲ್ಪಡುವ ವಸ್ತು (ಜ್ಞೇಯ) ವಿಷಯಕವಾಗಿ ಉಂಟಾಗುವ ಅನುಭವ ವಿಶೇಷವೇ ಆಗಿದೆ. ಎಲ್ಲ ಜ್ಞಾನವೂ ಆತ್ಮನಿಗೇ ಉಂಟಾಗುತ್ತದೆ. ಬಾಹ್ಯ ಪ್ರತ್ಯಕ್ಷ - ಅನುಮಾನ - ಆಗಮಗಳಿಂದ ಸಹ ಯಥಾರ್ಥ ಜ್ಞಾನವಾಗುತ್ತದೆ. ಆದರೆ ಸಾಕ್ಷಿ ಪ್ರತ್ಯಕ್ಷದಂತೆ ತಪ್ಪದೇ ಸರ್ವತ್ರ ಯಥಾರ್ಥವಾಗಿರುವುದೆಂಬ ನಿಯಮವಿಲ್ಲ- ಸಂಶಯ, ಭ್ರಾಂತಿಗಳೂ ಉಂಟಾಗುತ್ತವೆ. ಅದು ಹೇಗೆ ಮತ್ತು ಯಾವ ಕಾರಣದಿಂದ ಎಂಬುದನ್ನು ಸ್ವಲ್ಪ ಮುಂದೆ ಪರೀಕ್ಷಿಸೋಣ. ಪ್ರಕೃತ, ಸಾಕ್ಷಿ ಪ್ರತ್ಯಕ್ಷವು ಪರಮ ಪ್ರಮಾಣ-ಯಥಾರ್ಥವೇ ಸರಿ, ಎಂಬಲ್ಲಿ ಹಲವು ಅನುಭವಗಳನ್ನು ತೀಕ್ಷ್ಣವಾದ ವಿಮರ್ಶೆಗೊಳಪಡಿಸಿ ನೋಡೋಣ. ನಿದ್ರಿಸಿ ಎಚ್ಚರಗೊಂಡ ಒಬ್ಬ ಮನುಷ್ಯನ ಅನುಭವವನ್ನು ತೆಗೆದುಕೊಳ್ಳುವಾ. ''ಈ ಪರ್ಯಂತ (ಇಷ್ಟು ಕಾಲದವರೆಗೆ) ನಾನು ಸುಖವಾಗಿ ನಿದ್ರಿಸಿದೆ ಎಂಬ ಅನುಭವ ಬರುತ್ತದೆ. ಹಾಗೆಂದೇ ನುಡಿಯುತ್ತಾನೆ ಸಹ. ಇದರಲ್ಲಿ ಗತಿಸಿದ ಕಾಲ, ನಾನು ಮತ್ತು ಅನುಭವಿಸಿದ ಸುಖ, ಇವುಗಳ ಸ್ಮರಣೆ ಇದೆ. ನಿದ್ರಾವಸ್ಥೆಯಲ್ಲಿ ಮನಸ್ಸಿನ ಯಾವ ವ್ಯಾಪಾರವೂ ಇರಲಿಲ್ಲ - ಅದೂ ಸುಪ್ತವಾಗಿತ್ತು. ಹಿಂದೆ ಅನುಭವಿಸಿದುದು ಮಾತ್ರ ಸ್ಮರಣೆಗೆ ವಿಷಯ- ವಾಗಬಲ್ಲದು. ಆದ್ದರಿಂದ ಕಾಲ, ನಾನು, ಸುಖ ಇವುಗಳು ಸಾಕ್ಷಿಯ ಅನುಭವಗಳೆಂದೇ ತಿಳಿಯಬೇಕಾಗುತ್ತದೆ. ದೇಹ - ಮನಸ್ಸುಗಳ ಶ್ರಮ ಪರಿಹಾರ ಮೊದಲಾದ ಕಾರಣಾಂತರಗಳಿಂದ, ಸುಖವಾಗಿ ನಿದ್ರಿಸಿದೆನೆಂಬ ಜ್ಞಾನ ಉಂಟಾಗುತ್ತದೆಂದು ಹೇಳಲು ಬರುವುದಿಲ್ಲ. ಏಕೆಂದರೆ, ನಿದ್ರಾವಸ್ಥೆಯಲ್ಲಿ ಸುಖವನ್ನು ಅನುಭವಿಸಿದುದು ಸುಳ್ಳಾದರೆ, ಎಚ್ಚೆತ್ತಾಗ ಉಂಟಾದ ಅದರ ಸ್ಮರಣೆಯು ಭ್ರಮೆಯಾಗಬೇಕಾಗುವುದು - ಭ್ರಮೆಯ ಉತ್ಪತ್ತಿಗೆ[3] ಬೇಕಾದ ಕಾರಣಗಳಿಲ್ಲ- ದಿರುವಾಗ ಭ್ರಮಾತ್ಮಕವೆಂದು ಹೇಳುವುದು ಕೂಡುವುದಿಲ್ಲ. ನಿದ್ರೆಯಲ್ಲಿ ಮನ ಆದಿ ಇಂದ್ರಿಯಗಳು, ಬಾಹ್ಯಜಗತ್ತಿನ ಸಂಬಂಧವಿಲ್ಲದೇ ವ್ಯಾಪಾರ ಶೂನ್ಯವಾಗಿದ್ದವು. ಆದ್ದರಿಂದ, ನಿದ್ರೆಯಲ್ಲಿ ಸುಖವನ್ನು ಅನುಭವಿಸಿದುದು

3. ಅಧಿಷ್ಠಾನ (ಆಶ್ರಯಸ್ಥಾನ), ಎರಡು ಸತ್ಯವಸ್ತುಗಳ ಜ್ಞಾನ, ಅವುಗಳಲ್ಲಿ ಸಾದೃಶ್ಯ ಇತ್ಯಾದಿ ಸನ್ನಿವೇಶಗಳಿದ್ದಲ್ಲಿ ಮಾತ್ರ ಭ್ರಮೆಗೆ ಅವಕಾಶವಿರುತ್ತದೆ.

ಸತ್ಯವಾಗಿದ್ದರೆ, ಅದು ಮನ ಮೊದಲಾದವುಗಳಿಂದ ಜನ್ಯವಾದುದಲ್ಲ - ಅವುಗಳಿಂದ ಅನುಭವಿಸಿದುದೂ ಅಲ್ಲ - ಅವು ಸ್ವಯಂ ಅನುಭವ ಶೂನ್ಯವೂ ಆಗಿವೆ. ಇದೂ ಅಲ್ಲದೇ ಜಾಗ್ರದವಸ್ಥೆಯಲ್ಲಿ ಮನ ಆದಿ ಇಂದ್ರಿಯಗಳಿಂದ ಅನುಭವಿಸುವ ಸುಖದಂತಿರುವ ಸುಖದ ಸ್ಮರಣೆಯು, ನಿದ್ರೆಯಿಂದ ಎಚ್ಚತ್ತಾಗ, ಉಂಟಾಗುವುದಿಲ್ಲ; ಕಿಂತು, ಪರಮ ಶಾಂತಿ ರೂಪವಾದ ವಿಲಕ್ಷಣ ಸುಖಾನುಭವದ ಸ್ಮರಣೆಯುಂಟಾಗುತ್ತದೆ. ನಿದ್ರೆಯಲ್ಲಿ ದೊರೆಯುವ ಸುಖಕ್ಕೆ ಸದೃಶ್ಯವಾದ ಸುಖವನ್ನು, ಬೇರಾವ ಭೋಗದಿಂದಲೂ, ಅನುಭವದಿಂದಲೂ ನಾವು ಜಾಗ್ರದವಸ್ಥೆಯಲ್ಲಿ ಎಂದೂ ಪಡೆದಿರುವುದಿಲ್ಲ. ಮನ ಮೊದಲಾದ ಬಾಹ್ಯೇಂದ್ರಿಯಗಳಿಂದ ಆಗಬಹುದಾದ ಸಕಲ ವ್ಯಾಪಾರಗಳನ್ನೂ ನಿರ್ವಹಿಸುವ ಶಕ್ತಿಗಳು, ಆತ್ಮನಿಂದ ಅಭಿನ್ನಗಳಾಗಿ ಆತ್ಮಸ್ವರೂಪದಿಂದಲೇ, ಆತ್ಮನಲ್ಲಿರುವುದರಿಂದ, ನಿದ್ರೆಯಲ್ಲಿ ಕಾಲ- ಸುಖಾದಿಗಳ ಅನುಭವವು, ಆತ್ಮನಿಗೆ (ಸಾಕ್ಷಿಗೇ) ಉಂಟಾದುದೆಂದು ನಿಶ್ಚಿಯಿಸಬೇಕಾಗುತ್ತದೆ-ಹೀಗೆ ಅಂಗೀಕರಿಸದಿರಲು ಗತ್ಯಂತರವೇ ಇಲ್ಲ. ಈ ಅನುಭವದ ಸ್ಮರಣೆಯು, ಎಚ್ಚೆತ್ತ ಜೀವನಿಗೆ ಚಿನ್ಮನದ (ಚೇತನಾತ್ಮಕ ಮನಸ್ಸಿನ) ವ್ಯಾಪಾರದಿಂದಲೇ ಉಂಟಾಗುತ್ತದೆ. ಇಷ್ಟು ಕಾಲ ಸುಖವಾಗಿ ನಿದ್ರಿಸಿದೆ ಎಂಬ ಸ್ಮರಣೆಯಲ್ಲಿ, ಕಾಲಾಂಶಗಳಾದ ಘಳಿಗೆ-ಮುಹೂರ್ತ ಇತ್ಯಾದಿ ವಿಶೇಷಗಳ ಅನುಭವಸ್ಮರಣೆ ಇಲ್ಲದಿದ್ದರೂ, ಕೆಲವು ಕಾಲ ನಿದ್ರಿಸಿದೆನೆಂಬ ಕಾಲಗತಿಯ ಅನುಭವವಿದ್ದೇ ಇರುತ್ತದೆ. ನಾನು ನಿದ್ರೆಯಿಂದ ಸುಖಪಟ್ಟೆ ಎಂಬಲ್ಲಿ ನಾನು ಎಂಬ ಆತ್ಮಾನುಭವವೂ ಇತ್ತೆಂದು ಸಿದ್ಧವಾಗುತ್ತದೆ-ಆ ಸುಖವು ಆತ್ಮಸ್ವರೂಪಗತ ಸುಖವೇ ಎಂದು ಒಪ್ಪಬೇಕಾಗುತ್ತದೆ. ನಿದ್ರಿಸುತ್ತಿದ್ದಾಗ ಈ ಜ್ಞಾನವಿರಲಿಲ್ಲ-ಎಚ್ಚೆತ್ತ ಮೇಲೆ ಮಾತ್ರ ತಿಳಿಯುತ್ತದೆಂಬ ಕಾರಣದಿಂದ ಆ ಅನುಭವವೇ ಸುಳ್ಳೆಂದು ತಿಳಿಯಲುಬಾರದು. ಏಕೆಂದರೆ, ಆಗ ಜೀವನು, ಅಜ್ಞಾನದಿಂದ ಆವೃತನಾಗಿ, ಸ್ವೇತರ (ತನ್ನಿಂದ ಭಿನ್ನವಾದ) ವಸ್ತುಸಂಬಂಧವೇ ಇಲ್ಲದಂತಿರುವನು.[4]

4. ವಸ್ತುವೊಂದು ಅನಾಚ್ಛಾದಿತವಾಗಿದ್ದರೂ, ನಮಗೆ ತಿಳಿಯದಿರುವುದು ಅಭಾವರೂಪ ಅಜ್ಞಾನದಿಂದ-ಕತ್ತಲೆಯಿಂದ ಆಚ್ಛಾದಿತವಾಗಿ ನಮಗೆ ತಿಳಿಯದಿದ್ದರೆ, ಅದು ಭಾವರೂಪ ಅಜ್ಞಾನದಿಂದ. ನಿದ್ರೆಯು ಭಾವರೂಪ ಅಜ್ಞಾನದ ಕಾರ್ಯ.

ಆದ್ದರಿಂದ ಆಗ ಸುಖಾನುಭವದ ಅರಿವು ಇರದಿರುವುದು ಅನುಪಪನ್ನವಲ್ಲ. ಚಲನೆಯ ಅನುಭವವು, ನೆಲೆಯಾಗಿರುವ (ಚಲನ ರಹಿತ) ಅನ್ಯವಸ್ತುವಿನ ಜೊತೆಯಲ್ಲಿರುವಾಗ ಉಂಟಾಗುತ್ತದಷ್ಟೆ. ಆಕಾಶದಲ್ಲಿ, ಮಹಾ ವೇಗದಲ್ಲಿ ಸಂಚರಿಸುವ ವಿಮಾನದಲ್ಲಿರುವ ವ್ಯಕ್ತಿಗೆ, ವಿಮಾನವು ನಿಂತಿರುವಂತೆಯೇ ತೋರುತ್ತದೆ. ಭೂಮಿಗಿಳಿದ ನಂತರ, ಸಾವಿರಾರು ಮೈಲಿಗಳ ದೂರವನ್ನು ದಾಟಿಬಂದಿರುವುದು ತಿಳಿದು, ಆಗ ಚಲನವೇಗದ ಜ್ಞಾನವಾಗುತ್ತದೆ. (ದೃಷ್ಟಾಂತದಲ್ಲಿ ಸರ್ವಸಾಮ್ಯವನ್ನು ನಿರೀಕ್ಷಿಸಬಾರದು).

ಕಾಲ-ದೇಶಗಳನ್ನು (time and space) ಸಾಕ್ಷಿಯೇ ಗ್ರಹಿಸುತ್ತದೆ. ಬಾಹ್ಯೇಂದ್ರಿಯಗಳ ಸಹಾಯದಿಂದಲ್ಲ. ನಾನೀಗ ಇಲ್ಲಿರುವೆನು ಎಂಬ ಅನುಭವದಲ್ಲಿ, ನಾನು, ಈಗ(ಕಾಲ), ಇಲ್ಲಿ (ದೇಶ) ಎಂಬ ಜ್ಞಾನವು ಆತ್ಮನಿಂದಲೇ ಸ್ವಯಂ ಗ್ರಾಹ್ಯಗಳಾಗಿವೆ. ನೀನು ಈಗ ಇಲ್ಲಿಲ್ಲವೆಂದು ಯಾರಾದರೂ ಹೇಳಿದರೆ, ಈಗ ಇಲ್ಲಿರುವೆನೆಂದು ನಿಶ್ಚಯಿಸಲು ನನ್ನ ಅನುಭವವನ್ನು ಹೊರತು ಮತ್ತೆ ಬೇರೆ ಪ್ರಮಾಣದ ಆವಶ್ಯಕತೆ ಇಲ್ಲವಷ್ಟೆ! ಹೀಗೆ ಅನ್ಯ ಸಾಧನಗಳ ಅಪೇಕ್ಷೆ ಇಲ್ಲದೇ ಸಾಕ್ಷಿ ಸಿದ್ಧವಾಗುವ ಸುಖ, ದುಃಖ, ಕಾಲ, ದೇಶಾದಿಗಳ ವಿಷಯದಲ್ಲಿ ಸಂಶಯಕ್ಕೆ ಅವಕಾಶವೇ ಇಲ್ಲ. ಸಾಕ್ಷಿ ಜ್ಞಾನವು (ಅನುಭವವು) ಸರ್ವತ್ರ ಯಥಾರ್ಥವೇ (ಸತ್ಯವೇ) ಆಗಿರುತ್ತದೆ. F.H. Jacobi (ಜಾಕೋಬಿ) ಎಂಬ ಜರ್ಮನ್ ತತ್ವ ಜ್ಞಾನಿಯು (German philosopher) ಆತ್ಮಾನುಭವ ವಿಷಯದಲ್ಲಿ ಹೊಂದಿರುವ ಅಭಿಪ್ರಾಯವನ್ನು ಇಲ್ಲಿ ಗಮನಿಸಬಹುದು. "In feeling, belief or faith, I find an instinctive form of Truth. Then, we are immediately certain of the existence of things in themselves. It springs from our direct perception of the objectives. We come face to face with the real and not merely with ideas as Idealism holds; ideas are mere copies of originals which we immediately perceive. No existence can ever be demonstrated by reason with its abstract principles. Just as we immediately experience external objects, we experience our own being, the self, the beautiful; the true,

the good, freedom, causality and God–''ನಾವು ಅನುಭವಿಸುವ ಸುಖಾದಿ ಸಂವೇದನೆಗಳು (feeling), ಉಂಟಾಗುವ ನಿಷ್ಠೆ ಅಥವಾ ವಿಶ್ವಾಸಗಳಲ್ಲಿ ನಾನು ಒಂದು ಪ್ರಕಾರದ ಆಂತರಿಕ ಸತ್ಯತೆಯನ್ನು ಕಾಣುತ್ತೇನೆ. ಅಂತಃಸ್ಫೂರ್ತಿಯಿಂದ ಆ ಭಾವಗಳುಂಟಾದಾಗ, ವಸ್ತುಗಳು ಇರುವವೆಂಬ (ಅಸ್ತಿತ್ವವುಳ್ಳವುಗಳೆಂಬ) ಅರಿವು ತಕ್ಷಣದಲ್ಲಿ ಉಂಟಾಗುತ್ತದೆ. ಈ ಜ್ಞಾನವು ಪ್ರತ್ಯಕ್ಷದಿಂದಲೇ (ಸಾಕ್ಷಿ ಗ್ರಹಣದಿಂದಲೇ) ಉದ್ಭವಿಸುತ್ತದೆ. ಸತ್ಯದ ಎದುರು ನಿಲ್ಲುತ್ತೇವೆ–ಅದು, ಭಾವನಾವಾದವು (idealism) ಹೇಳುವಂತೆ (ಭಾವನೆ–ಯನ್ನುಳಿದು ಅನ್ಯ ಜಗತ್ತಿಲ್ಲ–ಜಗತ್ತು ಭಾವನಾತ್ಮಕವೆಂಬ ಏಕತ್ವವಾದ) ಭಾವನಾತ್ಮಕವಲ್ಲ. ಪ್ರತ್ಯಕ್ಷದಿಂದ ಗ್ರಹಿಸುವ ವಸ್ತುಗಳ ಪ್ರತಿಗಳೇ (ಅನುಕರಿಸುವ ನಕಲುಗಳೇ) ಭಾವನೆಗಳೆಂಬುವು. ವಸ್ತುಗಳ ಅಸ್ತಿತ್ವವನ್ನು ಯುಕ್ತಿಯು (ತರ್ಕವು) ಊಹೆಯನ್ನಾಶ್ರಯಿಸಿದ ತನ್ನ ನಿಯಮಗಳಿಂದ (abstract principles) ಎಂದೂ ಸಾಧಿಸಿ ತೋರಿಸಲಾಗದು. ಬಾಹ್ಯವಸ್ತುಗಳನ್ನು ಕಂಡೊಡನೆ ಅವುಗಳನ್ನು ಗ್ರಹಿಸುವಂತೆ, ನಮ್ಮ ಅಸ್ತಿತ್ವ, ಆತ್ಮ (self), ಸೌಂದರ್ಯ, ಸತ್ಯ, ಶುಭ, ಸ್ವಾತಂತ್ರ್ಯ, ಕಾರ್ಯಕಾರಣ ಸಂಬಂಧ, ಈಶ್ವರ ಇವುಗಳನ್ನು ಅನುಭವದಿಂದ ಗ್ರಹಿಸುತ್ತೇವೆ.''

ಹೀಗೆ ಸಾಕ್ಷಿಗೃಹೀತ ಜ್ಞಾನವು ಸರ್ವತ್ರ ಯಥಾರ್ಥವೇ ಆಗಿರುವುದು. ಮನಮೊದಲಾದ ಇಂದ್ರಿಯಗಳ ಸಹಾಯದಿಂದ ಉತ್ಪನ್ನವಾಗುವ ಜ್ಞಾನವೂ ಆತ್ಮನಿಗೇ ಆಗುವುದು. ಆದರೆ ಅದು, ಕೆಲವು ಸಂದರ್ಭಗಳಲ್ಲಿ ಸಂಶಯಗ್ರಸ್ತವಾಗಿರಬಹುದು – ವಿಪರೀತವೂ (ವಸ್ತುಸ್ಥಿತಿಗೆ ವಿರುದ್ಧವೂ) ಆಗಿರಬಹುದು. ಸಾಕ್ಷಿಯು ಗ್ರಹಿಸಿದ ಮಾತ್ರದಿಂದ ಯಥಾರ್ಥವಾಗುವುದಿಲ್ಲ. ಸಂಶಯಗ್ರಸ್ತವಾದುದನ್ನು ಸಾಕ್ಷಿಯು ಸಂಶಯಾತ್ಮಕವಾಗಿಯೇ ಗ್ರಹಿಸಿ, ಪರೀಕ್ಷೆಗೆ ಒಳಪಡಿಸುತ್ತದೆ. ಹಾಗಲ್ಲದೇ ತನಗುಂಟಾಗುವ ಎಲ್ಲ ಪ್ರಕಾರದ ಜ್ಞಾನಗಳನ್ನು ಪರೀಕ್ಷೆಗೊಳಪಡಿಸುವುದಿಲ್ಲ – ಹಾಗೆ ಪರೀಕ್ಷಿಸಬೇಕಾದ ಅವಶ್ಯಕತೆಯೂ ಇಲ್ಲ. ಎಲ್ಲ ಜ್ಞಾನಗಳ ಪ್ರಾಮಾಣ್ಯವನ್ನು ಪರೀಕ್ಷೆಯಿಂದಲೇ ನಿರ್ಧರಿಸಬೇಕೆಂಬ ನಿಯಮವನ್ನು ಅಂಗೀಕರಿಸಿದರೆ, ಮೊದಲಿನ ಪರೀಕ್ಷೆಯ ಫಲಿತಾಂಶವನ್ನು ಮತ್ತೊಂದು ಪರೀಕ್ಷೆಗೆ ಒಳಪಡಿಸುವುದು,

ಅದರ ಫಲಿತಾಂತವನ್ನು ಇನ್ನೊಂದು ಪರೀಕ್ಷೆಗೆ-ಹೀಗೆ ಅನವಸ್ಥೆಯೇ ಪ್ರಾಪ್ತವಾಗುತ್ತದೆ; ಪರೀಕ್ಷೆಗಳ ಪರಂಪರೆಗೆ ನಿಲುಗಡೆ ಇಲ್ಲದಂತಾಗುತ್ತದೆ. ಸಾಕ್ಷಿಜ್ಞಾನವು ಸಂಶಯಗ್ರಸ್ತವಾದ ವಿಷಯದಲ್ಲಿ ಮಾತ್ರ ಪರೀಕ್ಷೆಯು ಅವಶ್ಯಕ. ಮನ ಆದಿ ಇಂದ್ರಿಯಗಳ ದ್ವಾರಾ ಉಂಟಾದ ಜ್ಞಾನವನ್ನು ಸರ್ವತ್ರ ಪರೀಕ್ಷೆ-ಗೊಳಪಡಿಸಬೇಕಾದ್ದಿಲ್ಲ. ಅದು ಬಾಧರಹಿತವೂ ನಿಶ್ಚಯಾತ್ಮಕವೂ ಆಗಿದ್ದಾಗ, ಸಾಕ್ಷಿಸಿದ್ಧ ಜ್ಞಾನದಂತೆ ಯಥಾರ್ಥವೆಂದೇ ತಿಳಿಯಬೇಕು. ಬಾಧರಹಿತ ನಿಶ್ಚಯಾತ್ಮಕ ಜ್ಞಾನವೆಂದರೆ, ಜ್ಞಾನ ಹುಟ್ಟಿದ ನಂತರ, ಪರೀಕ್ಷಿಸಬೇಕಾದ ಅವಶ್ಯಕವಿಲ್ಲದಿರುವಿಕೆ ಮತ್ತು ಪರೀಕ್ಷಿಸಿದರೂ ಹಿಂದೆ ಉಂಟಾದ ಜ್ಞಾನಕ್ಕೆ ವಿರೋಧ ಬಾರದಿರುವುದು. ದೋಷರಹಿತವಾದ ಇಂದ್ರಿಯ ಮತ್ತು ಅದರಿಂದ ಗ್ರಾಹ್ಯವಾದ ವಿಷಯಗಳ ಯೋಗ್ಯ ಸನ್ನಿಕರ್ಷದಿಂದ, ಬಾಧರಹಿತ ನಿಶ್ಚಯ ಜ್ಞಾನವೇ ಹುಟ್ಟುತ್ತದೆ. ಆದರ ಪ್ರಾಮಾಣ್ಯವನ್ನೂ ಸಾಕ್ಷಿಯೇ ಗ್ರಹಿಸುತ್ತದೆ. ಸಿಂಪನ್ನು ಕಂಡು ಬೆಳ್ಳಿಯೆಂದು ತಿಳಿದಾಗ, ಹಗ್ಗವನ್ನು ಸರ್ಪವೆಂದು ತಿಳಿದಾಗ, ಮಸಕು ಬೆಳಕು (dim light), ದೂರದಿಂದ ನೋಡುವಿಕೆ, ಚೆನ್ನಾಗಿ ಗಮನಿಸದಿರುವಿಕೆ ಮೊದಲಾದ ದೋಷಗಳಿರುವುದರಿಂದ, ಬೆಳ್ಳಿ-ಸರ್ಪ ಇತ್ಯಾದಿ ಜ್ಞಾನವು ಸಂಶಯಗ್ರಸ್ತವಾಗಿಯೇ ಇರುತ್ತದೆ. ಪರೀಕ್ಷಾನಂತರ ಅಲ್ಲಿ ಇಲ್ಲದಿದ್ದ ಬೆಳ್ಳಿ-ಸರ್ಪಗಳನ್ನು ಕಂಡೆ ಎಂಬ ಬಾಧಜ್ಞಾನವುಂಟಾಗುತ್ತದೆ. ಸ್ಪಷ್ಟಪ್ರಕಾಶದಲ್ಲಿ ಗಮನಿಸಿ ನೋಡಿದಾಗ ಸಿಂಪು-ಹಗ್ಗವೆಂಬ ಯಥಾರ್ಥ ಜ್ಞಾನವೇ ಉಂಟಾಗುವುದು. ಬೆಳ್ಳಿ-ಸರ್ಪ- ವೆಂಬುದಾಗಿ ಸಾಕ್ಷಿಯು ಮೊದಲು ಗ್ರಹಿಸಿದ್ದರಿಂದ, ಸಾಕ್ಷಿಜ್ಞಾನವೂ ಭ್ರಮಾತ್ಮಕವಾಗಿರಬಹುದೆಂದು ಶಂಕಿಸ-ಬಾರದು. ಭ್ರಮ ಜ್ಞಾನದಲ್ಲಿ ಸಹ, ಇದು ಬೆಳ್ಳಿ-ಸರ್ಪ ಎಂಬಲ್ಲಿ, ಇದು ನಾನು ಕಂಡ ವಸ್ತು ಎಂಬ ಅಂಶವು ಯಥಾರ್ಥವೇ ಆಗಿದೆ. ಸಾಕ್ಷಿ ಗ್ರಹಿಸಿದ ಜ್ಞಾನದಲ್ಲಿ ಯಥಾರ್ಥಾಂಶವಿದ್ದೇ ಇದೆ. ವಸ್ತುತ್ವ ವಿಷಯದಲ್ಲಿ ಎಲ್ಲ ಜ್ಞಾನವೂ ಸತ್ಯವೇ - ವಸ್ತುಪ್ರಕಾರಕ ಜ್ಞಾನದಲ್ಲಿ ವ್ಯತ್ಯಸ್ತವಾಗುವುದುಂಟು. ಈ ಅಭ್ರಮಾಂಶವನ್ನು (ಯಥಾರ್ಥಾಂಶವನ್ನು) ಅವಲಂಬಿಸಿಕೊಂಡೇ ನಂತರ ಉಂಟಾಗುವ ಬಾಧಜ್ಞಾನವು ಪ್ರವೃತ್ತವಾಗುತ್ತದೆ - ನಿರ್ನಿಮಿತ್ತವಾಗಿ ಆಕಾಶದಲ್ಲಿ

ಹುಟ್ಟುವುದಿಲ್ಲ-ಆಶ್ರಯ ರಹಿತವಲ್ಲ.[5] ಸಾಕ್ಷಿಯು ಪರೀಕ್ಷಿಸಿ ಪಡೆದ ನಿಶ್ಚಯವು ಜ್ಞಾನಪ್ರಾಮಾಣ್ಯದ ಸ್ವಾಭಾವಿಕ ಲಕ್ಷಣ.

ಸಾಕ್ಷಿಯು ಪರೀಕ್ಷಿಸುವ ಪ್ರಕಾರವನ್ನೂ ಗಮನಿಸಬೇಕು. ಮನ ಆದಿ ಇಂದ್ರಿಯಜನ್ಯ ಜ್ಞಾನವು, ವೃತ್ತಿಜ್ಞಾನವೆಂದು ಕರೆಯಲ್ಪಡುತ್ತದೆ. ಇದರಲ್ಲಿರ-ಬಹುದಾದ ದೋಷವನ್ನು ಅದಕ್ಕಿಂತ ಪ್ರಬಲವಾದ ಪ್ರಮಾಣದಿಂದಲೇ ತಿಳಿಯಬೇಕು. ಪ್ರತ್ಯಕ್ಷದಿಂದ ಹುಟ್ಟಿದ ಸರ್ಪಜ್ಞಾನವು (ಭ್ರಮವು) ಪ್ರಬಲ ಪ್ರತ್ಯಕ್ಷದಿಂದ ದೋಷವುಳ್ಳದ್ದೆಂದು ತಿಳಿಯಲ್ಪಡುತ್ತದೆ. ಇದರಂತೆ, ಈಶ್ವರ - ಧರ್ಮಾದಿ ಅತೀಂದ್ರಿಯ ವಿಷಯಗಳಲ್ಲಿ ಪ್ರತ್ಯಕ್ಷಕ್ಕಿಂತ ಆಗಮವು ಪ್ರಬಲ ಪ್ರಮಾಣವು.[6] ಶ್ರೀರಾಮನು ಸೀತೆಯನ್ನು ಕಾಣದೇ ದುಃಖಿಸಿದ್ದರಿಂದ, ದುಃಖಾದಿ ದೋಷಗಳುಳ್ಳವನೆಂದು ಪ್ರಾಪ್ತವಾಗುವ ಭ್ರಮಜ್ಞಾನವು, ಪ್ರಬಲ ಪ್ರಮಾಣಗಳಾದ ಶ್ರುತಿಗಳಿಂದ ಬಾಧಿತವಾಗಿ, ಶ್ರೀರಾಮನು ಸರ್ವದೋಷ-ರಹಿತನಾದ ಪರಬ್ರಹ್ಮನೇ ಎಂಬ ನಿಶ್ಚಯದಿಂದ ಯಥಾರ್ಥ ಜ್ಞಾನವಾಗುತ್ತದೆ. (ಪೌರುಷೇಯ ಆಗಮವಾದ ರಾಮಾಯಣಕ್ಕಿಂತ ಅಪೌರುಷೇಯವಾದ ಶ್ರುತಿಗಳು ಪ್ರಬಲ ಪ್ರಮಾಣಗಳು). ಈ ನಿಯಮವನ್ನು ಅನುಸರಿಸಿ ಸಾಕ್ಷಿಯು, ಸಂಶಯಗ್ರಸ್ತ ಜ್ಞಾನವನ್ನು ಪ್ರಬಲ ಪ್ರಮಾಣಗಳಿಂದ ಪರೀಕ್ಷಿಸಿ, ನಿಶ್ಚಯವನ್ನು ಹೊಂದುತ್ತದೆ. ಸಾಕ್ಷಿ ನಿಶ್ಚಯವು ಸಿದ್ಧವಾದ ನಂತರ (ತಾತಾಲ್ಕಿಕ ನಿಶ್ಚಯವಲ್ಲ -(tentative conclusions) ಪುನಃ ಪರೀಕ್ಷೆಯ ಅವಶ್ಯಕವಿಲ್ಲ - ಆದ್ದರಿಂದ ಅನವಸ್ಥಾ ದೋಷಕ್ಕೆಡೆಯಿಲ್ಲ. ಸಾಕ್ಷಿ ಸಿದ್ಧ ಜ್ಞಾನವೇ ಅನುಭವವೆನಿಸುವುದು. ಆದ್ದರಿಂದಲೇ ಅನುಭವವು ಪ್ರಮಾಣಗಳಲ್ಲಿ ಅತ್ಯುತ್ತಮವೆನ್ನುವುದು. ಅದು ಸಾಕ್ಷಿ ಜ್ಞಾನವಾದ್ದರಿಂದ ಆಗಮಕ್ಕಿಂತಲೂ ಪ್ರಬಲ. ಆಗಮವು ಅನುಭವಕ್ಕೆ ವಿರೋಧವಾಗಿ ಹೇಳಿದರೆ ಅದೂ ತ್ಯಾಜ್ಯವೇ. ಅಪೌರುಷೇಯಗಳಾದ ವೇದಗಳಲ್ಲಿ ಹಾಗಿದ್ದರೆ, ಅರ್ಥಾಂತರವನ್ನೇ ಹುಡುಕಿ ತಿಳಿಯಬೇಕು. (ಈ ಅಂಶಗಳ ವಿಸ್ತಾರವನ್ನೂ ಆಗಮ ಪರಿಚ್ಛೇದದಲ್ಲಿ ಕಾಣುತ್ತೀರಿ). ಪ್ರಕೃತ, ಅನುಭವಕ್ಕಿಂತ ಶ್ರೇಷ್ಠಪ್ರಮಾಣವಿಲ್ಲವೆಂಬಲ್ಲಿ ಒಂದು ದೃಷ್ಟಾಂತವನ್ನು

---

5. ಭ್ರಮೇಽಪ್ಯಭ್ರಮ ಭಾಗೋಽಸ್ತಿ ತನ್ಮಾತ್ರಮುಪಜೀವ್ಯ ಹಿ ।
ಬಾಧಕಜ್ಞಾನವೃತ್ತಿ ಸ್ಯಾನ್ನಚೈವಂ ಸುಪರೀಕ್ಷಿತೇ ॥ (ಅನುವ್ಯಾಖ್ಯಾನ)

6. ಈ ವಿಷಯವು ಮುಂದಿನ ಆಗಮ ಪರಿಚ್ಛೇದದಲ್ಲಿ ವಿಸ್ತಾರವಾಗಿ ವಿವೇಚಿಸಲ್ಪಡುತ್ತದೆ.

ಉದಹರಿಸಬಹುದು. ನಿರ್ಜಲವಾದ ಅರಣ್ಯದಲ್ಲಿ ಬಹುವಾಗಿ ಸುತ್ತಿ ನೀರಡಿಕೆಯಿಂದ ಬಳಲಿದ ಮನುಷ್ಯನೊಬ್ಬನು ದೂರದಲ್ಲಿ ಜಲವನ್ನು ಕಾಣುತ್ತಾನೆ. ಜೊತೆಗಾರನೊಬ್ಬನು, ಇಲ್ಲೆಲ್ಲಿ ನೀರು ಬರಬೇಕು; ಜಲದಂತೆ ತೋರುವುದು ಕೇವಲ ಮರುಮರೀಚಿಕೆಯು-ಜಲ ಭ್ರಮೆ ಮಾತ್ರ ಎನ್ನುತ್ತಾನೆ. ನೀರಿಗಾಗಿ ಹಾತೊರೆಯುತ್ತಿರುವ ವ್ಯಕ್ತಿಯು, ಜಲಾಶೆಯಿಂದ ಆ ದಿಕ್ಕಿನಲ್ಲಿ ಧಾವಿಸುತ್ತಾನೆ. ಸ್ವಲ್ಪ ದೂರ ಹೋಗುವುದರೊಳಗೆ ತಂಗಾಳಿಯು ಬೀಸುತ್ತದೆ. ಜಲಾಶಯದ ಮೇಲಿನ ಗಾಳಿಯೋ ಅಥವಾ ಅಲ್ಲಿ ಕಾಣುವ ವೃಕ್ಷಗಳ ಮೇಲಿಂದ ಬರುವ ಗಾಳಿಯೋ ಎಂದು ಸಂಶಯಪಡುತ್ತಾ ವೇಗವಾಗಿ ಮುಂದುವರಿತ್ತಾನೆ. ಸಮೀಪಕ್ಕೆ ಬಂದಂತೆಲ್ಲಾ ಜಲವೇ ಆಗಿರಬೇಕೆಂಬ ಊಹೆಯೇ ಪ್ರಬಲಗೊಳ್ಳುತ್ತದೆ. ಹತ್ತಿರ ಹೋಗಿ ಮುಟ್ಟಿನೋಡುವಲ್ಲಿ ಜಲವೇ ಆಗಿರುತ್ತದೆ. ಯಥೇಚ್ಛವಾಗಿ ಪಾನ ಮಾಡುತ್ತಾನೆ-ದಾಹವಡಗಿ ತೃಪ್ತನಾಗುತ್ತಾನೆ. ಹೀಗೆ ಸುಖಾನುಭವವನ್ನು ಪಡೆದ ನಂತರ ಅವನ ಮಿತ್ರನಾಗಲಿ, ಬ್ರಹ್ಮನೇ ಆಗಲಿ ಬಂದು, ಇದು ಜಲವಲ್ಲ, ಬಿಸಿಲು ಕುದುರೆ ಮಾತ್ರ, ನೀನು ನೀರೆಂದು ತಿಳಿದುದು ಭ್ರಮೆ ಮಾತ್ರ ಎಂದು ಹೇಳಿದರೆ, ನಾನಾ ಯುಕ್ತಿಗಳಿಂದ ಅದನ್ನೇ ಸಾಧಿಸಲುದ್ಯುಕ್ತನಾದರೆ, ಜಲಪಾನದಿಂದ ಸುಖಪಟ್ಟ ಆ ವ್ಯಕ್ತಿಯು, ಎಂದಿಗಾದರೂ ಆ ಮಾತುಗಳನ್ನು ವಾದಗಳನ್ನು ಅಂಗೀಕರಿಸುವನೇ? ಅಂಗೀಕರಿಸಬಹುದೇ - ಸಾಧ್ಯವೇ ಇಲ್ಲ. ಏಕೆಂದರೆ, ಸುಖವೆಂಬುದು ನೇರವಾಗಿ ಸಾಕ್ಷಿಗ್ರಾಹ್ಯವಾದುದು. ನೀನು ಸುಖವನ್ನೇ ಅನುಭವಿಸಿಲ್ಲ - ಅದೂ ಭ್ರಮೆಯೇ ಎಂದರೆ ಎಂದೂ ಒಪ್ಪುವ ಮಾತಲ್ಲ. ಅನುಭವವು ಪರಮ ಪ್ರಮಾಣವು - ಅದು ಬೇರಾವ ಪ್ರಮಾಣಗಳಿಂದ ಬಾಧಿತವಾಗತಕ್ಕದಲ್ಲ. ಸಾಕ್ಷಿ ಪರೀಕ್ಷೆಯು ಅನುಭವದಲ್ಲಿ ಪರ್ಯವಸಾನಗೊಳ್ಳುವ ಪರ್ಯಂತ ನಡೆಯುತ್ತದೆ. ಯಾವ ಜ್ಞಾನ ಸಾಧನಗಳಿಂದಾಗಲಿ ಹುಟ್ಟುವ ಜ್ಞಾನವು ಬಾಧರಹಿತ ನಿಶ್ಚಯಜ್ಞಾನವಾದರೆ, ಅದನ್ನೂ ಸಾಕ್ಷಿ ದರ್ಶನದಂತೆ ಪ್ರಮಾಣವೆಂದೇ ತಿಳಿಯಬೇಕು.[7]

7. ನ ಪರೀಕ್ಷಾನವಸ್ಥಾ ಸ್ಯಾತ್ಸಾಕ್ಷಿ ಸಿದ್ಧೇತ್ವಸಂಶಯಾತ್ ।
ಮಾನಸೇ ದರ್ಶನೇ ದೋಷಾಃ ಸ್ಯುರ್ನವೈ ಸಾಕ್ಷಿ ದರ್ಶನೇ ॥
ಸುದೃಢೋ ನಿರ್ಣಯೋ ಯತ್ರ ಜ್ಞೇಯಂ ತತ್ಸಾಕ್ಷಿ ದರ್ಶನಂ ।
ಇಚ್ಛಾ ಜ್ಞಾನಂ ಸುಖಂ ದುಃಖಂ ಭಯಾಭಯ ಕೃಪಾದಯಃ ॥
ಸಾಕ್ಷಿಸಿದ್ಧಾನಕಶ್ಚಿದ್ಧಿ ತತ್ರಸಂಶಯವಾನ್ ಕ್ವಚಿತ್ ।
ಯಕ್ಕಿಂಚಿದ್ವ್ಯಭಿಚಾರಿ ಸ್ಯಾದ್ದರ್ಶನಂ ಮಾನಸಂಹಿತತ್ ॥ (ಅನುವ್ಯಾಖ್ಯಾನ)

**ಹೀಗೆ ಜ್ಞಾನವು ಯಥಾರ್ಥ, ಸಂಶಯ ಮತ್ತು ಭ್ರಾಂತಿ ಎಂದು ಮೂರು ಪ್ರಕಾರವು.** ಯಥಾರ್ಥ ಜ್ಞಾನವೂ ಅದರ ಸಾಧನಗಳೂ ಪ್ರಮಾಣ-ಗಳೆನಿಸುವುವು. ಯಥಾರ್ಥವು ''ಕೇವಲ ಪ್ರಮಾಣ''ವೆಂದೂ, ಅದರ ಸಾಧನಗಳು ''ಅನುಪ್ರಮಾಣ''ಗಳೆಂದೂ ಕರೆಯಲ್ಪಡುತ್ತವೆ. ಸಾಕ್ಷಿ ಪ್ರತ್ಯಕ್ಷವು ಕೇವಲ ಪ್ರಮಾಣವು. ಇದನ್ನು ಅಪರೋಕ್ಷವೆಂದೂ ಕರೆಯಲಾಗುತ್ತದೆ. ಅನುಪ್ರಮಾಣಗಳಿಂದ ದೊರೆಯುವ ಜ್ಞಾನವು, ಪರೋಕ್ಷ-ಬಾಹ್ಯ-ವೃತ್ತಿ ಜ್ಞಾನವೆಂದು ವ್ಯವಹರಿಸಲ್ಪಡುತ್ತದೆ.

ಸಾಕ್ಷಿ ಪ್ರತ್ಯಕ್ಷದ ವ್ಯಾಪ್ತಿಯೂ ಯಥಾರ್ಥ್ಯವೂ ಎಲ್ಲ ಚೇತನದಲ್ಲಿ ಏಕ ಪ್ರಕಾರವಾಗಿರುವುದಿಲ್ಲ. ವ್ಯಕ್ತಿಗಳ ಜ್ಞಾನಸಾಮರ್ಥ್ಯದಲ್ಲಿರುವ ವೈವಿಧ್ಯವು ಲೋಕಾನುಭವ ಸಿದ್ಧವೇ ಆಗಿದೆ. ಅಧಮನೊಬ್ಬನು, ಎಷ್ಟು ವಿಧದಿಂದ ಯತ್ನಿಸಿದರೂ, ಉತ್ತಮನ ಜ್ಞಾನಸಾಮ್ಯವನ್ನು ಹೊಂದುವುದು ಅಶಕ್ಯ-ವೆಂಬುದೂ ಸಿದ್ಧವೇ. ಸ್ವಭಾವದಿಂದಲೇ ವಿವಿಧ ಜ್ಞಾನಶಕ್ತಿಯುಳ್ಳ ಅಸಂಖ್ಯಾತ ಜೀವರಿದ್ದರೂ, ಅವರನ್ನು ಅವರ ಸ್ವಭಾವಸಿದ್ಧ ಜ್ಞಾನಸಾಮರ್ಥ್ಯದ ವಿವಕ್ಷೆಯಿಂದ, ನಾಲ್ಕು ದೊಡ್ಡ ಪಂಗಡಗಳನ್ನಾಗಿ ವಿಭಾಗಿಸಿ, ಅವರ ಜ್ಞಾನದ ವ್ಯಾಪ್ತಿ ಮತ್ತು ಸ್ವರೂಪವನ್ನು ನಿರೂಪಿಸುವ ಕ್ರಮವನ್ನು ಶಾಸ್ತ್ರಗಳಲ್ಲಿ ಕಾಣುತ್ತೇವೆ. ಈಶ, ಲಕ್ಷ್ಮೀ, ಯೋಗಿ, ಅಯೋಗಿಗಳೆಂಬುದೇ ಈ ನಾಲ್ಕು ವಿಭಾಗಗಳು. ಇವುಗಳಲ್ಲಿ ಈಶ - ಲಕ್ಷ್ಮೀ, ಇವರ ಜ್ಞಾನವು ಸರ್ವದಾ ಯಥಾರ್ಥವಾಗಿರುವುದು - ಸಂಶಯ ಭ್ರಾಂತಿಗಳು ಅವರಿಗೆ ಸರ್ವಥಾ ಇಲ್ಲ. ಅವರು ಸರ್ವದಾ, ಸರ್ವತ್ರ (ಅವತಾರಗಳಲ್ಲಿ ಸಹ) ಪ್ರಾಕೃತ ದೇಹೇಂದ್ರಿಯಾದಿಗಳಿಂದ ರಹಿತರು. ಸ್ವರೂಪದಿಂದಲೇ ಸರ್ವವನ್ನೂ, ಚೇತನಾ ಚೇತನಾತ್ಮಕ ವಿಶ್ವವನ್ನು ಅಶೇಷ ಸೂಕ್ಷ್ಮ ವಿಶೇಷಗಳೊಂದಿಗೆ ಅವರ ಜ್ಞಾನವು ಸರ್ವದಾ ಗ್ರಹಿಸಿರುತ್ತದೆ. ಅವರ ಜ್ಞಾನವು ನಿತ್ಯ-ನಿರ್ವಿಕಾರ-ಯಥಾರ್ಥ-ಆದ್ಯಂತರಹಿತ-ಅಪಾರ ವ್ಯಾಪ್ತಿಯುಳ್ಳದ್ದು. ಇವರೀರ್ವರ ಮಧ್ಯೆ, ಲಕ್ಷ್ಮೀ ಜ್ಞಾನವು ಈಶಾಧೀನವಾದುದು ಮತ್ತು ಈಶನನ್ನು ಹೊರತು, ಅನ್ಯತ್ರ, ಆಲೋಚನೆಯ ಅವಶ್ಯಕತೆಯೂ ಇಲ್ಲದೇ ಸರ್ವದಾ ಪೂರ್ಣ-ವಾಗಿರುವುದು. **ಈಶಜ್ಞಾನವು, ಸ್ವತಂತ್ರ ಮತ್ತು ಪೂರ್ಣ. ಯೋಗಿ-ಅಯೋಗಿಗಳ ಜ್ಞಾನವೂ ಈಶಾಧೀನವೇ.** ಯೋಗಿಜ್ಞಾನವು ಯಥಾರ್ಥ ಮತ್ತು

ದೇಶಾಂತರ-ಕಾಲಾಂತರ ವಸ್ತು ವಿಷಯಗಳನ್ನೂ ಆಲೋಚನ ಮಾತ್ರದಿಂದ ತಿಳಿಯಬಲ್ಲದು. ಅಯೋಗಿಗಳು ಆಯಾ ದೇಶ ಕಾಲಗಳಲ್ಲಿರುವ ವಸ್ತು ವಿಷಯಗಳನ್ನು ತಿಳಿಯಬಲ್ಲರು. ಯೋಗಿಗಳು, ಋಜು - ತಾತ್ವಿಕ - ಅತಾತ್ವಿಕರೆಂಬ ಪ್ರಭೇದಗಳುಳ್ಳವರು. ಅಯೋಗಿಗಳು, ಮುಕ್ತಿಯೋಗ್ಯರು - ನಿತ್ಯಸಂಸಾರಿಗಳು - ತಮೋಯೋಗ್ಯರೆಂದು ತ್ರಿವಿಧವಾಗಿರುವರು. ಇವರ ಜ್ಞಾನವು ಆದ್ಯಂತವುಳ್ಳದ್ದು (ಉತ್ಪತ್ತಿ - ನಾಶಗಳುಳ್ಳದ್ದು) ಮತ್ತು ಅಲ್ಪವ್ಯಾಪ್ತಿ-ಯುಳ್ಳದ್ದು. ಸಾಕ್ಷಿಯಿಂದ ಗ್ರಾಹ್ಯವಾದ ವಸ್ತುವಿಷಯಗಳೂ ಅಲ್ಪವೇ. ಯಥಾರ್ಥ - ಅಯಥಾರ್ಥ, ಉಭಯರೂಪವೂ ಆಗಿರುತ್ತದೆ. ಈ ತ್ರಿವಿಧ ಅಯೋಗಿಗಳ ಸ್ವಭಾವಸಿದ್ಧ ಜ್ಞಾನವು (ಸ್ವರೂಪ ಜ್ಞಾನವು), ಕ್ರಮವಾಗಿ, **ಯಥಾರ್ಥ - ಮಿಶ್ರ - ಅಯಥಾರ್ಥಗಳಾಗಿರುತ್ತವೆ. ಅವರ ಬಾಹ್ಯಜ್ಞಾನವು ಮಿಶ್ರ-ಸ್ವರೂಪದ್ದಾಗಿರುತ್ತದೆ.** ಆದರೆ ದುಃಖಾದ್ಯನುಭವ ವಿಷಯದಲ್ಲಿ ಸತ್ಯವೇ (ಯಥಾರ್ಥವೇ) ಆಗಿರುತ್ತದೆ. ಜ್ಞಾನ ಮತ್ತು ಅದರ ಪ್ರಾಮಾಣ್ಯವನ್ನು ಕುರಿತು ಪ್ರವೃತ್ತವಾಗಿರುವ ವಿಸ್ತಾರ ಗ್ರಂಥವನ್ನು ಗುರುಮುಖೇನ ಅಭ್ಯಾಸ ಮಾಡಿ ತಿಳಿಯಬೇಕು. ವಿಷಯದ ಗಹನತೆಯಿಂದಲೂ ಗ್ರಂಥವಿಸ್ತಾರ ಭಯದಿಂದಲೂ ಇಲ್ಲಿ ಅತಿ ಸಂಕೋಚವಾಗಿ ನಿರೂಪಿಸಲಾಗಿದೆ. ಆಳವಾಗಿ ಅಭ್ಯಸಿಸಬೇಕೆಂಬ ಉತ್ಸಾಹವು ಓದುಗರಲ್ಲಿ ಉಂಟಾಗಬಹುದೆಂಬ ವಿಶ್ವಾಸವಿದೆ.

ಸಂಸಾರದಲ್ಲಿ ಸುತ್ತುವ ಜೀವಚೇತನನ ಸಾಕ್ಷಿಜ್ಞಾನವು, ಸುಖ - ದುಃಖ, ಕಾಲ - ದೇಶ, ಪ್ರಾಮಾಣ್ಯ ಮೊದಲಾದ ಕೆಲವನ್ನು ಮಾತ್ರ ಗ್ರಹಿಸುವ ಸಾಮರ್ಥ್ಯವುಳ್ಳದ್ದಾಗಿರುತ್ತದೆ. ಮುಕ್ತನಾದನಂತರ (ಪ್ರಾಕೃತ ದೇಹಾದಿಗಳ ಸಂಬಂಧವೇ ಇಲ್ಲದಂತಾಗಲು) ಸರ್ವವನ್ನೂ ತನ್ನ ಸ್ವರೂಪೇಂದ್ರಿಯಗಳಿಂದಲೇ ಗ್ರಹಿಸಲು ಶಕ್ತನಾಗುತ್ತಾನೆ. ಆದ್ದರಿಂದ ಸಂಸಾರಿ ಜೀವರಿಗೆ, ಸುಖಾದಿ ಸಾಕ್ಷಿಗ್ರಾಹ್ಯ ವಿಷಯಗಳನ್ನು ಬಿಟ್ಟು ಇತರ ಸರ್ವವಿಷಯಕ ಜ್ಞಾನವು ಮನ ಮೊದಲಾದ ಉಪಕರಣಗಳ ದ್ವಾರವೇ ಲಭಿಸಬೇಕು-ಅನ್ಯಮಾರ್ಗವಿಲ್ಲ. ಹೀಗಿರಲು ಇಂದ್ರಿಯಗಳಿಂದ ದೊರೆಯುವ ಜ್ಞಾನವನ್ನೇ ಸತ್ಯವೋ ಅಲ್ಲವೋ ಎಂದು ಶಂಕಿಸಿ ತಿರಸ್ಕರಿಸುವುದಾದರೆ, ಜ್ಞಾನಾರ್ಥಿಗೆ ಬೇರಾವ ಸಹಾಯವಿದೆ? ಸೂಕ್ಷ್ಮದರ್ಶಕ, ದೂರದರ್ಶಕ ಮೊದಲಾದ ಯಂತ್ರೋಪಕರಣಗಳು,

ಚಕ್ಷುರಿಂದ್ರಿಯಕ್ಕೆ ಸಹಾಯಕಗಳು (aids) ಮಾತ್ರವಲ್ಲದೇ, ಕಣ್ಣುಗಳನ್ನೇ (ನೋಡುವ ಶಕ್ತಿಯನ್ನೇ) ನಂಬದಿದ್ದರೆ, ಈ ಯಂತ್ರೋಪಕರಣಗಳು ಏನು ಸಾಧಿಸಬಲ್ಲವು? ಇಂದ್ರಿಯಾರ್ಥಗಳ ಯೋಗ್ಯ ಸನ್ನಿಕರ್ಷದಿಂದ (ಅವು ನಿರ್ದುಷ್ಟವಾಗಿದ್ದರೆ) ಅವುಗಳಿಂದ ದೊರೆಯುವ ಜ್ಞಾನವು (ಇಂದ್ರಿಯಜನ್ಯ ಜ್ಞಾನವು) ಯಥಾರ್ಥವೇ ಆಗಿರುತ್ತದೆ. ಜ್ಞಾನಗೋಚರವಾದುದು ಸತ್ಯವೇ ಆಗಿರುವುದರಿಂದ, ಜ್ಞಾನಕ್ಕೆ ಪ್ರಾಮಾಣ್ಯವು ಸ್ವತಃ, ಅಪ್ರಾಮಾಣ್ಯವು ಪರತಃ (ಅನ್ಯಕಾರಣಗಳಿಂದ) ಎಂಬ ನಿಯಮವನ್ನು ಯಾವ ವಿಚಾರವಂತನಾದರೂ ಅಂಗೀಕರಿಸಲೇಬೇಕು. ಈ ವಿಷಯದಲ್ಲಿ - Sir Oliver Lodge (ಆಲಿವರ್ ಲಾಡ್ಜ್) ಎಂಬ ತತ್ವಜ್ಞಾನಿಯು (Sir Philosopher) ಹೀಗೆಂದಿರುವನು :- "The senses give us true information so far as it goes; they do not deceive us unless we maltreat them and even then they give us true indications and a true report about that which is really presented to them. It is sometimes said that the senses are deceptive but like all other physical instruments, the deception is not in them but in our reading of their indications." ಎಂದರೆ-ನಮ್ಮ ಇಂದ್ರಿಯಗಳು ತಮ್ಮಿಂದ ಗ್ರಹಿಸಲಾಗದ ವಿಷಯವನ್ನು ನಮಗೆ (ಸಾಕ್ಷಿಗೆ) ಸತ್ಯವಾಗಿಯೇ (ಇದ್ದಂತೆಯೇ) ತಿಳಿಸುತ್ತವೆ; ನಾವು ಅವುಗಳನ್ನು ದುರುಪಯೋಗಪಡಿಸಿ-ಕೊಳ್ಳದಿದ್ದರೆ, ಅವು ನಮ್ಮನ್ನು ವಂಚಿಸುವುದಿಲ್ಲ. ಆಗಲೂ ಸಹ ಅವು, ನಿಜವಾಗಿಯೂ ತಮಗೆ ಅಭಿಮುಖವಾಗಿರುವ ವಸ್ತುವಿಷಯಕವಾದ ಸತ್ಯಸೂಚನೆಗಳನ್ನು ನೀಡುತ್ತವೆ. ಕೆಲವು ಸಂದರ್ಭಗಳಲ್ಲಿ ಇಂದ್ರಿಯಗಳು ವಂಚಿಸುತ್ತವೆಂದು ಹೇಳಲಾಗುತ್ತದೆ; ಆದರೆ ವಂಚಕತ್ವವು ಅವುಗಳಲ್ಲಿಲ್ಲ - ಆ ಸೂಚನೆಗಳನ್ನು ನಾವು (ಕಾರಣಾಂತರಗಳಿಂದ ತಪ್ಪಾಗಿ) ಅರ್ಥ-ಮಾಡಿಕೊಳ್ಳವುದರಲ್ಲಿದೆ.'' ಪ್ರತ್ಯಕ್ಷವು ಪ್ರಮಾಣವೆಂಬಲ್ಲಿ ಈ ಪಾಶ್ಚಾತ್ಯ ತತ್ವಜ್ಞಾನಿಯ ಅಭಿಪ್ರಾಯವು ಗಮನೀಯವಾಗಿದೆ. ಪ್ರತ್ಯಕ್ಷ ಗೋಚರ-ವಾದ ಜಗತ್ತನ್ನು ಮಿಥ್ಯೆಯೆಂದೇ ವಾದಿಸುವ, ವೇದಾಂತಿಗಳೆಂದು ಹೇಳಿಕೊಳ್ಳುವ ಒಂದು ಪಂಗಡದವರೂ ನಮ್ಮಲ್ಲಿ (ಭಾರತೀಯರಲ್ಲಿ)

ಇರುವರು. ಮಾಯವಾದವೆಂಬ ಇವರ ವಾದವನ್ನು ವಿಮರ್ಶಿಸುವ ಪ್ರಸಂಗದಲ್ಲಿ ಈ ಪ್ರಮೇಯವನ್ನು ವಿಸ್ತರಿಸಲಾಗುತ್ತದೆ.

ಏವಂಚ, ಜ್ಞಾನಸಾಧನಗಳಿಂದ (ಇಂದ್ರಿಯ ಪ್ರತ್ಯಕ್ಷಾದಿಗಳ ದ್ವಾರಾ) ಹುಟ್ಟುವ ಜ್ಞಾನದ ಪ್ರಾಮಾಣ್ಯವನ್ನೂ ಸಾಕ್ಷಿಯೇ ಗ್ರಹಿಸುತ್ತದೆಂಬುದನ್ನೂ (ಸಂಶಯಗ್ರಸ್ತ ಜ್ಞಾನವನ್ನು ಪರೀಕ್ಷೆಗೊಳಪಡಿಸಿಯೇ ಪ್ರಾಮಾಣ್ಯವನ್ನು ಗ್ರಹಿಸುತ್ತದೆಂಬುದನ್ನೂ) ಮತ್ತು ಜ್ಞಾನದ ಪ್ರಾಮಾಣ್ಯವು ಸ್ವತಃ - ಅಪ್ರಾಮಾಣ್ಯವು ಪರತಃ, ಎಂಬ ನಿಯಮವನ್ನೂ ನೆನೆಪಿನಲ್ಲಿಟ್ಟು ಅನುಪ್ರಮಾಣಗಳು (ಜ್ಞಾನ-ಸಾಧನಗಳು) ಯಾವುವು ಮತ್ತು ಎಷ್ಟು ಪ್ರಕಾರವಾಗಿವೆ, ಎಂಬುದನ್ನು ವಿಮರ್ಶಿಸಿ ನಿರ್ಧರಿಸಿಕೊಳ್ಳೋಣ.

## ಪರಿಚ್ಛೇದ ೩

## ಅನುಪ್ರಮಾಣಗಳು

ಈ ಹಿಂದೆ ನಿರೂಪಿಸಿದಂತೆ ಸಾಕ್ಷಿಪ್ರತ್ಯಕ್ಷವು ಕೇವಲ ಪ್ರಮಾಣವು-ಸದಾ ಯಥಾರ್ಥವಾಗಿರುವುದು. ಮನ ಆದಿ ಇಂದ್ರಿಯಗಳ ದ್ವಾರಾ ಆತ್ಮನಿಗುಂಟಾಗುವ ಜ್ಞಾನವು ''ಬಾಹ್ಯ ಪ್ರತ್ಯಕ್ಷವು''. ತಮಗೆ ಅಭಿಮುಖ-ವಾಗಿರುವ ವಸ್ತುಗಳನ್ನು ಗ್ರಹಿಸುವುದು ಇಂದ್ರಿಯಗಳ ಸ್ವಾಭಾವಿಕ ಶಕ್ತಿ. ತನ್ನೊಂದಿಗೆ ಸಂಪರ್ಕಹೊಂದಿದ ಚಕ್ಷುರಾದಿಗಳು ಗ್ರಹಿಸಿದ ವಿಷಯಗಳನ್ನು, ಆತ್ಮಸಂಪರ್ಕವುಳ್ಳ ತಾನು, ಆತ್ಮನಲ್ಲಿ ಮಂಡಿಸುವುದು ಮನಸ್ಸಿನ ವ್ಯಾಪಾರ. ಇದೂ ಬಾಹ್ಯ ಪ್ರತ್ಯಕ್ಷವೇ. ತನ್ನಲ್ಲಿ ಕೂಡಿಬಿದ್ದಿರುವ ಪೂರ್ವ ಸಂಸ್ಕಾರಗಳಲ್ಲಿ, ಕಾಲಕಾಲಕ್ಕೆ ಉದ್ಬೋಧಗೊಂಡವುಗಳನ್ನು ಆತ್ಮನಿಗೆ ನಿವೇದಿಸುವುದೂ ಮನಸ್ಸಿನ ವ್ಯಾಪಾರವೇ - ಪೂರ್ವಾನುಭವಗಳನ್ನು ಸಂಸ್ಕಾರ ರೂಪದಿಂದ (effects and impressions of past experiences) ತನ್ನಲ್ಲಿ ಉಳಿಸಿಕೊಳ್ಳುವುದು ಅದರ ಸ್ವಭಾವ ಗುಣ. ಪೂರ್ವಾನುಭವಗಳನ್ನು ಆತ್ಮನೆದುರು ತಂದೊಡ್ಡುವು-ದನ್ನು - ಸ್ಮರಣೆಯನ್ನುಂಟುಮಾಡುವುದನ್ನು, ಮಾನಸ ಪ್ರತ್ಯಕ್ಷವೆಂದೂ ಕರೆಯಲಾಗುತ್ತದೆ. ಮನಸ್ಸಿನಿಂದಾಗುವ ಇತರ ಕಾರ್ಯವಿಶೇಷಗಳೂ ಇವೆ.

ಇದನ್ನು ಮಾಡುವೆನು-ಬಿಡುವೆನು ಇತ್ಯಾಕಾರದ (ಸಂಕಲ್ಪ-ವಿಕಲ್ಪ) ವ್ಯಾಪಾರವು (ಅಂತಃಕರಣ ವೃತ್ತಿಯು-ಮನಸ್ಸಿನ ಕಾರ್ಯವು) ಮನಸ್ಸು; ನಾನಾ ಪ್ರಕಾರದ ವಿಮರ್ಶೆಗಳನ್ನು ನಡೆಸಿ, ಸರಿ - ತಪ್ಪುಗಳನ್ನು, ಯೋಗ್ಯ-ಅಯೋಗ್ಯಗಳನ್ನು, ಹಿತ - ಅಹಿತಗಳನ್ನು ನಿರ್ಧರಿಸುವ ಕಾರ್ಯವು (ಅಂತಃಕರಣ ವೃತ್ತಿಯು) ಬುದ್ಧಿ; ನಾನು - ನನ್ನದೆಂಬ ಭಾವನೆಗಳಿಂದ ಸ್ವಾತಂತ್ರ್ಯ - ಸ್ವಾಮ್ಯಗಳನ್ನು ತನ್ನಲ್ಲಿ ತಿಳಿಯುವ ಪ್ರವೃತ್ತಿಯು ಅಹಂಕಾರ; ಸ್ಮರಣೆಯನ್ನುಂಟುಮಾಡುವುದು ಚಿತ್ತ; ಬಹು ಸ್ಮರಣೆಯನ್ನುಂಟು ಮಾಡುವುದು ಚೇತನ; ನಿರಂತರ ಸ್ಮರಣೆ-ಯಿಂದ ಧ್ಯಾನವೂ, ಅನ್ಯ ಸಕಲ ವೃತ್ತಿಗಳನ್ನು ತೊರೆದು ಧ್ಯಾನವಿಷಯವನ್ನು ಬಹುಕಾಲ ಧಾರಣೆಮಾಡುವ ಸಮಾಧಿಯೂ, ಚಿತ್ತ-ಚೇತನಗಳೆಂದು ಕರೆಯಲಾಗುವ ಮನೋವೃತ್ತಿಯಿಂದಲೇ ಆಗುವುವು. ಈ ಪ್ರಕಾರದ ತನ್ನ ಮುಖ್ಯ ಪಂಚವೃತ್ತಿಗಳಿಂದ ಆತ್ಮನಿಗೆ ಸಹಾಯ ಸಾಮಗ್ರಿಯಾಗಿರುವ ಮನಸ್ಸು, ಇಂದ್ರಿಯಗಳಲ್ಲಿ ಪ್ರಧಾನವಾದುದು.

ಚಕ್ಷುರಾದಿ ಇಂದ್ರಿಯ ಪ್ರತ್ಯಕ್ಷದಿಂದ ವರ್ತಮಾನಕಾಲದಲ್ಲಿರುವ ವಸ್ತುಜ್ಞಾನ ಮಾತ್ರ ಲಭಿಸುವುದು. ಪ್ರತ್ಯಕ್ಷ ಗೋಚರವಲ್ಲದ ಅನೇಕ ವಸ್ತು-ವಿಷಯಗಳನ್ನು ಅನುಮಾನದಿಂದ (ತರ್ಕದಿಂದ) ತಿಳಿಯುತ್ತೇವೆ. ದೂರದಲ್ಲಿ ಹೊಗೆಯನ್ನು ಕಂಡು, ಹೊಗೆ ಇದ್ದಲ್ಲೆಲ್ಲಾ ಬೆಂಕಿ ಇರುವುದೆಂಬ ವ್ಯಾಪ್ತಿ ಜ್ಞಾನದಿಂದ, ಅಲ್ಲಿರುವ ಬೆಂಕಿಯನ್ನು ತಿಳಿಯುತ್ತೇವೆ. ಇಂದು ನದೀ ಪ್ರವಾಹವನ್ನು ಕಂಡು, ನದಿಯು ಹರಿದು ಬರುವ ಮೇಲಿನ ಪ್ರದೇಶದಲ್ಲಿ ನಿನ್ನೆ ಮಳೆಯಾಗಿರುವುದನ್ನು ತಿಳಿಯುವಂತೆ, ಭೂತಕಾಲದ ವಸ್ತುಗಳನ್ನೂ ಅನುಮಾನದಿಂದ ತಿಳಿಯುತ್ತೇವೆ. ಬಿಸಿಲತಾಪ ಅಧಿಕವಾದ್ದನ್ನು ಈಗ ತಿಳಿದು ಮುಂದೆ ಮಳೆಯಾಗುವುದೆಂಬುದನ್ನು ತಿಳಿಯುವಂತೆ, ಅನೇಕ ಭವಿಷ್ಯತ್ಕಾಲದ ವಿಷಯಗಳನ್ನೂ ಅನುಮಾನದಿಂದ ತಿಳಿಯುತ್ತೇವೆ. **ಹೀಗೆ ಅನುಮಾನದಿಂದ ಕಾಲತ್ರಯಗಳ ವಸ್ತು-ವಿಷಯಗಳನ್ನು ತಿಳಿಯಬಹುದು.** ಅನುಮಾನ-ದಿಂದಲೂ ತಿಳಿಯಲು ಬಾರದ ಅತಿಶಯಗಳನ್ನು (ಇಂದ್ರಿಯಾತೀತ ವಸ್ತುಗಳನ್ನು) ಮನಸ್ಸಿನ ದ್ವಾರಾ (ಬುದ್ಧಿ ಮೊದಲಾದ ಮನೋ-ವ್ಯಾಪಾರಗಳಿಂದ) ಆಗಮಗಳಿಂದ ತಿಳಿಯಬಹುದು. ಆಗಮವು ಶಬ್ದಾತ್ಮಕ,

ಆಪ್ತವಾಕ್ಯಾದಿ ಶಬ್ದಗಳಿಂದ, ಪ್ರತ್ಯಕ್ಷ-ಅನುಮಾನಗಳಿಂದ ತಿಳಿಯಲಾಗದ ಎಷ್ಟೋ ವಿಷಯಗಳ ಜ್ಞಾನವಾಗುತ್ತದೆಂಬುದು, ಲೋಕಾನುಭವಸಿದ್ಧ. ಇದು ಶ್ರವಣೇಂದ್ರಿಯ ಪ್ರತ್ಯಕ್ಷವೆಂದು ಭ್ರಮಿಸಬಾರದು. ಶ್ರವಣ ಪ್ರತ್ಯಕ್ಷವು ಅದರಿಂದ ಗ್ರಾಹ್ಯವಾದ ಶಬ್ದ ಜ್ಞಾನವನ್ನು ಮಾತ್ರ ಉಂಟುಮಾಡುತ್ತದೆ. ಆಪ್ತವಾಕ್ಯಾದಿಗಳಿಂದ ಆಗುವ ಜ್ಞಾನವು ಶಬ್ದ ಜ್ಞಾನವಲ್ಲ - ಶಬ್ದ ಬೋಧ್ಯ ವಸ್ತುವಿಷಯಕ ಜ್ಞಾನ. ಹೀಗೆ ಪ್ರತ್ಯಕ್ಷ - ಅನುಮಾನ - ಆಗಮಗಳು ಜ್ಞಾನಸಾಧನಗಳಾದ್ದರಿಂದ ಅನುಪ್ರಮಾಣಗಳೆಂದು ಕರೆಯಲ್ಪಡುತ್ತವೆ. ಅಭಾವ - ಅರ್ಥಾಪತ್ತಿ - ಪರಿಶೇಷ ಇತ್ಯಾದಿ ಇನ್ನೂ ಕೆಲವು ಜ್ಞಾನಸಾಧನ-ಗಳಿರುವುವೆಂದು ಕೆಲವು ಸಿದ್ಧಾಂತಿಗಳು ನಿರೂಪಿಸುತ್ತಾರೆ. ಅವುಗಳ ವಿಮರ್ಶೆಯು ಮುಂದೆ ಪ್ರಸಕ್ತವಾಗಲಿದೆ. ಪ್ರತ್ಯಕ್ಷಾದಿ ಮೇಲಿನ ಮೂರರಲ್ಲಿ, ಇತರ ಎಲ್ಲವುಗಳ ಸಮಾವೇಶವಾಗುವುದೆಂದು ವಿಮರ್ಶೆಯಿಂದ ಸಿದ್ಧವಾಗುತ್ತದೆ.

ಈ ಪ್ರಕಾರದ ಅನುಪ್ರಮಾಣದ ಅವಶ್ಯಕತೆಯು ಸಂಸಾರದಲ್ಲಿರುವ ಜೀವನಿಗೆ ಮಾತ್ರ-ಮುಕ್ತನಿಗಲ್ಲ. ಈ ಪ್ರಾಕೃತ ದೇಹಾದಿಗಳ ಬಂಧವನ್ನು ತೊಡೆದುಹಾಕಿ, ನಿತ್ಯಸ್ವರೂಪದಿಂದ ಸ್ಥಿತನಾದ ಮುಕ್ತಚೇತನನಿಗೆ ಸರ್ವ-ವಿಷಯಕ ಜ್ಞಾನವೂ ಕೇವಲ ಸಾಕ್ಷಿ ಪ್ರತ್ಯಕ್ಷದಿಂದಲೇ - ಸ್ವರೂಪದಲ್ಲಿರುವ ಚಿನ್ಮಯ (ಜ್ಞಾನಾತ್ಮಕ) ಇಂದ್ರಿಯಗಳಿಂದಲೇ ದೊರೆಯುತ್ತದೆ. ನಿಯಮೇನ ಯಥಾರ್ಥವನ್ನೇ ಗ್ರಹಿಸುವ ಸಾಕ್ಷಿ ಪ್ರತ್ಯಕ್ಷವನ್ನು (ಆತ್ಮನ ಅನುಭವವನ್ನು) ಅನುಪ್ರಮಾಣಗಳಲ್ಲಿ ಸೇರಿಸಲಾಗುವುದಿಲ್ಲ. ಏಕೆಂದರೆ ಅನುಪ್ರಮಾಣಗಳಿಂದ (ಜ್ಞಾನಸಾಧನಗಳ ದ್ವಾರಾ) ದೊರೆಯುವ ಜ್ಞಾನವು ತಪ್ಪದೇ ಯಥಾರ್ಥ-ವಾಗಿರುವುದೆಂಬ ನಿಯಮವಿಲ್ಲ. ಅನುಪ್ರಮಾಣಗಳಲ್ಲಿ ಅಪ್ರಾಮಾಣ್ಯಕ್ಕೆ ಕಾರಣಗಳಾಗುವ ದೋಷಗಳನ್ನೂ, ಒಂದಕ್ಕಿಂತ ಹೆಚ್ಚು ಅನುಪ್ರಮಾಣಗಳಿಂದ ತಿಳಿಯಬಹುದಾದ ವಸ್ತುವಿಷಯಕ ಜ್ಞಾನದ ಯಾಥಾರ್ಥ್ಯವನ್ನು ನಿರ್ಣಯಿಸಿ ಕೊಳ್ಳಲು ಅವಶ್ಯಕವಾದ ಪ್ರಮಾಣಗಳ ಬಲಾಬಲಗಳನ್ನೂ (ಪ್ರಾಬಲ್ಯ - ದೌರ್ಬಲ್ಯಗಳನ್ನೂ) ನಿಶ್ಚಯಿಸಿಕೊಳ್ಳುವುದೂ ಅತ್ಯವಶ್ಯಕ. ಈ ವಿಷಯಗಳನ್ನು ಮುಂದಿನ ಪರಿಚ್ಛೇದದಲ್ಲಿ ವಿವೇಚಿಸಲಾಗುವುದು.

**ಪ್ರತ್ಯಕ್ಷ, ಅನುಮಾನ, ಆಗಮ, ಉಪಮಾನ, ಅರ್ಥಾಪತ್ತಿ, ಅಭಾವ, ಐತಿಹ್ಯ, ಸಂಭವ, ಪರಿಶೇಷಗಳೆಂಬ ಒಂಭತ್ತು, ಜ್ಞಾನಸಾಧನ ಪ್ರಮಾಣಗಳೆಂದು ಪರಿಗಣಿಸಲಾಗಿವೆ.** ಪ್ರಾಚೀನ ದರ್ಶನಕಾರರಲ್ಲಿ ಕೆಲವರು ಈ ಎಲ್ಲವನ್ನೂ, ಇತರರು ಇವುಗಳಲ್ಲಿ ಹೆಚ್ಚು ಕಡಿಮೆ ಸಂಖ್ಯೆಯ ಕೆಲವನ್ನು ಮಾತ್ರ ಅಂಗೀಕರಿಸಿರುವರೆಂದೂ ಕಂಡುಬರುತ್ತದೆ. ಚಾರ್ವಾಕರು ಪ್ರತ್ಯಕ್ಷವನ್ನು ಮಾತ್ರ ಪ್ರಮಾಣವೆಂದು ತಿಳಿಯುವರು; ಬೌದ್ಧರೂ ಜೈನರೂ ಪ್ರತ್ಯಕ್ಷ ಮತ್ತು ಅನುಮಾನಗಳನ್ನು ಅಂಗೀಕರಿಸಿ ತಮ್ಮ ಮತ ತತ್ವಗಳನ್ನು ಏರ್ಪಡಿಸಿ- ಕೊಂಡಿರುವರು. ಷಡ್ದರ್ಶನಗಳ ಮಧ್ಯೆ (ರತ್ನ-೧ ಪುಟ....) ವೈಶೇಷಿಕರು, ಪ್ರತ್ಯಕ್ಷ ಅನುಮಾನಗಳನ್ನೂ, ಸಾಂಖ್ಯರು ಇವುಗಳೊಂದಿಗೆ ಆಗಮವನ್ನೂ ಅಂಗೀಕರಿಸಿರುವರು; ನ್ಯಾಯ ದರ್ಶನಕಾರರು (ನೈಯ್ಯಾಯಿಕರು- ತಾರ್ಕಿಕರು) ಈ ಮೂರರೊಂದಿಗೆ ಉಪಮಾನವನ್ನೂ ಗ್ರಹಿಸುತ್ತಾರೆ; ಪೂರ್ವ ಮೀಮಾಂಸಾದರ್ಶನವೂ ಆಗಮ ಪ್ರಾಮಾಣ್ಯವನ್ನು ಅಂಗೀಕರಿಸಿ, ಧರ್ಮಾ- ಧರ್ಮಗಳು ವೇದಗಳಿಂದಲೇ ತಿಳಿಯಲ್ಪಡಬೇಕೆಂದೂ, ವೇದಗಳು ಪುರುಷ ನಿರ್ಮಿತಗಳಲ್ಲವಾದ್ದರಿಂದ (ಅಪೌರುಷೇಯಗಳಾದ್ದರಿಂದ) ನಿರ್ದುಷ್ಟವಾದ ಸ್ವತಃ ಪ್ರಮಾಣಗಳೆಂದೂ ತಿಳಿಯುತ್ತಾರೆ. ಉತ್ತರ ಮೀಮಾಂಸಾ ದರ್ಶನವು ಭಾಷ್ಯಕಾರರ ವ್ಯಾಖ್ಯಾನ ಪ್ರಭೇದಗಳಿಂದ ನಾನಾಪ್ರಕಾರವಾಗಿದೆ. ಅವುಗಳಲ್ಲಿ ಅದ್ವೈತ - ವಿಶಿಷ್ಟಾದ್ವೈತ - ದ್ವೈತಗಳೆಂಬ ಮೂರು, ಪ್ರಧಾನವಾದವುಗಳು. ಅದ್ವೈತಿಗಳು, ಪ್ರತ್ಯಕ್ಷ - ಅನುಮಾನ - ಉಪಮಾನ - ಆಗಮ - ಅರ್ಥಾಪತ್ತಿ - ಅನುಪಲಬ್ಧಿಗಳೆಂದು, ಪ್ರಮಾಣಗಳು ಆರು ವಿಧವೆಂದು ಹೇಳುವರು. ವಿಶಿಷ್ಟಾದ್ವೈತಿಗಳು, ಪ್ರತ್ಯಕ್ಷ - ಅನುಮಾನ - ಶಬ್ದಗಳೆಂಬ ಮೂರೇ ಜ್ಞಾನ- ಕರಣಗಳೆನ್ನುತ್ತಾರೆ. ದ್ವೈತಿಗಳೇ ತತ್ವವಾದಿಗಳೆಂಬುವರು. ಇವರು ಪ್ರತ್ಯಕ್ಷ - ಅನುಮಾನ - ಆಗಮಗಳೆಂಬ ಮೂರು ಮಾತ್ರ, ಯಥಾರ್ಥಜ್ಞಾನ ಸಾಧಕ (ಅನು) ಪ್ರಮಾಣಗಳೆನ್ನುವರು. ಇವು ಮೂರರ ವಿನಹ ಅನ್ಯ ಸ್ವತಂತ್ರ ಸಾಧನಗಳಿಲ್ಲವೆನ್ನುತ್ತಾರೆ. ಮತ್ತು ಆಗಮವು ಪೌರುಷೇಯ - ಅಪೌರುಷೇಯ ಭೇದದಿಂದ ಎರಡು ವಿಧವೆಂದೂ ಹೇಳುತ್ತಾರೆ. ಭಾರತ - ಭಾಗವತ - ರಾಮಾಯಣ - ಪಂಚರಾತ್ರಗಳು ಪೌರುಷೇಯಗಳಾದರೂ (ಪುರುಷ ನಿರ್ಮಿತ) ಪ್ರಾಮಾಣ್ಯ ವಿಷಯದಲ್ಲಿ ವೇದತುಲ್ಯವೆನ್ನುವರು.

ವೇದಗಳಾದರೋ (ಋಕ್ - ಯಜು - ಸಾಮ - ಅಥರ್ವಗಳೆಂಬ ವಿಭಾಗವುಳ್ಳ ವೇದಗಳು) ಅಪೌರುಷೇಯಗಳೆಂದೂ, ಆದ್ದರಿಂದಲೇ ನಿರ್ದುಷ್ಟ ಪ್ರಮಾಣ-ಗಳೆಂದೂ ಹೇಳುವರು. ಈ ಗ್ರಂಥದ ಮುಂದಿನ ೨ನೇ ಭಾಗದಲ್ಲಿ (ಆಗಮ-ಪ್ರಾಮಾಣ್ಯ ಸಮರ್ಥನೆಯ ಭಾಗದಲ್ಲಿ) ತತ್ವವಾದಿಗಳ ಈ ನಿರ್ಣಯವನ್ನು ವಿಸ್ತಾರವಾಗಿ ವಿಮರ್ಶಿಸಲಾಗುತ್ತದೆ.

ಪ್ರತ್ಯಕ್ಷಾದಿಗಳಿಂದ ಜ್ಞಾನ ಉಂಟಾಗುವ ಪ್ರಕಾರವನ್ನು ತಿಳಿಯುವುದರಿಂದ ಉಪಮಾನ - ಅರ್ಥಾಪತ್ತಿ ಮೊದಲಾದವು ಪ್ರತ್ಯಕ್ಷ - ಅನುಮಾನ - ಆಗಮಗಳಲ್ಲಿ ಸಮಾವೇಶಗೊಳ್ಳುವುವೋ (ಅಂತರ್ಭಾವಗೊಳ್ಳುವುವೋ) ಅಥವಾ ಪ್ರತ್ಯೇಕ ಪ್ರಾಮಾಣಗಳೆಂದು ಅಂಗೀಕರಿಸಬೇಕೋ ಎಂಬುದನ್ನು ನಿರ್ಣಯಿಸಬಹುದು.

೧. **ಪ್ರತ್ಯಕ್ಷ** :- ದೋಷವಿಲ್ಲದ ಇಂದ್ರಿಯವು ಅಕ್ಷವೆನಿಸುವುದು. ಚಕ್ಷು (ನೋಡುವ ಇಂದ್ರಿಯ-ಕಣ್ಣು) ರೂಪವನ್ನು ಗ್ರಹಿಸುವುದು; ಶ್ರೋತ್ರ (ಕೇಳುವುದು-ಕಿವಿ) ಶಬ್ದವನ್ನು ಗ್ರಹಿಸುವುದು; ಸ್ಪರ್ಶ (ತ್ವಕ್-ಚರ್ಮ) ಶೀತ-ಉಷ್ಣ - ಮೃದುತ್ವ - ಕಠಿಣತ್ವಾದಿಗಳನ್ನು ಗ್ರಹಿಸುವುದು; ರಸನ (ರುಚಿ ನೋಡುವುದು-ನಾಲಿಗೆ) ಸಿಹಿ, ಕಹಿ ಮೊದಲಾದ ನಾನಾ ರಸಗಳನ್ನು ಗ್ರಹಿಸುತ್ತದೆ; ಘ್ರಾಣ (ಮೂಸಿ ನೋಡುವುದು-ನಾಸಿಕ-ಮೂಗು) ನಾನಾ ಗಂಧಗಳನ್ನು ಗ್ರಹಿಸುತ್ತದೆ. ಈ ಐದು ಇಂದ್ರಿಯಗಳು, ಮನಸ್ಸಿನೊಂದಿಗೆ ಕೂಡಿ, ತಮ್ಮಿಂದ ಗ್ರಹಿಸಲಾಗದ ವಿಷಯಗಳನ್ನು (ರೂಪಾದಿಗಳುಳ್ಳ ವಸ್ತುಗಳನ್ನು) ಜೀವಾತ್ಮನ ಅನುಭವಕ್ಕೆ ತಂದುಕೊಡುತ್ತವೆ. ಜೀವಾತ್ಮನಲ್ಲಿ ಅವುಗಳ ಜ್ಞಾನವನ್ನು ಉಂಟುಮಾಡುತ್ತವೆ. ತನಗೆ ಯೋಗ್ಯವಾದ (ತಾನು ಗ್ರಹಿಸಬಹುದಾದ) ವಿಷಯಗಳನ್ನು ಅಭಿಮುಖವಾಗಿ ಉಳ್ಳ (ಯೋಗ್ಯ ಸಂಬಂಧವನ್ನು ಹೊಂದಿರುವ ಅಕ್ಷವೇ, ಪ್ರತ್ಯಕ್ಷವೆನಿಸುವುದು. ಎಲ್ಲ ಇಂದ್ರಿಯ-ಗಳಿಂದ ಹುಟ್ಟುವ ಜ್ಞಾನವೂ ಪ್ರತ್ಯಕ್ಷವೇ. ಇಂದ್ರಿಯ ವ್ಯಾಪಾರದಿಂದ (ಪ್ರವೃತ್ತಿ-ಯಿಂದ) ಹುಟ್ಟುವ ಜ್ಞಾನವಾದ್ದರಿಂದ ವೃತ್ತಿಜ್ಞಾನವೆಂದೂ ಕರೆಯಲ್ಪಡುತ್ತವೆ.

**೨. ಅನುಮಾನ :-** ಪ್ರತ್ಯಕ್ಷದಿಂದ ತಿಳಿಯಲಾಗದ ವಸ್ತು ವಿಷಯಗಳನ್ನು ಅನುಮಾನದಿಂದ ತಿಳಿಯಬಹುದೆಂದು ಈ ಹಿಂದೆ ಹೇಳಲಾಯಿತಷ್ಟೆ. ಪ್ರತ್ಯಕ್ಷದಿಂದ ತಿಳಿಯುವುದಕ್ಕಿಂತ ಅಧಿಕ ವಿಷಯಗಳನ್ನು, ಅನೇಕ ವಿಶೇಷ-ಗಳೊಂದಿಗೆ, ಭೂತ ಭವಿಷ್ಯತ್ಕಾಲಗಳಲ್ಲಿ ಇದ್ದ-ಇರಬಹುದಾದವುಗಳನ್ನು ಸಹ ತಿಳಿಯಬಹುದು. ಇಷ್ಟು ಮಾತ್ರವಲ್ಲ; ತತ್ವಜ್ಞಾನಾರ್ಥಿಗಳು (ಸತ್ಯಾನ್ವೇಷಿಗಳು) ತಿಳಿಯಲಿಚ್ಛಿಸುವ ಬಹುವಿಧ ಸಮಸ್ಯೆಗಳ ಪರಿಹಾರಗಳನ್ನೂ ದೊರಕಿಸಿಕೊಳ್ಳ-ಬಹುದು. Dr. A.K. Rogers (ರೋಜರ್ಸ್ ಎಂಬಾತನು, ತನ್ನ 'Modern Philosophy' ಆಧುನಿಕ ತತ್ವಶಾಸ್ತ್ರವೆಂಬ ಗ್ರಂಥದಲ್ಲಿ, ಹೀಗೆ ಅಭಿಪ್ರಾಯ ಪಟ್ಟಿರುವನು :- No one can become a philosopher without thinking and thinking hard on his own account ಎಂದರೆ, **ತನಗಾಗಿ ತನ್ನ ಆಲೋಚನಾಶಕ್ತಿಯನ್ನು ತೀವ್ರವಾಗಿ ಉಪಯೋಗಿಸಿ, ವಿಚಾರಪರನಾಗದೇ ಯಾವನೊಬ್ಬನೂ ತತ್ವಜ್ಞಾನಿಯಾಗಲಾರನು. ಅನ್ಯರ ಪರಿಶ್ರಮದಿಂದ ಆದ ನಿರ್ಧಾರಗಳನ್ನು ಅಂಗೀಕರಿಸಿ ಆಶ್ರಯಿಸುವುದು ಸರಿಯಲ್ಲ. ಪ್ರತಿಯೊಬ್ಬನೂ ತನ್ನ ಸ್ವಂತ ವಿಚಾರಶಕ್ತಿಯನ್ನು ವಿನಿಯೋಗಿಸಿಯೇ ನಿರ್ಣಯಗಳನ್ನು ಸಾಧಿಸಿಕೊಳ್ಳಬೇಕು.** ವಿಚಾರಧಾರೆಯು, ಸೂಕ್ಷ್ಮ ಪ್ರಮೇಯ-ಗಳ ಸತ್ಯವನ್ನು ಗ್ರಹಿಸುವಂತಾಗಲು, ಹಿಡಿತವಿಲ್ಲದ, ಕಂಗೆಟ್ಟ ವಿವೇಚನೆಯ ಮಾರ್ಗವನ್ನು ತ್ಯಜಿಸಿ, ಯೋಗ್ಯಮಾರ್ಗವನ್ನು ಹಿಡಿಯಬೇಕು. ಇದಕ್ಕೆ ತರ್ಕಶಾಸ್ತ್ರದ ಜ್ಞಾನವು ಅತ್ಯವಶ್ಯಕ. ನಿರ್ದುಷ್ಟವಾದ ಯುಕ್ತಿಯನ್ನೇ ಅನುಮಾನ ಪ್ರಮಾಣವೆನ್ನುವರು. ಅದರಿಂದ ಹುಟ್ಟುವ ಜ್ಞಾನವನ್ನು ಅನುಮಿತಿ ಎನ್ನುವರು. ಯುಕ್ತಿಎಂದರೆ ಕೂಡಿಕೊಂಡಿರುವಿಕೆ (ಸಾಹಚರ್ಯ). A ಮತ್ತು B ಎಂಬೆರಡು ವಸ್ತುಗಳು ಸೇರಿರುವುವೆಂದು ತಿಳಿಯೋಣ. A ಇದ್ದಲ್ಲೆಲ್ಲಾ B ಇರಬಹುದು – ಆದರೆ, B ಇದ್ದಲೆಲ್ಲಾ A ಇಲ್ಲದಿರಬಹುದು. ಉದಾ :- ಹೊಗೆ ಇದ್ದಲ್ಲೆಲ್ಲಾ ಬೆಂಕಿ ಇದ್ದರೂ, ಬೆಂಕಿ ಇದ್ದಲ್ಲೆಲ್ಲಾ ಹೊಗೆ ಇರುತ್ತದೆ ಎಂಬ ನಿಯಮವಿಲ್ಲ. ಕಾದು ಕೆಂಪಗಿರುವ ಕಬ್ಬಿಣದ ಗುಂಡಿದ್ದಲ್ಲಿ ಹೊಗೆ ಇಲ್ಲ – ನಿಗಿನಿಗಿ ಕೆಂಡದಲ್ಲಿ ಸಹ ಹೊಗೆ ಇಲ್ಲ. ಹೀಗೆಯೇ ಮನುಷ್ಯತ್ವ-ಮರ್ತ್ಯತ್ವಗಳಲ್ಲಿ (ಮರ್ತ್ಯತ್ವ ಮರಣಹೊಂದುವ ಸ್ವಭಾವ) ಮನುಷ್ಯತ್ವವಿದ್ದಲ್ಲಿ ಮರ್ತ್ಯತ್ವವಿದ್ದರೂ

ಮರ್ತ್ಯತ್ವವಿದ್ದಲ್ಲಿ ಮನುಷ್ಯತ್ವವಿರುತ್ತದೆಂಬ ನಿಯಮವಿಲ್ಲ. ಮನುಷ್ಯತ್ವವಿಲ್ಲದ ಅನೇಕ ಪ್ರಾಣಿಗಳು ಮರಣ ಹೊಂದುತ್ತವೆ. ಹೊಗೆ ಇದ್ದಲ್ಲೆಲ್ಲಾ ಬೆಂಕಿ ಇರುತ್ತದೆಂಬ ಜ್ಞಾನವು ಪ್ರತ್ಯಕ್ಷದಿಂದ ಸಿದ್ಧವಾದ ವ್ಯಾಪ್ತಿಜ್ಞಾನ. ಇದರಿಂದ ಪ್ರತ್ಯಕ್ಷ ಸಿದ್ಧವಲ್ಲದ ಬೆಂಕಿಯ ಜ್ಞಾನವುಂಟಾಗುತ್ತದೆ. ಇದೇ ಅನುಮಿತಿಯು. ಅನುಮಾನಕ್ಕೆ ವ್ಯಾಪ್ತಿಜ್ಞಾನವು ಮೂಲಾಧಾರ. ಹೊಗೆಯು ಸಾಧನ ಅಥವಾ ಲಿಂಗವೆಂದೂ **(ವ್ಯಾಪಕ)**, ಬೆಂಕಿಯು ಸಾಧ್ಯ ಅಥವಾ ಲಿಂಗಿ **(ವ್ಯಾಪ್ಯ)** ಎಂದೂ ಕರೆಯಲ್ಪಡುತ್ತವೆ. ಲಿಂಗಲಿಂಗಿಗಳ ವ್ಯಾಪ್ತಿಜ್ಞಾನವಿಲ್ಲದೇ ಅನುಮಿತಿಯು ಹುಟ್ಟುವುದಿಲ್ಲ. ವ್ಯಾಪ್ತಿಜ್ಞಾನವು ಸಾಮಾನ್ಯವಾಗಿ ಪ್ರತ್ಯಕ್ಷದಿಂದಲೂ, ಕೆಲವು ಸಂದರ್ಭಗಳಲ್ಲಿ ಆಪ್ತವಾಕ್ಯಾದಿಗಳಿಂದಲೂ, ಆಗಮಗಳಿಂದಲೂ ಉಂಟಾಗುತ್ತದೆ. ಆದ್ದರಿಂದ **ಅನುಮಾನವು ಪ್ರತ್ಯಕ್ಷ ಮತ್ತು ಆಗಮ (ಶಬ್ದ)ವನ್ನು ಆಶ್ರಯಿಸಿ-ಕೊಂಡೇ ಪ್ರಮಾಣವಾಗಬಲ್ಲದು.** ಅನುಮಾನವು ಪ್ರಮಾಣವಾಗಬೇಕಾದರೆ (ಯಥಾರ್ಥಜ್ಞಾನಜನಕವಾಗಬೇಕಾದರೆ) ದೋಷರಹಿತವಾಗಿರಬೇಕು. ಪ್ರತ್ಯಕ್ಷ - ಅನುಮಾನಗಳಲ್ಲಿರಬಹುದಾದ ದೋಷಗಳನ್ನೂ ದೋಷಕಾರಣಗಳನ್ನೂ ಮುಂದಿನ ಪರಿಚ್ಛೇದದಲ್ಲಿ ವಿಸ್ತರಿಸಲಾಗುತ್ತದೆ.

ಅನುಮಾನ ಪ್ರಯೋಗವು ನಾನಾ ಪ್ರಕಾರವಾಗಿರಬಹುದು-ಇರುತ್ತದೆ. ತಾರ್ಕಿಕರು ಅವುಗಳನ್ನು ಬೇರೆ ಬೇರೆ ಹೆಸರುಗಳಿಂದ ನಿರ್ದೇಶಿಸುತ್ತಾರೆ. ಇಲ್ಲಿ ಅವುಗಳನ್ನು ವಿಸ್ತರಿಸಲಾಗುವುದಿಲ್ಲ. ಹಾಗೆ ಮಾಡಿದರೆ ಇದೂ ಒಂದು ತರ್ಕ ಸಂಗ್ರಹ ರೂಪದ ಗಡಸು ಗ್ರಂಥವೇ ಆದೀತೆಂಬ ಭಯ. ಆದರೂ, ಮುಂದಿನ ೨ನೇ ಭಾಗದಲ್ಲಿ ಪ್ರಸಕ್ತವಾಗುವ ''ಆಗಮ ಪ್ರಾಮಾಣ್ಯ ಸಮರ್ಥನೆ''ಯನ್ನು ಅನುಸರಿಸಲು ಅವಶ್ಯಕವಾಗುವ ಮುಖ್ಯ ಪ್ರಯೋಗ ಪ್ರಕಾರಗಳನ್ನು ಸಂಗ್ರಹವಾಗಿ ಈ ಮುಂದೆ ನಿರೂಪಿಸಲಾಗುತ್ತದೆ.

''ಪರ್ವತದಲ್ಲಿ ಬೆಂಕಿ ಇದೆ, ಹೊಗೆ ಇರುವುದರಿಂದ; ಅಡಿಗೆ ಮನೆಯಂತೆ. ಪರ್ವತದಲ್ಲಿ ಹೊಗೆ ಇದೆ; ಆದ್ದರಿಂದ ಅಲ್ಲಿ ಬೆಂಕಿ ಇದೆ'' ಎಂಬುದಾಗಿ ಭಿನ್ನವಾಕ್ಯಗಳಿಂದ ನಿರೂಪಿಸುವುದು ಅನುಮಾನ ಪ್ರಯೋಗಕ್ರಮವೆಂದು ತಾರ್ಕಿಕರು ತಿಳಿಯುತ್ತಾರೆ. ಇಲ್ಲಿರುವ ಐದು ವಾಕ್ಯಗಳನ್ನು ಕ್ರಮವಾಗಿ

ಪ್ರತಿಜ್ಞೆ - ಹೇತು - ದೃಷ್ಟಾಂತ - ಉಪನಯ - ನಿಗಮಗಳೆಂದು ಕರೆಯುತ್ತಾರೆ. ಹೀಗೆ ಅನುಮಾನವು ಪಂಚಾವಯಗಳುಳ್ಳದ್ದಾಗಿರಬೇಕೆಂದು ಅವರು ಹೇಳುವರು. ಪಾಶ್ಚಾತ್ಯ ತರ್ಕಗ್ರಂಥಗಳು (Western logic), ''ಹೊಗೆ ಇದ್ದಲ್ಲೆಲ್ಲಾ ಬೆಂಕಿ ಇರುತ್ತದೆ; ಪರ್ವತದಲ್ಲಿ ಹೊಗೆ ಇದೆ; ಆದ್ದರಿಂದ ಅಲ್ಲಿ ಬೆಂಕಿ ಇದೆ'' ಎಂಬುದಾಗಿ ಮೊದಲು ವ್ಯಾಪ್ತಿಯನ್ನು ಹೇಳಿ, ಮುಂದಿನ ಎರಡು ವಾಕ್ಯಗಳಿಂದ ಅನುಮಾನ ಪ್ರಯೋಗವನ್ನು ಪೂರ್ಣಗೊಳಿಸುತ್ತವೆ. ತಾರ್ಕಿಕರ ಪ್ರಯೋಗದ ೪-೫ನೇ ವಾಕ್ಯಗಳು (ಉಪನಯ-ನಿಗಮಗಳು) ಅನಾವಶ್ಯಕ-ವೆಂಬುದು ಸ್ಪಷ್ಟವಿದೆ. ಉಪನಯವು ಹೇತುವಿನಲ್ಲೂ, ನಿಗಮವು ಪ್ರತಿಜ್ಞೆಯಲ್ಲೂ ಅಡಕವಾಗುತ್ತವೆ. ಪರ್ವತವು ಪಕ್ಷ ಅಥವಾ ಧರ್ಮಿ ಎಂದೂ, ಹೊಗೆಯು ಲಿಂಗ ಅಥವಾ ಸಾಧನವೆಂದೂ, ಅಡಿಗೆ ಮನೆಯು ದೃಷ್ಟಾಂತ- ವೆಂದೂ, ಬೆಂಕಿಯು ಸಾಧ್ಯವೆಂದೂ ಕರೆಯಲ್ಪಡುತ್ತವೆ. ಅನುಮಾನಕ್ಕೆ ಎಷ್ಟು ಅವಯವಗಳಿರಬೇಕೆಂಬಲ್ಲಿ ಅಭಿಪ್ರಾಯ ಭೇದಗಳಿದ್ದರೂ, ವಿಮರ್ಶೆಯಲ್ಲಿ, ಎಷ್ಟು ಅವಯವಗಳಿಂದ ಅನುಮಿತಿಯು ಹುಟ್ಟುವುದೋ ಅಷ್ಟು ಮಾತ್ರ ಸಾಕೆಂದೂ, ಕೆಲವರು ಹೇಳುವಂತೆ ಮೂರು ಅವಯವಗಳಾದರೂ ಇರಲೇಬೇಕೆಂಬುದು ಸಹ ಸರಿಯಲ್ಲವೆಂದು, ಕಂಡುಬರುತ್ತದೆ.

''ಹೊಗೆ ಇದ್ದಲ್ಲಿ ಬೆಂಕಿ; ಬೆಂಕಿ ಇಲ್ಲದಿದ್ದಲ್ಲಿ ಹೊಗೆ ಇಲ್ಲ'' ಎಂಬಂತೆ ವ್ಯಾಪ್ತಿಯು ಎರಡು ಬಗೆಯಾಗಿರುವುದು. ಇವನ್ನು ಕ್ರಮದಿಂದ, ಅನ್ವಯ ವ್ಯಾಪ್ತಿ-ವ್ಯತಿರೇಕ ವ್ಯಾಪ್ತಿಗಳೆಂದು ಕರೆಯುವರು.[8] ಲಿಂಗ ಅಥವಾ ಹೇತು ಸಹ ಎರಡು ವಿಧ. ಸಾಧ್ಯವನ್ನು ನಿರ್ಧರಿಸಬೇಕಾಗಿರುವಲ್ಲಿ (ಪಕ್ಷ ಅಥವಾ ಧರ್ಮಿಯಲ್ಲಿ) ಇದ್ದು, ಉದಹರಿಸಬಹುದಾದ ಇತರ ಸದೃಶ ಸ್ಥಳಗಳಲ್ಲಿಯೂ (ಸಪಕ್ಷಗಳಲ್ಲಿಯೂ) ಇರುವುದಾಗಿ, ವಿಪಕ್ಷದಲ್ಲಿ (ಪಕ್ಷಕ್ಕೆ ವಿರುದ್ಧವಾದ ಸ್ಥಳಗಳಲ್ಲಿ) ಇಲ್ಲದಿರುವ ಹೇತುವನ್ನು ಕೇವಲಾನ್ವಯಿ ಎಂದೂ; ಎಲ್ಲಾ ಪಕ್ಷಗಳಲ್ಲಿದ್ದು, ಸಪಕ್ಷವೇ ಇಲ್ಲದೇ (ದೃಷ್ಟಾಂತರಹಿತವಾಗಿ) ವಿಪಕ್ಷದಲ್ಲಿಯೂ

---

೮. ವ್ಯತಿರೇಕ ವ್ಯಾಪ್ತಿಯನ್ನು ಬೇರೊಂದು ಪ್ರಕಾರದಿಂದ ಅನ್ವಯವ್ಯಾಪ್ತಿ ರೂಪದಿಂದಲೇ ಹೇಳಲು ಬರುವುದಾದ್ದರಿಂದ ಅನ್ವಯ ವ್ಯಾಪ್ತಿಯಿಂದಲೇ ಸಾಧ್ಯ (ತಿಳಿಯಬೇಕಾದ ವಸ್ತು) ಜ್ಞಾನವಾಗುವುದೆಂದೂ ಹೇಳಬಹುದಾಗಿದೆ.

ಇರುವುದಾದರೆ (ಹೊಗೆಯು ನೀರಿನ ಮಡುವಿನಲ್ಲಿಯೂ ಇದ್ದರೆ) ಆ ಹೇತುವನ್ನು ಕೇವಲ ವ್ಯತಿರೇಕಿ ಎಂದೂ ಕರೆಯಲಾಗುತ್ತದೆ. ವ್ಯಾಪ್ತಿ ಹೇತುಗಳ ಈ ಪ್ರಕಾರದ ಭೇದದಿಂದ, ಅನ್ವಯಾನುಮಾನ - ವ್ಯತಿರೇಕ್ಯನುಮಾನಗಳೆಂಬ ಎರಡು ಪ್ರಕಾರದ ಅನುಮಾನ ಪ್ರಯೋಗಗಳು ರೂಪಗೊಳ್ಳುತ್ತವೆ. ದೃಷ್ಟಂ ಸಾಮಾನ್ಯತೋಽದೃಷ್ಟಂ ಎಂದರೆ ಪ್ರತ್ಯಕ್ಷ ಯೋಗ್ಯವಾದುದರ ಸಂಬಂಧಿ ಮತ್ತು ಪ್ರತ್ಯಕ್ಷಕ್ಕೆ ಅಯೋಗ್ಯ (ಅನರ್ಹ)ವಾದುದರ ಸಂಬಂಧಿ, ಎಂಬ ಪ್ರಭೇದದಿಂದ ಅನುಮಾನವು ಎರಡು ವಿಧವೆಂದೂ ಹೇಳಲಾಗುತ್ತದೆ. ಇವು, ಕಾರಣಾನುಮಾನ, ಕಾರ್ಯಾನುಮಾನ ಮತ್ತು ಸಾಮಾನ್ಯಾನುಮಾನವೆಂದು ಪುನಃ ತ್ರಿವಿಧಗಳೆಂದೂ ಹೇಳಲಾಗುತ್ತದೆ. ಈ ವಿಭಾಗಗಳನ್ನು ಉದಾಹರಣೆ-ಗಳಿಂದ ಸ್ಪಷ್ಟಗೊಳಿಸಬಹುದು. ಗ್ರಂಥವಿಸ್ತಾರ ಭಯದಿಂದ ಅದನ್ನು ಇಲ್ಲಿ ಮಾಡಲಾಗುವುದಿಲ್ಲ. ಪ್ರಸಂಗ ಪ್ರಾಪ್ತವಾದಂತೆ ಪ್ರಯೋಗ ಪ್ರಕಾರವನ್ನು ಉದಹರಿಸಲಾಗುತ್ತದೆ.

ಅನುಮಾನದಿಂದ ದೊರೆಯುವ ಅನುಮಿತಿಯು (ಜ್ಞಾನವು) ಯಥಾರ್ಥ-ವಾಗಿರಬೇಕಾದರೆ (ಅನುಮಾನವು ಪ್ರಮಾಣವಾಗಬೇಕಾದರೆ), ಅನುಮಾನವು (ಮುಂದಿನ ಪರಿಚ್ಛೇದದಲ್ಲಿ ವಿವರಿಸುವ) ದೋಷರಹಿತವಾಗಿರಬೇಕು. ಮತ್ತು ಪ್ರತ್ಯಕ್ಷ-ಆಗಮಗಳಿಂದ ಬಾಧಿತವಾಗಕೂಡದು. ಪ್ರತ್ಯಕ್ಷಕ್ಕೆ ವಿರುದ್ಧವಾದುದನ್ನು ಸಾಧಿಸುವ ಅನುಮಾನವು ಪ್ರಮಾಣವಲ್ಲ. ಆಗಮ ತಾತ್ಪರ್ಯವನ್ನು ವಿರೋಧಿಸುವ ಅನುಮಾನವೂ ಪ್ರಮಾಣವಲ್ಲ. ಒಬ್ಬನು ಒಂದು ಅನುಮಾನದಿಂದ ಒಂದು ವಿಷಯವನ್ನು ಸಾಧಿಸಿದರೆ, ಅವನಿಗಿಂತ ತೀಕ್ಷ್ಣ ಬುದ್ಧಿಯುಳ್ಳ ಮತ್ತೊಬ್ಬನು, ಮತ್ತೊಂದು ಯುಕ್ತಿಯಿಂದ ತದ್ವಿರುದ್ಧವನ್ನೇ ಸಾಧಿಸಬಲ್ಲನು. **ಕೇವಲ ತರ್ಕವನ್ನು ಶುಷ್ಕತರ್ಕವೆನ್ನುವುದು ಈ ಕಾರಣದಿಂದಲೇ.** ತರ್ಕಮಾತ್ರ-ದಿಂದ, ಇದು ಹೀಗೆಯೇ ಸರಿ ಎಂದು ನಿರ್ಣಯಿಸಲು ಸಾಧ್ಯವಿಲ್ಲ. ಆದರೂ, ಈಶ್ವರಾದಿ ಅತೀಂದ್ರಿಯ ವಸ್ತು - ಸ್ವರೂಪವನ್ನು ನಿರ್ಣಯಿಸಿಕೊಳ್ಳಲು ಹೊರಟವರು, ವೇದಾದಿ ಆಗಮಗಳನ್ನು ಅವಲಂಬಿಸಬೇಕಾದುದು ಅನಿವಾರ್ಯವಾದ್ದರಿಂದ, ಆಗಮ ವಾಕ್ಯಗಳಲ್ಲಿ ತೋರಬಹುದಾದ - ತೋರುವ, ಪರಸ್ಪರ ವಿರೋಧಗಳನ್ನು ಪರಿಹರಿಸಿಕೊಂಡು, ಅನುಭವಕ್ಕೆ

ವಿರೋಧಬಾರದಂತೆ ವೇದಾರ್ಥ ನಿರ್ಣಯಗಳನ್ನು ಗ್ರಹಿಸಲು, ತರ್ಕಶಾಸ್ತ್ರವನ್ನು ಆಶ್ರಯಿಸದೇ ಗತ್ಯಂತರವಿಲ್ಲ. ಆದ್ದರಿಂದಲೇ ವೇದಾಂಗಗಳಲ್ಲಿ ತರ್ಕಶಾಸ್ತ್ರವು ಮುಖ್ಯವಾದುದಾಗಿದೆ. ಈ ಶಾಸ್ತ್ರವಾದರೋ, ಗುರುಗಳಲ್ಲಿ ೧೨ ವರ್ಷಗಳ ಕಾಲ ಅಭ್ಯಾಸ ಮಾಡಿದರೂ ಮುಗಿಯದಷ್ಟು ವಿಶಾಲವಾಗಿದೆ. ಹೀಗಿದ್ದರೂ, ಕೇವಲ ಆ ಶಾಸ್ತ್ರದಲ್ಲಿ ನಿಷ್ಣಾತರಾದರೆ ಮಾತ್ರ ವೇದ ಜ್ಞಾನವಾಗುವುದೆಂಬ ಭಯಕ್ಕೆ ಕಾರಣವಿಲ್ಲ. ಮೇಲಾಗಿ, ತರ್ಕಶಾಸ್ತ್ರದಲ್ಲಿ ಮುಳುಗಿ ಪಾಂಡಿತ್ಯವನ್ನು ಸಂಪಾದಿಸಿದ ನಿಷ್ಣಾತರಿಗೆ, ವೇದಾಂತ ತತ್ವಗಳಲ್ಲಿ ಆಸಕ್ತಿಯಾಗಲಿ, ಅವಶ್ಯಕವಾದ ಸರಳ, ಆಗ್ರಹರಹಿತ, ಸಾಮ್ಯ ಮನೋಭಾವವಾಗಲಿ ಉಳಿದು ಬರುವುದು ಕಷ್ಟವೆಂಬ ಅಭಿಪ್ರಾಯವು, ಕೆಲವು ವಿದ್ವಜ್ಜನರಲ್ಲಿ ಕಂಡು ಬರುತ್ತದೆ. ಅದು ಹೇಗೇ ಇರಲಿ, ತರ್ಕಶಾಸ್ತ್ರದ ಮೂಲತತ್ವಗಳ (principle of logic) ಸ್ಪಷ್ಟ ಜ್ಞಾನವೂ, ಅನುಮಾನ ಪ್ರಯೋಗಗಳ ಸಂಗ್ರಹ ಪರಿಚಯವೂ, ಅನುಮಾನ ದೋಷಗಳ ಕ್ಲಿಪ್ತಿಯೂ (ಎಂದರೆ ಈ ಅನುಮಾನದಲ್ಲಿ ಈ ದೋಷವಿದೆ ಎಂದು ತಕ್ಷಣ ಗ್ರಹಿಸುವ ಸ್ಪಷ್ಟವಾದ ದೋಷಗಳ ಸ್ವರೂಪ ಜ್ಞಾನವೂ) ಅತ್ಯವಶ್ಯಕ-ವೆಂಬುದನ್ನು ಒಪ್ಪಲೇಬೇಕು. ಈ ಕಾರಣದಿಂದ ಮುಂದಿನ ಪರಿಚ್ಛೇದದಲ್ಲಿ ಅನುಮಾನ ದೋಷಗಳನ್ನೂ ಸ್ವಲ್ಪ ಮಟ್ಟಿಗೆ ವಿಸ್ತಾರವಾಗಿಯೇ ನಿರೂಪಿಸಲಾಗುತ್ತದೆ.

೩. **ಆಗಮ** :- ದೋಷರಹಿತವಾದ ಶಬ್ದವು ಆಗಮವೆನಿಸುವುದು. ಶಬ್ದದಿಂದಾಗುವ ಜ್ಞಾನವು ಶಾಬ್ದ ಜ್ಞಾನವು. ಶಬ್ದವು ಪ್ರಮಾಣವಾದರೆ, ಅದು ಶಾಬ್ದ ಜ್ಞಾನದ ಕರಣ (ಸಾಧನ)ವಾಗಬಹುದು. ಆದ್ದರಿಂದ ಶಬ್ದ ಪ್ರಮಾಣವನ್ನು ಮೊದಲಿಗೆ ನಿರ್ಧರಿಸಿಕೊಳ್ಳಬೇಕು. ಶಬ್ದವು-ಧ್ವನ್ಯಾತ್ಮಕ ಮತ್ತು ವರ್ಣಾತ್ಮಕವೆಂದು ಎರಡು ವಿಧವಾಗಿರುವುದು. ಧ್ವನ್ಯಾತ್ಮಕ ಶಬ್ದವೂ, ಆಯಾ ಧ್ವನಿ ವಿಶೇಷಗಳಿಂದ ವ್ಯಂಗ್ಯವಾದ ವರ್ಣಗಳಿಂದ, ನಾನಾ ಅರ್ಥಗಳನ್ನು ಬೋಧಿಸುತ್ತದೆ. ಮೇಘನಾದ, ಸಮುದ್ರಘೋಷ, ವೃಕ್ಷ ಪತನ, ಕ್ರಿಮಿ, ಚಿಟ್ಟೆ, ಹಲ್ಲಿ, ಮೊದಲಾದ ಜಂತುಗಳಿಂದ ಕೇಳಿಬರುವ ನಾನಾ ಪ್ರಕಾರದ ಧ್ವನಿಗಳಿಗೂ ಅರ್ಥಬೋಧಕ ಶಕ್ತಿಯುಂಟು. ಇವುಗಳ ವರ್ಣ ವ್ಯಂಜಕತ್ವ- ಅವುಗಳ ಅರ್ಥಬೋಧಕತ್ವ ವಿಷಯಗಳನ್ನು ''ಮಂತ್ರಶಾಸ್ತ್ರ''ಗಳಲ್ಲಿ ಪ್ರಾಚೀನ ಋಷಿಗಳು

ವಿವೇಚಿಸಿರುವರು. ಮೇಘದಲ್ಲಿರುವ ವಾಯು, ಸದಾ ''ಓಂ'' ಎಂದು ಧ್ವನಿ-ಗೈಯುತ್ತದೆ. ಇದು ಈಶ್ವರನನ್ನು ಸರ್ವನಿಯಾಮಕನೆಂದೂ ಸರ್ವೋತ್ತಮ-ನೆಂದೂ ಸಾರುತ್ತದೆ; ಅನುದಾತ್ತ ಸ್ವರವುಳ್ಳ ಭೇರಿನಾದವು ಈಶ್ವರನ ಔದಾರ್ಯವನ್ನು ಹೊಗಳುತ್ತದೆ; ಸ್ವರಿತರೂಪದ ಘಂಟಾನಾದಾದಿ ಶಬ್ದಗಳು ಈಶ್ವರನಗಿಂತ, ಇತರ ಎಲ್ಲವೂ ಅವರುಗಳೆಂದು (ನೀಚ - ಕನಿಷ್ಠ - ಅಧೀನ - ಕೆಳಗಿನವು) ಸಾರುತ್ತವೆ; ಮಂದ್ರ - ಅನುದಾತ್ತ - ಸ್ವರಿತ - ಉದಾತ್ತಾದಿ ಸ್ವರವಿಶೇಷಗಳಿಂದ ವ್ಯಂಗ್ಯವಾಗುವ ವರ್ಣಗಳನ್ನು ಮಂತ್ರ-ಶಾಸ್ತ್ರವು ನಿರೂಪಿಸುತ್ತದೆ. ಧ್ವನ್ಯಾತ್ಮಕ ಶಬ್ದಗಳಿಂದ ಬೋಧ್ಯವಾದ ಅರ್ಥಗಳನ್ನು ಗ್ರಹಿಸಲು ಮಹಾಜ್ಞಾನಿಗಳಿಗೆ ಮಾತ್ರ ಶಕ್ಯ. ಅದು, ಸಾಧನ ಮಾರ್ಗದಲ್ಲಿರುವ ಮುಮುಕ್ಷುಗಳಾದ ಸಾಮಾನ್ಯ ಜನರಿಗೆ ದುಸ್ಸಾಧ್ಯವಾಗಿದೆ - ವ್ಯವಹಾರೋಪ-ಯೋಗಿಯೂ ಅಲ್ಲ. ಸಾಧನ ಮಾರ್ಗದ ಮೇಲಿನ ಹಂತಗಳಲ್ಲಿರುವ ಕೆಲವು ಉತ್ತಮಾಧಿಕಾರಿಗಳಿಗೆ ವಿಶೇಷ ಜ್ಞಾನವನ್ನೂ ಭಕ್ತ್ಯತಿಶಯವನ್ನೂ ದೊರಕಿಸಬಲ್ಲದು.

ವರ್ಣಾತ್ಮಕ ಶಬ್ದವೆಂದರೆ ''ಅ'' ಕಾರಾದಿ ವರ್ಣಗಳ ರೂಪದಿಂದ ಶ್ರೋತ್ರಕ್ಕೆ ಗೋಚರಿಸುವುವೆಂದರ್ಥ. ವರ್ಣಗಳು ಐವತ್ತು. ಅವುಗಳಲ್ಲಿ ಸ್ವರಗಳು ೧೬; ವರ್ಗೀಯ ವ್ಯಂಜನಗಳು ೨೫; ''ಯ'' ಕಾರದಿಂದ ''ಹ'' ಕಾರದವರೆಗಿನವು ೯. ಹೀಗೆ ಒಟ್ಟು ಐವತ್ತು ವರ್ಣಗಳು. ವಿಭಕ್ತ್ಯಂತ ವರ್ಣಸಮುದಾಯವು ಪದವೆಂದೂ, ಪದಸಮೂಹಗಳುಳ್ಳದ್ದು ವಾಕ್ಯವೆಂದೂ ಪ್ರಾಯಃ ಕರೆಯಲ್ಪಡುತ್ತವೆ. ಅನ್ವಯಾದಿಗಳಿಂದ ಕೂಡಿದ, ದೋಷರಹಿತ ಪದವಾಕ್ಯಗಳ ಸಮೂಹವೂ ಆಗಮವೇ. ಶಬ್ದ ದೋಷಗಳು ವಿವಿಧವಾಗಿವೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಹೀಗೆ ನಿರೂಪಿಸಬಹುದು:-

i. ಕಚಟತಪಾನಾಂ ಜಬಗಡದತ್ವಾತ್-ಎಂಬಲ್ಲಿ ವಿಭಕ್ತ್ಯಂತ ವರ್ಣ ಸಮೂಹವಿದೆ ನಿಜ-ಆದರೆ ಕೇಳುವವನಲ್ಲಿ ಯಾವ ಜ್ಞಾನವನ್ನೂ ಉಂಟು ಮಾಡುವುದಿಲ್ಲ. ಇಲ್ಲಿ ಅಬೋಧಕತ್ವವೆಂಬ ದೋಷವಿದೆ.

ii. ಜಗತ್ತು ಸುಳ್ಳು ಎಂಬಲ್ಲಿ ಪ್ರತ್ಯಕ್ಷ ಸಿದ್ಧವಾದುದಕ್ಕೆ ವಿರುದ್ಧವಾಗಿ ಹೇಳುವುದರಿಂದ, ವಿಪರೀತ ಬೋಧಕತ್ವ ಅಥವಾ ವಿಪರ್ಯಯ-ವೆಂಬ ದೋಷವಿದೆ.

iii. ಬೆಂಕಿ ಬಿಸಿ-ಬೆಲ್ಲ ಸಿಹಿ ಎಂಬಲ್ಲಿ ತಿಳಿದುದನ್ನೇ ತಿಳಿಸುವುದರಿಂದ ಜ್ಞಾತ ಜ್ಞಾಪಕತ್ವವೆಂಬ ದೋಷವಿದೆ.

iv. ಕಾಗೆಗೆಹಲ್ಲುಗಳೆಷ್ಟು-ಕಂಬಳಿಯಲ್ಲಿ ರೋಮಗಳೆಷ್ಟುಎಂಬುದನ್ನು ಹೇಳುವ ವಾಕ್ಯಗಳಲ್ಲಿ ಅಪ್ರಯೋಜಕತ್ವವೆಂಬ ದೋಷವಿದೆ- ಪ್ರಯೋಜನವಿಲ್ಲದ ವಿಷಯ ಪ್ರಸ್ತಾಪದಿಂದ.

v. ವ್ಯಾಪಾರದಿಂದ ಜೀವಿಸು ಎಂದು ವಿರಕ್ತನಿಗೆ ಹೇಳುವ ವಾಕ್ಯದಲ್ಲಿ, ಪ್ರಯೋಜಕತ್ವವಿದ್ದರೂ, ತನಗೆ ಒಪ್ಪದ ಉಪದೇಶವಾದ್ದರಿಂದ ಅನಭಿಮತ ಪ್ರಯೋಜನವತ್ವವೆಂಬ ದೋಷವಿದೆ.

vi. ಸಮೀಪದಲ್ಲಿರುವ ಸಿಹಿನೀರಿನ ಭಾವಿಯನ್ನು ಬಿಟ್ಟು ದೂರದಲ್ಲಿರುವ ಗಂಗಾನದಿಗೆ ಹೋಗೆಂದು ನೀರಡಿಸಿದವನಿಗೆ ಹೇಳುವುದರಲ್ಲಿ, ಲಘೂಪಾಯವನ್ನು ಬಿಟ್ಟು ಗುರೂಪಾಯವನ್ನು ಉಪದೇಶಿಸುವು- ದೆಂಬ ದೋಷವಿದೆ. ಇತ್ಯಾದಿ.[9]

ಪದಸಮೂಹಗಳು ನಿರ್ದುಷ್ಟ ವಾಕ್ಯಗಳಾಗಬೇಕಾದರೆ, ಮೇಲಿನ ದೋಷಗಳಿರಕೂಡದು ಮತ್ತು ಆಕಾಂಕ್ಷೆ-ಸನ್ನಿಧಿ-ಯೋಗ್ಯತೆಗಳಿರಬೇಕು. ಅರ್ಥ ಜ್ಞಾನವಾಗುವ ಪ್ರಕಾರದ ಜೋಡಣೆ ಇರಬೇಕೆಂದು ತಾತ್ಪರ್ಯ. ಘಟವನ್ನು ಕೊಡು ಎಂಬಲ್ಲಿ ಕೊಡು ಎಂಬುದರ ಅರ್ಥ ಪೂರ್ಣವಾಗಲು ಘಟವನ್ನು ಎಂದು ಹೇಳಬೇಕಾದುದು ಅವಶ್ಯಕ. ಕೊಡು ಎಂಬುದಕ್ಕೂ ಘಟವನ್ನು ಎಂಬುದಕ್ಕೂ ಆಕಾಂಕ್ಷೆ ಇದೆ. ಯದ್ಯಪಿ ಆಕಾಂಕ್ಷೆಯು ಪುರುಷನಿಗೇ; ಆದರೂ ಪದವು ಆಕಾಂಕ್ಷೆಯನ್ನು ಹುಟ್ಟಿಸುವುದರಿಂದ ಪದವು ಆಕಾಂಕ್ಷೆ- ಯುಳ್ಳದ್ದೆಂದು ಹೇಳಲಾಗುತ್ತದೆ - ಇದು ಉಪಚಾರವು. ಅಗ್ನಿಯಿಂದ ಬಟ್ಟೆಯನ್ನು ತೋಯಿಸು ಎಂಬಲ್ಲಿ ಯೋಗ್ಯತೆ ಇಲ್ಲವೆಂದು ಹೇಳಲಾಗುತ್ತದೆ.

ಜಲದಿಂದ ತೊಯಿಸು ಎಂಬಂತೆ ಪ್ರಮಾಣ ಸಿದ್ಧವಾದ ಯೋಗ್ಯತೆ ಇರಬೇಕು. ನೀರನ್ನು ಎಂದು ಈ ದಿನ ಹೇಳಿ ತೆಗೆದುಕೊಂಡು ಬಾ ಎಂದು

9. ಅನುಪ್ರಮಾಣಗಳಲ್ಲಿ ಆ ಪ್ರಾಮಾಣ್ಯಕ್ಕೆ ಕಾರಣವಾಗುವ ದೋಷಗಳನ್ನು ಮುಂದಿನ ಪರಿಚ್ಛೇದದಲ್ಲಿ ನಿರೂಪಿಸಲಾಗಿದೆ. ದೋಷರಹಿತ ಶಬ್ದವೇ ಆಗಮವಾದ್ದರಿಂದ ಶಬ್ದ ದೋಷಗಳನ್ನು ಮಾತ್ರ ಇಲ್ಲಿ ಹೇಳಲಾಗಿದೆ.

ನಾಳೆ ಹೇಳಿದರೆ, ಸನ್ನಿಧಿ ಇಲ್ಲವೆಂದು ಹೇಳಲಾಗುತ್ತದೆ. ಈ ರೂಪದ ದೋಷ-ಗಳಿರದಂತಿದ್ದರೆ ಪದಸಮೂಹಗಳು ನಿರ್ದುಷ್ಟ ವಾಕ್ಯಗಳಾಗುತ್ತವೆ.

ಶಬ್ದವು ತನ್ನ ಸ್ಥಿತಿ ಮಾತ್ರದಿಂದ ಬೋಧಕವಲ್ಲ. ಕಿಂತು ಚೆನ್ನಾಗಿ ಕೇಳಿ, ವ್ಯಾಕರಣ ಸಹಾಯವುಳ್ಳ (ಶಬ್ದ ನ್ಯಾಯಾನುಸಂಧಾನ ಸಹಿತವಾದ) ಅರ್ಥ ಸ್ಮರಣೆಯಿಂದ ಬೋಧಕತ್ವವುಳ್ಳದ್ದಾಗುತ್ತವೆ. ಶಬ್ದಾರ್ಥ ಸ್ಮರಣೆಯುಕ್ತ ಶ್ರವಣ-ದಿಂದ ಬೋಧ್ಯ ವಸ್ತುವಿನ ಜ್ಞಾನವಾಗುತ್ತದೆ. ಪದಗಳಿಗೂ ಅವುಗಳಿಂದ ಬೋಧ್ಯವಾದ ಅರ್ಥಗಳಿಗೂ ಸ್ವಾಭಾವಿಕ ಸಂಬಂಧವಿದೆ. ಇದನ್ನು ಶಕ್ತಿ ಎನ್ನುವರು. ಸ್ವಾಭಾವಿಕವಲ್ಲದ ಅರ್ಥಗಳಲ್ಲಿ ಪದಗಳನ್ನು ಪ್ರಯೋಗಿಸುವುದು, ಸಾಂಕೇತಿಕವೆನಿಸುವುದು. ಸಂಕೇತವೆಂಬುದು ವೈದಿಕ ಮತ್ತು ಇತರವೆಂದು ಎರಡು ಪ್ರಕಾರ. ಈಶ್ವರೇಚ್ಛೆಯಿಂದಾದ ಸಂಕೇತವು ವೈದಿಕ ಸಂಕೇತವು. ಉದಾ:- ಇಂದ್ರ - ಸ್ವರ್ಗಾಧಿಪತಿ; ಚಂದ್ರ - ನಕ್ಷತ್ರಾಧಿಪ ಇತ್ಯಾದಿ. ಇತರ ಸಂಕೇತವು ಪರಿಭಾಷಾ ಎನಿಸುತ್ತದೆ. ಉದಾ: ವ್ಯಕ್ತಿಗಳನ್ನು ಇಂದ್ರ, ಚಂದ್ರ ದೇವದತ್ತಾದಿ ನಾಮಗಳಿಂದ ಕರೆಯುವುದು. ಪದಗಳ ಶಕ್ತಿಯನ್ನು ಗ್ರಹಿಸಲು ಸ್ವಭಾವ ಸಿದ್ಧವಾದ ಅರ್ಥಗಳನ್ನು ತಿಳಿದು ಶ್ರವಣ ಕಾಲದಲ್ಲಿ ಸ್ಮರಿಸಬೇಕಾದುದು ಅವಶ್ಯಕ. ಈ ಪ್ರಕೃತಿ ಪ್ರತ್ಯಯಗಳ ಸಂಬಂಧದಿಂದ (ಪ್ರಕೃತಿ ಎಂದರೆ ಶಬ್ದದ ಮೂಲರೂಪ) ಈ ಶಬ್ದವಾಗಿದೆ-ಇದರ ಅರ್ಥ ಹೀಗಾಗುತ್ತದೆ, ಎಂಬುದನ್ನು ತಿಳಿಯಲು ವ್ಯಾಕರಣ, ಶಬ್ದ ಕೋಶ, ಗುರುಗಳೇ ಮೊದಲಾದ ಆಪ್ತರ ಉಪದೇಶ, ಪರಸ್ಪರ ವೃದ್ಧ ವ್ಯವಹಾರಗಳನ್ನು ಗಮನಿಸುವಿಕೆ ಇತ್ಯಾದಿಗಳು ಅವಶ್ಯಕ. ಅವುಗಳಿಂದ ಪದಗಳ ಶಕ್ತಿಗ್ರಹವು ಲಭಿಸುತ್ತದೆ. ಏವಂ ಚ ಆಗಮ ಜ್ಞಾನವು ಶಬ್ದಾರ್ಥ ಶಕ್ತಿಸ್ಮರಣೆಯೆಂಬ ವ್ಯಾಪಾರದಿಂದಲೂ, ಆಕಾಂಕ್ಷೆ, ಯೋಗ್ಯತೆ ಮೊದಲಾದ ಸಹಕಾರಿಗಳಿಂದಲೂ ಹುಟ್ಟುತ್ತದೆ. ಆದ್ದರಿಂದ ಕೇಳಿ ತಿಳಿದ ವಾಕ್ಯವು ಅನುಪ್ರಮಾಣವು - ಅದರಿಂದ ದೊರೆಯುವ ಕರ್ತೃಕ್ರಿಯಾದಿ ಸಂಬಂಧರೂಪ ಜ್ಞಾನವು ಕೇವಲ ಪ್ರಮಾಣವು - ಇದು ಸಾಕ್ಷಿಯಿಂದ ಗ್ರಹಿಸಲ್ಪಡುವುದರಿಂದ ಕೇವಲವೆನಿಸುತ್ತದೆ.

**ಆಗಮವು ನಿತ್ಯ - ಅನಿತ್ಯವೆಂದು ಎರಡು ವಿಧ.** ವೇದಗಳು ನಿತ್ಯ - ಯಾರಿಂದಲೂ ನಿರ್ಮಿತವಾದವುಗಳಲ್ಲ ಮತ್ತು ಎಲ್ಲ ಕಾಲದಲ್ಲಿರುವುವು.

ಪುರಾಣ - ಇತಿಹಾಸ - ಧರ್ಮಶಾಸ್ತ್ರಾದಿಗಳು ಅನಿತ್ಯ - ಪುರುಷರಿಂದ ರಚಿತವಾದವು ಮತ್ತು ರಚನೆಗೆ ಪೂರ್ವದಲ್ಲಿ ಇಲ್ಲದವು. ಮುಂದಿನ ಆಗಮ ಪ್ರಾಮಾಣ್ಯ ಸಮರ್ಥನೆಯ ಭಾಗದಲ್ಲಿ ವೇದಗಳ ಅಪೌರುಷೇಯತ್ವವೂ, ನಿತ್ಯತ್ವವೂ ಪ್ರಸಕ್ತವಾಗುತ್ತವೆ.

ವೈದಿಕ ಶಬ್ದಗಳು ಶುದ್ಧ. ಅಪಭ್ರಂಶ (ಪ್ರಾಕೃತ) ಶಬ್ದಗಳು - ಅಶುದ್ಧ. ವ್ಯಾಕರಣ ವ್ಯುತ್ಪತ್ತಿಗೆ ಒಳಪಡುವ ಶಬ್ದಗಳು ಶುದ್ಧ (ಸಾಧು) ಎನಿಸುತ್ತವೆ - ಹಾಗಲ್ಲದಿದ್ದವು ಅಶುದ್ಧ.[10] ಪ್ರಾಕೃತ ಭಾಷೆಗಳಿಗೆ ಸಂಬಂಧಿಸಿದಂತೆ ಹಲವು ನಿಯಮಗಳನ್ನು ರಚಿಸಿ, ವ್ಯಾಕರಣವೆಂದು ಕರೆಯಲಾಗುತ್ತದಷ್ಟೆ. ಈ ನಿಯಮಗಳು ಪ್ರಾಕೃತ ಶಬ್ದಗಳ ನಿಷ್ಪತ್ತಿಯನ್ನು ನಿರ್ವಹಿಸಲಾರವು - ಶಬ್ದಗಳ ಮೂಲರೂಪಗಳನ್ನಾಗಲಿ (ಧಾತು ರೂಪಗಳನ್ನು), ಅವುಗಳ ಮೇಲೆ ಬರುವ ಪ್ರತ್ಯಯಗಳನ್ನಾಗಲಿ, ವಿವಿಧ ಪ್ರತ್ಯಯಾದಿಗಳಿಂದ ಹೊರಹೊಮ್ಮುವ ಅರ್ಥ ವಿಶೇಷಗಳನ್ನಾಗಲಿ, ನಿರೂಪಿಸುವುದಿಲ್ಲ. ಸನಾತನ ಸಂಸ್ಕೃತ ಶಬ್ದಗಳಂತೆ ಅರ್ಥಸೌಷ್ಠವಾದಿ ಪರಿಪೂರ್ಣತ್ವವು ಅಪಭ್ರಂಶ ಶಬ್ದಗಳಿಗೆ ಸ್ವಾಭಾವಿಕವಾಗಿಯೇ ಇಲ್ಲ. ಮೂಲ ಸಂಸ್ಕೃತ ಶಬ್ದಗಳಿಂದ ಉಗಮಗೊಂಡಿದ್ದರೂ, ನಾನಾ ವಿಧದಿಂದ ವಿಕಾರಹೊಂದಿ, ಲೌಕಿಕ ಸಾಂಕೇತಿಕ ಶಬ್ದಗಳೊಡನೆ ಬೆರೆತು, ಗುರ್ತಿಸಲಾಗದ ರೂಪಗಳನ್ನು ತಾಳಿರುವುದರಿಂದಲೇ ಅವು ಅಪಭ್ರಂಶಗಳೆಂದು ಕರೆಯಲ್ಪಡುತ್ತವೆ. ವೈದಿಕ ಶಬ್ದಗಳ ಅರ್ಥಜ್ಞಾನವು (ಶಕ್ತಿಗ್ರಹವು)ವೇದಾಂಗಗಳಿಂದ ಆಗುವುದು.[11] ಆಗ ಈ ಶಬ್ದಕ್ಕೆ ಇದು ಅರ್ಥವೆಂಬ ಉಪಸ್ಥಿತಿಯುಂಟಾಗುತ್ತದೆ (ಸ್ಮರಣೆಗೆ ಬರುತ್ತದೆ). ಈ ಸ್ಮರಣೆ ಸಹಿತ ಶ್ರವಣದಿಂದ

---

10. ವೈದಿಕಾಃ ಶಬ್ದಾಃ ಸಾಧವಃ । ಅಪಭ್ರಂಶಾಶ್ಚ ಅಸಾಧವಃ ॥
ವ್ಯಾಕರಣ ವ್ಯುತ್ಪಾದ್ಯತ್ವಂ ಸಾಧುತ್ವಮ್ । ತದಭಾವೋऽಸಾಧುತ್ವಮ್ ॥
ಮಧ್ವಸಿದ್ಧಾಂತ ಸಾರ

11. ಶಿಕ್ಷಾ - ಉಚ್ಚಾರಣ ನಿಯಮಗಳನ್ನು ನಿರೂಪಿಸುವುದು; ಕಲ್ಪ - ವೇದೋಕ್ತ ಕರ್ಮಾಚರಣ ನಿಯಮಗಳನ್ನು ಹೇಳುವುದು: ಛಂದಸ್ಸು - ವೇದ ಮಂತ್ರಗಳಲ್ಲಿ ವರ್ಣಸಂಖ್ಯಾ ಭೇದದಿಂದ ವ್ಯವಸ್ಥಿತವಾದ ನಾನಾ ಛಂದಸ್ಸುಗಳನ್ನು ನಿರೂಪಿಸುವುದು; ವ್ಯಾಕರಣ - ಶಬ್ದಗಳ ಸಾಧುತ್ವವನ್ನು ಪ್ರತಿಪಾದಿಸುವುದು; ನಿರುಕ್ತ - ಶಬ್ದ ನಿರ್ವಚನ ಪ್ರಕಾರವನ್ನು ಶಾಸನ ಮಾಡುವುದು; ಜ್ಯೋತಿಷ-ಅಂತರಿಕ್ಷದಲ್ಲಿರುವ ಜ್ಯೋತಿರ್ವಸ್ತುಗಳು (ಗ್ರಹನಕ್ಷತ್ರಾದಿಗಳು) ಅವುಗಳ ಸಂಚಾರ ಮತ್ತು ತತ್ಫಲಗಳನ್ನು ನಿರೂಪಿಸುವುದು.

ಜ್ಞಾನವಾಗುತ್ತದೆ. ನಿತ್ಯವಾದ ವೇದಗಳು ನಿರ್ದುಷ್ಟ ಶಬ್ದ ಸಮೂಹವಾದ್ದರಿಂದ ಅವುಗಳಿಂದ ಉಂಟಾಗುವ ಜ್ಞಾನವು ಯಥಾರ್ಥವೇ. ಪ್ರತ್ಯಕ್ಷ-ಅನುಮಾನ-ಗಳಿಂದ ಬಾಧಿಸಲ್ಪಡದ ಪುರುಷಾರ್ಥೋಪಾಯಗಳ ಜ್ಞಾನವನ್ನುಂಟು ಮಾಡುತ್ತವೆ.[12] ನಿತ್ಯಾನಿತ್ಯ ಆಗಮಗಳಿಂದ ದೊರೆಯುವ ಜ್ಞಾನವು ಯಥಾರ್ಥವಾಗಿರಲು, ಶಬ್ದಗಳ ವಿವಿಧ ಪ್ರವೃತ್ತಿಗಳನ್ನು ತಿಳಿದಿರಬೇಕಾದುದು ಅತ್ಯವಶ್ಯಕ. ತಮ್ಮಿಂದ ಬೋಧ್ಯವಾದ ಅರ್ಥಗಳನ್ನು (ವಸ್ತು ವಿಷಯಗಳನ್ನು) ತಿಳಿಸಲು ಶಬ್ದಗಳು ವಹಿಸುವ (ಶಬ್ದಗಳಿಂದಾಗುವ) ವ್ಯಾಪಾರವು ನಾನಾ-ಪ್ರಕಾರವಾಗಿರುತ್ತದೆ. ಶಬ್ದದ ನಾನಾ ವೃತ್ತಿಗಳನ್ನು (ಅರ್ಥಪ್ರತಿಪಾದನ ರೀತಿಗಳನ್ನು) ಈ ಮುಂದೆ ಸಂಗ್ರಹವಾಗಿ ಕೊಡಲಾಗುತ್ತದೆ. ಶಬ್ದದಿಂದ ತಿಳಿಸಲ್ಪಡುವ ವಸ್ತು ಅಥವಾ ವಿಷಯವು ಅದರ ಅರ್ಥವು. ಶಬ್ದವು ಪ್ರತಿಪಾದಕ - ಅರ್ಥವು ಪ್ರತಿಪಾದ್ಯ; ಎಂದರೆ, ಶಬ್ದವು ವಾಚಕ-ಅರ್ಥವು ವಾಚ್ಯ. ಶಬ್ದ ವೃತ್ತಿಗಳು, ಪರಮ ಮುಖ್ಯವೃತ್ತಿ, ಮುಖ್ಯವೃತ್ತಿ, ಲಕ್ಷಣಾವೃತ್ತಿ, ಗೌಣೀ, ಉಪಚಾರ, ರೂಢೋಪಚಾರ, ರೂಢಲಕ್ಷಣ ಎಂದು ಕರೆಯಲ್ಪಡುತ್ತವೆ. ಈ ವೃತ್ತಿಗಳನ್ನು ಸಂಕೇತಿಸುವ ಈ ಪದಗಳನ್ನು ಪಾರಿಭಾಷಿಕ ಪದಗಳೆಂದು ಒಂದು ದೃಷ್ಟಿಯಿಂದ ಹೇಳಬಹುದು. ಎಲ್ಲ ಶಬ್ದಗಳೂ ಪರಮಾತ್ಮ ವಾಚಕಗಳೆಂದು ಹೇಳಲಾಗುತ್ತದೆ. ಹೀಗೆ ಪರಮಾತ್ಮನನ್ನು ಪ್ರತಿಪಾದಿಸುವ ವೃತ್ತಿಯು ಪರಮಮುಖ್ಯವೃತ್ತಿ ಎನಿಸುವುದು. ಈಶ್ವರೇತರ ವಸ್ತುವಾಚಕಗಳಾದಾಗ, ಮುಖ್ಯವೃತ್ತಿ ಮೊದಲಾದ ನಾಮಗಳಿಂದ ಕರೆಯಲ್ಪಡುವ ವೃತ್ತಿಗಳುಳ್ಳವೆಂದು ಹೇಳಲಾಗುತ್ತದೆ. ಮುಖ್ಯ ವೃತ್ತಿಯು ಮೂರು ವಿಧ-ಯೋಗ, ರೂಢಿಯೋಗ ಮತ್ತು ರೂಢಿ ಎಂದು. ಪ್ರಯೋಗ ಬಾಹುಲ್ಯವು ರೂಢಿ-ಗೋ, ಘಟ ಮೊದಲಾದ ಶಬ್ದಗಳು ಆಯಾ ವಸ್ತು ವಾಚಕಗಳಾಗಿ, ಆಯಾ ವಸ್ತುಗಳಲ್ಲಿಯೇ ಉಪಯೋಗಿಸಲ್ಪಡುವಂತೆ. ಶಬ್ದಗಳು ತಮ್ಮ ಅವಯವಗಳಿಂದ ವಸ್ತುವನ್ನು ನಿರ್ದೇಶ ಮಾಡಿದರೆ, ಯೋಗವೆನ್ನುವರು. ಪಾಚಕ, ವಾಹಕ ಇತ್ಯಾದಿ ಶಬ್ದಗಳನ್ನು ದೇವದತ್ತಾದಿ ವ್ಯಕ್ತಿಗಳಲ್ಲಿ ಉಪಯೋಗಿಸುವಂತೆ.

12. ಪ್ರತ್ಯಕ್ಷೇಣಾನುಮಿತ್ಯಾವಾ ಯಸ್ತೂಪಾಯೋ ನ ಬಾಧ್ಯತೇ ।
ಏತಂ ವಿಂದಂತಿ ವೇದೇನ ತಸ್ಮಾದ್ವೇದಸ್ಯ ವೇದತಾ ॥
ವೇದದ ವೇದತ್ವವು ಈ ಲಕ್ಷಣವುಳ್ಳದ್ದು.

ಯೋಗ ಮತ್ತು ರೂಢಿಗಳೆರಡನ್ನೂ ಕೂಡಿರುವ ವೃತ್ತಿಯು ಯೋಗರೂಢಿಯು. ಪಂಕಜ ಮೊದಲಾದ ಶಬ್ದಗಳು ಈ ವೃತ್ತಿಗೆ ಉದಾಹರಣೆಗಳು. ಪಂಕ (ಕೆಸರು-ನೀರು) ಜ- (ಹುಟ್ಟಿದುದು) - ನೀರಿನಲ್ಲಿ ಹುಟ್ಟುವುದು- ಇದು ಶಬ್ದದ ಅವಯವಾರ್ಥ (ಯೋಗ); ಮತ್ತು ಪದ್ಮದಲ್ಲಿ ಪಂಕಜ ಶಬ್ದದ ರೂಢಿ ಇದೆ. ಆದ್ದರಿಂದ ಈ ವಿಧದ ಶಬ್ದ ವೃತ್ತಿಯು ಯೋಗರೂಢಿ ಎನಿಸುತ್ತದೆ. ಹೀಗೆ ತ್ರಿವಿಧವಾಗಿರುವ ಮುಖ್ಯವೃತ್ತಿಯು ಶಕ್ತಿ ಎಂದೂ ಕರೆಯಲ್ಪಡುತ್ತದೆ. ಮುಖ್ಯವೃತ್ತಿಯು ಅನುಪಪನ್ನವಾಗುತ್ತಿರಲು, ಮುಖ್ಯ ವೃತ್ತಿಯಿಂದ ಬೋಧ್ಯವಾದ ವಸ್ತುವಿನ ಸಂಬಂಧವುಳ್ಳ ಅನ್ಯವಸ್ತುವನ್ನು ತಿಳಿಸುವ ಶಬ್ದವೃತ್ತಿಯು ಲಕ್ಷಣಾವೃತ್ತಿ ಎನಿಸುತ್ತದೆ. ಗಂಗಾಯಾಂ ಘೋಷಃ- ಗಂಗೆಯಲ್ಲಿ ಹಳ್ಳಿ ಎಂಬಲ್ಲಿ, ಗಂಗೆಯಲ್ಲಿ (ನದೀ ಪ್ರವಾಹದಲ್ಲಿ) ಹಳ್ಳಿ ಇರುವುದು ಕೂಡದಿರುವುದರಿಂದ ಗಂಗೆಯ ಸಂಬಂಧವುಳ್ಳ, ಅದರ ತೀರವೆಂಬ ಅರ್ಥವನ್ನು ಗಂಗಾಯಾಂ ಎಂಬ ಪದವು ತಿಳಿಸುತ್ತದೆ. ಗಂಗಾಯಾಂ ಎಂಬುದಕ್ಕೆ ಲಕ್ಷಣಾವೃತ್ತಿಯಿಂದ ತೀರವೆಂಬ ಅರ್ಥವನ್ನು ತಿಳಿಯಬೇಕು. ಮುಖ್ಯ ವೃತ್ತಿಯಿಂದ ತಿಳಿಸುವ ವಸ್ತುವಿಗೆ ಸದೃಶವಾದ ವಸ್ತುವಿನಲ್ಲಿ ಆ ಶಬ್ದವನ್ನು ಪ್ರಯೋಗಿಸುವುದು ಗೌಣೀ-ವೃತ್ತಿಯೆನಿಸುವುದು. ಅಗ್ನಿಯಂತೆ ತೇಜಸ್ವಿಯಾದ ವಟುವಿನಲ್ಲಿ ಅಗ್ನಿಶಬ್ದವನ್ನು ಉಪಯೋಗಿಸುವಂತೆ. ಚಿತ್ರಲಿಖಿತ ಸಿಂಹಾದಿಗಳ ವಾಚಕವಾಗಿ ಸಿಂಹ ಮೊದಲಾದ ಶಬ್ದಗಳನ್ನು ಬಳಸುವುದು ಉಪಚಾರ. ಉಪಚಾರ ಪ್ರಯೋಗದಲ್ಲಿ ಬಾಹುಲ್ಯವಿದ್ದರೆ ರೂಢೋಪಚಾರವೆನಿಸುವುದು. ಸುಡುವುದು ಅಗ್ನಿ-ಯಾದರೂ, ಕಬ್ಬಿಣದ ಗುಂಡು ಸುಡುತ್ತದೆ (ದಗ್ಧಾ) ಎಂದೇ ಬಹುವಾಗಿ ವ್ಯವಹರಿಸುವುದರಿಂದ, ಇದನ್ನು ರೂಢೋಪಚಾರವೆನ್ನುವರು. ಮೇಲೆ ಹೇಳಿದಂತೆ ಶಬ್ದಗಳನ್ನು ಲಕ್ಷಣಾವೃತ್ತಿಯಿಂದ ಪ್ರಯೋಗ ಮಾಡುವುದರಲ್ಲಿ ಬಾಹುಲ್ಯವಿದ್ದರೆ, ಅದು ರೂಢಲಕ್ಷಣಾ ಎನಿಸುವುದು. ಮಾರ್ಗಾಶ್ಚಲಂತಿ (ಮಾರ್ಗಗಳು ಚಲಿಸುತ್ತವೆ) ಎಂಬಲ್ಲಿ, ಮಾರ್ಗವು ಹೋಗುವುದಿಲ್ಲ - ಅದರ ಸಂಬಂಧ ಹೊಂದಿ, ಅದರ ಮೇಲೆ ನಡೆಯುವ ಮನುಷ್ಯರು ಹೋಗುತ್ತಾ-ರೆಂಬರ್ಥವನ್ನು ತಿಳಿಯುವಂತೆ ಲಕ್ಷಣಾವೃತ್ತಿಯೂ, ಜಹತ್ - ಅಜಹತ್ - ಲಕ್ಷಿತ ಲಕ್ಷಣಾ ಎಂದು ತ್ರಿವಿಧ. ಮೇಲೆ ಹೇಳಿದ ''ಗಂಗಾಯಾಂ ಘೋಷಃ''

ಎಂಬುದು ಜಹಲ್ಲಕ್ಷಣಾವೃತ್ತಿಗೆ ಉದಾಹರಣೆಯು. ಮುಖ್ಯಾರ್ಥವನ್ನು ಬಿಟ್ಟು (ಜಹತ್ - ಬಿಡುವಿಕೆ) ತತ್ಸಂಬಂಧವುಳ್ಳ ಅನ್ಯವಸ್ತುವನ್ನು (ತೀರವನ್ನು) ತಿಳಿಯುವುದೆಂಬುದು ಈ ವೃತ್ತಿಯ ಲಕ್ಷಣ (ಗುರ್ತು). ಮುಖ್ಯಾರ್ಥವನ್ನು ಬಿಡದೇ (ಅಜಹತ್) ಅದರೊಂದಿಗೆ ತತ್ಸಂಬಂಧವುಳ್ಳ ಅನ್ಯವಸ್ತುಗಳನ್ನೂ ಗ್ರಹಿಸುವುದು ಅಜಹಲ್ಲಕ್ಷಣ. ಕೂಡಿಹೋಗುತ್ತಿರುವ ಹಲವು ಮನುಷ್ಯರಲ್ಲಿ ಕೆಲವರು ಛತ್ರಿಗಳನ್ನು ಹಿಡಿದಿರುವುದನ್ನು ಕಂಡು, ಛತ್ರಿಣಃ ಗಚ್ಛಂತಿ (ಛತ್ರಿ ಹಿಡಿದವರು ಹೋಗುತ್ತಾರೆ) ಎನ್ನುತ್ತೇವೆ. ಛತ್ರೀ ಪದವು ಅಛತ್ರಿಗಳಲ್ಲಿ (ಛತ್ರಿ ಇಲ್ಲದವರಲ್ಲಿ ಸಹ) ಪ್ರವೃತ್ತಿಯುಳ್ಳದ್ದಾಗಿರುವಂತೆ. ಏಕೀಭವಂತಿ (ಒಂದಾಗುತ್ತವೆ) ಇತ್ಯಾದಿ ಪ್ರಯೋಗಗಳು ಲಕ್ಷಿತಲಕ್ಷಣಾ ವೃತ್ತಿಗೆ ಉದಾ-ಹರಣೆಗಳಾಗುತ್ತವೆ. ಸ್ಥಾನೈಕ್ಯವನ್ನಾಗಲಿ ಅಭಿಪ್ರಾಯದ ಐಕ್ಯವನ್ನಾಗಲಿ ಸೂಚಿಸುವುದರ ದ್ವಾರಾ ಆ ವಸ್ತುಗಳ ಏಕೀಭಾವವನ್ನು ಹೇಳುವುದು.

ಈ ವಿಧ ಶಬ್ದ ವೃತ್ತಿಗಳೆಲ್ಲವೂ ಪರಮಾತ್ಮನ ಹೊರತಾದ ಜಗದ್ವಿಷಯದಲ್ಲಿ ಮಾತ್ರವೆಂದು ತಿಳಿಯಬೇಕು. ಶಬ್ದಗಳು ಪರಮಾತ್ಮನಲ್ಲಿ ಪ್ರವೃತ್ತಿಸುವ ಪರಮ ಮುಖ್ಯ ವೃತ್ತಿಯು, ಮಹಾಯೋಗ ಮತ್ತು ಮಹಾರೂಢಿಗಳೆಂದು ದ್ವಿವಿಧವಾಗಿದೆ. ಇಂದ್ರಶಬ್ದವು, ಯೋಗವೃತ್ತಿಯಿಂದ (ಐಶ್ವರ್ಯವುಳ್ಳವನೆಂಬ ಅವಯವಾರ್ಥದಿಂದ) ಸ್ವರ್ಗಾಧಿಪತಿಯನ್ನು ಹೇಳಿದರೆ, ಮಹಾಯೋಗ ವೃತ್ತಿಯಿಂದ ಪರಮಾತ್ಮ ವಾಚಕವೇ ಆಗಿದೆ. ಐಶ್ವರ್ಯಾದಿಗಳು ಪರಮಾತ್ಮನಲ್ಲಿ ನಿರವಧಿಕವಾಗಿವೆ ಮತ್ತು ಇಂದ್ರಾದಿಗಳ ಐಶ್ವರ್ಯಾದಿಗಳು ಪರಮಾತ್ಮನ ಅಧೀನಗಳೇ ಆಗಿವೆ. ಈ ಅರ್ಥವನ್ನು ಹೇಳುವುದು ಆ ಶಬ್ದದ ಮಹಾಯೋಗ-ವೃತ್ತಿಯಿಂದ. ನಾರಾಯಣ - ವಿಷ್ಣು ಮೊದಲಾದ ಶಬ್ದಗಳು ವೇದಾದಿ-ಗಳಲ್ಲಿ ಪರಮಾತ್ಮ ವಾಚಕಗಳಾಗಿಯೇ ಪ್ರಯೋಗಿಸಲ್ಪಡುತ್ತವೆ. ಅನ್ಯರಲ್ಲಿ ಉಪಯೋಗಿಸಲ್ಪಡದೇ ಪರಮಾತ್ಮನಲ್ಲಿ ಮಾತ್ರ ಉಪಯೋಗಿಸಲ್ಪಡುವ ರೂಢಿಯುಳ್ಳವುಗಳಾಗಿವೆ. ಈ ಮೊದಲಾದ ಶಬ್ದಗಳು ಮಹಾರೂಢಿಯಿಂದ ಪರಮಾತ್ಮ ವಾಚಕಗಳೆಂದು ಹೇಳಲ್ಪಡುತ್ತವೆ. ವಿಷ್ಣು - ನಾರಾಯಣಾದಿ ಶಬ್ದಗಳು ಮಹಾ ಯೋಗರೂಢಿ ಎಂಬ ಪರಮ ಮುಖ್ಯ ವೃತ್ತಿಯುಳ್ಳವುಗಳೂ ಆಗಿವೆ. ತಮ್ಮ ಅವಯವಾರ್ಥಗಳಿಂದಲೂ, ಸರ್ವತ್ರ ವ್ಯಾಪ್ತ, ಗುಣಪೂರ್ಣ, ಇತ್ಯಾದಿ ಪರಮಾತ್ಮನ ಮಹಿಮೆಗಳನ್ನೇ ಸಾರುತ್ತವೆ.

ಹೀಗಿರುವ ಶಬ್ದವೃತ್ತಿ ಪ್ರಕಾರಗಳನ್ನು ತಿಳಿಯದಿದ್ದರೆ, ಶಬ್ದರೂಪ-ದಿಂದಿರುವ ಆಗಮಗಳಿಂದ ಬೋಧ್ಯವಾದ ಅರ್ಥಗಳನ್ನು ತಿಳಿಯಲಾರೆವು; ಅಷ್ಟು ಮಾತ್ರವಲ್ಲ (ಸಂಶಯ, ವಿಪರೀತಗಳನ್ನೂ ಗ್ರಹಿಸಲು) ಅಸ್ಪಷ್ಟವಾಗಿಯೂ ವಿರುದ್ಧವಾಗಿಯೂ ತಿಳಿಯಲು ಅವಕಾಶವಾಗುತ್ತದೆ. ಇದರಿಂದ ಆಗಮಗಳಲ್ಲಿ ಪ್ರಾಮಾಣ್ಯ ಬುದ್ಧಿಯೇ ದೊರೆಯದೇ ನಾಸ್ತಿಕತೆಯತ್ತ ಸೆಳೆಯಲ್ಪಡುತ್ತೇವೆ. ವೇದಾದಿ ಆಗಮಗಳ ಪ್ರಾಮಾಣ್ಯವನ್ನು ಅಂಗೀಕರಿಸಿ ಆತ್ಮಜ್ಞಾನಕ್ಕಾಗಿ ಯತ್ನಿಸುವುದೇ ಆಸ್ತಿಕ್ಯದ ಮುಖ್ಯ ಲಕ್ಷಣವೆಂದು ಪ್ರಥಮ ರತ್ನವಾದ ನಾಸ್ತಿಕ್ಯ ನಿರಾಸದ ಆರಂಭದಲ್ಲಿ ಹೇಳಿರುವುದನ್ನು ಇಲ್ಲಿ ಗಮನಿಸಬಹುದು.

**(೪) ಅರ್ಥಾಪತ್ತಿ :-** ದೇಹದಿಂದ ಪುಷ್ಟನಾಗಿದ್ದಾನೆ – ಹಗಲಿನಲ್ಲಿ ಊಟ ಮಾಡುವುದಿಲ್ಲ ಎಂಬುದರಿಂದ ರಾತ್ರಿ ಊಟ ಮಾಡುತ್ತಾನೆಂದು ತಿಳಿಯುತ್ತೇವೆ- ರಾತ್ರಿ ಭೋಜನದ ಜ್ಞಾನವಾಗುತ್ತದೆ. ರಾತ್ರಿಭೋಜನವನ್ನು ನಾವು ಕಂಡಿಲ್ಲ. ಪೀನತ್ವ (ಪುಷ್ಟತ್ವವು) ರಾತ್ರಿ ಭೋಜನವಿಲ್ಲದೇ ಉಪಪನ್ನವಾಗುವುದಿಲ್ಲ. ಇದರಂತೆ ಜೀವಂತ ಸ್ನೇಹಿತನೊಬ್ಬನು ಮನೆಯಲ್ಲಿ ಇಲ್ಲದಿರುವುದನ್ನು ಕಂಡು, ಅನ್ಯತ್ರ ಹೋಗಿದ್ದಾನೆಂದು ತಿಳಿಯುತ್ತೇವೆ- ಸತ್ತಿರುವನೆಂದು ತಿಳಿಯುವುದಿಲ್ಲ. ಈ ವಿಧದಿಂದ ಉಪಪತ್ತಿಯನ್ನು ಕಲ್ಪಿಸುವುದಕ್ಕೆ ಅರ್ಥಾಪತ್ತಿ ಎನ್ನುವರು. ಪೀನತ್ವವೂ ಮನೆಯಲ್ಲಿಲ್ಲದಿರುವುದೂ ಅನ್ಯಥಾ (ನಾವು ಕಲ್ಪಿಸಿ ತಿಳಿಯುವ ಪ್ರಕಾರವನ್ನು ಬಿಟ್ಟು ಬೇರೆ ರೀತಿಯಿಂದ) ಉಪಪನ್ನವಾಗುವುದಿಲ್ಲ-ವಾದ್ದರಿಂದ, ಅರ್ಥಾಪತ್ತಿಯು ಅನುಮಾನ ಪ್ರಭೇಧವಲ್ಲದೇ ಸ್ವತಂತ್ರವಾದ ಪ್ರತ್ಯೇಕ ಪ್ರಮಾಣವಲ್ಲ.

**(೫) ಉಪಮಾನ :-** ಪಟ್ಟಣವಾಸಿಯು ಗೋವನ್ನು ನೋಡಿದ್ದಾನೆ, ಗವಯವೆಂಬ ಅರಣ್ಯ ಪಶುವನ್ನು ಕಂಡಿಲ್ಲ. ಗವಯವು ಗೋಸದೃಶ್ಯವೆಂದು ಕೇಳುತ್ತಾನೆ. ಅರಣ್ಯಕ್ಕೆ ಹೋದಾಗ ಈ ಉಪಮಾನ ಜ್ಞಾನದಿಂದ ಗವಯವನ್ನು ಕಂಡು ಗವಯವೆಂದು ಗುರ್ತಿಸುತ್ತಾನೆ. ಇದರಿಂದ ಉಪಮಾನವೂ ಒಂದು ಪ್ರಮಾಣವೆಂದು ಕೆಲವರು ತಿಳಿಯುತ್ತಾರೆ. ಇದೂ ಅನುಮಾನದಲ್ಲಿಯೇ ಅಂತರ್ಭಾವಗೊಳ್ಳುತ್ತದೆ. ಅನುಮಾನವನ್ನು ಹೀಗೆ ಪ್ರಯೋಗಿಸಬಹುದು.

ಇದು ಗವಯ, ಗೋವಲ್ಲದೇ ಗೋಸದೃಶವಾಗಿರುವುದರಿಂದ; ಗವಯ-ವಲ್ಲದ್ದು ಗೋಸದೃಶವೂ ಅಲ್ಲ-ಘಟದಂತೆ.

**(೬) ಅಭಾವ** :- ಒಂದೆಡೆ ಒಂದು ವಸ್ತುವನ್ನು ಕಾಣದಿದ್ದರೆ ಅದರ ಅಭಾವವನ್ನು ತಿಳಿಯುತ್ತೇವೆ. ವಸ್ತುಗಳ ಅಭಾವ ಜ್ಞಾನವು ಅಭಾವದಿಂದಲೇ ಆಗುವುದಾದ್ದರಿಂದ, ಅಭಾವವೂ ಒಂದು ಪ್ರಮಾಣವೆಂದು ಹೇಳಲಾಗುತ್ತದೆ. ವಸ್ತುವಿನ ಅಭಾವ ಜ್ಞಾನವು ಪ್ರತ್ಯಕ್ಷ ಮತ್ತು ಅನುಮಾನಗಳಲ್ಲಿ ಅಂತರ್ಭಾವ-ವುಳ್ಳದ್ದು-ಅಭಾವವೆಂಬ ಪ್ರತ್ಯೇಕ ಪ್ರಮಾಣದಿಂದ ಉಂಟಾದುದಲ್ಲ. ವಸ್ತುವಿನ ಅಭಾವವನ್ನು ಪ್ರತ್ಯಕ್ಷದಿಂದಲೇ ತಿಳಿಯುತ್ತೇವೆ. ಮತ್ತು ಅದು ಅಲ್ಲಿದ್ದಿದ್ದರೆ ಕಾಣುತ್ತಿತ್ತು-ಕಾಣುತ್ತಾ ಇಲ್ಲ-ಆದ್ದರಿಂದ ಅಲ್ಲಿಲ್ಲಎಂಬ ಅನುಮಾನದಿಂದಲೂ ಸಿದ್ಧವಾಗುತ್ತದೆ. ಸುಖಾದಿಗಳನ್ನು ಸಾಕ್ಷಿ ಪ್ರತ್ಯಕ್ಷದಿಂದ ತಿಳಿಯುತ್ತೇವೆ. ದುಃಖಾದಿಗಳ ಅಭಾವದಿಂದಲ್ಲ. ಕಿವಿಗಳೇನೋ ಎಲ್ಲರಂತೆ ಇವೆ-ಕಾಣುತ್ತವೆ. ಆದರೆ ಕಿವುಡನಾಗಿದ್ದಾನೆ. ಶ್ರೋತ್ರೇಂದ್ರಿಯದ ಅಭಾವವನ್ನು, ಅದರ ಕಾರ್ಯವಿಲ್ಲದ್ದರಿಂದ ತಿಳಿಯುತ್ತೇವೆ. ಘಟಾದಿಗಳ ಪ್ರತ್ಯಕ್ಷದೊಂದಿಗೆ, ಕಾಣ-ದಿರುವುದೆಂಬ ಒಂದು ಧರ್ಮವಿದ್ದ ಮಾತ್ರಕ್ಕೆ, ಕಾಣದಿರುವುದನ್ನೇ (ಅಭಾವವನ್ನೇ) ಒಂದು ಪ್ರಮಾಣವೆಂದು ತಿಳಿಯಲು ಬಾರದು. ಹಾಗಾದರೆ, ಭಾವವಸ್ತುವನ್ನು (ಇರುವ ವಸ್ತುವನ್ನು) ಗ್ರಹಿಸುವ ಪ್ರತ್ಯಕ್ಷವು, ಅದರೊಂದಿಗೆ ಅದರ ಅಭಾವವನ್ನು ಗ್ರಹಿಸುವುದಿಲ್ಲವೆಂಬ ಧರ್ಮವನ್ನು ನಿಯಮೇನ (ತಪ್ಪದೇ) ಹೊಂದಿರುವುದರಿಂದ, ಪ್ರತ್ಯಕ್ಷವನ್ನು ಪ್ರಮಾಣವೆಂದು ಒಪ್ಪುವಲ್ಲಿ ಸಹ ಅಭಾವವನ್ನೇ ಪ್ರಮಾಣವೆಂದು ಒಪ್ಪಬೇಕಾದೀತು. ಕತ್ತಲೆಯಲ್ಲಿ ನೆಲವನ್ನು ಕೈದಡವಿನೋಡಿ ಘಟವಿಲ್ಲೆಂದು ತಿಳಿಯುವುದರಿಂದ, ಘಟಾಭಾವ ಜ್ಞಾನವು ಪ್ರತ್ಯಕ್ಷ ಮಾತ್ರದಿಂದ ಆದುದಲ್ಲವೆಂದು ತಿಳಿಯಬಾರದು. ಒಂದಕ್ಕಿಂತ ಹೆಚ್ಚು ಇಂದ್ರಿಯಗಳಿಗೆ ಗೋಚರಿಸುವ ವಿಷಯಗಳೂ (ವಸ್ತುಗಳೂ) ಉಂಟು. ಘಟವು ತ್ವಗಿಂದ್ರಿಯಕ್ಕೆ ಗೋಚರಿಸುವ ಸ್ಪರ್ಶಗುಣವುಳ್ಳದ್ದೂ ಆಗಿದೆ. ಮೇಲಾಗಿ, ಇಲ್ಲಿ ಘಟವಿಲ್ಲ - ಇದ್ದಿದ್ದರೆ ಕೈಗೆ ತಗಲುತ್ತಿತ್ತು - ತಗಲಿಲ್ಲ - ಆದ್ದರಿಂದ ಇಲ್ಲ ಎಂಬ ಅನುಮಾನದಿಂದಲೂ ಘಟಾಭಾವವು ಸಿದ್ಧವಾಗುತ್ತದೆ.

**(೭) ಐತಿಹ್ಯ :-** ಪ್ರವಾದ ಪರಂಪರೆಯು ಐತಿಹ್ಯವೆನಿಸುತ್ತದೆ. ಇದೂ ಸಹ ಪ್ರತ್ಯಕ್ಷ ಪ್ರಮಾಣವಾಗಲಾರದು; ಅನುಮಾನ ಮತ್ತು ಶಬ್ದ ಪ್ರಮಾಣಗಳಲ್ಲಿ ಅಂತರ್ಭಾವಗೊಳ್ಳುವ ಸ್ವಭಾವವುಳ್ಳದ್ದಾಗಿದೆ-ಆಪ್ತವಾಕ್ಯ-ವನ್ನು ಹೆಚ್ಚಾಗಿ ಅವಲಂಬಿಸುತ್ತದೆ. ಜ್ಞಾನಿ ಪರಂಪರೆಯುಳ್ಳ ಅಥವಾ ಗ್ರಂಥಸ್ಥ ಮಾತುಗಳಿಂದ, ಪ್ರತ್ಯಕ್ಷದಿಂದ ತಿಳಿಯಲಾಗದ ಅನೇಕ ವಿಷಯ-ಗಳನ್ನು ಇದರಿಂದ ತಿಳಿಯುತ್ತೇವೆ.

**(೮) ಸಂಭವ :-** ದೇವದತ್ತನೆಂಬುವನಲ್ಲಿ ೧,೦೦೦ ರೂ. ಗಳಿರುತ್ತವೆಂಬ ಜ್ಞಾನದಿಂದ, ಅವನಲ್ಲಿ ೫೦-೧೦೦ ರೂ. ಗಳು ಇರುತ್ತವೆಂದೂ ತಿಳಿಯುವಂತೆ, ಔದಾರ್ಯಾದಿ ಮಹದ್ಗುಣಗಳುಳ್ಳವನು, ಪರೋಪಕಾರ ಬುದ್ಧಿ ಮೊದಲಾದ ಅಲ್ಪಗುಣಗಳುಳ್ಳವನೆಂದೂ ತಿಳಿಯುತ್ತೇವೆ. ೧೦೦ ರೂ. ಗಳಿರುತ್ತವೆಂಬ ಜ್ಞಾನಕ್ಕೆ ೧,೦೦೦ ರೂ. ಗಳುಳ್ಳವನೆಂಬ ಜ್ಞಾನವು ಕಾರಣ. ಆದ್ದರಿಂದ ಸಂಭವವೂ ಅನುಮಾನವೇ-ಪ್ರತ್ಯೇಕ ಪ್ರಮಾಣವಲ್ಲ.

**(೯) ಪರಿಶೇಷ :-** ಇದೂ ಅನುಮಾನ ಪ್ರಮಾಣವೇ ಸರಿ. ಈ ಮನುಷ್ಯನು ಚೈತ್ರನೋ, ಮೈತ್ರನೋ, ದೇವದತ್ತನೋ ಎಂಬುದನ್ನು ತಿಳಿಯಲು, ಈ ಮೂವರಲ್ಲಿ ಒಬ್ಬನಾಗಿದ್ದು, ಚೈತ್ರನಲ್ಲ, ಮೈತ್ರನೂ ಅಲ್ಲವೆಂಬ ಜ್ಞಾನವಾಗಲು, ದೇವದತ್ತನೆಂದೇ ನಿಶ್ಚಯಿಸುತ್ತೇವೆ. ಇದು ಪರಿಶೇಷ ಪ್ರಮಾಣದಿಂದ ಸಿದ್ಧವೆನ್ನುತ್ತೇವೆ. ಪರಿಶೇಷವು ಅನುಮಾನನ ಪ್ರಭೇದವೆಂಬುದು ಸ್ಪಷ್ಟ.

ಹೀಗೆಯೇ ವಿವಿಧ ಚೇಷ್ಟೆಗಳು, ಶಕುನಗಳು, ಲಿಪಿಗಳು, ಇತ್ಯಾದಿ ಜ್ಞಾನಸಾಧನಗಳೂ ಅನುಭವದಿಂದ ಕಂಡುಬರುತ್ತವೆ. ಅವೆಲ್ಲವೂ ಪ್ರತ್ಯಕ್ಷಾದಿ ಮೂರರಲ್ಲಿ ಅಂತರ್ಭಾವವಾಗುತ್ತವೆ-ಪ್ರತ್ಯೇಕ ಪ್ರಮಾಣಗಳಲ್ಲ. ಅನೇಕ ಸನ್ನಿವೇಶಗಳಲ್ಲಿ ಈ ಪ್ರಮೇಯವು ಐತಿಹ್ಯದಿಂದ ಸಿದ್ಧವಾಗುತ್ತದೆ. ಇದು ಪರಿಶೇಷದಿಂದ ಸಿದ್ಧವಾಗುತ್ತದೆ, ಇತ್ಯಾದಿಯಾಗಿ ಹೇಳುವುದುಂಟು. ಅಲ್ಲಿ ಐತಿಹ್ಯಾದಿಗಳನ್ನು ಪ್ರತ್ಯೇಕ ಪ್ರಮಾಣಗಳನ್ನಾಗಿ ಅಂಗೀಕರಿಸಲಾಗಿದೆ ಎಂದು ತಿಳಿಯಕೂಡದು. ಸಂದರ್ಭಾನುಸಾರವಾಗಿ ಅನುಮಾನಾದಿಗಳ ಪ್ರಭೇದ ಸೂಚಕಗಳೆಂದು ಮಾತ್ರ ತಿಳಿಯಬೇಕು. ಆದ್ದರಿಂದ ಜ್ಞಾನಸಾಧನಗಳು

(ಅನುಪ್ರಮಾಣಗಳು) ಪ್ರತ್ಯಕ್ಷ-ಅನುಮಾನ ಮತ್ತು ಆಗಮಗಳೆಂಬ ಮೂರು ಮಾತ್ರವೆಂಬ ತತ್ವವಾದಿಗಳ ನಿರ್ಣಯವು ಸಾಧುವೆಂದು ಸಿದ್ಧವಾಗುತ್ತದೆ.

## ಪರಿಚ್ಛೇದ ೪

## ಅನುಪ್ರಮಾಣ ದೋಷಗಳು

ಅನುಪ್ರಮಾಣಗಳಿಂದ ಹುಟ್ಟುವ ಜ್ಞಾನವು ಸಂಶಯಾತ್ಮಕವೂ ಭ್ರಮಾತ್ಮಕವೂ ಆಗಿರಬಹುದೆಂದೂ, ಜ್ಞಾನಕ್ಕೆ ಪ್ರಾಮಾಣ್ಯವು ಸ್ವತಃ- ಅಪ್ರಾಮಾಣ್ಯವು ಪರತಃ, ಎಂದೂ ಈ ಹಿಂದೆ ನಿರೂಪಿಸಲಾಗಿದೆಯಷ್ಟೆ. ದೋಷಯುಕ್ತ ಸಾಧನಗಳಿಂದ ಮಾತ್ರ ಸಂಶಯ ಮತ್ತು ವಿಪರೀತ ಜ್ಞಾನಗಳುಂಟಾಗುತ್ತವೆ. ಸಾಕ್ಷಿಯು ನೇರವಾಗಿ ಗ್ರಹಿಸುವ ವಸ್ತು ವಿಷಯಗಳ ಜ್ಞಾನವು ಸರ್ವತ್ರ ಯಥಾರ್ಥವೇ ಆಗಿರುತ್ತದೆ. ಅನ್ಯಸಾಧನಗಳಿಂದ ಚೇತನನಲ್ಲಿ ಉಂಟಾಗುವ ಜ್ಞಾನವೂ, ಪ್ರಮಾಣವೇ-ಅದರ ಪ್ರಾಮಾಣ್ಯವನ್ನೂ ಚೇತನನು ಗ್ರಹಿಸಿದಾಗ ಮಾತ್ರ. ಸಂಶಯ, ವಿಪರೀತ ಜ್ಞಾನಗಳನ್ನು ಪಡೆಯುವವನೂ ಆತ್ಮನೇ. ಆದರೂ, ಆ ಜ್ಞಾನದ ಪ್ರಾಮಾಣ್ಯವನ್ನು ಗ್ರಹಿಸಿರುವುದಿಲ್ಲ-ವಸ್ತುಸಂಬಂಧವಾದ ಸಾಮಾನ್ಯ-ಜ್ಞಾನದ ಪ್ರಾಮಾಣ್ಯವನ್ನು ಮಾತ್ರ ಗ್ರಹಿಸಿ, ವಿಶಿಷ್ಟ ವಸ್ತುವಿನ ಜ್ಞಾನವನ್ನು (ಸಂಶಯಗ್ರಸ್ತವಾದುದನ್ನು) ಪರೀಕ್ಷೆಗೆ ಒಳಪಡಿಸಿ ನಿರ್ಣಯಿಸಿಕೊಳ್ಳುತ್ತಾನೆ. ಸಾಕ್ಷಿಯು ಪ್ರಾಮಾಣ್ಯ ನಿಶ್ಚಯದಿಂದ ಗ್ರಹಿಸಿದ ಜ್ಞಾನವೇ ಅನುಭವ-ವೆನಿಸುವುದು. ಅದು ಎಂದೂ ಅಪ್ರಮಾಣವಲ್ಲ.[13] ಅನುಪ್ರಮಾಣಗಳಲ್ಲಿ, ನಿರ್ದೋಷವಾದ ಶಬ್ದವೇ ಆಗಮವೆಂದೂ, ಶಬ್ದ ಸ್ವಾಭಾವಿಕ ದೋಷಗಳನ್ನು, ಅಬೋಧಕತ್ವ-ವಿಪರೀತ ಬೋಧಕತ್ವ, ಆಕಾಂಕ್ಷಾ, ಸನ್ನಿಧಿಯೋಗ್ಯತೆಗಳಿಲ್ಲ-ದಿರುವಿಕೆ ಇತ್ಯಾದಿಗಳೆಂದೂ ಈ ಹಿಂದೆ ಹೇಳಲಾಗಿದೆ. ಆಗಮಗಳಲ್ಲಿ, ಅಪ್ರಾಮಾಣ್ಯ ಕಾರಣಗಳಾಗುವ, ಇತರ ಸಂದರ್ಭ ಸನ್ನಿವೇಶಗಳ ವಿವರವನ್ನು ೨ನೇ ಭಾಗದಲ್ಲಿ (ಆಗಮ ಪ್ರಾಮಾಣ್ಯ ಸಮರ್ಥನೆಯಲ್ಲಿ) ನಿರೂಪಿಸ-ಲಾಗುತ್ತದೆ. ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಯಥಾರ್ಥ ಜ್ಞಾನವಾಗದಂತೆ

13. 2ನೇ ಜ್ಞಾನಪ್ರಾಮಾಣ್ಯ ಪರಿಚ್ಛೇದದಲ್ಲಿ ಇದರ ವಿಸ್ತಾರವನ್ನು ನೋಡಿಕೊಳ್ಳಬಹುದು.

ಪ್ರತಿಬಂಧಿಸಿ, ಸಂಶಯ- ಮಿಥ್ಯಾ ಜ್ಞಾನಗಳಿಗೆ ಕಾರಣವಾಗುವ ದೋಷಗಳನ್ನು ಈ ಪರಿಚ್ಛೇದದಲ್ಲಿ ವಿವೇಚಿಸಲಾಗುತ್ತದೆ.

ಅನುಪ್ರಮಾಣಗಳಿಂದ ದೊರೆಯುವ ಜ್ಞಾನವು ಬಾಹ್ಯ ಜ್ಞಾನವೆನಿಸುತ್ತದೆ. ಬಾಹ್ಯ ಜ್ಞಾನವು ಪ್ರತ್ಯಕ್ಷಾದಿ ಮೂರರಲ್ಲಿ ಒಂದರಿಂದ ಮಾತ್ರ ಉತ್ಪನ್ನ-ವಾಗಬೇಕೆಂಬ ನಿಯಮವಿಲ್ಲ. ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಒಂದು ವಿಷಯದ ಜ್ಞಾನ ಹುಟ್ಟಿದರೆ, ಎಂದರೆ ಎರಡೂ ಕೂಡಿಯೇ ಆ ಜ್ಞಾನದ ಉತ್ಪತ್ತಿಗೆ ಕಾರಣವಾಗಿದ್ದರೆ, ಪ್ರತ್ಯಕ್ಷವು ನಿರ್ದುಷ್ಟವಾಗಿದ್ದರೂ, ಅನುಮಾನದಲ್ಲಿ ದೋಷವಿದ್ದರೆ, ಆ ವಿಷಯಕ ಜ್ಞಾನವು ಅಪ್ರಮಾಣವೇ ಆಗುವುದು. ಹೀಗೆಯೇ ಮೂರು ಸಾಧನಗಳು ಒಟ್ಟುಗೂಡಿ ಉತ್ಪಾದಿಸುವ ಒಂದು ಜ್ಞಾನವು, ಯಾವುದೊಂದರಲ್ಲಿ ದೋಷವಿದ್ದರೂ ಯಥಾರ್ಥವಾಗುವುದಿಲ್ಲ. ಅನು-ಪ್ರಮಾಣಗಳ ಅಪ್ರಾಮಾಣ್ಯಕ್ಕೆ ಕಾರಣವಾಗುವ ದೋಷಗಳನ್ನು ತಾರ್ಕಿಕರೇ ಮೊದಲಾದ ಭಿನ್ನದರ್ಶನಕಾರರು ಮತ್ತು ವ್ಯಾಖ್ಯಾನಕಾರರು ಭಿನ್ನಪ್ರಕಾರ-ಗಳಿಂದಲೇ ನಿರೂಪಿಸುತ್ತಾರೆ. ಅವುಗಳೆಲ್ಲವನ್ನೂ ಈ ಚಿಕ್ಕ ಗ್ರಂಥದಲ್ಲಿ ವಿಸ್ತರಿಸುವುದು ಶಕ್ಯವಿಲ್ಲ ಮತ್ತು ಆವಶ್ಯಕವೂ ಅಲ್ಲ. ನಿಜವಾಗಿಯೂ ದೋಷಗಳೆಂದು ಪರಿಗಣಿಸಲಿಕ್ಕೆ ಯೋಗ್ಯವಾದ ಎಲ್ಲವನ್ನೂ ಒಳಗೊಳ್ಳುವ ಪ್ರಧಾನ ದೋಷಗಳನ್ನು ಮಾತ್ರ ಇಲ್ಲಿ ಸಂಕ್ಷೇಪವಾಗಿ ನಿರೂಪಿಸಲಾಗುತ್ತದೆ.

## ಪ್ರತ್ಯಕ್ಷ

ನಿಯಮೇನ ಯಥಾರ್ಥವಾದ ಸಾಕ್ಷಿ ಪ್ರತ್ಯಕ್ಷವನ್ನುಳಿದು ಇತರ ಆರು ವಿಧ ಪ್ರತ್ಯಕ್ಷಗಳಿವೆ. ಮಾನಸ ಪ್ರತ್ಯಕ್ಷ ಮತ್ತು ಪಂಚ ಜ್ಞಾನೇಂದ್ರಿಯಗಳ ಪ್ರತ್ಯಕ್ಷಗಳೇ ಅವು. ದೋಷಗಳಿಲ್ಲದ ಇಂದ್ರಿಯ ಮತ್ತು ವಿಷಯಗಳ ಯೋಗ್ಯ ಸಂಬಂಧವೇ ಪ್ರತ್ಯಕ್ಷವು. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳುಳ್ಳ ವಸ್ತುಗಳು ಕ್ರಮದಿಂದ ಶ್ರೋತ್ರ, ತ್ವಕ್, ಚಕ್ಷು, ಜಿಹ್ವೆ ಮತ್ತು ಘ್ರಾಣೇಂದ್ರಿಯಗಳಿಂದ ಗ್ರಹಿಸಲರ್ಹವಾದವುಗಳು. ರೂಪಸ್ಪರ್ಶ, ರೂಪರಸ, ರೂಪರಸಗಂಧ ಇತ್ಯಾದಿ ಮಿಶ್ರ ಗುಣಧರ್ಮಗಳುಳ್ಳ ವಸ್ತುಗಳೂ ಇವೆ. ಇವುಗಳನ್ನು ಆಯಾ ಇಂದ್ರಿಯಗಳಿಂದ ಗ್ರಹಿಸಿ, ಆಯಾ ವಸ್ತುಗಳ ಪೂರ್ಣ ಜ್ಞಾನವನ್ನು ಪಡೆಯುತ್ತೇವೆ.

ಯಾವುದೊಂದು ಇಂದ್ರಿಯವು ದೋಷವುಳ್ಳದ್ದಾದರೆ, ಅಂಥ ಮಿಶ್ರ ಗುಣಗಳುಳ್ಳ ವಸ್ತುವಿನ ಪೂರ್ಣ ಯಥಾರ್ಥ ಜ್ಞಾನವಾಗುವುದಿಲ್ಲ. ಕಾಚ-ಕಾಮಾಲಾದಿಗಳು ಚಕ್ಷುರಿಂದ್ರಿಯ ದೋಷಗಳು. ಶೀತ-ವಾತಾದಿಗಳು ಘ್ರಾಣ-ಶ್ರೋತ್ರೇಂದ್ರಿಯಗಳ ಶಕ್ತಿಯನ್ನು ವಿಕಾರಗೊಳಿಸುತ್ತವೆ. ಇಂದ್ರಿಯ-ದಲ್ಲಿ ದೋಷವಿದ್ದರೆ, ಅದು ವಸ್ತುವನ್ನು ಇದ್ದಂತೆ ಗ್ರಹಿಸುವುದಿಲ್ಲ. ಹಾಗೆಯೇ ಅರ್ಥದಲ್ಲಿ (ಗ್ರಹಿಸಲ್ಪಡುವ ವಸ್ತುವಿನಲ್ಲಿ) ದೋಷವಿದ್ದರೂ, ಇಂದ್ರಿಯವು ಅದನ್ನು ಇದ್ದಂತೆ ಗ್ರಹಿಸುವುದಿಲ್ಲ. ಕಣ್ಣಿಗೆ ಅತಿ ಸಮೀಪದಲ್ಲಿರುವುದು, ಅತಿ ದೂರದಲ್ಲಿರುವುದು, ಅತಿ ಸೂಕ್ಷ್ಮವಾಗಿರುವುದು ಇತ್ಯಾದಿಗಳು ಅರ್ಥ ದೋಷಗಳು. ಹಗ್ಗವನ್ನು ಕಂಡು ಸರ್ಪವೆಂದು ಭ್ರಮಿಸಲು, ಡೊಂಕಾಗಿ ಬಿದ್ದಿರುವುದು - ತುದಿಯು ಚೂಪಾಗಿದ್ದು ಮುಂದೆ ದಪ್ಪವಾಗಿರುವುದು, ಮಸಕಾದ ಬೆಳಕಿನಲ್ಲಿರುವುದು ಇತ್ಯಾದಿ ಹಗ್ಗದಲ್ಲಿರುವ ದೋಷಗಳೇ ಕಾರಣ.[14] ಹೀಗೆ ಇಂದ್ರಿಯಾರ್ಥ ಸನ್ನಿಕರ್ಷ ದೋಷಗಳೇ ಪ್ರತ್ಯಕ್ಷದ ಅಪ್ರಾಮಾಣ್ಯಕ್ಕೆ ಕಾರಣಗಳು. ಈ ವಿಧ ದೋಷಗಳಿಲ್ಲದ ಪ್ರತ್ಯಕ್ಷವು ಸರ್ವಥಾ ಪ್ರಮಾಣವೇ ಸರಿ. ದೋಷ ಜ್ಞಾನವಾದರೋ (ದೋಷಗಳಿವೆ ಎಂಬುದನ್ನು ತಿಳಿಯುವುದಾದರೋ) ಪ್ರಬಲ ಪ್ರಮಾಣದಿಂದಲೇ ಉಂಟಾಗಬೇಕು. ಇಂದ್ರಿಯಗಳಲ್ಲಿರುವ ದೋಷಗಳನ್ನು, ಆಯುರ್ವೇದದಿಂದಲೂ (ವೈದ್ಯ-ಶಾಸ್ತ್ರಜ್ಞರಿಂದಲೂ); ಜ್ಞಾನಿ ಪ್ರತ್ಯಕ್ಷದಿಂದಲೂ ಇತರ ಪ್ರಬಲ ಸಾಧನಗಳಿಂದಲೂ ತಿಳಿಯಬಹುದು. ಅರ್ಥದೋಷಗಳನ್ನು, ಪರೀಕ್ಷಾ ನಂತರ ಉಂಟಾಗ-ಬಹುದಾದ ಬಾಧ ಜ್ಞಾನಾದಿಗಳಿಂದ (ನಾನು ಕಂಡದ್ದು ಸರ್ಪವಲ್ಲ ಎಂಬ ಪ್ರಬಲ ಪ್ರತ್ಯಕ್ಷದಿಂದ ಉಂಟಾದ ವಿರೋಧದಿಂದಲೂ) ತಿಳಿಯಬೇಕು.[15] ಏವಂಚ ಪ್ರಬಲ ಪ್ರಮಾಣದಿಂದ ವಿರೋಧವುಳ್ಳ ಪ್ರತ್ಯಕ್ಷವು ಪ್ರಮಾಣವಲ್ಲ.

ಇನ್ನು ಮಾನಸ ಪ್ರತ್ಯಕ್ಷವೆಂಬುದು ಸ್ಮತಿ (ಸ್ಮರಣೆ) ರೂಪವಾದುದು. ಸ್ಮೃತಿಯು ಮಾನಸ ಪ್ರತ್ಯಕ್ಷದಿಂದ ಹುಟ್ಟುವುದೆಂದೂ ಹೇಳಲಾಗುತ್ತದೆ.

---

14. ಭ್ರಮ ಜ್ಞಾನವನ್ನು, ಸಾಕ್ಷಿಯು ಹೇಗೆ ಗ್ರಹಿಸಿ, ಪರೀಕ್ಷಿಸಿ ನಿಶ್ಚಯಿಸಿಕೊಳ್ಳುತ್ತದೆಂಬ ವಿವರವನ್ನು 2ನೇ ಪರಿಚ್ಛೇದದಲ್ಲಿ ನೋಡಿ ತಿಳಿಯಬಹುದು.
15. ಅನು ಪ್ರಮಾಣಗಳ ಪ್ರಾಬಲ್ಯ ದೌರ್ಬಲ್ಯಗಳ ವಿವೇಚನೆಯು ಈ ಮುಂದೆ ಪ್ರಸಕ್ತವಾಗಲಿದೆ.

ಇಂದ್ರಿಯಾರ್ಥಗಳ ಸನ್ನಿಕರ್ಷದಂತೆ, ಮನಸ್ಸಿಗೂ ಹಿಂದಿನ ಸಂಸ್ಕಾರಗಳಿಗೂ ಸಂಪರ್ಕ ಸ್ಮರಣೆಯುಂಟಾಗುತ್ತದೆ. ಪೂರ್ವದಲ್ಲಿ ಜ್ಞಾನೇಂದ್ರಿಯಗಳ ದ್ವಾರಾ ಗ್ರಹಿಸಿದ ವಿಷಯಗಳ ಅನುಭವ ಜನ್ಯವಾದುದೇ ಸಂಸ್ಕಾರವು. ಗುರೂಪದೇಶ, ಆಗಮಾದಿಗಳಿಂದ ಗ್ರಹಿಸಿದ ವಿಷಯಗಳೂ ಸಂಸ್ಕಾರ ರೂಪದಿಂದ ಮನಸ್ಸಿನಲ್ಲಿ ಶೇಖರವಾಗಿರುತ್ತದೆ. ಬಾಹ್ಯೇಂದ್ರಿಯ ಸಂಬಂಧವಿಲ್ಲದೇನೇ ಮನಸ್ಸು ಸ್ಮರಣೆಯನ್ನುಂಟುಮಾಡುತ್ತದೆ. ಮನಸ್ಸಿನ ಯಾವ ಸಂಸ್ಕಾರಗಳು, ಸಾಕ್ಷಿಯಿಂದ ಪರೀಕ್ಷಿಸಲ್ಪಟ್ಟು ಬಾಧರಹಿತ ನಿಶ್ಚಯ ಜ್ಞಾನವೆಂದು ಸಿದ್ಧವಾದುವುಗಳೋ, ಅವುಗಳಿಂದ ಹುಟ್ಟುವ ಸ್ಮರಣೆಯೂ, ಪ್ರಮಾಣವೇ – ಅದಕ್ಕೆ ಪ್ರತ್ಯೇಕವಾಗಿ ಪ್ರಾಮಾಣ್ಯವನ್ನು ಸಾಧಿಸಬೇಕಾದ ಅವಶ್ಯಕತೆ ಇಲ್ಲ.[16] ಹಾಗಲ್ಲದೇ, ಸಾಕ್ಷಿಯ ಅನುಭವ ಸಿದ್ಧವಾಗದೇ ತಾತ್ಕಾಲಿಕ ನಿರ್ಧಾರ ರೂಪದಿಂದ ಮನಸ್ಸಿನಲ್ಲಿ ಮೂಡಿದ ಹಿಂದಿನ ಸಂಸ್ಕಾರಗಳಿಂದಲೂ, ಅನಾದಿ ಕಾಮಕರ್ಮಾದಿಗಳಿಂದ ಕಲುಷಿತವಾದ ಮನಸ್ಸು ಭ್ರಮಾದಿಗಳಿಂದ ಸಂಗ್ರಹಿಸಿದ ಸಂಸ್ಕಾರಗಳಿಂದಲೂ, ಉಂಟಾಗುವ ಸ್ಮರಣೆಯು ಪ್ರಮಾಣವಾಗಲಾರದು.

ಅನಾದಿ ಕರ್ಮ, ಸ್ವಭಾವ, ಆಗಂತುಕ ದುಷ್ಟ ರಾಗ ದ್ವೇಷಗಳು, ಇತ್ಯಾದಿಗಳು ಮನೋದೋಷ ಕಾರಣಗಳು. ಈ ಮುಂತಾದ ಕಾರಣಗಳಿಂದ ದುಷ್ಟವಾದ ಮನಃಸಂಪರ್ಕದಿಂದ ನಾನಾ ಪ್ರಕಾರದ ಭ್ರಮಜ್ಞಾನವು ಹುಟ್ಟುತ್ತದೆ. ಗ್ರಾಮ ಸೂಕರ (ಊರಹಂದಿ), ನಾಯಿ, ಕಾಗೆ ಮೊದಲಾದವು-ಗಳಲ್ಲಿ ಘ್ರಾಣೇಂದ್ರಿಯದಿಂದ ದುರ್ಗಂಧದಲ್ಲಿ ಸುಗಂಧ ಭ್ರಮೆಯೂ, ಜಿಹ್ವೆಯಿಂದ ಅರುಚಿಯಲ್ಲಿ ಸುರುಚಿ ಭ್ರಮೆಯೂ; ಪತಂಗದಲ್ಲಿ, ಕಣ್ಣಿನಿಂದ ಬೆಂಕಿಯಲ್ಲಿ ಫಲ ಭ್ರಮೆಯೂ; ಪುರುಷನಲ್ಲಿ ಸ್ಪರ್ಶೇಂದ್ರಿಯದಿಂದ ಪರಸ್ತ್ರೀ ಶರೀರದಲ್ಲಿಸುಖಸ್ಪರ್ಶ ಭ್ರಮೆಯೂ; ಹರಿಣದಲ್ಲಿ (ಜಿಂಕೆ) ಶ್ರೋತ್ರೇಂದ್ರಿಯ-ದಿಂದ ವ್ಯಾಧಗೀತೆಯಲ್ಲಿ ಸಂಗೀತಭ್ರಮೆಯೂ; ಇತ್ಯಾದಿ ಭ್ರಾಂತಿ ಹುಟ್ಟುವುದುಂಟು. ಮನೋ ದೋಷದಿಂದ, ಪರಾಧೀನನಾದ ಜೀವನಲ್ಲಿ ಸ್ವತಂತ್ರ ಭ್ರಮೆಯೂ ಹುಟ್ಟುತ್ತದೆ. ಇಂದ್ರಿಯ ಅಥವಾ/ಮತ್ತು ಅರ್ಥಗಳ

16. ಮಾನಸೇ ದರ್ಶನೇ ದೋಷಾಸ್ಸ್ಯುರ್ನವ್ಯೆ ಸಾಕ್ಷಿದರ್ಶನೇ ।
ಸುದೃಢೋ ನಿರ್ಣಯೋ ಯತ್ರಜ್ಞೇಯಂ ತತ್ಸಾಕ್ಷಿದರ್ಶನಂ ।
ಮಾನಸ ಪ್ರತ್ಯಕ್ಷಜಾಸ್ಮೃತಿಃ । ಮಾನಸಂ ತದ್ಧಿವಿಜ್ಞಾನಂ ॥ (ಅನು-ವ್ಯಾ)

ದೋಷಮಾತ್ರವಾಗಿದ್ದಲ್ಲಿ, ಪ್ರಬಲ ಪ್ರತ್ಯಕ್ಷಾದಿ (ಪರೀಕ್ಷಾನಂತರ ಉಂಟಾಗುವ ಬಾಧ ಜ್ಞಾನಾದಿ)ಗಳಿಂದ ಭ್ರಮ ಪರಿಹಾರವಾಗುತ್ತದೆ. ದೋಷಯುಕ್ತ ಮನಸ್ಸಿನ ಸಂಬಂಧ ಮಾತ್ರದಿಂದ, ಚಕ್ಷುರಾದಿ ಇಂದ್ರಿಯಗಳಿಂದ ಭ್ರಮ ಜ್ಞಾನವು ಹುಟ್ಟಿದ್ದರೆ, ಮನೋದೋಷವು ಪರಿಹಾರವಾದನಂತರ, ಭ್ರಮ ಪರಿಹಾರವಾಗುತ್ತದೆ. ಮನೋದೋಷವು ಅಲ್ಪವಾಗಿದ್ದರೆ (ತಪ್ಪು ಭಾವನೆ, ಅನವಧಾನತೆ ಇತ್ಯಾದಿ ರೂಪದ್ದಾಗಿದ್ದರೆ), ನಿರ್ದುಷ್ಟ ಅನುಮಾನ - ನಿರವಕಾಶ (ಅನ್ಯಾರ್ಥಕ್ಕೆ ಅವಕಾಶವಿಲ್ಲದ) ಆಗಮ ವಾಕ್ಯ ಮೊದಲಾದುವು- ಗಳಿಂದ, ದೋಷವು ನೀಗುತ್ತದೆ. ಮನೋದೋಷವು ಪ್ರಬಲವಾಗಿದ್ದರೆ, ಶ್ವಾನಾದಿ ನೀಚ ದೇಹ ಪಾತಾನಂತರ ಆ ಭ್ರಮೆಗಳ ಪರಿಹಾರವಾಗುತ್ತದೆ. ಹೀಗಿರುವುದರಿಂದ, ಪ್ರತ್ಯಕ್ಷಾದಿಗಳಿಂದ ಹುಟ್ಟುವ ಜ್ಞಾನವೇ ಭ್ರಮಾತ್ಮಕವೆಂದು (ಮಿಥ್ಯೆಯೆಂದು) ತಿಳಿಯುವುದು ಸರ್ವಥಾ ಯುಕ್ತವಲ್ಲ. ಸದೃಶಗಳಾದ ಎರಡು ಸತ್ಯವಸ್ತುಗಳಿಲ್ಲದೇ ಭ್ರಮೆಯೇ ಉಂಟಾಗಲಾರದು - ಉಂಟಾಗುವುದಿಲ್ಲ. ಹಗ್ಗದಲ್ಲಿ ಸರ್ಪ ಭ್ರಮೆಯುಂಟಾಗಲು, ಸರ್ಪ ಜ್ಞಾನವೇ ಇಲ್ಲದವನಿಗೆ, ಸಾಧ್ಯವೇ ಇಲ್ಲವಷ್ಟೆ ಮತ್ತು ಡೊಂಕಾಗಿರುವುದು ಇತ್ಯಾದಿ ಸಾದೃಶ್ಯವೂ (ಹಗ್ಗ ಸರ್ಪಗಳಲ್ಲಿ) ಇರಬೇಕು. ಹೀಗೆಯೇ ಬುದ್ಧಿ ದೋಷದಿಂದ ನಿರ್ದುಷ್ಟ ಅನುಮಾನವೂ ಆಗಮವೂ ಯಥಾರ್ಥ ಜ್ಞಾನ ಜನಕವಾಗದೇ, ಸಂಶಯ - ವಿಪರೀತ ಜ್ಞಾನವನ್ನುಂಟುಮಾಡುತ್ತದೆ.

ಸ್ಮೃತಿಯಂತೆ ಅನುವಾದವೂ ಪ್ರಮಾಣವೇ. ಪ್ರತ್ಯಕ್ಷ ಸಿದ್ಧವಾದ ಅರ್ಥವನ್ನು ಅನುವಾದ ಮಾಡುವುದು ಸಹ ಪ್ರತ್ಯಕ್ಷ ಪ್ರಮಾಣದಲ್ಲಿಯೇ ಅಂತರ್ಭಾವಗೊಳ್ಳುತ್ತದೆ. ಅಗ್ನಿರ್ಹಿಮಸ್ಯ ಭೇಷಜಂ-ಅಗ್ನಿಯು ಹಿಮವನ್ನು ಪರಿಹರಿಸುತ್ತದೆ; ಬಿಸಿಲು ಚಳಿಯನ್ನು ಹೋಗಲಾಡಿಸುತ್ತದೆ ಇತ್ಯಾದಿಗಳಂತೆ. ಈ ಹಿಂದೆ ನೋಡಿದ ವಸ್ತುವೇ ಇದು ಎಂಬ ರೀತಿಯಿಂದ ಪುನಃ ಪ್ರತ್ಯಕ್ಷಕ್ಕೆ ಗೋಚರಿಸಿದ ವಸ್ತುವನ್ನು ಗುರ್ತಿಸಿ ತಿಳಿಯುವುದು **ಪ್ರತ್ಯಭಿಜ್ಞೆ**. ಸ್ಮೃತಿಸಹಕೃತ ಪ್ರತ್ಯಕ್ಷದಿಂದ ಪ್ರತ್ಯಭಿಜ್ಞೆಯು ಹುಟ್ಟುವುದರಿಂದ, ಪ್ರತ್ಯಭಿಜ್ಞೆಯು ಪ್ರತ್ಯಕ್ಷದಲ್ಲಿಯೇ ಅಡಕವಾಗುತ್ತದೆ. ಪ್ರತ್ಯೇಕ ಪ್ರಮಾಣವಲ್ಲ.

ಯದ್ಯಪಿ, ಈ ಹಿಂದೆ ಹೇಳಿದಂತೆ, ನಿರ್ದುಷ್ಟ ಇಂದ್ರಿಯಾರ್ಥ ಸನ್ನಿಕರ್ಷವೇ ಪ್ರತ್ಯಕ್ಷವು - ನಿರ್ದೋಷ ಲಿಂಗವೇ ಅನುಮಾನವು - ನಿರ್ದೋಷ ಶಬ್ದವೇ ಆಗಮವು. ಲಿಂಗವೆಂದರೆ, ಸಾಹಚರ್ಯಬಲೇನ ಅರ್ಥಗಮಕಂ ಲಿಂಗಂ ಎಂದು ಹೇಳುವಂತೆ, ವ್ಯಾಪ್ತಿಜ್ಞಾನ ಬಲದಿಂದ ಅನುಮಿತಿಯನ್ನು ಹುಟ್ಟಿಸುವುದು. ಲಿಂಗ - ಹೇತು - ಸಾಧನ ಇತ್ಯಾದಿ ನಾಮಗಳಿಂದ ಅದು ಕರೆಯಲ್ಪಡುತ್ತದೆ. ಪ್ರತ್ಯಕ್ಷಾದಿ ಅನುಪ್ರಮಾಣಗಳ ದೋಷಗಳನ್ನು ತಿಳಿಯುವುದು ಎಷ್ಟು ಅವಶ್ಯಕವೋ, ಅವುಗಳ ಪ್ರಾಬಲ್ಯ ದೌರ್ಬಲ್ಯಗಳನ್ನು ತಿಳಿಯಬೇಕಾದುದೂ ಅಷ್ಟೇ ಅವಶ್ಯಕ - ದೋಷಜ್ಞಾನ- ವಾದರೋ (ದೋಷವಿದೆ ಎಂದು ತಿಳಿದು ಗುರ್ತಿಸುವುದಾದರೋ) ಪ್ರಬಲ ಪ್ರಮಾಣ-ದಿಂದಲೇ ಆಗಬೇಕಲ್ಲದೇ ಅನ್ಯಮಾರ್ಗವಿಲ್ಲ. ಪ್ರಮಾಣಗಳಲ್ಲಿ ಪ್ರಾಬಲ್ಯ-ವೆಂಬುದು, ಬಾಹುಲ್ಯ ಮತ್ತು ಸ್ವಾಭಾವಿಕವೆಂದು ಎರಡು ವಿಧವಾಗಿರುವುದು. ಇವೆರಡರಲ್ಲಿ ಸ್ವಭಾವ ಪ್ರಾಬಲ್ಯವು ಬಲಿಷ್ಠವಾದುದು. ಉಪಜೀವ್ಯತ್ವ - ನಿರವಕಾಶತ್ವಾದಿಗಳು ಸ್ವಭಾವ ಪ್ರಾಬಲ್ಯ ಲಕ್ಷಣಗಳು. ಮತ್ತೊಂದಕ್ಕೆ ಆಶ್ರಯ ಅಥವಾ ಆಧಾರ ಭೂತವಾದುದು ಉಪಜೀವ್ಯ - ಆಶ್ರಯಿಸಿಕೊಂಡಿರುವುದು ಉಪಜೀವಕ. ಉದಾ:- ಅನುಮಾನವು ಪ್ರತ್ಯಕ್ಷ ಮತ್ತು ಆಗಮಗಳನ್ನು ಅನುಸರಿಸಿಕೊಂಡೇ ಪ್ರಮಾಣವಾಗುವುದು. ಆದ್ದರಿಂದ ಅನುಮಾನವು ಉಪಜೀವಕ - ಪ್ರತ್ಯಕ್ಷ ಆಗಮಗಳು ಉಪಜೀವ್ಯಗಳು. ಅರ್ಥಾಂತರಕ್ಕೆ ಎಡೆಗೊಡುವುದು ಸಾವಕಾಶತ್ವ - ಅದಕ್ಕೆ ಅವಕಾಶವಿಲ್ಲದಿರುವುದು ನಿರವಕಾಶತ್ವ. ಯಾಥಾರ್ಥ್ಯವು ಅಂದರೆ ಪ್ರಾಮಾಣ್ಯವು ಜ್ಞಾನ ಮತ್ತು ಶಬ್ದಗಳಲ್ಲಿ ಪ್ರಧಾನವು (ಮುಖ್ಯವಾಗಿ ಇದ್ದೇ ಇರುತ್ತದೆ). ಜ್ಞಾನವೆಂಬುದು, ಬಾಹ್ಯ ಮತ್ತು ಅನುಭವವೆಂದು ಎರಡು ವಿಧ. ಈ ಎರಡರಲ್ಲಿ ಅನುಭವವೇ ಬಲಿಷ್ಠವು. ಬಾಹ್ಯಜ್ಞಾನವು ನಿರ್ದೋಷ ಪ್ರತ್ಯಕ್ಷಾದಿಗಳಿಂದ ಹುಟ್ಟಿದರೆ ಮಾತ್ರ ಪ್ರಮಾಣವು. ಅನುಪ್ರಮಾಣಗಳಲ್ಲಿ ಸ್ವಭಾವದಿಂದಲೇ ಆಗಮಕ್ಕೆ ಪ್ರಾಬಲ್ಯವು. ಉಪಜೀವ್ಯ-ವಾದ ಅನುಭವಕ್ಕೆ ವಿರೋಧವಿಲ್ಲದಿದ್ದರೆ ಮಾತ್ರ ಅದರ ಪ್ರಾಬಲ್ಯವು. ಅನುಭವ ರೂಪದ ಜ್ಞಾನವೇ ಎಲ್ಲ ಪ್ರಮಾಣಗಳಿಗೂ ಉಪಜೀವ್ಯ. ಆದ್ದರಿಂದ ಸಾಕ್ಷಿ ಜ್ಞಾನವನ್ನು ವಿರೋಧಿಸುವ ಬಾಹ್ಯಜ್ಞಾನವು ಪ್ರಮಾಣವಾಗಲಾರದು.

ಪ್ರತ್ಯಕ್ಷಾದಿಗಳಿಂದ ಹುಟ್ಟುವ ಸಂಶಯ-ವಿಪರೀತ ಜ್ಞಾನಗಳು, ಪ್ರಬಲ ಪ್ರಮಾಣಗಳಾದ ಆಗಮ ಮತ್ತು ಪರೀಕ್ಷಾ ನಿಶ್ಚಿತ ಸಾಕ್ಷಿಜ್ಞಾನಗಳಿಂದಲೇ ಪರಿಹಾರವಾಗುತ್ತವೆ. ಹಗ್ಗದಲ್ಲಿ ಸರ್ಪಭ್ರಮೆಯು ಪರೀಕ್ಷಾನಂತರ ಉಂಟಾಗುವ ಪ್ರಬಲ ಪ್ರತ್ಯಕ್ಷದಿಂದಲೇ ಪರಿಹಾರಗೊಳ್ಳುತ್ತದೆ. ದೋಷ-ಯುಕ್ತವಾದ ನಾನಾ ಅನುಮಾನಗಳಿಗೆ ಪ್ರತ್ಯಕ್ಷದಿಂದಲೂ ಆಗಮದಿಂದಲೂ ಬಾಧ ಉಂಟಾಗುತ್ತದೆ. ಆಗಮಗಳಲ್ಲಿ ಸಹ ಸಾವಕಾಶ ವಾಕ್ಯಗಳು ನಿರವಕಾಶ ವಾಕ್ಯಗಳಿಂದ ಬಾಧಿತವಾಗುತ್ತವೆ. ಈ ಹಿಂದೆ ವಿವರಿಸಲಾದ ನಾನಾ ಶಬ್ದ ವೃತ್ತಿಗಳನ್ನೂ, ವ್ಯಾಕರಣ ನಿರುಕ್ತ್ಯಾದಿ ವೇದಾಂಗಗಳನ್ನೂ ತಿಳಿಯದಿರುವುದೆಂಬ ಬುದ್ಧಿ ದೋಷದಿಂದ ಸಂಶಯ ಅಥವಾ ವಿಪರೀತ ಜ್ಞಾನವೂ, ಆಗಮಗಳಿಂದ ಉಂಟಾಗಬಹುದು. ಉಪಜೀವ್ಯವಾದ ಸಾಕ್ಷಿಜ್ಞಾನವನ್ನು ವಿರೋಧಿಸದಿದ್ದರೆ, ಬಹು ಪ್ರಮಾಣಗಳುಳ್ಳದ್ದು, ಕೆಲವು ಪ್ರಮಾಣಗಳ ವಿರೋಧವಿದ್ದರೂ, ಬಹು ಪ್ರಮಾಣಗಳ ಪ್ರಾಬಲ್ಯದಿಂದ, ಪ್ರಾಮಾಣಿಕವೆನಿಸುತ್ತದೆ.[17]

## ಅನುಮಾನ

ಅನುಮಾನವು ನಾನಾ ಅವಯವ ವಾಕ್ಯಗಳುಳ್ಳದ್ದೆಂದೂ, ಎಷ್ಟು ಅವಯವಗಳಿಂದ ಅನುಮಿತಿ ಹುಟ್ಟುವುದೋ ಅಷ್ಟು ಮಾತ್ರದಿಂದ ಅನುಮಾನವು ಪೂರ್ಣಗೊಳ್ಳುವುದೆಂದೂ ಈ ಹಿಂದಿನ ಪರಿಚ್ಛೇದದಲಿ ಹೇಳಲಾಗಿದೆ. ಅನುಮಾನವು ಪ್ರಮಾಣವಾಗಲು ದೋಷರಹಿತವಾಗಿರಬೇಕು. ಅನುಮಾನ ದೋಷಗಳನ್ನು ಬಹು ಪ್ರಕಾರಕವಾದ ವಿಭಾಗಗಳಿಂದ ನಿರೂಪಿಸಲಾಗುತ್ತದೆ. ತಾರ್ಕಿಕರು, ದೋಷಗಳು-೨೩ ವಿಧವೆಂದು ಹೇಳುತ್ತಾರೆ. ಆದರೆ ಆ ಎಲ್ಲವೂ ಮುಖ್ಯವಾದ ೬ ದೋಷಗಳಲ್ಲಿ ಅಂತರ್ಭಾವ-ಗೊಳ್ಳುತ್ತವೆಂದು ತತ್ವವಾದಿಗಳು ನಿರ್ಧರಿಸಿರುವರು. ಅವು ಯಾವುವೆಂದರೆ, (೧) ವಿರೋಧ, (೨) ಅಸಂಗತಿ, (೩) ನ್ಯೂನತೆ, (೪) ಆಧಿಕ್ಯ (೫) ಸಂವಾದ ಮತ್ತು (೬) ಅನುಕ್ತಿ. ಇವುಗಳಲ್ಲಿ ವಿರೋಧವೆಂಬುದು ಬಹು ಪ್ರಭೇದ-ಗಳುಳ್ಳದ್ದು. ಇದು ಜಾತಿ ಮತ್ತು ನಿಗ್ರಹಸ್ಥಾನಗಳೆಂದು ಕರೆಯಲ್ಪಟ್ಟರೂ,

17. ನ ಚ ಪ್ರಮಾಣಬಹುತ್ವೇ ದೌರ್ಬಲ್ಯಮ್ ।
ದಾರ್ಢ್ಯಮೇವ ಹಿ ಬಹುವಾಕ್ಯ ಸಂವಾದೇ ದೃಷ್ಟಮ್ ॥

ವಿರೋಧವೇ ಹೆಚ್ಚಾಗಿ ಜಾತಿ ಎಂದು ಹೇಳಲ್ಪಡುತ್ತದೆ. ಸ್ವಪಕ್ಷವನ್ನು ಸಾಧಿಸುವ ಅಥವಾ ಪರಪಕ್ಷವನ್ನು ದೂಷಿಸುವ (ನಿರಾಕರಿಸುವ) ಸಂಕಲ್ಪಕ್ಕೆ ಭಂಗವುಂಟಾಗುವುದೇ ಪರಾಜಯವೆನಿಸುತ್ತದೆ. ಪರವಾದವನ್ನು ಖಂಡಿಸು-ವುದೇ ನಿಗ್ರಹವು. ಖಂಡನೆಗೆ ನಿಮಿತ್ತವಾಗುವ ದೋಷಗಳು ನಿಗ್ರಹಸ್ಥಾನ-ಗಳೆನಿಸುವುವು. ಇವು, ಸಾಕ್ಷಾದ್ದೋಷ ಮತ್ತು ವಾಚನಿಕ ದೋಷಗಳೆಂಬ ಎರಡು ವಿಭಾಗಗಳಲ್ಲಿ ಸೇರುತ್ತವೆ. ವಿರೋಧ-ಅಸಂಗತಿಗಳು ಮೊದಲಿನ ವಿಭಾಗ-ದಲ್ಲಿಯೂ, ನ್ಯೂನತೆ - ಅಧಿಕ್ಯಗಳು ಎರಡನೇ ವಿಭಾಗದಲ್ಲಿಯೂ ಅಡಕ-ವಾಗುತ್ತವೆ. ಇವುಗಳಲ್ಲಿ ಯಾವುದೊಂದು ಅಥವಾ ಹೆಚ್ಚು ದೋಷಗಳಿಂದ ಕೂಡಿದ ವಾದವು (ತರ್ಕವು), ಸಂವಾದ ಮತ್ತು ಅನುಕ್ತಿಗಳೆಂಬ ದೋಷಕ್ಕೆಡೆಯಿತ್ತರೆ, ದುಷ್ಟಾನುಮಾನವೆನಿಸುತ್ತದೆ.

ವಿರೋಧವೆಂಬುದು ಬಹು ಪ್ರಕಾರವಾಗಿರುವುದು. ಬಂಜೆಯ ಮಗ ಎಂಬಲ್ಲಿ ಸ್ವವಚನ ವಿರೋಧವಿದೆ. ಬಂಜೆಯಾದವಳು ತಾಯಿಯಾಗಲು ಶಕ್ಯವಿಲ್ಲ. ಒಬ್ಬಾಕೆಯು ಬಂಜೆ ಮತ್ತು ತಾಯಿಯೂ ಆಗಿರುವಳೆಂಬುದು ವಿರುದ್ಧ ನುಡಿ. ಮೂಕನು ಹೇಳುವ ಕಥೆ ಎಂಬಲ್ಲಿ, ಸ್ವಕ್ರಿಯಾ ವಿರೋಧವಿದೆ. ಮಾತನಾಡುವುದು ಮೂಕತ್ವಕ್ಕೆ ವಿರುದ್ಧ ಕ್ರಿಯೆ. ಇತ್ಯಾದಿ ಅಸಾಮಂಜಸ್ಯವೇ ವಿರೋಧವು - ಅನ್ವಯಗೊಳಿಸಲು ಶಕ್ಯವಲ್ಲದ ಮಾತುಗಳು. ಅಸಂಗತಿ ಎಂದರೆ, ವಾದಿಯು ಹೇಳುವ ವಾಕ್ಯಕ್ಕೆ ಅವನಿಗೆ ಸಮ್ಮತವಲ್ಲದ ಅರ್ಥವನ್ನು ತೋರಿಸಿ, ಅವನ ಉದ್ದೇಶಕ್ಕೆ ಭಂಗವನ್ನುಂಟುಮಾಡುವುದು. ಇದನ್ನು ಛಲವೆಂದೂ ಕರೆಯುವರು. ಹಸುವನ್ನು ಹಿಡಿದುಕೊಂಡು ಬಾ, ಎಂಬ ಅಭಿಪ್ರಾಯದಿಂದ ಗಾಮಾನಯ ಎಂದರೆ, ಗೋ ಶಬ್ದಕ್ಕೆ ಭೂಮಿ-ಯೆಂಬರ್ಥವೂ ಇರುವುದರಿಂದ, ಗೋ ತರುವುದು ಅಶಕ್ಯವೆಂದು ಹೇಳುವುದು ಅಸಂಗತಿ ದೋಷವನ್ನು ತೋರಿಸಿದಂತೆ. ವಾಕ್ ಛಲವೆಂದೂ ಇದನ್ನು ಕರೆಯಬಹುದು-ಇತ್ಯಾದಿ.

**ನ್ಯೂನತೆ :-** ಹೇಳಲು ಅಪೇಕ್ಷಿತವಾದ ಅರ್ಥವನ್ನು ಪೂರ್ಣಗೊಳಿಸದ ದೋಷ. ಪರ್ವತವು ಹೊಗೆಯಿರುವುದರಿಂದ ಎಂದು ಮಾತ್ರ ಹೇಳುವಂತೆ.

**ಆಧಿಕ್ಯ** :- ಆಕಾಂಕ್ಷಾ ಪೂರ್ತಿಗೊಳಿಸುವುದಕ್ಕಿಂತ ಹೆಚ್ಚು ಹೇಳುವುದು. ಪರ್ವತದಲ್ಲಿ ಅಗ್ನಿ ಇದೆ - ಹೊಗೆ ಇರುವುದರಿಂದ - ಪ್ರಕಾಶ ವಿಶೇಷ-ವಿರುವುದರಿಂದ ಸಹ ಎಂಬಂತೆ.

**ಸಂವಾದ** :- ವಿವಾದಕ್ಕೆ ವಿಷಯವಾದ ಪ್ರಮೇಯವನ್ನು ಪರನು ಹೇಳಿದಂತೆ ಒಪ್ಪಿಕೊಳ್ಳುವುದು.

**ಅನುಕ್ತಿ** :- ಪರೋಕ್ತಿಯನ್ನು ಎದುರಿಸಿ, ಮುಂದೇನೂ ಮಾತನಾಡಲಾರದೇ (ಪ್ರತ್ಯುಕ್ತಿಯನ್ನು ಹೇಳಲು ಅಸಮರ್ಥನಾಗಿ) ಸುಮ್ಮನೆ ಕೂಡುವುದು.

ಈ ಪ್ರಕಾರದ ದೋಷಗಳ ಸ್ವಭಾವವನ್ನು ಗಮನಿಸಿದರೆ, ನ್ಯೂನತೆ-ಆಧಿಕ್ಯಗಳು ಕೇವಲ ವಾಚನಿಕ (ಶಬ್ದ ಪ್ರಯೋಗ) ದೋಷಗಳೆಂದೂ, ಸಂವಾದ ಅನುಕ್ತಿಗಳೇ ಪರಾಜಯವನ್ನು ನಿಶ್ಚಯಿಸುವ (ವಕ್ತೃಗತ) ದೋಷಗಳೆಂದೂ, ಕಂಡುಬರುತ್ತದೆ. ಅನುಮಾನಗಳಿಗೆ ನೇರವಾಗಿ ಸಂಬಂಧಪಡುವ ದೋಷ-ಗಳೆಂದರೆ ಮೊದಲಿನ ಎರಡು (ವಿರೋಧ-ಅಸಂಗತಿಗಳು) ಮಾತ್ರ.

ಸಂವಾದ ಅನುಕ್ತಿಗಳೇ ನಿಗ್ರಹ ಸ್ಥಾನಗಳೆಂದು ಕರೆಯುವುದು ಅನ್ವರ್ಥವಾಗುತ್ತದೆ. ಇವುಗಳಿಂದ ಸಹಿತವಾದ ವಿರೋಧಾದಿ ದೋಷಗಳೇ ನಿಗ್ರಹ ಸ್ಥಾನಗಳು.[18]

ನೈಯಾಯಿಕ, ಪ್ರಾಭಾಕರ, ಭಾಟ್ಟ ಮೊದಲಾದ ದರ್ಶನಕಾರರು ಅನುಮಾನ ೪೮ ದೋಷಗಳನ್ನು ಬಹು ಪ್ರಕಾರದಿಂದ ವಿಭಾಗಿಸಿ ನಿರೂಪಿಸುತ್ತಾರೆ. ಈ ಎಲ್ಲವೂ ವಿರೋಧ ಮತ್ತು ಅಸಂಗತಿಗಳೆಂಬರಡರಲ್ಲಿ ಅಡಕವಾಗುತ್ತದೆ- ಪ್ರತ್ಯೇಕ ದೋಷಗಳೆಂದು ಪರಿಗಣಿಸುವ ಅವಶ್ಯಕತೆ ಕಂಡುಬರುವುದಿಲ್ಲ. ಅದು ಹೇಗೆಂದರೆ :- ವಿರೋಧವನ್ನು, ಪ್ರತಿಜ್ಞಾ ವಿರೋಧ, ಹೇತು ವಿರೋಧ ಮತ್ತು ದೃಷ್ಟಾಂತ ವಿರೋಧವೆಂದು ಮೂರು

---

18. ಉಪಪತ್ತಿ ದೋಷಾ ವಿರೋಧಾ ಸಂಗತೀ । ನ್ಯೂನಾಧಿಕೇ ವಾಚನಿಕೇ ।
ಸಂವಾದಾನುಕ್ತಿಯುತಾಸ್ತ ಏವನಿಗ್ರಹಾಃ ।। (ಪ್ರ.ಲ.)
ನಿಗ್ರಹಾ ಏತ ಏವಸ್ಯುಃ ಸಂವಾದಾನುಕ್ತಿ ಸಂಯುತಾಃ ।। (ವಿ.ತತ್ವ)

ವಿಧದಿಂದ ವಿಗಂಡಿಸಬಹುದು. ಪ್ರತಿಜ್ಞಾ ವಿರೋಧವು ಪ್ರಮಾಣ ವಿರೋಧ ಮತ್ತು ಸ್ವವಚನ ವಿರೋಧವೆಂದು ಎರಡು ವಿಧ. ಪ್ರಮಾಣ ವಿರೋಧವೂ ಸಹ ಪ್ರಬಲ ಪ್ರಮಾಣವಿರೋಧ ಮತ್ತು ಸಮಬಲ ಪ್ರಮಾಣವಿರೋಧವೆಂದು ಎರಡು ಪ್ರಕಾರ. ಜಗತ್ತು ಮಿಥ್ಯೆ-ಜ್ಞಾನ ವಿಷಯವಾದ್ದರಿಂದ-ಶುಕ್ತಿ ರಜತದಂತೆ ಎಂಬ ಅನುಮಾನದಲ್ಲಿ, ಜ್ಞಾನಕ್ಕೆ ವಿಷಯವಾದ ಘಟವು ಸತ್ಯ ಎಂಬ ಪ್ರತ್ಯಕ್ಷಕ್ಕೆ ವಿರೋಧವಿದೆ. ಇದು ಪ್ರಬಲ ಪ್ರಮಾಣ ವಿರೋಧಕ್ಕೆ ಉದಾಹರಣೆಯಾಗುತ್ತದೆ. ಪ್ರತ್ಯಕ್ಷ - ಅನುಮಾನಗಳಲ್ಲಿ ಪ್ರತ್ಯಕ್ಷವು ಪ್ರಬಲ. ಅನುಮಾನದಿಂದ, ಸಾಧ್ಯದ (ಸಾಧಿಸಬೇಕಾದ ವಸ್ತು ವಿಷಯಕ) ಸಾಮಾನ್ಯಾಕಾರ ಜ್ಞಾನವಾಗುತ್ತದೆ- ಪ್ರತ್ಯಕ್ಷದಿಂದ ಹಾಗಲ್ಲ. ಅದು, ಅನೇಕ ವಿಶೇಷಗಳಿಂದ ಸಹಿತವಾದ ಅದರ ಜ್ಞಾನವನ್ನುಂಟು ಮಾಡುತ್ತದೆ. ಇದರಿಂದ ಅನುಮಾನಕ್ಕಿಂತ ಪ್ರತ್ಯಕ್ಷವು ಪ್ರಬಲ-ವೆಂದು ತಿಳಿಯಬಹುದು. ಒಂದು ಅನುಮಾನಕ್ಕೆ ಮತ್ತೊಂದು ಅನುಮಾನದಿಂದ ವಿರೋಧ ಬಂದರೆ, ಸಮಬಲಪ್ರಮಾಣ ವಿರೋಧವಾಗುತ್ತದೆ. ಉದಾ :- ಜಗತ್ತು ಮಿಥ್ಯೆ - ಜ್ಞಾನ ಗೋಚರವಾಗಿರುವುದರಿಂದ - ಶುಕ್ತಿರಜತದಂತೆ (ಅದೂ ಜ್ಞಾನಗೋಚರವಾಗುವುದರಿಂದ) ಎಂಬ ಅನುಮಾನಕ್ಕೆ ಜಗತ್ತು ಸತ್ಯ-ಅನುಭವ ಸಿದ್ಧವಾದ್ದರಿಂದ-ಆತ್ಮನಂತೆ, ಎಂಬ ಅನುಮಾನದಿಂದ ವಿರೋಧವು. ದೇಹ ಭಿನ್ನವಾದ ಆತ್ಮನು, ನಾನು ಎಂಬ ಅನುಭವಕ್ಕೆ ಗೋಚರಿಸುವುದು ಸರ್ವಾನುಭವ ಸಿದ್ಧ. ಆದ್ದರಿಂದ ೨ನೇ ಅನುಮಾನದಿಂದ ಮೊದಲಿನ ಅನುಮಾನಕ್ಕೆ ವಿರೋಧವು. ಇನ್ನು ಸ್ವವಚನ ವಿರೋಧವೆಂಬುದು, ಅಪಸಿದ್ಧಾಂತ ಮತ್ತು ಜಾತಿ ಎಂದು ಎರಡು ವಿಧ. ಪರನು, ತನ್ನ ಮತದ (ತಾನು ಸಾಧಿಸಲು ಹೊರಟಿರುವ ಮಠದ) ಪೂರ್ವಾಚಾರ್ಯರು ಯಾವುದನ್ನು ಪ್ರಾಮಾಣಿಕವೆಂದು ಒಪ್ಪಿರುವರೋ ಅದಕ್ಕೆ ವಿರುದ್ಧವಾದುದನ್ನು ಅಂಗೀಕರಿಸಿದರೆ, ಅಪಸಿದ್ಧಾಂತವೆನಿಸುವುದು. ಈಶ್ವರನನ್ನೊಪ್ಪದ ಮತವನ್ನು ಅವಲಂಬಿಸಿ ವಾದಿಸುವವನು, ಈಶ್ವರನ್ನೊಪ್ಪುವ ಪ್ರಸಂಗಕ್ಕೆ (ವಾದದಲ್ಲಿ) ಸಿಲುಕಿ ಒಪ್ಪಿಕೊಂಡರೆ, ಅಥವಾ ಒಪ್ಪಲೇಬೇಕಾದ ಪರಿಸ್ಥಿತಿಯನ್ನು ಹೊಂದಿಸಲ್ಪಟ್ಟರೆ, ಅಪಸಿದ್ಧಾಂತವೆಂಬ ದೋಷಕ್ಕೆ (ಅವನ ವಾದವು) ಗುರಿಯಾಗುವುದು. ತನ್ನ ಮಾತುಗಳಲ್ಲಿಯೇ ವಿರೋಧವಿದ್ದರೆ, ಜಾತಿ ಎಂಬ ದೋಷವೆನಿಸುವುದು.

ಹೇತು ವಿರೋಧವೆಂಬುದು ಸ್ವರೂಪಾಸಿದ್ಧಿ ಮತ್ತು ಅವ್ಯಾಪ್ತಿ ಎಂದು ಎರಡು ವಿಧ. ಶಬ್ದವು ಅನಿತ್ಯ; ಚಕ್ಷುಸ್ಸಿಗೆ ಗೋಚರಿಸುವುದರಿಂದ ಎಂಬುದು, ಶಬ್ದವು ಚಕ್ಷುರಿಂದ್ರಿಯಕ್ಕೆ ವಿಷಯವಲ್ಲದ್ದರಿಂದ ಸ್ವರೂಪಾಸಿದ್ಧಿಗೆ ಉದಾಹರಣೆಯಾಗುತ್ತದೆ. ಅವ್ಯಾಪ್ತಿಯು ಮೂರು ವಿಧವಾಗಿರುತ್ತದೆ.

೧) ಹೇತುವು ಸಾಧ್ಯ ಮತ್ತು ಸಾಧ್ಯಾಭಾವಗಳೆಂಬ ಎರಡು ಸ್ಥಳ-ಗಳಲ್ಲಿಯೂ ಇರುವುದು. ಶಬ್ದವು ಅನಿತ್ಯ-ಪ್ರಮಾಣಗೋಚರವಾದ್ದರಿಂದ ಎಂಬಲ್ಲಿ, ಅನಿತ್ಯತ್ವವು ಸಾಧ್ಯ ಮತ್ತು ಗೋಚರತ್ವವೆಂಬುದು ಹೇತು. ನಿತ್ಯವಸ್ತುವೂ ಪ್ರಮಾಣಗೋಚರವಾಗಿದೆ. ಆದ್ದರಿಂದ ಹೇತುವು, ಅನಿತ್ಯ ವಸ್ತುವಿನಲ್ಲಿಯೂ, (ಅನಿತ್ಯತ್ವದ ಅಭಾವವುಳ್ಳ) ನಿತ್ಯವಸ್ತುವಿನಲ್ಲಿಯೂ ಇರುವುದಾಗಿ, ಅನಿತ್ಯವಸ್ತುವಿನಲ್ಲಿ ಮಾತ್ರವಿರುವಿಕೆ ಎಂಬ ವ್ಯಾಪ್ತಿಗೆ ಭಂಗ ಬಂತು-ಅತಿವ್ಯಾಪ್ತಿ ದೋಷ ಬಂತು.

೨) ಸಾಧ್ಯದಲ್ಲಿರದೇ ಹೇತುವು ಅದರ ಅಭಾವದಲ್ಲಿ ಮಾತ್ರವಿರುವು-ದಾದರೆ ಸಹ ಅವ್ಯಾಪ್ತಿ ದೋಷ ಬರುತ್ತದೆ. ಶಬ್ದವು ನಿತ್ಯ-ಹುಟ್ಟಿದ್ದಾದ್ದರಿಂದ ಎಂಬ ಅನುಮಾನದಲ್ಲಿ, ಹುಟ್ಟುವುದೆಂಬುದು ಅನಿತ್ಯ ವಸ್ತುಗಳಿಗೆ ಮಾತ್ರ ಸಲ್ಲುತ್ತದೆಯಾದ್ದರಿಂದ ವ್ಯಾಪ್ತಿಗೆ ಭಂಗ ಬಂತು.

೩) ಸಾಧ್ಯ ಮತ್ತು ಸಾಧ್ಯಾಭಾವದಲ್ಲಿ ಸಹ ಹೇತುವು ಇಲ್ಲದಿರುವುದು ಎಲ್ಲವೂ ಅನಿತ್ಯ-ಇರುವುದರಿಂದ ಎಂಬಲ್ಲಿ, ಎಲ್ಲವೂ ಎಂಬುದರಿಂದ, ಎಲ್ಲವೂ ಪಕ್ಷವೇ ಆಗಿ ವ್ಯಾಪ್ತಿಜ್ಞಾನಕ್ಕೇ ಅವಕಾಶವೇ ಇಲ್ಲ. ಇರುವಿಕೆ(ಅಸ್ತಿತ್ವ) ಎಂಬ ಹೇತು ಇದ್ದಲ್ಲಿ ಮಾತ್ರ ಅನಿತ್ಯತ್ವವೆಂಬ ಸಾಧ್ಯವಿರುತ್ತದೆಂಬ ವ್ಯಾಪ್ತಿಜ್ಞಾನ ಹೇಗಾದೀತು? ಹೇತ್ವಾಭಾಸಗಳೆಂದು ಅನ್ಯರು ಕರೆಯುವ ಅನೇಕಾಂತ, ಸಪ್ರತಿಪಕ್ಷ, ಅಸಿದ್ಧಿ, ಬಾಧ (ಅಥವಾ ಕಾಲಾತ್ಯಾಪದಿಷ್ಟ) ಇತ್ಯಾದಿಗಳು ಸಹ ಹೇತು ವಿರೋಧವೆಂಬ ಈ ಭಾಗದಲ್ಲಿಯೇ ಅಡಕವಾಗುತ್ತವೆ. ಅವುಗಳನ್ನು ಪ್ರತ್ಯೇಕ ದೋಷಗಳೆಂದು ಎಣಿಸುವ ಕಾರಣವಿಲ್ಲ.

**ದೃಷ್ಟಾಂತ ವಿರೋಧ** :- ಸಾಧ್ಯವೈಕಲ್ಯ - ಸಾಧನವೈಕಲ್ಯವೆಂದು ಎರಡು ವಿಧ. ಮನಸ್ಸು ಅನಿತ್ಯ - ಕ್ರಿಯೆಯುಳ್ಳದ್ದಾದ್ದರಿಂದ - ಪರಮಾಣುವಿನಂತೆ ಎಂಬ ಅನುಮಾನ ಪ್ರಯೋಗದಲ್ಲಿ, ದೃಷ್ಟಾಂತವಾದ ಪರಮಾಣುವು ನಿತ್ಯವಾದ್ದರಿಂದ ಮನಸ್ಸು ಅನಿತ್ಯವೆಂಬುದು ಅಸಾಧು-ಅಪ್ರಾಮಾಣಿಕ. ದೃಷ್ಟಾಂತದಲ್ಲಿ ಅನಿತ್ಯತ್ವ (ಸಾಧ್ಯ) ವಿಲ್ಲದ್ದರಿಂದ ಸಾಧ್ಯವಿಕಲತೆ (ರಾಹಿತ್ಯ - ವೈಕಲ್ಯ) ಎಂಬ ದೋಷವಿದೆ. ಇದೇ ಅನುಮಾನ ವಾಕ್ಯದಲ್ಲಿ ಕರ್ಮದಂತೆ ಎಂಬ ದೃಷ್ಟಾಂತವನ್ನು ಕೊಟ್ಟರೆ, ಕರ್ಮದಲ್ಲಿ ಕ್ರಿಯೆಯೆಂಬ ಸಾಧನವಿಲ್ಲದ್ದರಿಂದ ಸಾಧನವೈಕಲ್ಯ ದೋಷಕ್ಕೆ ಉದಾಹರಣೆಯಾಗುತ್ತದೆ. (ಕರ್ಮವು ಜಡ)

ಪರಪಕ್ಷವನ್ನು ದೂಷಿಸಲು, ಎಂದರೆ, ಎದುರಾಳಿಯು ಪ್ರಯೋಗಿಸುವ ಅನುಮಾನವು ದೋಷಯುಕ್ತವೆಂದು ತೋರಿಸಲು, ಮಾಡಬಹುದಾದ ಆಪಾದನೆಗಳು ನಾನಾಪ್ರಕಾರವಾಗಿರುವುವು. ಅವುಗಳಲ್ಲಿ ಮುಖ್ಯವಾದವು-ಗಳು, ಆತ್ಮಾಶ್ರಯ - ಅನ್ಯೋನ್ಯಾಶ್ರಯ - ಚಕ್ರಕಾಶ್ರಯ - ಅನವಸ್ಥಾ - ಕಲ್ಪನಾಗೌರವ - ಶ್ರುತಹಾನ - ದೃಷ್ಟಹಾನಗಳೆಂಬವು. ಈ ಆಪಾದನೆಗಳು ಅನುಮಾನರೂಪದಿಂದಲೇ ಇರುತ್ತವೆ. ಇವುಗಳಿಗೆ ಸಹ ಅನುಮಾನದಲ್ಲಿ ಅಂತರ್ಭಾವವನ್ನು ತಿಳಿಯಬೇಕು.

**ಆತ್ಮಾಶ್ರಯ** :- ಪಟವು ಪಟದಿಂದ ಹುಟ್ಟುವುದು ಎಂದು ಹೇಳಿದರೆ ಆತ್ಮಾಶ್ರಯವೆಂಬ ಆಪಾದನೆಯನ್ನು ಹೊರಿಸಬಹುದು. ಪಟವು (ಬಟ್ಟೆ-ವಸ್ತ್ರವು) ತಂತುಗಳಿಂದ (ನೂಲೆಳೆಗಳಿಂದ) ಹುಟ್ಟುವುದು ಪ್ರಾಮಾಣಿಕ. ಕಾರಣವಾದುದು ಕಾರ್ಯಕ್ಕಿಂತ ಪೂರ್ವದಲ್ಲಿ ಸರ್ವತ್ರ ಕಂಡುಬರುತ್ತದೆ. ಪಟಕ್ಕೆ ಪಟವೇ ಕಾರಣವೆಂದರೆ, ಕಾರ್ಯವಾದ ಪಟವು ಮೊದಲು ಕಾರಣ-ರೂಪದಿಂದಿರಬೇಕಾಗುವುದು. ಒಂದೇ ವಸ್ತುವು ಕಾರಣ ಕಾರ್ಯರೂಪ ದಿಂದಿರುವುದನ್ನು ಎಲ್ಲಿಯೂ ಕಂಡಿಲ್ಲ. ತನಗೆ ತಾನೇ ಕಾರಣವೆಂದು ಹೇಳುವುದು ಆತ್ಮಾಶ್ರಯವೆಂದು, ಅನ್ವಯ-ವ್ಯತಿರೇಕಾನುಮಾನರೂಪದಿಂದ, ಆಪಾದಿಸಲು ಬರುತ್ತದೆ.

**ಅನ್ಯೋನ್ಯಾಶ್ರಯ** :- ಎರಡು ಪದಾರ್ಥಗಳಲ್ಲಿ ಒಂದಕ್ಕೊಂದು ಪರಸ್ಪರ ಕಾರಣವೆಂದು ಹೇಳುವುದಾದರೆ ಈ ಆಪಾದನೆಗೆ ಅವಕಾಶವಾಗುತ್ತದೆ.

**ಚಕ್ರಕಾಶ್ರಯ** :- ಬಹು ವಸ್ತುಗಳಲ್ಲಿ ಒಂದಕ್ಕೆ ಇದು ಕಾರಣ ಇದಕ್ಕೆ ಮತ್ತೊಂದು ಕಾರಣ. ಅದಕ್ಕೆ ಮತ್ತೊಂದು ಕಾರಣ - ಅದಕ್ಕೆ ಮೊದಲಿನದು ಕಾರಣವೆಂದು ಹೇಳುವುದು.

**ಅನವಸ್ಥಾ** :- A ಇಂದ B ಹುಟ್ಟಿತು; C ಇಂದ A ಹುಟ್ಟಿತು; D ಇಂದ C ಹುಟ್ಟಿತು, ಎಂದು ಪ್ರಮಾಣಸಿದ್ಧವಲ್ಲದ ಕಾರ್ಯ ಕಾರಣ ಪರಂಪರೆಗಳನ್ನು ಕಲ್ಪಿಸುತ್ತಾ ಎಷ್ಟು ಮುಂದೆ ಹೋದರೂ ಪ್ರಮಾಣಸಿದ್ಧವಾದ ಮೂಲಕಾರಣವು ಲಭ್ಯವಾಗದಿರುವುದು.

**ಶ್ರುತಹಾನ** :- ವೇದಸಿದ್ಧ ಪ್ರಮೇಯವನ್ನು ಕೈಬಿಟ್ಟು ವಾದಿಸುವುದು. ವೇದವು ಈಶ್ವರನನ್ನು ಸರ್ವಜ್ಞನೆಂದೂ ಜಗತ್ಕರ್ತನೆಂದೂ ಹೇಳುತ್ತಿರುವಲ್ಲಿ, ಜಗತ್ಕರ್ತನಾಗಿದ್ದಾನೆ - ಸರ್ವಜ್ಞನಲ್ಲವೆಂದು ಹೇಳುವುದು. ಸರ್ವಜ್ಞನಲ್ಲದಿದ್ದರೆ ಜಗತ್ಕರ್ತನಲ್ಲವೆಂದೂ ಆಗಲಿ ಎಂಬ ಆಪಾದನೆಗೆ ಅವಕಾಶ ಕೊಡುತ್ತದೆ.

**ದೃಷ್ಟಹಾನ** :- ಪರ್ವತದಲ್ಲಿ ಹೊಗೆಯಿರುವುದೆಂದು ಒಪ್ಪಿ ಬೆಂಕಿಯಿಲ್ಲ-ವೆಂದು ಹೇಳುವುದು. ಬೆಂಕಿಯಿಲ್ಲವೆಂದರೆ ಹೊಗೆಯೂ ಇಲ್ಲದೇಹೋಗಲಿ ಎಂಬ ಆಪಾದನೆಗೆ ಒಳಗಾಗುತ್ತದೆ.

**ಕಲ್ಪನಾಗೌರವ** :- ಪ್ರತ್ಯಕ್ಷಸಿದ್ಧವಲ್ಲದುದನ್ನು ಕಲ್ಪಿಸುವುದು ಅದೃಷ್ಟ ಕಲ್ಪನೆಯು; ವೇದೋಕ್ತವಲ್ಲದುದನ್ನು ಕಲ್ಪಿಸುವುದು ಅಶ್ರುತ ಕಲ್ಪನವು. ಅಶ್ರುತ ಅದೃಷ್ಟ ಕಲ್ಪನೆಗಳು ಅನೇಕವಾದರೆ ಕಲ್ಪನಾಗೌರವವೆನಿಸುವುದು. ಮೊಲದ ಕೊಂಬಿನಲ್ಲಿ ಬಂಜೆಯ ಮಗನಾದ ಒಬ್ಬ ಕುರುಡನು ಹಗಲಿನಲ್ಲಿ ನಕ್ಷತ್ರಗಳನ್ನು ಎಣಿಸುತ್ತಾನೆ ಎಂಬಂತೆ ಅನೇಕ ಅಪ್ರಾಮಾಣಿಕ ವಿಷಯಗಳನ್ನು ಕಲ್ಪಿಸುವುದು. ಈ ಮೊದಲಾದ ಆಪಾದನೆಗಳನ್ನು ಹೊರಿಸಿ ಪರಪಕ್ಷವನ್ನು ದೋಷ-ಯುಕ್ತವೆಂದು ಸಾಧಿಸಬಹುದು. ಏವಂ ಚ ''ಸ್ವಪಕ್ಷ ಸಾಧಕ''-''ಪರಪಕ್ಷ ದೂಷಣಾನುಮಾನ''ಗಳೆಂದು ಅನುಮಾನಗಳು ಎರಡು ಪ್ರಕಾರವಾಗಿರುತ್ತವೆ. ಈ ಮೊದಲು ಹೇಳಿದ ಆತ್ಮಾಶ್ರಯಾದಿಗಳೆಲ್ಲವೂ ತರ್ಕಪರಾಹತಿ ಇತ್ಯಾದಿ ನಿಗ್ರಹ ಸ್ಥಾನಗಳಲ್ಲಿ ಅಂತರ್ಭಾವಗೊಳ್ಳುತ್ತವೆ. ಇವು ಅಸಿದ್ಧಿಯಲ್ಲಿಯೂ, ಅಸಿದ್ಧಿ ಮೊದಲಾದವುಗಳು, ಈ ಮೇಲೆ ನಿರೂಪಿಸಿರುವ ವಿರೋಧ-ಅಸಂಗತಿ ಮೊದಲಾದ ಅನುಮಾನ ದೋಷಗಳಲ್ಲಿಯೂ ಅಡಕವಾಗುತ್ತವೆ.

# ಆಗಮ ಪ್ರಾಮಾಣ್ಯ

## ಭಾಗ - ೨

## ಪರಿಚ್ಛೇದ ೧

## ಪೌರುಷೇಯಾಗಮಗಳು

ದೋಷರಹಿತ ಶಬ್ದವೇ ಆಗಮವೆಂದು ಈ ಹಿಂದೆ ಹೇಳಲಾಗಿದೆ. ಆಗಮವು ನಿತ್ಯ ಮತ್ತು ಅನಿತ್ಯವೆಂದು ಎರಡು ವಿಧವಾಗಿದೆ. ಎಲ್ಲ ವೇದಗಳೂ ನಿತ್ಯ ಮತ್ತು ಅಪೌರುಷೇಯ (ಪುರುಷಕೃತವಾದವುಗಳಲ್ಲ) - ಅತ ಏವ ಸ್ವತಃ ಪ್ರಮಾಣಗಳು. ಈ ಪ್ರಮೇಯಗಳನ್ನು ಮುಂದಿನ ಪರಿಚ್ಛೇದದಲ್ಲಿ ವಿಮರ್ಶಿಸಲಾಗುತ್ತದೆ. ಪುರಾಣಗಳು - ಧರ್ಮಶಾಸ್ತ್ರಾದಿ ಪುರುಷಕೃತ ಶಬ್ದ ರಾಶಿಗಳು ಪೌರುಷೇಯಾಗಮಗಳೆನಿಸುತ್ತವೆ. ಇವು ಅನಿತ್ಯವಾದವುಗಳು. ಇವುಗಳಲ್ಲಿ ದೋಷಗಳಿರಬಹುದು. ಆಗ ಆ ವಾಕ್ಯಗಳು ಅಪ್ರಮಾಣ-ಗಳಾಗುತ್ತವೆ. ಹೀಗೆ ಅಪ್ರಮಾಣಗಳಾಗಲು ಕಾರಣಗಳನ್ನು ತಿಳಿಯ-ಬೇಕಾದುದು ಅವಶ್ಯಕ. ದೋಷಾಭಾವವನ್ನು ತಿಳಿಯಲು ಅವಶ್ಯಕವಾದ ದೋಷ ಕಾರಣಗಳನ್ನು ಮಾತ್ರ ಈ ಪರಿಚ್ಛೇದದಲ್ಲಿ ವಿವೇಚಿಸಲಾಗುತ್ತದೆ.

ಶಾಬ್ದಜ್ಞಾನವು (ಶಬ್ದದಿಂದಾಗುವ ಜ್ಞಾನವು) ಪ್ರಮಾಣವಾಗಬೇಕಾದರೆ, ಶಬ್ದವು ಅಪೌರುಷೇಯವಾಗಿರಬೇಕು ಅಥವಾ ಅದನ್ನು ಉಚ್ಚರಿಸುವವನು (ಹೇಳುವವನು) ಆಪ್ತನಾಗಿರಬೇಕು. ಆಪ್ತನೆಂದರೆ ಯಾರು, ಯಾವ ಲಕ್ಷಣಗಳಿಂದ ವಕ್ತೃವಿನ ಆಪ್ತತ್ವವನ್ನು ತಿಳಿಯಬಹುದು, ಎಂಬುದನ್ನು ಮೊದಲಿಗೆ ನಿರ್ಧರಿಸಿಕೊಳ್ಳಬೇಕು. **ಪೌರುಷೇಯಾಗಮಗಳ ಪ್ರಾಮಾಣ್ಯವು ಆಪ್ತತ್ವವನ್ನು ಹೆಚ್ಚಾಗಿ ಅವಲಂಬಿಸಿರುತ್ತದೆ.** ಆಪ್ತತ್ವಸಾಧಕ ಲಕ್ಷಣ-ಗಳಾವುವೆಂದರೆ:- (೧) ವಿವಕ್ಷಿತಾರ್ಥ ತತ್ತ್ವಜ್ಞಾನವಿರಬೇಕು. ಎಂದರೆ, ಹೇಳಬೇಕೆಂದಿರುವ ವಿಷಯ, ವಸ್ತು ಅಥವಾ ಅರ್ಥದ ಯಥಾರ್ಥ-ಜ್ಞಾನವುಳ್ಳವನಾಗಿರಬೇಕು. (೨) ಹೇಳಬೇಕೆಂಬ ಇಚ್ಛೆಯಿರಬೇಕು.

(೩) ಇಂದ್ರಿಯಪಾಟವವಿರಬೇಕು. (೪) ಕೇಳುವವನನ್ನು ವಂಚಿಸುವ ಅಭಿಪ್ರಾಯ-ವಿರಕೂಡದು. ಹೇಳಬೇಕಾದ ವಿಷಯವನ್ನು ತಾನೇ ಸರಿಯಾಗಿ ತಿಳಿಯದವ-ನಾಗಿದ್ದರೆ, ಅಂಥವನ ಮಾತುಗಳನ್ನು ಪ್ರಮಾಣವೆಂದು ಒಪ್ಪಲಾಗುವುದಿಲ್ಲ. ತಿಳಿಸಿಕೊಡಬೇಕೆಂಬ ಇಚ್ಛೆಯೇ ಇಲ್ಲದಿದ್ದರೆ, ತನಗೆ ತಿಳಿದಿದ್ದರೂ, ಹೇಳುವುದಿಲ್ಲ ಅಥವಾ ಹೇಳಿದರೂ ಪೂರ್ಣವಾಗಿ ತಿಳಿಸಿ (ಯಥಾರ್ಥಜ್ಞಾನವಾಗುವಂತೆ) ಹೇಳುವುದಿಲ್ಲ. ವಕ್ತೃವಿಗೆ (ಹೇಳುವವನಿಗೆ) ಇಂದ್ರಿಯಪಟುತ್ವವಿರಬೇಕು. ಕಿವುಡನಾದರೆ ಅಥವಾ ಸರಿಯಾಗಿ ಕೇಳದಿದ್ದರೆ ನಾವು ಕೇಳುವುದೊಂದು-ಅವನು ಹೇಳುವುದೊಂದು ಆಗುತ್ತದೆ. ಬಾಯಲ್ಲಿ ಹಲ್ಲುಗಳಿಲ್ಲದಿದ್ದರೆ, ನಾಲಿಗೆ ಸರಿಯಾಗಿ ಚಲಿಸದಿದ್ದರೆ, ತೊದಲುತ್ತಿದ್ದರೆ, ಉತ್ತರಗಳನ್ನು ಅಸ್ಪಷ್ಟವಾಗಿಯೂ, ತಪ್ಪಾಗಿ ಗ್ರಹಿಸುವಂತೆಯೂ ಉಚ್ಚರಿಸಬಹುದು. ಈ ದೋಷಗಳಿಲ್ಲದಿದ್ದರೂ, ಕೇಳುವವನನ್ನು ವಂಚಿಸಬೇಕೆಂಬ ಅಭಿಪ್ರಾಯದಿಂದ ಮಾತನಾಡಿದರೆ ಅದೂ ಪ್ರಮಾಣವಾಗಲಾರದು. ಶಬ್ದ ದೋಷಗಳು ಸರ್ವತ್ರ ಪುರುಷ ದೋಷಾಧೀನಗಳಾಗಿರುವುವು. ಈ ಹಿಂದೆ ನಿರೂಪಿಸಲಾದ ಶಬ್ದ ದೋಷಗಳೂ ಇರಕೂಡದು. ಅರ್ಥಜ್ಞಾನವಾಗಲು ಆವಶ್ಯಕವಾದ ಆಕಾಂಕ್ಷಾ, ಸನ್ನಿಧಿ, ಯೋಗ್ಯತೆಗಳಿರಬೇಕು.[19]

ವಕ್ತಾರನು ಪೂರ್ವೋಕ್ತ ದೋಷಗಳಿಲ್ಲದ ಆಪ್ತನಾದರೂ ಅವನ ವಾಕ್ಯಗಳು ಪ್ರಮಾಣಗಳಾಗಬೇಕಾದರೆ ಶ್ರೋತ್ರಾನುಕೂಲ್ಯ ಮತ್ತು ಸಂದರ್ಭಾನು-ಕೂಲ್ಯಗಳೂ ಇರಬೇಕು. ಶ್ರೋತೃವಿನಲ್ಲಿ (ಕೇಳುವವನಲ್ಲಿ) ಸಹ ಇಂದ್ರಿಯ-ಪಾಟವ, ತಿಳಿಯಬೇಕೆಂಬ ಇಚ್ಛೆ ಮತ್ತು ಆದರಗಳಿರಬೇಕು. ಹೇಳಿದ್ದನ್ನು ಗ್ರಹಿಸುವ ಸಾಮರ್ಥ್ಯವೂ ಇರಬೇಕು. ಶ್ರೀಮದ್ಭಗವದ್ಗೀತೆಯ ರಹಸ್ಯ ಪ್ರಮೇಯಗಳನ್ನು ಚಿಕ್ಕಬಾಲಕನು ಗ್ರಹಿಸುವುದೆಂತು? ಬಾಲಕನಿಗೆ ಹೇಳಿದ ಮಾತುಗಳಲ್ಲಿ ಅವನಿಗೆ ಪ್ರಾಮಾಣ್ಯ ಬುದ್ಧಿಯು ಹೇಗೆ ಹುಟ್ಟೀತು? ಹೀಗೆಯೇ ಉಪದೇಶಮಾಡಿದ ಸಂದರ್ಭವೂ ಯೋಗ್ಯವಾಗಿರಬೇಕು. ವಿವಿಧ ಜನರಿಂದ ತುಂಬಿದ ರೈಲುಗಾಡಿಯಲ್ಲಿ, ಅನೇಕರು ಅನೇಕ ವಿಷಯಗಳನ್ನು ಪರಸ್ಪರ

19. 3ನೇ ಪರಿಚ್ಛೇದದಲ್ಲಿ ಆಗಮ ಭಾಗವನ್ನು ಇಲ್ಲಿ ನೋಡಬಹುದು.

ಮಾತನಾಡುತ್ತಾ ಬಹು ಗಲಾಟೆಗಳಾಗುತ್ತಿರುವಾಗ, ಒಬ್ಬನು ಮತ್ತೊಬ್ಬನನ್ನು ಒಂದು ಶಾಸ್ತ್ರವಿಷಯಕ್ಕೆ ಪ್ರಶ್ನಿಸಿದರೆ, ಹೇಳುವವನು ಆಪ್ತನಾಗಿದ್ದರೂ (ಪೂರ್ವದಲ್ಲಿ ಹೇಳಿದ ದೋಷಗಳಿಲ್ಲದವನಾಗಿದ್ದರೂ) ಏನಾದರೊಂದು ಹೇಳಿದರೆ, ಆ ಮಾತು ಪ್ರಮಾಣವಾಗಲಾರದು. ಸಂದರ್ಭವನ್ನು ಗಮನಿಸಿ, ವಿಷಯಾಂತರವನ್ನು ಸಾಧಿಸಲು ಮೊಟಕು ಉತ್ತರವನ್ನೀಯುತ್ತಾನೆ. ಸಂದರ್ಭವು ಯೋಗ್ಯವಾಗಿದ್ದರೆ ಆಪ್ತನ ಮಾತುಗಳು ಪ್ರಮಾಣವಾಗಿಯೇ ಇರುತ್ತವೆ. ಇತಿಹಾಸ ಪುರಾಣಾದಿ ಪೌರುಷೇಯಾಗಮಗಳಲ್ಲಿ ನಿರೂಪಿಸಲ್ಪಡುವ ನಾನಾ ಅರ್ಥಗಳ ಪ್ರಾಮಾಣ್ಯವನ್ನು ತಿಳಿಯಲು, ಅವು ಯಾರು ಯಾರಿಗೆ ಯಾವ ಸಂದರ್ಭದಲ್ಲಿ ಹೇಳಲ್ಪಟ್ಟವುಗಳೆಂಬುದನ್ನು ವಿಶೇಷವಾಗಿ ಗಮನಿಸಬೇಕಾಗುತ್ತದೆ. ವೇದವಾಕ್ಯಗಳ ತಾತ್ಪರ್ಯವನ್ನು (ಯಥಾರ್ಥವಾದ ಭಾವಗಳನ್ನು) ಗ್ರಹಿಸಲು ಅವಶ್ಯಕವಾದ ಉಪಕ್ರಮಾದಿ ತಾತ್ಪರ್ಯ ಲಿಂಗಗಳ ಜ್ಞಾನವೂ, ಪೌರುಷೇಯಾಗಮಗಳ ಯಥಾರ್ಥಜ್ಞಾನಕ್ಕೂ, ಅವಶ್ಯಕವಾಗುತ್ತದೆ. ತಾತ್ಪರ್ಯ ಲಿಂಗಗಳ ಜ್ಞಾನಾಭಾವದಿಂದ ಆಗಮ ಪ್ರಾಮಾಣ್ಯವು ಸಂಶಯ-ಗ್ರಸ್ತವಾಗುತ್ತದೆ. ಆದ್ದರಿಂದ ಈ ಜ್ಞಾನಾಭಾವವೂ ಅಪ್ರಾಮಾಣ್ಯ - ಕಾರಣವಾದ ಒಂದು ದೋಷವೆಂದೇ ತಿಳಿಯಬಹುದಾಗಿದೆ.

ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತೆ, ಫಲ, ಅರ್ಥವಾದ, ಉಪಪತ್ತಿಗಳೆಂಬವು ತಾತ್ಪರ್ಯಲಿಂಗಗಳು, ಎಂದರೆ ತಾತ್ಪರ್ಯವನ್ನು (ನಿಜವಾದ ಅಭಿಪ್ರಾಯವನ್ನು) ತಿಳಿಸುವ (ಸೂಚಿಸುವ) ಕರಣಗಳು (aids to fix the real import of words or passages). ಇವುಗಳ ಬಲಾಬಲಗಳನ್ನೂ ತಿಳಿಯಬೇಕು. ಉಕ್ತಕ್ರಮದಲ್ಲಿ ಉತ್ತರೋತ್ತರ ಲಿಂಗವು (ಮುಂದೆ ಮುಂದಿನದು) ಬಲಿಷ್ಠವು.[20] ಯಾವುದೊಂದು ವಿಷಯ ನಿರೂಪಣೆಯ ಭಾಗವು ಹೇಗೆ ಆರಂಭವಾಗಿದೆ ಮತ್ತು ಹೇಗೆ ಪರಿಸಮಾಪ್ತಿ-ಗೊಂಡಿದೆ ಎಂಬುದನ್ನು ಗಮನಿಸಬೇಕು. ಇದರಿಂದ ಆ ಪ್ರಕರಣ ಪ್ರತಿಪಾದ್ಯ ವಿಷಯದ ನಿಜವಾದ ಭಾವವನ್ನು ತಿಳಿಯಲು ಸಹಾಯವಾಗುತ್ತದೆ. ಇದು ಉಪಕ್ರಮೋಪಸಂಹಾರ ರೂಪದ ಲಿಂಗವು. ಅಭ್ಯಾಸವೆಂದರೆ ಒಂದೇ

20. ಉಪಕ್ರಮಾದಿ ಲಿಂಗಾನಾಂ ಬಲೀಯೋ ಹ್ಯುತ್ತರೋತ್ತರಮ್ ।

ಅರ್ಥವುಳ್ಳ ಪದವನ್ನು ಪುನಃ ಪುನಃ ಬಳಸಿರುವುದು; ಅಪೂರ್ವತಾ ಎಂದರೆ ಇತರ ಪ್ರಮಾಣಗಳಿಂದ ವಿಶೇಷವಾಗಿ ತಿಳಿಯದ ಅರ್ಥವನ್ನು ಹೇಳುವುದು; ಫಲವೆಂದರೆ ಪ್ರಕರಣಾರ್ಥಕ್ಕೆ ಹೇಳಿರುವ ಫಲ; ಅರ್ಥವಾದವೆಂಬುದು, ಸ್ತುತಿ - ನಿಂದಾ - ಪರಕೃತಿ - ಪುರಾಕಲ್ಪಗಳೆಂದು ನಾಲ್ಕು ವಿಧ ನಿರೂಪಣೆ-ಗಳುಳ್ಳದ್ದು. ಸ್ತುತಿ - ಗುಣಪ್ರಶಂಸೆ; ನಿಂದಾ - ದೋಷವರ್ಣನೆ; ಪರಕೃತಿ - ಇಂಥವರು ಹಿಂದೆ ಹೀಗೆ ಮಾಡಿದರೆಂದು ಹೇಳುವುದು; ಪುರಾಕಲ್ಪ - ಸಾಮಾನ್ಯವಾಗಿ (ಹೆಸರು ಮುಂತಾದ ವಿವರಣೆಗಳಿಲ್ಲದೆ) ಹಿಂದಿನವರ ಕಥೆಗಳನ್ನು ಹೇಳುವುದು. ತಾತ್ಪರ್ಯವನ್ನು ಸಾಧಿಸಲನುವಾಗುವ ಈ ಲಿಂಗಗಳು ಅನುಮಾನದಲ್ಲಿ (ಅನುಪ್ರಮಾಣದಲ್ಲಿಯೇ) ಅಡಕವಾಗುತ್ತವೆ.

**ಇಂದ್ರಿಯಗೋಚರಗಳಲ್ಲದ ಈಶ್ವರ-ಧರ್ಮಾಧರ್ಮಗಳು ಮತ್ತು ತತ್ಸಂಬಂಧ ವಿಷಯಗಳನ್ನು ನಿರೂಪಿಸುವ ವಾಕ್ಯ ಸಮೂಹಗಳುಳ್ಳ ಗ್ರಂಥಗಳು ಪ್ರಾಯಃ ಆಗಮಗಳೆಂದು ಕರೆಯಲ್ಪಡುತ್ತವೆ. ಕಥೆ-ಕಾದಂಬರಿಗಳಾಗಲೀ,** ಕೇವಲ ಲೌಕಿಕ ವಿಷಯಗಳನ್ನು ಪ್ರತಿಪಾದಿಸುವ ಗ್ರಂಥಗಳಾಗಲೀ ಈ ಗೌರವನಾಮದಿಂದ ಕರೆಯಲ್ಪಡುವುದಿಲ್ಲ. ಆಗಮಗಳು ಯಾರಿಂದ ರಚಿಸಲ್ಪಟ್ಟರೂ ಅವು ಪೌರುಷೇಯಗಳೇ. ಶ್ರೀಮನ್ನಾರಾಯಣನ ಅವತಾರ-ರೆಂದು ತಿಳಿಯಲ್ಪಡುವ ಶ್ರೀ ವೇದವ್ಯಾಸರಿಂದ ರಚಿತವಾದ ಇತಿಹಾಸ ಪುರಾಣಗಳೂ, ಬ್ರಹ್ಮಸೂತ್ರಾದಿ ಗಂಥಗಳೂ ಪೌರುಷೇಯಗಳೇ. ಇತರ ದೇವಾವತಾರಿಗಳೂ, ಋಷ್ಯಾದಿಗಳೂ ನಿರ್ಮಿಸಿದ ಆಗಮಗಳು-ಧರ್ಮ-ಶಾಸ್ತ್ರಾದಿಗಳು ಸಹ ಪೌರುಷೇಯಗಳೆಂದು ಹೇಳಲೇನಿದೆ! ಈ ಎಲ್ಲವೂ ಅನಿತ್ಯ ಆಗಮಗಳು. ಅನಿತ್ಯಗಳೆಂದರೆ ಯೋಗ್ಯಕಾಲಗಳಲ್ಲಿ ನಿರ್ಮಿತವಾಗುತ್ತವೆ. ನಾನಾ ಪೌರುಷೇಯಾಗಮಗಳಲ್ಲಿ, ಇತಿಹಾಸ - ರಾಮಾಯಣ - ಪಂಚರಾತ್ರಗಳು, ನಿತ್ಯವೂ, ಅಪೌರುಷೇಯವೂ, ಆದ್ದರಿಂದಲೇ ದೋಷರಹಿತ ಶ್ರೇಷ್ಠ ಪ್ರಮಾಣವೂ ಆದ ವೇದಗಳಂತೆ, ಪರಮ ಪ್ರಮಾಣಗಳೆಂದು ಹೇಳಲಾಗುತ್ತದೆ. ಋಕ್, ಯಜು, ಸಾಮ, ಅಥರ್ವಗಳೆಂಬ ನಾಲ್ಕು ವೇದ-ಗಳೊಂದಿಗೆ ಇತಿಹಾಸ ಪುರಾಣಗಳು ಐದನೇ ವೇದವೆಂದು ಪರಿಗಣಿಸಲಾಗಿವೆ. ಈ ಎಲ್ಲವೂ (ಪೌರುಷೇಯಾಗಮಗಳು) ಅನಿತ್ಯ. ಅನಿತ್ಯಗಳೆಂದರೆ, ಪ್ರತಿ ಮನು ಕಲ್ಪದಲ್ಲಿ, ಯೋಗ್ಯ ಕಾಲಗಳಲ್ಲಿ ನೂತನವಾಗಿ ರಚಿತವಾಗುತ್ತವೆ

ಎಂದರ್ಥ.[21] ಪೌರುಷೇಯಾಗಮಗಳ ಪ್ರಾಮಾಣ್ಯವನ್ನು, ಶಬ್ದದೋಷಗಳ ಅಭಾವ - ಆಪ್ತಪ್ರಣೀತತ್ವ ಮೊದಲಾದವುಗಳಿಂದಲೂ, ಮುಖ್ಯವಾಗಿ ವೇದಾನುಸಾರಿತ್ವ ಲಕ್ಷಣದಿಂದಲೂ, ನಿರ್ಧರಿಸಿಕೊಳ್ಳಬೇಕು. ನಿರ್ದುಷ್ಟ-ಪ್ರಮಾಣಗಳಾದ ವೇದಗಳು ಈಶ್ವರಾದಿ ಅತೀಂದ್ರಿಯ ವಸ್ತು-ವಿಷಯದಲ್ಲಿ ಹೇಳುವ ಪ್ರಮೇಯಗಳನ್ನು, ಯಾವ ಪ್ರಕಾರದಿಂದಲೂ ವಿರೋಧಿಸದಿರುವುದೇ ವೇದಾನುಸಾರಿತ್ವವು. ಹೀಗೆ **ನಿರ್ದುಷ್ಟವಾದ ಪೌರುಷೇಯಾಗಮಗಳು ಅಪೌರುಷೇಯ ವೇದಾರ್ಥಗಳನ್ನು ತಿಳಿಯಲು ಬಹುಪ್ರಕಾರದಿಂದ ಸಹಾಯ-ಮಾಡುತ್ತವೆ.** ನಿತ್ಯಾನಿತ್ಯ ಆಗಮಗಳಿಂದ ಜ್ಞಾನಲಾಭವನ್ನು ಪಡೆಯಲೆತ್ನಿಸುವ ಜೀವರು ಬಹು ಭಿನ್ನ ಯೋಗ್ಯತೆಯುಳ್ಳವರಾದ್ದರಿಂದ, ಪೌರುಷೇಯಾಗಮ-ಗಳಲ್ಲಿ (ಪುರಾಣಾದಿಗಳಲ್ಲಿ) ಬಹು ಪ್ರಕಾರದ ವಿಷಯ ನಿರೂಪಣೆಯು ಕಂಡು ಬರುತ್ತದೆ. ಅವುಗಳಿಂದ ಯಥಾರ್ಥ-ಸಂಶಯ-ವಿಪರೀತ ಜ್ಞಾನಗಳುಂಟಾಗಲು ಅವಕಾಶವಿರುತ್ತದೆ. ಇವುಗಳಲ್ಲಿ, ವಿಶೇಷವಾಗಿ ವೇದಾನುಸಾರಿತ್ವ ವೇದಾನು-ಸಾರಿ-ವೇದವಿರುದ್ಧಗಳ ಮಿಶ್ರಣ ಮತ್ತು ಪ್ರಚುರ ವೇದ ವಿರೋಧಿ ತ್ವಗಳೆಂಬ ಲಕ್ಷಣಗಳಿಂದ ಮೂರು ದೊಡ್ಡ ಪಂಗಡಗಳು ಏರ್ಪಡುತ್ತವೆ. ಪುರಾಣಗಳನ್ನು ಸಾತ್ವಿಕ - ರಾಜಸ - ತಾಮಸಗಳೆಂದು ವಿಭಾಗಿಸಿರು-ವುದಾದರೂ ಈ ಕಾರಣದಿಂದಲೇ ಎಂದು ತಿಳಿಯಬಹುದಾಗಿದೆ.

21. ಪುರಾಣಗಳನ್ನು ನಿತ್ಯಾನಿತ್ಯವೆಂಬ ವರ್ಗದಲ್ಲಿಯೂ ಸೇರಿಸಿ, ನಿರೂಪಿಸಲಾಗುತ್ತದೆ. ಲೋಕದಲ್ಲಿ ಹೊಸದಾಗಿ ರಚಿತವಾಗಿ ಪ್ರಕಟಿಸಲ್ಪಡುವುದರಿಂದ ಅನಿತ್ಯ-ಈಶ ಬುದ್ಧಿಯಲ್ಲಿ ಸದಾ ನಿಲ್ಲುವುದರಿಂದ ನಿತ್ಯ. ಹೀಗೆ ಉಭಯಾತ್ಮಕವೆಂದೂ ತಿಳಿಯ-ಲ್ಪಡುತ್ತವೆ. ಹಿಂದಿನ ಮನು ಕಲ್ಪದ ಪುರಾಣಗಳಂತೆ ಅರ್ಥತಃ ಏಕಪ್ರಕಾರವಾಗಿದ್ದರೂ, ಪದ-ವಾಕ್ಯ-ವಿಷಯನಿರೂಪಣಾಕ್ರಮಗಳಲ್ಲಿ ವ್ಯತ್ಯಾಸಗಳಿರುತ್ತವೆ. ನಿತ್ಯವಾದ ವೇದಗಳಂತೆ ವರ್ಣ, ಕ್ರಮ, ವಾಕ್ಯ, ಅರ್ಥಗಳಿಂದ ಏಕಪ್ರಕಾರತೆ ಇರುವುದಿಲ್ಲ. ಕೃತ, ತ್ರೇತ, ದ್ವಾಪರ, ಕಲಿಗಳೆಂಬ ನಾಲ್ಕು ಯುಗಗಳು ಸೇರಿ ಒಂದು ಮಹಾಯುಗವೆಂದು ಕರೆಯಲ್ಪಡುತ್ತದೆ. 1000 ಮಹಾಯುಗಗಳ ಕಾಲವು ಚತುರ್ಮುಖ ಬ್ರಹ್ಮನ ಒಂದು ಹಗಲು. ಈ ಹಗಲಿನಲ್ಲಿ 14 ಮನುಗಳು ತಮ್ಮ ಅಧಿಕಾರವನ್ನು ನಡೆಸುವರು. ಪ್ರತಿಯೊಬ್ಬ ಮನುವಿನ ಅಧಿಕಾರದ ಕಾಲಾವಧಿಯು ಮನ್ವಂತರವೆಂದು ಕರೆಯಲ್ಪಡುತ್ತದೆ. ಇದು 71 ಚಿಲ್ಲರೆ ಮಹಾಯುಗಗಳ ಕಾಲವಾಗುತ್ತದೆ.

ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬ್ರಂಹಯೇತ್ ಎಂಬ ವೇದವಾಕ್ಯ-ದಲ್ಲಿ, ಪುರಾಣ ಶಬ್ದದಿಂದ ವೇದಾನುಸಾರಿತ್ವವುಳ್ಳ ಸಾತ್ವಿಕ ಪುರಾಣಗಳನ್ನೇ ಗ್ರಹಿಸಬೇಕೆಂಬುದೂ ಸ್ಪಷ್ಟವೇ. ಈ ಕಾರಣದಿಂದಲೇ ಇತಿಹಾಸ ಪುರಾಣಗಳನ್ನು ಪಂಚಮವೇದವೆಂದು ಪ್ರಾಚೀನರು ಗ್ರಹಿಸಿರುತ್ತಾರೆ. ಋಗಾದಿ ವೇದಗಳಿಗೆ ಅಪೌರುಷೇಯತ್ವ-ಸ್ವತಃ ಪ್ರಾಮಾಣ್ಯಗಳನ್ನು ಅಂಗೀಕರಿಸದವರು, ಪೌರುಷೇ-ಯಾಗಮಗಳಲ್ಲಿ ತಾವು ಒಪ್ಪುವ ಆಗಮಕ್ಕೆ ಅಥವಾ ಆಗಮಗಳಿಗೆ ಪ್ರಾಮಾಣ್ಯ-ವನ್ನು ಸಾಧಿಸುವುದು ದುಃಸಾಧ್ಯವೇ ಸರಿ. ಆದ್ದರಿಂದ ವೇದ ಪ್ರಾಮಾಣ್ಯವನ್ನು ವಿಮರ್ಶೆಯಿಂದ ನಿಶ್ಚಯಿಸಿಕೊಳ್ಳುವುದು ಅತ್ಯವಶ್ಯಕವಾಗಿದೆ. ಈ ಪ್ರಮೇಯವು ಬಹು ತೊಡಕಿನದೂ, ಕಷ್ಟಸಾಧ್ಯವೂ ಆದುದು. ಮುಂದಿನ ಪರಿಚ್ಛೇದವು ಅದಕ್ಕಾಗಿಯೇ ಪ್ರವೃತ್ತವಾಗುತ್ತದೆ.

## ಪರಿಚ್ಛೇದ ೨

## ವೇದ ಪ್ರಾಮಾಣ್ಯ

ವೇದ ಪ್ರಾಮಾಣ್ಯವನ್ನು ಅಂಗೀಕರಿಸುವುದು ಆಸ್ತಿಕ್ಯದ ಪ್ರಧಾನ ಲಕ್ಷಣವೆಂದು ಈ ಹಿಂದೆ ನಿರೂಪಿಸಲಾಗಿದೆಯಷ್ಟೆ.[22] ಈಶ್ವರ, ಜೀವ, ಧರ್ಮಾಧರ್ಮಗಳು ಮೊದಲಾದ ಅತೀಂದ್ರಿಯ ವಸ್ತುವಿಷಯಕ ಯಥಾರ್ಥ ಜ್ಞಾನವು ವೇದಗಳಿಂದಲೇ; ಅನ್ಯಜ್ಞಾನ ಸಾಧನಗಳಿಂದ ದೊರೆಯದು. ಯಾವ ಪ್ರಕಾರದ ದೋಷಗಳೂ ಇಲ್ಲದ ವೇದಗಳಿಂದ ಮಾತ್ರ ಲಭ್ಯವೆಂದು ಹೇಳಲಾದರೂ, ವೇದಗಳ ನಿರ್ದೋಷತ್ವವು ಹೇಗೆ ಸಿದ್ಧವಾಗುತ್ತದೆಂಬುದನ್ನು ತಿಳಿಸಿಕೊಡುವುದು ಮಾತ್ರ ಸುಲಭವಲ್ಲ. ವೇದ ಪ್ರಾಮಾಣ್ಯವನ್ನು ವೇದ-ವಾಕ್ಯಗಳಿಂದಲೇ ಸಾಧಿಸಲಾಗುತ್ತದೆಂಬುದು ಯುಕ್ತಿಯುಕ್ತ-ವಾಗುವುದಿಲ್ಲ. ಪ್ರತ್ಯಕ್ಷ - ಅನುಮಾನಗಳಿಂದಲೂ ಸಾಧಿಸಲು ಬರುವುದಿಲ್ಲ. ಹೀಗಿರುವಾಗ ಪ್ರಾಮಾಣ್ಯವನ್ನು ಸಾಧಿಸುವುದೆಂತು? ಈ ಅಂಶವನ್ನೇ ಪ್ರಥಮತಃ ವಿಮರ್ಶಿಸುವಾ.

---

22. ರತ್ನ 1-ಪರಿಚ್ಛೇದ 1ನ್ನು ನೋಡಬಹುದು.

ಎಲ್ಲ ಜ್ಞಾನಗಳನ್ನು ಗ್ರಹಿಸುವುದು ಸಾಕ್ಷಿಯೇ. ನೇರವಾಗಿ ಅಥವಾ ಪ್ರತ್ಯಕ್ಷಾದಿ ಜ್ಞಾನಸಾಧನಗಳ ದ್ವಾರಾ, ಉಂಟಾಗುವ ಎಲ್ಲ ಜ್ಞಾನವೂ ಸಾಕ್ಷಿಗೇ (ಆತ್ಮನಿಗೇ)- ಎಂದರೆ ಜ್ಞಾನವನ್ನು ಗ್ರಹಿಸುವವನು ಆತ್ಮನೇ. ಜ್ಞಾನವನ್ನು ಗ್ರಹಿಸುವ ಸಾಕ್ಷಿಯು, ಆ ಜ್ಞಾನದ ಪ್ರಾಮಾಣ್ಯವನ್ನೂ ಗ್ರಹಿಸುತ್ತಾನೆ. ಜ್ಞಾನಕ್ಕೆ ಪ್ರಾಮಾಣ್ಯವು ಸ್ವತಃ-ಅಪ್ರಾಮಾಣ್ಯವು ಪರತಃ ಎಂದು ಈ ಹಿಂದೆ (೨ನೇ ಪ್ರಾಮಾಣ್ಯ ಪರಿಚ್ಛೇದದಲ್ಲಿ) ಹೇಳಿರುವುದನ್ನು ಇಲ್ಲಿ ಗಮನಿಸಬೇಕು. ಸಂಶಯ-ಭ್ರಮರೂಪ ಜ್ಞಾನಗಳನ್ನೂ ಸಾಕ್ಷಿಯೇ ಗ್ರಹಿಸುವನಾದರೂ, ಪ್ರಾಮಾಣ್ಯವನ್ನು ಪರೀಕ್ಷಿಸಿಯೇ ನಂತರ ಗ್ರಹಿಸುತ್ತಾನೆ. ತತ್ಪೂರ್ವದಲ್ಲಿ ಆ ಜ್ಞಾನಗಳಲ್ಲಿನ ಯಥಾರ್ಥ ಭಾಗವನ್ನು ಮಾತ್ರ (ವಸ್ತುವಿನ ಅಸ್ತಿತ್ವಾದಿ ಯಥಾರ್ಥಾಂಶವನ್ನು) ಗ್ರಹಿಸಿರುತ್ತಾನೆ. ಏವಂ ಚ ಜ್ಞಾನಗ್ರಾಹಕನೇ ಅದರ ಪ್ರಾಮಾಣ್ಯವನ್ನೂ ಗ್ರಹಿಸುತ್ತಾನೆಂದು ಹೇಳದೇ, ಜ್ಞಾನದ ಪ್ರಾಮಾಣ್ಯವನ್ನು ಸಾಕ್ಷಿ ಭಿನ್ನ ಅನ್ಯಪ್ರಮಾಣದಿಂದಲೇ ತಿಳಿಯಬೇಕೆಂದರೆ ಅನವಸ್ಥೆ-ಯುಂಟಾಗುತ್ತದೆ. ಪ್ರತ್ಯಕ್ಷಜನ್ಯ ಜ್ಞಾನದ ಪ್ರಾಮಾಣ್ಯವನ್ನು ಅನುಮಾನ-ದಿಂದಲೋ ಅಥವಾ ಮತ್ತೊಂದು ಪ್ರಮಾಣದಿಂದಲೋ ತಿಳಿಯಬೇಕೆಂದರೆ, ಪ್ರತ್ಯಕ್ಷವನ್ನು ಪ್ರಮಾಣವೆಂದು ಹೇಳುವುದು ಅರ್ಥವಿಲ್ಲದ ಮಾತಾಗುತ್ತದೆ. ಅನುಮಾನ ಜನ್ಯವಾದ ಅನುಮಿತಿಯ ಪ್ರಾಮಾಣ್ಯವನ್ನು ಮತ್ತೊಂದು ಪ್ರಮಾಣದಿಂದ ತಿಳಿಯಬೇಕಾಗುವುದು. ಆ ಮತ್ತೊಂದು ಪ್ರಮಾಣವೆಂಬುದರ ಪ್ರಾಮಾಣ್ಯವನ್ನು ಇನ್ನೊಂದು ಪ್ರಮಾಣದಿಂದ ತಿಳಿಯಬೇಕೆಂದು ಪ್ರಾಪ್ತವಾಗಿ ಅನವಸ್ಥೆಯೇ ಬರುವುದು. ಪ್ರಾಮಾಣ್ಯವು ಅನುಮಾನದ ಅಧೀನವಲ್ಲ. ಜನ್ಯ ಜ್ಞಾನವನ್ನು ಸಾಕ್ಷಿಗೆ ಮುಟ್ಟಿಸುವ ಬುದ್ಧಿಯು (ಮನಸ್ಸು) ದೋಷ-ರಹಿತವಾದರೆ, ಸಾಕ್ಷಿಯು ಪ್ರಾಮಾಣ್ಯವನ್ನು ಸುಲಭವಾಗಿ ಗ್ರಹಿಸುತ್ತಾನೆ. ಅನುಮಾನವು ಬುದ್ಧಿದೋಷವನ್ನು ಪರಿಹರಿಸಲು ಮಾತ್ರ ಕಾರಣವಾಗಬಲ್ಲದು. ಆದ್ದರಿಂದ ವೇದಪ್ರಾಮಾಣ್ಯವನ್ನಾದರೂ ಸಾಕ್ಷಿಯೇ ಗ್ರಹಿಸಬೇಕು.

ವೇದಗಳು, ಈ ಹಿಂದೆ ನಿರೂಪಿಸಲಾದ ಅಬೋಧಕತ್ವ, ವಿಪರೀತ ಬೋಧಕತ್ವಾದಿ ಶಬ್ದದೋಷಗಳಿಂದ ರಹಿತವಾದವುಗಳೆಂದೂ, ಪೂರ್ವೋಕ್ತ ಶಬ್ದ ವೃತ್ತಿಗಳನ್ನೂ ಶಬ್ದನಿಷ್ಪತ್ತಿ ಮೊದಲಾದ ಶಬ್ದಶಾಸ್ತ್ರ ನಿಯಮಗಳನ್ನೂ

ಬಲ್ಲಪುರುಷರಲ್ಲಿ, ಅವು ನಿರೂಪಿಸುವ ವಿಷಯಗಳ ಯಥಾರ್ಥಜ್ಞಾನವನ್ನುಂಟು ಮಾಡಲು ಸ್ವಯಂ ಸಮರ್ಥಗಳೆಂದು (ಅನ್ಯಪ್ರಮಾಣಗಳ ಸಹಾಯ-ವನ್ನು ಅಪೇಕ್ಷಿಸುವುದಿಲ್ಲವೆಂದು) ಹೇಳಲಾಗುತ್ತದೆ. ಅದುಷ್ಟ ಬುದ್ಧಿಗಳಿಗೆ ಪ್ರಾಮಾಣ್ಯವು ಸ್ವತಃ ಏವ ಗ್ರಾಹ್ಯವಾಗುತ್ತದೆ (ತಿಳಿಯುತ್ತದೆ). ಸಂಶಯ-ವುಂಟಾದಾಗ ಸಹ, ವೇದಪ್ರಮಾಣವನ್ನು ಗ್ರಹಿಸಲು ಸಮರ್ಥನಾದ ಸಾಕ್ಷಿಗೆ, ಅನ್ಯಪ್ರಮಾಣದ ಅವಶ್ಯಕತೆ ಇಲ್ಲ. ಬುದ್ಧಿದೋಷವೇ ಸಂಶಯಕ್ಕೆ ಕಾರಣ-ಅದರ ಪರಿಹಾರವಾಯಿತೆಂದರೆ, ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುತ್ತಾನೆ. ದೋಷಯುಕ್ತ ಬುದ್ಧಿಯುಳ್ಳವರಿಗೆ ಮಾತ್ರ ವೇದಗಳಲ್ಲಿ ಅಪ್ರಾಮಾಣ್ಯ ಶಂಕೆಯು. ಅಪ್ರಮಾಣವೆಂದೇ ತಿಳಿಯುವವರಿಗೆ, ಅಪ್ರಾಮಾಣ್ಯವನ್ನು ತಿಳಿಸುವುದೂ ಸಾಕ್ಷಿಯೇ ಅಲ್ಲವೇ? ಪ್ರಾಮಾಣ್ಯವನ್ನು ಗ್ರಹಿಸುವ ಅದರ ಸಹಜ ಶಕ್ತಿಯು ನಷ್ಟವಾಗಿ ತದ್ವಿಪರೀತ ಶಕ್ತಿಯು ಹೇಗೆ ಉಂಟಾಯಿತು? ಎಂಬೀ ಪ್ರಶ್ನೆಯು ಯುಕ್ತವಲ್ಲ. ವಿರುದ್ಧವಾದ ಶ್ರವಣಾದಿ ಸಹಕಾರಿ ಕಾರಣಗಳಿಂದ ಸಾಕ್ಷಿಯ ಸಹಜಶಕ್ತಿಯು ನಿರೋಧಿಸಲ್ಪಟ್ಟು ವಿಪರೀತ ಶಕ್ತಿಯು ಅಂಕುರಿಸುತ್ತದೆಂದು ತಿಳಿಯಬಹುದು. ಹೀಗಾಗುವುದು ಅಸಂಭಾವಿತವೇನಲ್ಲ. ಕಾಡ್ಗಿಚ್ಚಿನಿಂದ ದಹಿಸಲ್ಪಟ್ಟ ಬಿದಿರು ಬೀಜಗಳು, ಬಿದಿರುಗಿಡದ ಅಂಕುರವನ್ನು ಹುಟ್ಟಿಸದೇ ಬಾಳೇಗಿಡದ ಅಂಕುರವನ್ನು ಹುಟ್ಟಿಸುವುದು ಲೋಕದಲ್ಲಿ ಕಂಡಿದೆ. ಅಗ್ನಿಯಿಂದ ದಹಿಸಲ್ಪಡದಾಗ ಮಾತ್ರ ಬಿದಿರಿನ ಅಂಕುರ ಹುಟ್ಟುತ್ತದೆ. ದಹಿಸಲ್ಪಟ್ಟರೆ ವಿಪರೀತ (ವಿರುದ್ಧ) ಕಾರ್ಯವೂ, ಇಲ್ಲದಿದ್ದರೆ ಸ್ವಾಭಾವಿಕ ಕಾರ್ಯವೂ ಕಂಡುಬರುತ್ತದೆ. ಇಲ್ಲಿ, ಅಗ್ನಿದಗ್ಧವಾಗುವಿಕೆಯು ವಿಪರೀತ ಕಾರ್ಯಕ್ಕೆ ಸಹಕಾರಿ ಕಾರಣವೆನಿಸುವುದು. ಆದ್ದರಿಂದ ವಿಸಂವಾದಗಳ (ವಿರುದ್ಧವಾದಗಳ) ಸಂಸ್ಕಾರರೂಪ ಬುದ್ಧಿದೋಷವುಳ್ಳವರಿಗೆ ಮಾತ್ರ ವೇದಗಳು ಅಪ್ರಮಾಣ್ಯವೆಂಬ ಸಂಶಯಕ್ಕೆ ಅವಕಾಶವಿರುತ್ತದೆಂದು ತಿಳಿಯಬಹುದಾಗಿದೆ. ಅದುಷ್ಟ ಬುದ್ಧಿಗಳಿಗೆ ವೇದಪ್ರಮಾಣ್ಯವು ಸ್ವತ ಏವ ಸಿದ್ಧವಾಗುತ್ತದೆ. ಅಯಥಾರ್ಥಜ್ಞಾನವನ್ನುಂಟುಮಾಡಲು (ವೇದಗಳು ಅಪ್ರಮಾಣಗಳೆಂದು ತಿಳಿಯಲು) ಪುರುಷರಲ್ಲಿರುವ ಬುದ್ಧಿ ದೋಷಾದಿಗಳು ಕಾರಣವಲ್ಲವೆಂದರೆ, ಇಂದ್ರಿಯಾರ್ಥ ಸನ್ನಿಕರ್ಷಾದಿ ದೋಷಗಳೂ ಮತ್ತು ಅನುಮಾನ ದೋಷಗಳೂ

ಪ್ರತ್ಯಕ್ಷ ಮತ್ತು ಅನುಮಾನಗಳ ಅಪ್ರಾಮಾಣ್ಯಕ್ಕೆ ಕಾರಣಗಳಲ್ಲವೆಂದು ಹೇಳಬಹುದಾಗುತ್ತದೆ.

**ವೇದ ಪ್ರಾಮಾಣ್ಯ ವಿಷಯವನ್ನು ದ್ವಿವಿಧವಾಗಿ ಭಾವಿಸಬಹುದು.** ವೇದಗಳು ಪ್ರಮಾಣಗಳೇ ಅಲ್ಲ-ಯಥಾರ್ಥವನ್ನ ಹೇಳುವುದಿಲ್ಲ, ಎಂಬ ಸಾಮಾನ್ಯಜ್ಞಾನ ಅಥವಾ ಪ್ರಮಾಣಗಳು ಹೌದೋ ಅಲ್ಲವೋ ಎಂಬ ಸಂಶಯ ಜ್ಞಾನ. ಇದು ಒಂದು ವಿಧ-ವೇದ ಸಮೂಹವನ್ನೇ ಕುರಿತುದು. ವೇದಗಳು ಸತ್ಯವನ್ನು ಹೇಳುತ್ತವೆ (ಪ್ರಮಾಣಗಳು) ಎಂಬ ಸಾಮಾನ್ಯ ಜ್ಞಾನವಿದ್ದು, ಬಹು ಭಿನ್ನ ವಿಷಯಗಳನ್ನು ಪ್ರತಿಪಾದಿಸುವ ನಾನಾ ವಾಕ್ಯಗಳ ಅರ್ಥ ವಿಶೇಷಗಳನ್ನು ಸಂಶಯಾತ್ಮಕವಾಗಿಯೂ ಮತ್ತು (ಅಥವಾ) ವಿಪರೀತವಾಗಿಯೂ ಗ್ರಹಿಸುವುದು ಎರಡನೆಯ ವಿಧ. ಇವುಗಳಲ್ಲಿ ಎರಡನೆಯ ವಿಧದ ಅಪ್ರಾಮಾಣ್ಯವು ಬುದ್ಧಿದೋಷದಿಂದ ಉಂಟಾಗಬಹುದೆಂಬುದನ್ನು ಸಂಭಾವ್ಯವೆನ್ನಬಹುದು. ಮೊದಲಿನದು ಸಹ ಬುದ್ಧಿದೋಷ ನಿಮಿತ್ತವಾದುದೆಂದು ತಿಳಿಯಲು ಸ್ವಲ್ಪ ಸೂಕ್ಷ್ಮ ವಿಮರ್ಶೆಯು ಅವಶ್ಯಕವಾಗುತ್ತದೆ. ವೇದಗಳು, ಧರ್ಮಾದಿ ಅಶೇಷ ಪುರುಷಾರ್ಥಗಳನ್ನು ಪ್ರತಿಪಾದಿಸುತ್ತವೆ - ಸಾಧನೋಪಾಯಗಳನ್ನೂ ಜೀವೇಶ್ವರ ಸ್ವರೂಪ - ಸಂಬಂಧಗಳನ್ನೂ ನಿರೂಪಿಸುತ್ತವೆ. ಬಹು ಜನ್ಮಗಳಲ್ಲಿ ವೇದಾಧ್ಯಯನಾದಿಗಳಿಲ್ಲದೇ ಕರ್ಮಾನುಷ್ಠಾನ ಶೂನ್ಯರಾಗಿ ವೇದ ವಿರುದ್ಧ ವಾದಗಳಲ್ಲಿಯೇ ತೊಡಗುವ ಮುಂತಾದ ಪ್ರಬಲ ಕಾರಣಗಳಿಂದ ಒಂದನೇ ವಿಧದ ಅಪ್ರಾಮಾಣ್ಯಕ್ಕೆ ಕಾರಣವಾಗುವ ಬುದ್ಧಿದೋಷವೂ ಉಂಟಾಗಿರಲು ಶಕ್ಯವೆಂಬುದನ್ನು ಅಲ್ಲಗಳೆಯಲು ಬರುವುದಿಲ್ಲ. ಹೀಗೆ ದ್ವಿವಿಧವಾದ ಅಪ್ರಾಮಾಣ್ಯ ಜ್ಞಾನವೂ (ಪರತಃ ಅನ್ಯದೋಷ ನಿಮಿತ್ತವಾದುದಲ್ಲದೇ, ಸ್ವಯಂ ವೇದಗಳಲ್ಲಿರುವ ದೋಷ ನಿಮಿತ್ತಕವಲ್ಲ. ಹೀಗಿದ್ದರೂ ಭಿನ್ನ ಸ್ವಭಾವವುಳ್ಳವರಾದ (ಭಿನ್ನ ಭಿನ್ನ ಸ್ವರೂಪ ಯೋಗ್ಯತೆಯುಳ್ಳ) ಎಲ್ಲ ಜೀವರು ವೇದಪ್ರಾಮಾಣ್ಯವನ್ನು ಅಂಗೀಕರಿಸಲಾರರು-ಒಡಂಬಡುವುದಿಲ್ಲ. ಬುದ್ಧಿದೋಷ ನಿರಾಸಕ್ಕೆ ಉಪಾಯಗಳಾದ ಗುರೂಪದೇಶಾದಿಗಳನ್ನೂ ತಳ್ಳಿಹಾಕಿ, ವೇದಗಳು ಪ್ರಮಾಣಗಳಲ್ಲವೆಂದೇ ಬಗೆಯುವವರೂ ಇರುತ್ತಾರೆ. ಸ್ವಬುದ್ಧಿಗನುಸಾರವಾದ

ಅರ್ಥಗಳನ್ನೇ ವೇದಗಳು ಪ್ರತಿಪಾದಿಸುವಂತೆ ತೋರುವುದರಿಂದ ಸ್ವಬುದ್ಧಿಯನ್ನೇ ಅವಲಂಬಿಸಿ, ವೇದಗಳನ್ನು ತ್ಯಜಿಸುತ್ತಾರೆ. ಸ್ವಬುದ್ಧಿಗಿಂತ ವೇದಗಳು ಹೆಚ್ಚಿನ ಪ್ರಮಾಣಗಳಲ್ಲವೆಂದೇ ತಿಳಿಯುತ್ತಾರೆ. ಸೃಷ್ಟ್ಯಾರಂಭದಲ್ಲಿ ಚತುರ್ಮುಖ ಬ್ರಹ್ಮನಿಗೆ ಉಪದೇಶಿಸಲ್ಪಟ್ಟು, ಪರಂಪರೆಯಿಂದ **ಲೋಕದಲ್ಲಿ ಪ್ರಾಪ್ತವಾಗಿರುವ ವೇದಗಳು ದೇವಸ್ವಭಾವದವರಾದ ಕೆಲವು ಜೀವರಿಗೆ ಮಾತ್ರ ಸರ್ವದಾ ಪ್ರಮಾಣಗಳೆಂದೇ ಗ್ರಾಹ್ಯವಾಗಿರುತ್ತವೆ.**[23]

## ವೇದ ನಿತ್ಯತ್ವ ವಿಮರ್ಶೆ

**ವೇದಗಳು ಅನಾದಿ ಮತ್ತು ನಿತ್ಯ.** ಯಾವ ಪ್ರಕಾರದ ವಿಕಾರಗಳಿಲ್ಲದವು. ಹೀಗೆಂಬ ವೇದಲಕ್ಷಣವು ನಿಶ್ಚಿತವಾದರೆ ಅವು, ಅಪೌರುಷೇಯಗಳೆಂಬ ಲಕ್ಷಣವೂ ಒಂದಿಗೇ ಸಿದ್ಧವಾಗುತ್ತದೆ. ಆದರಿಂದ ದೋಷರಹಿತವಾದ ಶ್ರೇಷ್ಠ ಪ್ರಮಾಣಗಳೆಂದೂ ಸಾಧಿಸಬಹುದು. ವೇದ-ಶ್ರುತಿ-ಆಮ್ನಾಯಗಳೆಂಬ ನಾಮಗಳೂ ಅನಾದಿ ನಿತ್ಯತ್ವವನ್ನೇ ಸೂಚಿಸುತ್ತವೆ. ಸರ್ವದಾ ಇರುವುದರಿಂದ ವೇದಗಳೆಂದೂ, ಸರ್ವರಿಂದ ಕೇಳಲ್ಪಟ್ಟವುಗಳು ಮಾತ್ರವಾದ್ದರಿಂದ, ಶ್ರುತಿಗಳೆಂದೂ, ವರ್ಣ - ಪದ - ವಾಕ್ಯ - ಅರ್ಥ - ಕ್ರಮ - (ಉಚ್ಚಾರಣ) ಸ್ವರಾದಿಗಳಿಂದ ಏಕಪ್ರಕಾರವಾಗಿರುವುವಾದ್ದರಿಂದ ಆಮ್ನಾಯಗಳೆಂದೂ, ಕರೆಯಲ್ಪಡುತ್ತವೆ. ಈ ನಾಮಗಳಿಂದ ಬೋಧ್ಯವಾದ ನಿತ್ಯತ್ವದ ಯುಕ್ತಿಯುಕ್ತತೆಯನ್ನು ಈ ಮುಂದೆ ವಿಮರ್ಶಿಸಲಾಗುತ್ತದೆ.[24]

---

23. ಯಥಾ ಪ್ರಕೃತಿ ಸರ್ವೇಷಾಂ ಚಿತ್ರಾವಾಚಃ ಸ್ರವಂತಿಹಿ । ಏವಂ ಪ್ರಕೃತಿ ವೈಚಿತ್ರ್ಯಾತ್ ಭಿದ್ಯಂತೇ ಮತಯೋನೃಣಾಮ್ । ಪಾರಂಪರ್ಯೇಣ ಕೇಷಾಂಚಿತ್ ಪಾಖಂಡ-ಮತಯೋಽಪರೇ ॥ (ಭಾಗವತ 11-ಅ. 14-ಶ್ಲೋಕ 7-8)

    ಧರ್ಮಾದ್ಯಶೇಷಾರ್ಥ ಪ್ರತಿಪಾದಕಾ ವಾಚಃ ಸ್ವಮನೀಷಾರ್ಥೇ ಪ್ರಮಾಣವತ್ ಪ್ರತಿಭಾಂತೀತ್ಯರ್ಥಃ । ಅನೇನ ಮದುಕ್ತಪಾರಂಪರ್ಯೇಣಾಗತಾನಿ ಕೇಷಾಂಚಿತ್ ದೇವಾದೀನಾಮೇವ ತಾನಿ ಪ್ರಮಾಣಾನಿ ॥ (ವಿಜಯಧ್ವಜೀಯ ಟೀಕಾ)

24. ವೇದಾಸ್ತೇ ನಿತ್ಯವಿನ್ನತ್ವಾಚ್ಛ್ರುತಯಶ್ಚಾಖಿಲೈಃ ಶ್ರುತೇಃ । ಆಮ್ನಾಯೋಽನನ್ಯಥಾ ಪಾಠಾದೀಶ ಬುದ್ಧಿ ಸ್ಥಿತಾಃ ಸದಾ ॥ (ಮಹಾವಾರಾಹೇ)

ವೇದಗಳು ಅನಾದಿ - ನಿತ್ಯಗಳೆಂಬ ವಿಷಯವನ್ನು ಬಹು ಆಳವಾಗಿಯೂ, ವಿಸ್ತಾರವಾಗಿಯೂ ವಿಮರ್ಶಿಸಬೇಕಾದುದು ಅವಶ್ಯಕ. ಭರತಖಂಡದಲ್ಲಿ ಪ್ರಚಾರದಲ್ಲಿರುವ ಸಕಲ ಆಸ್ತಿಕ ಮತಗಳಿಗೆ, ಒಂದಲ್ಲ ಒಂದು ವಿಧದಲ್ಲಿ, ವೇದಗಳು ಆಧಾರವಾಗಿವೆ. ಎಲ್ಲ ತತ್ವಜ್ಞಾನದ ಮೂಲಾಧಾರಗಳೆಂದು ಭಾವಿಸಲ್ಪಟ್ಟಿವೆ. **ವೇದಗಳು ಪರಮ ನಿತ್ಯವನ್ನೇ ಹೇಳುವ ನಿರ್ದುಷ್ಟ ವಾಕ್ಯ ಸಮೂಹವೆಂಬ ನಂಬಿಕೆಯು, ಭರತಖಂಡದ ಪ್ರಜೆಗಳಲ್ಲಿ ಬಹು ಪ್ರಾಚೀನ ಕಾಲದಿಂದ ದೃಢವಾಗಿ ಬೇರೂರಿದೆ.** ಯಾರೊಬ್ಬನ ಮಾತುಗಳನ್ನು ಪ್ರಮಾಣವಲ್ಲೆಂದು ಆಕ್ಷೇಪಿಸುವಾಗ ಅವನ ಮಾತುಗಳೇನು ವೇದವಾಕ್ಯವೋ ಎಂದು ಹೇಳುವುದು ಈ ಕಾರಣದಿಂದಲೇ. ಹೀಗಿದ್ದರೂ, ಜಿಜ್ಞಾಸು ಪುರುಷ, ಮೂಢ ನಂಬಿಕೆಯಿಂದ ಬಹು ದೂರನಾಗಿರಬೇಕಾದುದು ಅತ್ಯವಶ್ಯಕ-ವಾದ್ದರಿಂದ, ವೇದ ಪ್ರಾಮಾಣ್ಯವನ್ನು ಸಪ್ರಮಾಣವಾಗಿ ಸಯುಕ್ತಿಕವಾಗಿ ಸಾಧಿಸಿಕೊಂಡು, ನಿಶ್ಚಯ ಬುದ್ಧಿಯನ್ನು ಹೊಂದಲೇಬೇಕು. ವೈಜ್ಞಾನಿಕ ಯುಗದಲ್ಲಿ ಇದರ ಅವಶ್ಯಕತೆಯನ್ನು ಎಷ್ಟು ಹೇಳಿದರೂ ಸ್ವಲ್ಪವೇ. (Reason) ಯುಕ್ತಿ ಮತ್ತು ಲೋಕಾನುಭವಗಳ ಸ್ಥಾನವು ಈಗ ಉನ್ನತ ಮಟ್ಟಕ್ಕೆ ಏರಿಸಲ್ಪಟ್ಟಿದೆ. ವೇದಪ್ರಾಮಾಣ್ಯಕ್ಕೂ, ವೇದಗಳಿಂದಲೇ ಸಿದ್ಧವಾಗುವ ಧರ್ಮಾಧರ್ಮಗಳ (ಪಾಪ-ಪುಣ್ಯಗಳ) ಭಾವನೆಗೂ, ಹಿಂದೆಂದೂ ಕಾಣದ ದೊಡ್ಡ ಆಘಾತ ಸಂಭವಿಸಿದೆ. ಮಾನವ ಸಮಾಜದ ಉಳಿವಿಗೆ ಅತ್ಯವಶ್ಯಕವಾದ ನೀತಿನಿಯಮ-ಗಳನ್ನು (Moral codes) ಎತ್ತಿಹಿಡಿದು, ಅವುಗಳನ್ನು ಪ್ರಜೆಗಳು ಪಾಲಿಸುವಂತೆ ಮಾಡುವುದು ದುಸ್ಸಾಧ್ಯವಾಗುತ್ತಿದೆ. ಪಾಪ-ಪುಣ್ಯ ಭಾವನೆಗಳು (ಧರ್ಮಾಧರ್ಮಜ್ಞಾನ) ಮಾತ್ರ ಪ್ರಜೆಗಳನ್ನು ನಿಯಂತ್ರಿಸಬಲ್ಲವು-ಅನ್ಯ ನಿರ್ಮಿತ ನೀತಿವಾಕ್ಯಗಳಲ್ಲ.

ಸಾಮಾನ್ಯವಾಗಿ ಜಗತ್ತಿನಲ್ಲಿರುವ ಎಲ್ಲ ಮತಗಳೂ ತಂತಮ್ಮ ಮೂಲ-ಗ್ರಂಥಗಳನ್ನು ಅಸ್ಖಲಿತ ಸತ್ಯ ಪ್ರತಿಪಾದಕ ಪ್ರಮಾಣ ಸಾಧನಗಳೆಂದು ಹೇಳುತ್ತವೆ. ಸತ್ಯಸ್ವರೂಪವನ್ನು ಮಾನವನ ಹಿತಕ್ಕಾಗಿಯೇ ಬಹಿರಂಗ-ಪಡಿಸುವುವೆಂದು ಹೇಳಲ್ಪಡುವ ಗ್ರಂಥಗಳನ್ನು (Books of Revelation)

ಕಾಲ್ಪನಿಕ-ಅಪ್ರಾಯೋಗಿಕಗಳೆಂದು (Utopian) ಹೇಳಲು ಬರುವುದಿಲ್ಲ. H.G. Well ಮುಂತಾದವರ ಕಾಲ್ಪನಿಕ ಗ್ರಂಥಗಳಂತೆ, ಅಥವಾ ಕಾದಂಬರಿ-ಗಳಂತೆ, ಆಯಾ ಧರ್ಮಗ್ರಂಥಗಳಲ್ಲಿ (Sacred Scriptures) ನಿರೂಪಿಸ-ಲಾಗುವ, ಮಾನವನು ಕಂಡರಿಯದ, ದೇವರು-ಧರ್ಮ-ಸ್ವರ್ಗ-ನರಕ-ಜಗತ್ಸೃಷ್ಟಿ-ಸ್ಥಿತಿ-ಲಯ ಮೊದಲಾದ ವಿವರಣೆಗಳನ್ನು ತಿಳಿಯಬಹುದೇ? ಈ ಎಲ್ಲವೂ ಗ್ರಂಥಕರ್ತನ ಕಲ್ಪನೆ (Fancy) ಅಥವಾದೈವೀಶಕ್ತಿಯ ಪ್ರಭಾವ-ದಿಂದ ಪ್ರವೃತ್ತವಾದವುಗಳೆಂದು, ದ್ವಿಪ್ರಕಾರದಿಂದ ಮಾತ್ರ ಭಾವಿಸಲ್ಪಡ-ಬೇಕಲ್ಲದೇ ಅನ್ಯಪ್ರಕಾರವಿಲ್ಲ. ಕಲ್ಪನೆ ಮಾತ್ರಗಳೆಂದು ತಿಳಿಯುವುದು ಯುಕ್ತವಲ್ಲ. ಕಾಣಲ್ಪಟ್ಟ-ಅನುಭವಿಸಲ್ಪಟ್ಟ ವಿಷಯಗಳ ಉತ್ಪ್ರೇಕ್ಷೆ ಅಥವಾ ವಿಕಾರಗಳಿಂದ ಆದವುಗಳೇ ಕಲ್ಪನೆಗಳೆಂಬುವು-ಮೂಲ ರಹಿತ ನೂತನ ವಸ್ತುವಿಷಯಕವಲ್ಲ.[25] ಯಹೂದ್ಯರು (Jews) ತಮ್ಮ ಧರ್ಮಗ್ರಂಥಗಳನ್ನು ಮೋಸಸ್ (Moses)ಎಂಬಾತನು ಈಶ್ವರ ಪ್ರೇರಣೆಯಿಂದ ಹೇಳಿ ಬರೆಸಿದ-ನೆಂದು ನಂಬುತ್ತಾರೆ. ಕ್ರಿಶ್ಚಿಯನ್ನರು ಬೈಬಲ್ಲಿನಲ್ಲಿರುವ ಶುಭೋಪದೇಶಗಳನ್ನು (Gospels), ದೈವ (Holy ghost) ಪ್ರೇರಣೆಯಿಂದ ತಮ್ಮ ಮುನಿಗಳು (Evangelists) ನಿರೂಪಿಸಿದರೆಂದು ನಂಬುತ್ತಾರೆ. ಹೀಗೆಯೇ ಮುಸಲ್ಮಾನರು, ಪವಿತ್ರ ಕೊರಾನನ್ನು (Holy Quran) ಮಹಮ್ಮದ್ ಪೈಗಂಬರನು ದೈವ-ಪ್ರೇರಿತನಾಗಿ ಮಾನವನ ಹಿತಕ್ಕಾಗಿ ಉಸಿರಿದನೆಂದು ನಂಬುವರು. ಆದ್ದರಿಂದ ಈ ಧರ್ಮಗ್ರಂಥಗಳು ನಿರ್ಮೂಲ ಕಲ್ಪನೆಗಳಾಗಿರದೆ, ದೈವೀಶಕ್ತಿಯ ಪ್ರಭಾವದಿಂದಾದವುಗಳೆಂದು ತಿಳಿಯುವುದು ಹೆಚ್ಚು ಯುಕ್ತವೆನಿಸಬಹುದು. ಆದರೆ ಈ ಮತಗಳಾವುವೂ ತಮ್ಮ ಧರ್ಮಗ್ರಂಥಗಳನ್ನು ಅನಾದಿ ನಿತ್ಯಗಳೆಂದೂ - ಅಪೌರುಷೇಯಗಳೆಂದೂ ಹೇಳುವುದಿಲ್ಲ. ವೇದಗಳಿಗಾದರೋ ಈ ಪ್ರಸಿದ್ಧಿಯು ಅನಾದಿಕಾಲದಿಂದ (ಆರಂಭವಿಲ್ಲದ ಕಾಲದಿಂದ) ಇದೆ. ಇದು, ವೇದಗಳ ವೈಶಿಷ್ಟ್ಯ. ಆದರೆ, ಈ ವೈಶಿಷ್ಟ್ಯವನ್ನು ಸಾಧಿಸುವುದು ಹೇಗೆಂಬುದೇ ಈಗಿರುವ ಮುಖ್ಯ ಪ್ರಶ್ನೆ.

---

25. Fancy may exaggerate and distort, but cannot create or invent unperceived things.

ವೇದಗಳನ್ನು ಯಾರು ರಚಿಸಿದರೆಂಬುದು ಯಾರಿಗೂ ತಿಳಿಯದು. ಅಧ್ಯಯನ ಮಾಡುವವರೆಲ್ಲರೂ ತಮಗೆ ತಮ್ಮ ಗುರುಗಳಿಂದ ಪ್ರಾಪ್ತ-ವಾದುವೆಂದೂ, ಅವರು ತಮ್ಮ ಗುರುಗಳಿಂದ ತಮಗೆ ಪ್ರಾಪ್ತವಾದುವೆಂದೂ ಹೇಳುವರು. ಹೀಗೆ ಎಷ್ಟು ಹಿಂದಕ್ಕೆ ಹೋದರೂ ಇದೇ ಉತ್ತರ. ಭರತಖಂಡದಲ್ಲಿರುವ ನಾನಾ ದರ್ಶನಕಾರರ ಅಭಿಪ್ರಾಯವನ್ನು ಇಲ್ಲಿ ಗಮನಿಸಬಹುದು. ಬೌದ್ಧರು ಮತ್ತು ಜೈನರು ವೇದಪ್ರಮಾಣ್ಯವನ್ನೇ ಅಂಗೀಕರಿಸುವುದಿಲ್ಲವಾದ್ದರಿಂದ ಬುದ್ಧನಾಗಲಿ, ಜಿನನಾಗಲಿ ವೇದ ಕರ್ತೃ-ಗಳಲ್ಲವೆಂದು ನಿಶ್ಚಯಿಸಬಹುದು. ತಾರ್ಕಿಕರು, ಸಾಂಖ್ಯರು, ಮೀಮಾಂಸಕರು ಮತ್ತು ವೇದಾಂತಿಗಳು ವೇದಗಳನ್ನು ಪ್ರಮಾಣವೆಂದು ಒಪ್ಪುತ್ತಾರೆ. ಇವರು-ಗಳಲ್ಲಿ ಯಾವುದೊಂದು ದರ್ಶನದ ಮೂಲಾಚಾರ್ಯರು ವೇದಗಳನ್ನು ರಚಿಸಿದ್ದರೂ, ಉಳಿದ ದರ್ಶನಾಚಾರ್ಯರು ವೇದಪ್ರಾಮಾಣ್ಯವನ್ನು ಒಪ್ಪುತ್ತಿರಲಿಲ್ಲ. ತಾರ್ಕಿಕರು ಮಾತ್ರ ವೇದಗಳನ್ನು ಈಶ್ವರ ಕರ್ತೃಕವೆಂದು ಹೇಳುತ್ತಾರೆ. ಅನ್ಯರು ಈಶ್ವರ ಕರ್ತೃಕವೆಂದೂ ಹೇಳುವುದಿಲ್ಲ. ತಾರ್ಕಿಕಮತ ಪ್ರಕ್ರಿಯೆಯು, ಈಶ್ವರನು ಅಶರೀರಿಯೆಂಬುದಾಗಿರುತ್ತದೆ-ಈಶ್ವರನಿಗೆ ಪ್ರಾಕೃತವಾಗಲಿ, ಅಪ್ರಾಕೃತವಾಗಲಿ (ಚಿದಾತ್ಮಕವಾಗಲಿ) ಯಾವ ರೂಪದ ದೇಹವೂ ಇಲ್ಲ. ಅವತಾರಗಳಲ್ಲಿ ಮಾತ್ರ ಲೀಲೆಯಿಂದ ದೇಹವನ್ನು ಸ್ವೀಕರಿಸುತ್ತಾನೆ. ಭೂಮ್ಯಾದಿಗಳ ಉತ್ಪತ್ತಿ ಪೂರ್ವದಲ್ಲಿ ಈಶ್ವರನ ಅವತಾರವಿಲ್ಲ. ಭೂಮ್ಯಾದಿಗಳಂತೆ ವೇದಗಳ ಸೃಷ್ಟಿಯಿಲ್ಲ. ಅವು ವಾಗಿಂದ್ರಿಯವುಳ್ಳವನ ಉಚ್ಚಾರಮಾತ್ರದಿಂದ ಸೃಷ್ಟವಾಗಲು ಶಕ್ಯ-ಸ್ವರ ವರ್ಣಾತ್ಮಕ ಶಬ್ದ ರಾಶಿಯಾದ್ದರಿಂದ. ಅಶರೀರಿಯಾದ ಈಶ್ವರನು ವೇದಕರ್ತನಾಗುವುದೆಂತು? ಈಶ್ವರನು ತನ್ನದೊಂದು ಅವತಾರದಲ್ಲಿ ಉಚ್ಚರಿಸಿ ರಚಿಸಿದನೆಂದರೂ, ವೇದಗಳು ಈಶ್ವರ ರಚಿತಗಳೆಂದು ಸಿದ್ಧವಾಗುವುದಿಲ್ಲ. ಏಕೆಂದರೆ, ತಾನು ಬಾಯಿಪಾಠ ಮಾಡಿದ ಗೀತೆಯನ್ನು ಯಾರೊಬ್ಬನು ಉಚ್ಚರಿಸಿದ ಮಾತ್ರ-ದಿಂದ, ಅವನು ಅದರ ಕರ್ತನೆಂದು ಸಿದ್ಧವಾಗುವುದಿಲ್ಲವಷ್ಟೆ! ಬುದ್ಧಿಸ್ಥವಾದುದನ್ನು ಉಚ್ಚಾರದಿಂದ (ಕಂಠ - ತಾಲುಗಳ ವ್ಯಾಪಾರ-ದಿಂದ) ಪ್ರಕಟಿಸಿದ ಮಾತ್ರಕ್ಕೆ, ಅದು ಅವನ ರಚನೆಯಾಗುವುದಿಲ್ಲ.

ಬಹು ವ್ಯಕ್ತಿಗಳಿಂದ (ಋಷಿಗಳೆಂಬುವರಿಂದ) ಕಾಲಕಾಲಕ್ಕೆ ರಚಿತವಾದವು-ಗಳೆಂಬ ವಾದಕ್ಕೂ ಈ ದೋಷವು ತಗಲುತ್ತದೆ. ಈ ವಾದದ ನಾನಾಮುಖ ವಿಮರ್ಶೆಯು ಮುಂದೆ ವಿಸ್ತಾರದಿಂದ ಪ್ರಸಕ್ತವಾಗುತ್ತದೆ.

ವೇದಗಳು ಪುರುಷ ಕರ್ತೃಕವೆಂದು ಭಾವಿಸಿ, ಅವು ಯಾವ ಕಾಲದಲ್ಲಿ ರಚಿತವಾದವುಗಳೆಂಬ ಬಗ್ಗೆ ಕೆಲವು ಇತಿಹಾಸ ಪರಿಶೋಧಕ ಪ್ರವೀಣ-ರೆಂಬುವರು ವೇದಗಳ ಕಾಲ ಎಂಬ ಶೀರ್ಷಿಕೆಯಲ್ಲಿ, ತಮ್ಮ ಟಿಟಿ ಗ್ರಂಥಗಳಲ್ಲಿ, ಈ ವಿಷಯಗಳನ್ನು ಪ್ರಸ್ತಾಪಿಸುತ್ತಾರೆ. ಮೂರರಿಂದ ಐದು ಸಾವಿರ ವರ್ಷಗಳ ಹಿಂದೆ ವೇದಗಳು ರಚಿತವಾಗಿರಬಹುದೆಂದು ಅವರು ಅಭಿಪ್ರಾಯಪಟ್ಟಿದ್ದಾರೆ. ಅನಾದಿತ್ವವಾದಿಗಳು ಸಹ ಶ್ರೀ ವೇದವ್ಯಾಸರು, ಮೂಲ ವೇದರಾಶಿಯನ್ನು ಋಕ್, ಯಜು, ಸಾಮ ಮತ್ತು ಅಥರ್ವಗಳೆಂಬ ನಾಮಗಳಿಂದ, ಪ್ರತ್ಯೇಕವಾಗಿ ವಿಭಾಗಿಸಿದರೆಂದು ತಿಳಿಯುತ್ತಾರೆ. ಆದರೆ ಅವರು ವೇದಗಳನ್ನು ನಿರ್ಮಿಸಿದವರಲ್ಲವೆಂದು ಹೇಳುತ್ತಾರೆ. ಹೀಗೆಂದು ಶ್ರೀ ವೇದವ್ಯಾಸರೇ ತಾವು ರಚಿಸಿದ ಮಹಾಭಾರತದಲ್ಲಿ ಹೇಳಿಕೊಂಡಿರುವರು.[26]

ಕೆಲವು ಅರ್ವಾಚೀನ ಪರಿಶೋಧಕ ಪಂಡಿತರು (Research Scholars), ಆರ್ಯರೆಂಬ ಮಾನವರು ಅತಿ ಪೂರ್ವದಲ್ಲಿ ಉತ್ತರಧ್ರುವ ಪ್ರದೇಶದಲ್ಲಿ ವಾಸಿಸುತ್ತಿದ್ದರೆಂದೂ, ಅವರು ಅಗ್ನಿ-ಸೂರ್ಯ-ಚಂದ್ರ- ಮಳೆ-ಗುಡುಗು-ಶಿಡಿಲು ಇತ್ಯಾದಿಗಳನ್ನು ದೇವತೆಗಳೆಂದು ನಂಬಿ, ಇವರ ಪ್ರಾರ್ಥನಾ ರೂಪದಿಂದ ಮಾಡಿದ ಸ್ತೋತ್ರಗಳೇ ವೇದಗಳೆಂದೂ ವೇದಗಳು ಬಹುಪುರುಷ ಕರ್ತೃಕಗಳೆಂದೂ, ಏಕಕಾಲದಲ್ಲಿ ರಚಿತವಾದವುಗಳಲ್ಲವೆಂದೂ ಅಭಿಪ್ರಾಯ-ಪಟ್ಟಿರುವುದುಂಟು. ಮಂತ್ರ-ಬ್ರಾಹ್ಮಣ-ಉಪನಿಷತ್ತುಗಳೆಂಬ ವೇದ ವಿಭಾಗ-ಗಳಲ್ಲಿ ಕಂಡುಬರುವುದೆಂಬ ಭಾಷಾಶೈಲಿಗಳ ವೈಚಿತ್ರ್ಯದಿಂದ ನಾನಾ ಪ್ರಕಾರದ ಊಹೆಗಳನ್ನು ಮಾಡಿದ್ದಾರೆ. ಉಪನಿಷತ್ತುಗಳು ವೇದಗಳ ಇತರ ಭಾಗಗಳಕ್ಕಿಂತ

26. ವೇದಾಂತ ಕೃದ್ವೇದವಿದೇವ ಚಾಹಂ । ಗೀತಾ-15 ಅಧ್ಯಾಯ ವೇದಾಂತವನ್ನು (ಬ್ರಹ್ಮಸೂತ್ರಗಳನ್ನು) ನಿರ್ಮಿಸಿದವನೂ, ವೇದಗಳನ್ನು ತಿಳಿದವನೂ ನಾನೇ ಎಂದಿದ್ದಾರೆ.

ಇತ್ತೀಚೆಗೆ ರಚಿತವಾಗಿರಬೇಕೆನ್ನುತ್ತಾರೆ. ಲೋಕಮಾನ್ಯ ಬಾಲಗಂಗಾಧರ-ತಿಲಕರು, "Arctic home in the Vedas–" ''ವೇದಗಳಲ್ಲಿ ಧ್ರುವನಿವಾಸ'' ಎಂಬ ತಮ್ಮ ಗ್ರಂಥದಲ್ಲಿ, ಶಾಸ್ತ್ರೀಯ ಮತ್ತು ಚಾರಿತ್ರಿಕ ಅಭಿಪ್ರಾಯಗಳನ್ನು ತುಲನೆಮಾಡಿ, ತಮ್ಮ ನಿರ್ಣಯವನ್ನು ಹೇಗೆ ಮಂಡಿಸಿರುವರೆಂಬುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಅವರು ಹೀಗೆಂದಿರುವರು :

| Theological view | Historical view |
|---|---|
| (1) The Vedas are eternal, (Nitya) beginningless (Anadi) and not made by man (Apaurusheya). | The Vedic or the Aryan religion can be proved to be inter-glacial but its ultimate Origin is still lost in geo-logical antiquity. |
| (2) The Vedas were des-troyed in the deluge at the last Kalpa. | The Aryan religion and culture were destroyed in the last glacial period that invaded the Arctic Aryan home. |
| (3) At the beginning of the present Kalpa, the Rishis through Tapas reproduced in substance if not in form, the antideluvian Vedas forefathers. which they carried in their memory by the favour of God. | The Vedic Hymns were sung in post glacial times by poets who had inherited the knowledge or contents thereof in an unbroken tradition from their anti-deluvian forefathers. |

**The conclusion**:- The tradition about the destruction and reproduction of the Vedas recorded by Vyasa in the Mahabharatha is founded on a historical fact. The extreme scrupulosity with which the Veda has been preserved, so that not even a letter or a swara (ಸ್ವರ) can be changed and the divine regard paid to it from the remotest antiquity prove that the Veda is eternal in a sense in which no other scripture can be held to be eternal.

| ಶಾಸ್ತ್ರೀಯ ದೃಷ್ಟಿ | ಚಾರಿತ್ರಿಕ ದೃಷ್ಟಿ |
|---|---|
| ೧. ವೇದಗಳು ನಿತ್ಯ ಮತ್ತು ಅನಾದಿ, ಪುರುಷ ಕೃತವಲ್ಲ (ಅಪೌರುಷೇಯ). | ವೈದಿಕ ಅಥವಾ ಆರ್ಯ ಧರ್ಮವು ಹಿಂದಿನ ಹಿಮಪ್ರವಾಹಗಳ ಮಧ್ಯ ಕಾಲದಲ್ಲಿ ಉದಯಿಸಿತೆಂದು ರುಜುವಾತು ಮಾಡಬಹುದು. ಆದರೆ, ಅದರ ಚರಮ ಮೂಲವು ಭೂತತ್ವ-ಶಾಸ್ತ್ರದ ಪ್ರಾಚೀನತೆ-ಯಲ್ಲಿ ಹುದುಗಿಹೋಗಿದೆ. |
| ೨. ಹಿಂದಿನ ಕಲ್ಪದ ಪ್ರಳಯದಲ್ಲಿ ವೇದಗಳು ನಷ್ಟವಾದವು. | ಆರ್ಯಧರ್ಮ ಮತ್ತು ಸಂಸ್ಕೃತಿ ಗಳು ಆರ್ಯರ ನಿವಾಸದ ಉತ್ತರ ಧ್ರುವ ಪ್ರದೇಶದಲ್ಲಿ ಸಂಭವಿಸಿದ ಈ ಹಿಂದಿನ ಹಿಮಪ್ರವಾಹದಲ್ಲಿ ನಾಶವಾದವು. |
| ೩. ಈಗ ನಡೆಯುತ್ತಿರುವ ಕಲ್ಪದ ಆರಂಭದಲ್ಲಿ ಋಷಿಗಳು ತಮ್ಮ ತಪಃ ಶಕ್ತಿಯಿಂದ, ಹಿಂದೆ ಪ್ರಳಯದಲ್ಲಿ ನಷ್ಟವಾದರೂ, ತಮ್ಮ ಬುದ್ಧಿಯಲ್ಲಿ ಧರಿಸಲಾಗಿದ್ದ ವೇದಗಳನ್ನು ಪುನಃ ಅವರು, ಹಿಮಪ್ರವಾಹದ ಹಿಂದಿನ ತಮ್ಮ ಪ್ರಕಟಗೊಳಿಸಿದರು. ಅವು ಪೂರ್ವ ರೂಪದಲ್ಲಿ ಅಲ್ಲದಿದ್ದರೂ ಅರ್ಥ ಸಾರಾಂಶದಿಂದ ಏಕಪ್ರಕಾರವಾಗಿದ್ದವು. | (ವಿನಾಶಕರವಾದ) ಹಿಮಪ್ರವಾಹದ ನಂತರ, ಕವಿಗಳು ವೇದಮಂತ್ರ-ಗಳನ್ನು ಪುನಃ ಗಾನಮಾಡಿದರು. ಪೂರ್ವಜರಿಂದ ವೇದಜ್ಞಾನವನ್ನು ಅಥವಾ ವೇದ ವಿಷಯಗಳನ್ನು ಅವಿಚ್ಛಿನ್ನ ಪರಂಪರೆಯಿಂದ ಪಡೆದಿದ್ದರು. |

**ನಿರ್ಣಯ :-** ವೇದಗಳ ನಾಶ ಮತ್ತು ಪುನಃ ಪ್ರಕಟಣೆಗೆ ಸಂಬಂಧಿಸಿದ ಪರಂಪರಾಗತ ಅಭಿಪ್ರಾಯವನ್ನು ವೇದವ್ಯಾಸರು ಮಹಾಭಾರತದಲ್ಲಿ ಉಲ್ಲೇಖಿಸಿರುವರು. ಅದು ಚಾರಿತ್ರಿಕ ಸತ್ಯಾಂಶವನ್ನು ಆಧರಿಸಿರುತ್ತದೆಂದು ಕಂಡುಬರುತ್ತದೆ. ವೇದಗಳ ಒಂದು ವರ್ಣವಾಗಲಿ ಸ್ವರವಾಗಲಿ ವ್ಯತ್ಯಾಸ ಹೊಂದದಂತೆ ನಿಷ್ಕಳಂಕವಾದ ಅತ್ಯಾಸಕ್ತಿಯಿಂದ ರಕ್ಷಿಸಿಕೊಂಡು ಬರಲಾಗಿವೆ ಎಂಬುದೂ, ಬಹುಪುರಾತನ ಕಾಲದಿಂದ ವೇದಗಳಲ್ಲಿಡಲಾಗಿರುವ ಭಕ್ತಿ-ಗೌರವಗಳೂ, (ಜಗತ್ತಿನ) ಎಲ್ಲ ಧರ್ಮಗ್ರಂಥಗಳಕ್ಕಿಂತ, ಒಂದು ವಿಶೇಷ ದೃಷ್ಟಿಯಲ್ಲಿ, ವೇದಗಳು ಪರಮನಿತ್ಯವೆಂಬುದನ್ನು ಸಾಧಿಸುತ್ತವೆ.

ತಿಲಕ ಮಹಾಶಯರ ಈ ವಿಮರ್ಶಿತ ನಿರ್ಧಾರವು ಬಹುಮಟ್ಟಿಗೆ ಸತ್ಯ ಸಾಧಕವೆನ್ನಬಹುದು. ಆದರೆ ಶಾಸ್ತ್ರೀಯ ಅಭಿಪ್ರಾಯವೆಂಬ ಭಾಗದಲ್ಲಿ ತೋರಿಸಿರುವ ಅಂಶಗಳು ಶಾಸ್ತ್ರನಿರ್ಣಯಗಳಲ್ಲ; ಕೆಲವರ ಅಭಿಪ್ರಾಯ ಮಾತ್ರವೆಂದು ಕಂಡುಬರುತ್ತದೆ.

ವೇದಗಳ ನಾನಾ ಭಾಗಗಳಲ್ಲಿ ಕಂಡುಬರುತ್ತದೆಂಬ ಭಾಷಾಶೈಲಿಗಳ ವೈಚಿತ್ರ್ಯವು, ವೇದಗಳ ಕಾಲವನ್ನು ನಿರ್ಧರಿಸುವುದಕ್ಕೆ ಬಹು ದುರ್ಬಲ ಸಾಧನವಾಗುತ್ತದೆ. ನಾನಾ ಊಹಾಪೋಹಗಳಿಗೆ ಎಡೆಯಾಗುತ್ತದೆ. ಪ್ರತಿಪಾದಿಸಲ್ಪಡುವ ವಿಷಯಗಳು, ಅವುಗಳ ಗಹನತೆ-ಸರಳತೆ, ಅವಶ್ಯಕ-ವಾಗಬಹುದಾದ ಪಾರಿಭಾಷಿಕ ಶಬ್ದಗಳ ಪ್ರಯೋಗ, ರಹಸ್ಯ ಪ್ರಮೇಯಗಳ ನಿರೂಪಣೆ, ನಾನಾರ್ಥಗಳಿಗೆ ಅವಕಾಶವಿರುವಂತೆ ನಿರೂಪಣೆ ಮಾಡಬೇಕಾದ ಅವಶ್ಯಕತೆ, ಇತ್ಯಾದಿ ಕಾರಣಗಳಿಂದ ಭಾಷಾಶೈಲಿಯಲ್ಲಿ ವ್ಯತ್ಯಾಸವುಂಟಾಗ-ಬಹುದು. ಭಾಷಾಶೈಲಿಯ ವೈವಿಧ್ಯದಿಂದ ಭಿನ್ನ ಕಾಲಗಳಲ್ಲಿ ಆದುದವೆಂದು ತಿಳಿದು, ಅದೇ ಕಾರಣದಿಂದ ವೇದಗಳು ರಚಿತವಾದವುಗಳಿರಬೇಕೆಂದೂ, ಅನಾದಿಗಳಲ್ಲವೆಂದೂ ಹೇಳುವುದು ಕೇವಲ ನಿರಾಧಾರವಾದ ಊಹೆ-ಯೆನಿಸುತ್ತದೆ. ನಾನಾ ಋಷಿಗಳ ನಾಮಗಳನ್ನು ಉದಹರಿಸಿ, ಅವರಿಂದ ಹೇಳಲ್ಪಟ್ಟವುಗಳೆಂದು ಉದ್ದೇಶಿಸಲಾಗುವ ಅನೇಕ ವಾಕ್ಯಗಳು ವೇದಗಳಲ್ಲಿವೆ. ಇವುಗಳು, ವೇದಗಳು ಬಹು ಕರ್ತೃಕವೆಂದು, ಸೂಚಿಸುವಂತಿವೆ. ಈ ಮೊದಲಾದ ಆಂತರಿಕ (ವೇದಗಳಲ್ಲಿರುವ) ಸಂದರ್ಭಗಳು ವೇದಗಳ ಅನಾದಿ ನಿತ್ಯತ್ವವನ್ನೂ ಅಪೌರುಷೇಯತ್ವವನ್ನೂ ವಿರೋಧಿಸುತ್ತವೆ. ಇವುಗಳ ವಿಮರ್ಶೆಯೂ ಈ ಮುಂದೆ ಸುದೀರ್ಘವಾಗಿ ಪ್ರಸಕ್ತವಾಗುತ್ತವೆ. ಪ್ರಕೃತ ಅನಾದಿ ನಿತ್ಯತ್ವವನ್ನು ವಿರೋಧಿಸುವ ಅನ್ಯ ಯುಕ್ತಿಗಳನ್ನು ವಿಮರ್ಶಿಸಲಾಗುತ್ತದೆ.

ಅನಾದಿ ಎಂದರೆ ಉತ್ಪತ್ತಿಯಿಲ್ಲದ್ದು-ಪೂರ್ವದ ಎಲ್ಲ ಕಾಲದಲ್ಲಿದ್ದದು. ನಿತ್ಯವೆಂದರೆ ನಾಶವಿಲ್ಲದ್ದು-ಮುಂದೆಲ್ಲ ಕಾಲದಲ್ಲಿರುವುದು. ಕಾಲದಂತೆ ಅನಾದಿ ನಿತ್ಯ. ವೇದಗಳೂ ಅನಾದಿ ನಿತ್ಯ; ಕಾಲದಂತೆ ಮಾತ್ರವಲ್ಲ. ವಾಕ್ಯಸಮೂಹಗಳಾದ ವೇದಗಳು, ವರ್ಣ-ಪದ-ವಾಕ್ಯ ಕ್ರಮಗಳಿಂದಲೂ,

ಅರ್ಥ ಸ್ವರಾದಿಗಳಿಂದಲೂ, ಏಕಪ್ರಕಾರವಾದ ಅನಾದಿ ನಿತ್ಯತ್ವವುಳ್ಳವು. ಅಕಾರಾದಿ ವರ್ಣಗಳೆಲ್ಲ ಶಬ್ದರೂಪವೇ ಆಗಿದ್ದು, ಶಬ್ದವು ಶ್ರೋತ್ರ-ಗ್ರಾಹ್ಯವಾಗಿದೆ. ವರ್ಣಗಳು ಉಚ್ಚಾರದಿಂದ ಹುಟ್ಟುತ್ತವೆ-ನಂತರ ನಷ್ಟ-ವಾಗುತ್ತವೆ. ಹೀಗೆಂಬುದು ಸರ್ವರ ಅನುಭವವೇ ಆಗಿರಲು, ವರ್ಣಗಳು ನಿತ್ಯವೆಂದರೇನೆಂಬುದನ್ನು ವಿಮರ್ಶಿಸಬೇಕಲ್ಲವೇ? ನಂತರ ಪದ, ವಾಕ್ಯ, ಕ್ರಮಾದಿಗಳ ನಿತ್ಯತ್ವವನ್ನೂ ವಿವೇಚಿಸಬೇಕಾಗುವುದು.

ಶರೀರದಲ್ಲಿರುವ ವಾಯುವು, ಕಂಠ-ತಾಲು ಮೊದಲಾದ ಮುಖದಲ್ಲಿ-ರುವ ಅಂಗಗಳ ವಿವಿಧ ಚಲನ ವ್ಯಾಪಾರದಿಂದ ವಿವಿಧ ಧ್ವನಿಗಳನ್ನು ಹುಟ್ಟಿಸುತ್ತದೆ. ಈ ಧ್ವನಿ ವಿಶೇಷಗಳು ವಾಯುತರಂಗಗಳ ದ್ವಾರಾ ಕೇಳುವವನ ಕಿವಿಯನ್ನು ಪ್ರವೇಶಿಸಿ ವರ್ಣವಿಶೇಷಗಳನ್ನು (ವಿವಿಧ ವರ್ಣಗಳನ್ನು) ಪ್ರಕಟಗೊಳಿಸುತ್ತವೆ. ಅಲ್ಲಿರುವ ಶ್ರವಣಶಕ್ತಿಯು (ಕಿವಿ ರೂಪದ ಗೋಳಕ-ದಲ್ಲಿರುವ ಶ್ರೋತ್ರೇಂದ್ರಿಯವು) ಆ ವರ್ಣಗಳನ್ನು ಗ್ರಹಿಸುತ್ತದೆ. ವರ್ಣಗಳು ಉಚ್ಚರಿಸುವವನ ಮುಖದಲ್ಲಿ ಹುಟ್ಟಿ ಕೇಳುವವನ ಕಿವಿಯವರೆಗೆ ತರಂಗಗಳ ದ್ವಾರಾ ಸಂಚರಿಸುತ್ತವೆಂಬ ಕಲ್ಪನೆಯು ಸರಿಯಲ್ಲ. ಜಲಾಶಯದ ಮಧ್ಯದಲ್ಲಿ ಒಂದು ಕಲ್ಲೆಸೆದರೆ, ಅಲೆಗಳೆದ್ದು ಸುತ್ತಲೂ ಕೆಲದೂರ ಅಥವಾ ದಡದವರೆಗೆ (ಅಲೆಗಳನ್ನು ಉತ್ಪಾದಿಸಿದ ಶಕ್ತ್ಯನುಸಾರವಾಗಿ) ಪ್ರಸಾರಗೊಳ್ಳುವಂತೆ, ಮುಖದಿಂದ ಹೊರಟ ಧ್ವನಿ ತರಂಗಗಳು ಸುತ್ತಲೂ ಪ್ರಸರಿಸುತ್ತವೆ. ಅವು ಯಾರ ಯಾರ ಕಿವಿಗಳನ್ನು ಪ್ರವೇಶಿಸುತ್ತವೆಯೋ ಅಲ್ಲೆಲ್ಲಾ, ಆಯಾ ಧ್ವನಿ ವಿಶೇಷಗಳಿಗೆ ಉಚಿತವಾದ ವರ್ಣಗಳು ವ್ಯಕ್ತವಾಗುತ್ತವೆ. ಅಲೆಗಳು ಸ್ವಯಂ ಸಂಚಾರ ಮಾಡುವುದಿಲ್ಲ. ನೀರಿನ ಅಲೆಗಳನ್ನು ವೀಕ್ಷಿಸಿದರೆ, ಅಲೆಯಾಗಿ ಮೇಲೆದ್ದು-ಕೆಳಗಿಳಿದು, ನೀರು ಇದ್ದಲ್ಲಿಯೇ ಇರುತ್ತದೆಂಬುದು ಸ್ಪಷ್ಟ-ವಾಗುತ್ತದೆ. ಅಲೆಗಳು ತಮ್ಮಲ್ಲಿರುವ ಪರಿಸ್ಪಂದವನ್ನು ಪಕ್ಕದಲ್ಲಿರುವ ಜಲಾಣುಗಳಿಗೆ ವರ್ಗಾಯಿಸುತ್ತವೆ. ಇದರಂತೆಯೇ ವಾಯುತರಂಗಗಳೂ ಸಹ. ಪರಿಸ್ಪಂದರೂಪದ ಧ್ವನಿಯೂ ಹೀಗೆಯೇ ವಾಯುತರಂಗಗಳ ದ್ವಾರಾ ಸಂಚರಿಸುತ್ತದೆ. ಉಚ್ಚರಿಸುವವನ ಪ್ರಯತ್ನದಿಂದ ಪ್ರೇರಿತವಾದ ವಾಯುವು, ಅಲ್ಲಿರುವ ಆಕಾಶದೊಡನೆ ಕೂಡಿ, ಅಲ್ಲಿ (ಆಕಾಶದಲ್ಲಿ) ಧ್ವನಿರೂಪದ

ಶಬ್ದವನ್ನು ಉತ್ಪಾದಿಸುತ್ತವೆ. ಆದರಿಂದ ವರ್ಣವು ವ್ಯಕ್ತವಾಗುತ್ತದೆ. ವಾಯು ತರಂಗಗಳ ದ್ವಾರಾ ಶಬ್ದವು ಕೇಳುವವನ ಕಿವಿಯನ್ನು ಪ್ರವೇಶಿಸಿ, ಅಲ್ಲಿರುವ ಆಕಾಶದಲ್ಲಿ (ಆಕಾಶವು ಸರ್ವತ್ರ ವ್ಯಾಪ್ತವಾದುದು) ವರ್ಣವನ್ನು ವ್ಯಕ್ತೀಕರಿಸುತ್ತದೆ-ಅದನ್ನು ಶ್ರೋತ್ರೇಂದ್ರಿಯವು ಗ್ರಹಿಸುತ್ತದೆ. ಧ್ವನಿವ್ಯತ್ಯಾಸಗಳಿಂದ ಭಿನ್ನ ವರ್ಣಗಳು ಪ್ರಕಟವಾಗುತ್ತವೆ. ಆದ್ದರಿಂದ ಏಕಕಾಲದಲ್ಲಿ ಅನೇಕ ವರ್ಣಗಳು ಪ್ರಕಟ-ವಾಗುವುದಿಲ್ಲ. ಕಂಠ-ತಾಲುಗಳಲ್ಲಿನ ವಾಯು ವ್ಯಾಪಾರವು, ಧ್ವನಿವಿಶೇಷ-ಗಳನ್ನು ಹುಟ್ಟಿಸುವುದರಲ್ಲಿ ನಿಮಿತ್ತ ಮಾತ್ರವು. ಶಬ್ದವು ಆಕಾಶದ ಗುಣ-ಸ್ಪರ್ಶ, ರೂಪ, ರಸ, ಗಂಧಗಳು ವಾಯು ತೇಜಸ್ಸು ಜಲ ಪೃಥ್ವಿಗಳ ಗುಣಗಳಾಗಿರುವಂತೆ. ವಾಯು ವ್ಯಾಪಾರವು ಆಕಾಶ ಗುಣವಾದ ಶಬ್ದವನ್ನು ಪ್ರಕಟಗೊಳಿಸುವುದರಲ್ಲಿ ನಿಮಿತ್ತ ಕಾರಣವಲ್ಲದೇ ಇಲ್ಲದ ಶಬ್ದವನ್ನು ಹುಟ್ಟಿಸುವುದಿಲ್ಲ. ಈ ಪ್ರಮೇಯವನ್ನು, ಪ್ರಾಚೀನ ದರ್ಶನಕಾರರಲ್ಲಿ ವೈಶೇಷಿಕರೂ ಸ್ಫೋಟ-ವಾದಿಗಳೂ ನಾನಾ ಯುಕ್ತಿವಾದಗಳಿಂದ ಎದುರಿಸಿ ತಿರಸ್ಕೃತರಾಗಿರುವರು. ಶಬ್ದವು ಸರ್ವತ್ರವಿರುವ ಆಕಾಶದ ಗುಣ. ಅದರ ಅಭಿವ್ಯಂಜಕವಾದ ವಾಯುಗತ ಪರಿಸ್ಪಂದವು ವಾಯುತರಂಗಗಳ ದ್ವಾರಾ ಸಂಚರಿಸಿ ಕೇಳುವವನ ಕಿವಿಗೇ ಸೇರಿತಲ್ಲದೇ ವಾಯುವೇ ಧ್ವನಿಯನ್ನು ಹೊತ್ತು ಸಂಚರಿಸಲಿಲ್ಲ (ಜಲತರಂಗಗಳಂತೆ) ಎಂಬುದು ಸ್ಪಷ್ಟವೇ. ಕೇಳುವವನ ಕಿವಿಯಲ್ಲಿರುವ ಆಕಾಶದಲ್ಲಿ ಧ್ವನಿರೂಪ ಶಬ್ದವು ಪ್ರಕಟವಾಯಿತು. ವಾಯುಮಂಡಲವು ಪರಿಸ್ಪಂದಗಳನ್ನು ಸಾಗಿಸುವ ಮಾಧ್ಯಮ (medium) ಮಾತ್ರ. ಶಬ್ದವೇ ಒಂದೆಡೆಯಿಂದ ಮತ್ತೊಂದೆಡೆಗೆ ಸಂಚರಿಸಿತೆಂಬ ಭ್ರಮಕ್ಕೆ ಅವಕಾಶವಿಲ್ಲ. ಧ್ವನಿಯು ವ್ಯಂಜಕ-ವರ್ಣವು ವ್ಯಂಗ್ಯ. ಕಿವುಡನ ಕಿವಿಯಲ್ಲಿ ಪರಿಸ್ಪಂದಯುಕ್ತ ವಾಯುವು ಪ್ರವೇಶಿಸಿದರೂ, ಧ್ವನಿಯಾಗಲಿ ವರ್ಣವಾಗಲಿ ಗ್ರಹಿಸಲ್ಪಡುವುದಿಲ್ಲ. ಅಲ್ಲಿ ಶ್ರವಣಶಕ್ತಿ (ಶ್ರೋತ್ರೇಂದ್ರಿಯ) ಇಲ್ಲದಿರುವುದೇ ಇದಕ್ಕೆ ಕಾರಣ. ಶಬ್ದವಾಹಗಳೆಂದು ಕರೆಯಲ್ಪಡುವ ಮಾಧ್ಯಮಗಳು (medium) ಅನೇಕವಿವೆ. ಅವುಗಳಲ್ಲಿ ಶಬ್ದವು ವಿವಿಧ ಕಾಲ ವ್ಯತ್ಯಾಸಗಳಿಂದ ಒಂದೆಡೆಯಿಂದ ಮತ್ತೊಂದೆಡೆಗೆ ಸಂಚರಿಸುವುದೆಂದು ಹೇಳಲಾಗುತ್ತದೆ. ಇದರಿಂದ ಶಬ್ದ ಸಂಚಾರದ ವೇಗವನ್ನೂ ನಿರ್ಧರಿಸಿ ನಿರೂಪಿಸಲಾಗುತ್ತದೆ. ಆದರೆ ಶಬ್ದವೇ

ಸಂಚರಿಸುವುದಿಲ್ಲವೆಂಬುದನ್ನು ಮರೆಯಲಾಗದು. ಜಲತರಂಗ-ವಾಯುತರಂಗ-ಗಳಂತೆ, ಧ್ವನಿಸ್ಪಂದಗಳನ್ನು, ಲೋಕ ಮೊದಲಾದ ಇತರ ಮಾಧ್ಯಮ (medium)ಗಳೂ ಸಾಗಿಸುವ ಶಕ್ತಿಯುಳ್ಳವುಗಳೆಂದು ತಿಳಿಯಬೇಕು. ವಾಯುತರಂಗಗಳ ವೇಗವನ್ನನುಸರಿಸಿ, ಗಾಳಿಯು ಬೀಸುವ ದಿಕ್ಕಿನಲ್ಲಿರುವ ಶ್ರೋತ್ರೇಂದ್ರಿಯಗಳಲ್ಲಿ, ಶಬ್ದಜ್ಞಾನವು ಶೀಘ್ರವಾಗಿ ಉಂಟಾಗುತ್ತದೆ. ಈ ಎಲ್ಲ ವಿಷಯಗಳು ವಿಜ್ಞಾನ (science) ಸಮ್ಮತವೇ ಆಗಿವೆ. ರೇಡಿಯೋ ದ್ವಾರಾ ವಾರ್ತಾಪ್ರಸಾರವಾಗುವುದರ ಮೂಲತತ್ತ್ವಗಳನ್ನು ತಿಳಿದವರು, ಶಬ್ದವು ಆಕಾಶಗುಣವೆಂಬುದನ್ನೂ, ಪ್ರಾಕಟ್ಯನಿಮಿತ್ತ ಕಾರಣ- ವಿದ್ದಲ್ಲೆಲ್ಲಾ ಏಕಕಾಲದಲ್ಲಿ ಶಬ್ದವು ಪ್ರಕಟವಾಗಿ, ಸರ್ವರ ಶ್ರೋತ್ರೇಂದ್ರಿಯಗಳಿಗೆ ಗೋಚರಿಸಲರ್ಹ-ವೆಂಬುದನ್ನೂ ಸುಲಭವಾಗಿ ತಿಳಿಯಬಲ್ಲರು. ಶಬ್ದವೂ ವರ್ಣಗಳೂ ಹೀಗೆ ಸರ್ವತ್ರವ್ಯಾಪ್ತವೆಂಬ ಮುಖ್ಯ ಪ್ರಮೇಯವು ವಿಜ್ಞಾನದಿಂದಲೂ, ತರ್ಕ-ದಿಂದಲೂ ಸಿದ್ಧವಾಗುತ್ತದೆ. ಸರ್ವತ್ರ ವ್ಯಾಪ್ತವಾದುದು (ಇರುವುದು) ಆಕಾಶದಂತೆ ನಿತ್ಯವೇ ಎಂಬುದು ಸಹ ಅದರೊಂದಿಗೇ ಸಿದ್ಧವಾಗುತ್ತದೆ. ಈ ಪ್ರಮೇಯಕ್ಕೆ ಸಂಬಂಧಿಸುವ ಕೆಲವು ಸೂಕ್ಷ್ಮವಿಶೇಷಗಳನ್ನು ಇಲ್ಲಿ ಗಮನಿಸಬೇಕಾದುದು ಅವಶ್ಯಕವಾಗುತ್ತದೆ. ಆಕಾಶವು, ಅವ್ಯಾಕೃತಾಕಾಶ ಮತ್ತು ಭೂತಾಕಾಶವೆಂದು ಎರಡು ವಿಧವಾಗಿದೆ. ಪರಿಮಾಣಾದಿ ಧರ್ಮಗಳುಳ್ಳ (ಮೂರ್ತವೆಂದು ಕರೆಯಲಾಗುವ) ವಸ್ತುಗಳ ಚಲನಾದಿಗಳಿಂದ ಅವಕಾಶ ಕೊಡುವ, ದೇಶ - ದಿಕ್ - ಪ್ರದೇಶ - ಆಕಾಶ ಇತ್ಯಾದಿ ನಾಮಗಳಿಂದ ಕರೆಯಲ್ಪಡುವುದೇ (space) ಅವ್ಯಾಕೃತಾಕಾಶವು. ಇದು ನಿತ್ಯ-ವಾಪ್ತ ಮತ್ತು ನಿರ್ವಿಕಾರವಾದುದು. ಆಕಾಶ-ವಾಯು-ಅಗ್ನಿ-ಜಲ ಮತ್ತು ಭೂಮಿ ಗಳೆಂಬುವು ಪಂಚಭೂತಗಳೆಂದು ಕರೆಯಲ್ಪಡುತ್ತದೆ. ಇವುಗಳಲ್ಲೊಂದಾದ ಆಕಾಶವು ಭೂತಾಕಾಶವೆನಿಸುತ್ತದೆ. ಪಂಚಭೂತಗಳ ಮೇಳನ-ಸಂಯೋಗ-ಗಳಿಂದ ನಾನಾವಿಧ ಜಗದ್ವಸ್ತುಗಳು ನಿರ್ಮಿತವಾಗುತ್ತವೆ. ಅವ್ಯಾಕೃತಾಕಾಶ-ದಂತೆ ಭೂತಕಾಶವೂ ಅವಕಾಶಪ್ರದತ್ವ ಧರ್ಮವುಳ್ಳದ್ದು. ಭೂತಾಕಾಶವು ನಾಶವುಳ್ಳದ್ದು. ತನ್ನ ಉತ್ಪತ್ತಿಗೆ ಕಾರಣವಾದ ವಸ್ತುವಿನಲ್ಲಿ (ಅಹಂಕಾರ ತತ್ವದಲ್ಲಿ) ಪ್ರಳಯಕಾಲದಲ್ಲಿ ಲಯ ಹೊಂದುತ್ತದೆ. ಧ್ವನಿಯು ಭೂತಾಕಾಶದ

ಗುಣ-ವಾಯುವಿನ ಗುಣವಲ್ಲ. ಸ್ಪರ್ಶವು ವಾಯುವಿನ ಗುಣ-ತ್ವಕ್ (ಚರ್ಮ) ಸ್ಥಿತ ಸ್ಪರ್ಶೇಂದ್ರಿಯದಿಂದ ಗ್ರಹಿಸಲಾಗುತ್ತದೆ. ಕಂಠ, ತಾಲು ಮೊದಲಾದ ಬಾಯಲ್ಲಿರುವ (ಎಂಟು) ಅಂಗಗಳ ಚಲನೆಯಿಂದ ಅಥವಾ ತತ್ಸದೃಶ ವಾಯುಚಲನ ಕಾರಣಗಳಿಂದ, ವಾಯುವಿನಲ್ಲಿ ಕಂಪನ- ಗಳೇರ್ಪಡುತ್ತವೆ. ಇವು ತರಂಗಗಳ ರೂಪದಿಂದ ಸುತ್ತಲೂ ಸಂಚರಿಸುತ್ತವೆ. ಈ ಹಿಂದೆ ಹೇಳಿದಂತೆ ಕಂಪನಯುಕ್ತ ವಾಯುವೇ ಸಂಚರಿಸುವುದಿಲ್ಲ. ಭೂಮಿ, ಕಬ್ಬಿಣ ಇತ್ಯಾದಿ ಇತರ ಧ್ವನಿವಾಹಕ ಮಾಧ್ಯಮಗಳಲ್ಲಿ (media) ಧ್ವನಿಯು ವಾಯು-ಮಾಧ್ಯಮಕ್ಕಿಂತ ವೇಗವಾಗಿ ಸಂಚರಿಸುತ್ತದೆ. ಅಲ್ಲಿ ಆ ಮಾಧ್ಯಮಾಂಶಗಳೇ ಸಂಚರಿಸುವುದಿಲ್ಲವೆಂಬುದು ಸ್ಪಷ್ಟವೇ ಅಲ್ಲವೇ! ಈ ಮಾಧ್ಯಮಗಳಲ್ಲಿ ಸಹ ಭೂತಾಕಾಶದ ಅಂಶಗಳಿರುತ್ತವೆಂಬುದನ್ನು ಮರೆಯಬಾರದು. ವಾಯು ಅಥವಾ ಇತರ ಮಾಧ್ಯಮಗಳಲ್ಲಿ ಉಂಟಾಗುವ ಕಂಪನಗಳು (ಪರಿಸ್ಪಂದಗಳು) ಭೂತಾಕಾಶದ ಗುಣವಾದ ಧ್ವನಿಯನ್ನು ಉತ್ಪಾದಿಸುತ್ತವೆ. ಈ ಧ್ವನಿವಿಶೇಷಗಳು ಅವ್ಯಾಕೃತಾಕಾಶದಲ್ಲಿ ಸರ್ವತ್ರ ಇರುವ ವರ್ಣಗಳನ್ನು (ಅಕಾರಾದಿ ವರ್ಣ-ಗಳನ್ನು) ವ್ಯಕ್ತೀಕರಿಸುತ್ತವೆ. ಅವ್ಯಾಕೃತಾ- ಕಾಶವಿಲ್ಲದ ಸ್ಥಳವಿಲ್ಲ. ಕೇಳುವವನ ಕಿವಿಯಲ್ಲಿರುವ ಆಕಾಶಗತ ವರ್ಣಗಳನ್ನು ಧ್ವನಿವಿಶೇಷಗಳು ಪ್ರಕಟಗೊಳಿಸುತ್ತವೆ.

ನಿತ್ಯವಾದ ಅವ್ಯಾಕೃತಾಕಾಶದಲ್ಲಿ ಅಕಾರಾದಿ ವರ್ಣಗಳು ಸರ್ವತ್ರ ವ್ಯಾಪಿಸಿಕೊಂಡಿದ್ದು, ಮೇಲ್ಕಂಡಂತೆ, ಉಚ್ಚಾರದಿಂದ ಅಥವಾ ಇತರ ಸದೃಶ ಕಾರಣಗಳಿಂದ (ಯಂತ್ರ ವಿಶೇಷಗಳಿಂದ) ಉಂಟಾದ ಧ್ವನಿ ಸ್ಪಂದನಗಳಿಂದ, ಅಭಿವ್ಯಕ್ತವಾಗುತ್ತವೆ. ಆದ್ದರಿಂದ ವರ್ಣಗಳು ನಿತ್ಯ ಮತ್ತು ಸರ್ವತ್ರ ವ್ಯಾಪ್ತವೆಂದು ತಿಳಿಯಬಹುದು. ಪ್ರತ್ಯಭಿಜ್ಞೆಯೂ ವರ್ಣ ನಿತ್ಯತ್ವವನ್ನೇ ಸಾಧಿಸುತ್ತದೆ. ಒಬ್ಬನ ಉಚ್ಚಾರದಿಂದ ಗಕಾರವು ಕೇಳಿಬಂದಾಗ, ಹಿಂದೆ ಕೇಳಿದ ಗಕಾರವೇ ಇದು ಎಂಬ ಜ್ಞಾನವುಂಟಾಗುತ್ತದೆ. ಹಿಂದೆ ಕೇಳಿದ ಮತ್ತು ಈಗ ಕೇಳಿದ ವರ್ಣಗಳಿಗೆ ಅಭೇದವನ್ನು ಪ್ರತ್ಯಭಿಜ್ಞೆಯು ತಿಳಿಸುತ್ತದೆ. ಮತ್ತು ಉಚ್ಚಾರದಿಂದ ವರ್ಣಗಳು ನೂತನವಾಗಿ ಹುಟ್ಟುತ್ತವೆಂಬುದನ್ನು ವಿರೋಧಿಸುತ್ತದೆ. ಪ್ರತ್ಯಭಿಜ್ಞೆಯು ಸಾದೃಶ್ಯದಿಂದಾದ ಭ್ರಾಂತಿಯಲ್ಲ.

ಹಿಂದಿನ ಅಕ್ಕಿಯ ಅನ್ನವೇ ಇದು-ಹಿಂದೆ ಕತ್ತರಿಸಿದ ಕುಂತಲ ಕಲಾಪವೇ (ಕೂದಲ ಸಮೂಹವೇ) ಇದು, ಇತ್ಯಾದಿ ಜ್ಞಾನಗಳು ಶುಕ್ತಿಯಲ್ಲಿ ಕಂಡ ರಜತದಂತೆ ಭ್ರಮಾತ್ಮಕವೇ. ಆದರೆ ವರ್ಣಗಳ ವಿಷಯದಲ್ಲಿ ಅದೇ ವರ್ಣವೆಂದುಂಟಾಗುವ ಪ್ರತ್ಯಭಿಜ್ಞೆಯು, ಅದರಂತಿರುವ ವರ್ಣವೆಂಬ ಪ್ರಕಾರವಾಗಿರದೇ ಅದೇ ಗಕಾರ-ಅದೇ ವರ್ಣವೆಂಬ ಪ್ರಕಾರದಿಂದ ಇರುತ್ತದೆ. ನಿನ್ನೆ ಕಂಡ ಮನುಷ್ಯನೇ ಇವನು ಎಂಬ ಪ್ರತ್ಯಭಿಜ್ಞೆಯನ್ನೂ ಭ್ರಾಂತಿ ಎನ್ನ-ಬಹುದೇ? ಮನುಷ್ಯ ಶರೀರಾಂಶಗಳು, ಪ್ರತಿ ಕ್ಷಣದಲ್ಲಿ ಜಾಠರಾಗ್ನಿ ಕೃತ ಪಾಕವಿಶೇಷಾದಿ ಕಾರಣಗಳಿಂದ ವಿನಾಶವನ್ನೂ ಸದೃಶ ದೇಹಕಣಗಳ ಉತ್ಪತ್ತಿಯನ್ನೂ ಹೊಂದುತ್ತವೆಂದು ಅಂಗೀಕರಿಸುವ ಕೆಲವು ವಾದಿಗಳು (ವೈಶೇಷಿಕರು) ಅವನೇ ಇವನು ಎಂಬುದನ್ನೂ ಸಹ ಭ್ರಾಂತಿ ಎಂದೇ ಹೇಳುತ್ತಾರೆ. ಆದರೆ ಇವರು ಜಗದ್ವಸ್ತುಗಳಿಗೆ ಕ್ಷಣಿಕತ್ವವನ್ನು ತಿಳಿಯುವ ಬೌದ್ಧರನ್ನು ನಿರಾಕರಿಸುವಾಗ, ಜಗತ್ತಿಗೆ ಸ್ಥಿರತ್ವವನ್ನು ಹೇಳಬೇಕಾಗುತ್ತದೆ. ಕ್ಷಣಿಕತ್ವವನ್ನು ಖಂಡಿಸದಿದ್ದರೆ (ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನೊಪ್ಪಿದರೆ) ಅವರೂ ಬೌದ್ಧರಂತೆ ಕ್ಷಣಿಕವಾದಿಗಳೇ ಆಗಬೇಕಾಗುವುದು. ಕ್ಷಣಿಕತ್ವವನ್ನು ಸರ್ವ ಜಗತ್ತಿಗೂ ಸಾಧಿಸುವ ಬೌದ್ಧ ಪ್ರಭೇದಿಗಳಾದ ಸೌತ್ರಾಂತಿಕ-ವೈಭಾಷಿಕರಂತೆ, ವೈಶೇಷಿಕರೂ ನಾಸ್ತಿಕರಾಗಬೇಕಾಗುತ್ತದೆ. ಅವರಾದರೋ, ತಾರ್ಕಿಕರೊಂದಿಗೆ ತಾವು ಪರಮ ಆಸ್ತಿಕರೆಂದು ಹೇಳಿಕೊಂಡು ಈಶ್ವರಾದಿ ಕೆಲವು ಅತೀಂದ್ರಿಯ ವಸ್ತುಗಳನ್ನು ಅಂಗೀಕರಿಸುತ್ತಾರೆ. ನಿನ್ನೆ ಸ್ನಾನಮಾಡಿದ ಜಲಪ್ರವಾಹವೇ ಇದು; ಹಿಂದೆ ಕಂಡ ದೀಪಜ್ವಾಲೆಗಳೇ ಇವು ಇತ್ಯಾದಿಗಳಂತೆ,[27] ಆ ದೇವದತ್ತನೇ ಇವನು ಇತ್ಯಾದಿ ಅನುಭವಗಳು ಉಂಟಾದವುಗಳಲ್ಲ. ವಯೋಮಾನಗುಣವಾಗಿ ವಿಶೇಷ ಧರ್ಮಯುಕ್ತವಾದ ಶರೀರವನ್ನೂ, ರಸ-ಬಣ್ಣ ಇತ್ಯಾದಿ ವಿಶೇಷ ಧರ್ಮಗಳನ್ನು ಹೊಂದಿದ ಫಲಪುಷ್ಪಾದಿಗಳನ್ನೂ ಹೊಸ ವಸ್ತುಗಳೆಂದು ತಿಳಿಯುವುದು ಯುಕ್ತವಲ್ಲ. ದೇಹ ಭಿನ್ನನಾದ ನಿತ್ಯ ಜೀವನ ವಿಷಯಕ್ಕಂತೂ ಕ್ಷಣಿಕತ್ವ ವ್ಯವಹಾರವು ಸರ್ವಥಾ ಕೂಡುವುದಿಲ್ಲ. ದೇಹಾದಿಗಳಲ್ಲಿ ಕಂಡುಬರುವ ವಿಶೇಷ ಧರ್ಮಗಳಂತೆ ಅಕಾರಾದಿ ವರ್ಣಗಳಲ್ಲಿ

27. ರತ್ನ (1) ಪರಿಚ್ಛೇದ 2 ರಲ್ಲಿ ನೋಡಬಹುದು.

ಪರಿಣಾಮ ಜ್ಞಾಪಕವಾದ ಹೊಸ ವಿಶೇಷಗಳಾವುವೂ ಕಂಡುಬರುವುದಿಲ್ಲ. ಆದ್ದರಿಂದ ಪ್ರತ್ಯಭಿಜ್ಞೆಯು ವರ್ಣಗಳ ನಿತ್ಯತ್ವ-ನಿರ್ವಿಕಾರವನ್ನೇ ಸಾಧಿಸುತ್ತ-ದೆಂದು ತಿಳಿಯಲು ಬರುತ್ತದೆ.

ವಿಜ್ಞಾನವಾದಿಗಳು ಮತ್ತು ಶೂನ್ಯವಾದಿಗಳು, ವಿಜ್ಞಾನತತ್ವ-ಶೂನ್ಯತತ್ತ್ವಗಳನ್ನುಳಿದು ಇತರ ಸರ್ವವೂ ಭ್ರಾಂತಿಕಲ್ಪಿತವೆಂದು ಹೇಳುವರು. ಇವರಂತೆ ಆಕಾಶವೂ ಭ್ರಾಂತಿಕಲ್ಪಿತ ಅನಿತ್ಯವಸ್ತುವೆಂದಾದರೆ ವರ್ಣನಿತ್ಯತ್ವದ ಗತಿ-ಯೇನೆಂಬ ಯೋಚನೆ ಬೇಡ. ಅವರು ಆಕಾಶವನ್ನು ನಿತ್ಯವೆಂದೊಪ್ಪಲೇಬೇಕು. ಇಲ್ಲದಿದ್ದರೆ ಆಕಾಶದಂತೆ ಅವರ ವಿಜ್ಞಾನ-ಶೂನ್ಯಗಳೂ ಭ್ರಾಂತಿಕಲ್ಪಿತಗಳೆಂದರೆ ಅವರು ನಿರುತ್ತರರಾಗಬೇಕಾಗುತ್ತದೆ. ಸೂರ್ಯೋದಯಾದಿಗಳಿಂದ ದಿಕ್ಕು-ಗಳನ್ನು ಕಲ್ಪಿಸಲಾಗುತ್ತದೆ ಎಂದು ಅವರು ಹೇಳುವುದು ಸರಿಯಲ್ಲ. ಅವಕಾಶ-ಪ್ರದವಾದ ಆಕಾಶವೇ (space) ದಿಕ್ಕು ಎನಿಸುತ್ತದೆ. ಇದು ಗಾಢಾಂಧಕಾರದಲ್ಲಿ ಸಹ ಸಾಕ್ಷಿಯಿಂದ ಗ್ರಹಿಸಲಾಗುತ್ತದೆ. ಆಗ ಸೂರ್ಯಾದಿ ಉಪಾಧಿಗಳಿಲ್ಲವಷ್ಟೆ! ಪೂರ್ವ ಮೊದಲಾದ ದಿಗ್ಭಾಗಗಳಲ್ಲಿ ಕದಾಚಿತ್ ಅವುಗಳ ವಿಷಯಕ್ಕೆ ಸಂಶಯ ಅಥವಾ ಭ್ರಾಂತಿಯುಂಟಾದರೆ ಆಗ ಸೂರ್ಯೋದಯಾದಿಗಳಿಂದ ಪರಿಹರಿಸಿ-ಕೊಳ್ಳುತ್ತೇವೆ. ಅಷ್ಟು ಮಾತ್ರದಿಂದ ದಿಕ್ (ಆಕಾಶವೇ) ಕಲ್ಪಿತವೆನ್ನಲಾದೀತೇ? ಆದ್ದರಿಂದ ಆಕಾಶವು ನಿತ್ಯ ಮತ್ತು ಸರ್ವವ್ಯಾಪ್ತ. ಅಲ್ಲಿರುವ ವರ್ಣಗಳೂ ನಿತ್ಯ ಮತ್ತು ವ್ಯಾಪ್ತ. ಎಲ್ಲ ವರ್ಣಗಳು ಆಕಾಶದಲ್ಲಿ ಸರ್ವತ್ರ ಇದ್ದರೂ, ವ್ಯಂಜಕಧ್ವನಿ ವಿಶೇಷಗಳಿಗನುಸಾರವಾಗಿ ಗಕಾರಾದಿ ವರ್ಣಗಳು ಮಾತ್ರ ವ್ಯಕ್ತವಾಗುತ್ತವೆ. ವರ್ಣವೇ ಧ್ವನಿಯಲ್ಲ-ಧ್ವನಿಯೇ ವರ್ಣವಲ್ಲ. ದೂರದಲ್ಲಿರುವವನಿಗೆ ಧ್ವನಿ ಮಾತ್ರ ಕೇಳುತ್ತದೆ-ವರ್ಣಗಳಲ್ಲ. ವ್ಯಂಜಕ ಧ್ವನಿವಾಹಕಗಳು (ಪರಿಸ್ಪಂದ ಅಥವಾ ಕಂಪ ವಿಶೇಷಗಳು) ದುರ್ಬಲವಾದ್ದರಿಂದ ವರ್ಣಗಳ ಅಭಿವ್ಯಕ್ತಿಯಾಗುವುದಿಲ್ಲ. ಆದ್ದರಿಂದ ಧ್ವನಿಯು ವ್ಯಂಜಕ-ವರ್ಣಗಳು ವ್ಯಂಗ್ಯವೆಂಬುದೇ ಸರಿ.

**ವರ್ಣಗಳು ನಿತ್ಯ ಮತ್ತು ಅನಿತ್ಯಗಳೆಂದು ಎರಡು ವಿಧ.** ಅಕಾರಾದಿ ಸಂಸ್ಕೃತ ವರ್ಣಗಳು (ಐವತ್ತು) ನಿತ್ಯಗಳು; ಅಪಭ್ರಷ್ಟ (ಪ್ರಾಕೃತ) ಭಾಷಾ ಗತವರ್ಣಗಳು ಅನಿತ್ಯ. ಇವುಗಳಲ್ಲಿ ಸಂಖ್ಯಾನಿಯಮವಿಲ್ಲ (ಇಷ್ಟೇ

ವರ್ಣಗಳೆಂಬ ನಿಯಮವಿಲ್ಲ.) ಪೂರ್ವೋಕ್ತ ಪ್ರಕಾರ ಉತ್ಪಾದಿತವಾದ ಧ್ವನಿ ವಿಶೇಷಗಳಿಂದ ಆಕಾಶಗತ ಸಂಸ್ಕೃತ ವರ್ಣಗಳು, ನಾನಾ ವಿಕೃತ ರೂಪಗಳಿಂದ ವ್ಯಕ್ತವಾಗುತ್ತವೆ. ಈ ವರ್ಣ ವಿಕಾರಗಳು ಕೃತಕ-ನಿತ್ಯವಲ್ಲ-ವಿಷಮ ರೀತಿಯ ಉಚ್ಚಾರ ವಿಶೇಷಗಳು ಇವುಗಳ ಉತ್ಪತ್ತಿಗೆ ಕಾರಣ. ಇವು ಸಂಸ್ಕೃತ ವರ್ಣಗಳಂತೆ ವಿಕಾರರಹಿತವಾದ ಶುದ್ಧ ವರ್ಣಗಳಲ್ಲ. ಜಗದುಪಾದಾನ ಕಾರಣವಾದ ಮೂಲಪ್ರಕೃತಿಯಂತೆ ನಿತ್ಯವಾದುವು. ಸಂಸ್ಕೃತ ವರ್ಣಗಳು- ನಾನಾ ಜಗದ್ವಸ್ತುಗಳ ಸೃಷ್ಟಿಗೆ ಕಾರಣಗಳಾದ ಪಂಚಭೂತಾದಿ ವಿಕೃತ ತತ್ವಗಳಂತೆ ಅನಿತ್ಯವಾದವು ಪ್ರಾಕೃತ ವರ್ಣಗಳು. ಜಗದ್ವಸ್ತುಗಳು ಅನಿತ್ಯ- ನಾಶವುಳ್ಳವು. ಹಾಗೆಯೇ ಅಪಭ್ರಂಶ ಭಾಷಾವರ್ಣಗಳು ಉಚ್ಚಾರದಿಂದ ಹುಟ್ಟಿ, ನಂತರ ನಷ್ಟವಾಗುತ್ತವೆ. ವರ್ಣಗಳು ನಿತ್ಯ-ವರ್ಣವಿಕಾರಗಳು ಅನಿತ್ಯವೆಂದು ತಿಳಿಯುವುದರಲ್ಲಿ ಯಾವ ಯುಕ್ತಿ ವಿರೋಧವೂ ಇಲ್ಲ. ಹೀಗೆಯೇ ವರ್ಣಸಮೂಹಗಳಾದ ಪದ-ವಾಕ್ಯಗಳೂ ಸಹ ನಿತ್ಯಾನಿತ್ಯ ಭೇದದಿಂದ ದ್ವಿವಿಧಗಳೆಂದೂ ತಿಳಿಯಬಹುದು.[28] ಸಂಸ್ಕೃತ ವರ್ಣಧರ್ಮಗಳಾದ ಹ್ರಸ್ವತ್ವ-ದೀರ್ಘತ್ವಾದಿಗಳೂ, ಪದ-ವಾಕ್ಯ-ಕ್ರಮ ವಿಶೇಷಗಳಿಂದ ಸಹಿತವಾದ ವರ್ಣಾತ್ಮಕವೇ ಆದ ವೇದವೂ, ಸ್ವರೂಪದಿಂದಲೇ ನಿತ್ಯವೆಂದೂ, ಪೂರ್ವೋಕ್ತ ವಿಮರ್ಶನ ಯುಕ್ತಿಗಳಿಂದ ಸಾಧಿಸಬಹುದು.

## ಅಪೌರುಷೇಯತ್ವ

ಅನಾದಿನಿತ್ಯತ್ವ ಮತ್ತು ಅಪೌರುಷೇಯತ್ವಗಳು ಪರಸ್ಪರ ಒಂದಕ್ಕೊಂದು ಸಾಧಕವಾಗಬಹುದಾದರೂ, ಅಪೌರುಷೇಯತ್ವ ವಿಷಯದಲ್ಲಿ ಆಪಾತತಃ (ಅವಿಮರ್ಶ ದೆಶೆಯಲ್ಲಿ) ತೋರುವ ಯುಕ್ತಿವಿರೋಧಗಳನ್ನೂ ಪರಿಹರಿಸಿ-ಕೊಳ್ಳಬೇಕಾದುದು ಅವಶ್ಯಕ. **ವೇದಗಳೆಲ್ಲವೂ ವರ್ಣಾತ್ಮಕ. ವರ್ಣಸಮೂಹಗಳೇ ಪದಗಳು; ಪದಸಮೂಹಗಳು ವಾಕ್ಯಗಳು.**

28. 'ಮೃತ್ತಿಕಾ' ಎಂಬುದು ವಿಕಾರವಿಲ್ಲದ ಸಂಸ್ಕೃತ ಪದ-ನಿತ್ಯ. 'ಮಣ್ಣು' ಎಂಬುದು ವಿಕೃತವಾದ ಪ್ರಾಕೃತ (ಕನ್ನಡ) ಪದ. ಇದನ್ನೇ ಛಾಂದೋಗ್ಯ ಶ್ರುತಿಯು 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇ ತ್ಯೇವ ಸತ್ಯಂ' ಎಂದು ಹೇಳುತ್ತದೆ.

ಪುರುಷನ ಉಚ್ಚಾರದಿಂದ ವರ್ಣಗಳು ಪ್ರಕಟವಾಗುತ್ತವೆ. ವರ್ಣಗಳ ಯೋಜನೆಯು ಪುರುಷಾಧೀನವೆಂಬುದು ಅನುಭವಸಿದ್ಧ. ವನ ಎಂದಾಗಲಿ ನವ ಎಂದಾಗಲಿ, ಎರಡು ವರ್ಣಗಳನ್ನು ಕೂಡಿಸಿ ಉಚ್ಚರಿಸುವ ಕ್ರಮವು ಪುರುಷಾಧೀನ-ವಲ್ಲವೇ? ಇದರಂತೆ ನಾನಾಪದಗಳನ್ನು ವಿಶಿಷ್ಟ ಕ್ರಮದಲ್ಲಿ ಯೋಜಿಸಿ ವಾಕ್ಯಗಳನ್ನು ರಚಿಸುವುದೂ ಪುರುಷಾಧೀನವೇ ಆಗಿದೆ. **ಒಂದು ವಾಕ್ಯವು ಅಪ್ರಮಾಣವಾಗಲು ಯೋಜಕ ಪುರುಷನ ದೋಷವೇ ಕಾರಣ.** ಮೊಲಕ್ಕೆ ಕೋಡುಗಳಿವೆ ಹಸುವಿಗೆ ಕೋಡುಗಳಿವೆ ಎಂಬ ವಾಕ್ಯಗಳಲ್ಲಿ ಮೊದಲಿನದು ಅಸತ್ಯ-ಎರಡನೆಯದು ಸತ್ಯ. ಮೊದಲಿನ ವಾಕ್ಯದಲ್ಲಿರುವ ಪದಗಳನ್ನು ಅನುಭವ ವಿರೋಧವಾದ, ಅಸಂಗತವಾದ ಅರ್ಥವನ್ನು ಬೋಧಿಸುವಂತೆ ಜೋಡಿಸಿರುವುದು ಪುರುಷ ದೋಷವೆಂಬುದು ಸ್ಪಷ್ಟವೇ. ಪದ-ವಾಕ್ಯ ಸಮೂಹಗಳಾದ ವೇದಗಳು ಪುರುಷಕೃತವಾದರೆ ಅಸತ್ಯವನ್ನು ಪ್ರತಿಪಾದಿಸುವ ಸಂಭವವಿರುತ್ತದೆ. ಆದ್ದರಿಂದ ವೇದಗಳು, ಸರ್ವತ್ರ ಯಥಾರ್ಥವನ್ನೇ ಬೋಧಿಸುವ ವಾಕ್ಯಸಮೂಹಗಳಾಗಬೇಕಾದರೆ, ಅವು ಅಪೌರುಷೇಯ-ವಾಗಿರಲೇ ಬೇಕು. ವಾಕ್ಯರೂಪ ವೇದವು ಅಪೌರುಷೇಯವೆಂದು ಹೇಳುವುದು ಅವನು ಬಂಜೆಯ ಮಗನು ಎಂಬಂತೆ ವಿರುದ್ಧ ಭಾಷಣವೆಂಬ ದೋಷಗ್ರಸ್ತವಾಗುವುದಿಲ್ಲವೆ? ಪೌರುಷೇಯಗಳೆಂದರೆ ಬಾಧಕವೇನು? ಅಪೌರುಷೇಯತ್ವವನ್ನು ಸಾಧಿಸುವುದರಲ್ಲಿ ಆಗ್ರಹವೇಕೆ? ಎಂಬ ಪ್ರಶ್ನೆಗಳಿಗೆ ಸದುತ್ತರಗಳು ದೊರೆಯಬೇಕಾದುದು ಅತ್ಯವಶ್ಯಕ.

ವರ್ಣಗಳು ಪದಗಳಾಗಿಯೂ, ಪದಗಳು ವಾಕ್ಯಗಳಾಗಿಯೂ ತಮಗೆ ತಾವೇ ಕೂಡಿಕೊಂಡು ವಾಕ್ಯಗಳಾಗುವುವೆಂದು ಹೇಳುವುದು, ಇಟ್ಟಿಗೆಗಳು ತಮಗೆ ತಾವೇ ಜೋಡಣೆಯಾಗಿ ಮನೆಯನ್ನು ರಚಿಸುತ್ತವೆಂದು ಹೇಳಿದಂತೆಯೇ ಸರಿ. ಬುದ್ಧಿಪೂರ್ವಕ ಅವುಗಳನ್ನು ಯೋಜಿಸುವ ಪುರುಷನು ಅವಶ್ಯಕ. ಪುರುಷನಿಲ್ಲದೇ ಭಾಷಣವಿಲ್ಲವಷ್ಟೆ! ಹೀಗಿರುವುದು ಸಾಮಾನ್ಯ ನಿಯಮ-ವೇದಗಳು ಹೀಗಲ್ಲವೆಂದು ತಿಳಿಯುವುದೆಂತು? ಅಪೌರುಷೇಯ ವಾಕ್ಯವೇ ಇಲ್ಲೆಂದು ಹೇಳಬಹುದೇ?

ಮಾನವ ಸಮಾಜದ ಅಸ್ತಿತ್ವ, ರಕ್ಷಣೆ-ಉನ್ನತಿ-ಸುಖಶಾಂತಿಗಳಿಗೆ ಧರ್ಮಾಧರ್ಮಗಳ ವ್ಯವಸ್ಥೆಯು ಅತ್ಯವಶ್ಯಕವೆಂದು ಸಾಮಾನ್ಯವಾಗಿ ಜಗತ್ತಿನಲ್ಲಿರುವ ಎಲ್ಲ ಮತಪ್ರವರ್ತಕರೂ ಒಪ್ಪಿರುವರು. ಆದರೆ ಧರ್ಮ-ಅಧರ್ಮಗಳ ಸ್ವರೂಪ ಲಕ್ಷಣಗಳನ್ನು ಅವರು ವಿವಿಧವಾಗಿ ನಿರೂಪಿಸಿರುವರು. ಒಬ್ಬರಿಗೆ ಗೋವಧೆಯು ಮಹಾಪಾತಕವೆನಿಸಿದರೆ ಇನ್ನೊಬ್ಬರಿಗೆ ಹಾಗಲ್ಲ, ಇತ್ಯಾದಿ. ಧರ್ಮಾಧರ್ಮ ವಿಷಯಕ ವಿರೋಧಭಾವನೆಗಳಿಂದ ವಿವಿಧ ಮಾನವಪಂಗಡಗಳಲ್ಲಿ ಘರ್ಷಣೆಗಳಿಗೆಡೆಯಾಗಿ ಘೋರ ಯುದ್ಧಗಳೇ ಮೊದಲಾದ ಮಹಾ ಅನರ್ಥಗಳಾಗಿವೆ. ಆದ್ದರಿಂದ ಧರ್ಮ-ಅಧರ್ಮಗಳ ಸ್ವರೂಪ ನಿರ್ಣಯವು, ಆಪ್ತರೆಂದು ಪರಿಗ್ರಹೀತರಾದ ಪುರುಷ ವಾಕ್ಯಗಳಿಂದ ಸಿದ್ಧಿಸಲಾರದು.ಚಾರ್ವಾಕರೂ ಸಹ ತಮ್ಮದೂ ಒಂದು ಶಾಸ್ತ್ರವೆಂದು (ಮತ ಅಥವಾ ಸಿದ್ಧಾಂತವೆಂದು) ಸಾಧಿಸಲು ಹೊರಟರೆ, ಧರ್ಮವ್ಯವಸ್ಥೆಯನ್ನು ಅಂಗೀಕರಿಸಲೇಬೇಕಾಗುತ್ತದೆ.[29] ದೇಹ ಭಿನ್ನವಾದ ಜೀವನಿಲ್ಲ; ದೇಹವಿರುವವರೆಗೆ ವಿಷಯ ಭೋಗದಿಂದ ಸುಖವನ್ನನುಭವಿಸುವುದೇ ಮಾನವನ ಗುರಿಯೆಂಬ ತಮ್ಮ ಸಿದ್ಧಾಂತವನ್ನು ಸಾಧಿಸಲು, ಶಾಸ್ತ್ರ ಬೇಕಿಲ್ಲ-ಅದು ಪಶ್ವಾದಿ ಪ್ರಾಣಿವರ್ಗದ ಸಹಜಪ್ರವೃತ್ತಿಯಾಗಿದೆ-ಉಪದೇಶ ಬೇಕಿಲ್ಲ, ಉಪದೇಶಕನಿಗೆ ಯಾವ ಪ್ರಯೋಜನವೂ ಇಲ್ಲ. ಈ ಉಪದೇಶದಿಂದ ಲೋಕೋಪಕಾರವಾಗುವುದಿಲ್ಲ-ಪ್ರತ್ಯುತ, ಲೋಕಕ್ಕೆ ಅಪಕಾರವೇ ಆಗುತ್ತದೆ. ಧರ್ಮಾದಿಗಳ ಅಭಾವವನ್ನು ಉಪದೇಶಿಸುವುದರಿಂದ, ಪಾಪಭೀತಿ-ರಹಿತರಾಗಿ, ಪ್ರಜೆಗಳು ಸ್ವೇಚ್ಛಾವೃತ್ತಿಯ ಸ್ವಾರ್ಥಿಗಳಾಗುವರು. ಅಂಥವರಿಂದ ಉಪದೇಶಕನಿಗೇನು ಪ್ರಯೋಜವಾದೀತು! ಪಾರತ್ರಿಕ ಫಲವನ್ನಂತೂ ಆತನು ಒಪ್ಪುವುದೇ ಇಲ್ಲ. ಆದ್ದರಿಂದ ಧರ್ಮಾದಿಗಳ ಅಭಾವಜ್ಞಾನವು ಲೋಕವಿನಾಶಕರವೇ ಸರಿ.

ಇನ್ನು, ಯಾವನೊಬ್ಬ ಪುರುಷನ ವಾಕ್ಯಗಳಿಂದ ಧರ್ಮಾಧರ್ಮಗಳ ವ್ಯವಸ್ಥೆಯು ಸಿದ್ಧಿಸುವುದಿಲ್ಲ. ಇಂದ್ರಿಯ ದೌರ್ಬಲ್ಯ, ಅಜ್ಞಾನ-ವಂಚಕತ್ವ ಮೊದಲಾದ ದೋಷಗಳಿಗೆ ಪುರುಷರಲ್ಲಿ ಅವಕಾಶವಿರುವುದರಿಂದ

29. ರತ್ನ (1) ಪರಿಚ್ಛೇದ 2 ರಲ್ಲಿ ನೋಡಬಹುದು.

ಧರ್ಮಾದಿಗಳ ಸ್ವರೂಪವನ್ನು ನಿರ್ಧರಿಸಿಕೊಳ್ಳಲು ಸಾಧ್ಯವಿಲ್ಲ. ಈ ದೋಷ-ಗಳಿಲ್ಲದ ಸರ್ವಜ್ಞ ಪುರುಷನಿದ್ದರೆ ಮಾತ್ರ ಸಾಧ್ಯವಾಗಬಹುದು. ಸರ್ವಸಮ್ಮತ-ನಾದ ಸರ್ವಜ್ಞನಿಲ್ಲ; ಆಸ್ತಿಕರೆಂದು ಹೇಳಿಕೊಳ್ಳುವ ಎಲ್ಲ ಮತೀಯರೂ ತಂತಮ್ಮ ಮೂಲಾಚಾರ್ಯರನ್ನು ಸರ್ವಜ್ಞರೆಂದೇ ಹೇಳುವರು-ಅವರ ಉಪದೇಶಗಳಾದರೋ ಸತ್ಯಸ್ವರೂಪವನ್ನಾಗಲಿ, ಧರ್ಮಾಧರ್ಮಗಳನ್ನಾಗಲಿ, ಏಕಪ್ರಕಾರವಾಗಿ ನಿರೂಪಿಸುವುದಿಲ್ಲ. ಅವರ ಮಾತುಗಳಲ್ಲಿ ಆಪಾತತಃ ಹಲವು ಸಾಮ್ಯಗಳನ್ನು ಕಾಣಬಹುದಾದರೂ, ಹಾಗೂ ನೀತಿಪರ ವಾಕ್ಯಗಳು ಬಹುಮಟ್ಟಿಗೆ ಏಕರೀತಿಯಾಗಿದ್ದರೂ, ಮೂಲತತ್ತ್ವಗಳ ವಿಷಯಕ್ಕೆ, ಹಗಲು ರಾತ್ರಿಗಳಷ್ಟು ಅಂತರವಿದೆ. ಸರ್ವಜ್ಞನೊಬ್ಬನನ್ನು ಸರ್ವರ ಆಪ್ತನೆಂದು ಕಲ್ಪಿಸಬೇಕಾಗುತ್ತದೆ. ಇದು ಯುಕ್ತವಲ್ಲ ಮತ್ತು ಹಾಗೆ ಕಲ್ಪಿತ ಪುರುಷನಲ್ಲಿ ಸರ್ವಜ್ಞತ್ವವನ್ನು ಸಾಧಿಸುವುದು ಶಕ್ಯವೇ ಅಲ್ಲ. ನಮ್ಮ ಅಜ್ಞಾನಾದಿಗಳ ನಿವೃತ್ತಿಗಾಗಿ ಮತ್ತೊಬ್ಬನನ್ನು ಸರ್ವಜ್ಞನೆಂದು ಕಲ್ಪಿಸುವುದು, ಅವನಲ್ಲಿ ವಂಚಕತ್ವಾದಿ ದೋಷಗಳಿಲ್ಲವೆಂದು ಕಲ್ಪಿಸುವುದು, ಸರ್ವ ಮಾನವರ ಸರ್ವಸಮಸ್ಯೆಗಳನ್ನು ಪರಿಹರಿಸಬಲ್ಲ ಸಾಮರ್ಥ್ಯವು, ಎಲ್ಲಿಯೂ ಯಾರಿಗೂ ಕಾಣದ ಆ ಸರ್ವಜ್ಞನಲ್ಲಿ ಇತ್ತೆಂದು ಕಲ್ಪಿಸುವುದು, ಇತ್ಯಾದಿ ಕಲ್ಪನಾ ಪರಂಪರೆಗಳಿಂದ (ಪೌರುಷೇಯ ವಾಕ್ಯಗಳಿಗೆ ಧರ್ಮಾಧರ್ಮಗಳ ಸಾಧಕತ್ವ-ವನ್ನು ತಿಳಿಯುವುದು) ದೂಷಿತವಾಗುತ್ತದೆ. ವೇದಗಳು, ಈ ಪ್ರಕಾರದ ಸರ್ವಜ್ಞನಿಂದ ಅಥವಾ ಬಹು ಸರ್ವಜ್ಞರಿಂದ ರಚಿತವಾದವುಗಳೆಂದು ಕಲ್ಪಿಸಿ, ವೇದಗಳಿಗೆ ಪೌರುಷೇಯತ್ವವನ್ನು ಸಾಧಿಸುವುದಕ್ಕಿಂತ, ಅಪೌರುಷೇಯ-ಗಳೆಂದು ಅಂಗೀಕರಿಸಿದರೆ, ಬೇರೆ ಏನನ್ನೂ ಕಲ್ಪಿಸಬೇಕಾದ ಕಾರಣವೇ ಇರುವುದಿಲ್ಲ. **ಅಪೌರುಷೇಯತ್ವವಾದರೋ ಸ್ವತ ಏವ ಸಿದ್ಧವಾಗಿದೆ.** ಇಂಥವನು ವೇದಕರ್ತನೆಂಬ ಪ್ರಸಿದ್ಧಿಯೇ ಇಲ್ಲವಾದ್ದರಿಂದ ಅಪೌರುಷೇಯತ್ವವು ನಿಶ್ಚಿತವಾಗಿದೆ. ಕರ್ತನು ಅಪ್ರಸಿದ್ಧನಾಗಿದ್ದರೂ, ಒಬ್ಬ ಕರ್ತನನ್ನು ಕಲ್ಪಿಸುವುದು ಕಲ್ಪನಾ ಗೌರವವೇ ಸರಿ. ಕಲ್ಪಿಸದಿದ್ದರೆ ಅಕರ್ತೃಕವೆಂದು ಸಿದ್ಧವೇ ಆಗುತ್ತದೆ.

ವೇದಕರ್ತನೆಂಬುವನು ಪ್ರಸಿದ್ಧನಲ್ಲದ ಮಾತ್ರಕ್ಕೆ ವೇದವನ್ನು ಅಕರ್ತೃಕ-ವೆಂದು ತಿಳಿಯುವುದು ಸರಿಯೇ? ಒಂದು ಗ್ರಂಥವು ಇಂಥವನಿಂದ ರಚಿತವೆಂಬ

ಪ್ರಸಿದ್ಧಿ ಇಲ್ಲದ ಮಾತ್ರಕ್ಕೆ (ತಿಳಿಯದಿದ್ದ ಮಾತ್ರಕ್ಕೆ), ಅದನ್ನು ಅಪೌರುಷೇಯ-ವೆಂದು ಯಾರೂ ತಿಳಿಯುವುದಿಲ್ಲ. ಆದರೆ ಕರ್ತನಿದ್ದಾನೆ, ಯಾರೆಂಬುದು ಮಾತ್ರ ಗೊತ್ತಿಲ್ಲ, ಎಂದೇ ಗ್ರಹಿಸುತ್ತಾರೆ. ಗ್ರಂಥಕರ್ತನು ತನ್ನ ಹೆಸರನ್ನು ಕಾರಣಾಂತರಗಳಿಂದ ಉಲ್ಲೇಖಿಸಿಲ್ಲ ಅಥವಾ ಅದಿದ್ದ ಪುಟ ಭಾಗ ದೊರೆತಿಲ್ಲ-ಪುರಾತನ ಗ್ರಂಥವಾದ್ದರಿಂದ ಎಂದೇ ತಿಳಿಯುತ್ತಾರಲ್ಲದೇ, ಪುರುಷಕೃತವೇ ಅಲ್ಲವೆಂಬುದಾಗಿ ಅಲ್ಲ. ಇದರಂತೆಯೇ ವೇದಗಳೂ ಗೂಢ ಕರ್ತೃಕವಾದುದು ಏಕಾಗಿರಬಾರದು? ಈ ಪ್ರಕಾರದ ಶಂಕೆಗೆ ವೇದಗಳ ವಿಷಯದಲ್ಲಿ ಅವಕಾಶವಿಲ್ಲ. ಏಕೆಂದರೆ, ಗೂಢಕರ್ತೃಕ ಗ್ರಂಥಗಳಿಗೆ, ವೇದಗಳಂತೆ ಅಧ್ಯಯನ ಪರಂಪರೆಯಿಲ್ಲ. ಯಾರೊಬ್ಬನು ರಚಿಸಿ, ವೇದವೆಂದು ಕರೆದ ಮಾತ್ರಕ್ಕೆ, ಆ ವಾಕ್ಯವು ವೇದತ್ವವನ್ನು ಹೊಂದುವುದಿಲ್ಲ. ಅಧ್ಯಯನ ಪರಂಪರೆಯಿಲ್ಲದಿದ್ದರೆ ವೇದವಲ್ಲೆಂದು ನಿರ್ಧರಿಸಬಹುದು. ಒಬ್ಬ ವಿದ್ಯಾರ್ಥಿಯು ಒಂದು ಗ್ರಂಥವನ್ನು ತನ್ನ ಗುರುಗಳಲ್ಲಿ ಓದಿ ತಿಳಿದನು. ಆ ಗುರುವು ತನ್ನ ಗುರುಗಳಿಂದ ತಿಳಿದನು; ಅವರು ತಮ್ಮ ಗುರುಗಳಲ್ಲಿ ಅಧ್ಯಯನ ಮಾಡಿದರು. ಹೀಗೆ ಹಿಂದೆಹಿಂದಕ್ಕೆ ಹೋದರೆ, ಆ ಗುರುಪರಂಪರೆಗೆ ನಿಲುಗಡೆಯಾದರೆ (ವಿಚ್ಛಿತ್ತಿ ಬಂದರೆ), ಆಗ ಆ ಗ್ರಂಥಕ್ಕೆ ಅವಿಚ್ಛಿನ್ನ ಪರಂಪರೆಯಿಲ್ಲವೆಂದು ಹೇಳಲಾಗುತ್ತದೆ. ರಘುವಂಶ ಮೊದಲಾದ ಕಾವ್ಯ- ಗ್ರಂಥಗಳಿಗೆ ಕಾಲಿದಾಸಾದಿ ಕವಿಗಳವರೆಗೆ ಪರಂಪರೆಯು ದೊರೆತು, ಅಲ್ಲಿಗೆ ವಿಚ್ಛೇದ ಉಂಟಾಗುತ್ತದೆ. ಕಾಲಿದಾಸನು ಅದನ್ನು ಯಾರಿಂದಲೂ ಅಧ್ಯಯನ ಮಾಡಲಿಲ್ಲವಾದ್ದರಿಂದ ಪರಂಪರೆಯು ಅಲ್ಲಿಗೆ ನಿಂತಿತು. ಆದ್ದರಿಂದ ಅವುಗಳಿಗೆ ವೇದತ್ವವಿಲ್ಲ. ವೇದಗಳಾದರೋ, ಏಕಪ್ರಕಾರವಾದ ವರ್ಣ-ಪದ-ವಾಕ್ಯಗಳಿಂದಲೂ ಉದಾತ್ತಾದಿ ಸ್ವರ-ಗಳಿಂದಲೂ ಯುಕ್ತವಾಗಿಯೇ ಅಧ್ಯಯನ ಪಠನಾದಿಗಳನ್ನು ಮಾಡುವ ಸರ್ವರಿಂದಲೂ ಶ್ರವಣ ಮಾಡಲ್ಪಡುತ್ತಲೇ ಬಂದಿವೆ. ಈ ಕಾರಣದಿಂದಲೇ ಶ್ರುತಿಗಳೆಂಬ ನಾಮದಿಂದ ಪ್ರಸಿದ್ಧವಾಗಿವೆ. (ಶ್ರುತತ್ವ) ಕೇಳಲ್ಪಡುವಿಕೆ-ಯೆಂಬುದು ಎಲ್ಲ ಶಬ್ದಗಳ ಸಾಮಾನ್ಯ ಧರ್ಮ. ಆದರೆ, ಜಲಾಹಾರಿ-ವಾಯ್ವಾಹಾರಿ ಎಂಬಲ್ಲಿ, ಜಲಮಾತ್ರ ವಾಯು ಮಾತ್ರವೇ ಆಹಾರವಾಗಿ ಉಳ್ಳವನೆಂಬ ವಿಶೇಷಾರ್ಥದಲ್ಲಿ ಜಲ-ವಾಯು ಶಬ್ದಗಳ ಪ್ರಯೋಗವಿರುವಂತೆ

ವೇದಗಳು ಶ್ರವಣಮಾತ್ರದಿಂದ ಜಗತ್ತಿನಲ್ಲಿ ಪ್ರಾಪ್ತವಾದವುಗಳೆಂಬ ವಿಶೇಷ ದ್ಯೋತನಾರ್ಥದಲ್ಲಿ ಶ್ರುತಿಗಳೆಂದು ಕರೆಯಲಾಗುತ್ತವೆ. ಆದ್ದರಿಂದ ಸಹ ಪರಂಪರೆಯವಿಚ್ಛಿತ್ತಿಗೆ ಅವಕಾಶವಿಲ್ಲ. ವೇದಗಳಲ್ಲಿ, ಕೆಲವು ಋಷಿಗಳಿಂದ ಪ್ರವೃತ್ತವಾದ ವಾಕ್ಯಗಳೆಂದು ಹೇಳುವ ಭಾಗಗಳಿಗೆ ಪರಂಪರೆಯ ವಿಚ್ಛತ್ತಿ ಬರುವುದೆಂಬ ಸಂಶಯವು ಈ ಮುಂದೆ ವಿಸ್ತಾರದಿಂದ ವಿವೇಚಿಸಲ್ಪಟ್ಟು, ಪರಿಹೃತವಾಗುತ್ತದೆ.

ಪ್ರಕೃತ, ವರ್ಣಗಳು ನಿತ್ಯ ಮತ್ತು ಸರ್ವತ್ರ ವ್ಯಾಪ್ತಗಳೆಂದು ಸಿದ್ಧವಾದರೂ, ಪದಗಳಲ್ಲಿರುವ ವರ್ಣಕ್ರಮಗಳೂ, ವಾಕ್ಯಗಳಲ್ಲಿರುವ ಪದಕ್ರಮಗಳೂ ನಿತ್ಯವೆಂದು ಸಿದ್ಧವಾಗದ ವಿನಹ, ವೇದಾಪೌರುಷೇಯತ್ವವು ಸಿದ್ಧವಾಗುವುದಿಲ್ಲ. ಮತ್ತು ವರ್ಣ, ಪದ, ವಾಕ್ಯಗಳಲ್ಲಿ ಕ್ರಮವಿಲ್ಲದಿದ್ದರೆ (ಯಥಾರ್ಥಜ್ಞಾನ ಜನಕತ್ವರೂಪ) ಪ್ರಾಮಾಣ್ಯವೇ ಇಲ್ಲದಂತಾಗುತ್ತದೆ. ಅಲ್ಲದೇ ಸರ್ವ ವರ್ಣಗಳು ಸರ್ವತ್ರ ಇರುವುದರಿಂದ ವರ್ಣಗಳ ಕ್ರಮವು, ಉಚ್ಚಾರದಿಂದ ವ್ಯಕ್ತೀಕರಿಸುವ ಪುರುಷನಿಂದ, ಕೃತವೆಂದೇ ಹೇಳಬೇಕಾಗುತ್ತದೆ. ಇದೂ ಅಲ್ಲದೇ ವ್ಯಾಖ್ಯಾನವಿಲ್ಲದೇ ಯಾರಿಗೂ ವೇದಗಳಿಂದ ಅರ್ಥ ಜ್ಞಾನವಾಗುವುದಿಲ್ಲ. ಅರ್ಥಜ್ಞಾನವಿಲ್ಲದೇ ವೇದೋಕ್ತ ಅನುಷ್ಠಾನಗಳು ಅಸಂಭವ. ಯಾವನೊಬ್ಬ ಪುರುಷನು ವ್ಯಾಖ್ಯಾನಮಾಡಿದರೆ ವಿಶ್ವಾಸವೂ ಹುಟ್ಟಲಾರದು. ಅಂಥ ವ್ಯಾಖ್ಯಾತನಿಗೆ ಸರ್ವಜ್ಞತ್ವವನು ಸಾಧಿಸುವುದೆಂತು? ಅನಾದಿ ಪರಂಪರೆಯುಳ್ಳ ವ್ಯಾಖ್ಯಾನವೇ ಗ್ರಾಹ್ಯವಾಗುವುದು. ವ್ಯಾಖ್ಯಾತೃ ಪುರುಷನಿರಬೇಕು- ಆತನಾದರೂ ಪರಂಪರಾನುಸಾರವಾಗಿಯೇ ಉಪದೇಶಿಸಬೇಕು. ಇತ್ಯಾದಿ ವಿವಿಧ ವಾದಗಳು ಅಜ್ಞಾನಜನ್ಯ ಕುತರ್ಕಗಳೆಂದೇ ತಿಳಿಯಬೇಕಾಗುತ್ತದೆ. ಇವು, ವೇದಗಳ ಅಪೌರುಷೇಯತ್ವವನ್ನಾಗಲಿ ಪ್ರಾಮಾಣ್ಯವನ್ನಾಗಲಿ, ಬಾಧಿಸಲಾರವು; ಏಕೆಂದರೆ, ವರ್ಣ ಪದಕ್ರಮಗಳು ಉಚ್ಚಾರದಿಂದ ವ್ಯಕ್ತವಾಗುವುದೆಂಬುದು ಸತ್ಯ. ಆದರೆ, ಪ್ರತಿನಿತ್ಯವೂ ಉಪಾಧ್ಯಾಯನ ಬುದ್ಧಿಯನ್ನು ನಿಮಿತ್ತೀಕರಿಸಿ ವರ್ಣಗಳಲ್ಲಿ, ಪದವಾಕ್ಯಗಳಲ್ಲಿ ಕ್ರಮವು ಹೇಗೆ ಹುಟ್ಟುತ್ತದೆಯೋ ಹಾಗೆ ಮಹೋಪಾಧ್ಯಾಯನಾದ ಈಶ್ವರನ

ಬುದ್ಧಿನಿಮಿತ್ತದಿಂದ ವೇದಗತ ಕ್ರಮಗಳು ಹುಟ್ಟುತ್ತವೆ.[30] ಉಪಾಧ್ಯಾಯನ ಬುದ್ಧಿಗೆ ಉಪರಮವುಂಟಾದೊಡನೆಯೇ ಕ್ರಮೋತ್ಪತ್ತಿಯು ನಷ್ಟವಾಗುತ್ತದೆ. ಮತ್ತೊಂದಾವರ್ತಿ ಅದನ್ನೇ ಹೇಳುವಾಗ ಬೇರೆ ಕ್ರಮದಿಂದಲೇ ಹೇಳುತ್ತಾನೆ. ಈಶ್ವರನ ಬುದ್ಧಿಗೆ ಉಪರಮವೇ ಇಲ್ಲ-ಶಾಶ್ವತವಾದುದು. ಮಹೋಪಾಧ್ಯಾಯ-ನಾದ ಈಶ್ವರನು ಸೃಷ್ಟಿಯ ಆರಂಭದಲ್ಲಿ ಚತುರ್ಮುಖ ಬ್ರಹ್ಮನಿಗೆ ವೇದಗಳನ್ನು ಅರ್ಥಸಹಿತವಾಗಿ ಹೇಗೆ ಯಾವ ಕ್ರಮದಿಂದ ಉಪದೇಶಿಸುವನೋ, ಆ ಕ್ರಮಕ್ಕೆ-ಅರ್ಥವಿವರಣೆಗೆ ನಾಶವಿಲ್ಲ. ಶಾಶ್ವತವಾಗಿಯೇ ಇದ್ದು ಪರಂಪರೆ-ಯಿಂದ ಋಷ್ಯಾದಿಗಳ ದ್ವಾರಾ ಲೋಕದಲ್ಲಿ ಪ್ರಸಾರಗೊಳ್ಳುತ್ತದೆ. ಈ ವಿಶೇಷ ದೃಷ್ಟಿಯಿಂದ ವೇದಗತ ವರ್ಣಪದಗಳ ಕ್ರಮವು ಹುಟ್ಟುತ್ತದೆಂದು ಹೇಳಬಹುದು. ಹೀಗೆ ತಿಳಿಯುವುದರಿಂದ ಯಾವ ಬಾಧಕವೂ ಇಲ್ಲ. ವೇದಗತ ಕ್ರಮವು, ವೇದಗಳಿಂದ ಭಿನ್ನವೂ ಅಭಿನ್ನವೂ ಆದ ವೇದಧರ್ಮ (ಲಕ್ಷಣ) ವೆಂದು ತಿಳಿದರೆ, ಕ್ರಮವು ವೇದಗಳ ಅತ್ಯಂತ ಅಭಿನ್ನ ಧರ್ಮವೆಂದು ಹೇಳುವುದರಿಂದ ವರ್ಣಗಳೇ ಪರಸ್ಪರ ಅಭಿನ್ನಗಳೆಂದು ಮುಂತಾಗಿ ಪ್ರಾಪ್ತವಾಗಬಹುದಾದ ಶಂಕೆಯೂ, ಪರಿಹೃತವಾಗುತ್ತದೆ.

ಹಿಂದಿನ ಕಲ್ಪಾರಂಭದಲ್ಲಿ ಈಶ್ವರನು ಹೇಗೆ (ಯಾವ ಕ್ರಮವುಳ್ಳ ವರ್ಣ-ಪದ ಸಮುದಾಯ ರೂಪದ) ವೇದಗಳನ್ನು ಬ್ರಹ್ಮನಿಗೆ ಉಪದೇಶಿಸಿದ್ದನೋ, ಹಾಗೆಯೇ (ಅದೇ ಪ್ರಕಾರದಿಂದ) ಈ ಕಲ್ಪದ ಬ್ರಹ್ಮನಿಗೂ ಉಪದೇಶಿಸಿದನೆಂದೇ ತಿಳಿಯಬೇಕು. ವೇದಗಳು ಹಿಂದಿನ ಕಲ್ಪದಲ್ಲಿದ್ದಂತೆಯೇ ಈಗಲೂ ಇವೆ-ಮುಂದೆ ಅನಂತ ಕಲ್ಪಗಳಲ್ಲಿ ಹಾಗೆಯೇ ಇರುತ್ತವೆ. ಅನಂತಕಲ್ಪಗಳಲ್ಲಿ ಈಶ್ವರನು ಒಬ್ಬನೇ.[31] ಪ್ರಳಯಕಾಲದಲ್ಲಿ ಈಶ್ವರನ ಬುದ್ಧಿಯಲ್ಲಿದ್ದು ಸೃಷ್ಟಿಕಾಲ ಪ್ರಾಪ್ತವಾಗಲು, ಚತುರ್ಮುಖನನ್ನು ನಿಮಿತ್ತ ಮಾಡಿಕೊಂಡು, ಸೃಷ್ಟಿಯಲ್ಲಿ ಸ್ವಸ್ವಗತಿಗಳ ಸಾಧನೆಗಾಗಿ ಬರಲಿರುವ ಸಕಲ ಜೀವರ ಪ್ರಯೋಜನಕ್ಕಾಗಿ, ವೇದಗಳು ಪ್ರಕಟಿಸಲ್ಪಡುತ್ತವೆ. ಪ್ರತಿಕಲ್ಪಕ್ಕೆ

---

30. ''ಈಶ್ವರೋಽಪಿ ಅಸ್ಮನ್ಮತೇ ಮಹೋಪಾಧ್ಯಾಯ ಏವ'' — (ತರ್ಕತಾಂಡವ)
31. ತಾರ್ಕಿಕರ ಈಶ್ವರನು ಸರ್ವೇಶ್ವರನಲ್ಲ. ವೇದಕರ್ತನು ಈಶ್ವರನೆಂದು ತಾರ್ಕಿಕರು ಹೇಳುವರು. ಅದರ ಅಯುಕ್ತತೆಯನ್ನು ಈ ಹಿಂದೆ ಪ್ರದರ್ಶಿಸಲಾಗಿದೆ.

ಒಬ್ಬೊಬ್ಬ (ಪ್ರತ್ಯೇಕ) ಈಶ್ವರನನ್ನು ಒಪ್ಪುವುದಂತೂ ಸಾಧ್ಯವೇ ಇಲ್ಲ. ಹಿಂದಿನ ಕಲ್ಪದಲ್ಲಿ ಜಗತ್ತಿನ ಸೃಷ್ಟ್ಯಾದಿ ಕಾರ್ಯಗಳನ್ನು ನಿರ್ವಹಿಸಿದ ಈಶ್ವರನು ಎಲ್ಲಿ ಹೋದನು, ಈ ಕಲ್ಪದಲ್ಲಿ ಆ ಕಾರ್ಯಗಳನ್ನು ತ್ಯಜಿಸಲು ಕಾರಣವೇನು ಇತ್ಯಾದಿ ಪ್ರಶ್ನೆಗಳನ್ನು ಉತ್ತರಿಸಲಾಗುವುದಿಲ್ಲ. ಸರ್ವಶಕ್ತಿ-ಸರ್ವಜ್ಞಾನ-ಸರ್ವಸ್ವಾತಂತ್ರ್ಯಗಳಿಲ್ಲದ ಚೇತನನು ಸರ್ವೇಶ್ವರನಾಗುವುದು ಹೇಗೆ? ಸೃಷ್ಟ್ಯಾದಿಗಳಿಂದ ಶ್ರಮಗೊಂಡು ನಿವೃತ್ತನಾಗುವವನು ಸರ್ವಶಕ್ತ-ನೆನ್ನಬಹುದೇ-ಸರ್ವೇಶ್ವರನೆನ್ನಬಹುದೇ! ಸರ್ವೇಶ್ವರನು ಮತ್ತೊಬ್ಬನಿದ್ದರೆ ಮೊದಲಿನ ಸರ್ವೇಶ್ವರನ ಸರ್ವೇಶ್ವರತ್ವಕ್ಕೆ ಹಾನಿಯಲ್ಲವೇ? ಸರ್ವೇಶ್ವರನಲ್ಲ-ದವನು ಅಪಾರ ವಿಶ್ವದ ಸೃಷ್ಟ್ಯಾದಿಗಳನ್ನು ನಿರ್ವಹಿಸಬಲ್ಲನೇ? ಒಂದೇ ಕಾಲದಲ್ಲಿ ಸರ್ವೇಶ್ವರರಾಗಬಲ್ಲವರು ಅನೇಕರಿರಲು ಸಾಧ್ಯವೇ? ಸಾಧ್ಯವೇ ಇಲ್ಲವಾದ್ದರಿಂದ, ಸರ್ವದೇಶ ಕಾಲಗಳಲ್ಲಿ ಈಶ್ವರನು ಅಭಿನ್ನನಾದ ಒಬ್ಬನೇ ಸರಿ. ಆತನೇ ಸರ್ವೇಶ್ವರನು-ಪರಮಾತ್ಮ, ಭಗವಂತ, ವಿಷ್ಣು, ನಾರಾಯಣ ಇತ್ಯಾದಿ ನಾಮಗಳಿಂದ ಹೇಳಲ್ಪಡುವವನೆಂಬುದನ್ನು ಈ ಪ್ರಕಾರದ ವಿವೇಚನೆ-ಯಿಂದ ಸುಲಭವಾಗಿ ಗ್ರಹಿಸಬಹುದು. ಹೀಗಿರಲು ಈಶ್ವರನ ಬುದ್ಧಿಯಲ್ಲಿ ಅಚ್ಚಳಿಯದೇ ಎಲ್ಲ ಕಾಲದಲ್ಲಿ ಸ್ಥಿತವಾದ ವೇದವನ್ನು, ಈಶ್ವರನು ಮರೆಯಬಹುದೇ! ಪ್ರತಿಕಲ್ಪದಲ್ಲಿ ಹೊಸದಾಗಿ ವೇದಗಳನ್ನು ರಚಿಸುವ ಕಾರಣವಿಲ್ಲ. ಆದ್ದರಿಂದ ವೇದಗಳ ಉತ್ಪತ್ತಿಯೆಂದರೆ ಅನಾದಿ ನಿತ್ಯವಾದ ವೇದಗಳ ಉಪದೇಶವಲ್ಲದೇ ಬೇರೇನೂ ಅಲ್ಲ. ಎಲ್ಲ ಕಲ್ಪಗಳ ಪ್ರವಾಹರೂಪ ಕಾಲದಲ್ಲಿ ಏಕಪ್ರಕಾರವಾಗಿ ವಿರಾಜಿಸುವ ಅಪೌರುಷೇಯ ಅಮರವಾಣಿಯೇ ವೇದವೆಂದು ಅಂಗೀಕರಿಸುವುದರಲ್ಲಿ ಯಾವ ಯುಕ್ತಿವಿರೋಧವೂ ಇಲ್ಲ.

ವೇದಗಳಲ್ಲಿಯೇ ಅಪೌರುಷೇಯತ್ವವನ್ನು ವಿರೋಧಿಸುವಂತೆ ತೋರುವ ವಾಕ್ಯಗಳೂ, ಸಂದರ್ಭ ಸನ್ನಿವೇಶಗಳೂ ಕಂಡುಬರುತ್ತವೆ. ಈ ಆಂತರಿಕ ವಿರೋಧಗಳ ಪರಿಹಾರವೂ ಆಗಬೇಕಾದುದು ಅವಶ್ಯಕ.

೧. ತನ್ನಾಮವತು, ತದ್ವಕ್ತಾರಮವತು ಇತ್ಯಾದಿ ವೇದವಾಕ್ಯಗಳು ಪುರುಷಾಭಿಪ್ರಾಯಗಳನ್ನೊಳಗೊಂಡ ಪ್ರಾರ್ಥನೆಗಳಂತೆ ತೋರುತ್ತವೆ. ಆದರೆ,

ಸಂಕಲ್ಪ-ಪ್ರಾರ್ಥನೆ ಇತ್ಯಾದಿ ಸೂಚಕಗಳಾದ ಇಂಥ ವಾಕ್ಯಗಳು, ಯಾರೊಬ್ಬ ಪುರುಷನ ವಾಕ್ಯಗಳೆಂದು ತಿಳಿಯದೇ, ಅನಾದಿಯಿಂದ ವೇದಗಳಲ್ಲಿರುವ ಈ ವಾಕ್ಯಗಳನ್ನು ವೇದಾಧ್ಯಯನ ಕರ್ತೃಗಳು, ಉಪಯೋಗಿಸಿಕೊಂಡು ತಮ್ಮ ಅಭಿಪ್ರಾಯಗಳೊಂದಿಗೆ (ಸಂಕಲ್ಪ-ಪ್ರಾರ್ಥನೆಗಳಿಗಾಗಿ) ಪ್ರಯೋಗಿಸುತ್ತಾ-ರೆಂದು ತಿಳಿಯುವುದರಲ್ಲಿ ಯಾವ ಯುಕ್ತಿ ವಿರೋಧವೂ ಕಾಣುವುದಿಲ್ಲ.

೨. ಐತರೇಯ-ಅಥರ್ವಣ ಇತ್ಯಾದಿ ವೇದಶಾಖೆಗಳ ನಾಮಗಳೂ, ಷಟ್ಪ್ರಶ್ನ ಮೊದಲಾದ ಉಪನಿಷತ್ತುಗಳಲ್ಲಿ ಕಂಡುಬರುವ ಸಂವಾದ (ಪ್ರಶ್ನೋತ್ತರ) ಗಳಲ್ಲಿ ಪ್ರಸಕ್ತವಾಗುವ ಋಷಿನಾಮಗಳೂ, ಆಯಾ ನಾಮಗಳುಳ್ಳ ಋಷಿ-ಗಳಿಂದ ಪ್ರೋಕ್ತವಾದವುಗಳೆಂಬ ಸಂಶಯಕ್ಕೆ ಎಡೆಗೊಡುತ್ತವೆ. ಆದರೆ ಆ ನಾಮಗಳುಳ್ಳ ಋಷಿಗಳನ್ನು ವೇದಗಳೇ ಮಂತ್ರದ್ರಷ್ಟಗಳೆಂದು, ಹೇಳುವುದನ್ನು ಗಮನಿಸಿದರೆ ಈ ವಿಧ ಸಂಶಯಕ್ಕೆ ಅವಕಾಶವೇ ಇಲ್ಲವೆಂದು ತಿಳಿಯ ಬರುತ್ತದೆ. ದ್ರಷ್ಟಾ ಎಂದರೆ ಕಂಡವನೆಂದರ್ಥ. ಇದ್ದ ವಸ್ತುವಷ್ಟೆ ದೃಷ್ಟಿ ಗೋಚರವಾಗ-ಬಲ್ಲದು? ಒಂದು ವಸ್ತುವನ್ನು ಕಂಡ ಪುರುಷನನ್ನು ಅದರ ನಿರ್ಮಾಣಕರ್ತ-ನೆಂದು ತಿಳಿಯಲಾಗುವುದಿಲ್ಲ ಒಬ್ಬ ವಿಜ್ಞಾನಿಯು ಸೂಕ್ಷ್ಮತರ ಉಪಕರಣ-ಗಳಿಂದ ಅಂತರಿಕ್ಷದಲ್ಲಿ ಒಂದು ಹೊಸ ಗ್ರಹವನ್ನೋ, ನಕ್ಷತ್ರವನ್ನೋ, ನಕ್ಷತ್ರಗಳ ಸಮೂಹವನ್ನೋ ಕಂಡ ಮಾತ್ರದಿಂದ ಆತನು ಅದರ ಕರ್ತನೆನಿಸಲಾರನು. ನಿದ್ರೆಯಿಂದ ಎಚ್ಚತ್ತ ಮನುಷ್ಯನಿಗೆ ತಕ್ಷಣವೇ ಪದಾರ್ಥಗಳ ದರ್ಶನವಾಗುವಂತೆ, ಋಷಿಗಳಿಗೆ ವೇದಭಾಗಗಳು ಧ್ಯಾನ-ಕಾಲದಲ್ಲಿ ಏಕದಾ ಮನಸ್ಸಿನಲ್ಲಿ ಪ್ರತಿಭಾತವಾಗುತ್ತವೆ. ಆಗ ಅವರು ತಮ್ಮ ಜ್ಞಾನಗೋಚರಗಳಾದ ಆ ವೇದಭಾಗಗಳನ್ನು ಶಿಷ್ಯರಿಗೆ ಅಧ್ಯಯನ ಮಾಡಿಸಿ ಉಪದೇಶಿಸುತ್ತಾರೆ. ಆಗ ಆಯಾ ವೇದಭಾಗಗಳು (ವಾಕ್ಯಸಮೂಹಗಳು-ಮಂತ್ರಗಳು) ಆಯಾ ಋಷಿನಾಮಗಳಿಂದ ಪ್ರಸಿದ್ಧಿ ಪಡೆಯುತ್ತವೆ. ಪ್ರತಿ ಕಲ್ಪದಲ್ಲಿ ಅದೇ ಹೆಸರಿನ ಋಷಿಗಳೂ ಹುಟ್ಟಿ, ಆ ಮಂತ್ರಾದಿಗಳ ಪ್ರತ್ಯಕ್ಷವನ್ನು ಪಡೆಯುತ್ತಾರೆಂದೂ ಹೇಳಲಾಗುತ್ತದೆ. ಅನಾದ್ಯನಂತವಾದ ಸೃಷ್ಟಿಪ್ರವಾಹದಲ್ಲಿ ಇದೇನೂ ಅಸಂಭವವಲ್ಲ-ಯುಕ್ತಿ ವಿರೋಧವೂ ಇಲ್ಲ. ಈಶ್ವರಾನುಗ್ರಹದಿಂದ ಹೀಗೆ

ವೇದಗಳನ್ನು ಕಾಣುವ ಋಷಿಗಳು ಸಾಮಾನ್ಯರಲ್ಲ - ಮಹಾಜ್ಞಾನಿಗಳು-ಮೇಧಾವಿಗಳು-ತಪಸ್ವಿಗಳು-ಉಪದೇಶ ಪರಂಪರೆಯಿಂದ ಪ್ರಾಪ್ತವಾದ ಬಹು ವೇದಗಳನ್ನು ಅಧ್ಯಯನಾದಿಗಳಿಂದ ಸೇವಿಸಿದ ತತ್ವವೇತ್ತರು.[32] ಹೀಗೆ ಸ್ವಯಂ ಪ್ರತಿಭಾತವಾದ ವೇದಭಾಗಕ್ಕೆ, ಅಧ್ಯಾಪಕ ಪರಂಪರೆಯುಳ್ಳ ಪ್ರಸಿದ್ಧ ವೇದ-ವಾಕ್ಯಾನುಸಾರವಾಗಿಯೇ ಎಂದರೆ, ಪೂರ್ವದಲ್ಲಿದ್ದುದೇ ತನ್ನಿಂದ ದೃಷ್ಟ-ವಾಯಿತೆಂಬುದಾಗಿಯೇ ಜ್ಞಾನವಿಷಯವಾಗುವುದರಿಂದ, ಅವೇದತ್ವವು (ವೇದವಾಕ್ಯವಲ್ಲವೆಂಬುದು) ಕೂಡುವುದಿಲ್ಲ-ಈ ಕಾರಣದಿಂದ ಪರಂಪರೆಯ ವಿಚ್ಛೇದವೂ ಬರುವುದಿಲ್ಲ. ಗೂಢಕರ್ತೃಕ ಗ್ರಂಥ ವಿಷಯದಲ್ಲಿ ಪರಂಪರೆಯು ಒಬ್ಬ ವ್ಯಕ್ತಿಯ ಪರ್ಯಂತ ದೊರೆತು ಹಿಂದಿನ ಅಧ್ಯಾಪಕರ ವಿವರಗಳು ತಿಳಿಯದಿದ್ದಾಗ, ಅಲ್ಲಿಗೆ (ಆ ವ್ಯಕ್ತಿಯಲ್ಲಿ) ಪರಂಪರೆಗೆ ವಿಚ್ಛಿತ್ತಿಯನ್ನು ಒಪ್ಪದೇ, ಆತನಾದರೂ ಹಿಂದಿನ ಪರಂಪರೆಯುಳ್ಳದ್ದೆಂದೇ ಆ ಗ್ರಂಥವನ್ನು ಅಧ್ಯಯನ ಮಾಡಿದೆನೆಂದು ಹೇಳಿದರೆ, ಆ ಗ್ರಂಥವೂ ವೇದಸಮವಾದೀತೆ? ಆಗುವುದಿಲ್ಲ; ಏಕೆಂದರೆ, ಹಾಗೆ ಹೇಳುವ ವ್ಯಕ್ತಿಯಲ್ಲಿ ವೇದದ್ರಷ್ಟನಲ್ಲಿರುವ ಲಕ್ಷಣಗಳು-ಬಹುವೇದವಿತ್ತ್ವ - ಅಂತಃಕರಣ ಶುದ್ಧಿ ಇತ್ಯಾದಿ ಪೂರ್ವೋಕ್ತಗುಣ-ಗಳಿರುವುದಿಲ್ಲ ಮತ್ತು ಆ ಗ್ರಂಥಕ್ಕೆ ಪೂರ್ವಪರಂಪರೆ ಇರುತ್ತದೆಂದು ಧ್ಯಾನದಲ್ಲಿ ಪ್ರತಿಭಾತವಾಗಿರುವುದಿಲ್ಲ-ಆತನಲ್ಲಿ ವಂಚಕತ್ವಾದಿಗಳೂ ಇರಬಹುದು. ಸ್ವಯಂ ಕೆಲವು ವಾಕ್ಯಗಳನ್ನು ರಚಿಸಿ ವೇದವೆಂದು ಕಾರಣಾಂತರಗಳಿಂದ ಸಾಧಿಸಲೂ ಯತ್ನಿಸಬಹುದು. ಈ ಮುಂತಾದ ಕಾರಣಗಳಿಂದ ಗೂಢಕರ್ತೃಕ (ಪೌರುಷೇಯ) ಗ್ರಂಥವು ವೇದಸಮವಾಗಲಾರದು.

(೩) ಋಚಃಸ್ಸಾಮಾನಿಜಜ್ಞಿರೇ ಇತ್ಯಾದಿ ವೇದ ವಾಕ್ಯಗಳು, ಋಚಗಳು-ಸಾಮಗಳು (ಋಗ್ವೇದ-ಸಾಮವೇದ ವಾಕ್ಯಗಳು) ಹುಟ್ಟಿದವೆಂದು ಹೇಳುತ್ತವೆ. ಇದರಿಂದ ವೇದಗಳು ಅನಾದಿ ಮತ್ತು ಅಪೌರುಷೇಯಗಳೆಂಬ ವಾದಕ್ಕೆ ವಿರೋಧ ತೋರುತ್ತದೆ. ಆದರೆ ಜಜ್ಞಿರೇ ಎಂಬುದಕ್ಕೆ ಪ್ರಕಟವಾದುವೆಂಬ

32. ವಿಂಶಲ್ಲಕ್ಷಣತೋಽನೂನಸ್ತಪಸ್ವೀ ಬಹುವೇದವಿತ್ ।
ವೇದ ಇತ್ಯೇವ ಯಂ ಪತ್ಯೇತ್ಸ ವೇದೋ ಜ್ಞಾನದರ್ಶನಾತ್ ॥ (ಬ್ರಹ್ಮಾಂಡೇ)

ಅರ್ಥವನ್ನೂ ತಿಳಿಯಲವಕಾಶವಿದೆ ಮತ್ತು ಈ ಅರ್ಥವೇ ಸರಿ ಎಂಬುದನ್ನು ತಿಳಿಯಲು, ಸಹಾಯಕವಾಗುವ ಬೇರೆ ಅನೇಕ ವೇದ ವಾಕ್ಯಗಳೂ ದೊರೆಯುತ್ತವೆ. ತತ್ರ ನಿತ್ಯಂ ಮನೋ ಅನಾದಿತ್ವಾತ್‌ಪ್ರಾಣಾ ಏವ ಅನಾದಯಃ ಇತ್ಯಾದಿ ಶ್ರುತಿವಾಕ್ಯಗಳು ಮನಸ್ಸು ಮತ್ತು ಇಂದ್ರಿಯಗಳಿಗೆ ಅನಾದಿತ್ವವನ್ನು ಹೇಳಿಯೂ, ಸ ಇದಂ ಸರ್ವಮಸೃಜತ ಮನಃ ಸರ್ವೇಂದ್ರಿಯಾಣಿ ಚ ಎಂದು, ಅವುಗಳನ್ನು ಪರಬ್ರಹ್ಮನು ಸೃಷ್ಟಿ ಮಾಡಿದನೆಂದೂ ಶ್ರುತಿಯು ಹೇಳುತ್ತದೆ. ಸೂಕ್ಷ್ಮರೂಪದಿಂದ ಅವ್ಯಕ್ತವಾಗಿದ್ದವುಗಳು ಸ್ಥೂಲಭಾವದಿಂದ ವ್ಯಕ್ತವಾದ-ವೆಂದೇ ಸೃಷ್ಟಿಸಲ್ಪಟ್ಟವೆಂಬುದರ ಅರ್ಥ. ಹೀಗೆಯೇ ಋಗಾದಿ ವೇದಗಳು ಅನಾದಿ ನಿತ್ಯಗಳಾಗಿದ್ದು ಪ್ರಳಯಕಾಲದಲ್ಲಿ ಈಶ್ವರಬುದ್ಧಿಯಲ್ಲಿ ಅವ್ಯಕ್ತಸ್ಥಿತಿ-ಯಲ್ಲಿದ್ದು, ಸೃಷ್ಟಿಯ ಆರಂಭದಲ್ಲಿ, ಈಶ್ವರನಿಂದ ಪ್ರಕಟಿಸಲ್ಪಡುತ್ತವೆ-ವ್ಯಕ್ತವಾಗುತ್ತವೆ. ಇದೇ ವೇದಗಳ ಉತ್ಪತ್ತಿಯೆಂಬುದು. ಹೀಗೆ ತಿಳಿಯುವುದು ಯುಕ್ತಿಯುಕ್ತವೂ ಆಗುತ್ತದೆ.[33] ವೇದದ್ರಷ್ಟಗಳೆಂಬುವರು ವೇದಗಳ ಏಕದೇಶವನ್ನು (ಅತ್ಯಲ್ಪ ಭಾಗವನ್ನು) ಧ್ಯಾನದಲ್ಲಿ ಕಂಡು ತಿಳಿದರೆ, ಈಶ್ವರನಿಗೆ ಸರ್ವದಾ ಸರ್ವವೇದಗಳು ಜ್ಞಾನವಿಷಯಗಳೇ ಆಗಿರುತ್ತವೆ. ಈಶ್ವರನು ಸರ್ವತ್ರ ವ್ಯಾಪ್ತನು. ಅವನಿಂದ ಅಭಿನ್ನವಾದ ಅವನ ಜ್ಞಾನವೂ ಸರ್ವತ್ರ ವ್ಯಾಪ್ತ. ಆತನೇ ಸರ್ವವೇದಗಳ ಮಹಾದ್ರಷ್ಟನು.

ವೇದಗಳು ಸ್ವಯಂ ದೋಷರಹಿತ ಪ್ರಮಾಣಗಳೆಂದೂ ಅವುಗಳಲ್ಲಿ ಅಪ್ರಾಮಾಣ್ಯವುಂಟಾಗುವುದು (ಪ್ರಮಾಣಗಳಲ್ಲವೆಂಬ ಜ್ಞಾನವಾಗುವುದು) ಬುದ್ಧಿ ದೋಷಾದಿ ಅನ್ಯಕಾರಣಗಳಿಂದ (ಪರತಃ) ಎಂದೂ ಈ ಹಿಂದೆ ನಿರೂಪಿಸಲಾಗಿದೆಯಷ್ಟೆ. ವೇದಗಳಲ್ಲಿ ಪ್ರತ್ಯಕ್ಷಾದಿ ಅನ್ಯಪ್ರಮಾಣಗಳಿಗೆ ವಿರುದ್ಧವಾದ ಅರ್ಥಗಳನ್ನು ಪ್ರತಿಪಾದಿಸುವ ವಾಕ್ಯಗಳೂ ಕಂಡುಬರುತ್ತವೆ.

---

33. ವೇದ ಮುಖ್ಯಾಭಿಮಾನಿಯೂ, ನಿತ್ಯ ಅಪ್ರಾಕೃತದೇಹಿಯೂ ಆದ ಲಕ್ಷ್ಮೀದೇವಿಯನ್ನು ಬಿಟ್ಟು ಅಮುಖ್ಯ-ಅವಾಂತರಾಭಿಮಾನಿಗಳಾದ ವೇದಾಭಿಮಾನಿ ದೇವತೆಗಳು, ತೇಜಃ ಪ್ರಚುರ ಪ್ರಾಕೃತ ದೇಹ ಸಂಬಂಧದಿಂದ ಜನಿಸಿದ-ರೆಂಬರ್ಥವನ್ನೂ 'ಋಚಃ ಸಾಮಾನಿಜಜ್ಞಿರೆ' ಎಂಬ ವಾಕ್ಯಕ್ಕೆ ತಿಳಿಯಬಹುದೆಂದೂ ಹೇಳಲಾಗಿದೆ.

ಇವುಗಳಿಂದ ವೇದ ಪ್ರಾಮಾಣ್ಯವು ಸಂಶಯಗ್ರಸ್ತವಾಗುತ್ತದೆ. ಕೆಲವು ನಿದರ್ಶನಗಳಿಂದ ಈ ಸಂಶಯ ಪರಿಹಾರ ಮಾರ್ಗವನ್ನು ಈ ಮುಂದೆ ಸೂಚಿಸಲಾಗುತ್ತದೆ. ಆದ್ದರಿಂದ, ಅಪ್ರಾಮಾಣ್ಯ ಸಂಶಯವು ನಿರಾಧಾರ-ವಾದುದೆಂದೂ ಸ್ಪಷ್ಟವಾಗಿ ತಿಳಿಯಬಹುದು.

(೧) ಮೃದಬ್ರವೀತ್-ಆಪೋಽಬ್ರುವನ್ ಎಂದರೆ ಮಣ್ಣು ಮಾತ-ನಾಡಿತು-ಉದಕವು ಮಾತನಾಡಿತು ಇತ್ಯಾದಿ ಪ್ರತ್ಯಕ್ಷಕ್ಕೆ ವಿರುದ್ಧವಾದ ವಾಕ್ಯಗಳು ವೇದಗಳಲ್ಲಿವೆ. ಈ ಹಿಂದೆ ನಿರೂಪಿಸಲಾಗಿರುವ ನಾನಾ ಶಬ್ದ ವೃತ್ತಿಗಳನ್ನೂ, ವ್ಯಾಕರಣ, ನಿರುಕ್ತಿ ಮೊದಲಾದ ವೇದಾಂಗಗಳನ್ನೂ, ಉಪಕ್ರಮ ಉಪಸಂಹಾರಾದಿ ತಾತ್ಪರ್ಯ ಲಿಂಗಗಳನ್ನೂ ಉಪಯೋಗಿಸಿ- ಕೊಂಡು ಗೂಢವಾದ ಅರ್ಥಾಂತರಗಳನ್ನು ತಿಳಿಯುವುದರಿಂದ ಮೃತ್-ಆಪಃ ಇತ್ಯಾದಿ ಶಬ್ದಗಳು, ಆಯಾ ವಸ್ತುವಿನ ಅಭಿಮಾನಿ ದೇವತೆಗಳನ್ನೂ, ತನ್ನಾಮಕ ಭಗವದ್ರೂಪಗಳನ್ನೂ ನಿರೂಪಿಸುತ್ತವೆಂದು ಸಿದ್ಧವಾಗಿ, ಪ್ರತ್ಯಕ್ಷಾದಿಗಳಿಂದ ಉಂಟಾಗುವ ವಿರೋಧದ ಪರಿಹಾರವಾಗುತ್ತದೆ.

(೨) ಪುತ್ರಕಾಮೇಷ್ಟಿ ಎಂಬ ಯಾಗದಿಂದ ಪುತ್ರಸಂತಾನವಾಗುತ್ತದೆಂದು ವೇದವು ಘೋಷಿಸುತ್ತದೆ. ಆದರೆ ಆ ಯಾಗವನ್ನು ಮಾಡಿದರೂ ಮಕ್ಕಳಾಗದಿರುವುದು ಕಂಡಿದೆ. ಹೀಗೆಯೇ ಇತರ ಪ್ರತ್ಯಕ್ಷಗೋಚರವಾಗಲು ಅರ್ಹವಾದ ವೇದೋಕ್ತ ಫಲಗಳು ದೊರೆಯುವುದಿಲ್ಲವಾದ್ದರಿಂದ ವೇದಗಳು ಅಪ್ರಮಾಣವೆಂದು ಶಂಕಿಸಬಹುದು. ಈ ಶಂಕೆಗೆ ಕಾರಣವಾದ ವಾದವನ್ನು ಸೂಕ್ಷ್ಮರೀತಿಯಿಂದ ವಿಮರ್ಶಿಸುವುದು ಅವಶ್ಯಕ. ವೇದವು ಅಪ್ರಮಾಣ-ವಾದ್ದರಿಂದ ಪುತ್ರೋತ್ಪತ್ತಿಯಾಗಲಿಲ್ಲವೋ ಅಥವಾ ಯಾಗಕರ್ತನಲ್ಲಿರಬೇಕಾದ ಗುಣಾದಿಗಳ ನ್ಯೂನತೆಯಿಂದ ಉಕ್ತಫಲವು ದೊರೆಯಲಿಲ್ಲವೋ? ಅಧಿಕಾರಿ-ಗಳು ಶ್ರದ್ಧಾಭಕ್ತಿಯುತರಾಗಿ ಅಂಗವೈಕಲ್ಯವಿಲ್ಲದಂತೆ ವಿಧ್ಯುಕ್ತಕ್ರಮದಿಂದ ಯಾಗವನ್ನು ಸಾಂಗವಾಗಿ ಆಚರಿಸಿ ಪಡೆದಿರುವ ನಿದರ್ಶನಗಳೂ ಇವೆ. ವೇದೋಕ್ತ ಫಲಸಿದ್ಧಿಗೆ ವೇದಾಧಿಕಾರವು ಪ್ರಥಮತಃ ಅವಶ್ಯಕವೆಂದು ಹೇಳಲಾಗುತ್ತದೆ. ಅನಧಿಕಾರಿಗಳಿಗೆ ಫಲ ಸಿದ್ಧಿಯಾಗುವುದಿಲ್ಲ.

ಒಬ್ಬ ಶೂದ್ರ ರಾಜನು ವೇದೋಕ್ತ ಫಲಗಳು ಪ್ರತ್ಯಕ್ಷ ಸಿದ್ಧವಾಗುವುದಿಲ್ಲವಾದ್ದರಿಂದ ವೇದಗಳು ಅಪ್ರಮಾಣಗಳೆಂದು ಒಬ್ಬ ಮಹಾತ್ಮರನ್ನು ಆಕ್ಷೇಪಿಸಿದನಂತೆ. ಅವರು ಅನಧಿಕಾರಿಗಳಿಗೆ ಫಲ ಸಿದ್ಧಿಯಾಗುವುದಿಲ್ಲವೆಂದು ಹೇಳಿದಾಗ ಆ ರಾಜನು, ಜಗತ್ತಿನಲ್ಲಿರುವರೆಲ್ಲರೂ ಅನಧಿಕಾರಿಗಳೆಂದು ಹೇಳಿದಂತಾಗುವುದ-ರಿಂದ, ಅಧಿಕಾರಿಯನ್ನು ತೋರಿಸಿರೆಂದು ಸವಾಲು ಹಾಕಿದನಂತೆ. ಆಗ ಆ ಮಹಾತ್ಮರು ಒಂದು ಧಾನ್ಯದ ಬೀಜವನ್ನು ಅಂಗೈಲಿಟ್ಟುಕೊಂಡು, ಯಾ ಓಷಧಿ ...... ಎಂಬ ವೇದಮಂತ್ರವನ್ನು ಪಠಿಸಿ, ತತ್ಕಾಲದಲ್ಲಿ ಅದನ್ನು ಅಂಕುರಗೊಳಿಸಿ ಪುಷ್ಪ ಫಲಾದಿಗಳನ್ನೂ ಮಾಡಿ ತೋರಿಸಿದರಂತೆ.[34]

ವೇದೋಕ್ತ ಕರ್ಮಗಳ ಅನುಷ್ಠಾನದಲ್ಲಿರುವ ಲೋಪದೋಷಗಳಿಂದಲೂ, ಪ್ರಮಾದ ಮೊದಲಾದ ಕಾರಣಗಳಿಂದ ಸಂಭವಿಸುವ ಆಚರಣೆಗಳ ವ್ಯತ್ಯಾಸ-ದಿಂದಲೂ, ಫಲಾಭಾವವೂ ಫಲ ವೈಷಮ್ಯಗಳೂ ಕಂಡುಬರಬಹುದೆಂದು ಭಾವಿಸುವುದು ಸಹ ಯುಕ್ತಿ ವಿರೋಧವಲ್ಲ. ಅಜಾಗರೂಕತೆ, ಲೋಪ ದೋಷ ಮೊದಲಾದ ಕಾರಣಗಳಿಂದ ಫಲಾಭಾವ ವೈಷಮ್ಯಗಳು ಕೃಷಿ ಮೊದಲಾದ ಲೌಕಿಕ ಪುರುಷ ಯತ್ನಗಳಲ್ಲಿ ಸಹ ಕಂಡುಬರುತ್ತದೆಯಷ್ಟೆ. ನಿರೀಕ್ಷಿಸಿದ ಫಲಗಳು ದೊರೆಯದ ಮಾತ್ರಕ್ಕೆ ಕೃಷ್ಯಾದಿ ಯತ್ನಗಳನ್ನೇ ಪರಿತ್ಯಾಗ ಮಾಡಬಹುದೆ? ಪ್ರಚಲಿತ ವಿವಿಧ ಮತಗಳ ದರ್ಶನಾಚಾರ್ಯರು ಕಲಿಯುಗದವರು. ಕಲಿಯುಗದಲ್ಲಿ ಧರ್ಮವು ಒಂದು ಪಾದ (೧/೪ ಭಾಗ) ಮಾತ್ರವೆಂದು ಹೇಳಲಾಗುತ್ತದೆ. ಧರ್ಮ ಶ್ರದ್ಧೆಯುಳ್ಳ ವೃದ್ಧರ ಅನುಭವದ ಮಾತುಗಳೂ

34. ಶ್ರೀಮದಾನಂದತೀರ್ಥ ಭಗವತ್ಪಾದರ ಈ ಮಹಿಮೆಯು ಶ್ರೀ ಸುಮಧ್ವವಿಜಯದಲ್ಲಿ ವರ್ಣಿತವಾಗಿದೆ. (16ನೇ ಸರ್ಗ)

ಈಶ್ವರ, ಧರ್ಮ, ಅಧರ್ಮ ಮೊದಲಾದ ಅತೀಂದ್ರಿಯ ವಸ್ತುವಿಷಯಕವಾದ ಬಹು ಸೂಕ್ಷ್ಮ ರಹಸ್ಯಗಳನ್ನು ವಿವಿಧಾರ್ಥಗಳುಳ್ಳ ಶಬ್ದವಿಶೇಷಗಳಿಂದ ಪ್ರತಿಪಾದಿಸುವ ವೇದಗಳ ಅಧ್ಯಯನಾದಿಗಳು ಜನಸಾಮಾನ್ಯರಿಂದ ಆಗದ ಕಾರ್ಯ. ಪರಿಶುದ್ಧ ಜನ್ಮ, ಆಚಾರ, ತ್ರಿಕರಣಶುದ್ಧಿ, ವೈದಿಕ ಸಂಸ್ಕಾರಗಳು ಇತ್ಯಾದಿ ಅರ್ಹತೆಗಳನ್ನು ವೇದಗಳೇ ನಿರೂಪಿಸುತ್ತವೆ. ಲೌಕಿಕ ಕಾರ್ಯಗಳಲ್ಲಿ ಸಹ ಯೋಗ್ಯತೆ ಇಲ್ಲದವರನ್ನು ನಿಯೋಜಿಸಕೂಡದೆಂಬ ನಿಯಮವಿದೆ. ವಿದ್ಯುತ್ಕಾರ್ಖಾನೆಯಲ್ಲಿ ಕೆಲಸ ಮಾಡಲು ವಿಶಿಷ್ಟ ಯೋಗ್ಯತೆ ಬೇಕು. ಇಲ್ಲವಾದರೆ ಪ್ರಾಣಾಪಾಯಾದಿ ನಾನಾ ವಿಪತ್ತುಗಳೂ ಸಂಭವಿಸುತ್ತವೆ.

ಹೀಗೆಯೇ ಇವೆ. ಧರ್ಮವು ೪ ಪಾದಗಳಿಂದ ಪೂರ್ಣವಾಗಿ ನೆಲೆಸಿತ್ತೆಂಬ ಕೃತಯುಗದ ಮಹಾ ಪುರುಷರು, ಋಷಿಗಳು ಮತ್ತು ಏಕಚಕ್ರಾಧಿಪತಿಗಳಾದ ಸಾರ್ವಭೌಮರು ವೇದೋಕ್ತ ಯಜ್ಞಾದಿಗಳನ್ನು ಆಚರಿಸಿ ಫಲ ಸಿದ್ಧಿಯನ್ನೂ ಪಡೆದಿರುವಾಗ, ವೇದಗಳು ಅಪ್ರಮಾಣವೆಂದು ಶಂಕಿಸುವ ಕಲಿಯುಗದ ದರ್ಶನಾಚಾರ್ಯರ ಮಾತುಗಳೋ ಅಥವಾ ವೇದಗಳೋ ವಿವೇಕಿಗಳಿಗೆ ಪ್ರಮಾಣವಾಗಬಲ್ಲವೇ? ವೇದಗಳು ಪ್ರಮಾಣಗಳೇ ಎಂದು ಯುಕ್ತಿಯಿಂದಲೂ ನಿರ್ಧರಿಸಬಹುದು.[35]

(೩) ವೇದಗಳಲ್ಲಿ ಸ್ವವಾಕ್ಯ ವಿರೋಧಗಳು ಬಹುವಾಗಿರುವುದರಿಂದ ಪ್ರಮಾಣಗಳಲ್ಲವೆಂಬುದೊಂದು ವಾದ. ಉದಿತೇಜುಹೋತಿ ಅನುದಿತೇಜು-ಹೋತಿ ಎಂಬಲ್ಲಿ, ಸೂರ್ಯೋದಯವಾಗುತ್ತಿರಲು ಹೋಮ ಮಾಡಬೇಕು-ಸೂರ್ಯನು ಉದಯಿಸುವಾಗ ಹೋಮಿಸಬೇಕು, ಎಂಬ ವಿರುದ್ಧಾರ್ಥಗಳು ತೋರುತ್ತವೆ. ಇದರಂತೆ ಅನ್ಯ ಪರಸ್ಪರ ವಿರುದ್ಧ ವಾಕ್ಯಗಳೂ ಕಂಡು ಬರುತ್ತವೆ. ಈ ದೋಷಾಪಾದನೆಯನ್ನು ಸ್ವಲ್ಪ ವಿಮರ್ಶಿಸುವಾ. ಈ ಎರಡು ವಾಕ್ಯಗಳಲ್ಲಿ ಯಾವುದರಿಂದ ಯಾವುದಕ್ಕೆ ಅಪ್ರಾಮಾಣ್ಯ-ಒಂದು ಪ್ರಮಾಣವಾಗಿದ್ದರೆ ಅದರಿಂದ ಮತ್ತೊಂದಕ್ಕೆ ಅಪ್ರಾಮಾಣ್ಯವಷ್ಟೆ; ಯಾವುದೊಂದನ್ನು ಪ್ರಮಾಣ-ವೆಂದು ಇಟ್ಟುಕೊಳ್ಳುತ್ತೇವೆಯೋ ಅದೇ ಏಕೆ ಅಪ್ರಮಾಣವಾಗಿರಬಾರದು? ಆದ್ದರಿಂದ ಎರಡಕ್ಕೂ ಅಪ್ರಾಮಾಣ್ಯವು ಸಂದಿಗ್ಧವಾಯಿತು. ವ್ಯಾಹತಿಯೇ (ವಿರೋಧವೆಂಬ ದೋಷವೇ) ಸಿದ್ಧವಾಗಲಿಲ್ಲ. ವಸ್ತುತಃ ಇವೆರಡರಲ್ಲಿ ವಿರೋಧವು ಇಲ್ಲ. ಅಧಿಕಾರಿ ಭೇದವನ್ನಾಗಲಿ, ಉದಯಾನಂತರವೂ ಆ ಮೊದಲೂ ಹೋಮಿಸಬಹುದೆಂಬ ಅನುಮತಿಯನ್ನಾಗಲಿ ತಿಳಿಯಲವಕಾಶ-ವಿದೆ. ಹೀಗೆ ವೇದಗಳಲ್ಲಿ ಕಂಡುಬರುವ ವಿರೋಧಗಳು ವ್ಯಾಹತಿ ದೋಷ-ಗಳಲ್ಲವೆಂಬುದನ್ನು ಮನಗಾಣಬಹುದು.

35. ಪುರಾಣಾದಿ ಪ್ರಾಚೀನ ತ್ರಿಕಾಲಜ್ಞರಿಂದ ರಚಿತವಾದ ಗ್ರಂಥಗಳಲ್ಲಿರುವ ಚಾರಿತ್ರಿಕ ಅಂಶಗಳನ್ನೂ ಕಟ್ಟು ಕಥೆಗಳೆಂದು ತಿರಸ್ಕರಿಸಿ, ಆರ್ವಾಚೀನ ಚರಿತ್ರಕಾರರಿಂದ ರಚಿಸಲ್ಪಟ್ಟು ಈಗ ಉಪಲಬ್ಧವಿರುವ ಕೇವಲ 2-3 ಸಾವಿರ ವರ್ಷಗಳ ಮಾನವ ಚರಿತ್ರೆಯನ್ನಷ್ಟೇ (ಅವೂ ಬಹುಭಾಗ ಊಹಾತ್ಮಕವೇ) ಒಪ್ಪುವವರಿಗೆ ಈ ಯುಕ್ತಿಯು ರುಚಿಸಲಾರದು.

(೪) ಪುನರುಕ್ತಿ ಎಂಬುದೂ ಒಂದು ದೋಷ. ವೇದಗಳಲ್ಲಿ ಅನೇಕ ಪುನರುಕ್ತಿಗಳು ಕಂಡುಬರುತ್ತವೆ-ದೋಷಯುಕ್ತವಾದ್ದರಿಂದ ವೇದಗಳು ಪ್ರಮಾಣಗಳಲ್ಲ-ನಿರ್ದುಷ್ಟ ಶಬ್ದರಾಶಿ ಎಂಬುದು ಅರ್ಥವಿಲ್ಲದ ಮಾತು. ಹೀಗೆಂಬ ವಾದವೂ (ಶಂಕೆಯೂ) ಯುಕ್ತವಲ್ಲ. ಒಂದೇ ಅರ್ಥವನ್ನು ಹೇಳುವ ವಾಕ್ಯಗಳು ಬೇರೆ ಬೇರೆ ಸಂದರ್ಭಗಳಲ್ಲಿ, ಅಧಿಕಾರ್ಥವನ್ನು ತಿಳಿಯಲು ಪ್ರವೃತ್ತವಾಗಿರುತ್ತವೆ. ಇದರಲ್ಲಿ ದೋಷವಿಲ್ಲ. ಪುನರುಕ್ತಿಯು ಸರ್ವತ್ರ ದೋಷವಲ್ಲ-ದಾರ್ಢ್ಯಾರ್ಥವಾಗಿ ಸಹ ಪುನಃ ಒತ್ತಿ ಹೇಳುವುದೂ ದೋಷವೆಂದು ಭಾವಿಸಲಾಗುವುದಿಲ್ಲ.

(೫) ನಿರರ್ಥಕವಾದ[36] (ಯಾವ ಅರ್ಥವೂ ಇಲ್ಲದ) ಪದ-ವಾಕ್ಯಗಳು ವೇದದಲ್ಲಿರುವುದರಿಂದ ಸಕಲ ವೇದವೂ ಪ್ರಮಾಣವಲ್ಲ - ಭಾಗಶಃ ಅಪ್ರಾಮಾಣ್ಯವನ್ನೊಪ್ಪಿದರೆ, ಅದರಂತೆ ಅನ್ಯಭಾಗಗಳೂ ಅಪ್ರಮಾಣವೆಂಬ ಶಂಕೆಗೆ ಅವಕಾಶವಾಗುತ್ತದೆ. ಹೀಗೆಂದು ವೇದಗಳಿಗೆ ದೋಷವನ್ನು ಹೇಳುವ ವಾದವೂ ಯುಕ್ತವಲ್ಲ. ವೇದಗಳಲ್ಲಿರುವ ನಿರರ್ಥಕಗಳೆಂದು ತೋರುವ ವಾಕ್ಯಗಳು (ವರ್ಣ ಅಥವಾ ಪದಗಳು) ಶಬ್ದಗಳ ಶಕ್ತಿ-ತಾತ್ಪರ್ಯಜ್ಞಾನವಿಲ್ಲದ ಕಾರಣ ನಿರರ್ಥಕವೆಂದು ತೋರುವುವೋ ಅಥವಾ ಅರ್ಥರಹಿತ (ವ್ಯರ್ಥ) ವಾದವುಗಳೋ ಎಂಬ ಸಂಶಯವೇ ನಿಲ್ಲುತ್ತದೆ. ಇಂಥ ಎಷ್ಟೋ ಶಬ್ದಗಳಿಗೆ ಜ್ಞಾನಿಗಳು ಯೋಗ್ಯವಾದ ಅರ್ಥಗಳನ್ನು ಹೇಳಿದ್ದಾರೆ. ಅಷ್ಟೇಕೆ! ಸಾಮ-ವೇದದಲ್ಲಿ, ಗಾನಭಾಗವನ್ನು ಮಾತ್ರ ತೋರಿಸುತ್ತ, ಬೇರೆ ಅರ್ಥವಿಲ್ಲದಂತಿರುವ, ಸ್ತೋಭಾಕ್ಷರಗಳೆಂದು ಕರೆಯಲ್ಪಡುವ, ಹಾವು-ಹಾಯಿ-ಇಹ-ಈ-ಊ-ಔಹೋಯಿ ಇತ್ಯಾದಿ ಶಬ್ದಗಳಿಂದ ಪ್ರತಿಪಾದ್ಯ ದೇವತೆಗಳನ್ನೂ ಭಗವನ್ಮಹಿಮೆ-ಗಳನ್ನೂ ಛಾಂದೋಗ್ಯೋಪನಿಷತ್ತು-ಅದರ ಭಾಷ್ಯ, ಟಿಪ್ಪಣಿ ಮೊದಲಾದ ಗ್ರಂಥಗಳಿಂದ ತಿಳಿಯಬಹುದಾಗಿದೆ. ಆದ್ದರಿಂದ ನಿರರ್ಥಕತ್ವವೆಂಬ ದೋಷವನ್ನು ವೇದಗಳಿಗೆ ಹೇಳಲು ಬರುವುದಿಲ್ಲ.

(೬) ವೇದಗಳು ಹೇಳುವ ಅರ್ಥಗಳ (ವಸ್ತು-ವಿಷಯಗಳ) ಬಗ್ಗೆ ಸಂವಾದವೇ ದೊರೆಯುವುದಿಲ್ಲವಾದ್ದರಿಂದ ಅವು ಅಪ್ರಮಾಣಗಳೆಂಬ

---

36. 'ಶೃಣ್ಯೇವ ಜರ್ಭರೀ ತುರ್ಭರೀ ಪರ್ಭರೀ' ಇತ್ಯಾದಿಗಳು.

ವಾದವೂ ಸರಿಯಲ್ಲ. ಸಂವಾದರಾಹಿತ್ಯವೆಂಬುದು ಒಂದು ದೋಷವೇ ಹೇಗೆಂಬುದನ್ನು ಸ್ವಲ್ಪ ವಿಮರ್ಶಿಸೋಣ. ಒಂದು ಪ್ರಮಾಣದಿಂದ ಸಿದ್ಧವಾದ ಅರ್ಥವು (ವಸ್ತು ಅಥವಾ ವಿಷಯವು-ಪ್ರಮೇಯವು) ಮತ್ತೊಂದು ಪ್ರಮಾಣ-ದಿಂದ ಸಿದ್ಧವಾದರೆ, ಆಗ ಮೊದಲಿನ ಪ್ರಮಾಣವು ಸಂವಾದವುಳ್ಳದೆಂದು ಕರೆಯಲ್ಪಡುತ್ತದೆ. ವೇದಕ್ಕೆ ಸಂವಾದವೆಂದರೆ, ಪ್ರತ್ಯಕ್ಷ ಮತ್ತು ಅನುಮಾನ ಪ್ರಮಾಣಗಳಿಂದ ಸಮಾನಾರ್ಥ ಸಿದ್ಧಿಸಬೇಕೆಂದು ಹೇಳಿದಂತಾಯಿತು. ವೇದಗಳು ಪ್ರತಿಪಾದಿಸುವ ಈಶ್ವರಾದಿ ಇಂದ್ರಿಯಾತೀತ ವಸ್ತುಗಳ ವಿಷಯ-ದಲ್ಲಿ ಪ್ರತ್ಯಕ್ಷ ಪ್ರಮಾಣದ ಸಂವಾದವು ಸರ್ವಥಾ ಶಕ್ಯವಿಲ್ಲವಷ್ಟೆ. ಕೇವಲ ತರ್ಕದಿಂದ ಯಾವ ನಿಶ್ಚಯವನ್ನೂ ಸಾಧಿಸುವುದಕ್ಕಾಗುವುದಿಲ್ಲವೆಂಬುದನ್ನು ಈ ಹಿಂದೆ (೧ನೇ ಭಾಗದಲ್ಲಿ ಪ್ರಮಾಣ ನಿರೂಪಣೆಯಲ್ಲಿ) ಸ್ಪಷ್ಟಪಡಿಸಲಾಗಿದೆ. ಆದ್ದರಿಂದ ಅನುಪ್ರಮಾಣದ ಸಂವಾದವೂ ದೊರೆಯುವುದಿಲ್ಲ. ಮೇಲಾಗಿ, ವೇದಗಳು ಅಪ್ರಮಾಣವಾದ್ದರಿಂದ ಸಂವಾದ ದೊರೆಯುವುದಿಲ್ಲವೋ ಅಥವಾ ವೇದ ಪ್ರತಿಪಾದ್ಯ ಅರ್ಥಕ್ಕೆ ವೇದ ಒಂದೇ ಪ್ರಮಾಣವೋ ಎಂಬ ಸಂಶಯವೂ ಬರುತ್ತದೆ. ವೇದಾರ್ಥಗಳಿಗೆ ಸಂವಾದವಿರಲೇಬೇಕೆಂಬ ನಿಯಮವು ಎಲ್ಲಿ ಸಿದ್ಧವಾಗಿದೆ ಮತ್ತು ಹೇಗೆ ಸಿದ್ಧವಾಗುತ್ತದೆ? ಮತ್ತು ಕೆಲವು ವೇದಾರ್ಥಗಳಿಗೆ ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಸಂವಾದವೂ ದೊರೆಯುತ್ತದೆ. ಉದಾ:-ಅಗ್ನಿರ್ಹಿಮಸ್ಯ ಭೇಷಜಂ-ಅಗ್ನಿಯು ಹಿಮಕ್ಕೆ (ಶೀತಕ್ಕೆ) ಔಷಧಿಯು (ಪರಿಹಾರವು) ಎಂದು ವೇದವಾಕ್ಯವು ಹೇಳುತ್ತದೆ. ಇದಕ್ಕೆ ಪ್ರತ್ಯಕ್ಷ ಪ್ರಮಾಣದ ಸಂವಾದವು ಇದ್ದೇ ಇದೆ. ಸಂವಾದವಿಲ್ಲದ ಕಾರಣ ವೇದಗಳು ಅಪ್ರಮಾಣ ಎಂಬ ಯುಕ್ತಿಗೇ ಇದರಿಂದ ಭಾಗಾಸಿದ್ಧಿ ಎಂಬ ದೋಷ ತಗಲುತ್ತದೆ. ಏಕದೇಶಕ್ಕೆ (ಒಂದು ಭಾಗಕ್ಕೆ) ಸಂವಾದ ದೊರೆಯುವುದರಿಂದ ಸಂವಾದವಿಲ್ಲದ್ದರಿಂದ ಎಂಬ ಹೇತುವಿಗೆ ಅಸಿದ್ಧಿ ಉಂಟಾಗಿ, ಅಂತಹ ಹೇತುವಿನಿಂದ ಇಡೀ ವೇದಕ್ಕೆ ಅಪ್ರಾಮಾಣ್ಯವನ್ನು ಸಾಧಿಸಲು ಬರುವುದಿಲ್ಲ.

ಇವೇ ಮೊದಲಾದ ವಾದಗಳು, ಯುಕ್ತಿಯನ್ನು (ಅನುಮಾನ ಪ್ರಮಾಣವನ್ನು) ಆಶ್ರಯಿಸಿ, ವೇದಗಳಲ್ಲಿ ಅಪ್ರಾಮಾಣ್ಯ ದೋಷವನ್ನು ಆರೋಪಿಸಲು ಅಸಮರ್ಥಗಳಾಗಿವೆ. ಅವುಗಳಲ್ಲಿ ಹೇತುಗಳು ಸಂದಿಗ್ಧ, ಅಸಿದ್ಧಿ

ಮೊದಲಾದ ದೋಷಯುಕ್ತಗಳಾಗಿದ್ದು, ತಾವು ಸಾಧಿಸಲುದ್ಯುಕ್ತವಾದ ಅಪ್ರಾಮಾಣ್ಯವೆಂಬ ಸಾಧ್ಯವನ್ನು ಸಾಧಿಸಲಾರವೆಂಬುದನ್ನು ಭಾಷ್ಯ, ಟೀಕಾ, ಟಿಪ್ಪಣಿ ಮೊದಲಾದ ಗ್ರಂಥಗಳ ಅಭ್ಯಾಸದಿಂದ ಮನಗಾಣಬಹುದು. ವೇದ ಪ್ರಾಮಾಣ್ಯವನ್ನು ಸಾಧಿಸಲು ನಿರೂಪಿಸಿದ ಪೂರ್ವೋಕ್ತ ಯುಕ್ತಿಸಹಿತ ವಾದಗಳಾದರೋ, ಸ್ವತಃ ಪ್ರಮಾಣಗಳೇ ಆದ ವೇದಗಳ ವಿಷಯಕ್ಕೆ ಬುದ್ಧಿದೋಷದಿಂದ ಪ್ರಾಪ್ತವಾಗುವ ಅಪ್ರಾಮಾಣ್ಯ ಶಂಕೆಗಳನ್ನು ಪರಿಹರಿಸಲಿಕ್ಕೆ ಮಾತ್ರ; ಪ್ರಾಮಾಣ್ಯವನ್ನು ಅನುಮಾನದಿಂದ ಸಾಧಿಸಲಿಕ್ಕೆ ಅಲ್ಲ. ಅನ್ಯ-ಪ್ರಮಾಣಗಳ ಸಹಾಯವನ್ನು ಅಪೇಕ್ಷಿಸದೇ ಪ್ರಮಾಣಗಳಾದ್ದರಿಂದ ವೇದಗಳು ಸ್ವತಃ ಪ್ರಮಾಣಗಳೆನಿಸುತ್ತದೆ. ವೇದಗಳು ಹೇಳುವ ವಿಷಯಕ್ಕೆ ವೇದಗಳೇ ಪ್ರಮಾಣಗಳು. ಈಶ್ವರ, ಧರ್ಮಾಧರ್ಮಾದಿ ಅತೀಂದ್ರಿಯ ವಸ್ತುಗಳನ್ನುಳಿದು, ಇತರ ವೇದ ಪ್ರತಿಪಾದ್ಯ ವಿಷಯಗಳ ಬಗ್ಗೆ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಂವಾದವೂ ದೊರೆಯುತ್ತದೆ. ಈ ವಿಧ ಸಂವಾದಗಳು ವೇದ ಪ್ರಾಮಾಣ್ಯವನ್ನು ದೃಢಪಡಿಸುತ್ತವೆಯಲ್ಲದೇ ಸಾಧಿಸಿಕೊಡುವುದಿಲ್ಲ. ಆದ್ದರಿಂದ ಇತರ ಪ್ರಮಾಣಗಳಿಗೆ ವಿರೋಧವೆಂದು ತೋರಿದರೂ ವೇದಗಳನ್ನು ಅಪ್ರಮಾಣ-ವೆಂದು ಶಂಕಿಸುವುದು ಸರಿಯಲ್ಲ.

(೭) ವೇದಗಳ ಅಪೌರುಷೇಯತ್ವ ಮತ್ತು ಪ್ರಾಮಾಣ್ಯ ವಿಷಯದಲ್ಲಿ ಬರಬಹುದಾದ, ಈ ಹಿಂದೆ ನಿರೂಪಿಸಲಾದ ಮತ್ತು ಇತರ, ನಾನಾ ಪ್ರಕಾರದ ಆಕ್ಷೇಪಗಳನ್ನೂ, ಸಂಶಯಗಳನ್ನೂ ಪ್ರಾಚೀನರು ವಿಮರ್ಶಿಸಿ ಪರಿಹರಿಸಿರುವರು. ಆಧುನಿಕ ತರುಣರು ಇಷ್ಟರಿಂದ ವೇದಪ್ರಾಮಾಣ್ಯವನ್ನು ಒಪ್ಪಿಕೊಳ್ಳುವುದಿಲ್ಲ. ವೈಜ್ಞಾನಿಕ ಪ್ರಗತಿಯಿಂದ ಸಾಧಿಸಲಾಗಿರುವುವೆಂಬ ನಾನಾ ನಿರ್ಧಾರಗಳನ್ನು ಮುಂದೊಡ್ಡಿ, ಅವುಗಳನ್ನು ವಿರೋಧಿಸುವ ಆಗಮಗಳು ಎಂದೂ ಪ್ರಮಾಣವಾಗಲಾರವೆಂದು ವಾದಿಸುತ್ತಾರೆ. ಈ ಪ್ರಬಲ ವಾದವನ್ನು ಸವಿಸ್ತಾರವಾಗಿ ವಿಮರ್ಶೆ ಮಾಡಬೇಕಾದುದು ಅತ್ಯವಶ್ಯಕ. ವೇದಗಳಲ್ಲಿ ಮತ್ತು ಪಂಚಮ ವೇದವೆಂದು ಗೌರವಿಸಲ್ಪಟ್ಟಿರುವ ಇತಿಹಾಸ ಪುರಾಣಗಳಲ್ಲಿಯೂ ಬ್ರಹ್ಮಾಂಡದ ನಾನಾ ವಿವರಣೆಗಳಿವೆ. ಭೂಲೋಕ, ಅಂತರಿಕ್ಷಾದಿ ಲೋಕಗಳು, ಪಾತಾಳಾದಿ ಅಧೋಲೋಕಗಳು, ಆಕಾಶದಲ್ಲಿ ಸಂಚರಿಸುವ ಸೂರ್ಯ,

ಚಂದ್ರ, ಗ್ರಹನಕ್ಷತ್ರಾದಿಗಳು, ಇವುಗಳ ವಿವರವಾದ ವರ್ಣನೆಗಳಿವೆ. ಸೂರ್ಯಾದಿ ಗ್ರಹ ನಕ್ಷತ್ರಗಳ ಸಂಚಾರ ವೇಗ, ಗಮನ ಮಾರ್ಗ (ಪಥ), ಅವುಗಳ ಪರಿಮಾಣಾದಿ ಧರ್ಮಗಳೂ ಸಹ ನಿರೂಪಿಸಲ್ಪಡುತ್ತವೆ. ಈ ವಿವರಗಳು, ಬಹು ವಿಷಯಗಳಲ್ಲಿ ಆಧುನಿಕ (Modern) ಭೂಗೋಳ-ಖಗೋಳ (Geography and Astronomy) ಶಾಸ್ತ್ರಗಳ ನಿರೂಪಣೆಗಳನ್ನು ವಿರೋಧಿಸುತ್ತವೆ. ಶಾಸ್ತ್ರಗಳಲ್ಲಿ (ಆಗಮಗಳಲ್ಲಿ) ಹೇಳಲಾದ ಭೂಮಧ್ಯ-ವಿರುತ್ತೆಂಬ ಮೇರುಪರ್ವತ, ಸಪ್ತದ್ವೀಪಗಳು, ಸಪ್ತಸಮುದ್ರಗಳು ಎಲ್ಲಿಯೂ ಕಂಡುಬರುವುದಿಲ್ಲ; ಖಗೋಳಶಾಸ್ತ್ರವು ದಿನೇ ದಿನೇ ವಿಸ್ತಾರಗೊಳ್ಳುತ್ತಿದೆ; ನೂತನ ಯಂತ್ರೋಪಕರಣಗಳು ಆಕಾಶದ ಆನಂತ್ಯವನ್ನೂ, ಅಲ್ಲಿರುವ ಅಸಂಖ್ಯಾತ ವಸ್ತುಗಳ ವಿಶೇಷ ಜ್ಞಾನವನ್ನೂ ದೊರಕಿಸುತ್ತಿವೆ; ಮಾನವನು ಚಂದ್ರಲೋಕದಲ್ಲಿಳಿಯುವ ಕಾಲವು ಸಮೀಪಿಸುತ್ತಿದೆ; ರೇಡಿಯೋ ಫೋಟೋಗ್ರಫಿಯ ಅದ್ಭುತ ಸಾಹಸಗಳು, ಭೂಮಿ, ಚಂದ್ರನ ಹಿಂಭಾಗ ಮುಂತಾದವುಗಳ ಚಿತ್ರಗಳನ್ನು ಮಾನವನ ಕಣ್ಣೆದುರಿಗಿಟ್ಟಿವೆ. ಚಂದ್ರನು ಭೂಮಿಗೆ ಅತಿ ಸಮೀಪದ ಗ್ರಹ-ಕೇವಲ ೨,೩೦,೦೦೦ ಮೈಲಿಗಳ ದೂರದಲ್ಲಿದ್ದಾನೆ-ಆಗಮಗಳು ಹೇಳುವಂತೆ ಸೂರ್ಯನಿಗಿಂತ ಎರಡರಷ್ಟು ದೂರದಲ್ಲಿಲ್ಲ; **ಒಂದು ಸೆಕೆಂಡಿಗೆ 1,86,000 ಮೈಲಿಗಳ ವೇಗದಿಂದ ಸಂಚರಿಸುವ ಪ್ರಕಾಶ ಕಿರಣವು** ಬಹುಕೋಟಿ ವರ್ಷಗಳ ಕಾಲದಲ್ಲಿ ಗಮಿಸುವುದಕ್ಕಿಂತ ದೂರದಲ್ಲಿರುವ ನಕ್ಷತ್ರಗಳಿವೆ-ಆಗಮಗಳು ನಿರೂಪಿಸುವಂತೆ ಬ್ರಹ್ಮಾಂಡವು ಕೇವಲ ೫೦ ಕೋಟಿ ಯೋಜನ (ಯೋಜನ-ಸುಮಾರು ೮ ರಿಂದ ೧೦ ಮೈಲಿ) ವಿಸ್ತಾರ ಮಾತ್ರವಲ್ಲ; ಇತ್ಯಾದಿ ಬಹು ವಿರೋಧಗಳು ಕಂಡುಬರುತ್ತವೆ. ಪ್ರತ್ಯಕ್ಷ ಗೋಚರವಾಗಬಲ್ಲ (ಪ್ರತ್ಯಕ್ಷದಿಂದ ಗ್ರಹಿಸಲರ್ಹವಾದ) ವಸ್ತು ವಿಷಯದಲ್ಲಿ ಆಗಮಕ್ಕಿಂತ ಪ್ರತ್ಯಕ್ಷವೇ ಪ್ರಬಲ ಪ್ರಮಾಣವಷ್ಟೆ. ಇತಿಹಾಸ ಪುರಾಣಗಳಲ್ಲಿರುವ ಈ ಗ್ರಹಾದಿ ಪ್ರಾಕೃತ ವಸ್ತುಗಳ ನಿರೂಪಣೆಗೆ ಆಧಾರಭೂತವಾದ ವೇದವಾಕ್ಯಗಳೂ ಇರುವುದರಿಂದ, ಭಾಗವತಾದಿ ಪುರಾಣಗಳಲ್ಲಿರುವ ಭೂಗೋಳ - ಖಗೋಳ ನಿರೂಪಣೆಗಳು ಅಯೋಗ್ಯ ಜೀವರನ್ನು ಮೋಹಿಸಲಿಕ್ಕಾಗಿ ಇರುತ್ತವೆಂದು ಹೇಳಲು ಬರುವುದಿಲ್ಲ-ಹಾಗೆ ಹೇಳಿದರೆ

ವೇದಗಳಲ್ಲಿ ಸಹ ಮೋಹಕ ಭಾಗಗಳಿವೆಯೆಂದೂ ಹೇಳಿದಂತಾಗುತ್ತದೆ. ಆದರೆ ವೇದಗಳು ನಿರ್ದುಷ್ಟ ಪ್ರಮಾಣಗಳೆಂದೂ ಮೋಹವೆಂಬುದು (ಅಜ್ಞಾನವು) ವೇದಗಳನ್ನು ಅರಿಯುವವರ ಬುದ್ಧಿಯಲ್ಲಿರುವ ದೋಷವೆಂದೂ ವೇದ ಪ್ರಾಮಾಣ್ಯವಾದಿಗಳ ನಿಶ್ಚಿತಾಭಿಪ್ರಾಯವಾಗಿದೆ. ಪೂರ್ವೋಕ್ತ ವಿಧದ ವಿರೋಧಗಳ ಪರಿಹಾರವಾಗದಿದ್ದರೆ, ಸರ್ವ ವೇದವಾಕ್ಯಗಳೂ ಪ್ರಮಾಣ-ಗಳಲ್ಲವೆಂದು ಪ್ರಾಪ್ತವಾಗುತ್ತದೆ. ಭಾಗಶಃ ವೇದವು ಅಪ್ರಮಾಣವೆಂದಾದರೆ, ತತ್ವ ನಿಶ್ಚಯವನ್ನು ದೊರಕಿಸಿಕೊಳ್ಳುವ ಮಾರ್ಗವು ದುರ್ಗಮವಾಗಿ, ಬಹುಪರಿಯ ತೊಡುಕುಗಳಿಗೆ ಕಾರಣವಾಗುತ್ತದೆ. ಅಲ್ಲದೇ, ಅಪ್ರಮಾಣ-ಭಾಗಗಳಂತೆ ಇತರ ವೇದಭಾಗಗಳೂ ಅಪ್ರಮಾಣಗಳೆಂದು ಸಾಧಿಸಲು ಎಡೆಯಾಗುತ್ತದೆ- ಇತರ ಪ್ರಮಾಣಗಳ ಸಂವಾದವಿಲ್ಲದ ವೇದಭಾಗಗಳಂತೂ ಅಪ್ರಮಾಣವೆಂದೇ ಪ್ರಾಪ್ತವಾಗುತ್ತದೆ. ಈ ಕಾರಣಗಳಿಂದ ಉಕ್ತ ವಿರೋಧಗಳ ಪರಿಹಾರವು ಆಗಮ ಪ್ರಾಮಾಣ್ಯ ಸಮರ್ಥನೆಗೆ ಅನಿವಾರ್ಯವೇ ಆಗಿವೆ.

ಒಂದು ವಿಷಯಕ್ಕೆ ಸಂಬಂಧಿಸಿದ ಎರಡು ವಾಕ್ಯಗಳಲ್ಲಿ ಪರಸ್ಪರ ವಿರೋಧವಿದೆಯೆಂದು ಹೇಳಬೇಕಾದರೆ, ಆ ಎರಡೂ ವಾಕ್ಯಗಳ ಅರ್ಥಗಳು ಸ್ಪಷ್ಟವೂ ನಿರ್ಣಯಾತ್ಮಕವೂ ಆಗಿರಬೇಕು. ಪೂರ್ವ ಪಕ್ಷವನ್ನಾಗಲಿ ಸಂಶಯ-ವನ್ನಾಗಲಿ ನಿರೂಪಿಸುವ ವಾಕ್ಯಕ್ಕೂ, ನಿರ್ಣಯವನ್ನು ಹೇಳುವ ವಾಕ್ಯಕ್ಕೂ ವಿರೋಧವಿದೆ ಎನ್ನುವುದು ಯುಕ್ತವಲ್ಲವಷ್ಟೆ! ಮೇಲಾಗಿ ಎರಡೂ ನಿರವಕಾಶ ವಾಕ್ಯಗಳಾಗಿರಬೇಕು. ಒಂದಕ್ಕಿಂತ ಹೆಚ್ಚಾದ ಅರ್ಥಗಳಿಗೆ ಅವಕಾಶವಿರುವ ವಾಕ್ಯಗಳು ಸಾವಕಾಶಗಳೆನಿಸುತ್ತವೆ. ಸಾವಕಾಶ-ನಿರವಕಾಶ ವಾಕ್ಯಗಳಲ್ಲಿ ವಿರೋಧವಿದೆ ಎಂಬುದು ಸರಿಯಲ್ಲ. ವೇದಾದಿ ಆಗಮಗಳಲ್ಲಿ ಈ ಉಭಯ ವಿಧವಾಕ್ಯಗಳೂ ಕಂಡುಬರುತ್ತವೆ. ಕೆಲವು ವೇಳೆ ಆಪಾತತಃ (ಅವಿಮರ್ಶ-ದೆಶೆಯಲ್ಲಿ) ಅವು ಪರಸ್ಪರ ವಿರುದ್ಧವಿದ್ದಂತೆಯೂ ತೋರುತ್ತವೆ. ಆಗ ನಿರವಕಾಶ ವಾಕ್ಯಗಳ ಬಲದಿಂದ ಸಾವಕಾಶ ವಾಕ್ಯಗಳ ಅರ್ಥವನ್ನು ಯೋಗ್ಯ ಯೋಜನೆಯಿಂದ ನಿರ್ಧರಿಸಿಕೊಳ್ಳಬೇಕು. ಪ್ರಕೃತ, ವೇದೋಕ್ತ (ಅಥವಾ ಆಗಮೋಕ್ತ) ಪ್ರಮೇಯಗಳಿಗೂ ವೈಜ್ಞಾನಿಕ (Scientific and Technological) ಪ್ರಮೇಯಗಳಿಗೂ ವಿರೋಧವಿರುತ್ತದೆಂದು ಮೊದಲು ಸಿದ್ಧವಾಗಬೇಕು.

ಎಂದರೆ, ವೇದವಾಕ್ಯಗಳಿಗೂ. ವೈಜ್ಞಾನಿಕ ಪ್ರವೀಣರ ವಾಕ್ಯ-ಗಳಿಗೂ ವಿರೋಧವಿರಬೇಕು - ಏಕ ವಿಷಯಕ ನಿರ್ಣಯಾತ್ಮಕ ವಾಕ್ಯ-ಗಳಾಗಿರಬೇಕು. ವೈಜ್ಞಾನಿಕರ ವಾಕ್ಯಗಳು, ಈ ಪ್ರಮೇಯವು (ವಸ್ತುವು) ಹೀಗೆಯೇ ಸರಿ, ಯಾವ ಪ್ರಕಾರದಿಂದಲೂ ಬೇರೆಯಾಗಿರಲು ಶಕ್ಯವೇ ಇಲ್ಲ ಎಂಬಂತೆ, ಪ್ರತ್ಯಕ್ಷಸಿದ್ಧವಾದುದನ್ನೇ ಹೇಳಬೇಕು. ಇದನ್ನು ವಿರೋಧಿಸುವು-ದೆಂಬ ವೇದವಾಕ್ಯವೂ ನಿರವಕಾಶವಾಗಿರಬೇಕು. ಆಗ ಮಾತ್ರ ವೇದವಾಕ್ಯವು ಅಪ್ರಮಾಣವಾದೀತು-ಅನ್ಯಥಾ ಸಾಧ್ಯವಿಲ್ಲ. ಸಾವಕಾಶ ವೇದವಾಕ್ಯಗಳಿಗೆ ವೈಜ್ಞಾನಿಕ ವಾಕ್ಯಗಳು ವಿರೋಧಿಸುವಂತಿದ್ದರೆ, ವೇದವಾಕ್ಯಗಳಿಗೆ ಯೋಗ್ಯ ಅನ್ಯಾರ್ಥವನ್ನು ತಿಳಿಯಬೇಕಲ್ಲದೇ ಅಪ್ರಮಾಣಗಳೆಂದಲ್ಲ-ಇದೂ ಸಹ, ವೈಜ್ಞಾನಿಕ ವಾಕ್ಯಗಳು ಪ್ರತ್ಯಕ್ಷ ಸಿದ್ಧ ಪ್ರಮಾಣಗಳಾದಾಗ ಮಾತ್ರ. ವೈಜ್ಞಾನಿಕ ಪ್ರಮೇಯಗಳನ್ನು ವಿರೋಧಿಸುತ್ತವೆಂಬ ವೇದವಾಕ್ಯಗಳ ಸರಿಯಾದ ಅರ್ಥವನ್ನು ವ್ಯಾಕರಣ-ನಿರುಕ್ತ-ಜ್ಯೋತಿಷಾದಿ ವೇದಾಂಗಗಳ ಸಹಕಾರವುಳ್ಳ ಪೂರ್ವೋಕ್ತ ತಾತ್ಪರ್ಯಲಿಂಗಗಳಿಂದ ವಿವೇಚಿಸಿ ನಿಶ್ಚಯಿಸಿಕೊಳ್ಳಬೇಕು.[37] ನಂತರ ಈ ಅರ್ಥವನ್ನು ವಿರೋಧಿಸುತ್ತವೆಂಬ ವೈಜ್ಞಾನಿಕರ ವಾಕ್ಯವನ್ನು (ಅಥವಾ ವಾಕ್ಯಸಮೂಹವನ್ನು), ಪ್ರತ್ಯಕ್ಷಸಿದ್ಧ ವಿಷಯವನ್ನು ಹೇಳುತ್ತದೆಯೇ ಅಥವಾ ಅನುಮಾನ (ತರ್ಕ) ಸಿದ್ಧವೆಂದು ಹೇಳುತ್ತದೆಯೋ ಎಂದು ಪರೀಕ್ಷಿಸಬೇಕು. ಅನುಮಾನಸಿದ್ಧವಾದುದನ್ನು ವೈಜ್ಞಾನಿಕ ವಾಕ್ಯಗಳು ಹೇಳುತ್ತಿದ್ದರೆ, ಅವು ವೇದವಾಕ್ಯಗಳನ್ನು ವಿರೋಧಿಸುತ್ತವೆಂದು ತಿಳಿಯ-ಕೂಡದು. ಏಕೆಂದರೆ, ಕೇವಲ ತರ್ಕದಿಂದ ಯಾವ ಪ್ರಮೇಯವನ್ನೂ ನಿಶ್ಚಯಿಸಲು ಬರುವುದಿಲ್ಲ-ಪ್ರತಿ ತರ್ಕಗಳ ಬಾಧವು ಇದ್ದೇ ಇರುತ್ತದೆ. ಈ ಹಿಂದೆ ಅನುಮಾನ ಪ್ರಮಾಣವನ್ನು ವಿವೇಚಿಸುವಲ್ಲಿ ಈ ಅಂಶವನ್ನು ಸ್ಪಷ್ಟಪಡಿಸಲಾಗಿದೆ. ವೈಜ್ಞಾನಿಕರ ಅನೇಕ ನಿರ್ಧಾರಗಳೆಂಬುವು ಅನುಮಾನ-ವನ್ನಾಶ್ರಯಿಸಿರುತ್ತವೆ. ಅವುಗಳಲ್ಲಿ ಕೆಲವು ಅಂಶಗಳು ಪ್ರತ್ಯಕ್ಷಸಿದ್ಧವೂ ಆಗುತ್ತವೆಂಬ ಕಾರಣದಿಂದ, ಆ ನಿರ್ಧಾರಗಳೆಲ್ಲವೂ (conclusions) ನಿಶ್ಚಿತ ಆತ್ಯಂತಿಕ (ultimate) ನಿರ್ಣಯಗಳೆಂದು ತಿಳಿಯಲು ಬರುವುದಿಲ್ಲ.

---

37. 'ಮೃದಬ್ರವೀತ್-ಆಪೋಽಬ್ರುವನ್' ಇತ್ಯಾದಿ ವೇದವಾಕ್ಯಗಳ, (ಈ ಮಾರ್ಗದಿಂದ ಯೋಜಿತವಾದ) ಅರ್ಥಗಳನ್ನು ಈ ಹಿಂದೆ ನಿದರ್ಶಿಸಲಾಗಿದೆ.

ವಿಜ್ಞಾನವು ಸಾಧಿಸಿರುವ ಅನೇಕ ನಿರ್ಧಾರಗಳು ತಾತ್ಕಾಲಿಕ (tentative) ಅನಿಶ್ಚಿತ ಸಂಭಾವನೆಗಳು ಮಾತ್ರ[38]- ಅಂತಿಮ ನಿರ್ಣಯಗಳಲ್ಲ-ಮಧ್ಯದ ನಾನಾ ಘಟ್ಟಗಳಲ್ಲಿ (stages) ಸಂಭಾವ್ಯವೆಂದು ತಿಳಿದು ಹೇಳುವ ಅಭಿಪ್ರಾಯಗಳು ಮಾತ್ರ. ಅಂತಿಮ ನಿರ್ಣಯವು ಇವುಗಳನ್ನು ವಿರೋಧಿಸು-ವಂತೆಯೇ ತೋರಬಹುದು-ಅಷ್ಟುಮಾತ್ರದಿಂದ ಈ ಅಭಿಪ್ರಾಯಗಳಿಗೂ, ಅಂತಿಮ ನಿರ್ಣಯಕ್ಕೂ ಅಪರಿಹಾರ್ಯವಾದ ವಿರೋಧವಿರುತ್ತದೆಂದು ತಿಳಿಯಬಾರದು. ಉದಾ :- ವಿಜ್ಞಾನಿಗಳು ಒಂದು ಘಟ್ಟದಲ್ಲಿ (ಕೆಲವೇ ದಶಕಗಳ ಹಿಂದೆ) ಪರಮಾಣುವು (atom) ಅವಿಭಾಜ್ಯವೆಂದೇ ಸಾರಿದರು. ನಂತರ, ಪರಮಾಣುವನ್ನೂ ಭೇದಿಸಿ, ಮುಂದೆ ಅನೇಕ ಸೂಕ್ಷ್ಮ ನಿರ್ಧಾರ-ಗಳನ್ನೂ ಕಂಡರು.[39] ಇದರಿಂದ, ಪರಮಾಣುವು ಅವಿಭಾಜ್ಯವೆಂಬ ಭಾವನೆಯು ವ್ಯರ್ಥವೆಂದಾಗಲಿ, ಅದನ್ನು ಆಧರಿಸಿ ಬೆಳೆದಿದ್ದ ರಸಾಯನಿಕ ಶಾಸ್ತ್ರ (Chemistry) ಮುಂತಾದ ವಿಜ್ಞಾನ ಶಾಖೆಗಳು ಸುಳ್ಳೆಂದಾಗಲಿ ಏರ್ಪಡುವುದಿಲ್ಲ. ಹೀಗೆಯೇ, ವೇದೋಕ್ತ ಅಂತಿಮನಿರ್ಣಯ ವಾಕ್ಯಗಳಿಗೆ ವೈಜ್ಞಾನಿಕ ವಾಕ್ಯಗಳಿಂದ ಆಪಾತತಃ ತೋರಬಹುದಾದ ವಿರೋಧಗಳನ್ನು ಅಪರಿಹಾರ್ಯ ವಿರೋಧವೆಂದು ತಿಳಿಯುವುದೂ ಉಚಿತವಲ್ಲ. ಆದ್ದರಿಂದ ಈ ಮುಂತಾದ ಪ್ರಕಾರಗಳಿಂದ ಸೂಕ್ಷ್ಮವಾಗಿ ವಿಮರ್ಶಿಸಿ ವಿರೋಧವನ್ನು ತಿಳಿಯಬೇಕಾಗಿರಲು, ಆಪಾತತಃ ತೋರುವ ವಿರೋಧದಿಂದ, ವೈಜ್ಞಾನಿಕ ವಾಕ್ಯಗಳು ಅಂತಿಮ ನಿರ್ಣಯಗಳನ್ನು ಸಾರುತ್ತವೆಂದು ಭ್ರಮಿಸಿ, ವೇದ-ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಶಂಕಿಸುವುದು ಸರ್ವಥಾ ಯೋಗ್ಯವಲ್ಲ. ಇನ್ನು ವಿಜ್ಞಾನದಿಂದ ಪ್ರತ್ಯಕ್ಷಸಿದ್ಧವಾದ ಕೆಲವು ಪ್ರಮೇಯಗಳಿಗೂ ವೇದ-ಗಳಲ್ಲಿ ವಿರೋಧವು ಕಾಣುವುದುಂಟು. ಅಂತಹ ವೇದವಾಕ್ಯಗಳು ನಿರವಕಾಶ-ಗಳೂ ಆಗಿರಬಹುದು. ಇಷ್ಟು ಮಾತ್ರದಿಂದ ವೇದಕ್ಕೆ ಅಪ್ರಾಮಾಣ್ಯವು ಸಿದ್ಧವಾಗಲಾರದು. ಅನೇಕ ಸೂಕ್ಷ್ಮ ರಹಸ್ಯ ಪ್ರಮೇಯಗಳನ್ನು ವೇದ ವಾಕ್ಯಗಳು ಅತಿ ಸಂಗ್ರಹವಾಗಿ ನಿರೂಪಿಸುವುದೂ ಉಂಟು.

38. ರತ್ನ (1) ರ 3ನೇ ಪರಿಚ್ಛೇದವನ್ನು ಇಲ್ಲಿ ಓದಿಕೊಳ್ಳಬೇಕು.

39. ರತ್ನ (1) ರಲ್ಲಿ 65-68ನೇ ಪುಟಗಳನ್ನು ಇಲ್ಲಿ ಓದಿಕೊಳ್ಳಬೇಕು.

ಇವುಗಳ ವಿಸ್ತಾರವಾದ ವಿವರಣೆಗಳನ್ನು ಇತಿಹಾಸ ಪುರಾಣಗಳಲ್ಲಿ ಕಾಣುತ್ತೇವೆ. **ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ - ಇತಿಹಾಸ ಪುರಾಣಗಳಿಂದ ವೇದಾರ್ಥಗಳನ್ನು ಪೂರ್ಣಮಾಡಿಕೊಳ್ಳಬೇಕು**, ಎಂದು ವೇದವೇ ಹೇಳುತ್ತದೆ. ಆದ್ದರಿಂದ ಅಂಥ ನಿರವಕಾಶ ವೇದವಾಕ್ಯಗಳ ಪೂರ್ಣಾರ್ಥಗಳನ್ನು ಇತಿಹಾಸ ಪುರಾಣಗಳ ಅಭ್ಯಾಸದಿಂದ ತಿಳಿದರೆ, ವಿರೋಧಗಳು ಪರಿಹಾರವಾಗಬಲ್ಲವು. ಹೀಗೆ ಅರ್ಥ ವಿಶೇಷಗಳನ್ನು ಪೂರ್ಣಗೊಳಿಸಿಕೊಳ್ಳುವುದು ಅರ್ಥಾಂತರಗಳನ್ನು ತಿಳಿದಂತಲ್ಲ-ನಿರವಕಾಶಕ್ಕೆ ಹಾನಿಯಲ್ಲ. ಇತ್ಯಾದಿ ವಿಮರ್ಶಿತ ನಿಯಮಗಳ ಅನುಸರಣೆಯಿಂದ, ವೇದಕ್ಕೆ ಮತ್ತು ವೇದಾನುಸಾರಿಗಳಾದ ಆಗಮಗಳಿಗೆ ವಿಜ್ಞಾನದಿಂದ ಪ್ರಾಪ್ತವಾಗ-ಬಹುದಾದ ವಿರೋಧಗಳು ಪರಿಹಾರಗೊಂಡು, ಆಗಮಪ್ರಾಮಾಣ್ಯ ಸಿದ್ಧವಾಗುತ್ತದೆ. ವೈಜ್ಞಾನಿಕ ಪ್ರಮೇಯಗಳು ತಾತ್ಕಾಲಿಕ (tentative) ಅಭಿಪ್ರಾಯಗಳು ಮಾತ್ರವೆಂಬಲ್ಲಿಯೂ, ಅವುಗಳಿಂದ ವಿರೋಧವುಳ್ಳ ವೇದೋಕ್ತ ಪ್ರಮೇಯಗಳು ಸುಳ್ಳೆಂದೂ ಆದ್ದರಿಂದ ಆ ವೇದವಾಕ್ಯಗಳು ಅಪ್ರಮಾಣಗಳೆಂದೂ ತಿಳಿಯುವುದು ವಿವೇಕಿಗಳಿಗೆ ಸಲ್ಲದೆಂಬಲ್ಲಿಯೂ, ಕೆಲವು ನಿದರ್ಶನಗಳನ್ನು ಕೊಡಬಹುದು.

ವೇದಾದಿ ಆಗಮಗಳು, ಬ್ರಹ್ಮಾಂಡವು ೫೦ ಕೋಟಿ ಯೋಜನ ವಿಸ್ತಾರವುಳ್ಳವೆಂದು ಹೇಳುತ್ತವೆ. ಬೃಹದಂಡಂತಿರುವ (ದೊಡ್ಡ ತತ್ತಿಯಾಕಾರದ) ಈ ಜಗತ್ತು, ಅಂಡದ ಚಿಪ್ಪಿನಂತಿರುವ ಖರ್ಪರದಿಂದ ಸುತ್ತಲೂ ಮುಚ್ಚಲ್ಪಟ್ಟು ಹೊರಭಾಗದಲ್ಲಿ ನಾನಾ ಆವರಣಗಳುಳ್ಳದ್ದೆಂದು (ಜಲ-ತೇಜಸ್ಸು-ವಾಯು-ಆಕಾಶ-ಅಹಂಕಾರ-ಮಹತ್-ಅವ್ಯಕ್ತ ತತ್ವಗಳು. ಒಂದಕ್ಕಿಂತ ಮತ್ತೊಂದು ಹತ್ತು ಪಟ್ಟು ವಿಸ್ತಾರದಿಂದ ವ್ಯಾಪಿಸಿ ಆಚ್ಛಾದಿಸಿರುವುವೆಂದು) ಆಗಮಗಳು ಹೇಳುತ್ತವೆ. ವಿಜ್ಞಾನಿಗಳು (ವಿಶ್ವವೀಕ್ಷಕ ಪ್ರವೀಣ ಖಗೋಳ ಶಾಸ್ತ್ರಜ್ಞರು), ವಿಶ್ವವು, ವಿಸ್ತಾರಗೊಳ್ಳುತ್ತಿರುವ (open) ತೆರೆದ ಅನಾಚ್ಛಾದಿತ ಪ್ರದೇಶ-ವೆಂದೂ, ಅಲ್ಲಿ ಅಸಂಖ್ಯ ಗ್ರಹನಕ್ಷತ್ರಗಳು ಸದಾ ಹುಟ್ಟಿ ನಾಶವಾಗುತ್ತಿರುವು-ವೆಂದೂ, ಬಹುಕೋಟಿ ವರ್ಷಗಳ ದೂರ (Light years) ಸಾಗಿದರೂ ವಿಶ್ವದ ಗಡಿಯ ದೊರೆಯದೆಂದೂ, ಮಿತಿ ಅಥವಾ ಗಡಿಯೆಂಬುದೇ

ಇಲ್ಲವೆಂದೂ, ತಿಳಿದಿದ್ದು, ಈ ನಿರ್ಣಯವನ್ನು ಜಗತ್ತಿಗೆ ಸಾರುತ್ತಲೇ ಬಂದಿದ್ದಾರೆ. ಕೆಲವು ತಿಂಗಳ ಹಿಂದೆ, ಅಮೆರಿಕಾದೇಶದ ವಿಶ್ವಶೋಧನ ಪ್ರಯೋಗಶಾಲೆಯ (Research Laboratory) ಪ್ರವೀಣರ ತಂಡವು, ಏರೋಬಿ ರಾಕೆಟ್ (Aerobee Rocket)ನಿಂದ ಸಂಗ್ರಹಿಸಿದ ವಿಶೇಷಾಂಶ-ಗಳನ್ನು ಪರಿಶೋಧಿಸಿ, ವಿಶ್ವವು ಬಾಗಿದ, ಮುಚ್ಚಿದ ಪ್ರದೇಶವಾಗಿದೆ (The cosmos is curved and closed) ಎಂದು ಖಚಿತವಾಗಿ ನಿಶ್ಚಯಿಸ-ಬಹುದಾಗಿದೆ, ಎಂದು ಘೋಷಿಸಿ ವಿಜ್ಞಾನ ಲೋಕದಲ್ಲಿ ಒಂದು ಕ್ರಾಂತಿ-ಯನ್ನೆಬ್ಬಿಸಿದೆ. 'The new findings obtained from the flight of an Aerobee Rocket, provided a possibly definite answer to a great cosmological question that has plagued science for generations. Is the universe with its millions of star-filled galaxies an open one that will expand for ever (as now thought) or is it a closed one whose expansion will gradually slow to a stop with catastrophic results? Dr. Richard C. Henry of the research laboratory who reported the findings said 'the universe is closed with a curved space boundary; there is enough matter in the universe to produce the complete curvature required for a closed universe'[40]- ಎಂದರೆ, ಏರೋಬಿ ರಾಕೆಟ್ ಹಾರಾಟದಿಂದ ದೊರೆತಿರುವ ಹೊಸ ವಿಷಯಗಳು, ವಿಶ್ವರಚನೆಯ ಸಂಬಂಧವಾದ, ವಿಜ್ಞಾನವನ್ನು ಅನೇಕ ತಲೆಮಾರುಗಳಿಂದ ಕಾಡುತ್ತಿದ್ದ ಮೂಲಪ್ರಶ್ನೆಗೆ ನಿಶ್ಚಯವಾದ (ನಿರ್ಣಯ ಸ್ವರೂಪದ) ಉತ್ತರವನ್ನು ದೊರೆಕಿಸಲು ಸಮರ್ಥವಾಗಿವೆ. ಅನೇಕ ಕೋಟ್ಯಧಿಕ ನಕ್ಷತ್ರಗಳಿಂದ ತುಂಬಿದ ಕೋಟಿಶಃ ಸಮೂಹಗಳುಳ್ಳ (ಸರ್ವದಾ ವಿಸ್ತಾರಗೊಳ್ಳುವುದೆಂದು ತಿಳಿಯಲಾಗಿರುವ) ವಿಶ್ವವು, ಮುಂದೆಲ್ಲ ಕಾಲಕ್ಕೂ ವಿಸ್ತಾರವಾಗುತ್ತಲೇ ಸಾಗುವ, ಮುಚ್ಚು ಕಾಣದ (open-ತೆರೆದ) ವಿಶ್ವವೇ ಆಗಿರುವುದೋ ಅಥವಾ ಮುಚ್ಚುಳ್ಳದ್ದಾಗಿದ್ದು, ಅದರೊಳಗೆ ಸಂಭವಿಸುತ್ತಿರುವ ವಿಸ್ತರಣವು ಕ್ರಮೇಣ (ಪ್ರಳಯದಲ್ಲಿ ಪರ್ಯವಸಾನಗೊಳ್ಳುವ) ಮಹಾವಿಪತ್ಕಾರಕ

40. Published in Indian Express, dated 19-4-1968.

ನಿಲುಗಡೆಯನ್ನು (ಅಂತವನ್ನು) ಹೊಂದುವುದೋ, ಎಂಬುದೇ ಆ ಪ್ರಶ್ನೆ. ಡಾ|| ರಿಚರ್ಡ್ ಸಿ. ಹೆನ್ರಿ ಎಂಬ ಆ ಪರಿಶೋಧಕ ಪ್ರವೀಣನು ಈ ಹೊಸ ಶೋಧನಾಂಶಗಳನ್ನು ವಿವರಿಸುತ್ತ, ವಿಶ್ವವು ದುಂಡಗೆ ಬಾಗಿದ ಆಕಾರವುಳ್ಳದ್ದು ಮತ್ತು ಮುಚ್ಚಳವುಳ್ಳದ್ದು; ಹೀಗೆ ದುಂಡಾದ ಮುಚ್ಚಿದ ವಿಶ್ವವಾಗಿರಲು ಅವಶ್ಯಕವಾದ ಜಡಶಕ್ತಿಗಳು (matter) ವಿಶ್ವದಲ್ಲಿ (ನಮಗೆ ತಿಳಿದ ವಿಶಾಲ ವಿಶ್ವದಲ್ಲಿ) ಸಾಕಷ್ಟಿದೆ. ಇದರಿಂದ ಆಗಮಗಳು ನಿರೂಪಿಸುವಂತೆ, ಅಂಡದಂತೆ ಖರ್ಪರ ಸಹಿತವಾದ ಆಕಾರವುಳ್ಳದ್ದು ಬ್ರಹ್ಮಾಂಡ, ಎಂಬ ನಿರ್ಣಯದ ಕಡೆಗೆ, ವಿಜ್ಞಾನಿಗಳೂ ಸುತ್ತಿಸುತ್ತಿ ಸರಿಯುತ್ತಿರುವಂತೆ ತೋರುತ್ತದೆ.

(ii) ಚಂದ್ರಗ್ರಹದ ವಿಷಯದಲ್ಲಿ ವಿಜ್ಞಾನಿಗಳ ಅಭಿಪ್ರಾಯಗಳು ಅವರು ನಡೆಸುತ್ತಿರುವ ಒಂದೊಂದು ಪ್ರಯೋಗದಿಂದಲೂ ಬದಲಾಗುತ್ತಿದೆ ಎಂಬುದನ್ನು ಈ ಹಿಂದೆ (ರತ್ನ ೧ - ಪರಿಚ್ಛೇದ ೨ ರಲ್ಲಿ) ನಿರೂಪಿಸಲಾಗಿದೆ. ಆಗಮಗಳು ಘನತೋಯಾತ್ಮಕಂ ತತ್ರ ಮಂಡಲಂ ಶಶಿನಃ ಸ್ಮೃತಂ (ಬ್ರಹ್ಮಾಂಡ ಪುರಾಣ), ಘನತೋಯಾತ್ಮಕಂ ವಿದ್ಧಿ (ವಾಯುಪುರಾಣ), ಜಲಮಯವೆಂದು ಹೇಳುತ್ತವೆ. ಈಗ್ಯೆ ಕೆಲವು ತಿಂಗಳ ಹಿಂದಿನವರೆಗೆ ಚಂದ್ರನಲ್ಲಿ ನೀರಿಲ್ಲ-ವೆಂದೇ ವಿಜ್ಞಾನಿಗಳ ನಿರ್ಧಾರವಾಗಿತ್ತು. ಇತ್ತೀಚೆಗೆ ಅಮೆರಿಕನ್ನರ ಲ್ಯೂನಾರ್ ಆರ್ಬಿಟರ್ ಎಂಬ ಆಕಾಶಯಾನವು ಭೂಮಿಗೆ ಕಳುಹಿಸಿದ ಚಂದ್ರಮಂಡಲದ ನಾನಾ ಛಾಯಾ ಚಿತ್ರಗಳನ್ನು (photos), ಡಾ|| ಜಾನ್ ಗಿಲ್ವರಿ ಎಂಬ ಕ್ಯಾಲಿಫೋರ್ನಿಯ ಕಾಲೇಜಿನ ಪ್ರೊಫೆಸರು, ಸೂಕ್ಷ್ಮಪರೀಕ್ಷೆಗೊಳಪಡಿಸಿ, ಪ್ರಕಟಿಸಿರುವ ಅಭಿಪ್ರಾಯವು ಹೀಗಿದೆ: "The Lunar Orbiter photographs show windingstream beds on the moon. The presence of water, perhaps still there frozen into ice and a hot molten core still ready to burst into life are themselves sufficient to make the moon a very interesting place for geologists to visit. But more remarkable still, the possibility of life on the moon being found, cannot now be ruled out' ಎಂದರೆ, ಲ್ಯೂನಾರ್ ಆರ್ಬಿಟರ್ ಕಳುಹಿಸಿರುವ ಛಾಯಾಚಿತ್ರಗಳು, ಚಂದ್ರನಲ್ಲಿ ಡೊಂಕುಡೊಂಕಾಗಿರುವ ಹಳ್ಳಗಳ ಪಾತ್ರಗಳನ್ನು ತೋರಿಸುತ್ತವೆ.

ಚಂದ್ರನಲ್ಲಿ ಪ್ರಾಯಃ ಜಲವು ಮಂಜುಗಡ್ಡೆ ರೂಪದಲ್ಲಿರುವುದೆಂದು ಚಿತ್ರಗಳಲ್ಲಿರುವ ಸೂಚನೆಗಳು ಸಾಧಿಸುತ್ತವೆ. ಚಂದ್ರಮಂಡಲದ ಒಳಭಾಗವು ಕರಗಿ ದ್ರವರೂಪದಲ್ಲಿದ್ದು (Lava) ಯಾವ ಕಾಲಕ್ಕಾದರೂ ಅಗ್ನಿಪರ್ವತ ರೂಪದಿಂದ ಹೊರಸಿಡಿಯಬಹುದಾಗಿದೆ. ಚಂದ್ರನಲ್ಲಿರುವ ಈ ಸನ್ನಿವೇಶಗಳೇ, ಭೂತತ್ವ ಶಾಸ್ತ್ರಜ್ಞರು ಅಲ್ಲಿಗೆ ಭೇಟಿಕೊಡಲು, ಆಕರ್ಷಕಗಳಾಗಿವೆ. ಇದಕ್ಕೂ ಗಮನೀಯ ಅಂಶವೆಂದರೆ, ಇನ್ನು ಮುಂದೆ, ಚಂದ್ರನಲ್ಲಿ ಪ್ರಾಣಿಜೀವನವನ್ನೂ ಕಾಣಬಹುದೆಂಬ ಆಶೆಯನ್ನು ತಳ್ಳಿಹಾಕುವಂತಿಲ್ಲ. ಈ ಅಭಿಪ್ರಾಯವನ್ನು 'Moon may not be a dead world'- ಚಂದ್ರಲೋಕವು ನಿರ್ಜೀವ ಜಗತ್ತಾಗಿರಲಾರದು ಎಂಬ ಶಿರೋನಾಮೆಯಲ್ಲಿ ಕಳೆದ ಏಪ್ರಿಲ್ ತಿಂಗಳಲ್ಲಿ ಪ್ರಕಟಿಸಲಾಗಿದೆ. ಆಗಮಗಳಲ್ಲಿ ತೇಜೋಪ್ರಚುರ ದೇಹಗಳುಳ್ಳ ಸಿದ್ಧರು, ದೇವತೆಗಳೂ ಗ್ರಹನಕ್ಷತ್ರಾದಿಗಳಲ್ಲಿ ವಾಸಿಸುವರೆಂದು ಹೇಳಲಾಗುತ್ತದೆ. ಇದರಂತೆಯೇ, ಶುಕ್ರಗ್ರಹದಲ್ಲಿ ನೀರು (water on Venus); 'The lunar lope' – ಚಂದ್ರನಲ್ಲಿ ಹಾರುವ ನಡಿಗೆ (ಭೂಮಿಯಲ್ಲಿ ಹೆಚ್ಚೆಂದರೆ ಸೆಕೆಂಡ್ ಒಂದಕ್ಕೆ ೪ ಅಡಿಗಳನ್ನು ನಡೆಯಬಹುದು-ಚಂದ್ರನಲ್ಲಿ ೧೦ ಅಡಿಗಳಷ್ಟು); 'Moscow believes in space myths' ರಷ್ಯನ್ನರು (ರಷ್ಯಾ ವಿಜ್ಞಾನಿಗಳು) flying saucers ಗಳನ್ನು (ಹಾರುವ ತಟ್ಟೆಗಳಂತೆ ಆಗಾಗ್ಯೆ ಅಂತರಿಕ್ಷದಲ್ಲಿ ಕಾಣುವ ವಸ್ತುಗಳನ್ನು ಲೋಕಾಂತರ ವಾಸಿಗಳ ವಾಹನಗಳೆಂದು ನಂಬಲು ತೊಡಗಿದ್ದಾರೆ; ಇತ್ಯಾದಿ ಪ್ರಸಿದ್ಧ ವಿಜ್ಞಾನಿಗಳ ಅಭಿಪ್ರಾಯಗಳನ್ನು, ಪತ್ರಿಕೆಗಳಲ್ಲಿ ಪ್ರಕಟವಾಗುವ ಲೇಖನಗಳಿಂದಲೂ, ಗ್ರಂಥ ಪ್ರಕಾಶನ ಸಂಸ್ಥೆಗಳು ಪ್ರಸಿದ್ಧಪಡಿಸುವ ಗ್ರಂಥಗಳಿಂದಲೂ ಕುತೂಹಲಿಗಳಾದ ಓದುಗರು ಗಮನಿಸುತ್ತಿರಬಹುದು. ಗ್ರಂಥವಿಸ್ತಾರ ಭಯದಿಂದ ಆ ಎಲ್ಲವನ್ನೂ ಇಲ್ಲಿ ವಿವರಿಸಲಾಗುವುದಿಲ್ಲ.[41]

---

41. ಇದೇ (1968ನೇ) ಡಿಸೆಂಬರ್ 24ನೇ ತಾರೀಖಿನಲ್ಲಿ ಅಮೆರಿಕಾದ ಮೂವರು ಗಗನ ಯಾತ್ರಿಕರು ಅಪಾಲೋ-8 ಎಂಬ ಅಂತರಿಕ್ಷ ನೌಕೆಯಲ್ಲಿ ಚಂದ್ರನ ಸುತ್ತಲೂ ಕೇವಲ 60 ಮೈಲಿಗಳ ಸಮೀಪದಲ್ಲಿ ಸುತ್ತಿ, ಅಲ್ಲಿಂದ ಭೂಮಿಗೆ ಕಳುಹಿಸಿರುವ ಚಿತ್ರಗಳು ಮತ್ತು ವಿವರಿಸಿರುವ ವಿಷಯಗಳು, ವಿಜ್ಞಾನಿಗಳ ಅದ್ಭುತ ಸಾಹಸ ಶಕ್ತಿಗಳನ್ನು ಸೂಚಿಸುತ್ತವೆ. ಸಮೀಪ ಭವಿಷ್ಯದಲ್ಲಿ ಚಂದ್ರಮಂಡಲದ ಮೇಲಿಳಿದು ಅಲ್ಲಿನ ವಿಚಿತ್ರಗಳನ್ನೂ, ಇತರ ಗ್ರಹಗಳನ್ನೂ ಅಂತರಿಕ್ಷ ನೌಕೆಗಳಲ್ಲಿ ಹೋಗಿ ಸೇರಿ ಅಲ್ಲಿನ

ಇಂಥ ನಿದರ್ಶನಗಳನ್ನು ಹೇರಳವಾಗಿ ಉದಾಹರಿಸಬಹುದು. ಅವುಗಳ ಪರಿಶೀಲನೆಯಿಂದ ತಿಳಿಯಬಹುದಾದ ಮುಖ್ಯಾಂಶವೇನೆಂದರೆ:- ವೈಜ್ಞಾನಿಕ ಅಭಿಪ್ರಾಯಗಳು ತಾತ್ಕಾಲಿಕ ಊಹೆಗಳು ಮಾತ್ರ-ನಿತ್ಯವಾದ ಸತ್ಯಗಳಲ್ಲ (Not eternal truths); ಹಲಕೆಲವುವಿಷಯಗಳಲ್ಲಿ ಅವರ ಅಭಿಪ್ರಾಯ-ಗಳು ಮತ್ತು ನೂತನ ಪರಿಶೋಧನೆಗಳು ಆಗಮ ನಿರ್ಣಯಗಳನ್ನು ಸಮರ್ಥಿಸುವ ದಿಕ್ಕಿನಲ್ಲಿ ಸಾಗಿವೆ. (Veering round to Agamic truths).

ವಿಜ್ಞಾನಿಗಳು ಉಪಯೋಗಿಸುವ ನಾನಾ ತೊಡಕಿನ (complicated) ಸೂಕ್ಷ್ಮಯಂತ್ರೋಪಕರಣಗಳು ಪ್ರತ್ಯಕ್ಷಕ್ಕೆ (ಇಂದ್ರಿಯಗಳಿಂದ ಹುಟ್ಟುವ ಜ್ಞಾನಕ್ಕೆ) ಸಹಕಾರಿಗಳೆಂಬುದು (aids to sense perception) ನಿಜ. ಆ ಉಪಕರಣಗಳಿಂದ ದೊರೆಯುವ ಮೂಲಭೂತ ಸಂಗತಿಗಳು (data) ಪ್ರತ್ಯಕ್ಷ ಸಿದ್ಧವೆಂದು ಹೇಳಬಹುದಾದರೂ, ಅವುಗಳನ್ನು ಆಧಾರವಾಗಿಟ್ಟುಕೊಂಡು, ವಿಜ್ಞಾನಿಗಳು ಅವುಗಳಿಂದ ತೆಗೆಯುವ ನಿರ್ಧಾರಗಳೆಂದು ನಿರೂಪಿಸುವ ಅಭಿಪ್ರಾಯಗಳು, ಅನುಮಿತಿಗಳೇ - ತರ್ಕದಿಂದುಂಟಾದ ಊಹೆಗಳೇ ಆಗಿರುತ್ತವೆ. ಗ್ರಹ - ನಕ್ಷತ್ರಾದಿಗಳ ದೂರ - ಸಂಚಾರ ವೇಗ - ಪರಿಮಾಣ

---

ವಿಚಿತ್ರಗಳನ್ನೂ ಮಾನವನು ಪ್ರತ್ಯಕ್ಷ ಕಾಣಬಹುದು. ಅವು ಆಗಮಗಳಲ್ಲಿ ಉಕ್ತವಾದ ಅಂಶಗಳನ್ನು ಸಮರ್ಥಿಸಬಹುದು ಅಥವಾ ಆಗಮೋಕ್ತಿಗಳ ಯಥಾರ್ಥವಾದ ತಾತ್ಪರ್ಯವನ್ನು ಗ್ರಹಿಸಲು ಸಹಾಯಕವಾಗಲೂಬಹುದು.

(Jules Verne) ಜೂಲ್ಸ್ ವರ್ನ್ ಎಂಬ ಕಾದಂಬರಿಕಾರನು 1865 ರಲ್ಲಿ ಭವಿಷ್ಯವನ್ನು ನುಡಿಯುವನಂತೆ, ಚಂದ್ರನನ್ನು ಸುತ್ತುವ ನೌಕೆಯನ್ನು ಕಲ್ಪಿಸಿ ಬರೆದ ಕಥೆಯು ಇಂದು ಸತ್ಯವಾಗಿದೆ. ಈ ಫ್ರೆಂಚ್ ಕತೆಗಾರನು 'ಭೂಲೋಕದಿಂದ ಚಂದ್ರಗ್ರಹಕ್ಕೆ' ಎಂಬ ಗ್ರಂಥದಲ್ಲಿ, ಕೇಪ್ ಕೆನಡಿಯಿಂದ ಡಿಸೆಂಬರ್ 1ಕ್ಕೆ ಅಂತರಿಕ್ಷ ನೌಕೆಯು ಹೊರಟು ಡಿಸೆಂಬರ್ 12 ರಂದು ಫೆಸಿಫಿಕ್ ಸಾಗರದಲ್ಲಿ ಇಳಿಯುವು- ದೆಂದೂ, ಚಂದ್ರನನ್ನು ಅದು 100 ಮೈಲಿ ದೂರದಿಂದ ಸುತ್ತುವುದೆಂದೂ, ಗಂಟೆಗೆ 25,000 ಮೈಲಿ ವೇಗದಲ್ಲಿ ಹೊರಡುವುದೆಂದೂ, ಈ ಕೊಳವೆಯು (ನೌಕೆಯ ಆಕಾರ) 12 ಅಡಿ ಎತ್ತರವಿರುವುದೆಂದೂ, ಅದರಲ್ಲಿ 3 ಜನರಿರುವರೆಂದೂ ಬರೆದಿರುವನು. ಈಗ ಈ ವಿವರಗಳು ಸಹ ಸ್ವಲ್ಪ ಹೆಚ್ಚು ಕಡಿಮೆ ಸತ್ಯವಾಗಿವೆ. 164ನೇ ಪುಟದ ಕೆಳಗೆ ನೋಡಿರಿ (Fancy cannot invent anything new).

ತೂಕಗಳು ಇತ್ಯಾದಿ ವಿವರಗಳನ್ನು ವಿಜ್ಞಾನಿಗಳು ನಿರ್ಧರಿಸುವುದರಲ್ಲಿ, ದೂರದರ್ಶಕ ಯಂತ್ರ (telescope), ರೇಡಿಯೋ ಅಲೆಗಳ ಪ್ರಸಾರ, ರೇಡಿಯೋ ಫೋಟೋಗಳು, ಕಿರಣ ವಿಶ್ಲೇಷಣದಿಂದ ದೊರೆಯುವ ಬಣ್ಣಗಳ ಸಮೂಹಗಳು (Spectra) ಇತ್ಯಾದಿಗಳಿಂದ ದೊರೆಯುವುದು, ತಮ್ಮ ತರ್ಕಗಳಿಗೆ ಆಧಾರವಾಗುವ ಕೆಲವು ಸಂಗತಿಗಳು (data) ಮಾತ್ರ-ಅಭಿಪ್ರಾಯಗಳು ಕೇವಲ ಅನುಮಾನ ಸಿದ್ಧವೇ ಎಂಬುದು ಸ್ಪಷ್ಟವಿದೆ. ಕೇವಲ ತರ್ಕವು ಸ್ವತಂತ್ರ ಪ್ರಮಾಣವಲ್ಲ. ಆದ್ದರಿಂದ ವಿಜ್ಞಾನಿಗಳು ಹೇಳುವುದೆಲ್ಲ ಪ್ರತ್ಯಕ್ಷಸಿದ್ಧವೆಂದು ತಿಳಿಯುವುದು ಸರಿಯಲ್ಲ. ಆದ್ದರಿಂದ ಇಂಥ ಅಭಿಪ್ರಾಯಗಳನ್ನು ವೇದವಾಕ್ಯಗಳು ವಿರೋಧಿಸುತ್ತವೆಂಬ ಕಾರಣದಿಂದ, ವೇದವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಸರ್ವಥಾ ಕಲ್ಪಿಸಬಾರದು.

ಭೂಮಿಯಲ್ಲಿರುವುವೆಂದು ಆಗಮಗಳಲ್ಲಿ ಹೇಳಲಾಗುವ ಮೇರು-ಪರ್ವತ, ಸಪ್ತದ್ವೀಪಗಳು, ಸಪ್ತಸಮುದ್ರಗಳು, ಪ್ರತ್ಯಕ್ಷಕ್ಕೆ ಯೋಗ್ಯವಸ್ತು-ಗಳಾಗಿದ್ದರೂ, ಗಂಟೆಗೆ ೧,೦೦೦ ಮೈಲಿ ವೇಗವುಳ್ಳ ವಿಮಾನಗಳಿಗೂ, ಅಂತರಿಕ್ಷದಲ್ಲಿ ಬಹು ಎತ್ತರದಲ್ಲಿ ಭೂಮಿಯನ್ನು ಸುತ್ತುವ ಮಾನವ ನಿರ್ಮಿತ ಉಪಗ್ರಹಗಳಿಗೂ (Satellites), ಗೋಚರವಾಗಿಲ್ಲ. ಉಪಗ್ರಹಗಳಲ್ಲಿರುವ ರೇಡಿಯೋ ಛಾಯಾಗ್ರಹಣ ಯಂತ್ರಗಳು ಮುಂತಾದ ಸೂಕ್ಷ್ಮ ಯಂತ್ರೋಪ-ಕರಣಗಳಿಂದ ದೊರೆಯುತ್ತಿರುವ ವರ್ತಮಾನಗಳು ಮತ್ತು ಭೂಮಿಯ ನಾನಾ ಮುಖ ಚಿತ್ರಗಳು, ಇವು ಯಾವುವನ್ನೂ ಸೂಚಿಸುವುದಿಲ್ಲ. ಆದ್ದರಿಂದ ಈ ವಿಷಯಕ ಆಗಮ ವಾಕ್ಯಗಳು ಅಪ್ರಮಾಣಗಳಲ್ಲವೇ ಎಂಬ ಪ್ರಬಲ ಸಂಶಯವುಂಟಾಗುವುದು ನಿಜ. ಈ ವಿಷಯವನ್ನು ಸೂಕ್ಷ್ಮ ವಿಮರ್ಶೆ-ಗೊಳಪಡಿಸುವುದು ಅವಶ್ಯಕ. ಹಾಗೂ, ಆಧುನಿಕ ಗಗನ ವಿಜ್ಞಾನ ಪ್ರವೀಣರು (space Scientists and Astronomers) ಭೂಮಿಯನ್ನು ಗಗನದಲ್ಲಿ ಸುತ್ತುವ ಒಂದು ಚಿಕ್ಕ ಗೋಳವೆಂದು ಹೇಳುತ್ತಾರೆ-ಸೂರ್ಯನ ಸುತ್ತಲೂ ನಿರ್ದಿಷ್ಟ ಪಥದಲ್ಲಿ ವರ್ಷಕ್ಕೊಂದಾವರ್ತಿ ಸುತ್ತುತ್ತಿರುವ ಉಪಗ್ರಹವೆನ್ನುತ್ತಾರೆ. ಭೂಮಿಯು ತನ್ನ ಅಕ್ಷದ ಮೇಲೆ ೨೪ ಗಂಟೆಗಳಲ್ಲಿ ಒಂದಾವರ್ತಿ ಸುತ್ತುವ

ಬೇರೊಂದು ವಿಧದ ಗತಿಯುಳ್ಳದ್ದೆಂದೂ ತಿಳಿಯುತ್ತಾರೆ. ಈ ಪ್ರಕಾರದ ಭೂಮಿಯ ಗತಿವಿಶೇಷಗಳಿಂದ, ಹಗಲು-ರಾತ್ರಿಗಳೂ, ಭೂಮಿಯ ಧ್ರುವ ಪ್ರದೇಶಗಳಲ್ಲಿ ಮತ್ತು ಅಕ್ಷಾಂಶ ರೇಖಾಂಶಗಳ ವೈವಿಧ್ಯವುಳ್ಳ ಭಿನ್ನ ಪ್ರದೇಶಗಳಲ್ಲಿ ವಿವಿಧ ಕಾಲಮಾನವುಳ್ಳ ಹಗಲು ರಾತ್ರಿಗಳೂ, ಋತು-ಭೇದಗಳೂ, ವಿಭಿನ್ನ ಹವಾಮಾನಗಳೂ ಸಂಭವಿಸುತ್ತವೆಂದೂ ಹೇಳುವರು. ವಿಜ್ಞಾನಿಗಳ ಈ ವಿವರಣೆಗಳನ್ನು ಅಂಗೀಕರಿಸದಿದ್ದರೆ ಪೂರ್ವೋಕ್ತಘಟನೆಗಳನ್ನು ನಿರ್ವಹಿಸುವುದು (ಯುಕ್ತಿಯುಕ್ತವಾಗಿ ವಿವರಿಸುವುದು) ದುಸ್ಸಾಧ್ಯವೆಂದೇ ತೋರುತ್ತದೆ. ವೇದ ಪುರಾಣಗಳಲ್ಲಿ ಈ ಘಟನೆಗಳ ವಿಸ್ತಾರವಾದ ವಿವರಣೆಗಳಿವೆ. ಅಲ್ಲಿ ಈ ಪೃಥ್ವಿಯ ಸಂಬಂಧವಾಗಿ ಭೂಗೋಳವೆಂಬ ಶಬ್ದದ ಪ್ರಯೋಗವಿದ್ದರೂ, ಆಕಾಶದಲ್ಲಿ ಸಂಚರಿಸುವ ಗೋಳವೆಂಬ ಅರ್ಥವು ತೋರುವುದಿಲ್ಲ. ನೀರಿನಲ್ಲಿ ತೇಲುವ ಚಂಡಿನಂತೆ ಅದರ ಮೇಲ್ಮೈ ದುಂಡನೆ (spherical) ಇದ್ದು, ತಟ್ಟೆಯಂತೆ ಮಂಡಲಾಕಾರವಾಗಿರುತ್ತದೆಂಬರ್ಥವು ತೋರುತ್ತದೆ. ಹೀಗಿರುವ ಪೃಥ್ವಿಯಲ್ಲಿ ಸಪ್ತದ್ವೀಪಗಳು, ಪ್ರತಿಯೊಂದೂ ಒಂದಕ್ಕಿಂತ ಒಂದು ಇಮ್ಮಡಿ ವಿಸ್ತಾರ-ವುಳ್ಳವುಗಳಾಗಿ ಅಷ್ಟೇ ವಿಸ್ತಾರದ, ಲವಣ, ಇಕ್ಷು, ಇತ್ಯಾದಿ ಸಪ್ತಸಮುದ್ರಗಳಿಂದ ಒಂದೊಂದು ದ್ವೀಪವೂ ಸುತ್ತುವರಿಯಲ್ಪಟ್ಟಿದೆ ಎಂದು ಹೇಳಲಾಗುತ್ತದೆ. ಮೇರುಪರ್ವತವೆಂಬುದು ಈ ಪೃಥ್ವಿಯ ಮಧ್ಯದಲ್ಲಿದ್ದು ೮೪,೦೦೦ ಯೋಜನ ಎತ್ತರವಾಗಿರುವುದೆಂದೂ, ಸಪ್ತದ್ವೀಪಗಳು ಒಂದಾದಮೇಲೆ ಮತ್ತೊಂದು ಸಪ್ತಸಮುದ್ರಗಳಿಂದ ವಿಭಕ್ತವಾಗಿ, ಒಂದೊಂದೂ ಮೇರುಪರ್ವತದ ಸುತ್ತಲೂ ಹಬ್ಬಿವೆಯೆಂದೂ, ಹೇಳಲಾಗುತ್ತದೆ. ಈ ಸಪ್ತದ್ವೀಪಗಳಲ್ಲಿರುವ ಪರ್ವತಗಳು, ನದಿಗಳು, ಪ್ರಜೆಗಳು ಅವರ ರೂಪ - ಧರ್ಮ - ಆಹಾರ - ಆಯುರ್ಮಾನ ಮುಂತಾದ ಬಹು ವಿಶೇಷಗಳೊಂದಿಗೆ ಪುರಾಣಗಳು ವಿವರಿಸುತ್ತವೆ. ಕಲ್ಪನಾತೀತವಾದ ಈ ವಿವರಗಳನ್ನು ಬುದ್ಧಿಯಿಂದ ಗ್ರಹಿಸುವುದು ಸಹ ಮಾನವನಿಗೆ ದುಸ್ಸಾಧ್ಯವಾಗಿರಲು, ಅವುಗಳ ಸತ್ಯತೆಯನ್ನು, ಪ್ರತ್ಯಕ್ಷಾದಿ ಆಗಮೇತರ ಪ್ರಮಾಣಗಳಿಂದ, ಕಾಣುವುದಂತೂ ಅಸಂಭವವೇ ಸರಿ. ಹಗಲು, ರಾತ್ರಿ, ಋತುಭೇದಗಳ ಸಂಭವ ಪ್ರಕಾರಗಳೂ ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ಸಪ್ತದ್ವೀಪಗಳು ಮತ್ತು ಸಪ್ತಸಮುದ್ರಗಳು ಪ್ರತ್ಯೇಕವಾಗಿ ಅಭಿಮಾನಿ

ದೇವತೆಗಳಿಂದ ಅಧಿಷ್ಠಿತವಾಗಿರುವುವೆಂದೂ, ಆಯಾ ದೇವತೆಗಳ ಸಮೇತ ನಿರೂಪಿಸಲ್ಪಡುವುದಾಗಿಯೂ ಆಗಮಗಳಲ್ಲಿ ಹೇಳಲಾಗುತ್ತದೆ. **ಪೃಥ್ವಿಯ ನಾನಾ ಭಾಗಗಳಲ್ಲಿ ಉದಯಾಸ್ತ ಕಾಲಗಳಲ್ಲಿ ಕಂಡುಬರುವ ವ್ಯತ್ಯಾಸಗಳನ್ನೂ, ಅವುಗಳ ಕಾರಣವನ್ನೂ ಹೇಳಲಾಗಿದೆ.** ಛಾಂದೋಗ್ಯೋಪನಿಷತ್ತಿನಲ್ಲಿ (ವೇದದಲ್ಲಿ) ಇವುಗಳ ವಿಸ್ತಾರ ನಿರೂಪಣೆಯು, ಕಾಲ ವಿಭಾಗಗಳಿಗೆ ಅಭಿಮಾನಿಗಳೆಂಬ ವಸು-ರುದ್ರ-ಆದಿತ್ಯಾದಿ ದೇವತೆಗಳ ಮಹಿಮೆ ಮತ್ತು ವ್ಯಾಪ್ತಿಗಳೊಂದಿಗೆ, ದೊರೆಯುತ್ತದೆ. ವೇದಾದಿ ಆಗಮಗಳಲ್ಲಿರುವ (ವೇದ - ಇತಿಹಾಸ - ಪುರಾಣಾದಿಗಳಲ್ಲಿರುವ) ಈ ಪ್ರತಿಪಾದನೆಗಳನ್ನು ಅನುಸರಿಸಿ ಅವುಗಳ ನಿಜವಾದ ಭಾವ(ಅರ್ಥ)ಗಳನ್ನು ಗ್ರಹಿಸಬೇಕಾದರೆ ಒಂದು ಮುಖ್ಯಾಂಶವನ್ನು ಗಮನದಲ್ಲಿಟ್ಟುಕೊಂಡಿರಬೇಕಾಗುತ್ತದೆ. ಅದೇನೆಂದರೆ:- ಮೂಲ ಪ್ರಕೃತಿ - ಸತ್ವ ರಜಸ್ತಮೋಗುಣಗಳು - ಮಹತ್ - ಅಹಂಕಾರ - ಮನಸ್ಸು - ಪೃಥಿವ್ಯಾದಿ ಪಂಚಭೂತಗಳು - ಶಬ್ದಾದಿ ಪಂಚಗುಣಗಳು (ತನ್ಮಾತ್ರೆಗಳು ಎಂದರೆ ಶಬ್ದ - ಸ್ಪರ್ಶ - ರೂಪ - ರಸ - ಗಂಧಗಳು) ಇವುಗಳನ್ನು ಗ್ರಹಿಸುವ ಶ್ರೋತ್ರಾದಿ ಪಂಚ ಇಂದ್ರಿಯಗಳು (ಶ್ರೋತ್ರ - ತ್ವಕ್ - ಚಕ್ಷು - ರಸನ - ಘ್ರಾಣಗಳು), ಈ ಎಲ್ಲ ತತ್ವಗಳು ಮತ್ತು ಇವುಗಳಿಂದ ಉತ್ಪನ್ನವಾದ ಅಸಂಖ್ಯ ಜಗದ್ವಸ್ತುಗಳೆಲ್ಲವೂ ಜಡ ಪದಾರ್ಥಗಳು. ಇವುಗಳಿಗೆ ಸ್ವತಂತ್ರ ಪ್ರವೃತ್ತಿ ಇಲ್ಲ - ಇಚ್ಛಾ ಜ್ಞಾನಾದಿಗಳಿಲ್ಲ. ಈ ಎಲ್ಲವೂ ಚೇತನ ಶಕ್ತಿಯ ಅಧೀನವಾಗಿಯೇ ಕೆಲಸಮಾಡತಕ್ಕವುಗಳು. ಈ ಎಲ್ಲ ತತ್ವಗಳನ್ನೂ ಸ್ವೇಚ್ಛಾನುಸಾರವಾಗಿ ನಿಯಂತ್ರಿಸಿ ಕಾರ್ಯ ಮಾಡಿಸುವವನು ಸರ್ವಶಕ್ತನೂ, ಸ್ವತಂತ್ರನೂ, ಸರ್ವಜ್ಞನೂ ಆದ ಈಶ್ವರನೇ ಆದರೂ ಆತನ ಅಧೀನರಾಗಿ, ಆತನ ಆಜ್ಞಾನುಸಾರವಾಗಿ, ಒಂದೊಂದು ತತ್ವವನ್ನೂ- ವಸ್ತುವನ್ನೂ ಅಥವಾ ಒಂದಕ್ಕಿಂತ ಹೆಚ್ಚಾದ ಬಹುತತ್ವಗಳನ್ನೂ ಅವುಗಳಿಂದ ಉತ್ಪನ್ನವಾದ ವಸ್ತುಗಳನ್ನೂ ನಿಯಂತ್ರಿಸುವ ಅನ್ಯ ಚೇತನರೂ ಇರುವರು. ಈ ಜಡವಿಶ್ವದ ಸೃಷ್ಟಿ, ಸ್ಥಿತಿ, ಲಯಾದಿಗಳಲ್ಲಿ ಉಪಯೋಗಿಸಲ್ಪಡುವ ಪೂರ್ವೋಕ್ತ ತತ್ವಗಳನ್ನು, ನಾವು ನಮ್ಮ ದೇಹವನ್ನು ನಮ್ಮದೆಂಬ ಅಭಿಮಾನದಿಂದ, ಇಚ್ಛಾನುಸಾರ ಉಪಯೋಗಿಸಿ ನಾನಾ ಕಾರ್ಯಗಳನ್ನು ಅದರಿಂದ ಮಾಡಿಸುವಂತೆ,

ತಮ್ಮ ಅಧೀನದಲ್ಲಿಟ್ಟುಕೊಂಡು, ಅವುಗಳಿಂದಾಗುವ ನಾನಾ ಕಾರ್ಯಗಳಿಗೆ ಕಾರಣರಾಗುವ ಚೇತನರು ತತ್ತ್ವಾಭಿಮಾನಿಗಳೆಂದು ಕರೆಯಲ್ಪಡುತ್ತಾರೆ – ದೇಹದಲ್ಲಿರುವ ಜೀವನು ದೇಹಾಭಿಮಾನಿಯೆಂದು ಕರೆಯಲ್ಪಡುವಂತೆ. ಜಡತತ್ತ್ವಗಳಿಂದ ನಿರ್ಮಿತವಾದ ವಸ್ತುಗಳಲ್ಲಿ ಪಂಚ-ಜ್ಞಾನೇಂದ್ರಿಯಗಳಿಗೆ ವಿಷಯವಾಗುವ ವಸ್ತುಗಳು ಸ್ಥೂಲವೆಂದೂ, ಹಾಗೆ ಗೋಚರಿಸದವುಗಳು ಸೂಕ್ಷ್ಮವೆಂದೂ ವ್ಯವಹರಿಸಲ್ಪಡುತ್ತವೆ. ಸ್ಥೂಲ ವಸ್ತುಗಳ ಅಭಿಮಾನಿಗಳಿಕ್ಕಿಂತ ಸೂಕ್ಷ್ಮವಸ್ತುಗಳ ಅಭಿಮಾನಿಗಳು ಉತ್ತಮರಾಗಿರುವರೆಂಬುದು ಯುಕ್ತಿ-ಯುಕ್ತವಲ್ಲವೇ? ಮನಸ್ಸು, ಅಹಂಕಾರ, ಮಹತ್, ಅವ್ಯಕ್ತ (ಮೂಲಪ್ರಕೃತಿ) ತತ್ತ್ವಗಳು ಒಂದಕ್ಕಿಂತ ಒಂದು ಸೂಕ್ಷ್ಮತರವಾದ ತತ್ತ್ವಗಳು, ಅವುಗಳ ಅಭಿಮಾನಿಗಳೂ ಒಬ್ಬರಕಿಂತ ಒಬ್ಬರು ಅಧಿಕರು. ಜಗದ್ವಸ್ತುಗಳ ಸೃಷ್ಟಿಗೆ ಕಾರಣವಾದ ಜಡತತ್ತ್ವಗಳೆಲ್ಲವೂ ಜಡಶಕ್ತಿಗಳು; ಅವುಗಳನ್ನು ಚೇಷ್ಟಿಸುವವರು ಅಭಿಮಾನಿ ಚೇತನರು. ಇವರೆಲ್ಲರೂ, ಕ್ಷುದ್ರವೂ ಅಶಾಶ್ವತವೂ ಆದ ಒಂದೊಂದು ಪ್ರಾಣಿ ದೇಹಮಾತ್ರದಲ್ಲಿದ್ದು, ಆ ದೇಹದ ಅಭಿಮಾನಿಯಾಗಿ ಅದನ್ನು ತನ್ನ ಇಚ್ಛಾನುಸಾರ ಉಪಯೋಗಿಸಿಕೊಳ್ಳುವ ಅಲ್ಪ ಯೋಗ್ಯತೆಯ ಚೇತನರಕಿಂತ ದೊಡ್ಡ ಯೋಗ್ಯತೆಯುಳ್ಳವರು–ಚೇತನ ಸ್ವರೂಪವಾದ ಜ್ಞಾನ, ಇಚ್ಛಾ, ಪ್ರಯತ್ನ (ಕ್ರಿಯಾಶಕ್ತಿ)ಗಳನ್ನು ಅಧಿಕ ಪ್ರಮಾಣದಲ್ಲಿ ಉಳ್ಳವರು. ಅಲ್ಪ ಚೇತನರ ದೇಹೇಂದ್ರಿಯಾದಿಗಳಲ್ಲಿರುವ ತಮ್ಮಿಂದ ಅಭಿಮನ್ಯಮಾನವಾದ (ತಮ್ಮ ಅಧೀನವಾದ) ತತ್ತ್ವಾಂಶಗಳಲ್ಲಿ ಅಂಶತಃ ಇದ್ದು ದೇಹಾಭಿಮಾನಿಗಳ ಯೋಗ್ಯತಾನುಸಾರ ಆ ತತ್ತ್ವಗಳನ್ನು ಪ್ರೇರಿಸಿ ಕಾರ್ಯ ಸಮರ್ಥಗಳನ್ನಾಗಿ ಮಾಡುವರು. ಹೀಗೆ, ವಿಲಕ್ಷಣಶಕ್ತಿಯುಳ್ಳ ಈ ತತ್ತ್ವಾಭಿಮಾನಿಗಳು ದೇವತೆಗಳೆಂದು ಕರೆಯಲ್ಪಡುತ್ತಾರೆ.[42] ಇವರೆಲ್ಲರೂ ಈ ಮೊದಲು ಹೇಳಿದಂತೆ

42. ಮನುಷ್ಯಾದಿ ದೇಹಗಳಲ್ಲಿರುವ ಮನ ಆದಿ ಇಂದ್ರಿಯಗಳನ್ನು ಆಕ್ರಮಿಸಿ, ದೇಹಾಭಿಮಾನಿ ಜೀವರನ್ನು, ಅವರ ಪೂರ್ವ ಕರ್ಮಾನುಸಾರ ಪಾಪಕಾರ್ಯಗಳಲ್ಲಿ ಪ್ರೇರಿಸುವ ದುಷ್ಟ ಚೇತನ ವರ್ಗವನ್ನು ತತ್ತ್ವಾಭಿಮಾನಿ ದೈತ್ಯರೆಂದು ಹೇಳುವರು. ಇವರ ಪ್ರಭಾವವು ತತ್ತ್ವಾಭಿಮಾನಿಗಳಾಗಿ ದೇಹದಲ್ಲಿರುವ (ಆಧ್ಯಾತ್ಮಗತ) ದೇವತೆಗಳ ಮೇಲೆ ನಡೆಯದು. ಆದರೆ ಆ ದೇವತೆಗಳ ಸ್ವದೇಹದಲ್ಲಿ ಮತ್ತು ಅವರ ಅವತಾರ ದೇಹಗಳಲ್ಲಿ ಕೆಲವು ವಿಶೇಷ ಸನ್ನಿವೇಶಗಳಲ್ಲಿ ಈ ದೈತ್ಯರ ಪ್ರಭಾವವು ನಡೆಯುವುದುಂಟು. ಮಹತ್ ತತ್ತ್ವಾಭಿಮಾನಿ ದೇವತೆಗಳಾದ ಉತ್ತಮ ದೇವತೆಗಳಲ್ಲಿ ಪ್ರವೇಶಿಸಲು ಅಥವಾ ಅವರ ಕೃತಿಗಳ ಮೇಲೆ ತಮ್ಮ ಪ್ರಭಾವವನ್ನು ಬೀರಲು, ಈ ಚೇತನರು ಸರ್ವಥಾ ಅಸಮರ್ಥರೆಂದು ಹೇಳಲಾಗುತ್ತದೆ.

ಈಶ್ವರಾಧೀನರಾಗಿಯೇ ತತ್ವಗಳ ನಿಯಾಮಕರಾಗಿ ಕೆಲಸ ಮಾಡುವರು. ಮೇಲೆ ಮೇಲಿನ ತತ್ವಗಳು ಮತ್ತು ಅಭಿಮಾನಿ ದೇವತೆಗಳು ಕೆಳತತ್ವಗಳ ಹಾಗು ಅಭಿಮಾನಿಗಳಿಂತ, ಅಧಿಕವಾದ ವಿಸ್ತಾರವಾದ ವ್ಯಾಪ್ತಿ ಮತ್ತು ಸಾಮರ್ಥ್ಯ-ವುಳ್ಳವರು. ಭೂಮಿ, ಅಂತರಿಕ್ಷ, ಗ್ರಹ ನಕ್ಷತ್ರಾದಿಗಳೂ, ಭೂಮಿಯ ಏಕದೇಶಗಳಾದ ಸಪ್ತದ್ವೀಪಗಳು-ಮೇರು ಮೊದಲಾದ ಪರ್ವತಗಳು-ಗಂಗಾದಿ ನದಿಗಳು-ತೀರ್ಥಕ್ಷೇತ್ರಗಳೂ ಪ್ರತ್ಯೇಕವಾಗಿ ತಂತಮ್ಮ ಅಭಿಮಾನಿ ದೇವತೆಗಳುಳ್ಳವುಗಳೆಂದು ಆಗಮಗಳು ಸಾರುತ್ತವೆ. ಹಗಲು ರಾತ್ರಿಗಳು, ಪಕ್ಷ, ಮಾಸ, ಸಂವತ್ಸರಾದಿ ಕಾಲ ವಿಭಾಗಗಳಿಗೂ ಪ್ರತ್ಯೇಕ ಅಭಿಮಾನಿಗಳಿರುವರು. ಮಹದಾದಿ ತತ್ವಗಳಿಗೆ ಅಭಿಮಾನಿಗಳಾದ ದೇವತೆಗಳಿಗಿಂತ, ಆ ತತ್ವಗಳ ವಿಕಾರ ಪರಿಣಾಮಗಳಾದ ಸ್ಥೂಲ ಪದಾರ್ಥಗಳ ಏಕದೇಶಗಳಿಗೆ (ಪರ್ವತ-ನದೀ ಇತ್ಯಾದಿ ಒಂದೊಂದು ವಸ್ತು ವಿಶೇಷಗಳಿಗೆ) ಅಭಿಮಾನಿಗಳಾದವರು ತಾರತಮ್ಯದಲ್ಲಿ ಅವರರೆಂದೂ (ಕಡಿಮೆಯಾದವರೆಂದೂ) ಹೇಳಲಾಗುತ್ತದೆ.[43] ಪ್ರಕೃತ, ವಿಜ್ಞಾನಿಗಳ (Scientist) ನಿರ್ಧಾರಗಳನ್ನು ವಿರೋಧಿಸುವಂತೆ ತೋರುವ ಆಗಮಗಳಲ್ಲಿ ಕಂಡುಬರುವ, ಭೂಗೋಳ-ಖಗೋಳ ವಿಷಯಕ ನಿರೂಪಣೆಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು, ಈ ಅಭಿಮಾನಿಗಳ ತಾರತಮ್ಯ, ಮಹಿಮೆ, ವ್ಯಾಪ್ತಿಗಳ ಜ್ಞಾನವೂ ಅವಶ್ಯಕವಾಗುತ್ತದೆ- ಸಂಸ್ಕೃತ ಸಾಹಿತ್ಯದಲ್ಲಿ ಗಾಢವಾದ ಪಾಂಡಿತ್ಯವಂತೂ ಬೇಕೇ ಬೇಕು. ಚಂದ್ರ ಸೂರ್ಯಾದಿ ಗ್ರಹಗಳ ಅಂತರ (ಭೂಮಿಯಿಂದಾಗುವ ದೂರ), ಪರಿಮಾಣ, ಸಂಚಾರ ಕ್ರಮಗಳು; ಸಪ್ತದ್ವೀಪ-ಸಪ್ತಸಾಗರಗಳು ಇತ್ಯಾದಿಗಳ ವರ್ಣನೆಗಳು ಮಾನವನ ಕಲ್ಪನೆಗೂ ನಿಲುಕದಷ್ಟು ಅಚಿಂತ್ಯವೂ, ಅದ್ಭುತವೂ ಆಗಿವೆ. ಹೀಗಿರುವಾಗ, ಈ ಸಂಬಂಧವಾದ ಆಗಮ ವಾಕ್ಯಗಳು, ವಿಜ್ಞಾನಿಗಳ ಅಭಿಪ್ರಾಯಗಳನ್ನು ವಿರೋಧಿಸುವುದರಿಂದ, ಅಪ್ರಮಾಣಗಳೆಂದು ಭಾವಿಸಿ, ಈ ಕಾರಣದಿಂದ ಎಲ್ಲ ವೇದಾದಿ ಆಗಮಗಳಿಗೂ ಅಪ್ರಾಮಾಣ್ಯವನ್ನು ತಿಳಿಯುವುದು ಮೂರ್ಖತನದ ಪರಮಾವಧಿ ಎನಿಸಲಾರದೇ?

43. ಈ ದೇವತಾ ತಾರತಮ್ಯ ಮೊದಲಾದ ಆಗಮಗಳಿಂದ ಸಿದ್ಧವಾಗುವ ಪ್ರಮೇಯ-ಗಳನ್ನೂ ಮತ್ತು ಅವುಗಳ ಉಪಪನ್ನತೆಯನ್ನೂ ಮುಂದಿನ 3ನೇ ರತ್ನದಲ್ಲಿ ವಿಸ್ತಾರವಾಗಿ ವಿವೇಚಿಸಿ ನಿರೂಪಿಸಲಾಗುತ್ತದೆ.

ಯೋಗಿ ಪ್ರತ್ಯಕ್ಷ ಸಿದ್ಧವಾದ ಪ್ರಮೇಯಗಳನ್ನು ಆಗಮಗಳು ನಿರೂಪಿಸುತ್ತವೆಂದು ಹೇಳಲಾಗುತ್ತದೆ. ಯೋಗಸಿದ್ಧರ ಪ್ರತ್ಯಕ್ಷವು ನಮ್ಮ ಪ್ರತ್ಯಕ್ಷದಂತಲ್ಲ- ಅತೀಂದ್ರಿಯಗಳಾದ ಬಹು ಸೂಕ್ಷ್ಮ ವಿಷಯಗಳನ್ನು ಗ್ರಹಿಸುವ ಸಾಮರ್ಥ್ಯ-ವುಳ್ಳದ್ದು.[44] ಈ ಸಂದರ್ಭದಲ್ಲಿ ಬ್ರಹ್ಮಾಂಡ ಪುರಾಣದ ಕೆಲವು ವಾಕ್ಯಗಳನ್ನು ಇಲ್ಲಿ ಉದಾಹರಿಸಬಹುದು. ಪರ್ಯಾಯಂ ಪರಿಮಾಣಂ ಚ ಗತಿಂ ಚಂದ್ರಾರ್ಕಯೋಸ್ತಥಾ । ಏತತ್ಪ್ರಬ್ರೂಹಿ ನಃ ಸರ್ವಂ ವಿಸ್ತರೇಣ ಯಥಾರ್ಥತಃ ॥ ಚಂದ್ರ ಸೂರ್ಯರು ಸುತ್ತುವ ಮಾರ್ಗವನ್ನೂ, ಅವರ ಪರಿಮಾಣ (ವಿಸ್ತಾರ ಆಯಾ-ಮಂಡಲಾದಿಗಳ ಅಳತೆಗಳನ್ನೂ) ಇತ್ಯಾದಿ ಸರ್ವವನ್ನೂ ಇದ್ದಂತೆ ಸರಿಯಾಗಿ ಹೇಳಿರಿ (ಅ. ೧೫-೩) ಪ್ರಶ್ನೆ ಮಾಡಿದ ವಸಿಷ್ಠಾದಿ ಋಷಿಗಳಿಗೆ ವಾಯುದೇವರ ಉತ್ತರ :- ತೇಷಾಂ ಮನುಷ್ಯಾಸ್ತರ್ಕೇಣ ಪ್ರಮಾಣಾನಿ ಪ್ರಚಕ್ಷತೇ । ಅಚಿಂತ್ಯಾಃ ಖಲುಯೇಭಾವಾಃ ನ ತಾಂಸ್ತರ್ಕೇಣ ಸಾಧಯೇತ್ ॥ (ಅ. ೧೫-೭)- ಮನುಷ್ಯರು ಈ ಪ್ರಶ್ನೆಗಳಿಗೆ ತರ್ಕದಿಂದ ಪ್ರಮಾಣಗಳನ್ನು ಹೇಳುತ್ತಾರೆ; ಅಚಿಂತ್ಯ ವಸ್ತುವಿಷಯಗಳನ್ನು ತರ್ಕದಿಂದ ಸಾಧಿಸಕೂಡದು. ಪ್ರತ್ಯಕ್ಷಮಪಿ ದೃಶ್ಯಂ ಚ ಸಂಮೋಹಯತಿ ಯತ್ಪ್ರಜಾಃ (ಅ. ೨೨-೩)- ಪ್ರತ್ಯಕ್ಷದಿಂದ ಕಾಣಲ್ಪಡುವುದಾದರೂ (ಆ ತರ್ಕಸಾಧಿತ ನಿರ್ಣಯಗಳು) ಪ್ರಜೆಗಳ ಬುದ್ಧಿಯನ್ನು ಮೋಹಿಸುತ್ತವೆ; (ಯಥಾರ್ಥ್ಯವನ್ನು ತಿಳಿಯಲಾರರು). ಸಪ್ತದ್ವೀಪ ಸಮುದ್ರಾಯಾಃ ವಿಸ್ತಾರೋ ಮಂಡಲಂ ಚ ಯತ್ । ತದ್ವಕ್ಷ್ಯಾಮಿ ಸಮಾಖ್ಯಾಯ ಸಾಂಪ್ರತ್ಯೈರಭಿಮಾನಿಭಿಃ। - ತಸ್ಮಾತ್ತು ಸಾಂಪ್ರತ್ಯೈರ್ದೇವೈರ್ವಕ್ಷ್ಯಾಮಿ ವಸುಧಾತಲಂ - ಸಪ್ತದ್ವೀಪ ಸಮುದ್ರಗಳ ವಿಸ್ತಾರ ಸುತ್ತಳತೆಗಳನ್ನು, ಅವುಗಳ ಈಗಿನ ಅಭಿಮಾನಿ ದೇವತೆಗಳ ಸಮೇತವಾಗಿ ಹೇಳುತ್ತೇನೆ; (ಹಿಂದಿನ ಕಲ್ಪದ ಅಭಿಮಾನಿಗಳ ಸಮಾನ ನಾಮರೂಪಗಳುಳ್ಳ) ಈ ಭೂತಲವನ್ನು ಅಧಿಷ್ಠಿಸಿರುವ ಈಗಿನ ಅಭಿಮಾನಿ ದೇವತೆಗಳಿಂದ ಸಹಿತವಾಗಿ ನಿರೂಪಿಸುತ್ತೇನೆ. ಭಾರತಾಸ್ಯಾಸ್ಯ ವರ್ಷಸ್ಯ ನವ-ಭೇದಾನ್ನಿಬೋಧತ । ಸಮುದ್ರಾಂತರಿತಾಜ್ಞೇಯಾಸ್ತೇಸ್ತ್ವಗಮ್ಯಾಃ ಪರಸ್ಪರಮ್ ॥ (ಅ. ೧೬-೮) -

44. ಅರ್ಜುನನು ಶ್ರೀಕೃಷ್ಣನ ವಿಶ್ವರೂಪವನ್ನು ಕಂಡಂತೆ ಯುದ್ಧರಂಗದಲ್ಲಿದ್ದ ಸರ್ವರ ಪ್ರತ್ಯಕ್ಷಕ್ಕೆ ಅದು ಗೋಚರಿಸಲೇ ಇಲ್ಲ.

ಭಾರತವರ್ಷದ ಒಂಭತ್ತು ವಿಭಾಗಗಳನ್ನು ತಿಳಿಯಿರಿ; ಅವು ಸಮುದ್ರಗಳಿಂದ ಪ್ರತ್ಯೇಕಿಸಲ್ಪಟ್ಟು ಪರಸ್ಪರ ಅಗಮ್ಯಗಳಾಗಿವೆ. ಪ್ರತ್ಯಕ್ಷೇಣಾನುಮಿತ್ಯಾವಾ ಯಸ್ತೂಪಾಯೋ ನ ಬುಧ್ಯತೇ । ಏತಂ ವಿಂದಂತಿ ವೇದೇನ ತಸ್ಮಾದ್ವೇದಸ್ಯ ವೇದತಾ । ಪ್ರತ್ಯಕ್ಷ ಮತ್ತು ಅನುಮಾನಗಳಿಂದ ತಿಳಿಯಲು ಸಾಧ್ಯವಾಗದ ಅಲೌಕಿಕ ವಿಷಯಗಳನ್ನು ತಿಳಿಸಿಕೊಡುವುದೇ ವೇದಗಳ ವೇದತ್ವವೆಂದು, ವೇದ ಲಕ್ಷಣವು ಹೇಳಲ್ಪಡುತ್ತದೆ. ಇತ್ಯಾದಿ ವರ್ಣನೆಗಳನ್ನು ಲಕ್ಷಿಸಿದರೆ, ಆಗಮೋಕ್ತ ಜಗದ್ವಿವರಣೆಗಳನ್ನು ಬುದ್ಧಿಯಿಂದ ಗ್ರಹಿಸುವುದು ಸಹ ಬಹು ಕಷ್ಟಸಾಧ್ಯವೆಂದು ತಿಳಿದುಬರುತ್ತದೆ. ಆ ವಿವರಣೆಗಳ ಯಥಾರ್ಥವನ್ನು ವಿಶಿಷ್ಟಾಧಿಕಾರಿಗಳು ಮಾತ್ರ ತಿಳಿಯಬಲ್ಲರು. ಹೀಗಿರುವಲ್ಲಿ ಆಧುನಿಕ ವಿಜ್ಞಾನಿಗಳ ಪರಿಶೋಧನೆ-ಗಳಿಂದ ಸಿದ್ಧವಾದವುಗಳೆಂಬ ನಿರ್ಣಯಗಳೊಂದಿಗೆ ತುಲನ ಮಾಡುವುದಾಗಲಿ ಸಮನ್ವಯಗೊಳಿಸುವುದಾಗಲಿ ದುಸ್ಸಾಧ್ಯವೇ ಸರಿ. ಭೂಗೋಳ-ಖಗೋಳ ವಿಷಯಕವಾದ ಆಗಮ-ವಿಜ್ಞಾನಗಳಲ್ಲಿ ತೋರುವ ವಿರೋಧಗಳನ್ನು ಸಮರ್ಪಕವಾಗಿ ಪರಿಹರಿಸಲು ಉಭಯ ಶಾಸ್ತ್ರಗಳ (ಆಗಮ-ವಿಜ್ಞಾನಗಳ) ಅದ್ವಿತೀಯ ಪಾಂಡಿತ್ಯವಿರಬೇಕು. ಆಗಮ ಪ್ರವೀಣರನ್ನೂ, ವೈಜ್ಞಾನಿಕ ಪ್ರವೀಣರನ್ನೂ ಮತ್ತು ಉಭಯ ಶಾಸ್ತ್ರಪ್ರವೀಣರನ್ನೂ ಒಳಗೊಂಡ, ಸಮಿತಿ-ಯೊಂದನ್ನು ರಚಿಸಿ, ಕುಟುಂಬಭರಣ ಮುಂತಾದ ಲೌಕಿಕ ಹವ್ಯಾಸವನ್ನು ತೊರೆದು, ಪರಿಶೋಧನ ಕಾರ್ಯದಲ್ಲಿ (research) ತದೇಕಚಿತ್ತರಾಗಿ ತೊಡಗಲು ಅವಶ್ಯಕವಾದ ಎಲ್ಲ ಸೌಕರ್ಯಗಳನ್ನೂ ಸಮಿತಿಯ ಸದಸ್ಯರಿಗೆ ಒದಗಿಸಿಕೊಟ್ಟಲ್ಲಿ, ವೈಜ್ಞಾನಿಕ ಪ್ರಗತಿಯಿಂದ ಆಗಮ ಪ್ರಾಮಾಣ್ಯ ವಿಷಯದಲ್ಲಿ ಉದ್ಭವಿಸಿ ಹರಡುತ್ತಿರುವ ಪ್ರಬಲ ಸಂಶಯಗಳನ್ನು ತರುಣರ ಮನಸ್ಸಿನಿಂದ ದೂರಮಾಡಿ ಆಸ್ತಿಕ್ಯವನ್ನು (ಆಸ್ತಿಕ್ಯದ ಮೂಲಾಧಾರವಾದ ವೇದಾದಿ ಆಗಮ ಪ್ರಾಮಾಣ್ಯವನ್ನು) ರಕ್ಷಿಸಬಹುದು. ಈ ದಿಕ್ಕಿನಲ್ಲಿ ವಿಶೇಷ ಪ್ರಯತ್ನಗಳನ್ನು ನಡೆಸಬೇಕಾದ ತುರ್ತು ಪರಿಸ್ಥಿತಿ (emergency) ಯೊದಗಿದೆ ಎಂಬುದನ್ನು ನಮ್ಮ ದೇಶದ ಜ್ಞಾನ ಜ್ಯೇಷ್ಠರೂ, ಹಿರಿಯರೂ, ಆಸ್ತಿಕ್ಯ ಬುದ್ಧಿಯುಳ್ಳ ಶ್ರೀಮಂತರೂ ಮನಗಾಣಬೇಕು. ಹಾಗಾಗಲೆಂದು ದೇವರಲ್ಲಿ ಪ್ರಾರ್ಥಿಸು-ವುದೊಂದೇ ನನ್ನ ಭಾಗದ ಯತ್ನ ಮತ್ತು ಕರ್ತವ್ಯ-ಅದಕ್ಕಿಂತ ಹೆಚ್ಚಿನದೇನನ್ನೂ

ಮಾಡಲು ಅಸಮರ್ಥನಾಗಿದ್ದೇನೆ. ಎಲ್ಲ ತತ್ವಜ್ಞಾನಾರ್ಥಿಗಳೂ ಈ ವಿಷಯದ ಹಂಬಲವುಳ್ಳವರೆಂದು ಭಾವಿಸಿದ್ದೇನೆ. ವೇದಪ್ರಾಮಾಣ್ಯವೆಂಬ ಜ್ಞಾನ-ಸೂರ್ಯನಿಗೆ ಕವಿದಿರುವ ಮೋಡಗಳನ್ನು ಓಡಿಸಿ, ಎಂದಿನಂತೆ ವೇದಪ್ರಮಾಣ-ಬುದ್ಧಿಯು ಸಜ್ಜನರಲ್ಲಿ ಪ್ರತಿಷ್ಠಿತವಾಗುವಂತೆ ಯತ್ನಿಸಬೇಕಾದುದು ಪ್ರಜಾ-ಪ್ರಮುಖರ ಹಾಗೂ ಧರ್ಮಾಧಿಕಾರಿಗಳ ಮತ್ತು ವಿದ್ಯಾಪರಿಣತರ ಮುಖ್ಯ ಕರ್ತವ್ಯವಾಗಿದೆ. ಈ ದಿಕ್ಕಿನಲ್ಲಿ ದುಡಿಯಲು ಈಗಾಗಲೇ ಉತ್ತರ ಭಾರತದಲ್ಲಿ ಒಂದೆರಡು ಸಂಸ್ಥೆಗಳು ಏರ್ಪಟ್ಟು ಕಾರ್ಯದಲ್ಲಿ ತೊಡಗಿರುತ್ತವೆಂಬುದು ಆಶಾದಾಯಕವಾಗಿದೆ.

ವೈಜ್ಞಾನಿಕ ಪ್ರಗತಿಯಿಂದ ಆಸ್ತಿಕ ಮತಗಳಿಗೆ (ಅವುಗಳ ಮೂಲಾಧಾರ-ವಾದ ಆಗಮ ಪ್ರಾಮಾಣ್ಯಕ್ಕೆ) ಆಘಾತವುಂಟಾಗಿ (ದೊಡ್ಡ ಪೆಟ್ಟು ಬಿದ್ದಂತಾಗಿ) ಗಂಭೀರ ಪರಿಸ್ಥಿತಿಯೊಂದು ಏರ್ಪಟ್ಟಿದ್ದರೂ, ನಿರಾಶೆಗೊಳ್ಳಲು ಕಾರಣವಿಲ್ಲ. ಈ ಹಿಂದೆ ನಿರೂಪಿಸಿದಂತೆ, ವೇದಗಳು ನಿತ್ಯ ಮತ್ತು ಅಪೌರುಷೇಯಗಳಾದ್ದರಿಂದ ಶ್ರೇಷ್ಠವಾದ ನಿರ್ದುಷ್ಟಪ್ರಮಾಣಗಳಾಗಿವೆ. ವೇದಾನುಸಾರಿಗಳಾದ ಇತಿಹಾಸ ಪುರಾಣಗಳೂ (ಪೌರುಷೇಯ ಆಗಮಗಳೂ) ಸ್ವತಃ ಪ್ರಮಾಣಗಳೇ. ವಿಜ್ಞಾನ-ದಿಂದ ಪ್ರಾಪ್ತವಾಗಿರುತ್ತವೆಂಬ ವಿರೋಧಗಳು ವಿರೋಧಗಳೇ ಅಲ್ಲ-ವಿರೋಧಾಭಾಸಗಳು. (ವಿರೋಧಗಳಂತೆ ತೋರುತ್ತವೆ ಮಾತ್ರ). ಆದರೂ ಅವು ನಾನಾ ಪ್ರಕಾರದ ಸಂಶಯಗಳಿಗೆ ಎಡೆಗೊಡುವುದರಿಂದ, ಆ ಸಂಶಯಗಳ ಪರಿಹಾರವನ್ನು ಕಂಡುಕೊಳ್ಳಲೇಬೇಕು. ಆಗಮಗಳಲ್ಲಿ ಪ್ರಾಮಾಣ್ಯಬುದ್ಧಿಯು ಅತ್ಯಂತ ದೃಢವಾಗಿರಬೇಕು - ಸಾಮಾನ್ಯಾಕಾರದ ಪ್ರಾಮಾಣ್ಯಬುದ್ಧಿಯು ಮೋಕ್ಷಸಾಧನ ಮಾರ್ಗದಲ್ಲಿ ನೇರವಾಗಿ ದೃಢವಾದ ಹೆಜ್ಜೆಗಳಿಂದ ಮುಂದುವರಿಯಲು ಸಾಕಾಗದು (ಪರ್ಯಾಪ್ತವಲ್ಲ)-ಅಂಧಶ್ರದ್ಧೆಯಂತೂ ನಿರುಪಯುಕ್ತವೇ ಸರಿ. ಪೂರ್ವೋಕ್ತ ಸಂಶಯಗಳನ್ನು ನಿವಾರಿಸಿಕೊಳ್ಳಲು ವೈಜ್ಞಾನಿಕ ಅಭಿಪ್ರಾಯಗಳನ್ನೂ ತದ್ವಿಷಯಕ ಆಗಮ ಭಾಗಗಳನ್ನೂ ನಿಷ್ಪಕ್ಷಪಾತ ದೃಷ್ಟಿಯಿಂದ ತೀವ್ರ ವಿಮರ್ಶೆಗೊಳಪಡಿಸಬೇಕು. ಆಗಮೋಕ್ತ ವಿಷಯಗಳನ್ನು ವಿವೇಚಿಸುವಾಗ, ಈಶ್ವರಾದಿ ಅತೀಂದ್ರಿಯ ಮತ್ತು ಚಿದಾತ್ಮಕ ವಸ್ತುಗಳೇ ಇಲ್ಲ-ಮಾನವನು ಅಜ್ಞಾನಾವಸ್ಥೆಯಲ್ಲಿದ್ದಾಗ

ಕಂಡ ಕಂಡ ವಸ್ತುಗಳನ್ನು ದೇವತೆಗಳೆಂದು ಪೂಜಿಸುವ ಮೂಢ ನಂಬಿಕೆಯಿಂದ ಬಡಬಡಿಸಿದ ವಾಕ್ಯಗಳೇ ಆಗಮಗಳು, ಇತ್ಯಾದಿ ನಾಸ್ತಿಕ ಭಾವನೆಯಿಂದ ಯುಕ್ತವಾದ ದೃಷ್ಟಿಯಾಗಲಿ. ಆಗಮಗಳು ಪ್ರಮಾಣಗಳಲ್ಲವೆಂಬ ಪೂರ್ವಾಗ್ರಹವಾಗಲಿ, ಇರಕೂಡದು. ಕಿಂತು, ಸತ್ಯಾನ್ವೇಷಿಗಳಿಗೆ ಮಾರ್ಗಪ್ರದರ್ಶನ ಮಾಡಲು ಪ್ರವೃತ್ತವಾದ ಗ್ರಂಥಗಳೆಂಬ ಪೂಜ್ಯಬುದ್ಧಿ ಮತ್ತು ಆದರಗಳಿರಬೇಕು. ಹೀಗೆಯೇ, ವೈಜ್ಞಾನಿಕ ಅಭಿಪ್ರಾಯಗಳನ್ನು ವಿವೇಚಿಸುವಾಗಲೂ, ವಿಜ್ಞಾನಿಗಳ ಪ್ರಾಮಾಣಿಕತನ, ಸತ್ಯಶೋಧನೆಯಲ್ಲಿರುವ ಉತ್ಸಾಹ, ಅದ್ಭುತ ಊಹಾಪೋಹ ಶಕ್ತಿ ಸಾಮರ್ಥ್ಯಗಳು, ತರ್ಕಬದ್ಧವಾದ ವಿಮರ್ಶನ ಮಾರ್ಗ, ತಮ್ಮ ನಿರ್ಧಾರಗಳನ್ನು ಪ್ರತಿ ಘಟ್ಟದಲ್ಲಿ ಪರೀಕ್ಷೆಗೊಳಪಡಿಸಿ ದೃಢಪಡಿಸಿಕೊಳ್ಳುವ ಪದ್ಧತಿ ಇತ್ಯಾದಿ ಗುಣಗಳಲ್ಲಿ ಗೌರವಬುದ್ಧಿಯುಳ್ಳವರಾಗಿರಬೇಕು. ತಪ್ಪು ಮಾರ್ಗವನ್ನು ಹಿಡಿದಿರುವ ನಾಸ್ತಿಕರೆಂಬ ತಿರಸ್ಕಾರ ಬುದ್ಧಿಯಾಗಲಿ, ಚಂದ್ರಲೋಕದಲ್ಲಾದರೂ ಇಳಿಯಲಿ, ವಿಶ್ವವನ್ನೇ ಸುತ್ತಿಬರಲಿ ನಮಗೇನಾಗಬೇಕೆಂಬ ಉದಾಸೀನತೆಯಾಗಲಿ ಇರಕೂಡದು. ಮಾನವ ಸಮಾಜದಲ್ಲಿ (ಜಗತ್ತಿನಲ್ಲಿ) ಕಾಲಕಾಲಕ್ಕೆ ಉಂಟಾಗುವ ಕ್ರಾಂತಿಕಾರಕ ಪ್ರಗತಿಗಳನ್ನು ದುರ್ಲಕ್ಷಿಸುವುದು ಯುಕ್ತವಲ್ಲ-ಸಾಧ್ಯವೂ ಇಲ್ಲ. ಈ ಮುಂತಾದ ಕಾರಣಗಳಿಂದ ಪೂರ್ವೋಕ್ತ ಸಂಶಯಗಳ ಪರಿಹಾರಕ್ಕಾಗಿ ಸಾವಧಾನ ಮನಸ್ಕರಾಗಿ ನಿಷ್ಪಕ್ಷಪಾತ ಬುದ್ಧಿಯಿಂದ, ಉಭಯ ಶಾಸ್ತ್ರ ಪಾಂಡಿತ್ಯರಹಿತರಾದ ಜಿಜ್ಞಾಸುಗಳಾದ ಸಾಮಾನ್ಯ ವಿವೇಕಿಗಳೂ ವಿಮರ್ಶಿಸಬಹುದಾದ ಮಾರ್ಗವನ್ನು ಸೂಚಿಸಲಿಕ್ಕಾಗಿ ಈ ಮುಂದೆ ಕೆಲವು ವಿರೋಧಾಂಶಗಳನ್ನು ನಿದರ್ಶನಾರ್ಥವಾಗಿ ವಿವೇಚಿಸಲಾಗುತ್ತದೆ.

ಭೂಮಿಯು ಮಂಡಲಾಕಾರವಾದ (ತಟ್ಟೆಯಂತೆ ದುಂಡಗಿರುವ) ಅಚಲ ವಸ್ತುವೆಂದೂ ಅದರ ಮೇಲ್ಭಾಗವು ವರ್ತುಲದ ಒಂದು ತುಂಡಿನಂತೆ (arc) ಬಗ್ಗಿದ್ದು, ನೀರಿನಲ್ಲಿ ತೇಲುವ ಗೋಳದಂತೆ ಇರುವುದೆಂದೂ ಆಗಮಗಳು ಹೇಳುವಂತೆ ತೋರುತ್ತದೆ.[45] ಆಧುನಿಕ ಖಗೋಳ ಶಾಸ್ತ್ರದಂತೆ (modern

45 ಭೂಮ್ಯಾದಿ ಲೋಕಗಳು, ಗ್ರಹನಕ್ಷತ್ರಾದಿಗಳು ಮತ್ತು ಅವು ಸುತ್ತುವ ಪಥಗಳು ಇತ್ಯಾದಿಗಳನ್ನು ವಿವರಿಸುವ ವೇದಭಾಗಗಳ ನಿರ್ಣೀತಾರ್ಥಗಳನ್ನು ನಿರುಕ್ತ

astronomy) ಅದು, ಇತರ ಗ್ರಹಗಳಂತೆ ಆಕಾಶದಲ್ಲಿ ತೇಲುತ್ತ ಸುತ್ತುವ ಒಂದು ಗೋಳಾಕಾರದ ಗ್ರಹ. ಅದು ೨೪ ಗಂಟೆಗಳಲ್ಲಿ ಒಂದಾವರ್ತಿ ತನ್ನ ಅಕ್ಷದ ಮೇಲೂ ವರ್ಷಕ್ಕೊಂದಾವರ್ತಿ ಸೂರ್ಯನ ಸುತ್ತಲೂ ಸುತ್ತುತ್ತದೆ. ಸೂರ್ಯನು ತನ್ನನ್ನು ಸುತ್ತುವ ಭೂಮಿ ಮತ್ತು ಇತರ ತನ್ನ ಉಪಗ್ರಹಗಳ ಸಮೇತ ಧ್ರುವನಕ್ಷತ್ರದ ಸುತ್ತಲೂ ಸುತ್ತುವನೆಂದೂ ಹೇಳಲಾಗುತ್ತದೆ.[46] ಪ್ರಕೃತ, ಭೂಮಿಯು ಆಕಾಶದಲ್ಲಿ ಸೂರ್ಯನನ್ನು ಸುತ್ತುವ ಗೋಳವೆಂಬುದ-ರಿಂದ ಆಗಮಗಳಿಗೆ ತೋರುವ ವಿರೋಧವನ್ನು ವಿಮರ್ಶಿಸೋಣ.

(Modern Astronomy) ಖಗೋಳ ವಿಜ್ಞಾನವು ಕಳೆದ ಒಂದೆರಡು ಸಹಸ್ರ ವರ್ಷಗಳಿಂದ ಮಂದಗತಿಯಿಂದ ಪ್ರಗತಿಗೊಳ್ಳುತ್ತಾ, ಈ ಹಿಂದಿನ ೫೦ ವರ್ಷಗಳಲ್ಲಿ ಅದ್ಭುತ ಪ್ರಗತಿಯನ್ನು ಸಾಧಿಸಿದೆ. ಈಗಿರುವಂತೆ ಅದನ್ನು ರೂಪಿಸುವುದರಲ್ಲಿ ಪಾಶ್ಚಾತ್ಯ ವಿಜ್ಞಾನಿಗಳು ಪ್ರಧಾನ ಪಾತ್ರವನ್ನು ವಹಿಸಿರುವರೆಂಬಲ್ಲಿ ಸಂಶಯವಿಲ್ಲ. ಖಗೋಳಶಾಸ್ತ್ರದ ಮೂಲಪುರುಷರೆಂದು ಭಾವಿಸಲಾಗಿರುವ ಕೋಪರ್ನಿಕಸ್ (Copernicus), ಕೆಪ್ಲರ್ (Kepler) ಮುಂತಾದ ಪಾಶ್ಚಾತ್ಯರಿಂದಲೇ, ಭೂಮಿಯು ಆಕಾಶದಲ್ಲಿ ಸುತ್ತುವ ಗೋಳ-ವೆಂಬ ಭಾವನೆಯು ಮೊಟ್ಟಮೊದಲಿಗೆ ಉದಯಿಸಿತೆಂದು ತಿಳಿಯುವವರೂ ಇರುವರು. ಆದರೆ ಅದರಲ್ಲಿ ಸತ್ಯಾಂಶವಿಲ್ಲ. ಕೋಪರ್ನಿಕಸ್‌ಕಿಂತ ಅನೇಕ ಶತಮಾನಗಳ ಹಿಂದೆಯೇ ಎಂದರೆ, ಕ್ರಿ.ಶ. ೫ನೇ ಶತಮಾನದಲ್ಲಿಯೇ

---

ಜ್ಯೋತಿಷಾದಿ ವೇದಾಂಗಗಳ ಸಹಾಯದಿಂದಲೂ, ಪುರಾಣಾದಿ ಸ್ಮೃತಿ ಗ್ರಂಥಗಳ ವಿವರಣೆಗಳಿಂದಲೂ ತಿಳಿಯಬೇಕಾಗುತ್ತದೆ. ಸಂಪ್ರದಾಯಜ್ಞರೆಂಬ ಹಿರಿಯರಿಂದ (ಅವರ ವಿವರಣಾತ್ಮಕ ಗ್ರಂಥಗಳಿಂದ) ತಿಳಿದು ಬರುವ ಮಟ್ಟಿಗೆ ಭೂಮಿಯು ಅಚಲವೂ ಸಮನಾದುದೂ (flat) ಆಗಿದೆ. ನಿಗೂಢವಾದ ಅನ್ಯಾರ್ಥಗಳೂ ಇರಬಹುದು-ಆಳವಾದ ಅಭ್ಯಾಸದಿಂದಲೂ ತೀಕ್ಷ್ಣವಿಮರ್ಶೆ-ಯಿಂದಲೂ ಪರೀಕ್ಷಿಸಲವಕಾಶವಿದೆ.

46 ಸೂರ್ಯಚಂದ್ರಾದಿಗ್ರಹಗಳೂ ನಕ್ಷತ್ರ ಸಮೂಹಗಳೂ ಧ್ರುವನನ್ನು ಸುತ್ತುವುವೆಂಬ ಅಂಶವು ಆಗಮಗಳಲ್ಲಿ ಸಹ ಉಕ್ತವಾಗಿದೆ. ಧ್ರುವನಲ್ಲಿ ಕೇಂದ್ರೀಕರಿಸುವ ವಾಯುಪಾಶಗಳಿಂದ ನಿಯಂತ್ರಿಸಲ್ಪಟ್ಟು ಸಂಚರಿಸುತ್ತವೆಂದು ಹೇಳಲಾಗಿದೆ. ಗುರುತ್ವಾಕರ್ಷಕ ಶಕ್ತಿ ವಿಶೇಷಗಳ ಅಭಿಮಾನಗಳನ್ನು ನಾನಾ (ವಿವಹ-ಪರಾವಹ ಇತ್ಯಾದಿ) ನಾಮಗಳಿಂದ ನಿರೂಪಿಸಲಾಗಿದೆ ಎಂದು ತಿಳಿಯಬಹುದಾಗಿದೆ.

ಈ ಆಕಾಶಗತ ಗೋಳವೆಂಬ ಕಲ್ಪನೆಯು ಭರತಖಂಡದ ಜ್ಯೋತಿಷ್ಯಜ್ಞರಲ್ಲಿ ಭದ್ರವಾಗಿ ನೆಲೆಗೊಂಡಂತೆ ಕಾಣುತ್ತದೆ. ಜ್ಯೋತಿಷ್ಯವೆಂಬ ವೇದಾಂಗವು ಅನಾದಿಯಾದುದು.[47] ಇದರಿಂದ ಪರಿಪೋಷಿತವಾದುದು ಖಗೋಳಶಾಸ್ತ್ರವೆಂದರೆ ತಪ್ಪಲ್ಲ. ಖಗೋಳ ವಿಷಯಗಳಲ್ಲಿ ಕ್ರಾಂತಿಕಾರಕ ಕಲ್ಪನೆಗಳನ್ನು ಹೊಂದಿ, ಅವುಗಳ ಸಮರ್ಥನೆಗಾಗಿ ಗಣಿತ, ಬೀಜಗಣಿತ, ರೇಖಾಗಣಿತ, ಖಗೋಳ (arithmetic-algebra-geometry) ಮೊದಲಾದ ಶಾಸ್ತ್ರ ವಿಭಾಗಗಳನ್ನು, ತಮ್ಮ ಉಜ್ವಲ ಪ್ರತಿಭೆಯಿಂದ ಉಚ್ಚಶಿಖರಕ್ಕೇರಿಸಿದವರು ಭಾರತೀಯರು. ಇಂಥವರಲ್ಲಿ ಪ್ರಥಮ ಸ್ಥಾನವನ್ನು ಗಳಿಸಿದವನು ಆರ್ಯಭಟ್ಟ. ಆತನ ನಂತರ ಭಾಸ್ಕರ ಬ್ರಹ್ಮಗುಪ್ತ. ವರಾಹಮಿಹಿರ ಮೊದಲಾದವರು ಖಗೋಳ ಶಾಸ್ತ್ರವನ್ನು ವಿಶೇಷವಾಗಿ ಬೆಳೆಸಿದರು. ಆರ್ಯಭಟ್ಟನು (ಖಗೋಳ ಶಾಸ್ತ್ರವನ್ನೊಳಗೊಂಡ) ಜ್ಯೋತಿಷ್ಯ ಶಾಸ್ತ್ರದಲ್ಲಿ ಬಹುಪರಿಯ ನೂತನ ಕಲ್ಪನೆಗಳನ್ನು ರೂಪಿಸಿದನು. ಗಣಿತಶಾಸ್ತ್ರದ ನಾನಾ ಶಾಖೆಗಳಲ್ಲಿ ಮಹಾ ಪ್ರವೀಣನಾದ ಈತನು ಸೂರ್ಯಾದಿ ಗ್ರಹಗಳ ಹಾಗೂ ವಿವಿಧ ಅಂತರಿಕ್ಷಗತ ಜ್ಯೋತಿರ್ವಸ್ತುಗಳ ಉದಯಾಸ್ತಗಳನ್ನೂ ಅವುಗಳ ಸಂಚಾರ (ಗತಿ) ವಿಶೇಷಗಳನ್ನೂ ನಿರ್ಣಯಾತ್ಮಕವಾಗಿ ಸಿದ್ಧಾಂತಿಸಿ ನಿರೂಪಿಸಿದನು. ಕೋಪರ್ನಿಕಸ್ ಕ್ರಿ.ಶ. ೧೫ನೇ ಶತಮಾನದವನು; ಆರ್ಯಭಟ್ಟನು ೫ನೇ ಶತಮಾನದವನು; ಪೌರ್ವಾತ್ಯ ವಿಜ್ಞಾನಿಗಳ ವಿಷಯದಲ್ಲಿ ಪರಿಶೋಧನೆ ನಡೆಸಿದ ಹಿಂದಿನಕಾಲದ ಕೋಲ್‌ಬ್ರುಕ್ (Colebrooke) ಎಂಬ ಪಾಶ್ಚಾತ್ಯ ಮಹಾಶಯನು. ಕ್ರಿ.ಪೂ. ೫ನೇ ಶತಮಾನದಲ್ಲಿ ಪೈಥಾಗರೆಸ್ (Pythogoras) ಎಂಬ ಗ್ರೀಕ್ ಪಂಡಿತನಿಗೆ ಈ ನೂತನ ಕಲ್ಪನೆಗಳ ಮೂಲತತ್ವದ ಛಾಯೆ ಮಾತ್ರವಿದ್ದಿರಬಹುದೆಂದು ಅಭಿಪ್ರಾಯಪಟ್ಟಿದ್ದಾನೆ. ಕ್ರಿ.ಶ. ೧೫ನೇ ಶತಮಾನದಿಂದ ಈಚೆಗೆ ಪಾಶ್ಚಾತ್ಯ ವಿಜ್ಞಾನಿಗಳಲ್ಲಿ ಖಗೋಳ ವಿಜ್ಞಾನವು ವಿಶೇಷವಾಗಿ ಪ್ರಗತಿಹೊಂದಿತು. ಕಳೆದ ೫೦ ವರ್ಷಗಳಲ್ಲಿ, ದೂರದರ್ಶಕಗಳು, ರೇಡಿಯೋ ಮುಂತಾದ ಅದ್ಭುತ ಉಪಕರಣಗಳಿಂದ, ಈ ಶಾಸ್ತ್ರವು ತೀವ್ರಗತಿಯಿಂದ ಬೆಳೆಯುತ್ತಿದೆ. ಇರಲಿ; ಆರ್ಯಭಟ್ಟನು, ಭೂಮಿಯನ್ನು ಸೂರ್ಯನ ಸುತ್ತಲೂ ನಿರ್ದಿಷ್ಟ ಪಥದಲ್ಲಿ

---

47. ಸೃಷ್ಟ್ಯಾದಿಯಲ್ಲಿ ನಾರಾಯಣನು ಚತುರ್ಮುಖನಿಗೆ ವೇದಗಳನ್ನು ವೇದಾಂಗಗಳ ಸಮೇತವಾಗಿ ಉಪದೇಶಿಸಿದನೆಂದು ಹೇಳಲಾಗಿದೆ.

ಸುತ್ತುವ ಗೋಳವೆಂದು ಕಲ್ಪಿಸಿ, ಗ್ರಹನಕ್ಷತ್ರಗಳ ಉದಯಾಸ್ತಗಳನ್ನೂ ಸೂರ್ಯಚಂದ್ರ-ಗ್ರಹಣಗಳೇ ಮೊದಲಾದ ಕಾಲಗಣನೆಗೆ ಸಂಬಂಧಿಸಿದ ಬಹು ವಿಶೇಷಗಳನ್ನೂ ತಿಳಿಯುವ ಪ್ರಕಾರವನ್ನು ಸಿದ್ಧಾಂತಿಸಿ ನಿರೂಪಿಸಿರುವನು.[48] ತಿಥಿ-ನಕ್ಷತ್ರ- ಸಂಕ್ರಮಣ ಗ್ರಹಣಾದಿ ಪರ್ವಕಾಲಗಳು ಮೊದಲಾದ ಕಾಲವಿಶೇಷಗಳನ್ನು ತಿಳಿದು ಆಚರಿಸಲ್ಪಡುವ ವಿಧ್ಯುಕ್ತ ಸತ್ಕರ್ಮಗಳೇ ಫಲಪ್ರದಗಳೆಂದು ಆಗಮಗಳು ಸಾರುವುದರಿಂದ, ಆರ್ಯ-ಭಟ್ಟನ ಕಾಲದಿಂದೀಚೆಗೆ ಆಗಿಹೋದ ವೈದಿಕ ಮಹಾಜ್ಞಾನಿಗಳು ಸಹ ಈ ಕಾಲವಿಶೇಷಗಳನ್ನು ಆರ್ಯಭಟ್ಟನ ಸಿದ್ಧಾಂತದಂತೆ ತಿಳಿದು ಕರ್ಮಗಳನ್ನು ಆಚರಿಸಬೇಕೆಂದು ಅಂಗೀಕರಿಸಿರುವುದನ್ನು ನೋಡಿದರೆ, ಆರ್ಯಭಟ್ಟನ ಮೂಲ ಕಲ್ಪನೆಗಳು ಸತ್ಯವಿರಬೇಕೆಂಬ ಭಾವನೆಗೆ ಬೆಂಬಲ ದೊರೆಯುತ್ತದೆ. ಆಗಮಗಳಾದರೋ ಭೂಮಿಯನ್ನು ಅಚಲವೆಂದು ಹೇಳುತ್ತವೆ. ಹಾಗಾದರೆ ಆರ್ಯಭಟ್ಟನ ಮೂಲಕಲ್ಪನೆಗಳು ಆಗಮ ವಿರುದ್ಧವೇ? ಅವನ ಕಾಲಗಣನೆಯ ಸಿದ್ಧಾಂತಗಳನ್ನು ವೇದಜ್ಞಾನಿಗಳು ಹೇಗೆ ಅಂಗೀಕರಿಸಿದರು? ಇಲ್ಲಿ ಪರಿಶೋಧಕರು (researchers) ಗಮನಿಸಬಹುದಾದ, ಭೌತಶಾಸ್ತ್ರ ಮತ್ತು ಗಣಿತ ಶಾಸ್ತ್ರಗಳ (physics and mathematics) ಸೂಕ್ಷ್ಮ ಪ್ರಮೇಯಗಳೂ ಇರಬಹುದೆನಿಸುತ್ತದೆ. A ಮತ್ತು B ಎಂಬೆರಡು ವಸ್ತುಗಳಲ್ಲಿ A ಅಚಲವಾಗಿದ್ದು, B ಎಂಬುದು A ಗೆ ವಿವಿಧ ಕೋಣಗಳಲ್ಲಿ ವಿವಿಧ ವೇಗದಿಂದ (at different angles and speed) ಚಲಿಸುತ್ತಿರುವುದೆಂದು ಭಾವಿಸೋಣ. ಗೊತ್ತಾದ ಒಂದು ಕಾಲಾವಧಿಯಲ್ಲಿ A ಮತ್ತು Bಗಳ ಅಂತರವನ್ನು ಕಂಡುಹಿಡಿಯುವ ಒಂದು ಸಮಸ್ಯೆಯನ್ನು (problem – ಲೆಕ್ಕ) ಉತ್ತರಿಸಿದ್ದರೆ, B ವಸ್ತುವೇ ಅಚಲವೆಂದಿಟ್ಟುಕೊಂಡು A ವಸ್ತುವೇ B ನಂತೆ ಚಲಿಸುತ್ತದೆಂದು ಭಾವಿಸಿ ಸಮಸ್ಯೆಯನ್ನು ಬಿಡಿಸಿದರೂ ಅದೇ ಉತ್ತರವು ದೊರೆಯುತ್ತದೆ. ಸೂರ್ಯ-ಭೂಮಿಗಳೆರಡರಲ್ಲಿ ಭೂಮಿಯನ್ನು ಸ್ಥಿರವೆಂದಿಟ್ಟುಕೊಂಡು, ಸೂರ್ಯನು (ಹೀಗೆಯೇ ಇತರ ಗ್ರಹನಕ್ಷತ್ರಾದಿಗಳು) ಒಂದು ಹಗಲು-ಒಂದು ರಾತ್ರಿ

48. ಆರ್ಯಭಟ್ಟ ಕೃತಗ್ರಂಥಗಳಾವುವೂ ಉಪಲಬ್ಧವಿಲ್ಲ. ಆದರೆ, ವರಾಹ ಮಿಹಿರನ 'ವಾರಾಹಿ ಸಂಹಿತೆ'ಯಲ್ಲಿ ಮತ್ತು ಈ ಸಂಹಿತೆಯ ಭಟ್ಟ ಉತ್ಪಲನ ವ್ಯಾಖ್ಯಾನ-ದಲ್ಲಿಯೂ, ಆರ್ಯಭಟ್ಟನ ವಾಕ್ಯಗಳು ಹೇರಳವಾಗಿ ಉದಾಹರಿಸಲ್ಪಟ್ಟಿವೆ.

ಕಾಲದಲ್ಲಿ ಅತಿ ವೇಗದಿಂದ ಗಗನದಲ್ಲಿ ಅಷ್ಟು ಪ್ರದೇಶವನ್ನು ಸಂಚರಿಸುವ- ನೆಂದು ಭಾವಿಸಿದರೆ, ಆಕಾಶದಲ್ಲಿ ಒಂದು ಮುಹೂರ್ತದಲ್ಲಿ ಇಷ್ಟು ಲಕ್ಷ ಯೋಜನ ದೂರ ಸಾಗುವನೆಂದು ಆಗಮವಾಕ್ಯಗಳು ಹೇಳುವುದು ಸರಿಯೆಂದು ತಿಳಿದುಬರುತ್ತದೆ. ಮೇರು ಪರ್ವತವನ್ನು, ಆಕಾಶದಲ್ಲಿದ್ದು ದಿನಕ್ಕೊಂದಾವರ್ತಿ ಸುತ್ತುವನೆಂದು ಹೇಳಿ, ಸೂರ್ಯಪಥವು ಒಟ್ಟು ಇಷ್ಟು ಕೋಟಿ ಯೋಜನ ಉದ್ದವುಳ್ಳದ್ದೆಂದೂ ಹೇಳಲಾಗುತ್ತದೆ. ಸೂರ್ಯನು ಇದ್ದಲ್ಲಿರುವನೆಂದು (ಅಚಲನೆಂದು) ತಿಳಿದು ಭೂಮಿಯು ತನ್ನ ಅಕ್ಷದಮೇಲೆ ಒಂದು ದಿನದಲ್ಲಿ ಒಂದಾವರ್ತಿ ಮತ್ತು ವರ್ಷಕ್ಕೆ ಒಂದಾವರ್ತಿ ಸೂರ್ಯನ ಸುತ್ತಲೂ ಸುತ್ತುವುದೆಂಬ ಪಕ್ಷದಲ್ಲಿ (ಕಲ್ಪನೆಯಲ್ಲಿ) ಸಹ ಸೂರ್ಯನು ಸುತ್ತುವಂತೆ ಕಾಣುವುದರ ವೇಗವು ಅಷ್ಟೇ ಆಗುತ್ತದೆ. ಮತ್ತು ಭೂಮಿಯು ಸೂರ್ಯನ ಸುತ್ತಲೂ ಸೂರ್ಯನಷ್ಟೇ ವೇಗದಿಂದ (ಆಗಮಗಳು ಹೇಳುವಷ್ಟು ಲಕ್ಷ ಯೋಜನಗಳ ವೇಗದಿಂದ)ಸುತ್ತುವುದೆಂದೇ ಪ್ರಾಪ್ತವಾಗುತ್ತದೆ. ಆದ್ದರಿಂದ ಭೂಮಿಯು ತನ್ನ ಅಕ್ಷದ ಮೇಲೆ ತಿರುಗುವುದೋ ಅಥವಾ ಅಚಲವೋ ಎಂಬುದನ್ನು ನಿರ್ಣಯಿಸುವುದು ಕಷ್ಟ.[49] ಭೂಮಿಯೇ ಸುತ್ತುವುದೆಂಬಲ್ಲಿ ವಿಜ್ಞಾನಿಗಳಲ್ಲಿ ಸಹ ಏಕ ವಾಕ್ಯತೆಯಿಲ್ಲ. ಬಹುಭಾಗದವರು ಭೂಮಿಯೇ ಸುತ್ತುವುದೆಂಬುದು ನಿಶ್ಚಿತ ಸತ್ಯವೆಂದು (un-assailable truth) ಅಂಗೀಕರಿಸಿದ್ದರೂ, ಒಪ್ಪದಿರುವ ಕೆಲವು ವಿಜ್ಞಾನಿಗಳೂ, ನಾಗರೀಕ ಪ್ರಜಾ- ವರ್ಗದ ಒಂದು ಚಿಕ್ಕ ತಂಡವೂ ಇದೆ. ಬೈಬಲ್ ಪ್ರಕಾರ ಭೂಮಿಯು ಸಮ ಮತ್ತು ಅಚಲ (Flat and Firm). ವೈಜ್ಞಾನಿಕ ಪ್ರವೀಣರ ಕೇಂದ್ರವಾದ ಲಂಡನ್ ನಗರದಲ್ಲಿ ಸಹ "Flat Earth Society" (ಭೂ ಸಮತಾ ಸಂಘ) ಎಂಬ ಸಂಸ್ಥೆಯು ಈಗಲೂ ಜಾಗ್ರತವಾಗಿದೆ. ಆ ಸಂಘದ ಅಧ್ಯಕ್ಷರಾದ ಮನೋಲಿಸ್ (Manolis) ಎಂಬುವರು ಹೀಗೆ ಹೇಳುತ್ತಾರೆ :- "The society has 827 charter members, as well as thousands of active sympathizers throughout the world. There are many more who secretly believe we are right, but fear

49. ಹಗಲು-ರಾತ್ರಿಗಳ ಸಂಭವ ಪ್ರಕಾರವನ್ನು ಮುಂದಿನ ಕೆಲವು ಪುಟಗಳಲ್ಲಿ ವಿವೇಚಿಸಲಾಗುತ್ತದೆ.

ridicule and other unpleasant consequences. We have now an inquisition in reverse which persecutes people for their beliefs. The very idea that the earth is round and spins around a central axis, while revolving round the sun is preposterous. If that were so, the continents would be inundated by tidal waves and the oceans would spill over in a matter of seconds. I have proved it again and again. But people only believe what they have been taught, not what their logic tells them is right." Leo Heiman says, "Manolis theories may be laughed at in the civilized world but he is regarded as a latter day prophet in West Asia. He claims that the Astronauts are flying in circles over the earth, not orbiting around it." Patrick Moore F.R.A.S., author of 'Guide to the Planets' and Director of the British Astronomical Association in charge of the Mercury and Venus section says, 'The Flat Earth Society in London is flourishing and even today there are people who find it difficult to believe that we live upon a globe.' ಸಂಘಾಧ್ಯಕ್ಷರಾದ ಮನೋಲಿಸರು ಹೇಳುತ್ತಾರೆ –ಸಂಘದ ಸ್ಥಾಪಕ ಸದಸ್ಯರು ೮೨೭ ಜನರಿದ್ದಾರೆ ಮತ್ತುಆಸ್ಥಾಯುಕ್ತ ಸಹಾನುಭೂತಿಯುಳ್ಳ ಸಹಸ್ರಾರು ಜನರು ಜಗತ್ತಿನಲ್ಲೆಲ್ಲಾ ಹರಡಿದ್ದಾರೆ. ಅದಕ್ಕೂ ಹೆಚ್ಚು ಜನರು ನಮ್ಮ ಸಂಘದ ಧ್ಯೇಯವು ಸತ್ಯವೆಂದು ನಂಬುವವರಿದ್ದಾರೆ. ಆದರೆ ಜನತೆಯ ಅಪಹಾಸ ಮತ್ತಿತರ ಅಸಹ್ಯ ಪರಿಣಾಮಗಳಿಗೆ ಅಂಜಿ ಸತ್ಯವನ್ನು ಬಹಿರಂಗವಾಗಿ ನುಡಿಯುವುದಿಲ್ಲ. (ಹಿಂದೆ ಹೊಸ ತತ್ವಗಳನ್ನು ಮಂಡಿಸಿದ ವಿಜ್ಞಾನಿಗಳನ್ನು ಜನತೆಯು ಆಗ್ರಹದಿಂದ ಹಿಂಸಿಸುತ್ತಿದ್ದರು) ಈಗ ವಿರುದ್ಧ ಕ್ರಮದಿಂದ, ಸತ್ಯದಲ್ಲಿ ದೃಢವಿಶ್ವಾಸವುಳ್ಳವರು, ನವನಾಗರೀಕರೆಂಬ ಜನರಿಂದ ಪೀಡೆಗೊಳಗಾಗುತ್ತಿದ್ದಾರೆ. ಭೂಮಿಯು ಚೆಂಡಿನಂತೆ ದುಂಡಗಿದ್ದು ತನ್ನ ಅಕ್ಷದಮೇಲೂ ಮತ್ತು ಸೂರ್ಯನ ಸುತ್ತಲೂ ತಿರುಗುವುದೆಂಬ ಕಲ್ಪನೆಯು ಹಾಸ್ಯಾಸ್ಪದವು. ಹಾಗೆ ಸುತ್ತುತ್ತಿದ್ದರೆ, ಕ್ಷಣಮಾತ್ರದಲ್ಲಿ ಭೂಮಿಯ ನಾನಾ ಖಂಡಗಳು ಸಾಗರ ಜಲತರಂಗಗಳಿಂದ ಕೊಚ್ಚಿಹೋಗುವ ಜಲಪ್ರಳಯಕ್ಕೆ ಗುರಿಯಾಗಬೇಕಾಗುವುದು. ಹಾಗೆ ಭೂಮಿಯು ಸುತ್ತುವುದಿಲ್ಲವೆಂಬುದನ್ನು ನಾನು ಮತ್ತೆ ಮತ್ತೆ ಪ್ರಮಾಣಗಳಿಂದ ಸಾಧಿಸಿದ್ದೇನೆ. ಆದರೂ ಜನತೆಯು ಕಲಿಸಿದ್ದನ್ನು ನಂಬುತ್ತಾರಲ್ಲದೇ ತರ್ಕದಿಂದ

ಸರಿತೋರಿದ್ದನ್ನಲ್ಲ.'' ಲಿಯೋ ಹೀಮನ್ ಎಂಬುವರು, ಮನೋಲಿಸರ ಸಿದ್ಧಾಂತಗಳನ್ನು (ವಾದಗಳನ್ನು) ಸುಧಾರಿತ ಜಗತ್ತು ಅಪಹಾಸಮಾಡಬಹುದು. ಆದರೆ ಪಶ್ಚಿಮ ಏಷ್ಯಾ ಜನತೆಯು ಮನೋಲಿಸರನ್ನು ಅವತಾರಿಕ ಪುರುಷ-ನೆಂದೇ (ದೇವದೂತನೆಂದೇ) ಭಾವಿಸುತ್ತಾರೆ. ಅವರಾದರೋ, ಉಪಗ್ರಹ-ಗಳಲ್ಲಿರುವ ಗಗನಯಾತ್ರಿಕರು ಭೂಮಿಯಮೇಲೆ ಆಕಾಶದಲ್ಲಿ ವರ್ತುಲಾಕಾರ-ವಾಗಿ (circle) ತಿರುಗುವರಲ್ಲದೇ ಭೂಮಿಯನ್ನು ಅದರ ಸುತ್ತಲೂ ಇರುತ್ತದೆಂಬ ಒಂದು ಕಕ್ಷೆಯಲ್ಲಿ ಅಲ್ಲವೆಂದು ಸಾಧಿಸುತ್ತಾರೆ - ಎಂದು ಹೇಳುತ್ತಾರೆ. ಬ್ರಿಟಿಷ್ ಖಗೋಳ ವಿಜ್ಞಾನ ಸಂಘದ, ಬುಧ ಹಾಗು ಶುಕ್ರಗ್ರಹ ಶಾಖೆಯ ಪ್ರಧಾನ ನಿರ್ವಾಹಕರಾದ ಪ್ಯಾಟ್ರಿಕ್ ಮೂರ್, ಎಂಬ ವಿಜ್ಞಾನಿಗಳು, ಲಂಡನ್ನಿನಲ್ಲಿರುವ ಭೂ ಸಮತಾ ಸಂಘ ಬೆಳೆಯುತ್ತಿರುವ ಸಂಘವೆಂದೂ, ಇಂದೂ (ವೈಜ್ಞಾನಿಕ ಪ್ರಗತಿಯನ್ನು ಕಂಡು ಅನುಸರಿಸುತ್ತಿದ್ದರೂ) ಆಕಾಶಗತ ಒಂದು ಗೋಳದ ಮೇಲೆ ನಾವು ವಾಸಿಸುತ್ತಿರುವೆವೆಂಬುದನ್ನು ನಂಬಲಾರದ ಜನರಿದ್ದಾರೆಎಂದಿರುವರು. ಈ ವಿಧದ ವೈಜ್ಞಾನಿಕ ಭಿನ್ನಾಭಿಪ್ರಾಯಗಳನ್ನು ಬಹುಮತದಂತೆ ತೀರ್ಮಾನಿಸತಕ್ಕದ್ದಲ್ಲ. ಸತ್ಯವನ್ನು ಬಹುಮತದಿಂದ ನಿರ್ಣಯಿಸಲಾದೀತೇ? ಸರ್ವಥಾ ಹಾಗೆ ಮಾಡಕೂಡದು. ಸಹಸ್ರಾರು ಜನರಲ್ಲಿ ಒಬ್ಬನು ಸತ್ಯವನ್ನು ತಿಳಿಯಲು ಯತ್ನಿಸುತ್ತಾನೆ - ವಿಜ್ಞಾನ ಶಾಸ್ತ್ರಾಭ್ಯಾಸಿಗಳು ಎಷ್ಟು ಮಂದಿ ಇದ್ದಾರೆ? ಹಾಗೆ ಯತ್ನಿಸುವವರಲ್ಲಿ ವಿವಿಧ ಹಂತಗಳ ಸಿದ್ಧಿ ಹೊಂದಿದವರೂ ಇರುತ್ತಾರೆ. ಆದರೆ ಸತ್ಯವನ್ನು ಕಂಡವನು (ತತ್ವವನ್ನು-ಯಥಾರ್ಥವನ್ನು ತಿಳಿದವನು) ಅಂತಹ ಸಹಸ್ರಾರು ಜನರ ಮಧ್ಯದಲ್ಲಿ ಯಾವನೋ ಒಬ್ಬನು ಮಾತ್ರ. ಹೀಗಿರುವಲ್ಲಿ ಜನಾಪಹಾಸಕ್ಕೆ ಹೆದರಿ ಬಹುಮತವನ್ನು ಒಪ್ಪಿಕೊಂಡು, ಅದರಿಂದ ಆಗಮಗಳಿಗೆ ವಿರೋಧವುಂಟಾಗುವುದೆಂದು ಭಾವಿಸಿ ಆಗಮಗಳು ಅಪ್ರಮಾಣವೆಂದು ನಿಶ್ಚಿಯಿಸುವುದು ಯೋಗ್ಯವೆನಿಸಲಾರದು. ಸ್ವತಃ ಪ್ರಮಾಣಗಳಾದ ವೇದಗಳ ಮತ್ತು ವೇದಾನುಸಾರಿಗಳಾದ ಇತಿಹಾಸ ಪುರಾಣಗಳ ಪ್ರಾಮಾಣ್ಯವನ್ನು ಇಂತಹ ವಿರೋಧಗಳಿಂದ ಶಂಕಿಸುವುದು ಉಚಿತವಲ್ಲ.

ಆಕಾಶದಲ್ಲಿರುವ ಸೂರ್ಯ, ಚಂದ್ರ, ಗ್ರಹ ನಕ್ಷತ್ರಾದಿಗಳನ್ನು, ಒಂದು ಅಚಿಂತ್ಯವಾದ ಅದ್ಭುತ ಶಕ್ತಿಯ ನಿಯಮಬದ್ಧ ರೀತಿಯಿಂದ ಸುತ್ತಿಸುತ್ತ-ಲಿರುವುದೆಂದು ಆಗಮಗಳು ಹೇಳುತ್ತವೆ. ಹಾಗೆಯೇ ಭೂಮಿಯನ್ನು

ಸುತ್ತಿಸುತ್ತಲಿವೆಯೆಂದು ಆಗಮಗಳಲ್ಲಿ ಹೇಳಿದ್ದರೆ ಅದನ್ನು ಅಂಗೀಕರಿಸಲು ಯಾವ ಅನುಪಪತ್ತಿಯೂ ಇರುತ್ತಿರಲಿಲ್ಲ- ಆ ಅಚಿಂತ್ಯ ವಿಚಿತ್ರ ಶಕ್ತಿಗೆ ಅಸಾಧ್ಯವಾದುದು ಯಾವುದೂ ಇಲ್ಲ-ಯಾವ ತರ್ಕಕ್ಕೂ ನಿಲುಕದ ಶಕ್ತಿಯದು. ಆದರೆ ಹಾಗೆ ಭೂಮಿಯೂ ಸುತ್ತುತ್ತಿದೆಯೆಂದು ಹೇಳಿಲ್ಲ-ವಾದ್ದರಿಂದ, ವಿರೋಧ ಪರಿಹಾರ ಪ್ರಶ್ನೆಯು ಉದ್ಭವಿಸಿದೆ.

ಭೂಮಿಯು ಆಕಾಶಗತ ಗೋಳವೆಂಬಲ್ಲಿ, ಉಪಗ್ರಹಗಳೆಂಬ (ರಾಕೆಟ್‌ನಿಂದ ಆಕಾಶಕ್ಕೇರಿಸಲಾದ) ಕೃತಕ ವಸ್ತುಗಳು ಭೂಮಿಯನ್ನು ಸುತ್ತುತ್ತಿರು-ವುದೂ, ಅವುಗಳಲ್ಲಿರುವ ಯಂತ್ರೋಪಕರಣಗಳಿಂದ ತರಿಸಲಾಗುವ ಛಾಯಾಚಿತ್ರಗಳೂ ಪ್ರಮಾಣಗಳೆಂದು ವಿಜ್ಞಾನಿಗಳು ಹೇಳುವರು. ಈ ಅಂಶವನ್ನು ವಿವರವಾಗಿ ತಿಳಿದು ಪರೀಕ್ಷಿಸೋಣ. ಭೂಮಿಯನ್ನು ಸುತ್ತಿಸುತ್ತಿರುವ ಉಪಗ್ರಹಗಳ ಸಂಬಂಧವಾದ ವಿಜ್ಞಾನಿಗಳ ವಿವರಣೆಯು ಹೀಗಿದೆ :- ಭೂಮಿಯ ಗುರುತ್ವಾಕರ್ಷಣೆಯು (Gravitational pull) ಭೂಮಿಯಿಂದ ದೂರ ಹೋದಂತೆ ಮಂದವಾಗುತ್ತ ಹೋಗುತ್ತದೆ. ಆದ್ದರಿಂದಲೇ ಒಂದು ವಸ್ತುವಿನ ತೂಕವು (ಭಾರವು) ಆಕಾಶದಲ್ಲಿ ದೂರ ದೂರ ಹೋದಂತೆ ಕಡಿಮೆಯಾಗುತ್ತ ಹೋಗಿ, ಕಡೆಗೊಂದೆಡೆಯಲ್ಲಿ ಭಾರವಿಲ್ಲದ ಸ್ಥಿತಿಯನ್ನು ಹೊಂದುತ್ತದೆ (weight-less stage). ಈ ಎಲ್ಲೆಯನ್ನು ದಾಟಿದ ವಸ್ತುವು ಭೂಮಿಗೆ ತಿರಿಗಿ ಬರುವುದಿಲ್ಲ. ಒಂದು ವಸ್ತುವು ಭೂಮಿಯ ಈ ಆಕರ್ಷಣೆಯನ್ನು ಮೀರುವ ಸ್ಥಿತಿಯನ್ನು ಹೊಂದಬೇಕಾದರೆ, ಅದನ್ನು ಸೆಕೆಂಡ್ ೧ಕ್ಕೆ ಏಳು ಮೈಲಿಗಳ ವೇಗದಲ್ಲಿ ಆಕಾಶದಲ್ಲಿ ಮೇಲಕ್ಕೆ ಹಾರಿಸಬೇಕು-ಎಂದರೆ, ಗಂಟೆಗೆ ೨೫೨೦೦ ಮೈಲಿಗಳ ವೇಗದಿಂದ ಸಾಗಬೇಕು. ಈ ವೇಗವನ್ನು ಆಕರ್ಷಣಾತಿಕ್ರಮ ವೇಗ (escape velocity) ಎನ್ನುತ್ತಾರೆ. ಇದು ಒಂದೊಂದು ಗ್ರಹಕ್ಕೂ ಬೇರೆ ಬೇರೆಯಾಗಿರುವುದು. ಚಂದ್ರಗ್ರಹದ ಈ ವೇಗವು ಸೆಕೆಂಡಿಗೆ ೧ ೧/೨ ಮೈಲಿಯೆಂದೂ, ಮಂಗಳಗ್ರಹದ್ದು ೨ ಮೈಲಿಗಳೆಂದೂ ಕಂಡುಹಿಡಿದಿರುವುದಾಗಿ ವಿಜ್ಞಾನಿಗಳು ಹೇಳುತ್ತಾರೆ. ಈ ವೇಗಕ್ಕಿಂತ ಕಡಿಮೆ ವೇಗದಿಂದ (escape velocity) ಹೊರಟ ವಸ್ತುವು ಮೇಲಕ್ಕೆ ಹೋದಂತೆಲ್ಲಾ ತನ್ನ ವೇಗವನ್ನು ಕಳೆದುಕೊಂಡು, ಭೂಮಿಯ ಕಡೆಗೆ ಇಳಿಯಲು ಆರಂಭಿಸುತ್ತದೆ. ೨೫೨೦೦ ಮೈಲಿಗಳಕಿಂತ ಸ್ವಲ್ಪ ಮಾತ್ರ ಕಡಿಮೆ ವೇಗವುಳ್ಳ ವಸ್ತುವು ಕೆಳಗಿಳಿಯುವಾಗ, ಭೂಮಿಯ ಗುರುತ್ವಾಕರ್ಷಣೆಯಿಂದ

ಪಡೆಯುವ ವೇಗವೂ (ಸುಮಾರು ಗಂಟೆಗೆ ೧೦೦೦ ಮೈಲಿ) ಸ್ವಲ್ಪ ಹೆಚ್ಚು ಕಡಿಮೆ ಸರಿತೂಗುವಂತಿರಲು, ಆ ವಸ್ತುವು ಭೂಮಿಗೆ ಬೀಳುವುದೇ ಇಲ್ಲ. ಸುಮಾರು೧೫೦ ರಿಂದ೩೦೦ ಮೈಲಿಗಳ ಎತ್ತರದಲ್ಲಿ ಭೂಮಿಯ ಉಪಗ್ರಹದಂತೆ ಸುತ್ತುತ್ತದೆ. ಸಾಧಾರಣವಾಗಿ ಸೆಕೆಂಡಿಗೆ ೬ ಮೈಲಿಗಳ ವೇಗವಿರುವಂತೆ ಉಪಗ್ರಹವಾಗಿ ಸುತ್ತಿಸಬೇಕಾದ ವಸ್ತುವನ್ನು ಹಾರಿಸಲಾಗುತ್ತದೆ. ಅದು ಭೂಮಿಯನ್ನು ಸುತ್ತಲು ಆರಂಭಿಸಿದ ನಂತರ ಅದಕ್ಕೆ ಭೂಮಿಯನ್ನು ಸುತ್ತಲು ಇಂಧನದ (fuel) ಅವಶ್ಯಕತೆಯೇ ಇರುವುದಿಲ್ಲ. ಆ ವಸ್ತುವನ್ನು ಅಲ್ಲಿಗೆ ಮುಟ್ಟಿಸುವ ರಾಕೆಟ್ಟಿಗೆ ದ್ರವರೂಪದ ಜಲಜನಕ ಇತ್ಯಾದಿ ಇಂಧನ ಸಾಮಗ್ರಿಯನ್ನು ಉಪಯೋಗಿಸಲಾಗುತ್ತದೆ. ಗ್ರಹಾಂತರಗಳಿಗೆ ಕಳುಹಿಸ-ಬೇಕಾದ ರಾಕೆಟ್‌ಗಳಿಗೆ, ಭೂಮಿಯ ಆಕರ್ಷಣೆ ಶಕ್ತಿಯನ್ನು ಮೀರಿದ ಮುಂದಿನ ಆಕಾಶದಲ್ಲಿ ಬಹು ವೇಗವಾಗಿ ಸಾಗಲಿಕ್ಕೆ ಸಹ ಅಲ್ಪ ಇಂಧನ ಸಾಮಗ್ರಿಗಳು ಸಾಕಾಗುತ್ತವೆ. ಅಣುಶಕ್ತಿಯನ್ನು ಇಂಧನವಾಗಿ ಉಪಯೋಗಿಸುವ ಯತ್ನವೂ ನಡೆದಿದೆ. ವಿಮಾನಗಳಂತೆ ರಾಕೆಟ್‌ಗಳಿಗೆ ವಾಯುಮಂಡಲದ ಅವಶ್ಯಕತೆ ಇಲ್ಲ. ಭೂಮಿಯನ್ನು ಸುತ್ತುವ ಉಪಗ್ರಹಗಳಲ್ಲಿ ಸ್ಥಾಪಿಸಲಾಗಿರುವ ಯಂತ್ರೋಪಕರಣಗಳು ರೇಡಿಯೋ ದ್ವಾರಾ ಭೂಮಿ-ಯಿಂದಲೇ ನಿಯಂತ್ರಿಸಲ್ಪಟ್ಟು, ನಾನಾ ಉಪಯುಕ್ತ ವಿಷಯಗಳನ್ನು ಭೂಮಿಗೆ ಕಳುಹಿಸುತ್ತವೆ. ಭೂಮಿಯ ಛಾಯಾಚಿತ್ರಗಳನ್ನೂ ಕಳುಹಿಸಿವೆ. ಉಪಗ್ರಹಗಳು ಭೂಮಿಯನ್ನು ಸುತ್ತುವುದರಿಂದಲೂ, ಅವುಗಳಲ್ಲಿ ಸಂಚರಿ-ಸುವ ಗಗನಯಾತ್ರಿಕರು ಗಮನಿಸಿ ವರ್ಣಿಸುವ ನಾನಾ ಅನುಭವಗಳಿಂದಲೂ ಭೂಮಿಯು ಆಕಾಶದಲ್ಲಿರುವ ಗೋಳವೆಂದು ಸಿದ್ಧವಾಗುತ್ತದೆನ್ನುತ್ತಾರೆ-ವಿಜ್ಞಾನಿಗಳು. ಈ ಗಗನ ಯಾತ್ರಿಕರಿಗೆ ಮೇರುಪರ್ವತ-ಸಪ್ತಸಮುದ್ರಗಳು, ಇವು ಯಾವುವೂ ಕಂಡು ಬಂದಿಲ್ಲವೆನ್ನುತ್ತಾರೆ. ವಿಜ್ಞಾನಿಗಳ ಈ ವಿವರಣೆಯಲ್ಲಿ, ಭೂಮಿಯು ತನ್ನ ಅಕ್ಷದಮೇಲೆ ತಾನು ಸುತ್ತುತ್ತಿರುವುದೆಂಬ ಕಲ್ಪನೆಯನ್ನು ಬಿಟ್ಟು, ಉಪಗ್ರಹವು ಆಕಾಶದಲ್ಲಿ ಸುತ್ತುವುದನ್ನು ಬೇರೆ ರೀತಿಯಲ್ಲಿ ನಿರ್ವಹಿಸುವುದು ದುಸ್ಸಾಧ್ಯವೇ ಎಂಬುದನ್ನು ಪರಿಶೋಧಿಸಬಹುದಾಗಿದೆ. ಭೂಮಧ್ಯದಲ್ಲಿರುತ್ತೆಂಬ ಮೇರುಪರ್ವತದ ಸುತ್ತಲೂ, ಭೂಮಿಯಲ್ಲಿರ-ಬಹುದಾದ ವಿವಿಧ ಶಕ್ತಿ ಕೇಂದ್ರಗಳನ್ನು ನಿಮಿತ್ತೀಕರಿಸಿ, ಅಂತರಿಕ್ಷದ ಜ್ಯೋತಿರ್ಗಣವನ್ನು ಚಾಲನ ಮಾಡುವ ಅದ್ಭುತ ಶಕ್ತಿಯೇ ಈ ಉಪಗ್ರಹ-

ಸುತ್ತಿಸುತ್ತಲಿವೆಯೆಂದು ಆಗಮಗಳಲ್ಲಿ ಹೇಳಿದ್ದರೆ ಅದನ್ನು ಅಂಗೀಕರಿಸಲು ಯಾವ ಅನುಪಪತ್ತಿಯೂ ಇರುತ್ತಿರಲಿಲ್ಲ- ಆ ಅಚಿಂತ್ಯ ವಿಚಿತ್ರ ಶಕ್ತಿಗೆ ಅಸಾಧ್ಯವಾದುದು ಯಾವುದೂ ಇಲ್ಲ-ಯಾವ ತರ್ಕಕ್ಕೂ ನಿಲುಕದ ಶಕ್ತಿಯದು. ಆದರೆ ಹಾಗೆ ಭೂಮಿಯೂ ಸುತ್ತುತ್ತಿದೆಯೆಂದು ಹೇಳಿಲ್ಲ-ವಾದ್ದರಿಂದ, ವಿರೋಧ ಪರಿಹಾರ ಪ್ರಶ್ನೆಯು ಉದ್ಭವಿಸಿದೆ.

ಭೂಮಿಯು ಆಕಾಶಗತ ಗೋಳವೆಂಬಲ್ಲಿ, ಉಪಗ್ರಹಗಳೆಂಬ (ರಾಕೆಟ್ ನಿಂದ ಆಕಾಶಕ್ಕೇರಿಸಲಾದ) ಕೃತಕ ವಸ್ತುಗಳು ಭೂಮಿಯನ್ನು ಸುತ್ತುತ್ತಿರು-ವುದೂ, ಅವುಗಳಲ್ಲಿರುವ ಯಂತ್ರೋಪಕರಣಗಳಿಂದ ತರಿಸಲಾಗುವ ಛಾಯಾಚಿತ್ರಗಳೂ ಪ್ರಮಾಣಗಳೆಂದು ವಿಜ್ಞಾನಿಗಳು ಹೇಳುವರು. ಈ ಅಂಶವನ್ನು ವಿವರವಾಗಿ ತಿಳಿದು ಪರೀಕ್ಷಿಸೋಣ. ಭೂಮಿಯನ್ನು ಸುತ್ತಿಸುತ್ತಿರುವ ಉಪಗ್ರಹಗಳ ಸಂಬಂಧವಾದ ವಿಜ್ಞಾನಿಗಳ ವಿವರಣೆಯು ಹೀಗಿದೆ :- ಭೂಮಿಯ ಗುರುತ್ವಾಕರ್ಷಣೆಯು (Gravitational pull) ಭೂಮಿಯಿಂದ ದೂರ ಹೋದಂತೆ ಮಂದವಾಗುತ್ತ ಹೋಗುತ್ತದೆ. ಆದ್ದರಿಂದಲೇ ಒಂದು ವಸ್ತುವಿನ ತೂಕವು (ಭಾರವು) ಆಕಾಶದಲ್ಲಿ ದೂರ ದೂರ ಹೋದಂತೆ ಕಡಿಮೆಯಾಗುತ್ತ ಹೋಗಿ, ಕಡೆಗೊಂದೆಡೆಯಲ್ಲಿ ಭಾರವಿಲ್ಲದ ಸ್ಥಿತಿಯನ್ನು ಹೊಂದುತ್ತದೆ (weight-less stage). ಈ ಎಲ್ಲೆಯನ್ನು ದಾಟಿದ ವಸ್ತುವು ಭೂಮಿಗೆ ತಿರಿಗಿ ಬರುವುದಿಲ್ಲ. ಒಂದು ವಸ್ತುವು ಭೂಮಿಯ ಈ ಆಕರ್ಷಣೆಯನ್ನು ಮೀರುವ ಸ್ಥಿತಿಯನ್ನು ಹೊಂದಬೇಕಾದರೆ, ಅದನ್ನು ಸೆಕೆಂಡ್ ೧ಕ್ಕೆ ಏಳು ಮೈಲಿಗಳ ವೇಗದಲ್ಲಿ ಆಕಾಶದಲ್ಲಿ ಮೇಲಕ್ಕೆ ಹಾರಿಸಬೇಕು-ಎಂದರೆ, ಗಂಟೆಗೆ ೨೫೨೦೦ ಮೈಲಿಗಳ ವೇಗದಿಂದ ಸಾಗಬೇಕು. ಈ ವೇಗವನ್ನು ಆಕರ್ಷಣಾತಿಕ್ರಮ ವೇಗ (escape velocity) ಎನ್ನುತ್ತಾರೆ. ಇದು ಒಂದೊಂದು ಗ್ರಹಕ್ಕೂ ಬೇರೆ ಬೇರೆಯಾಗಿರುವುದು. ಚಂದ್ರಗ್ರಹದ ಈ ವೇಗವು ಸೆಕೆಂಡಿಗೆ ೧ ೧/೨ ಮೈಲಿಯೆಂದೂ, ಮಂಗಳಗ್ರಹದ್ದು ೨ ಮೈಲಿಗಳೆಂದೂ ಕಂಡುಹಿಡಿದಿರುವುದಾಗಿ ವಿಜ್ಞಾನಿಗಳು ಹೇಳುತ್ತಾರೆ. ಈ ವೇಗಕ್ಕಿಂತ ಕಡಿಮೆ ವೇಗದಿಂದ (escape velocity) ಹೊರಟ ವಸ್ತುವು ಮೇಲಕ್ಕೆ ಹೋದಂತೆಲ್ಲಾ ತನ್ನ ವೇಗವನ್ನು ಕಳೆದುಕೊಂಡು, ಭೂಮಿಯ ಕಡೆಗೆ ಇಳಿಯಲು ಆರಂಭಿಸುತ್ತದೆ. ೨೫೨೦೦ ಮೈಲಿಗಳಕಿಂತ ಸ್ವಲ್ಪ ಮಾತ್ರ ಕಡಿಮೆ ವೇಗವುಳ್ಳ ವಸ್ತುವು ಕೆಳಗಿಳಿಯುವಾಗ, ಭೂಮಿಯ ಗುರುತ್ವಾಕರ್ಷಣೆಯಿಂದ

ಪಡೆಯುವ ವೇಗವೂ (ಸುಮಾರು ಗಂಟೆಗೆ ೧೦೦೦ ಮೈಲಿ) ಸ್ವಲ್ಪ ಹೆಚ್ಚು ಕಡಿಮೆ ಸರಿತೂಗುವಂತಿರಲು, ಆ ವಸ್ತುವು ಭೂಮಿಗೆ ಬೀಳುವುದೇ ಇಲ್ಲ. ಸುಮಾರು ೧೫೦ ರಿಂದ ೩೦೦ ಮೈಲಿಗಳ ಎತ್ತರದಲ್ಲಿ ಭೂಮಿಯ ಉಪಗ್ರಹದಂತೆ ಸುತ್ತುತ್ತದೆ. ಸಾಧಾರಣವಾಗಿ ಸೆಕೆಂಡಿಗೆ ೬ ಮೈಲಿಗಳ ವೇಗವಿರುವಂತೆ ಉಪಗ್ರಹವಾಗಿ ಸುತ್ತಿಸಬೇಕಾದ ವಸ್ತುವನ್ನು ಹಾರಿಸಲಾಗುತ್ತದೆ. ಅದು ಭೂಮಿಯನ್ನು ಸುತ್ತಲು ಆರಂಭಿಸಿದ ನಂತರ ಅದಕ್ಕೆ ಭೂಮಿಯನ್ನು ಸುತ್ತಲು ಇಂಧನದ (fuel) ಅವಶ್ಯಕತೆಯೇ ಇರುವುದಿಲ್ಲ. ಆ ವಸ್ತುವನ್ನು ಅಲ್ಲಿಗೆ ಮುಟ್ಟಿಸುವ ರಾಕೆಟ್ಟಿಗೆ ದ್ರವರೂಪದ ಜಲಜನಕ ಇತ್ಯಾದಿ ಇಂಧನ ಸಾಮಗ್ರಿಯನ್ನು ಉಪಯೋಗಿಸಲಾಗುತ್ತದೆ. ಗ್ರಹಾಂತರಗಳಿಗೆ ಕಳುಹಿಸ-ಬೇಕಾದ ರಾಕೆಟ್‌ಗಳಿಗೆ, ಭೂಮಿಯ ಆಕರ್ಷಣೆ ಶಕ್ತಿಯನ್ನು ಮೀರಿದ ಮುಂದಿನ ಆಕಾಶದಲ್ಲಿ ಬಹು ವೇಗವಾಗಿ ಸಾಗಲಿಕ್ಕೆ ಸಹ ಅಲ್ಪ ಇಂಧನ ಸಾಮಗ್ರಿಗಳು ಸಾಕಾಗುತ್ತವೆ. ಅಣುಶಕ್ತಿಯನ್ನು ಇಂಧನವಾಗಿ ಉಪಯೋಗಿಸುವ ಯತ್ನವೂ ನಡೆದಿದೆ. ವಿಮಾನಗಳಂತೆ ರಾಕೆಟ್‌ಗಳಿಗೆ ವಾಯುಮಂಡಲದ ಅವಶ್ಯಕತೆ ಇಲ್ಲ. ಭೂಮಿಯನ್ನು ಸುತ್ತುವ ಉಪಗ್ರಹಗಳಲ್ಲಿ ಸ್ಥಾಪಿಸಲಾಗಿರುವ ಯಂತ್ರೋಪಕರಣಗಳು ರೇಡಿಯೋ ದ್ವಾರಾ ಭೂಮಿ-ಯಿಂದಲೇ ನಿಯಂತ್ರಿಸಲ್ಪಟ್ಟು, ನಾನಾ ಉಪಯುಕ್ತ ವಿಷಯಗಳನ್ನು ಭೂಮಿಗೆ ಕಳುಹಿಸುತ್ತವೆ. ಭೂಮಿಯ ಛಾಯಾಚಿತ್ರಗಳನ್ನೂ ಕಳುಹಿಸಿವೆ. ಉಪಗ್ರಹಗಳು ಭೂಮಿಯನ್ನು ಸುತ್ತುವುದರಿಂದಲೂ, ಅವುಗಳಲ್ಲಿ ಸಂಚರಿ-ಸುವ ಗಗನಯಾತ್ರಿಕರು ಗಮನಿಸಿ ವರ್ಣಿಸುವ ನಾನಾ ಅನುಭವಗಳಿಂದಲೂ ಭೂಮಿಯು ಆಕಾಶದಲ್ಲಿರುವ ಗೋಳವೆಂದು ಸಿದ್ಧವಾಗುತ್ತದೆನ್ನುತ್ತಾರೆ-ವಿಜ್ಞಾನಿಗಳು. ಈ ಗಗನ ಯಾತ್ರಿಕರಿಗೆ ಮೇರುಪರ್ವತ-ಸಪ್ತಸಮುದ್ರಗಳು, ಇವು ಯಾವುವೂ ಕಂಡು ಬಂದಿಲ್ಲವೆನ್ನುತ್ತಾರೆ. ವಿಜ್ಞಾನಿಗಳ ಈ ವಿವರಣೆಯಲ್ಲಿ, ಭೂಮಿಯು ತನ್ನ ಅಕ್ಷದಮೇಲೆ ತಾನು ಸುತ್ತುತ್ತಿರುವುದೆಂಬ ಕಲ್ಪನೆಯನ್ನು ಬಿಟ್ಟು, ಉಪಗ್ರಹವು ಆಕಾಶದಲ್ಲಿ ಸುತ್ತುವುದನ್ನು ಬೇರೆ ರೀತಿಯಲ್ಲಿ ನಿರ್ವಹಿಸುವುದು ದುಸ್ಸಾಧ್ಯವೇ ಎಂಬುದನ್ನು ಪರಿಶೋಧಿಸಬಹುದಾಗಿದೆ. ಭೂಮಧ್ಯದಲ್ಲಿರುತ್ತೆಂಬ ಮೇರುಪರ್ವತದ ಸುತ್ತಲೂ, ಭೂಮಿಯಲ್ಲಿರ-ಬಹುದಾದ ವಿವಿಧ ಶಕ್ತಿ ಕೇಂದ್ರಗಳನ್ನು ನಿಮಿತ್ತೀಕರಿಸಿ, ಅಂತರಿಕ್ಷದ ಜ್ಯೋತಿರ್ಗಣವನ್ನು ಚಾಲನ ಮಾಡುವ ಅದ್ಭುತ ಶಕ್ತಿಯೇ ಈ ಉಪಗ್ರಹ-

ಗಳನ್ನೂ ಅಂತಹ ಒಂದು ಕೇಂದ್ರದ ಮೇಲೆ ಆಕಾಶದಲ್ಲಿ ವರ್ತುಲಾಕಾರದ (circle) ಪಥದಲ್ಲಿ ಸುತ್ತಿಸುವುದಾದರೆ, ಈಗ ನಾವು ಕಾಣುತ್ತಿರುವಂತೆ ಉಪಗ್ರಹಗಳು ಆಕಾಶದಲ್ಲಿ ಸುತ್ತುವುದನ್ನು ಕಾಣಬಹುದೆಂಬುದು ಅಸಂಭವ-ವಾದೀತೇ? ಆಕಾಶದಲ್ಲಿರುವ ವಸ್ತುವು ಭೂಮಿಗೆ ಸಮೀಪವಾಗಿದ್ದಷ್ಟೂ ಪೂರ್ವಪಶ್ಚಿಮ (ಅಥವಾ ಉತ್ತರ ದಕ್ಷಿಣ) ದಿಗಂತಗಳ (ಕ್ಷಿತಿಜಗಳು-horizons) ಅಂತರವು ಕಡಿಮೆಯಾಗಿರುತ್ತದೆ. ಆ ವಸ್ತುವು ದೂರ ದೂರವಿದ್ದಷ್ಟು, ದಿಗಂತಗಳ ಅಂತರವು ಬೆಳೆದು ಹೆಚ್ಚುತ್ತದೆ. ಲಕ್ಷಾವಧಿ ಯೋಜನಗಳ ದೂರದಲ್ಲಿರುವ ಗ್ರಹನಕ್ಷತ್ರಗಳಂತೂ ಒಂದು ಕ್ಷಿತಿಜದಿಂದ ಮತ್ತೊಂದು ಕ್ಷಿತಿಜವನ್ನು ಮುಟ್ಟಲು ಕೋಟಿಶಃ ಯೋಜನಗಳ ದೂರವನ್ನು ಕ್ರಮಿಸಬೇಕಾಗುತ್ತದೆ. ಸಾಗರ ಮಧ್ಯದಲ್ಲಿ ವಿಸ್ತಾರವಾದ ಸುಳಿಗಳಿರುತ್ತವೆ. ಸುಳಿಗೆ ಸಿಕ್ಕ ವಸ್ತು ಅದರಿಂದ ಪಾರಾಗಿ ಅನ್ಯತ್ರ ಹೋಗುವುದು (ಮುಂದೆ ಹೋಗುವುದು) ಸಾಧ್ಯವಿಲ್ಲ. ಹಾಗೆಯೇ ಉಪಗ್ರಹಗಳು ಭೂಮಿಯಲ್ಲಿರುವ ಕೇಂದ್ರಮೇಲೆ ಆಕಾಶದಲ್ಲಿ ವರ್ತುಲ ಪಥದಲ್ಲಿ ಸುತ್ತುತ್ತಿರಕೂಡದೇಕೆ? ಈ ಹಿಂದೆ ಉದಾಹೃತವಾದ ಬ್ರಹ್ಮಾಂಡ ಪುರಾಣ ವಾಕ್ಯವು ಭರತವರ್ಷವು ಪರಸ್ಪರ ಅಗಮ್ಯಗಳಾದ ಒಂಭತ್ತು ವಿಭಾಗಗಳಿಂದ ಕೂಡಿರುವುದೆಂದು ಹೇಳುವಂತಿದೆ. ಹೀಗಿರುವಲ್ಲಿ, ಸಪ್ತದ್ವೀಪಗಳು, ಸಪ್ತಸಮುದ್ರಗಳು, ಜಂಬೂ-ದ್ವೀಪದ ಇತರ ವರ್ಷಗಳೂ ಒಂದು ಲಕ್ಷ ಯೋಜನ (೧೦ ಲಕ್ಷ ಮೈಲಿ) ವಿಸ್ತಾರವುಳ್ಳದ್ದೆಂಬ ಲವಣ ಸಮುದ್ರದ ಆಚೆಗಿರುವ ಪ್ರದೇಶಗಳೂ ಗಗನಯಾತ್ರಿಕರಿಗೆ ಗೋಚರಿಸುವುದೆಂತು? ಒಂದಕ್ಕಿಂತ ಮತ್ತೊಂದು ಎರಡರಷ್ಟು ವಿಸ್ತಾರವಾಗಿರುವುವೆಂಬ, ಸಪ್ತಸಮುದ್ರಗಳಲ್ಲಿ ಕಡೆಯದಾದ ಶುದ್ಧೋದಕ ಸಮುದ್ರದ ತೀರದಲ್ಲಿ ಪುಷ್ಕರ ದ್ವೀಪದ ಅಂಚಿನಲ್ಲಿ ಮೇರುಪರ್ವತದ ಸುತ್ತಲೂ ಇರುತ್ತದೆಂಬ ಮಾನಸೋತ್ತರ ಪರ್ವತದ ಮೇಲ್ಭಾಗದಲ್ಲಿ ಸೂರ್ಯನ ಪಥವಿರುತ್ತದೆಂದೂ, ಜಂಬೂದ್ವೀಪದ ಮಧ್ಯ-ದಲ್ಲಿರುವ ಮೇರುಪರ್ವತದ ಬುಡದ ಸುತ್ತಲಿರುವ ಇಲಾವೃತ ಖಂಡವೆಂಬ ಭಾಗದಲ್ಲಿ ಸದಾ ಸೂರ್ಯಪ್ರಕಾಶವಿರುವುದೆಂದೂ ವೇದಾದಿ ಆಗಮಗಳಲ್ಲಿ ಹೇಳಲಾಗುತ್ತದೆ. ಪ್ರದಕ್ಷಿಣಾಕಾರವಾಗಿ ಮೇರುಪರ್ವತವನ್ನು ಸೂರ್ಯನು ಸುತ್ತುವುದರಿಂದ ಪೃಥ್ವಿಯ ನಾನಾ ಭಾಗಗಳಲ್ಲಿ ಕಾಲವ್ಯತ್ಯಾಸದಿಂದ ಹಗಲು ರಾತ್ರಿಗಳು ಸಂಭವಿಸುವ ಪ್ರಕಾರವನ್ನೂ, ಮೇರು, ಮಾನಸೋತ್ತರ

ಪರ್ವತಗಳ ಎತ್ತರಗಳನ್ನೂ, ಸೂರ್ಯಗತಿಯ ವೇಗವನ್ನೂ, ಘಳಿಗೆ-ವಿಘಳಿಗೆಗಳ ಸಮೇತ ಸೂರ್ಯಗತಿಯಿಂದೇರ್ಪಡುವ ಕಾಲ ಪ್ರಭೇದ-ಗಳನ್ನೂ, ಭೂಪ್ರದೇಶಗಳ ವಿಭಾಗಗಳನ್ನೂ, ಅವುಗಳ ವಿಷ್ಕಂಭ ವಿಸ್ತಾರ ಸುತ್ತಳತೆಗಳನ್ನೂ, ಸಪ್ತದ್ವೀಪಗಳಲ್ಲಿರುವ ನಾನಾ ಪರ್ವತ – ನದೀ – ಸರೋವರ – ಪ್ರಸಿದ್ಧ ಕ್ರೀಡೋಪವನಗಳು ಮುಂತಾದವುಗಳ ಉದ್ದ-ಅಗಲ-ಎತ್ತರ ಇತ್ಯಾದಿ ಸಂಖ್ಯಾಗಣನೆ ಸಹಿತ ವಿವರಗಳನ್ನೂ ವಿಸ್ತಾರವಾಗಿ ಆಗಮಗಳು ನಿರೂಪಿಸುತ್ತವೆ. ಭೂಮಧ್ಯದಲ್ಲಿರುವ ಮೇರುಪರ್ವತವು ಅದರ ಎಡ ಬಲ ಉತ್ತರ ದಕ್ಷಿಣ ಮೊದಲಾದ ಎಲ್ಲ ದಿಕ್ಕುಗಳಲ್ಲಿರುವ ಸಪ್ತದ್ವೀಪ ಪರ್ಯಂತವಾದ ಪೃಥ್ವಿಯಲ್ಲಿರುವ ಸರ್ವರಿಗೂ ಉತ್ತರ ದಿಕ್ಕಿನಲ್ಲಿರುವುದೆಂದು ಹೇಳಲಾಗಿದೆ. ಸರ್ವರಿಗೂ ತಮ್ಮ ಸುತ್ತಲೂ ಇರುವ ಮಾನಸೋತ್ತರ ಪರ್ವತದ ಬಲ-ಎಡ ಪಾರ್ಶ್ವಗಳಲ್ಲಿರುವ ಭಾಗಗಳು (ಉತ್ತರಾಭಿಮುಖವಾಗಿ ನಿಂತಾಗ) ಉದಯಾಚಲ ಅಸ್ತಾಚಲಗಳಾಗುತ್ತವೆಂದೂ ಹೇಳಲಾಗಿದೆ. ಮೇರುಪರ್ವತವೇ ದಿಕ್ಕುಗಳ ಕಲ್ಪನೆಗೆ ಮೂಲ ಸ್ತಂಭದಂತಿದೆ. ಸಪ್ತದ್ವೀಪಗಳು ಪರಸ್ಪರ ಅಗಮ್ಯಗಳೆಂದೂ, ಒಂದೊಂದು ದ್ವೀಪದಲ್ಲಿರುವ ವರ್ಷಗಳು (ಕುಲಾಚಲ ಪರ್ವತಗಳಿಂದ ವಿಭಕ್ತವಾದ ಭಾಗಗಳು) ಸಹ ಪರಸ್ಪರ ಅಗಮ್ಯಗಳೆಂದೂ ಹೇಳಲಾಗಿದೆ. ಅಗಮ್ಯಗಳೆಂದರೆ ರಷ್ಯಾ ದೇಶವನ್ನು ಉಕ್ಕಿನ ತೆರೆ (iron curtain) ಯೊಳಗಿನ ದೇಶವೆಂದು ಕರೆಯುವಂತಲ್ಲ-ಭೇದಿಸಲಾಗದ ವಿದ್ಯುದಾದಿ ಪ್ರಚಂಡ ಶಕ್ತಿಗಳ (ಅಭಿಮಾನಿ ದೇವತೆಗಳಿಂದ ರಕ್ಷಿತವಾದ) ತೆರೆಗಳು. ಗಗನಯಾತ್ರಿಕರಿಗಾಗಿ ವಿಜ್ಞಾನಿಗಳು ನಿರ್ಮಿಸುತ್ತಿರುವ ಬಹು ತೊಡಕಿನ ಉಪಕರಣಗಳಿಂದ ಯುಕ್ತವಾದ ಕವಚಾದಿಗಳ ಅಪೇಕ್ಷೆಯಿಲ್ಲದೇ, ಭೂಮ್ಯಾದಿ ಗ್ರಹಗಳ ಗುರುತ್ವಾಕರ್ಷಣೆಗಳಿಗೂ, ಅಂತರಿಕ್ಷ ಮಾರ್ಗ-ಗಳಲ್ಲಿ ಎದುರಿಸಬೇಕಾದ ನಾನಾ ವಿಪತ್ಕಾರಕ-ಮಾರಕ ಸನ್ನಿವೇಶಗಳಿಗೂ ಸಿಲುಕದೇ,[50] ತಮ್ಮ ಯೋಗಶಕ್ತಿಯಿಂದ, ಬ್ರಹ್ಮಾಂಡದ ಯಾವ ಪ್ರದೇಶಗಳಲ್ಲಾದರೂ ತಮ್ಮ ಇಚ್ಛಾನುಸಾರ ಸಂಚರಿಸುತ್ತಿದ್ದ ನಾರದಾದಿ

---

50. ಅಂತರಿಕ್ಷ ಮಾರ್ಗದಲ್ಲಿ (dangerous belts and safe corridors) ಅಪಾಯಕರ ನಡುಕಟ್ಟುಗಳೂ ಮತ್ತು ಸುಕ್ಷೇಮ ಬೀದಿಗಳೂ ಇರುವುವೆಂದು ವಿಜ್ಞಾನಿಗಳೂ ಹೇಳುತ್ತಾರೆ.

ಗಳನ್ನೂ ಅಂತಹ ಒಂದು ಕೇಂದ್ರದ ಮೇಲೆ ಆಕಾಶದಲ್ಲಿ ವರ್ತುಲಾಕಾರದ (circle) ಪಥದಲ್ಲಿ ಸುತ್ತಿಸುವುದಾದರೆ, ಈಗ ನಾವು ಕಾಣುತ್ತಿರುವಂತೆ ಉಪಗ್ರಹಗಳು ಆಕಾಶದಲ್ಲಿ ಸುತ್ತುವುದನ್ನು ಕಾಣಬಹುದೆಂಬುದು ಅಸಂಭವ-ವಾದೀತೇ? ಆಕಾಶದಲ್ಲಿರುವ ವಸ್ತುವು ಭೂಮಿಗೆ ಸಮೀಪವಾಗಿದ್ದಷ್ಟೂ ಪೂರ್ವಪಶ್ಚಿಮ (ಅಥವಾ ಉತ್ತರ ದಕ್ಷಿಣ) ದಿಗಂತಗಳ (ಕ್ಷಿತಿಜಗಳು-horizons) ಅಂತರವು ಕಡಿಮೆಯಾಗಿರುತ್ತದೆ. ಆ ವಸ್ತುವು ದೂರ ದೂರವಿದ್ದಷ್ಟು, ದಿಗಂತಗಳ ಅಂತರವು ಬೆಳೆದು ಹೆಚ್ಚುತ್ತದೆ. ಲಕ್ಷಾವಧಿ ಯೋಜನಗಳ ದೂರದಲ್ಲಿರುವ ಗ್ರಹನಕ್ಷತ್ರಗಳಂತೂ ಒಂದು ಕ್ಷಿತಿಜದಿಂದ ಮತ್ತೊಂದು ಕ್ಷಿತಿಜವನ್ನು ಮುಟ್ಟಲು ಕೋಟಿಶಃ ಯೋಜನಗಳ ದೂರವನ್ನು ಕ್ರಮಿಸಬೇಕಾಗುತ್ತದೆ. ಸಾಗರ ಮಧ್ಯದಲ್ಲಿ ವಿಸ್ತಾರವಾದ ಸುಳಿಗಳಿರುತ್ತವೆ. ಸುಳಿಗೆ ಸಿಕ್ಕ ವಸ್ತು ಅದರಿಂದ ಪಾರಾಗಿ ಅನ್ಯತ್ರ ಹೋಗುವುದು (ಮುಂದೆ ಹೋಗುವುದು) ಸಾಧ್ಯವಿಲ್ಲ. ಹಾಗೆಯೇ ಉಪಗ್ರಹಗಳು ಭೂಮಿಯಲ್ಲಿರುವ ಕೇಂದ್ರಮೇಲೆ ಆಕಾಶದಲ್ಲಿ ವರ್ತುಲ ಪಥದಲ್ಲಿ ಸುತ್ತುತ್ತಿರಕೂಡದೇಕೆ? ಈ ಹಿಂದೆ ಉದಾಹೃತವಾದ ಬ್ರಹ್ಮಾಂಡ ಪುರಾಣ ವಾಕ್ಯವು ಭರತವರ್ಷವು ಪರಸ್ಪರ ಅಗಮ್ಯಗಳಾದ ಒಂಭತ್ತು ವಿಭಾಗಗಳಿಂದ ಕೂಡಿರುವುದೆಂದು ಹೇಳುವಂತಿದೆ. ಹೀಗಿರುವಲ್ಲಿ, ಸಪ್ತದ್ವೀಪಗಳು, ಸಪ್ತಸಮುದ್ರಗಳು, ಜಂಬೂ-ದ್ವೀಪದ ಇತರ ವರ್ಷಗಳೂ ಒಂದು ಲಕ್ಷ ಯೋಜನ (೧೦ ಲಕ್ಷ ಮೈಲಿ) ವಿಸ್ತಾರವುಳ್ಳದ್ದೆಂಬ ಲವಣ ಸಮುದ್ರದ ಆಚೆಗಿರುವ ಪ್ರದೇಶಗಳೂ ಗಗನಯಾತ್ರಿಕರಿಗೆ ಗೋಚರಿಸುವುದೆಂತು? ಒಂದಕ್ಕಿಂತ ಮತ್ತೊಂದು ಎರಡರಷ್ಟು ವಿಸ್ತಾರವಾಗಿರುವುವೆಂಬ, ಸಪ್ತಸಮುದ್ರಗಳಲ್ಲಿ ಕಡೆಯದಾದ ಶುದ್ಧೋದಕ ಸಮುದ್ರದ ತೀರದಲ್ಲಿ ಪುಷ್ಕರ ದ್ವೀಪದ ಅಂಚಿನಲ್ಲಿ ಮೇರುಪರ್ವತದ ಸುತ್ತಲೂ ಇರುತ್ತದೆಂಬ ಮಾನಸೋತ್ತರ ಪರ್ವತದ ಮೇಲ್ಭಾಗದಲ್ಲಿ ಸೂರ್ಯನ ಪಥವಿರುತ್ತದೆಂದೂ, ಜಂಬೂದ್ವೀಪದ ಮಧ್ಯ-ದಲ್ಲಿರುವ ಮೇರುಪರ್ವತದ ಬುಡದ ಸುತ್ತಲಿರುವ ಇಲಾವೃತ ಖಂಡವೆಂಬ ಭಾಗದಲ್ಲಿ ಸದಾ ಸೂರ್ಯಪ್ರಕಾಶವಿರುವುದೆಂದೂ ವೇದಾದಿ ಆಗಮಗಳಲ್ಲಿ ಹೇಳಲಾಗುತ್ತದೆ. ಪ್ರದಕ್ಷಿಣಾಕಾರವಾಗಿ ಮೇರುಪರ್ವತವನ್ನು ಸೂರ್ಯನು ಸುತ್ತುವುದರಿಂದ ಪೃಥ್ವಿಯ ನಾನಾ ಭಾಗಗಳಲ್ಲಿ ಕಾಲವ್ಯತ್ಯಾಸದಿಂದ ಹಗಲು ರಾತ್ರಿಗಳು ಸಂಭವಿಸುವ ಪ್ರಕಾರವನ್ನೂ, ಮೇರು, ಮಾನಸೋತ್ತರ

ಪರ್ವತಗಳ ಎತ್ತರಗಳನ್ನೂ, ಸೂರ್ಯಗತಿಯ ವೇಗವನ್ನೂ, ಘಳಿಗೆ-ವಿಘಳಿಗೆಗಳ ಸಮೇತ ಸೂರ್ಯಗತಿಯಿಂದೇರ್ಪಡುವ ಕಾಲ ಪ್ರಭೇದ-ಗಳನ್ನೂ, ಭೂಪ್ರದೇಶಗಳ ವಿಭಾಗಗಳನ್ನೂ, ಅವುಗಳ ವಿಷ್ಕಂಭ ವಿಸ್ತಾರ ಸುತ್ತಳತೆಗಳನ್ನೂ, ಸಪ್ತದ್ವೀಪಗಳಲ್ಲಿರುವ ನಾನಾ ಪರ್ವತ – ನದೀ – ಸರೋವರ – ಪ್ರಸಿದ್ಧ ಕ್ರೀಡೋಪವನಗಳು ಮುಂತಾದವುಗಳ ಉದ್ದ-ಅಗಲ-ಎತ್ತರ ಇತ್ಯಾದಿ ಸಂಖ್ಯಾಗಣನೆ ಸಹಿತ ವಿವರಗಳನ್ನೂ ವಿಸ್ತಾರವಾಗಿ ಆಗಮಗಳು ನಿರೂಪಿಸುತ್ತವೆ. ಭೂಮಧ್ಯದಲ್ಲಿರುವ ಮೇರುಪರ್ವತವು ಅದರ ಎಡ ಬಲ ಉತ್ತರ ದಕ್ಷಿಣ ಮೊದಲಾದ ಎಲ್ಲ ದಿಕ್ಕುಗಳಲ್ಲಿರುವ ಸಪ್ತದ್ವೀಪ ಪರ್ಯಂತವಾದ ಪೃಥ್ವಿಯಲ್ಲಿರುವ ಸರ್ವರಿಗೂ ಉತ್ತರ ದಿಕ್ಕಿನಲ್ಲಿರುವುದೆಂದು ಹೇಳಲಾಗಿದೆ. ಸರ್ವರಿಗೂ ತಮ್ಮ ಸುತ್ತಲೂ ಇರುವ ಮಾನಸೋತ್ತರ ಪರ್ವತದ ಬಲ-ಎಡ ಪಾರ್ಶ್ವಗಳಲ್ಲಿರುವ ಭಾಗಗಳು (ಉತ್ತರಾಭಿಮುಖವಾಗಿ ನಿಂತಾಗ) ಉದಯಾಚಲ ಅಸ್ತಾಚಲಗಳಾಗುತ್ತವೆಂದೂ ಹೇಳಲಾಗಿದೆ. ಮೇರುಪರ್ವತವೇ ದಿಕ್ಕುಗಳ ಕಲ್ಪನೆಗೆ ಮೂಲ ಸ್ತಂಭದಂತಿದೆ. ಸಪ್ತದ್ವೀಪಗಳು ಪರಸ್ಪರ ಅಗಮ್ಯಗಳೆಂದೂ, ಒಂದೊಂದು ದ್ವೀಪದಲ್ಲಿರುವ ವರ್ಷಗಳು (ಕುಲಾಚಲ ಪರ್ವತಗಳಿಂದ ವಿಭಕ್ತವಾದ ಭಾಗಗಳು) ಸಹ ಪರಸ್ಪರ ಅಗಮ್ಯಗಳೆಂದೂ ಹೇಳಲಾಗಿದೆ. ಅಗಮ್ಯಗಳೆಂದರೆ ರಷ್ಯಾ ದೇಶವನ್ನು ಉಕ್ಕಿನ ತೆರೆ (iron curtain) ಯೊಳಗಿನ ದೇಶವೆಂದು ಕರೆಯುವಂತಲ್ಲ-ಭೇದಿಸಲಾಗದ ವಿದ್ಯುದಾದಿ ಪ್ರಚಂಡ ಶಕ್ತಿಗಳ (ಅಭಿಮಾನಿ ದೇವತೆಗಳಿಂದ ರಕ್ಷಿತವಾದ) ತೆರೆಗಳು. ಗಗನಯಾತ್ರಿಕರಿಗಾಗಿ ವಿಜ್ಞಾನಿಗಳು ನಿರ್ಮಿಸುತ್ತಿರುವ ಬಹು ತೊಡಕಿನ ಉಪಕರಣಗಳಿಂದ ಯುಕ್ತವಾದ ಕವಚಾದಿಗಳ ಅಪೇಕ್ಷೆಯಿಲ್ಲದೇ, ಭೂಮ್ಯಾದಿ ಗ್ರಹಗಳ ಗುರುತ್ವಾಕರ್ಷಣೆಗಳಿಗೂ, ಅಂತರಿಕ್ಷ ಮಾರ್ಗ-ಗಳಲ್ಲಿ ಎದುರಿಸಬೇಕಾದ ನಾನಾ ವಿಪತ್ಕಾರಕ-ಮಾರಕ ಸನ್ನಿವೇಶಗಳಿಗೂ ಸಿಲುಕದೇ,[50] ತಮ್ಮ ಯೋಗಶಕ್ತಿಯಿಂದ, ಬ್ರಹ್ಮಾಂಡದ ಯಾವ ಪ್ರದೇಶಗಳಲ್ಲಾದರೂ ತಮ್ಮ ಇಚ್ಛಾನುಸಾರ ಸಂಚರಿಸುತ್ತಿದ್ದ ನಾರದಾದಿ

---

50. ಅಂತರಿಕ್ಷ ಮಾರ್ಗದಲ್ಲಿ (dangerous belts and safe corridors) ಅಪಾಯಕರ ನಡುಕಟ್ಟುಗಳೂ ಮತ್ತು ಸುಕ್ಷೇಮ ಬೀದಿಗಳೂ ಇರುವುವೆಂದು ವಿಜ್ಞಾನಿಗಳೂ ಹೇಳುತ್ತಾರೆ.

ಯೋಗೀಶ್ವರರ ಸಂಚಾರಕ್ರಮವೂ ವರ್ಣಿತವಾಗಿದೆ.[51] ಬ್ರಹ್ಮಾಂಡವನ್ನೂ ಅದರ ಹೊರಗಿನ ಆವರಣಗಳನ್ನೂ, ಒಳಗಿರುವ ಲೋಕ ವಿಭಾಗಗಳನ್ನೂ, ಭೂಗೋಳ-ಖಗೋಳಗಳನ್ನೂ, ಪಾತಾಳಾದಿ ಅಧೋಲೋಕಗಳನ್ನೂ ಇವುಗಳ ಸಂಬಂಧವಾದ ಚಿತ್ರವಿಚಿತ್ರ ಅದ್ಭುತಗಳನ್ನೂ ಆಗಮಗಳು ಬಹು ವಿಸ್ತಾರದಿಂದ ನಿರೂಪಿಸುತ್ತವೆ. (ಸಹಸ್ರಾರು ಪುಟಗಳಲ್ಲಿ) ಪುರಾಣಗಳಲ್ಲಿ, ಮಹಾಭಾರತ-ಭಾಗವತ-ರಾಮಾಯಣಾದಿಗಳಲ್ಲಿ ವರ್ಣಿತವಾದ ಪ್ರಮೇಯಗಳಲ್ಲಿ ಕೆಲವು ಅಂಶಗಳನ್ನು ಮಾತ್ರ ಅತಿ ಸಂಕ್ಷೇಪದಿಂದ ದಿಗ್ದರ್ಶನಾರ್ಥವಾಗಿ ಇಲ್ಲಿ ಸೂಚಿಸಿದ್ದೇನೆ. ಈ ಎಲ್ಲವನ್ನೂ ನಿರ್ಣಯಾತ್ಮಕವಾಗಿ ತಿಳಿಯುವುದು ಬ್ರಹ್ಮಾದಿ ಶ್ರೇಷ್ಠ ದೇವತೆಗಳಿಗೆ ಮಾತ್ರ ಶಕ್ಯವಾದುದು. ಇತರರು ಯಥಾ ಶಕ್ತಿ ಕೆಲವು ಅಂಶಗಳನ್ನು ಮಾತ್ರ ಗ್ರಹಿಸಬಹುದು. ಯೋಗೀಶ್ವರರು ತಮ್ಮ ದಿವ್ಯ-ದೃಷ್ಟಿಯಿಂದ ಕಂಡು ವರ್ಣಿಸಿರುವ ವಿಷಯಗಳನ್ನು, ಅಲ್ಪಮಾನವನು ಬುದ್ಧಿಯಿಂದ ಗ್ರಹಿಸಲೂ ಸಹ ಅಶಕ್ತನಾಗಿರುವಾಗ, ಚರ್ಮಚಕ್ಷುಗಳಿಂದ ಪ್ರತ್ಯಕ್ಷ ಕಾಣುವುದು ದುಸ್ಸಾಧ್ಯವೇ ಸರಿ. ಯೋಗಶಕ್ತಿ, ದಿವ್ಯದೃಷ್ಟಿ, ಇತ್ಯಾದಿಗಳು ಈ ವಿಜ್ಞಾನ ಯುಗದಲ್ಲಿ ಅರ್ಥವಿಲ್ಲದ ಶಬ್ದಗಳಾಗಿವೆ. ಕೇವಲ ತರ್ಕ-ವನ್ನವಲಂಬಿಸಿ ಮುಂದುವರಿಯುತ್ತಿರುವ ವಿಜ್ಞಾನಿಗಳ ಜಡವಾದದ ತಾತ್ಕಾಲಿಕ ನಿರ್ಣಯಗಳಿಂದ ಆಗಮಗಳಿಗೆ ಅಪ್ರಾಮಾಣ್ಯವನ್ನು ಶಂಕಿಸುವುದು ಸರಿಯಲ್ಲ.

ಪೂರ್ವೋಕ್ತ ಪರಾಮರ್ಶೆಯಿಂದ, ಮೇರ್ವಾದಿ ಪರ್ವತಗಳು-ಸಪ್ತ ಸಮುದ್ರಗಳು ವಿಜ್ಞಾನಿಗಳಿಗೆ ಕಂಡುಬಂದಿಲ್ಲವೆಂಬ ಅಂಶವು, ಭೂಮಿಯು ಅವರಿಗೆ ತಿಳಿದಿರುವಷ್ಟೇ ವಿಸ್ತಾರವುಳ್ಳದ್ದೆಂದಾಗಲಿ ಆಕಾಶದಲ್ಲಿ ಸುತ್ತುವ ಗೋಳವೆಂದಾಗಲಿ ಸ್ಥಾಪಿಸಲಾರದೆಂಬುದನ್ನು, ಮನಗಾಣಬಹುದು. ೧೦ ಲಕ್ಷ ಮೈಲಿಗಳ ವಿಸ್ತಾರವುಳ್ಳ ಲವಣಸಮುದ್ರದ ಮಧ್ಯದಲ್ಲಿರುವ ಒಂದು ವರ್ತುಲಾಕಾರದ ದ್ವೀಪವು (ಸಮುದ್ರಪ್ರದೇಶದಿಂದ ಭಿನ್ನಭಿನ್ನ ಭಾಗಗಳುಳ್ಳ ಒಂದು ದ್ವೀಪವು) ಉಪಗ್ರಹಗಳಿಂದ ಬಂದ ಛಾಯಾ ಚಿತ್ರಗಳಲ್ಲಿ ಮೂಡಿದರೆ, ನಾವು ಕಂಡಿರುವುದು ಅಷ್ಟುಮಾತ್ರವೆಂದು ಹೇಳಬಹುದಲ್ಲದೇ ಪೃಥ್ವಿ ಇರುವುದೇ ಅಷ್ಟೆಂದು ತಿಳಿಯುವ ಕಾರಣವಿಲ್ಲ. ಒಂದು ಕೇಂದ್ರಶಕ್ತಿಯ

51. ಈಗ ಸಹ ಕೆಲವು ಹಠಯೋಗಿಗಳು ಭೂಮಿಯ ಗುರುತ್ವಾಕರ್ಷಣೆಯನ್ನು ಶಕ್ಯಾನುಸಾರ ಜಯಿಸಿ, ಭೂಮಿಯ ಮೇಲೇರುವ ಸಾಮರ್ಥ್ಯವನ್ನು ಪ್ರದರ್ಶನ ಮಾಡಿದವರಿದ್ದಾರೆ.

ವ್ಯಾಪ್ತಿಗೆ ಒಳಪಟ್ಟ ಅಂತರಿಕ್ಷ ಭಾಗದಲ್ಲಿ ಸುಳಿಯಲ್ಲಿ ಸಿಕ್ಕಂತೆ, ಸುತ್ತುವ ಉಪಗ್ರಹಕ್ಕೆ ಹೆಚ್ಚಿನದೇನೂ ಉಪಲಬ್ಧವಾಗದು. ಮೇಲೆಮೇಲೆ ಎಷ್ಟು ದೂರ ಹೋದರೂ ವಿಶಾಲವಾಗುತ್ತಿರಬಹುದಾದ ಆ ಸುಳಿಯನ್ನು ಅತಿಕ್ರಮಿಸಲಾರದೇ ಅನಂತಾಕಾಶದ ಏಕದೇಶದಲ್ಲಿ ಮಾತ್ರ ಗತಿಯುಳ್ಳದ್ದಾಗಬಹುದು. ದುಂಡ-ಗಿರುವ ತಟ್ಟೆ ಮತ್ತು ಚೆಂಡುಗಳ ಛಾಯಾ ಚಿತ್ರಗಳು ಏಕಪ್ರಕಾರವಾಗಿ ತೋರುವುದು ಸಹಜವಾಗಿದೆ. ಆಕಾಶದಲ್ಲಿ ನಿಂತು ಯಾವ ದಿಕ್ಕಿನಿಂದ ಛಾಯಾಚಿತ್ರವನ್ನು (photo) ತೆಗೆದುಕೊಂಡರೂ ಅದು ವರ್ತುಲ ಅಥವಾ ವೃತ್ತಖಂಡದ (arc) ಆಕಾರವಾಗಿಯೇ ಇರುತ್ತದೆ - ಬ್ರಹ್ಮಾಂಡ ರಚನೆಯ ವೈಚಿತ್ರ್ಯವಿದು. ಈನ್‌ಸ್ಟಿನ್ನರ ಸಾಪೇಕ್ಷಕ ವಾದದಿಂದ (Eienstin's theory of relativity) ಕಾಲ - ದೇಶಗಳ ಸಂಬಂಧವಾದ ಹೊಸ ಕಲ್ಪನೆಯು, ವಿಜ್ಞಾನಿಗಳಲ್ಲಿ ಉದ್ಭವಿಸಿತೆನ್ನಬಹುದು. ಅವರು, ಆಕಾಶದ ಆಚೆಗೆ ಎಂಬುದಿಲ್ಲ-ನಾವು ಯಾವ ದಿಕ್ಕಿಗೆ ಹೋದರೂ ಇದ್ದಲ್ಲಿಗೇ ಬರಬೇಕಾಗುವುದು ಎಂಬ ವಾದವನ್ನು ಮುಂದಿಟ್ಟಿರುವುದು ಬಹು ಅರ್ಥಗರ್ಭಿತವಾಗಿದೆ. ಆಕಾಶವೇ ಬಗ್ಗಿ ದುಂಡಗಿದೆ (space itself is curved) ಎಂಬುದು ಅವರ ವಾದಗಳಲ್ಲೊಂದು. ಅದ್ಭುತವಾದ ಈ ವಿಶ್ವದಲ್ಲಿ, ಭೂಮ್ಯಾಕಾಶಗಳಲ್ಲಿ ಎಲ್ಲೆಲ್ಲಿ ಯಾವ ಯಾವ ವಿಧದ ಶಕ್ತಿ ಕೇಂದ್ರಗಳಿದ್ದು ಅವು ಹೇಗೆ ಕೆಲಸ ಮಾಡುತ್ತವೆಂಬುದನ್ನು ಮಾನವನು ಎಂದೂ ತಿಳಿಯಲಾರನು. ಆದ್ದರಿಂದ, ಗ್ರಹನಕ್ಷತ್ರಾದಿ ಸಂಚಾರಕ್ರಮ, ಅವುಗಳ ವೇಗ, ಬ್ರಹ್ಮಾಂಡದ ವಿಸ್ತಾರ, ಬ್ರಹ್ಮಾಂಡದಲ್ಲಿ ಅದ್ಭುತ ವ್ಯಾಪಾರಗಳನ್ನು ನಡೆಸುವ ವಿಚಿತ್ರ ವಿದ್ಯುದಾದಿ ಶಕ್ತಿವಿಶೇಷಗಳು, ಕಾಲ, ದೇಶ, ಪರಿಸ್ಥಿತಿಗಳ ಪ್ರಭಾವದಿಂದ ಅವು ಅನುಸರಿಸ-ಬಹುದಾದ ನಿಯಮಗಳು ಇತ್ಯಾದಿಗಳನ್ನು ವಿಜ್ಞಾನಿಗಳು ಯಾವ ಕಾಲಕ್ಕೂ ಪೂರ್ಣವಾಗಿ ತಿಳಿಯಲಾರರು. ಇವರ ಊಹಾಪೋಹಗಳ ಪರಂಪರೆಗೆ ಮಿತಿ ಇಲ್ಲ - ಆದ್ಯಂತಗಳಿಲ್ಲ. ಬಹು ಸಹಸ್ರಕೋಟಿ ಪ್ರಕಾಶ ವರ್ಷಗಳ (Light years) ದೂರದಲ್ಲಿರುವ ನಕ್ಷತ್ರ ಮಂಡಲಗಳಿವೆಯೆಂದು ಮುಂತಾಗಿ ಹೇಳುವ ಇವರ ವಾದಗಳು ನಿರಾಧಾರವಾದವು.[52] ೫೦ ಕೋಟಿ ಯೋಜನವ್ಯಾಸ (diameter)ವುಳ್ಳದ್ದು ಬ್ರಹ್ಮಾಂಡವೆಂಬ ಆಗಮ ವಾಕ್ಯಗಳಿಗೆ ಇದರಿಂದ ವಿರೋಧವೆಂದು ಭಾವಿಸಲು ಬರುವುದಿಲ್ಲ. ವಿಶ್ವದ ಸೃಷ್ಟಿ-ಪ್ರಕಾರವನ್ನೂ ಆಗಮಗಳು ವಿಸ್ತಾರವಾಗಿ ನಿರೂಪಿಸುತ್ತವೆ. ಸಾಮಾನ್ಯರು ಅದನ್ನು

52. ರತ್ನ (1) ರಲ್ಲಿ 3ನೇ ಪರಿಚ್ಛೇದವನ್ನು ಇಲ್ಲಿ ಓದಿಕೊಳ್ಳಬಹುದು.

ಗ್ರಹಿಸುವುದು ಕಷ್ಟ. ಸೂಕ್ಷ್ಮ ಬುದ್ಧಿಗಳು ಬಹು ಶ್ರಮದಿಂದ, ಯೋಗ್ಯ ಗುರೂಪ- ದೇಶದಿಂದ, ತತ್ಸಂಬಂಧವಾದ ಪ್ರಮೇಯಗಳನ್ನು ತಿಳಿಯಬಹುದು. ವಿಶ್ವಸೃಷ್ಟಿಗೆ ಸಂಬಂಧಿಸಿದ ವಿಜ್ಞಾನಿಗಳ ವಾದಗಳನ್ನು ಗ್ರಹಿಸಬಲ್ಲವರು ಎಷ್ಟು ಜನರಿದ್ದಾರೆ? ಸಾಮಾನ್ಯರಿಗಂತೂ ಅರ್ಥವಾಗುವುದೇ ಇಲ್ಲ. ಇಷ್ಟುಮಾತ್ರವಲ್ಲ; ಆಗಮಗಳಂತೆ ಅವರಲ್ಲಿ ಏಕವಾಕ್ಯತೆಯೂ ಇಲ್ಲ-ಬಹು ಭಿನ್ನವೂ ಪರಸ್ಪರ ವಿರುದ್ಧವೂ ಆದ ವಾದಗಳಿವೆ. ''ಅನಂತ ವಿಸ್ತಾರವುಳ್ಳ ಆಕಾಶವೆಂಬ ಅಪಾರ ಸಾಗರ ಮಧ್ಯದಲ್ಲಿ ನಕ್ಷತ್ರ ರಾಶಿಗಳು ದ್ವೀಪಗಳಂತೆ ಗುಂಪುಗುಂಪಾಗಿ ಹಬ್ಬಿವೆ. ಪ್ರಬಲ (powerful) ದೂರದರ್ಶಕ ಯಂತ್ರಗಳಲ್ಲಿ ಈ ಗುಂಪುಗಳನ್ನು ಗುರ್ತಿಸಬಹುದು. ಒಂದೊಂದು ಗುಂಪೂ ಒಂದೊಂದು ಬ್ರಹ್ಮಾಂಡ. ನಾವಿರುವ ಬ್ರಹ್ಮಾಂಡವೂ ಅಂತಹ ಒಂದು ಗುಂಪು. ಅದರಲ್ಲಿ ಸೂರ್ಯನು ಒಂದು ಚಿಕ್ಕ ನಕ್ಷತ್ರ ಮಾತ್ರ. ಒಂದೊಂದು ನಕ್ಷತ್ರಕ್ಕೂ ಅನೇಕ ಗ್ರಹಗಳು-ಅವುಗಳಿಗೆ ಉಪಗ್ರಹಗಳೂ ಇವೆ. ನಮ್ಮ ಬ್ರಹ್ಮಾಂಡದ ವ್ಯಾಸವು ಒಂದು ಲಕ್ಷ ಪ್ರಕಾಶ ವರ್ಷ. ಇಂಥ ಬ್ರಹ್ಮಾಂಡಗಳು ಅನಂತ ಕೋಟಿಗಳಿವೆ. ಹೀಗಿರುವ ವಿಶ್ವದಲ್ಲಿ ಕ್ವಸಾರಗಳೆಂದು (Quassars) ಕರೆಯಲ್ಪಡುವಬಹು ಕೋಟಿ ಪ್ರಕಾಶವರ್ಷ ದೂರದಲ್ಲಿರುವ ಕೆಲವು ವಸ್ತುಗಳಿವೆ. ಅವುಗಳಿಂದ ಪ್ರಸಾರವಾಗುತ್ತಿರುವ ರೇಡಿಯೋ ತರಂಗಗಳು ಸೂಚಿಸುವ ಅಗಾಧ ಶಕ್ತಿಯನ್ನು ಲಕ್ಷಿಸಿದರೆ, ಆ ಕ್ವಸಾರಗಳು ನಕ್ಷತ್ರಗಳೂ ಅಲ್ಲ- ಬ್ರಹ್ಮಾಂಡಗಳೂ ಅಲ್ಲವೆಂದು ತಿಳಿಯಬರುತ್ತದೆ. (ಹಾಗಾದರೆ ಅವುಗಳೇನು? ಉತ್ತರವಿಲ್ಲ).'' ಈ ವಿಧ ವೈಜ್ಞಾನಿಕ ಕಲ್ಪನೆಗಳಿಂದ, ಒಂದು ಹೊಸ ಕಲ್ಪನೆ (theory) ಹುಟ್ಟಿತು. ''ಜಲಜನಕ ಪರಮಾಣುವಿನಲ್ಲಿ ಮಧ್ಯದಲ್ಲಿ ಒಂದು ಪ್ರೋಟಾನ್ ಮತ್ತು ಸುತ್ತಲೂ ತಿರುಗುವ ಒಂದು ಎಲೆಕ್ಟ್ರಾನ್ ಇವೆಯಷ್ಟೆ. ಪ್ರೋಟಾನು ನಿಶ್ಚಿತ ವಿದ್ಯುತ್ಕಣವುಳ್ಳದ್ದು (a unit charge of positive electricity) ಮತ್ತು ಎಲೆಕ್ಟ್ರಾನು ನಿಷೇಧಕ ವಿದ್ಯುತ್ಕಣವುಳ್ಳದ್ದು (a unit of negative electricity)[53] ಮಧ್ಯೆ ನಿಷೇಧಕ ವಿದ್ಯುತ್ಕಣವುಳ್ಳ ಪ್ರೋಟಾನಿದ್ದು, ನಿಶ್ಚಿತ ವಿದ್ಯುತ್ಕಣವುಳ್ಳ ಎಲೆಕ್ಟ್ರಾನು ಸುತ್ತುತ್ತಿದ್ದರೆ, ಇಂಥ ಪರಮಾಣುವನ್ನು ಪ್ರತಿಪದಾರ್ಥವೆಂದು (ante-matter) ಕರೆಯಲಾಗುತ್ತದೆ. ಹೀಗಿರುವ ಪದಾರ್ಥ-ಪ್ರತಿಪದಾರ್ಥಗಳಿಂದ (ನಮಗೆ ಈವರೆಗೆ ತಿಳಿದಿರುವ ಪದಾರ್ಥಕ್ಕೆ (matter) ವಿರುದ್ಧ ರಚನೆಯುಳ್ಳ hydrogen plasma ಎಂಬುದು,

53. ರತ್ನ (1) ರ ಪರಿಚ್ಛೇದ 5 ರಲ್ಲಿ ನೋಡಬೇಕು.

ಆ ಮುಂಚೆ ವಿಶ್ವದಲ್ಲಿದ್ದ ಹೆಪ್ಪುಗಟ್ಟಿದ ಶಕ್ತಿಯಿಂದ, ಉದ್ಭವಿಸಿತು. ಹೀಗೆ ವಿರುದ್ಧ ಸ್ವಭಾವದ ಪ್ಲಾಸ್ಮ ಹುಟ್ಟಿದೊಡನೆ ಸ್ಫೋಟವಾಯಿತು. ಆದರಿಂದ ಬ್ರಹ್ಮಾಂಡಗಳು ಉದ್ಭವಿಸಿದವು. ವಿಶ್ವದ ಅರ್ಧಾಂಶ ಪದಾರ್ಥ, ಅರ್ಧಾಂಶ ಪ್ರತಿಪದಾರ್ಥ. ವಿಶ್ವವ್ಯಾಪ್ತ ಶಕ್ತಿಯಿಂದ ಪದಾರ್ಥ ಪ್ರತಿಪದಾರ್ಥಗಳೂ, ಅವುಗಳ ಸ್ಫೋಟದಿಂದ ನಕ್ಷತ್ರಗಳೂ ಹುಟ್ಟಿದವು. ಅವುಗಳ ರಾಶಿಯೇ ಬ್ರಹ್ಮಾಂಡ. ಆ ಸ್ಫೋಟದಿಂದಲೇ ಬ್ರಹ್ಮಾಂಡಗಳ ನಾಶ. ಶಕ್ತಿಯಿಂದ ಪದಾರ್ಥ-ಪ್ರತಿಪದಾರ್ಥಗಳ ಉತ್ಪತ್ತಿ. ಇವುಗಳ ಸ್ಫೋಟಸಹಿತ ನಾಶದಿಂದ ಶಕ್ತಿ; ಆದರಿಂದಲೇ ಬ್ರಹ್ಮಾಂಡಗಳ ಉತ್ಪತ್ತಿ ವಿನಾಶಗಳು. ಇದು ಸ್ವೀಡನ್ನಿನ್ ಪ್ರೊಫೆಸರ್ ಆಸ್ಕರ್ ಕ್ಲೇನ್ ಮತ್ತು ಹಾನ್ಸ್ ಹಾಲ್ವೀನ್ (Prof. Oscar Clain-Hans Halvein) ಇವರ ವಿಶ್ವಸೃಷ್ಟಿ ವಾದ ಬ್ರಹ್ಮಾಂಡ ಸ್ಫೋಟದಿಂದ (೧೦೦೦ ಕೋಟಿ ವರ್ಷಗಳ ಹಿಂದೆ ಆದದ್ದೆಂಬ) ದಿಕ್ಕುದಿಕ್ಕಿಗೆ ಸಿಡಿದು ಪ್ಲಾಸ್ಮ ಎಂಬ ವಿಚಿತ್ರವಸ್ತು ಸುಳಿಸುಳಿಗಳಾಗಿ ರೂಪಗೊಂಡಿತು. ಈ ಸುಳಿಗಳು ಬಿಂದುಗಳಾಗಿ ನಕ್ಷತ್ರಗಳಾದವು; ನಕ್ಷತ್ರಗಳಿಂದ ಸಿಡಿದುಹೋದ ಸಣ್ಣ ಬಿಂದುಗಳು ಗ್ರಹಗಳಾದವು'' ಇದು ಲೇ ಮೇತ್ರ-ಜಾರ್ಜ ಗೆಮಾವ್ (La Matre George Gemao) ಎಂಬ ಬೆಲ್ಜಿಯನ್ ವಿಜ್ಞಾನಿಗಳ ಸೃಷ್ಟಿವಾದ. ಹೀಗೆಯೇ ಹಾಯ್ಲರ್ (Hoiler) ಮುಂತಾದ ವಿಜ್ಞಾನಿಗಳ ಭಿನ್ನಭಿನ್ನ ಕಲ್ಪನೆಗಳ ಸೃಷ್ಟಿ ವಾದಗಳೂ ಇವೆ. ಅವೆಲ್ಲವನ್ನೂ ವಿಸ್ತರಿಸುವುದು ಅಗತ್ಯವೆನಿಸುವುದಿಲ್ಲ. ವಿಜ್ಞಾನಿಗಳ ಈ ಕಲ್ಪನಾ-ಕೋಲಾಹಲಗಳಿಗೆ ಏನೆನ್ನಬೇಕೆಂದು ತಿಳಿಯದು. ಪ್ರಕಾಶ ಛಾಯೆಗಳನ್ನು ಗುರ್ತಿಸಿದರೆ ಅವು ನಕ್ಷತ್ರ ರಾಶಿಗಳೇ ಇರಬೇಕೆನ್ನುತ್ತಾರೆ; ವಿಲಕ್ಷಣ ರೇಡಿಯೋ ತರಂಗಗಳ ಸೂಚನೆ ದೊರೆತರೆ ಅವು ಕ್ವಸಾರಗಳಿಂದ ಹೊರಟವು-ಗಳಿರಬೇಕೆನ್ನುವರು; ನಕ್ಷತ್ರಗಳಿಂದ ಸಹ ಅಂತಹ ತರಂಗಗಳೇಳಲು ಶಕ್ಯವಿಲ್ಲ-ಆದ್ದರಿಂದ ವಿಲಕ್ಷಣ ಕ್ವಸಾರಗಳನ್ನು ಕಲ್ಪಿಸಿದರು. ಆ ತರಂಗಗಳು ಅಲ್ಲಿಂದ ಹೊರಟವೆಂಬುದು ಕೇವಲ ಕಾಲ್ಪನಿಕ ಊಹೆಗಳಲ್ಲದೇ ಮತ್ತೇನು ! ಇವುಗಳಿಂದ ಸೃಷ್ಟಿ ವಿಷಯಕ ಆಗಮನಿರೂಪಣೆಗಳಿಗೆ ವಿರೋಧವೇ? ಇಂತಹ ವಿರೋಧ-ಗಳಿಂದ ಆಗಮಗಳನ್ನು ಅಪ್ರಮಾಣಗಳೆನ್ನಬಹುದೇ? ಆಶ್ಚರ್ಯ ! ಈ ನಾಸ್ತಿಕ್ಯದ ನಿರ್ಲಜ್ಯ ತಾಂಡವ ನೃತ್ಯದಿಂದ ಸಜ್ಜನರು ಬೆರೆಗಾಗದಿರಲಿ-ಮೋಹಗೊಳ್ಳದಿರಲಿ. ಹೀಗೆ, ವೈಜ್ಞಾನಿಕ ಸಾಧನೆಗಳಿಂದ ಆಗಮ ಪ್ರಾಮಾಣ್ಯಕ್ಕೆ ಪ್ರಾಪ್ತವಾಗಬಹುದಾದ ಸಂಶಯವನ್ನು ಪರಿಹರಿಸುವುದು ಶಕ್ಯವಿದೆ. ಆಗಮ-ಗಳನ್ನು ವಿರೋಧಿಸುವುವೆಂದು ತೋರುವ ಕೆಲವು ಪ್ರಸಿದ್ಧ ವೈಜ್ಞಾನಿಕ

ಸಾಧನೆಗಳನ್ನು ತೆಗೆದುಕೊಂಡು, ಆಗಮಗಳಿಗೆ ಅವಿರೋಧವಾದ ರೀತಿಯಿಂದ ಹೇಗೆ ಅವುಗಳಿಗೆ ಅನ್ಯ ಸಂಭವನೀಯ ಕಾರಣಗಳನ್ನು ತಿಳಿಯಬಹುದೆಂಬು- ದನ್ನು ಈ ಹಿಂದೆ ಸೂಚಿಸಿರುವೆನಲ್ಲದೇ, ವಿಜ್ಞಾನಿಗಳ ಕಲ್ಪನೆಗಳನ್ನು ಖಂಡಿಸಿ, ಅವೆಲ್ಲವೂ ಅಗ್ರಾಹ್ಯಗಳೆಂದು ಸಾಧಿಸಲಿಕ್ಕಲ್ಲ. ವಿಜ್ಞಾನಿಗಳು ಪ್ರತ್ಯಕ್ಷಸಿದ್ಧಮಾಡಿ ತೋರಿಸಿರುವ ಪ್ರಮೇಯಗಳನ್ನು ಒಪ್ಪಲೇಬೇಕು. ಆದರೆ, ಆ ಸಿದ್ಧಕೃತಿಗಳ ಬಗ್ಗೆ ಊಹೆಯಿಂದ ನಿರೂಪಿಸುವ ಕಾರಣ ಪರಂಪರೆಗಳನ್ನು ಅಂಗೀಕರಿಸುವ ಮೊದಲು, ಅವು ಆಗಮ ವಿರುದ್ಧವೋ ಹೇಗೆ ಎಂಬುದನ್ನು ತೀಕ್ಷ್ಣವಾಗಿ ಪರೀಕ್ಷಿಸಬೇಕು. ಹೀಗೆ ಪರೀಕ್ಷಿಸಲು ಆಗಮಗಳ ನಿಷ್ಕೃಷ್ಟ ಅರ್ಥಜ್ಞಾನವು ಅತ್ಯವಶ್ಯಕ. ಇದಕ್ಕಾಗಿ ಈ ಹಿಂದೆ ಸೂಚಿಸಿರುವ ಸಲಹೆಗಳಂತೆ ಉಭಯ ಶಾಸ್ತ್ರ ಪಂಡಿತ ಪ್ರಕಾಂಡರು ಮಿಳಿತರಾಗಿ ಮಹಾ ಪ್ರಯತ್ನಗಳನ್ನು ನಡೆಸಬೇಕು. ಒಂದು ಪಕ್ಷ, ವೈಜ್ಞಾನಿಕ ಅಂತಿಮ ನಿರ್ಣಯಗಳು ಪ್ರತ್ಯಕ್ಷಸಿದ್ಧವಾಗಿ, ಆಗಮೋಕ್ತ ಪ್ರಮೇಯಗಳನ್ನು ವಿರೋಧಿಸುವುವೆಂದು ಕಂಡುಬಂದಾಗ, ಆಗಮ ನಿರೂಪಣೆಗಳಿಗೆ ಅರ್ಥಾಂತರಗಳಿರಬೇಕೆಂದು ತಿಳಿಯಬೇಕಲ್ಲದೇ ಅವುಗಳ ಅಪ್ರಾಮಾಣ್ಯವನ್ನಲ್ಲ. ಮೃದಬ್ರವೀತ್ ಇತ್ಯಾದಿ ವೇದವಾಕ್ಯಗಳಿಗೆ (ಪ್ರತ್ಯಕ್ಷ ವಿರೋಧವನ್ನು ಪರಿಹರಿಸುವ ಪ್ರಕಾರದಲ್ಲಿ ಈ ಹಿಂದೆ ಸೂಚಿಸಿರುವಂತೆ) ಅಭಿಪ್ರೇತವಾದ ಅರ್ಥಗಳನ್ನು ಬೇರೆಯಾಗಿ ತಿಳಿದಂತೆ, ಭೂಗೋಳ-ಖಗೋಳ ವಿಷಯಕ ನಿರೂಪಣೆಗಳಿಗೂ ಅರ್ಥಾಂತರಗಳನ್ನೇ ತಿಳಿಯಬೇಕಾಗುವುದಲ್ಲದೇ, ಅವೆಲ್ಲವೂ ಅಪ್ರಮಾಣಗಳೆಂದಲ್ಲ. ಅಲ್ಲಿ, ಸೂಕ್ಷ್ಮತರ ಪ್ರಾಕೃತ ಶಕ್ತಿವಿಶೇಷಗಳ ಹಾಗೂ ಅವುಗಳ ಅಭಿಮಾನಿ ದೇವತೆಗಳ ವ್ಯಾಪ್ತಿ-ವಿಸ್ತಾರಗಳು ಪ್ರಸಕ್ತವೆಂದು ಪೂರ್ವೋಕ್ತ ತಾತ್ಪರ್ಯ ಲಿಂಗಗಳಿಂದ ಸಿದ್ಧವಾಗಲೂಬಹುದು. ಆಗಮ ತಾತ್ಪರ್ಯಗಳನ್ನು- ನಿಶ್ಚಿತಾಭಿ- ಪ್ರಾಯಗಳನ್ನು ಗ್ರಹಿಸಲು ವಿಶೇಷವಾದ ಮಹತ್ಪ್ರಯತ್ನಗಳಲ್ಲಿ ತೊಡಗ- ಬೇಕೆಂದು ಪ್ರಾಪ್ತವಾಗುವುದಲ್ಲದೇ ಆಗಮಗಳು ಅಪ್ರಮಾಣಗಳೆಂದಲ್ಲ.

ಹೀಗೆ ವೇದಾದಿ ಆಗಮಗಳ ಪ್ರಾಮಾಣ್ಯ ವಿಷಯದಲ್ಲಿ ಪ್ರಾಪ್ತವಾಗುವ ನಾನಾ ಶಂಕೆಗಳ ಪರಿಹಾರವನ್ನು ವಿಮರ್ಶೆಯಿಂದ ದೊರಕಿಸಿಕೊಳ್ಳಬಹುದು. ಆದರಿಂದ ವೇದಗಳು ಅನಾದಿ-ನಿತ್ಯ-ಅಪೌರುಷೇಯ-ಶಬ್ದರಾಶಿಗಳೆಂದೂ, ಅತ ಏವ ದೋಷರಹಿತ ಸ್ವತಃಪ್ರಮಾಣಗಳೆಂದೂ, ಪಂಚಮವೇದವೆಂದು ಪ್ರಸಿದ್ಧವಾದ ಇತಿಹಾಸ ಪುರಾಣಗಳು ವೇದಾನುಸಾರಿಗಳಾದ್ದರಿಂದಲೇ ಸರ್ವೋತ್ಕೃಷ್ಟ ಪ್ರಮಾಣಗಳೆಂದೂ ಸಿದ್ಧವಾಗುತ್ತದೆ.

## ಪರಿಚ್ಛೇದ ೩

## ಉಪಸಂಹಾರ

ದುಃಖಪ್ರಚುರವಾದ ಸಂಸಾರದಿಂದ ಮುಕ್ತರಾಗಿ ಅಪೇಕ್ಷಿತವಾದ ನಿತ್ಯ ನಿರ್ದುಃಖಾನಂದವನ್ನು ಪಡೆಯುವುದೆಂಬ ಮಾನವ ಗುರಿಯನ್ನು ಮುಟ್ಟಲು, ತತ್ವಜ್ಞಾನ ನಿಶ್ಚಯವು ಪ್ರಧಾನ ಸಾಧನವಾಗಿದೆ. ಯಥಾರ್ಥಜ್ಞಾನ ಸಾಧನ-ಗಳಾದ ಪ್ರಮಾಣಗಳನ್ನು ಈ ಗ್ರಂಥದಿಂದ ನಿಶ್ಚಯಿಸಿಕೊಂಡಾಯಿತು. ಈ ಪ್ರಮಾಣಗಳಿಂದ ಸಿದ್ಧವಾಗುವ ಪ್ರಮೇಯಗಳಾವುವೆಂಬ ಮುಖ್ಯ ವಿಷಯ-ವನ್ನು ಮುಂದಿನ ಗ್ರಂಥದಲ್ಲಿ ವಿವೇಚಿಸಿ ಸಿದ್ಧಾಂತಿಸಲಾಗುತ್ತದೆ. ರತ್ನ (೧)ರ ೬ನೇ ಪರಿಚ್ಛೇದದಲ್ಲಿ ತತ್ವವಾದಿಗಳ ವಾದಸರಣಿಯನ್ನು ಸಂಕ್ಷೇಪವಾಗಿ ನಿರೂಪಿಸಿ, ಅದು ಲೋಕಾನುಭವಗಳಿಂದ ಸಹ ಹೇಗೆ ಯುಕ್ತಿ ಯುಕ್ತ-ವಾಗುತ್ತದೆಂಬುದನ್ನು ಪ್ರತಿಪಾದಿಸಲಾಗಿದೆಯಷ್ಟೆ. ಆ ವಾದಸರಣಿಯೂ ಅದರಿಂದ ವ್ಯವಸ್ಥೆಗೊಳ್ಳುವ ತತ್ವಗಳೂ ವೇದಾದಿ ಆಗಮಪ್ರಮಾಣಗಳಿಂದ, ಪ್ರತ್ಯಕ್ಷ ಮತ್ತು ಅನುಮಾನಗಳಿಗೆ ಅವಿರೋಧವಾಗಿ, ಹೇಗೆ ಸಮರ್ಥಿತ-ವಾಗುತ್ತವೆಂಬುದನ್ನು ಮುಂದಿನ ಗ್ರಂಥದಲ್ಲಿ ವಿಸ್ತರಿಸಲಾಗುತ್ತದೆ. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಾದಿಗಳನ್ನು ಲೀಲೆಯಿಂದ ನಿರ್ವಹಿಸುವ, ಸ್ವಾತಂತ್ರ್ಯ ಸರ್ವಜ್ಞತ್ವಾದಿ ಅನಂತ ಗುಣಪೂರ್ಣನಾದ, ದುಃಖಾಜ್ಞಾನಾದಿ ದೋಷ-ಲೇಶರಹಿತನಾದ, ಪರಬ್ರಹ್ಮ-ವಿಷ್ಣು-ನಾರಾಯಣ-ಹರಿ-ಈಶ್ವರ ಇತ್ಯಾದಿ ನಾಮಗಳಿಂದ ಆಗಮಗಳಲ್ಲಿ ಪ್ರಸಿದ್ಧನಾದ ಭಗವಂತನಿಗೂ, ಅಲ್ಪಜ್ಞತ್ವಾದಿ ಗುಣಗಳುಳ್ಳ ಜೀವರಿಗೂ ಇರುವ ಸಂಬಂಧವನ್ನು, ಆಗಮಾದಿ ಪ್ರಮಾಣ-ಗಳನ್ನು ಅಂಗೀಕರಿಸಿರುವ ಇತರ ಮತಸ್ಥಾಪನಾಚಾರ್ಯರು ನಿರೂಪಿಸುವ ಪ್ರಕಾರಗಳನ್ನು ತುಲನಾತ್ಮಕ ದೃಷ್ಟಿಯಿಂದ ವಿಮರ್ಶಿಸಿ ಸಿದ್ಧಾಂತಗಳನ್ನು ನಿರ್ಣಯಿಸಲಾಗುತ್ತದೆ. ಜೀವೇಶ್ವರ ಸ್ವರೂಪ ವಿಷಯಕವಾದ ಸಿದ್ಧಾಂತವು ಅತಿ ಪ್ರಾಮುಖ್ಯವಾದುದು. ತತ್ಸಂಬಂಧವಾದ ಯಥಾರ್ಥಜ್ಞಾನವೇ ನಮ್ಮ ಇಹಜೀವನವನ್ನು ರೂಪಿಸಿ, ತನ್ನ ಪ್ರಭಾವದಿಂದ ನಮ್ಮನ್ನು ನಿತ್ಯಸುಖದ ಗುರಿಯತ್ತ ಸಾಗುವ ಸನ್ಮಾರ್ಗದಲ್ಲಿ ಕರೆದೊಯ್ಯಬಲ್ಲದು. ಶ್ರೀಹರಿಯೇ ಸರ್ವೋತ್ತಮನು-ಸ್ವತಂತ್ರನು-ಸರ್ವಜ್ಞನು-ನಿರ್ದೋಷಿಯು-ಆನಂದಾದಿ

ಗುಣಪೂರ್ಣನು-ಜಗತ್ಕರ್ತನು (ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷಗಳೆಲ್ಲಕ್ಕೂ ಸ್ವತಂತ್ರ ಕಾರಣಕರ್ತನು)-ಕರುಣಾ ಸಮುದ್ರನು; ಜೀವಗಣಗಳು ಅಸಂಖ್ಯಾತ-ಒಂದೊಂದು ಗಣದಲ್ಲಿಯೂ ಅನಂತ ಜೀವಚೇತನರಿದ್ದಾರೆ-ಇವರೆಲ್ಲರ ಸ್ವರೂಪಗಳೂ ಚಿದಾತ್ಮಕ ಪರಸ್ಪರ ಭಿನ್ನರು ಮತ್ತು ತರತಮ ಭಾವವುಳ್ಳವರು; ಹೀಗಿರುವ ಜೀವಸಮುದಾಯದವು ನಿತ್ಯವೂ ಸ್ವತಂತ್ರನಾದ ಶ್ರೀಹರಿಯ ಅಧೀನರು; ಶ್ರೀಹರಿಯ ಮಹಿಮಾತಿ-ಶಯಗಳನ್ನು (ಸ್ವಾತಂತ್ರ್ಯ ಸರ್ವಜ್ಞತ್ವಾದಿಗಳನ್ನು) ತಿಳಿದು ತಜ್ಜನ್ಯವಾದ ಭಕ್ತಿಯಿಂದ ಸರ್ವಥಾ ಆತನನ್ನೇ ಆಶ್ರಯಿಸುವುದರಿಂದಲೇ ದೊರೆಯುವ ಆತನ ಪರಮಪ್ರಸಾದದಿಂದ ಪ್ರಾಕೃತ ಬಂಧವನ್ನು ನೀಗಿ ನಿತ್ಯಸ್ವರೂಪಾನಂದ ಸ್ಥಿತಿಯನ್ನು ಹೊಂದಿ ಸುಖಿಸುವರು; ಜಗತ್ತು ಸತ್ಯ-ಅದರ ಮೂಲಕಾರಣವಾದ ಪ್ರಕೃತಿ, ಕಾಲ, ದೇಶಗಳೆಲ್ಲವೂ ಸತ್ಯ-ಪ್ರಕೃತಿ ತತ್ವದ ನಿಯಾಮಕಳಾದ ಶ್ರೀ ಮಹಾಲಕ್ಷ್ಮೀಯು ಸರ್ವದಾ ಚಿದಾನಂದ ಸ್ವರೂಪಗಳು ಮತ್ತು ಶ್ರೀಹರಿಯ ನಿತ್ಯಾಧೀನಳು; ವೇದಾದಿ ಶಬ್ದರಾಶಿಗಳಿಂದ ಪರಮ ಮುಖ್ಯ ಪ್ರತಿಪಾದ್ಯನು ಶ್ರೀಹರಿಯೇ; ಇತ್ಯಾದಿ ಸಿದ್ಧಾಂತಗಳ ದೃಢಜ್ಞಾನದಿಂದಲೇ ಪರಮ ಪುರುಷಾರ್ಥವಾದ ಮೋಕ್ಷವು ಲಭಿಸುವುದೆಂಬುದು, ಈ ಗ್ರಂಥದಲ್ಲಿ ವಿಮರ್ಶೆಯಿಂದ ನಿರ್ಣಯಿಸಲಾದ ಪ್ರಮಾಣಗಳಿಂದ ಸಿದ್ಧವಾಗುತ್ತವೆ. ಇವು ಹೇಗೆ ಸಿದ್ಧವಾಗುತ್ತವೆಂಬುದರ ವಿಸ್ತಾರವನ್ನು ಮುಂದಿನ ರತ್ನದಲ್ಲಿ ಕಾಣುತ್ತೀರಿ. ಪೂರ್ವೋಕ್ತ ಸಿದ್ಧಾಂತ ತತ್ವಗಳ ಯಥಾರ್ಥ ಜ್ಞಾನವೇ ತತ್ವಜ್ಞಾನವೆನಿಸುತ್ತದೆ. ಅದರಿಂದಲೇ ಶ್ರೀಹರಿಯ ಸಾಕ್ಷಾತ್ಕಾರಾನಂತರ ಲಭಿಸುವ ಆತನ ಪರಮ ಪ್ರಸಾದದಿಂದಲೇ ಮೋಕ್ಷ-ಅಮೃತತ್ವ-ಜನನ ಮರಣ ರಹಿತವಾದ ನಿತ್ಯ ಸ್ವರೂಪಾನಂದಾನುಭವ ಸ್ಥಿತಿ.

ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹವಿದ್ಯತೇ; ಜ್ಞಾನೇನೈವಾಮೃತೀಭವತಿ;
ತಮೇವಂ ವಿದ್ವಾನ್ ಅಮೃತ ಇಹಭವತಿ, ನಾನ್ಯಃ ಪಂಥಾ ಅಯನಾಯವಿದ್ಯತೇ.

ಆಚಾರ್ಯಾ : ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ

ಓಂ ತತ್ಸತ್

॥ ಶ್ರೀಕೃಷ್ಣಾರ್ಪಣಮಸ್ತು ॥

ರತ್ನ - ೩

# ಆಗಮಸಾರ

ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ।
ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ॥

ಲೇಖಕರು :
ಕೀರ್ತಿಶೇಷ ಮಾಧ್ವಭೂಷಣ ಶ್ರೀ ಬಿ. ಭೀಮರಾವ್
ದಾವಣಗೆರೆ

# ವಿಷಯಾನುಕ್ರಮಣಿಕೆ

# ಆಗಮಸಾರ

## (ರತ್ನ - ೩)

## ಪರಿಚ್ಛೇದ ೧

## ಜಗತ್ಸೃಷ್ಟಿ

ನಾಸ್ತಿಕ ಭಾವನೆಗಳು ತೊಲಗಿ, ನಮ್ಮ ವಿಚಾರ-ವಿಮರ್ಶೆಗಳಿಗೆ ಆಧಾರ ಭೂತವಾದ ಪ್ರಮಾಣಗಳು ಇಂಥವೇ ಎಂದು ನಿರ್ಧಾರವಾದ ಮೇಲೆ, ಸತ್ಯಾನ್ವೇಷಣದ ಮಾರ್ಗವು ಹೆಚ್ಚು ಸುಗಮವಿರುತ್ತದೆ. ಆದರೂ ಅಂಗೀಕೃತ-ವಾದ ಪ್ರಮಾಣಗಳಿಂದ ಸಿದ್ಧವಾಗುವ ಪ್ರಮೇಯಗಳನ್ನು ವಿವಿಧವಾಗಿ ನಿರೂಪಿಸುವ ಭಿನ್ನಮತಗಳು ಜಗತ್ತಿನಲ್ಲಿವೆ. ಮತಪ್ರವರ್ತಕರ ಪೂರ್ವ ಸಂಸ್ಕಾರ ಸ್ವರೂಪ ಯೋಗ್ಯತೆಗಳೇ ಈ ವೈವಿಧ್ಯಕ್ಕೆ ಮುಖ್ಯ ಕಾರಣವೆಂದು ಒಪ್ಪಬೇಕಲ್ಲದೆ ಬೇರಾವ ಕಾರಣಗಳೂ ನಿಲ್ಲಲಾರವು. ಪ್ರತ್ಯಕ್ಷ ಪ್ರಮಾಣದಿಂದ ಒಂದು ವಸ್ತು ಸಿದ್ಧವಾದರೆ, ಅದು ಪ್ರತ್ಯಕ್ಷವನ್ನು ಪ್ರಮಾಣವೆಂದು ಅಂಗೀಕರಿಸುವ ಸರ್ವರಿಗೂ ಸಿದ್ಧವೇ ಅಲ್ಲವೇ? ಆದರೆ, ಅನುಮಾನ ಮತ್ತು ಆಗಮಗಳನ್ನು ಪ್ರಮಾಣವೆಂದು ಅಂಗೀಕರಿಸುವವರೆಲ್ಲರಿಗೂ, ಅವುಗಳಿಂದ ಸಿದ್ಧವಾಗುವ ಎಲ್ಲ ವಸ್ತುಗಳೂ ಗ್ರಾಹ್ಯಗಳಾಗಲಾರವು-ಆಗುವುದಿಲ್ಲ; ಭಿನ್ನಾಭಿಪ್ರಾಯಗಳಿಗೆ ಅವಕಾಶವಿದ್ದೇ ಇರುತ್ತದೆ. ಒಂದಕ್ಕಿಂತ ಹೆಚ್ಚು ಪ್ರಮಾಣಗಳಿಂದ ಸಿದ್ಧವಾಗುವ ವಿಷಯದಲ್ಲಿ ಸಹ ಭಿನ್ನಾಭಿಪ್ರಾಯಗಳಿಗೆ ಹೆಚ್ಚು ಅವಕಾಶವಿರುತ್ತದೆ. ಹೀಗಿರುವುದರಿಂದ ಉಭಯವಾದಿಗಳಿಗೂ ಸಮ್ಮತವಾದ ಪ್ರಮಾಣಗಳಿಂದ ಸಹ, ಉಭಯ ಸಮ್ಮತ ವಸ್ತುನಿಶ್ಚಯವು (ಇದು ಹೀಗೆಯೇ ಸರಿ ಎಂಬಂತೆ ನಿರ್ಣಯವು) ಸಿದ್ಧವಾಗುವುದಿಲ್ಲ. ಈ ವಿಧ ಭಿನ್ನಾಭಿಪ್ರಾಯಗಳಿಗೆ, ಸರ್ವ ಸಮ್ಮತವೆಂಬ ಪ್ರಮಾಣಗಳನ್ನು ಉಪಯೋಗಿಸಿಕೊಂಡು, ವಿಮರ್ಶೆಯಲ್ಲಿ ತೊಡಗುವ ಬುದ್ಧಿಯಲ್ಲಿರುವ ದೋಷವೇ ಕಾರಣವೆಂದು ಹೇಳದೆ ಗತ್ಯಂತರವಿಲ್ಲ. ಬುದ್ಧಿದೋಷವು, ಪೂರ್ವ ಸಂಸ್ಕಾರಗಳನ್ನು ಅವಲಂಬಿಸಿರುತ್ತದೆ. ಮತ್ತು ಬುದ್ಧ್ಯಾದಿ ಇಂದ್ರಿಯಗಳನ್ನು

ಉಪಯೋಗಿಸಿಕೊಳ್ಳುವ ಜೀವಸ್ವಭಾವವೂ (ಸ್ವರೂಪ ಯೋಗ್ಯತೆಯೂ) ಈ ವೈವಿಧ್ಯಕ್ಕೆ ಪ್ರಧಾನ ಕಾರಣವೆಂದೂ ಒಪ್ಪಲೇಬೇಕಾಗುತ್ತದೆ.

ಪ್ರತ್ಯಕ್ಷಾದಿ ಪ್ರಮಾಣಗಳಿಂದ, ಈ ವಿಶ್ವದಲ್ಲಿ ಜಡ, ಜೀವ, ಈಶರೆಂಬ ಮೂರು ವಸ್ತುಗಳು ಸಾಮಾನ್ಯವಾಗಿ ಸಿದ್ಧವಾಗುತ್ತವೆಂದು ಈ ಹಿಂದೆ ನಿರೂಪಿಸಲಾಗಿದೆ.[1] ಈ ವಸ್ತುಗಳು ಸತ್ಯ ಮತ್ತು ನಿತ್ಯ-ಆದ್ದರಿಂದಲೇ ತತ್ತ್ವಗಳೆಂದು ಕರೆಯಲ್ಪಡುತ್ತವೆ. ರಜ್ಜು ಸರ್ಪದಂತೆ ಭ್ರಾಮಕವಲ್ಲದ್ದು ಸತ್ಯ. ನಿತ್ಯವೆಂದರೆ ನಿರ್ವಿಕಾರವಾದ ಮೂಲಸ್ವರೂಪವುಳ್ಳದ್ದು. ಜಗದ್ವಸ್ತುಗಳೆಲ್ಲವೂ ಪ್ರಕೃತಿ ವಿಕಾರಗಳು - ಇವು ಅನಿತ್ಯ (ನಾಶವುಳ್ಳವು) ಮೂಲಕಾರಣವಾದ ಪ್ರಕೃತಿಯು ನಿತ್ಯ-ಅದು ಪ್ರಳಯಕಾಲದಲ್ಲಿ ಸಹ ಇರುತ್ತದೆ. (ಇದನ್ನು ಜಡ ತತ್ವವೆಂದೂ ವ್ಯವಹರಿಸುವುದುಂಟು). ಜೀವರು ಅಸಂಖ್ಯರಾಗಿದ್ದಾರೆ. ಎಲ್ಲರೂ ಸ್ವರೂಪದಿಂದ ನಿತ್ಯರು. ನಶ್ವರಗಳಾದ ದೇಹಗಳನ್ನು ಕರ್ಮಾನುಸಾರವಾಗಿ ಹೊಂದುತ್ತಾ ಸುತ್ತುವರು. ಹೀಗಿರುವ ಜಡ-ಜೀವ ತತ್ವಗಳಿಗೂ, ಈಶನಿಗೂ ಇರುವ ಪರಸ್ಪರ ಸಂಬಂಧವನ್ನೂ, ಅವುಗಳ ಸ್ವರೂಪ ಧರ್ಮಗಳನ್ನೂ ನಿರೂಪಿಸುವುದು ಅಧ್ಯಾತ್ಮ ವಿದ್ಯೆಯ ಮುಖ್ಯ ಗುರಿಯು. ಈ ಮೂರು ತತ್ವಗಳ ವಿಷಯಕವಾದ ನಿರ್ಣಯಗಳನ್ನು ಭಿನ್ನ ಭಿನ್ನವಾಗಿ ನಿರೂಪಿಸುವ ಅಭಿಪ್ರಾಯಗಳು ಭಿನ್ನಮತಗಳೆಂದು ಕರೆಯಲ್ಪಡುತ್ತವೆ. ಮತಗಳು ಅನೇಕ-ವಾಗಿವೆ. ಸತ್ಯವನ್ನು ತಿಳಿಯುವ ಹಂಬಲದಿಂದ ಪ್ರವೃತ್ತನಾದ ವ್ಯಕ್ತಿಗೆ ಇವು ಬುದ್ಧಿಮೋಹವನ್ನುಂಟುಮಾಡುತ್ತವೆ.[2] ಸತ್ಯಾನ್ವೇಷಿಯು ಜನ್ಮಾಂತರ

---

1. ರತ್ನ (1) ನಾಸ್ತಿಕ್ಯ ನಿರಾಸ, ಪರಿಚ್ಛೇದ 6 ರಲ್ಲಿ ನೋಡಬಹುದು.
2. ಎಲ್ಲ ಮತಗಳೂ ಸತ್ಯ ಸ್ವರೂಪವನ್ನು ಯಥಾರ್ಥವಾಗಿ ಹೇಳುತ್ತವೆಂದು ತಿಳಿಯಲುಬಾರದು. ಜೀವೇಶ್ವರರು ನಿತ್ಯಭಿನ್ನರೆಂದು (ಮುಕ್ತಿಯಲ್ಲಿಸಹ ಭಿನ್ನರೆಂದು) ಹೇಳುವ ಮತವೂ, ಜೀವೇಶ್ವರೈಕ್ಯವನ್ನು ಹೇಳುವ ಮತವೂ ಸತ್ಯಸ್ವರೂಪದ ಭಿನ್ನ ಮುಖಗಳೆಂದು ಕರೆಯಲಾದೀತೇ? ''**ಪಶ್ಯಂತೋಽಪಿ ನ ಪಶ್ಯಂತಿ ಮೇರೋ ರೂಪಂ ವಿಪಶ್ಚಿತಃ**''; ಮೇರು ಪರ್ವತವನ್ನು ಕಂಡವರು ಅದರ ಏಕದೇಶವನ್ನು ಮಾತ್ರ ಕಂಡಂತೆ. ಸತ್ಯಸ್ವರೂಪವನ್ನು ಪೂರ್ಣವಾಗಿ ತಿಳಿಯದಿರಬಹುದು; ಆದರೆ ಕಂಡ ಬೆಟ್ಟಗುಡ್ಡಗಳನ್ನೆಲ್ಲ ಮೇರುವೆಂದು ತಿಳಿದಂತೆ-ವಿರುದ್ಧವಾಗಿ ಹೇಳುವ ಎಲ್ಲ ಮತಗಳ ಸಿದ್ಧಾಂತಗಳನ್ನು ಸತ್ಯದ ಬಹುಮುಖಗಳೆಂದು ತಿಳಿಯುವುದು.

ಸಂಸ್ಕಾರಯುಕ್ತನೂ ಆಗಿರುವುದರಿಂದ ಕಿಂಚಿತ್ ಪೂರ್ವಾಗ್ರಹವುಳ್ಳವನೂ ಆಗಿರಬಹುದು. ಆದ್ದರಿಂದ ಪೂರ್ವ ಸಂಸ್ಕಾರಗಳ ಫಲರೂಪವಾದ ವಿಷಯ ವಿಶ್ಲೇಷಣ ವಿಮರ್ಶೆಗಳ ಸಾಮರ್ಥ್ಯವನ್ನು ಮಾತ್ರ ಉಪಯೋಗಿಸಿಕೊಂಡು, ಯಾವುದೊಂದು ಪ್ರಮೇಯವನ್ನು ನಿರ್ಣಯಿಸಿಕೊಳ್ಳಲು, ನಿಷ್ಪಕ್ಷಪಾತ ದೃಷ್ಟಿಯಿಂದ ಪ್ರಮಾಣಗಳನ್ನು ತುಲನ ಮಾಡುವ ಪರಿಪಾಠವನ್ನು ರೂಢಿಸಿಕೊಂಡು ಮುಂದುವರಿಯಬೇಕು. ಈ ಮಾರ್ಗವು ಸುಗಮವಲ್ಲ- ಖಡ್ಗದ ಅಲಗಿನಮೇಲೆ ನಡೆದಂತೆ; ಅತ್ಯಲ್ಪ ಅಜಾಗರೂಕತೆಯೂ ವಿಪತ್ಕಾರಕವು. ಪ್ರತ್ಯಕ್ಷಾದಿ ಪ್ರಮಾಣಗಳಿಂದ ಈಶ ಜೀವ-ಜಡ ತತ್ತ್ವಗಳ ಸ್ವರೂಪ ಮತ್ತು ಸಂಬಂಧಗಳ ನಿರ್ಣಯವನ್ನು ಕಂಡುಕೊಳ್ಳುವುದೇ ಸತ್ಯಾನ್ವೇಷಿಯ ಮುಖ್ಯ ಗುರಿಯಾಗಿರಬೇಕು-ಇರುತ್ತದೆ.

ಮೂಲಜಡಪ್ರಕೃತಿ ಮತ್ತು ಅದರ ನಾನಾ ವಿಕಾರಗಳಿಂದ ಉತ್ಪನ್ನ-ವಾದ ಜಡವಸ್ತುಗಳು ಸುಖಾದ್ಯನುಭವರಹಿತವಾದವುಗಳು ಜ್ಞಾನ, ಇಚ್ಛೆ, ಪ್ರಯತ್ನಗಳೆಂಬ ಚೇತನ ಧರ್ಮಗಳು ಅವುಗಳಲ್ಲಿಲ್ಲ. ಪ್ರಾಕೃತ ವಸ್ತುಗಳಿಂದ ಆಗುವ ಎಲ್ಲ ಕಾರ್ಯಗಳೂ ಚೇತನಾಧೀನವೇ ಆಗಿವೆ. ವಿದ್ಯುತ್ ಮೊದಲಾದ ಶಕ್ತಿಗಳೆಲ್ಲವೂ ಪ್ರಾಕೃತವೆ. ನಾನಾ ಪ್ರಾಕೃತ ಶಕ್ತಿಗಳ ಯೋಜನೆಗಳಿಂದ ಆಧುನಿಕ ವಿಜ್ಞಾನವು ಸಿದ್ಧಗೊಳಿಸಿರುವ ಮತ್ತು ಸಿದ್ಧಗೊಳಿಸಬಹುದಾದ (computers) ಮೊದಲಾದ ಯಂತ್ರವಿಶೇಷಗಳಿಂದ ಆಗುವ ಅದ್ಭುತ ಕಾರ್ಯಗಳನ್ನು ಕಂಡು ಜಡಶಕ್ತಿಗಳೇ ಬುದ್ಧಿಕಾರ್ಯವನ್ನು ನಿರ್ವಹಿಸುತ್ತವೆ ಎಂದು ಭ್ರಮಿಸಬಾರದು.[3] ಜಗತ್ತಿನಲ್ಲಿ ಜಡ-ಚೇತನ ವಿಭಾಗವು ಸ್ಪಷ್ಟವಾಗಿದೆ, ಅನುಭವ ಸಿದ್ಧವೂ ಆಗಿದೆ. ಇದನ್ನು ನಿಷ್ಕಾರಣವಾಗಿ ತಳ್ಳಿಹಾಕಿ ಒಂದೇ ಜಡತತ್ತ್ವದ ನಾನಾ ಮುಖಗಳೆಂದು ತಿಳಿಯುವುದು ಭ್ರಮಜನ್ಯ ಕುಕಲ್ಪನೆ. ಜಡ-ಚೇತನಗಳೆರಡನ್ನೂ ನಿಯಂತ್ರಿಸುವ ಈಶ್ವರನು ಪೂರ್ಣ ಸ್ವತಂತ್ರನೂ, ಸರ್ವಜ್ಞನೂ, ಸರ್ವಶಕ್ತನೂ ಆಗಿದ್ದು ಜಗತ್ತಿನ ಸೃಷ್ಟಿ ಸ್ಥಿತಿಲಯಾದಿ ಸರ್ವವನ್ನೂ ನಡೆಸುವ ಸ್ವತಂತ್ರ ಚೇತನನೆಂದು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾಗುತ್ತದೆ. ಅನುಮಾನದಿಂದಲೂ ಈ ಮಹಾ ಪ್ರಮೇಯವು ಸಿದ್ಧವಾದರೂ ಆತ್ಯಂತಿಕ (ultimate) ನಿರ್ಣಯಗಳನ್ನು

3. ರತ್ನ 1, ಪರಿಚ್ಛೇದ 6 ನ್ನು ನೋಡಬೇಕು.

ಉಪಯೋಗಿಸಿಕೊಳ್ಳುವ ಜೀವಸ್ವಭಾವವೂ (ಸ್ವರೂಪ ಯೋಗ್ಯತೆಯೂ) ಈ ವೈವಿಧ್ಯಕ್ಕೆ ಪ್ರಧಾನ ಕಾರಣವೆಂದೂ ಒಪ್ಪಲೇಬೇಕಾಗುತ್ತದೆ.

ಪ್ರತ್ಯಕ್ಷಾದಿ ಪ್ರಮಾಣಗಳಿಂದ, ಈ ವಿಶ್ವದಲ್ಲಿ ಜಡ, ಜೀವ, ಈಶರೆಂಬ ಮೂರು ವಸ್ತುಗಳು ಸಾಮಾನ್ಯವಾಗಿ ಸಿದ್ಧವಾಗುತ್ತವೆಂದು ಈ ಹಿಂದೆ ನಿರೂಪಿಸಲಾಗಿದೆ.[1] ಈ ವಸ್ತುಗಳು ಸತ್ಯ ಮತ್ತು ನಿತ್ಯ-ಆದ್ದರಿಂದಲೇ ತತ್ತ್ವಗಳೆಂದು ಕರೆಯಲ್ಪಡುತ್ತವೆ. ರಜ್ಜು ಸರ್ಪದಂತೆ ಭ್ರಾಮಕವಲ್ಲದ್ದು ಸತ್ಯ. ನಿತ್ಯವೆಂದರೆ ನಿರ್ವಿಕಾರವಾದ ಮೂಲಸ್ವರೂಪವುಳ್ಳದ್ದು. ಜಗದ್ವಸ್ತುಗಳೆಲ್ಲವೂ ಪ್ರಕೃತಿ ವಿಕಾರಗಳು - ಇವು ಅನಿತ್ಯ (ನಾಶವುಳ್ಳವು) ಮೂಲಕಾರಣವಾದ ಪ್ರಕೃತಿಯು ನಿತ್ಯ-ಅದು ಪ್ರಳಯಕಾಲದಲ್ಲಿ ಸಹ ಇರುತ್ತದೆ. (ಇದನ್ನು ಜಡ ತತ್ವವೆಂದೂ ವ್ಯವಹರಿಸುವುದುಂಟು). ಜೀವರು ಅಸಂಖ್ಯರಾಗಿದ್ದಾರೆ. ಎಲ್ಲರೂ ಸ್ವರೂಪದಿಂದ ನಿತ್ಯರು. ನಶ್ವರಗಳಾದ ದೇಹಗಳನ್ನು ಕರ್ಮಾನುಸಾರವಾಗಿ ಹೊಂದುತ್ತಾ ಸುತ್ತುವರು. ಹೀಗಿರುವ ಜಡ-ಜೀವ ತತ್ವಗಳಿಗೂ, ಈಶನಿಗೂ ಇರುವ ಪರಸ್ಪರ ಸಂಬಂಧವನ್ನೂ, ಅವುಗಳ ಸ್ವರೂಪ ಧರ್ಮಗಳನ್ನೂ ನಿರೂಪಿಸುವುದು ಅಧ್ಯಾತ್ಮ ವಿದ್ಯೆಯ ಮುಖ್ಯ ಗುರಿಯು. ಈ ಮೂರು ತತ್ವಗಳ ವಿಷಯಕವಾದ ನಿರ್ಣಯಗಳನ್ನು ಭಿನ್ನ ಭಿನ್ನವಾಗಿ ನಿರೂಪಿಸುವ ಅಭಿಪ್ರಾಯಗಳು ಭಿನ್ನಮತಗಳೆಂದು ಕರೆಯಲ್ಪಡುತ್ತವೆ. ಮತಗಳು ಅನೇಕ-ವಾಗಿವೆ. ಸತ್ಯವನ್ನು ತಿಳಿಯುವ ಹಂಬಲದಿಂದ ಪ್ರವೃತ್ತನಾದ ವ್ಯಕ್ತಿಗೆ ಇವು ಬುದ್ಧಿಮೋಹವನ್ನುಂಟುಮಾಡುತ್ತವೆ.[2] ಸತ್ಯಾನ್ವೇಷಿಯು ಜನ್ಮಾಂತರ

---

1. ರತ್ನ (1) ನಾಸ್ತಿಕ್ಯ ನಿರಾಸ, ಪರಿಚ್ಛೇದ 6 ರಲ್ಲಿ ನೋಡಬಹುದು.
2. ಎಲ್ಲ ಮತಗಳೂ ಸತ್ಯ ಸ್ವರೂಪವನ್ನು ಯಥಾರ್ಥವಾಗಿ ಹೇಳುತ್ತವೆಂದು ತಿಳಿಯಲುಬಾರದು. ಜೀವೇಶ್ವರರು ನಿತ್ಯಭಿನ್ನರೆಂದು (ಮುಕ್ತಿಯಲ್ಲಿಸಹ ಭಿನ್ನರೆಂದು) ಹೇಳುವ ಮತವೂ, ಜೀವೇಶ್ವರೈಕ್ಯವನ್ನು ಹೇಳುವ ಮತವೂ ಸತ್ಯಸ್ವರೂಪದ ಭಿನ್ನ ಮುಖಗಳೆಂದು ಕರೆಯಲಾದೀತೇ? ''**ಪಶ್ಯಂತೋಽಪಿ ನ ಪಶ್ಯಂತಿ ಮೇರೋ ರೂಪಂ ವಿಪಶ್ಚಿತಃ**''; ಮೇರು ಪರ್ವತವನ್ನು ಕಂಡವರು ಅದರ ಏಕದೇಶವನ್ನು ಮಾತ್ರ ಕಂಡಂತೆ. ಸತ್ಯಸ್ವರೂಪವನ್ನು ಪೂರ್ಣವಾಗಿ ತಿಳಿಯದಿರಬಹುದು; ಆದರೆ ಕಂಡ ಬೆಟ್ಟಗುಡ್ಡಗಳನ್ನೆಲ್ಲ ಮೇರುವೆಂದು ತಿಳಿದಂತೆ-ವಿರುದ್ಧವಾಗಿ ಹೇಳುವ ಎಲ್ಲ ಮತಗಳ ಸಿದ್ಧಾಂತಗಳನ್ನು ಸತ್ಯದ ಬಹುಮುಖಗಳೆಂದು ತಿಳಿಯುವುದು.

ಸಂಸ್ಕಾರಯುಕ್ತನೂ ಆಗಿರುವುದರಿಂದ ಕಿಂಚಿತ್ ಪೂರ್ವಾಗ್ರಹವುಳ್ಳವನೂ ಆಗಿರಬಹುದು. ಆದ್ದರಿಂದ ಪೂರ್ವ ಸಂಸ್ಕಾರಗಳ ಫಲರೂಪವಾದ ವಿಷಯ ವಿಶ್ಲೇಷಣ ವಿಮರ್ಶೆಗಳ ಸಾಮರ್ಥ್ಯವನ್ನು ಮಾತ್ರ ಉಪಯೋಗಿಸಿಕೊಂಡು, ಯಾವುದೊಂದು ಪ್ರಮೇಯವನ್ನು ನಿರ್ಣಯಿಸಿಕೊಳ್ಳಲು, ನಿಷ್ಪಕ್ಷಪಾತ ದೃಷ್ಟಿಯಿಂದ ಪ್ರಮಾಣಗಳನ್ನು ತುಲನ ಮಾಡುವ ಪರಿಪಾಠವನ್ನು ರೂಢಿಸಿಕೊಂಡು ಮುಂದುವರಿಯಬೇಕು. ಈ ಮಾರ್ಗವು ಸುಗಮವಲ್ಲ-ಖಡ್ಗದ ಅಲಗಿನಮೇಲೆ ನಡೆದಂತೆ; ಅತ್ಯಲ್ಪ ಅಜಾಗರೂಕತೆಯೂ ವಿಪತ್ಕಾರಕವು. ಪ್ರತ್ಯಕ್ಷಾದಿ ಪ್ರಮಾಣಗಳಿಂದ ಈಶ ಜೀವ-ಜಡ ತತ್ತ್ವಗಳ ಸ್ವರೂಪ ಮತ್ತು ಸಂಬಂಧಗಳ ನಿರ್ಣಯವನ್ನು ಕಂಡುಕೊಳ್ಳುವುದೇ ಸತ್ಯಾನ್ವೇಷಿಯ ಮುಖ್ಯ ಗುರಿಯಾಗಿರಬೇಕು-ಇರುತ್ತದೆ.

ಮೂಲಜಡಪ್ರಕೃತಿ ಮತ್ತು ಅದರ ನಾನಾ ವಿಕಾರಗಳಿಂದ ಉತ್ಪನ್ನ-ವಾದ ಜಡವಸ್ತುಗಳು ಸುಖಾದ್ಯನುಭವರಹಿತವಾದವುಗಳು ಜ್ಞಾನ, ಇಚ್ಛೆ, ಪ್ರಯತ್ನಗಳೆಂಬ ಚೇತನ ಧರ್ಮಗಳು ಅವುಗಳಲ್ಲಿಲ್ಲ. ಪ್ರಾಕೃತ ವಸ್ತುಗಳಿಂದ ಆಗುವ ಎಲ್ಲ ಕಾರ್ಯಗಳೂ ಚೇತನಾಧೀನವೇ ಆಗಿವೆ. ವಿದ್ಯುತ್ ಮೊದಲಾದ ಶಕ್ತಿಗಳೆಲ್ಲವೂ ಪ್ರಾಕೃತವೆ. ನಾನಾ ಪ್ರಾಕೃತ ಶಕ್ತಿಗಳ ಯೋಜನೆಗಳಿಂದ ಆಧುನಿಕ ವಿಜ್ಞಾನವು ಸಿದ್ಧಗೊಳಿಸಿರುವ ಮತ್ತು ಸಿದ್ಧಗೊಳಿಸಬಹುದಾದ (computers) ಮೊದಲಾದ ಯಂತ್ರವಿಶೇಷಗಳಿಂದ ಆಗುವ ಅದ್ಭುತ ಕಾರ್ಯಗಳನ್ನು ಕಂಡು ಜಡಶಕ್ತಿಗಳೇ ಬುದ್ಧಿಕಾರ್ಯವನ್ನು ನಿರ್ವಹಿಸುತ್ತವೆ ಎಂದು ಭ್ರಮಿಸಬಾರದು.[3] ಜಗತ್ತಿನಲ್ಲಿ ಜಡ-ಚೇತನ ವಿಭಾಗವು ಸ್ಪಷ್ಟವಾಗಿದೆ, ಅನುಭವ ಸಿದ್ಧವೂ ಆಗಿದೆ. ಇದನ್ನು ನಿಷ್ಕಾರಣವಾಗಿ ತಳ್ಳಿಹಾಕಿ ಒಂದೇ ಜಡತತ್ತ್ವದ ನಾನಾ ಮುಖಗಳೆಂದು ತಿಳಿಯುವುದು ಭ್ರಮಜನ್ಯ ಕುಕಲ್ಪನೆ. ಜಡ-ಚೇತನಗಳೆರಡನ್ನೂ ನಿಯಂತ್ರಿಸುವ ಈಶ್ವರನು ಪೂರ್ಣ ಸ್ವತಂತ್ರನೂ, ಸರ್ವಜ್ಞನೂ, ಸರ್ವಶಕ್ತನೂ ಆಗಿದ್ದು ಜಗತ್ತಿನ ಸೃಷ್ಟಿ ಸ್ಥಿತಿಲಯಾದಿ ಸರ್ವವನ್ನೂ ನಡೆಸುವ ಸ್ವತಂತ್ರ ಚೇತನನೆಂದು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾಗುತ್ತದೆ. ಅನುಮಾನದಿಂದಲೂ ಈ ಮಹಾ ಪ್ರಮೇಯವು ಸಿದ್ಧವಾದರೂ ಆತ್ಯಂತಿಕ (ultimate) ನಿರ್ಣಯಗಳನ್ನು

3. ರತ್ನ 1, ಪರಿಚ್ಛೇದ 6 ನ್ನು ನೋಡಬೇಕು.

ದೊರೆಕಿಸುವಲ್ಲಿ ಆಗಮಗಳನ್ನು ಶರಣುಹೊಂದದೆ ಗತ್ಯಂತರವಿರುವುದಿಲ್ಲ. ಆಗಮಗಳನ್ನು ಬಿಟ್ಟರೆ ಈಶ್ವರನ ಅಸ್ತಿತ್ವವು ಸಹ ನಿಸ್ಸಂಶಯವಾಗಿ ಸಿದ್ಧಿಸುವುದಿಲ್ಲ. ಜಗತ್ ಸೃಷ್ಟ್ಯಾದಿಗಳು ಆತನಿಂದಲೇ ಆಗುತ್ತವೆಂಬುದಂತೂ ಆಗಮಗಳನ್ನು ಬಿಟ್ಟು ಸುತರಾಂ ಸಿದ್ಧವಾಗುವುದಿಲ್ಲ.[4]

ವೇದಾದಿ ಆಗಮಗಳು ಸಂಸ್ಕೃತ ಭಾಷೆಯಲ್ಲಿದ್ದು ಅವುಗಳ ತಾತ್ಪರ್ಯ-ವನ್ನು ಸರಿಯಾಗಿ ಗ್ರಹಿಸಲು ಸಂಸ್ಕೃತ ಭಾಷಾ ಪಾಂಡಿತ್ಯವೂ ವೇದಾಂಗಗಳ[5] ಅಭ್ಯಾಸವೂ ಅತ್ಯಗತ್ಯವಾಗುತ್ತದೆ. ಇವುಗಳ ಸಹಾಯದಿಂದಲೇ ವೇದಾರ್ಥ-ಗಳನ್ನು ನಿರ್ಣಯಿಸಿಕೊಳ್ಳಬೇಕಾದುದು ಯದ್ಯಪಿ ಅವಶ್ಯಕವೇ ಆದರೂ ಈ ಗ್ರಂಥಮಾಲೆಯ ಉದ್ದೇಶವನ್ನು ಗಮನಿಸಿ ಆಧುನಿಕ ತರುಣರಿಗೆ ಉಪಯುಕ್ತವಾಗುವ ಯುಕ್ತಿಸಹಿತವಾದ ಆಗಮ ವಾಕ್ಯಗಳನ್ನೇ ಹೆಚ್ಚಾಗಿ ಅವಲಂಬಿಸಿ, ಆಗಮ ಸಿದ್ಧ ಮಹಾ ಪ್ರಮೇಯಗಳನ್ನು ಸಜ್ಜನರ ಮುಂದಿಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಆಗಮ ವಾಕ್ಯಗಳನ್ನು ಉದಹರಿಸಿ ಅವುಗಳ ವಾಕ್ಯಾರ್ಥ ನಿರೂಪಣೆಯಿಂದ ಕಠಿಣ ಶಾಸ್ತ್ರ ಗ್ರಂಥವನ್ನಾಗಿ ಮಾಡುವುದು ನಮ್ಮ ಉದ್ದೇಶವಲ್ಲ. ಆದರೂ ಅವಶ್ಯವಿದ್ದಲ್ಲಿ ವಾಕ್ಯಾರ್ಥಗಳನ್ನು ಸಹ ತಿಳಿಯಾಗಿ ಹೇಳಲು ಯತ್ನಿಸಲಾಗುತ್ತದೆ.

ಜಗದ್ವಸ್ತುಗಳು ಹುಟ್ಟುತ್ತವೆ, ಕೆಲವು ಕಾಲ ಇದ್ದು ನಾಶಹೊಂದುತ್ತವೆ. ಇವುಗಳ ಉತ್ಪತ್ತಿ ವಿನಾಶಗಳು ಪ್ರತಿಕ್ಷಣದಲ್ಲಿಯೂ ನಡೆಯುತ್ತಿರುವುವು. ವಸ್ತು ವೈವಿಧ್ಯದಂತೆ ಅವುಗಳ ಸ್ಥಿತಿಕಾಲವೂ ವೈವಿಧ್ಯ ಪೂರ್ಣವಾಗಿಯೇ ಇರುತ್ತದೆ. ಕ್ಷಣಕಾಲ ಮಾತ್ರ ಇರುವ ವಸ್ತುಗಳಿಂದ ಆರಂಭಿಸಿ ಕೋಟಿಶಃ ವರ್ಷಗಳ ಪರ್ಯಂತ ಇರುವ ವಸ್ತುಗಳೂ ಇವೆ. ಭೂಮಿ, ಸೂರ್ಯ, ನಕ್ಷತ್ರಾದಿ ಸಕಲ ವಸ್ತುಗಳೂ ಒಂದು ಕಾಲಕ್ಕೆ ನಾಶಹೊಂದತಕ್ಕವುಗಳೇ. ಹೀಗೆಂಬುದು ಆಧುನಿಕ ವೈಜ್ಞಾನಿಕರಿಗೂ ಸಂಮತವಾಗಿದೆ. ಆಗಮಗಳೂ ಹೀಗೆಂದೇ ಹೇಳುತ್ತವೆ. ಜಗತ್ತಿನ ಸೃಷ್ಟಿ ಸ್ಥಿತಿ ವಿನಾಶಗಳು ಕ್ರಮಬದ್ಧವಾಗಿ ನಡೆಯುತ್ತಿರುವುದನ್ನು

4. ರತ್ನ 1- ಪರಿಚ್ಛೇದ 6ನ್ನೂ ಇಲ್ಲಿ ಓದಿಕೊಳ್ಳಬಹುದು.
5. ವೇದಾಂಗಗಳು-ವ್ಯಾಕರಣ, ನಿರುಕ್ತ, ಛಂದಸ್ಸು, ಶಿಕ್ಷಾ, ಕಲ್ಪ, ಜ್ಯೋತಿಷ್ಯ-ಇವು ಆರು.

ಎಲ್ಲರೂ ಗಮನಿಸಬಹುದು. ಸ್ವತಃ ಜ್ಞಾನಶೂನ್ಯವಾದ ಜಡವಸ್ತುಗಳು ಹೀಗೆ ವಿಶಿಷ್ಟ ಕ್ರಮವನ್ನನುಸರಿಸಿ ಪ್ರವೃತ್ತಿಸುವುದು, ಜ್ಞಾನವಿಶಿಷ್ಟ ವಸ್ತುವಿನ-ಎಂದರೆ ಚೇತನನ ಅಧೀನವಾಗಿಯೇ ಇರಬೇಕೆಂದೂ ಆ ಚೇತನವು ಅದ್ಭುತವಾದ ಅಚಿಂತ್ಯಶಕ್ತಿಯುಳ್ಳ ಸರ್ವಜ್ಞನಾಗಿರಬೇಕೆಂದೂ ಸಾಮಾನ್ಯವಾಗಿ ಊಹಿಸಿ ತಿಳಿಯಬಹುದಾದರೂ ಜಗತ್ತಿನ ಸೃಷ್ಟ್ಯಾದಿಗಳು ನಡೆಯುವ ಪ್ರಕಾರವನ್ನು ಸುಸ್ಪಷ್ಟವಾಗಿ ಸುನಿಶ್ಚಯವಾಗಿ ತಿಳಿಯುವುದರಿಂದ ಆ ಪರಮಚೇತನನ ಮಹಿಮೆಗಳ ಜ್ಞಾನವಾಗುವಂತೆ ಆಗಲಾರದು. ಈ ಕಾರಣದಿಂದಲೇ ಆಗಮ-ಗಳು ಈಶ್ವರನ ಸೃಷ್ಟ್ಯಾದಿ ಮಹಿಮೆಗಳನ್ನು ವಿಸ್ತಾರವಾಗಿ ನಿರೂಪಿಸುತ್ತವೆ. **ಸೃಷ್ಟಿ ಪ್ರಕಾರವನ್ನು ಆದ್ಯಂತಮಧ್ಯಗಳಲ್ಲಿ ನಿರೂಪಿಸುವುದೆಂಬುದು ಸಾತ್ವಿಕ ಪುರಾಣಗಳ ಮುಖ್ಯಲಕ್ಷಣವೆಂದೂ ಹೇಳಲಾಗಿದೆ.** ವೇದಾರ್ಥಗಳನ್ನು ನಿರ್ಣಯಿಸಿ ನಿರೂಪಿಸಲು ಪ್ರವೃತ್ತವಾದ ಬ್ರಹ್ಮಸೂತ್ರಗಳಲ್ಲಿ ಪರಬ್ರಹ್ಮನ ಮುಖ್ಯಲಕ್ಷಣಗಳನ್ನು ಜಗಜ್ಜನ್ಮಾದಿ ಅಷ್ಟಕರ್ತೃಗಳೇ ಎಂದೂ ಹೇಳಲಾಗಿದೆ. ಭೂ, ಗ್ರಹ, ನಕ್ಷತ್ರಾದಿ ವಸ್ತುಗಳು ಹೇಗೆ ಹುಟ್ಟಿದವೆಂಬುದನ್ನು ತಿಳಿಯುವ ಮುಖ್ಯ ಗುರಿಯನ್ನೇ ಆಧುನಿಕ ವಿಜ್ಞಾನ ಶಾಸ್ತ್ರವೂ ಇಟ್ಟುಕೊಂಡು ಪ್ರವೃತ್ತವಾಗಿದೆ. ಚಂದ್ರಗ್ರಹದಿಂದ ತರಲಾದ ಕಲ್ಲುಮಣ್ಣುಗಳು ಈ ಗುರಿಯತ್ತ ಕರೆದೊಯ್ಯಬಹುದೆಂದು ವಿಜ್ಞಾನಿಗಳು ನಿರೀಕ್ಷಿಸುತ್ತಿದ್ದಾರೆ. ಹೆಚ್ಚೇನು! ವಿಶ್ವಸೃಷ್ಟಿಯ ಮೂಲವನ್ನು ನಿರ್ಣಯಾತ್ಮಕವಾಗಿ ತಿಳಿಯಬೇಕೆಂಬುದು ಮಾನವನ ಸ್ವಾಭಾವಿಕ ಹಂಬಲದಿಂದ ಉಂಟಾದುದೆಂದು ತಿಳಿದುಬರುತ್ತದೆ. ವಿಶ್ವಸೃಷ್ಟಿಯ ಮೂಲಕಾರಣವು ಈಶ್ವರನೆಂದೂ, ಅವನ ಸ್ವರೂಪವನ್ನೂ ತನಗೂ ಆತನಿಗೂ ಇರುವ ಸಂಬಂಧವನ್ನೂ ತಿಳಿಯುವುದೇ ಮಾನವನ ಗುರಿಯಾಗಿರ-ಬೇಕೆಂದೂ ವೇದಾದಿ ಆಗಮಗಳು ಘೋಷಿಸುತ್ತವೆ. ಮಾನವನು ಈ ಗುರಿಯನ್ನು ಸಮೀಪಿಸಿದಂತೆ ಮನಶ್ಶಾಂತಿಯನ್ನು-ತಜ್ಜನ್ಯ ಸುಖವನ್ನು ಹೊಂದುತ್ತಾ ಸಾಗುವನೆಂದು ಪ್ರಾಚೀನ ಜ್ಞಾನಿಗಳು ತಮ್ಮ ಅನುಭವವನ್ನೂ ಸುಸ್ಪಷ್ಟವಾಗಿ ನಿರೂಪಿಸಿದ್ದಾರೆ. ಆದರಿಂದ **ಈಶ್ವರನೇ ಸರ್ವಜಗತ್ಕಾರಣನೆಂಬ ನಿಶ್ಚಯಜ್ಞಾನವನ್ನು ಪಡೆಯುವುದೇ ಮಾನವನ ಮುಖ್ಯ ಗುರಿಯಾಗಿರಬೇಕು.**

ವಿಶ್ವದಲ್ಲಿ ಜಡ, ಚೇತನಗಳೆಂಬ ಎರಡು ಗುಂಪಿಗೆ ಸೇರಿದ ಅಸಂಖ್ಯ ವಸ್ತುಗಳಿವೆ. ಉಭಯಾತ್ಮಕವೆಂದು ಆಪಾತತಃ ತೋರುವ ಕೆಲವು ಮಧ್ಯವರ್ತಿ

ವಸ್ತುಗಳನ್ನು ಜಗತ್ತಿನಲ್ಲಿ ಕಾಣಬಹುದಾದರೂ ಜಡ-ಚೇತನಗಳ ಲಕ್ಷಣ ಪ್ರಾಚುರ್ಯದಿಂದ ಅಂತಹುಗಳನ್ನು ಯಾವುದೊಂದು ಗುಂಪಿನಲ್ಲಿ ಅಂತರ್ಭಾವಗೊಳಿಸಬಹುದು. ಜ್ಞಾನ, ಇಚ್ಛೆ, ಕ್ರಿಯಾಶಕ್ತಿಗಳಿಂದ ಯುಕ್ತ-ವಾದುದು ಚೇತನ; ಇವುಗಳಿಲ್ಲದುದು ಜಡ. ಚೇತನ ಲಕ್ಷಣಗಳು ಮಾನವನಲ್ಲಿ ಪ್ರಚುರವಾಗಿ ಕಂಡುಬರುತ್ತವೆ. ಇತರ ಯೋನಿಗಳಲ್ಲಿ (ಪ್ರಾಣಿದೇಹಗಳಲ್ಲಿ) ಅಲ್ಪ ಪ್ರಮಾಣದಲ್ಲಿರುತ್ತವೆ. ಕೆಲವು ಯೋನಿಗಳಲ್ಲಿ ಗುರ್ತಿಸಲಾಗದಷ್ಟು ಸೂಕ್ಷ್ಮರೂಪದಿಂದ ಈ ಲಕ್ಷಣಗಳು ಇರುವುದೂ ಉಂಟು. ಚೇತನವನ್ನು ಇಂದ್ರಿಯ ಪ್ರತ್ಯಕ್ಷದಿಂದ ತಿಳಿಯಲು ಬರುವುದಿಲ್ಲ. ವಿವಿಧ ದೇಹಗಳಲ್ಲಿ ಪ್ರಕಟವಾಗುವ ಲಕ್ಷಣಗಳಿಂದ ಮಾತ್ರ ಚೇತನವನ್ನು ಗುರ್ತಿಸಬಹುದು. ಜಡವಸ್ತುಗಳಾದರೋ (ಮನ ಮೊದಲಾದ ಸೂಕ್ಷ್ಮತತ್ವಗಳನ್ನು ಬಿಟ್ಟು) ಚಕ್ಷುರಾದಿ ಇಂದ್ರಿಯಗಳಿಂದ ಗ್ರಹಿಸಲ್ಪಡುತ್ತವೆ. ಚೇತನವು ದೇಹದಿಂದ ವಿಯೋಗ ಹೊಂದಿದನಂತರ ಆ ದೇಹವು ಕೇವಲ ಜಡವಸ್ತುವಾಗಿಯೇ ಉಳಿಯುತ್ತದೆ. ವಿಚಿತ್ರವಾದ ಅಸಂಖ್ಯ ಜಡವಸ್ತುಗಳ ಉತ್ಪತ್ತಿಯು ಮತ್ತು ಚೇತನರಿಗೆ ವಿವಿಧ ಜಡದೇಹಗಳ ಯೋಗವೆಂಬ ಸೃಷ್ಟಿಯು ಹೇಗೆ ಉಂಟಾಗುವುದೆಂಬುದನ್ನು ತಿಳಿಯುವುದು ಸೃಷ್ಟಿಜ್ಞಾನವೆನಿಸುತ್ತದೆ.[6] ಜಡ-ಪದಾರ್ಥಗಳ ಉತ್ಪತ್ತಿಗೆ ಕಾರಣವಾದ ಮೂಲ ಪ್ರಕೃತಿಯೂ ಜಡವೇ. ಅದು ನಿತ್ಯವೂ ಆಗಿದೆ. ಅದರ ವಿಕಾರದಿಂದ ಹುಟ್ಟುವ ನಾನಾ ವಸ್ತುಗಳು ಪ್ರಾಕೃತವೆನಿಸುತ್ತವೆ. ಅವೆಲ್ಲವೂ ಅನಿತ್ಯ-ನಾಶವುಳ್ಳವು. ಚೇತನರು ಅಸಂಖ್ಯ ಮತ್ತು ಸ್ವರೂಪದಿಂದ ನಿತ್ಯರು. ಅವರಿಗೆ ದೇಹ ಸಂಬಂಧವೇ ಸೃಷ್ಟಿ-ವಿಯೋಗವೇ ನಾಶ. ಹೀಗೆ ದೇಹಯೋಗ ವಿಯೋಗದಿಂದ ನಾನಾ ದೇಹಗಳನ್ನು ಹೊಂದುತ್ತಾ ಸಾಗಿರುವ ಚೇತನರು ಸಂಸಾರಿಜೀವರೆನಿಸುವರು. ಜೀವ ಜಡಾತ್ಮಕವಾದ ಈ ವಿಶ್ವದ ಸೃಷ್ಟಿಕಾರಣವನ್ನು ವಿಜ್ಞಾನಿಗಳು ಅದ್ಯಾಪಿ ನಿರ್ಣಯಿಸಲು ಅಸಮರ್ಥರಾಗಿದ್ದಾರೆ. ನಾನಾ ಪ್ರಕಾರದ ಊಹಾಪೋಹಗಳಲ್ಲಿ ಮಾತ್ರ ತೊಡಗಿದ್ದಾರೆ.[7] ಆಗಮಾದಿ ಪ್ರಮಾಣಗಳಿಂದ ಸಿದ್ಧವಾಗುವ ಸೃಷ್ಟಿ-ಪ್ರಕಾರದ ಸಂಗ್ರಹವು ಹೀಗಿದೆ:-

6. ರತ್ನ 1, ಪರಿಚ್ಛೇದ 2 ಮತ್ತು 4 ರಲ್ಲಿ ನೋಡಬೇಕು.

7. ರತ್ನ 2, ಪುಟ 224-225 ನೋಡಿ.

ಪ್ರತ್ಯಕ್ಷಸಿದ್ಧವಾದ ಜಗತ್ತು ವಿವಿಧವಾದ ಅಸಂಖ್ಯವಸ್ತುಗಳಿಂದ ತುಂಬಿದೆ. ಇವೆಲ್ಲವೂ ಪಂಚಭೂತಗಳ ಸಂಯೋಗದಿಂದ ಆದವುಗಳು. ಭೂ, ಜಲ, ತೇಜಸ್ಸು, ವಾಯು, ಆಕಾಶ-ಇವು ಐದು ಪಂಚಭೂತಗಳು. ಇವು ವಿಶ್ವದಲ್ಲಿರುವ ಎಲ್ಲ ವಸ್ತುಗಳಿಗೆ ಉಪಾದಾನ ಕಾರಣವಾದುದರಿಂದ ಮಹಾಭೂತಗಳೆಂದು ಕರೆಯಲ್ಪಡುತ್ತವೆ. ಮೂಲಕಾರಣವಾದ ಪ್ರಕೃತಿಯು ಸೃಷ್ಟಿಕಾಲ ಪ್ರಾಪ್ತವಾದಾಗ ಈಶ್ವರೇಚ್ಛೆಯಿಂದ ವಿಕಾರಗೊಳಿಸಲ್ಪಟ್ಟು ಪ್ರಕೃತಿಯಲ್ಲಿರುವ ಸತ್ವ, ರಜ, ಮತ್ತು ತಮಗಳೆಂಬ ಮೂರು ಗುಣಗಳು ವಿವಿಧ ಪ್ರಮಾಣಗಳಲ್ಲಿ ಸಂಯೋಗ ಹೊಂದಿ ಮಹತ್ತತ್ತ್ವವು ಉತ್ಪನ್ನವಾಗುತ್ತದೆ. ಅದು ಪುನಃ ವಿಕಾರ ಹೊಂದಿ ಅಹಂಕಾರ ತತ್ತ್ವವು ಹುಟ್ಟುತ್ತದೆ. ಈ ಅಹಂಕಾರತತ್ತ್ವವು ಈಶ್ವರೇಚ್ಛೆಯಿಂದ ತ್ರಿವಿಧವಾಗಿ ರೂಪಗೊಳ್ಳುತ್ತದೆ. ಈ ತ್ರೈವಿಧ್ಯಕ್ಕೆ ಉಪಚಯಾರ್ಥವಾಗಿ ಉಪಯೋಗಿಸಲ್ಪಡುವ ಸತ್ವರಜಸ್ತಮೋಗುಣಗಳು ಕಾರಣಗಳೆಂದು ಹೇಳಲಾಗುತ್ತದೆ. **ವೈಕಾರಿಕ, ತೈಜಸ ಮತ್ತು ತಾಮಸ ಎಂಬುವೇ ಅಹಂಕಾರತತ್ತ್ವ ಪ್ರಭೇದಗಳ ನಾಮಗಳು.** ತಾಮಸಾಹಂಕಾರವೇ ಮೇಲೆ ಹೇಳಿದ ಪಂಚಭೂತಗಳ ಉತ್ಪತ್ತಿಗೆ ಕಾರಣ. ತೈಜಸಾಹಂಕಾರದಿಂದ ಇಂದ್ರಿಯಗಳು ಹುಟ್ಟುತ್ತವೆ. ಇಂದ್ರಿಯಗಳು ಹತ್ತು-ಜ್ಞಾನೇಂದ್ರಿಯಗಳು ಐದು, ಕರ್ಮೇಂದ್ರಿಯಗಳು ಐದು. ಚಕ್ಷುಃ, ಶ್ರೋತ್ರ, ತ್ವಕ್, ಘ್ರಾಣ, ರಸನಗಳು ಜ್ಞಾನೇಂದ್ರಿಯಗಳು; ಹಸ್ತ, ಪಾದ, ವಾಕ್, ಪಾಯು, ಉಪಸ್ಥಗಳು ಕರ್ಮೇಂದ್ರಿಯಗಳು. ನಾನಾ ವಸ್ತುಗಳನ್ನು ಗ್ರಹಿಸುವ ಶಕ್ತಿಯುಳ್ಳವು, ಜ್ಞಾನೇಂದ್ರಿಯಗಳು-ಕ್ರಮದಿಂದ ನೋಡುವ, ಕೇಳುವ, ಸ್ಪರ್ಶಿಸುವ, ಆಘ್ರಾಣಿಸುವ, ರುಚಿನೋಡುವ ಸಾಮರ್ಥ್ಯವುಳ್ಳವುಗಳು. ಒಂದು ಇಂದ್ರಿಯದ ಶಕ್ತಿ ಮತ್ತೊಂದಕ್ಕಿಲ್ಲ. ಈ ಜ್ಞಾನೇಂದ್ರಿಯಗಳು ಉಕ್ತಕ್ರಮದಿಂದ ರೂಪ, ಶಬ್ದ, ಸ್ಪರ್ಶ, ಗಂಧ ಮತ್ತು ರಸಗಳನ್ನು ಗ್ರಹಿಸುತ್ತವೆ. ಈ ರೂಪಾದಿಗಳು ವಸ್ತುಗಳ ಗುಣ ಅಥವ ಧರ್ಮಗಳೆಂದು ಕರೆಯಲ್ಪಡುತ್ತವೆ; ತನ್ಮಾತ್ರಗಳೆಂದೂ ಇವುಗಳನ್ನು ಕರೆಯಲಾಗುತ್ತದೆ. ಈ ಐದು ಗುಣಗಳಲ್ಲಿ ಒಂದಕ್ಕಿಂತ ಹೆಚ್ಚು ಗುಣಗಳುಳ್ಳ ವಸ್ತುಗಳಿದ್ದರೆ ಅವುಗಳನ್ನು, ಆ ಗುಣಗಳನ್ನು ಗ್ರಹಿಸುವ ಎಲ್ಲ ಇಂದ್ರಿಯಗಳೂ ತಿಳಿಯಬಲ್ಲವು. ಉದಾ:-ಒಂದು ಮಾವಿನಹಣ್ಣಿಗೆ ರೂಪ, ರಸ, ಗಂಧಗಳಿವೆ. ಆದುದರಿಂದ ಇದನ್ನು ಕಣ್ಣಿನಿಂದ ನೋಡಬಹುದು, ವಾಸನೆಯಿಂದ ಮತ್ತು ರುಚಿಯಿಂದಲೂ ತಿಳಿಯಬಹುದು.

ಇನ್ನು ಹಿಡಿವುದು, ನಡೆವುದು, ಮಾತಾಡುವುದು, ಮಲ ವಿಸರ್ಜನೆ ಮಾಡುವುದು, ರೇತೋತ್ಸರ್ಜನಗಳೆಂಬ ಕರ್ಮಶಕ್ತಿಗಳು ಕರ್ಮೇಂದ್ರಿಯ-ಗಳೆನಿಸುತ್ತವೆ. ಕಣ್ಣು ಮೊದಲಾದವು ಜ್ಞಾನೇಂದ್ರಿಯಗಳಿರುವ ಸ್ಥಾನ ವಿಶೇಷಗಳಾಗಿರುವಂತೆ ಹಸ್ತಪಾದಾದಿಗಳು ಕರ್ಮೇಂದ್ರಿಯಗಳು ಅಧಿಷ್ಠಾನ-ಗಳಾಗಿವೆ. ಈ ದಶವಿಧ ಶಕ್ತಿಗಳು ತೈಜಸಾಹಂಕಾರದಿಂದ ಹುಟ್ಟುತ್ತವೆ. ವೈಕಾರಿಕಾಹಂಕಾರದಿಂದ ಮನಸ್ಸು ಮತ್ತು ತತ್ತ್ವಾಭಿಮಾನಿ ದೇವತೆಗಳ ದೇಹಗಳು ಹುಟ್ಟುತ್ತವೆ. ಮನಸ್ಸಿನ ವೃತ್ತಿಗಳು ಐದು ವಿಧವಾಗಿ ಇರುತ್ತವೆ. ಈ ಪಂಚವಿಧ ವೃತ್ತಿಭೇದದಿಂದ ಮನಸ್ಸು ಪ್ರತ್ಯೇಕವಾದ ನಾಮಗಳಿಂದ ಸಹ ಕರೆಯಲ್ಪಡುತ್ತದೆ:- ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನಗಳೆಂಬುವೇ ಆ ನಾಮಗಳು. ಹೀಗೆ ಮಾಡುತ್ತೇನೆ, ಬಿಡುತ್ತೇನೆ ಇತ್ಯಾದಿ ಸಂಕಲ್ಪ ವಿಕಲ್ಪಗಳನ್ನು ಮಾಡುವುದು ಮನಸ್ಸು. ಸರಿ-ತಪ್ಪುಗಳನ್ನು ಯುಕ್ತಾಯುಕ್ತತೆಗಳನ್ನು ವಿವೇಚಿಸಿ, ನಿರ್ಧರಿಸುವುದು ಬುದ್ಧಿ. ನಾನು, ನನ್ನದು ಎಂಬ ಭಾವನೆಗಳಿಗೆ ಕಾರಣವಾದುದು ಅಹಂಕಾರ. **ಪೂರ್ವಾನುಭವಗಳನ್ನು ಸ್ಮರಣೆಗೆ ತಂದುಕೊಡುವುದು 'ಚಿತ್ತ'.** ಜನ್ಮಾಂತರದ ಅನುಭವಗಳನ್ನು ಸ್ಮರಣೆಗೆ ತರುವುದು ಅಥವಾ ಬಹು ಸ್ಮರಣ-ಶಕ್ತಿಯು ಚೇತನ. ಈ ಪ್ರಭೇದಗಳುಳ್ಳ ಮನಸ್ಸು ಬಹು ಸೂಕ್ಷ್ಮವಾದುದು. ಸೂಕ್ಷ್ಮದರ್ಶಕ (micriscope) ಮೊದಲಾದ ಯಾವ ವೈಜ್ಞಾನಿಕ ಯಂತ್ರ-ಗಳಿಗೂ ಸಿಗುವುದಲ್ಲ. ಅಂತೆಯೇ **ಚಕ್ಷುರಾದಿ ಜ್ಞಾನೇಂದ್ರಿಯಗಳಿಗೂ ಗೋಚರಿಸತಕ್ಕುದಲ್ಲ.** ಮನಸ್ಸಿಗಿಂತಲೂ ಬುದ್ಧಿ ತತ್ತ್ವವು ಅತಿಶಯ ಸೂಕ್ಷ್ಮ-ವಾದುದೆಂದು ಹೇಳಲಾಗುತ್ತದೆ. ಆದರೆ ಈ ಬುದ್ಧಿ ತತ್ತ್ವವು ಮನಸ್ಸಿನ ಪ್ರಭೇದವಾದ ಬುದ್ಧಿಯಲ್ಲ. ಇದು ಮಹತ್ತತ್ತ್ವದ ಪ್ರಭೇದವಾದುದು-ವಿಜ್ಞಾನ ತತ್ತ್ವವೆಂದೂ ಕರೆಯಲ್ಪಡುತ್ತದೆ. ಪಂಚಭೂತಗಳಿಂದ ನಿರ್ಮಿತವಾದ ವಸ್ತುಗಳಲ್ಲದೆ ಮನಸ್ಸು ಮತ್ತು ಅದರ ಉತ್ಪತ್ತಿಗೆ ಕಾರಣವಾದ **ಅಹಂಕಾರತತ್ತ್ವ ಮತ್ತು ಮಹತ್ತತ್ತ್ವಗಳು ಒಂದಕ್ಕಿಂದ ಒಂದು ಅತಿ ಸೂಕ್ಷ್ಮವಾಗಿದ್ದು ಯಾವ ವೈಜ್ಞಾನಿಕ ಯಂತ್ರೋಪಕರಣಗಳಿಗೂ ನಿಲುಕತಕ್ಕವುಗಳಲ್ಲ.** ಜ್ಞಾನ, ಇಚ್ಛಾ ಕ್ರಿಯೆಗಳುಳ್ಳದ್ದು ಚೇತನವೆಂದು ಈ ಹಿಂದೆಯೇ ಹೇಳಲಾಗಿದೆಯಷ್ಟೆ. ಮನಃಪ್ರಭೇದವಾದ ಚೇತನವನ್ನು ಅದರಿಂದ ವಿವೇಚಿಸಿ, ತಿಳಿಯಬೇಕು.

ಬುದ್ಧಿ, ಚೇತನ ಇತ್ಯಾದಿ ಶಬ್ದಗಳನ್ನು ಜೀವಪರವಾಗಿಯೂ ಅನೇಕ ಸಂದರ್ಭ-ಗಳಲ್ಲಿ ಉಪಯೋಗಿಸಲಾಗುತ್ತದೆ. ಅವುಗಳಿಗೆ ಸಂದರ್ಭೋಚಿತವಾದ ಅರ್ಥಗಳನ್ನು ತಿಳಿಯಬೇಕು.

ಜ್ಞಾನೇಂದ್ರಿಯಗಳಿಂದ ಗ್ರಹಿಸಲ್ಪಡುವ ಶಬ್ದಾದಿ ತನ್ಮಾತ್ರೆಗಳು ಆಕಾಶಾದಿ ಭೂತಗಳ ಗುಣಗಳೂ ಆಗಿವೆ, ಮತ್ತು ಅವುಗಳ ಉತ್ಪತ್ತಿಗೆ ಕಾರಣಗಳೂ ಆಗಿವೆ. **ಈ ತನ್ಮಾತ್ರೆಗಳಲ್ಲಿ ಶಬ್ದವು ತಾಮಸಾಹಂಕಾರದಿಂದ ಹುಟ್ಟುತ್ತದೆ.** ಶಬ್ದದಿಂದ ಆಕಾಶವೂ, ಆಕಾಶದಿಂದ ಸ್ಪರ್ಶವೂ, ಸ್ಪರ್ಶದಿಂದ ವಾಯುವೂ, ವಾಯುವಿ-ನಿಂದ ರೂಪವೂ, ರೂಪದಿಂದ ತೇಜಸ್ಸೂ, ತೇಜಸ್ಸಿನಿಂದ ರಸವೂ, ರಸದಿಂದ ಜಲವೂ, ಜಲದಿಂದ ಗಂಧವೂ, ಗಂಧದಿಂದ ಪೃಥ್ವಿಯೂ ಹುಟ್ಟುತ್ತವೆ - ಹೀಗೆ ಪಂಚ ತನ್ಮಾತ್ರೆಗಳಿಂದ[8] ಸಹಿತವಾದ ಪಂಚಭೂತಗಳಿಂದ ಸೃಷ್ಟಿವಾದುದು ಈ ಜಗತ್ತು. ಇದನ್ನು ಗ್ರಹಿಸಿ ಮನಸ್ಸಿನ ದ್ವಾರಾ ಜೀವನಿಗೆ ಅದರ ಜ್ಞಾನವನ್ನುಂಟು ಮಾಡಿಕೊಡಲು ನಿಮಿತ್ತವಾದುವು ಜ್ಞಾನೇಂದ್ರಿಯಗಳು. ಅದರ ಜ್ಞಾನವನ್ನು ಹೊಂದುವವನು ಜ್ಞಾನಸ್ವರೂಪನೇ ಆದ ಜೀವನು.

ಅಹಂಕಾರ ತತ್ತ್ವದಿಂದ ಉತ್ಪನ್ನವಾದ ಮುಂದಿನ ಮನಸ್ಸೇ ಮೊದಲಾದ ಎಲ್ಲ ತತ್ತ್ವಗಳನ್ನೂ ಅವುಗಳ ಸಹಜ ಕಾರ್ಯಗಳಲ್ಲಿ ತೊಡಗುವಂತೆ ಪ್ರೇರಿಸುವ ಚೇತನರು ತತ್ತ್ವಾಭಿಮಾನಿಗಳೆಂದು ಕರೆಯಲ್ಪಡುತ್ತಾರೆ. **ಇವರ ದೇಹಗಳು ಅತಿ ಸೂಕ್ಷ್ಮವಾದ ವೈಕಾರಿಕ ಅಹಂಕಾರದಿಂದ ನಿರ್ಮಿತವಾದವುಗಳು.** ಈ ಅಭಿಮಾನಿ ದೇವತೆಗಳು ತಮ್ಮಿಂದ ಅಭಿಮನ್ಯಮಾನವಾದ ತತ್ತ್ವಾಂಶಗಳು ಇರುವ ಎಲ್ಲೆಡೆ-ಗಳಲ್ಲಿ ಇದ್ದು ತಮ್ಮ ಪ್ರೇರಕ ಕಾರ್ಯವನ್ನು ನೆರವೇರಿಸುತ್ತಾರೆ. ಈ ವರ್ಗದ ಚೇತನರು (ಅಭಿಮಾನಿ ದೇವತೆಗಳು) ಅನಂತಾಂಶಗಳಿಂದ ಸರ್ವತ್ರ ಇದ್ದು, ಬಹು ಜವಾಬ್ದಾರಿಯುತ ಅಧಿಕಾರವನ್ನು ನಿರ್ವಹಿಸುವ ಜ್ಞಾನ ಸಾಮರ್ಥ್ಯಾದಿಗಳನ್ನು ಹೊಂದಿ, ಪರಮಾತ್ಮನ ವಿಶೇಷಾನುಗ್ರಹಕ್ಕೆ ಪಾತ್ರ-ರಾಗಿರುವರೆಂದು ಹೇಳಲಾಗುತ್ತದೆ. ಇವರು ಬಹು ದೊಡ್ಡ ಯೋಗ್ಯತೆಯ

8. ಭಾಗವತ 3ನೇ ಸ್ಕಂಧ 26ನೇ ಅಧ್ಯಾಯವನ್ನು ನೋಡಬಹುದು.

ದೇವತೆಗಳು.[9] ಇವರ ಪ್ರೇರಣಾನುಸಾರವಾಗಿಯೇ ನಾನಾ ದೇಹಗಳಲ್ಲಿರುವ ಜೀವರು ವಿವಿಧ ಸಾಧನೆಗಳಲ್ಲಿ ತೊಡಗುತ್ತಾರೆ.

ತ್ರಿವಿಧ ಅಹಂಕಾರತತ್ತ್ವವು ಮಹತ್ತತ್ತ್ವದಿಂದ ಹುಟ್ಟುತ್ತದೆಯಷ್ಟೆ. ಈ ಮಹತ್ತತ್ತ್ವವು ಅಹಂಕಾರತತ್ತ್ವಕ್ಕಿಂತ ಸೂಕ್ಷ್ಮವಾದುದು. ಮಹತ್ತತ್ತ್ವವು ಮುಂದಿನ ಅಹಂಕಾರಾದಿ ತತ್ತ್ವಗಳ ಉತ್ಪತ್ತಿಗೆ ಕಾರಣವಾಗಿದ್ದರೂ, ತಾನು ಅವ್ಯಕ್ತ ತತ್ತ್ವದಿಂದ ಹುಟ್ಟುತ್ತದೆ. ಹೀಗೆ ಮಹತ್ತತ್ತ್ವವು ಅವ್ಯಕ್ತತತ್ತ್ವದ ಕಾರ್ಯವೂ ಆಗಿದೆ. ಅಹಂಕಾರಾದಿ ತತ್ತ್ವಗಳಿಗೆ ಕಾರಣವೂ ಆಗಿದೆ. ಅವ್ಯಕ್ತವೆಂಬ ಅದರ ನಾಮವು ಸೂಚಿಸುವಂತೆ ಅತ್ಯಂತ ಸೂಕ್ಷ್ಮವಾದುದೂ, ಸ್ವತಃ ತನ್ನ ಉತ್ಪತ್ತಿಗೆ ಮತ್ತೊಂದು ಕಾರಣವಿಲ್ಲದುದೂ ಆಗಿದೆ. ಈ ತತ್ತ್ವಗಳಿಗೆ ಅಭಿಮಾನಿಗಳಾದ ದೇವತೆಗಳು ಸಹ ತಮ್ಮಿಂದ ಅಭಿಮನ್ಯವಾದ ತತ್ತ್ವಗಳನ್ನು ನಿಯಮಿಸುವುದರಲ್ಲಿ ಸ್ವತಂತ್ರರಲ್ಲ. ಪರಾಧೀನರಾದ ಅಧಿಕಾರಿ ವರ್ಗದವರಂತೆ ಸ್ವತಂತ್ರಪ್ರಭುವಾದ ಈಶ್ವರನ ಅಧೀನರಾಗಿಯೇ ಕೆಲಸ ಮಾಡುತ್ತಾರೆ. ಆದರೆ ತಮ್ಮಿಂದ ನಿಯಮ್ಯವಾದ ತತ್ತ್ವವನ್ನು ವಿಕಾರಗೊಳಿಸಿ ಮುಂದಿನ ತತ್ತ್ವವನ್ನು ಸೃಷ್ಟಿಸಲು ಸಮರ್ಥರಲ್ಲ. ಈ ಪ್ರಮೇಯವನ್ನು ಚೆನ್ನಾಗಿ ನೆನಪಿಡುವುದು ಅತ್ಯವಶ್ಯಕ. **ಅವ್ಯಕ್ತಾದಿ ಜಡತತ್ತ್ವಗಳಲ್ಲಿ ಮೊದಲು ಮೊದಲಿನವು ನಂತರ ಹುಟ್ಟಿದ ತತ್ತ್ವಕ್ಕಿಂತ ಸೂಕ್ಷ್ಮವಾದವು. ಕಟ್ಟಕಡೆಗೆ ಹುಟ್ಟಿದ ಪೃಥಿವೀತತ್ತ್ವವೇ ಎಲ್ಲಕ್ಕಿಂತ ಸ್ಥೂಲವಾದುದು.**

---

9. ನಿಸ್ಸೀಮಾಷ್ಟಮಹಾಸಿದ್ಧಿಸಂಪೂರ್ಣಾಃ ಸರ್ವದೈವತಾಃ ।
ಅತಃ ಪೂರ್ಣಗುಣಾಸ್ಸರ್ವೇ ನಿಸ್ಸೀಮಾನಂದಭೋಜಿನಃ ॥
ಈಶ್ವರಾಚಿಂತ್ಯ ಶಕ್ತ್ಯೈವ ವಿಭಕ್ತಾಂಶೈರನಂತಕೈಃ ।
ಪ್ರೇರಕಾಸ್ಸರ್ವಜೀವಾನಾಂ ಸ್ವೋತ್ತಮೈಃ ಪ್ರೇರಿತಾಸ್ಸದಾ ॥ (ಸ.ರ.ಮಾ)

ತತ್ತ್ವಾಭಿಮಾನಿ ದೇವತೆಗಳು ಅಲ್ಪಾಧಿಕಾರಿಗಳ ಕಲ್ಪನೆಗೆ ನಿಲುಕದಷ್ಟು ಅಪರಿಮಿತ ಅಣಿಮಾದಿ ಅಷ್ಟಸಿದ್ಧಿಗಳಿಂದ ಪೂರ್ಣರಾಗಿದ್ದಾರೆ. ಇದರಿಂದ ಗುಣಪೂರ್ಣರೆಂದೂ, ಅಪರಿಮಿತ ಆನಂದಭೋಗವುಳ್ಳವರೆಂದೂ ಹೇಳಲ್ಪಡುತ್ತಾರೆ. ಈಶ್ವರನ ಅಚಿಂತ್ಯ ಶಕ್ತಿಯಿಂದ ಈ ದೇವತೆಗಳು ಅನಂತಾಂಶಗಳಿಂದ ವಿಭಕ್ತರಾಗಿ ತಮಗಿಂತ ಉತ್ತಮರಾದ ತತ್ತ್ವಾಭಿಮಾನಿಗಳ ಪ್ರೇರಣಾನುಸಾರ ಸರ್ವಜೀವರ ದೇಹಗಳಲ್ಲಿದ್ದು ತಮ್ಮಿಂದ ಅಭಿಮನ್ಯವಾದ ತತ್ತ್ವಗಳನ್ನು ಪ್ರೇರಿಸುತ್ತಾರೆ. ಈ ತತ್ತ್ವಾಭಿಮಾನಿಗಳನ್ನು ಮುಂದೆ ವಿವರಿಸಲಾಗುತ್ತದೆ.

ಸೂಕ್ಷ್ಮ ಸ್ಥೂಲತ್ವಗಳಲ್ಲಿರುವಂತೆಯೆ ಈ ತತ್ತ್ವಗಳ ಸ್ವಾಭಾವಿಕ ಗುಣಗಳಲ್ಲಿಯೂ ಕಾರ್ಯಶಕ್ತಿಯಲ್ಲಿಯೂ ನಿಯಾಮಕ ದೇವತೆಗಳಲ್ಲಿಯೂ ತರತಮಭಾವಗಳುಂಟು. ಕೆಳಗಿನ ತತ್ತ್ವಾಭಿಮಾನಿಗಿಂತ ಮೇಲಿನ ಸೂಕ್ಷ್ಮತತ್ತ್ವಾಭಿಮಾನಿಯು ಉತ್ತಮನು.

ತತ್ತ್ವಗಳು ಒಟ್ಟು ೨೪. ಅವು ಯಾವುವೆಂದರೆ– ಈ ಮೇಲೆ ವಿವರಿಸಲಾದ ಆಕಾಶಾದಿ ಪಂಚಭೂತಗಳು (೫); ಶಬ್ದಾದಿ (೫) ತನ್ಮಾತ್ರೆಗಳು; ವಾಗಾದಿ (೫) ಕರ್ಮೇಂದ್ರಿಯಗಳು; ಚಕ್ಷುರಾದಿ ೫ ಜ್ಞಾನೇಂದ್ರಿಯಗಳು; ಮನಸ್ಸು, ಅಹಂಕಾರ, ಮಹತ್ ಮತ್ತು ಅವ್ಯಕ್ತಗಳೆಂಬ ನಾಲ್ಕು (೪)– ಹೀಗೆ ಒಟ್ಟು ೨೪. ಪ್ರಾಣಿ ದೇಹಗಳಲ್ಲಿರುವ ಜೀವ ಮತ್ತು ಪರಮಾತ್ಮನನ್ನು ಹಿಡಿದು ದೇಹಗತ ತತ್ತ್ವಗಳನ್ನು ೨೬ ಎಂದೂ ಹೇಳುವುದುಂಟು. ಮತ್ತು ಜ್ಞಾನಿಗಳು ವಿವಕ್ಷಾಭೇದದಿಂದ ತತ್ತ್ವಗಳನ್ನು ಒಂದರಲ್ಲಿ ಕೆಲವನ್ನು ಸಮಾವೇಶಗೊಳಿಸಿ ಒಟ್ಟು ತತ್ತ್ವಗಳ ಸಂಖ್ಯೆಯನ್ನು ೭,೮ ಇತ್ಯಾದಿ ವಿವಿಧವಾಗಿ ಹೇಳುವುದೂ ಉಂಟು. ಈ ತತ್ತ್ವಗಳ ಅಭಿಮಾನಿ ದೇವತೆಗಳು ಯಾರೆಂದರೆ-ಪಂಚಭೂತ-ಗಳಿಗೆ ಕ್ರಮದಿಂದ ಗಣಪತಿ, ಪ್ರವಹವಾಯು, ಅಗ್ನಿ, ವರುಣ ಮತ್ತು ಧರಾದೇವಿ, ಇವರುಗಳು; ಶಬ್ದಾದಿ ತನ್ಮಾತ್ರೆಗಳಿಗೆ ಸೌಪರ್ಣೀ (ಗರುಡಪತ್ನಿ), ವಾರುಣೀ (ಶೇಷಪತ್ನಿ) ಮತ್ತು ಉಮಾ (ರುದ್ರಪತ್ನಿ) ಈ ಮೂವರು; ವಾಗಾದಿ ಪಂಚಕರ್ಮೇಂದ್ರಿಯಗಳಿಗೆ ಕ್ರಮದಿಂದ (ವಾಕ್) ಅಗ್ನಿ, (ಪಾಣಿ) ಇಂದ್ರ, (ಪಾದ) ಜಯಂತ, (ಪಾಯು) ಯಮ ಮತ್ತು (ಉಪಸ್ಥ) ದಕ್ಷ ಇವರುಗಳು; ಪಂಚ ಜ್ಞಾನೇಂದ್ರಿಯಗಳಿಗೆ ಕ್ರಮದಿಂದ (ಚಕ್ಷು) ಸೂರ್ಯ, (ಶ್ರೋತ್ರ) ಚಂದ್ರ, (ತ್ವಕ್) ಕುಬೇರ (ರಸನ) ವರುಣ, (ಘ್ರಾಣ) ಅಶ್ವಿನೀದೇವತೆಗಳು; ಮನಸ್ಸು ಮತ್ತು ಅಹಂಕಾರತತ್ತ್ವಕ್ಕೆ ಗರುಡ, ಶೇಷ, ರುದ್ರರು; ಬುದ್ಧಿತತ್ತ್ವಕ್ಕೆ (ಮಹತ್ತತ್ತ್ವದ ಪ್ರಭೇದವಾದ ವಿಜ್ಞಾನತತ್ತ್ವಕ್ಕೆ) ಸರಸ್ವತಿಯೂ, ಮಹತತ್ತ್ವಕ್ಕೆ ಚತುರ್ಮುಖ ಬ್ರಹ್ಮನೂ ಅಭಿಮಾನಿಗಳು. ಸರಸ್ವತೀ ಚತುರ್ಮುಖರೊಂದಿಗೆ ಭಾರತೀ ವಾಯು ದೇವರನ್ನೂ, ಬುದ್ಧಿ ಮತ್ತು ಮಹತತ್ತ್ವಗಳ ಅಭಿಮಾನಿಗಳೆಂದು ತಿಳಿಯಬೇಕು. ಅವ್ಯಕ್ತ ತತ್ತ್ವಕ್ಕೆ ಮಹಾಲಕ್ಷ್ಮೀದೇವಿಯು ನಿಯಾಮಕಳು. ಈ ಎಲ್ಲ ದೇವತಾವರ್ಗದ ಸ್ವತಂತ್ರ ನಿಯಾಮಕನು ನಾರಾಯಣನು.

ಈತನ ಅಧೀನರಾದ (ತಮ್ಮೊಳಗಿದ್ದು ನಾರಾಯಣನು ಪ್ರೇರಿಸಿದಂತೆ) ಲಕ್ಷ್ಮ್ಯಾದಿಗಳು ತಮ್ಮ ಕೆಳಗಿನ ದೇವತೆಗಳಿಗೂ ತತ್ತ್ವಗಳಿಗೂ ನಿಯಾಮಕ-ರಾಗಿರುವರು. **ಉಚ್ಚದೇವತೆಗಳೆಲ್ಲರೂ ಅವರವರ ಕೆಳಗಿನ ಎಲ್ಲ ದೇವತೆಗಳಿಗೂ ''ನಿಯಾಮಕರು''. ಕೆಳಗಿನ ತತ್ತ್ವಗಳ ಅಭಿಮಾನಿದೇವತೆಗಳು ಬ್ರಹ್ಮಾದಿ ಉತ್ತಮ ದೇವತೆಗಳ ದೇಹಗಳಲ್ಲಿಯೂ ಇರುವರು - ಆದರೆ ''ಆಜ್ಞಾಧಾರಕರಾಗಿ'' ಮಾತ್ರ** - ನಿಯಾಮಕರಾಗಿ ಅಲ್ಲ. ತತ್ತ್ವಗಳ ಮುಖ್ಯಾಭಿಮಾನಿಗಳನ್ನು ಈ ಮೇಲೆ ನಿರೂಪಿಸಲಾಗಿದೆ - ಪರಮ ಮುಖ್ಯಾಭಿಮಾನಿಗಳು ರಮಾ - ನಾರಾಯಣರು. ಈ ಉಭಯರೂ ಸರ್ವತ್ರ ವ್ಯಾಪ್ತರು. ವಿಶ್ವದಲ್ಲಿರುವ ಸಕಲ ಪ್ರಾಣಿ ದೇಹಗಳಲ್ಲಿಯೂ ಇರುವರು. ಇನ್ನು, ಪ್ರತಿ ತತ್ತ್ವಗಳಿಗೂ ಅವಾಂತರಾಭಿಮಾನಿಗಳೆಂಬ ದೇವತೆಗಳೂ ಇದ್ದಾರೆ. ಇವರು ತಮ್ಮಿಂದ ಅಭಿಮನ್ಯವಾದ ತತ್ತ್ವದ ವಿವಿಧ ಪ್ರವೃತ್ತಿಗಳಲ್ಲಿ ಕೆಲವು ಪ್ರವೃತ್ತಿಗಳಿಗೆ ಮಾತ್ರ ನಿಯಾಮಕರಾಗಿರುವುದೂ ಉಂಟು. ಈ ವಿವರಗಳ ವಿಸ್ತಾರವನ್ನು ಗುರು ಮುಖೇನ ಶಾಸ್ತ್ರಗ್ರಂಥಗಳನ್ನು ಅಭ್ಯಸಿಸಿ ತಿಳಿಯಬೇಕು. ಗ್ರಂಥವಿಸ್ತಾರ ಭಯದಿಂದ ಇಲ್ಲಿ ವಿವರಿಸಲಾಗುವುದಿಲ್ಲ.

**ತತ್ತ್ವನಿಯಾಮಕರಾದ ಅಭಿಮಾನಿ ದೇವತೆಗಳಿದ್ದಂತೆ ತತ್ತ್ವಾಭಿಮಾನಿ-ಗಳಾದ ದೈತ್ಯರೂ ಇರುವರು.** ದೇಹಗತ ತತ್ತ್ವಾಂಶಗಳಿಗೆ ಇವರೂ ಪ್ರೇರಕ-ರಾಗಿರುವರು. ಈಶ್ವರಾಚಿಂತ್ಯ ಶಕ್ತಿಯಿಂದ ಅನಂತಾಂಶಗಳುಳ್ಳವರಾಗಿ ಎಲ್ಲ ಪ್ರಾಣಿದೇಹಗಳಲ್ಲಿದ್ದು ಕೆಲಸಮಾಡುತ್ತಾರೆ. ಮನ ಆದಿ ಇಂದ್ರಿಯಗಳಲ್ಲಿದ್ದು ಇಂದ್ರಿಯಪ್ರೇರಕ ದೇವತೆಗಳು ದೇಹಗತ ಜೀವನ ಯೋಗ್ಯತೆ, ಪೂರ್ವ ಸಂಸ್ಕಾರ, ಅದೃಷ್ಟಾದಿಗಳನ್ನು ತಿಳಿದು ಆಯಾ ಕಾಲದಲ್ಲಿ ಜೀವನನ್ನು ಪುಣ್ಯ ಪಾಪಕರ್ಮಗಳಲ್ಲಿ ಪ್ರೇರಿಸುವರು. ಪರಮಾತ್ಮನ ವಿಶೇಷಾನುಗ್ರಹಕ್ಕೆ ಪಾತ್ರರಾದ ಈ ದೇವತೆಗಳೇ ಪಾಪಕರ್ಮಗಳಲ್ಲಿ ಸಹ ಇಂದ್ರಿಯಗಳನ್ನು ಅಭಿಮಾನಿ ದೈತ್ಯದ್ವಾರಾ ಪ್ರೇರಿಸುತ್ತಾರೆ. ಪಾಪಕರ್ಮಗಳಲ್ಲಿ ಜೀವನನ್ನು ಪ್ರೇರಣೆ-ಮಾಡಿದುದರಿಂದ ಇವರಿಗೆ ಲೇಶಮಾತ್ರವೂ ಪಾಪಲೇಪವಾಗುವುದಿಲ್ಲ. ಏಕೆಂದರೆ-ಪರಮಾತ್ಮನ ಆಜ್ಞೆ ಎಂದು ತಿಳಿದೇ ಉಭಯಾತ್ಮಕ ಕರ್ಮಗಳಲ್ಲಿ ಇಂದ್ರಿಯಾದಿಗಳನ್ನು ಪ್ರೇರಿಸುತ್ತಾರೆ. ಪ್ರೇರಕ ವ್ಯಾಪಾರದಲ್ಲಿ ಈ ವಿಧ

ನಿರ್ಲಿಪ್ತತೆಯು ದೈತ್ಯಾಭಿಮಾನಿಗಳಿಗಿಲ್ಲ. ಮತ್ತು ಅವರಿಗೆ ಜೀವ ಯೋಗ್ಯತೆ ಅದೃಷ್ಟಾದಿಗಳ ಜ್ಞಾನವೂ ಇರುವುದಿಲ್ಲ. ದೇವತೆಗಳಂತೆ ಮಹಾಜ್ಞಾನಿಗಳೂ ಅಲ್ಲ-ಪರಮಾತ್ಮನ ಅನುಗ್ರಹಕ್ಕೂ ಪಾತ್ರರಲ್ಲ. ಈ ದೈತ್ಯಾಭಿಮಾನಿಗಳು ತಮ್ಮ ಪ್ರೇರಣಾನುಸಾರ ಜೀವರಿಂದ ಸಂಭವಿಸುವ ಪಾಪಕರ್ಮಗಳ ಫಲಾಂಶ-ಗಳನ್ನೂ ಹೊಂದುತ್ತಾರೆ.

ಪೂರ್ವೋಕ್ತ ತತ್ತ್ವಗಳ ಮಧ್ಯೆ ಮಹತತ್ತ್ವವನ್ನುಳಿದು ಕೆಳಗಿನ ತತ್ತ್ವಗಳನ್ನು ಮಾತ್ರ ಆಶ್ರಯಿಸಿ ದೈತ್ಯಾಭಿಮಾನಿಗಳು ದುಷ್ಕರ್ಮಗಳಲ್ಲಿ ಪ್ರೇರಿಸುತ್ತಾರೆ. ದೈತ್ಯಾಭಿಮಾನಿಗಳಾರೆಂದರೆ-ಮಧುಕೈಟಭರು, ಕಾಲನೇಮಿ, ವಿಪ್ರಚಿತ್ತಿ, ಅಲಕ್ಷ್ಮೀ (ಕಲಿಪತ್ನಿ) ಮತ್ತು ಕಲಿ. ಇವರು ಕ್ರಮದಿಂದ ಒಬ್ಬರಿಂದೊಬ್ಬರು ಅಧಮರು. ಎಲ್ಲರಿಗಿಂತ ನೀಚನು ಕಲಿ. ಈ ದೈತ್ಯಚೇತನರು ಸ್ವಾಭಾವಿಕ-ವಾಗಿಯೇ ಈಶ್ವರ ದ್ವೇಷಿಗಳು-ಪಾಪಬುದ್ಧಿಗಳು-ದುಃಖಾಜ್ಞಾನಾದಿ ಸ್ವರೂಪ ಉಳ್ಳವರು. ನಿತ್ಯ ದುಃಖವೇ ಇವರಿಗೆ ದೊರೆಯುವ ಅಂತ್ಯಗತಿ-ಅವರ ಸ್ವರೂಪವೇ ಅದಾದುದರಿಂದ ಅದರ ಆವಿರ್ಭಾವವೇ ಅವರ ಮೋಕ್ಷ. ಜೀವತ್ರೈವಿಧ್ಯ ನಿರೂಪಣಾವಸರದಲ್ಲಿ ಮುಂದೆ ಈ ಸಂಬಂಧದ ಆಗಮ ವಾಕ್ಯಗಳನ್ನು ಉದಹರಿಸಲಾಗುತ್ತದೆ. ಅಜ್ಞಾನ, ಭ್ರಮ, ಪ್ರಮಾದಿಗಳಿಗೆ ಕಲಿಯು ಅಭಿಮಾನಿ. ದುಷ್ಟ ಕಾಮಾದಿಗಳಿಗೆ ಕಾಲನೇಮಿ-ಇತ್ಯಾದಿ ನಾನಾ-ಭಾವಗಳಿಗೆ ಭಿನ್ನ ಭಿನ್ನ ದೈತ್ಯರು ಅಭಿಮಾನಿಗಳು. (ವಿವರಗಳನ್ನು ಶಾಸ್ತ್ರಾಭ್ಯಾಸ-ದಿಂದ ತಿಳಿಯಬೇಕು) ದೈತ್ಯರಲ್ಲಿ ಪ್ರಸಿದ್ಧರಾದ ಕಿರ್ಮೀರ, ಕುಂಭಕರ್ಣ, ವೇನ, ಹಂಸಡಿಭಿಕರು, ಕಾಲಕೇಯರು, ಧುಂಧುಮಾರ, ಲವಣ, ತೃಣಾವರ್ತ, ಕೇಶಿ, ಧೇನುಕ, ನಮುಚಿ, ಬಾಣ, ದ್ವಾಪರ, ಹಿಡಿಂಬ, ಶಂಬರ, ಸಾಲ್ವ, ತಾರಕ, ಬಕ, ಹಿರಣ್ಯಾಕ್ಷ, ಹಿರಣ್ಯಕಶ್ಯಪು, ಮಣಿಮಂತ, ಮಧುಕೈಟಭರು, ಕಾಲನೇಮಿ, ವಿಪ್ರಚಿತ್ತಿ, ಭೌಮ (ನರಕಾಸುರ) ಅಲಕ್ಷ್ಮೀ ಮತ್ತು ಕಲಿ-ಇವರುಗಳು ಉಕ್ತ-ಕ್ರಮದಲ್ಲಿ ಒಬ್ಬರಿಗಿಂತ ಒಬ್ಬರು ನೀಚರು. ದೈತ್ಯಗಣದಲ್ಲಿ ಕಾಲಕೇಯರಿಗಿಂತ ಅಧಮರಾದ ಪ್ರತಿಯೊಬ್ಬರೂ ತನ್ನ ಉತ್ತಮರಿಗಿಂತ ಒಂದು ನೂರು ಗುಣಗಳಿಂದ ಅಧಮರು. ಹೀಗೆ ತಾರತಮ್ಯಯುಕ್ತರಾದ ದೈತ್ಯರು ಜ್ಞಾನ ಕರ್ಮೇಂದ್ರಿಯಗಳಿಗೆ ಮತ್ತು ಮನಸ್ತತ್ತ್ವಕ್ಕೂ ಸಹ ಪ್ರತ್ಯೇಕವಾಗಿ ಕೆಲ-ಕೆಲವರು ಅಭಿಮಾನಿಗಳಾಗಿರುವರು.

**ಸೃಷ್ಟಿಯು ಸೂಕ್ಷ್ಮ ಮತ್ತು ಸ್ಥೂಲಗಳೆಂಬ ಭೇದದಿಂದ ಎರಡು ಪ್ರಕಾರ.** ಈ ಮೇಲೆ ನಿರೂಪಿಸಲಾದ ಮಹದಾದಿ ತತ್ತ್ವಗಳ ಸೃಷ್ಟಿಯು ಸೂಕ್ಷ್ಮಸೃಷ್ಟಿ. ಇವುಗಳಲ್ಲಿ ಪಂಚಭೂತಗಳೂ ಇರುತ್ತವೆಂಬುದನ್ನು ಗಮನಿಸಬೇಕು. ಪೃಥಿವ್ಯಾದಿಗಳೇ ಸ್ಥೂಲಗಳಲ್ಲ. ಅವುಗಳ ಸೂಕ್ಷ್ಮರೂಪಗಳೂ ಇವೆ. ಯದ್ಯಪಿ ಸೂಕ್ಷ್ಮ ಪೃಥಿವ್ಯಾದಿ ತತ್ತ್ವಗಳು ತಮ್ಮ ಉತ್ಪತ್ತಿಗೆ ಕಾರಣಗಳಾದ ಅಹಂಕಾರಾದಿ ತತ್ತ್ವಗಳಿಗಿಂತ ಕಿಂಚಿತ್ ಸ್ಥೂಲಗಳೇ. ಆದುದರಿಂದ ಸೂಕ್ಷ್ಮ ಸೃಷ್ಟಿಯಲ್ಲಿ ಹೇಳಲಾಗಿರುವ ಪೃಥಿವ್ಯಾದಿಗಳನ್ನು ನಾವು ಪ್ರತ್ಯಕ್ಷವಾಗಿ ಕಾಣುವ ಪೃಥಿವ್ಯಾದಿಗಳಂತೆ ಸ್ಥೂಲವಾದವುಗಳೆಂದು ತಿಳಿಯಬಾರದು. ಸೃಷ್ಟಿಕಾಲ ಪ್ರಾಪ್ತವಾದಾಗ, ಅಚಿಂತ್ಯಾದ್ಭುತ ಶಕ್ತಿಯುಳ್ಳ ಶ್ರೀವಿಷ್ಣುವು, ಮೂಲ ಪ್ರಕೃತಿಗೆ ಅಭಿಮಾನಿಯಾದ ಮಹಾಲಕ್ಷ್ಮೀ ದೇವಿಯಲ್ಲಿ, ಪ್ರಕೃತಿಯಲ್ಲಿರುವ ಸತ್ತ್ವ ರಜಸ್ತಮೋಗುಣಗಳು ವಿಷಮಾವಸ್ಥೆಯನ್ನು ಹೊಂದಿ ಮುಂದೆ ಮಹದಾದಿ ತತ್ತ್ವಗಳ ರೂಪದಿಂದ ವಿಕಾರಗೊಳ್ಳಲು ಅವಶ್ಯಕವಾದ ತನ್ನ ಶಕ್ತಿಯನ್ನು, ಸ್ಥಾಪಿಸುವನು. **ಮೂಲ ಪ್ರಕೃತಿಯೇ (ಅವ್ಯಕ್ತ) ತತ್ತ್ವವೆನಿಸುವುದು. ಅದು ತ್ರಿಗುಣಾತ್ಮಕವೆಂದೂ ಹೇಳಲ್ಪಡುತ್ತದೆ.** ಎಂದರೆ, ಸತ್ತ್ವ ರಜಸ್ತಮೋಗುಣಗಳೇ ಅದರ ಸ್ವರೂಪವೆಂದು ಅರ್ಥ. ಹೀಗಿದ್ದರೂ ತ್ರಿಗುಣಗಳು ಅವ್ಯಕ್ತ ತತ್ತ್ವದ ವಿಕಾರದಿಂದ ಉತ್ಪನ್ನವಾದವುಗಳೆಂದೂ ಹೇಳಲ್ಪಡುತ್ತವೆ. ಅವ್ಯಕ್ತದಲ್ಲಿರುವ ತ್ರಿಗುಣಗಳೇ ಈಶ್ವರೇಚ್ಛೆಯಿಂದ ಸೃಷ್ಟಿಕ್ರಮದಲ್ಲಿ ಕಿಂಚಿತ್ ಪ್ರಕಟವಾಗುತ್ತವೆ. ಅತ್ಯಲ್ಪ ವಿಕಾರದಿಂದ ಈ ಗುಣಗಳು ಪ್ರಕಟವಾಗುವುದರಿಂದ ಮೂಲ ಪ್ರಕೃತಿಯೇ ತ್ರಿಗುಣಾತ್ಮವೆಂದು ಹೇಳಲಾಗುತ್ತದೆ. ಈ ಹಿಂದೆ ನಿರೂಪಿಸಿದಂತೆ ತತ್ತ್ವಗಳೂ ಮತ್ತು ತತ್ತ್ವಾಭಿಮಾನಿ ದೇವತೆಗಳೂ ತಮ್ಮಿಂದ ಅಭಿಮನ್ಯ-ಮಾನಗಳಾದ ತತ್ತ್ವಗಳಿಂದ ಬ್ರಹ್ಮಾಂಡವನ್ನು ನಿರ್ಮಿಸಲು ಅಸಮರ್ಥರಾಗಿ ಶ್ರೀ ವಿಷ್ಣುವನ್ನೇ ಶರಣು ಹೊಂದಿದರು. ಆಗ ಶ್ರೀ ವಿಷ್ಣುವೇ ಈ (ಸೂಕ್ಷ್ಮ) ತತ್ತ್ವಗಳನ್ನು ವಿನಿಯೋಗಿಸಿ ಲಕ್ಷ್ಮೀದ್ವಾರಾ ಬ್ರಹ್ಮಾಂಡವನ್ನು ನಿರ್ಮಿಸಿದನು. ಆಗಮಗಳು ಇಡೀ ವಿಶ್ವವನ್ನು ಬ್ರಹ್ಮಾಂಡವೆಂಬ ಹೆಸರಿನಿಂದ ಕರೆಯುತ್ತವೆ. ಸೂರ್ಯಾದಿ ಗ್ರಹಗಳು, ಧ್ರುವಾದಿ ನಕ್ಷತ್ರಗಳು, ಭೂಮ್ಯಾದಿ ಹದಿನಾಲ್ಕು ಲೋಕಗಳು, ಈ ಎಲ್ಲವನ್ನೂ ಒಳಗೊಂಡ ಜಗತ್ತೇ ಅಂಡಾಕಾರ-ವಾಗಿರುತ್ತದೆಂದು ಹೇಳಲಾಗುವ ಬ್ರಹ್ಮಾಂಡವು. ಈ ಬ್ರಹ್ಮಾಂಡಕ್ಕೇ ಒಂದಕ್ಕಿಂತ

ಒಂದು ಹತ್ತರಷ್ಟು ವಿಸ್ತಾರವುಳ್ಳ ಪೃಥಿವ್ಯಾದಿ ಸೂಕ್ಷ್ಮ ತತ್ತ್ವಗಳ ಆವರಣ-ಗಳಿರುತ್ತವೆಂದೂ, ಕೊನೆಯದಾದ ತ್ರಿಗುಣಾತ್ಮಕ ಆವರಣವು ಅತ್ಯಂತ ವಿಸ್ತಾರವಾದುದೆಂದೂ, ಅದನ್ನೂ ವ್ಯಾಪಿಸಿ ಅನಂತ ವಿಸ್ತಾರದ ಅವ್ಯಾಕೃತಾ-ಕಾಶವೆಂಬ ಆವರಣವೂ ಇರುವುದೆಂದು ಹೇಳಲಾಗುತ್ತದೆ.[10] **ಹೀಗೆ ಸೂಕ್ಷ್ಮ ತತ್ತ್ವಗಳ ಆವರಣಗಳಿಂದ ಸಹಿತವಾದ ಬ್ರಹ್ಮಾಂಡವನ್ನು, ಸೂಕ್ಷ್ಮ ತತ್ತ್ವಗಳು ಮತ್ತು ಅಭಿಮಾನಿ ದೇವತೆಗಳ ಸಮೇತ ಲಕ್ಷ್ಮೀಯಿಂದ ಒಡಗೂಡಿ ಶ್ರೀ ವಿಷ್ಣುವು ಪ್ರವೇಶಿಸುತ್ತಾನೆ.** ಅಲ್ಲಿ ದೇವತೆಗಳಿಗೆ ಯೋಗ್ಯವಾದ ಆಶ್ರಯಸ್ಥಾನಗಳನ್ನು ಕಲ್ಪಿಸಿಕೊಡುತ್ತಾನೆ. ಕಾಲಕ್ರಮದಲ್ಲಿ ಗ್ರಹ ನಕ್ಷತ್ರಾದಿಗಳು, ಲೋಕವಿಭಾಗಗಳೂ, ಚತುರ್ಮುಖ ಬ್ರಹ್ಮನ ದ್ವಾರಾ ಶ್ರೀಹರಿಯಿಂದಲೇ ಮಾಡಲ್ಪಡುತ್ತವೆ. ನಾನಾ ವಿಧದ ಪ್ರಾಣಿದೇಹಗಳು ಜೀವರುಗಳು ಸಾಧನಾರ್ಥವಾಗಿ ಸೃಷ್ಟವಾಗುತ್ತವೆ. ಬುದ್ಧ್ಯಾದಿ ಸಕಲ ಸಾಧನ ಸಾಮಗ್ರಿಗಳಿಂದ ಸಹಿತವಾದ ಮನುಷ್ಯದೇಹವು ನಿರ್ಮಿಸಲ್ಪಟ್ಟು ಅವರವರ ಕರ್ಮಾನುಸಾರವಾಗಿ ಜೀವರು ಆ ದೇಹಗಳಲ್ಲಿ ಪ್ರವೇಶಿಸಲ್ಪಡುತ್ತಾರೆ. ಈ ಬ್ರಹ್ಮಾಂಡ ಸೃಷ್ಟಿಯನ್ನು ಸ್ಥೂಲಸೃಷ್ಟಿಯೆಂದು ಕರೆಯುವುದುಂಟು. ಇದರ ಆವರಣಗಳಾದ ತತ್ತ್ವಗಳನ್ನು ಆಯಾ ತತ್ತ್ವದ ಅಭಿಮಾನಿ ದೇವತೆಗಳು ನಿಯಮಿಸುತ್ತಾ, ಸ್ವೋತ್ತಮರ ಹಾಗೂ ಸರ್ವ-ಸ್ವತಂತ್ರನಾದ ನಾರಾಯಣನ ಅಧೀನರಾಗಿ ಪ್ರಳಯಕಾಲದವರೆಗೂ ಆ ಆವರಣಗಳನ್ನು ರಕ್ಷಿಸುತ್ತಾರೆ.

ಜಗತ್ ಸಂಬಂಧವಾದ ಕಾರ್ಯಗಳು ಸೃಷ್ಟಿ, ಸ್ಥಿತಿ, (ಪಾಲನೆ) ಲಯ (ನಾಶ), ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಂದು ಎಂಟು ವಿಧವಾಗಿರುತ್ತವೆ. ಇವುಗಳಲ್ಲಿ ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಂಬವು ಚೇತನರಿಗೆ ಮಾತ್ರ ಅನ್ವಯಿಸುತ್ತವೆ; ಜಡವಸ್ತುಗಳಿಗಿಲ್ಲ. ಚೇತನರಿಗೆ ಸಂಬಂಧಿಸಿದಂತೆ ಅಷ್ಟ ಕರ್ತೃತ್ವಗಳನ್ನೂ, ಜಡಜಗತ್ತಿಗೆ ಸಂಬಂಧಿಸಿದಂತೆ ಸೃಷ್ಟಿ, ಸ್ಥಿತಿ, ಲಯ, ನಿಯಮನಗಳೆಂಬ ನಾಲ್ಕು ಕರ್ತೃತ್ವಗಳನ್ನೂ ಈಶ್ವರನು

10. ಅವ್ಯಾಕೃತಾಕಾಶವೆಂಬುದು ಯಾವ ವಿಕಾರಕ್ಕೂ ಒಳಗಾಗದ ದೇಶ (ಪ್ರದೇಶ-Space). ಪಂಚಭೂತಗಳಲ್ಲಿ ಒಂದಾದ ಆಕಾಶವು ತಾಮಸಾಹಂಕಾರ ತತ್ತ್ವದ ವಿಕಾರವು-ಭೂತಾಕಾಶವೆಂದೇ ಕರೆಯಲ್ಪಡುತ್ತದೆ.

ನಿರ್ವಹಿಸುವನೆಂದು ಯಥಾಯೋಗ್ಯವಾಗಿ (ಅಷ್ಟಕರ್ತೃತ್ವಗಳನ್ನು) ಗ್ರಹಿಸ-ಬೇಕು. ಹೀಗೆ ಈಶ್ವರನು ಅಷ್ಟಕರ್ತೃತ್ವವನ್ನು ನಿರ್ವಹಿಸುವುದರಲ್ಲಿ ಸ್ವೇಚ್ಛೆಯಿಂದ, ತನ್ನ ಅಧೀನರಾದ ಬ್ರಹ್ಮ ಮೊದಲಾದ ತತ್ತ್ವಾಭಿಮಾನಿ ದೇವತೆಗಳನ್ನು ಯಥಾಯೋಗ್ಯವಾಗಿ ಉಪಯೋಗಿಸಿಕೊಳ್ಳುತ್ತಾನೆ-ಅವರನ್ನು ಬಿಟ್ಟು ತಾನೇ ನಿರ್ವಹಿಸಲು ಅಸಮರ್ಥನೆಂಬ ಕಾರಣದಿಂದ ಅಲ್ಲ. ದೇವತೆಗಳನ್ನು ಹೀಗೆ ಉಪಯೋಗಿಸಿಕೊಂಡರೂ ಅವರಲ್ಲಿ ಅಂತರ್ಯಾಮಿಯಾಗಿ ತಾನೇ ನಿಂತು, ಸೃಷ್ಟ್ಯಾದಿಗಳನ್ನು ತಾನು ಮಾಡಿ ತನ್ನೊಂದಿಗೆ ಅವರಿಂದಲೂ ಮಾಡಿಸಿ ಅದರ ಫಲವನ್ನು ಅವರಿಗಿತ್ತು, ಅವರವರ ಗತಿಗಳನ್ನು ನೀಡುತ್ತಾನೆ.

ಆಗಮಗಳು ನಿರೂಪಿಸುವ ಜಗತ್ ಸೃಷ್ಟಿ ಪ್ರಕಾರದ ಸಂಗ್ರಹವು ಈ ಮೇಲೆ ಹೇಳಿದಂತೆ ಇದ್ದರೆ ಆಧುನಿಕ ವೈಜ್ಞಾನಿಕರೇ ಮೊದಲಾದ ಇತರರು ಈ ವಿಷಯದಲ್ಲಿ ಏನು ಹೇಳುತ್ತಾರೆಂಬುದನ್ನು ಸ್ವಲ್ಪ ಗಮನಿಸೋಣ.

ಸೃಷ್ಟ್ಯಾದಿ ಸಂಬಂಧವಾದ ಆಗಮ ನಿರ್ಣಯಗಳನ್ನು ಯೋಗಿಗಳು ತಮ್ಮ ಜ್ಞಾನದೃಷ್ಟಿಯಿಂದ ಪ್ರತ್ಯಕ್ಷ ಕಂಡಿರುವರೆಂಬ ಪ್ರತಿಜ್ಞಾವಾಕ್ಯಗಳನ್ನು ಆಗಮಗಳಲ್ಲಿ ಬಹುಕಡೆಗಳಲ್ಲಿ ಕಾಣುತ್ತೇವೆ. ಈ ಮಾತುಗಳಲ್ಲಿ ವಿಶ್ವಾಸವನ್ನು ಹುಟ್ಟಿಸುವ ಅವರ ಕೃತಿಗಳನ್ನು ಮತ್ತು ಅನುಭವಗಳನ್ನು ಸತ್ಯಾನ್ವೇಷಿಗಳು ದುರ್ಲಕ್ಷಿಸಲು ಬರುವುದಿಲ್ಲ - ಈ ಎಲ್ಲವನ್ನೂ ಕೇವಲ ಭ್ರಮಜನ್ಯ ವಾಕ್ಯಗಳೆಂದು ತಳ್ಳಿಹಾಕಲೂ ಬರುವುದಿಲ್ಲ. ಆಧುನಿಕ ವೈಜ್ಞಾನಿಕರಾದರೋ ಈ ಸೃಷ್ಟ್ಯಾದಿಗಳ ವಿಷಯದಲ್ಲಿ ಈವರೆಗೆ ಯಾವ ನಿರ್ಣಯಗಳನ್ನೂ ಕಂಡಿರುವುದಿಲ್ಲ. ಕೇವಲ ಊಹಾಪೋಹಗಳನ್ನು ಕಲ್ಪಿಸುವುದರಲ್ಲಿಯೇ ನಿರತರಾಗಿದ್ದಾರೆ. ಉಚ್ಚಮಟ್ಟದ ಜ್ಞಾನಿಗಳಲ್ಲಿಯೂ ಸಹ ಈ ಊಹಾ-ಪೋಹಗಳಲ್ಲಿ ಏಕವಾಕ್ಯತೆ ಇಲ್ಲ. ಈ ವೈಜ್ಞಾನಿಕ ಪ್ರವೀಣರ ಭಿನ್ನಾಭಿ-ಪ್ರಾಯಗಳು ಸಮನ್ವಯಗೊಂಡು ನಿರ್ದಿಷ್ಟವಾದ ನಿರ್ಣಯವು ರೂಪ-ಗೊಳ್ಳುವ ಸಂಭವವೇ ತೋರುವುದಿಲ್ಲ. ಅಂತಹ ನಿರ್ಣಯಗಳು ಒಂದು ವೇಳೆ ಏರ್ಪಟ್ಟರೂ ಅವುಗಳ ಸತ್ಯತೆಯನ್ನು ಪ್ರಯೋಗಶಾಲೆಗಳಲ್ಲಿ ಕಾಣುವುದಂತೂ ದುಸ್ಸಾಧ್ಯವೇ ಸರಿ.[11] ಇನ್ನು ಪ್ರಾಚೀನ ದರ್ಶನಕಾರರ ಕೆಲವು

11. ವೈಜ್ಞಾನಿಕರ ವಿಶ್ವಸೃಷ್ಟಿಯ ವಿವಿಧ ಕಲ್ಪನೆಗಳ ಬಗ್ಗೆ ರತ್ನ 2-ಪುಟ 225ನ್ನು ನೋಡುವುದು.

ಅಭಿಪ್ರಾಯಗಳನ್ನು ಇಲ್ಲಿ ಗಮನಿಸಬಹುದು. ಕೇವಲ ಪ್ರಕೃತಿ ಮತ್ತು ಪ್ರಾಕೃತ ಜಡಶಕ್ತಿಗಳಿಂದ ಸೃಷ್ಟ್ಯಾದಿಗಳು ಸಂಭವಿಸುತ್ತವೆಂದು ಕೆಲವರು (ನಿರೀಶ್ವರ-ಸಾಂಖ್ಯರು), ಚೇತನನ ಸಹಾಯ ಮತ್ತು ಸನ್ನಿಧಾನಗಳುಳ್ಳ ಜಡಶಕ್ತಿಗಳಿಂದ ಸೃಷ್ಟ್ಯಾದಿಗಳು ನಡೆಯುತ್ತವೆಂದು ತಿಳಿಯುವವರು ಮತ್ತೆ ಕೆಲವರು. ದೊಡ್ಡಯೋಗ್ಯತೆಯ ಬ್ರಹ್ಮರುದ್ರಾದಿಚೇತನರು ಒಬ್ಬೊಬ್ಬರೂ ಭಿನ್ನ ಭಿನ್ನ ಕರ್ತವ್ಯಗಳನ್ನು ನೆರವೇರಿಸುವುದರಿಂದ ಸೃಷ್ಟ್ಯಾದಿ ಸರ್ವವೂ ನಡೆಯ-ಬಹುದಾಗಿರಲು ಒಬ್ಬ ಸ್ವತಂತ್ರ ಈಶ್ವರನನ್ನು ಒಪ್ಪಿಕೊಳ್ಳುವ ಕಾರಣವಿಲ್ಲವೆಂದು ಮುಂತಾಗಿ ತಿಳಿಯುವವರು ಕೆಲವರು (ಪ್ರಕೃತ್ಯುಪಸರ್ಜನ ಜೀವ ಕರ್ತೃತ್ವ-ವಾದಿಗಳು). ಹೀಗೆ ನಾನಾಪ್ರಕಾರದಿಂದ ತರ್ಕಿಸಿ ಸ್ವತಂತ್ರ ಈಶ್ವರನಿಲ್ಲದೆ ವಿಶ್ವಸೃಷ್ಟ್ಯಾದಿಗಳು ನಡೆಯುತ್ತವೆಂದು ತಿಳಿಯುವ ಇತರ ವಾದಿಗಳೂ ಇರುವರು. ಪರಮಾಣು ಸಮುದಾಯವೇ ಜಗತ್ಕಾರಣವೆಂದೂ, ಪರಮಾಣುಗಳು ಕಾರ್ಯಗಳನ್ನು (ವಸ್ತುಗಳನ್ನು) ಉತ್ಪಾದನೆಮಾಡಿ ಅದೇ ಕ್ಷಣದಲ್ಲಿ ನಾಶಹೊಂದುತ್ತವೆಂದು ಮುಂತಾಗಿ ಈಗಿನ ವೈಜ್ಞಾನಿಕರ ಕಲ್ಪನೆ-ಗಳನ್ನೂ ಮೀರಿದ ಸೂಕ್ಷ್ಮತಮ ಕಲ್ಪನೆಗಳನ್ನು ಮಾಡಿದ ಪ್ರಾಚೀನರೂ ಇರುವರು. (ವೈಶೇಷಿಕರು, ವೈಭಾಷಿಕರು ಮತ್ತು ಸೌತ್ರಾಂತಿಕರು ಈ ಗುಂಪಿಗೆ ಸೇರಿದ ವಾದಿಗಳು). ಶೂನ್ಯವೇ ಜಗದಾಕಾರವಾಗಿ ಭ್ರಾಂತಿಯಿಂದ ತೋರುತ್ತ-ದೆಂಬ ವಾದವೂ, ಜ್ಞಾನಜ್ಞೇಯಗಳಿಗೆ ಭೇದವಿಲ್ಲದ ಪ್ರಯುಕ್ತ ಜ್ಞಾನವೇ (ವಿಜ್ಞಾನವೇ) ಜಗದಾಕಾರವಾಗಿ ತೋರುವುದೆಂಬ ವಾದವೂ ಪ್ರಾಚೀನ ವಾದಗಳಲ್ಲಿ ಪ್ರಾಮುಖ್ಯವಾದವುಗಳು. ಈ ಎಲ್ಲ ಮತಾಭಿಪ್ರಾಯಗಳೂ ಯುಕ್ತಿ ವಿರುದ್ಧವೆಂದೂ, ಪ್ರಮಾಣ ವಿರುದ್ಧವೆಂದೂ, ಶ್ರೀ ಬಾದರಾಯಣರು ಬ್ರಹ್ಮಸೂತ್ರದ ಎರಡನೆಯ ಅಧ್ಯಾಯದಲ್ಲಿ ನಿರಾಕರಿಸಿ, ನಿರ್ಣಯಗಳನ್ನು ನಿರೂಪಿಸಿರುತ್ತಾರೆ. ಜಡಪ್ರಕೃತಿಗೆ ಸ್ವತಂತ್ರ ಪ್ರವೃತ್ತಿಯೇ ಕೂಡುವುದಿಲ್ಲ-ವಾದುದರಿಂದ ನಿರೀಶ್ವರಸಾಂಖ್ಯರ ವಾದವು ಯುಕ್ತಿಯುಕ್ತವಾಗುವುದಿಲ್ಲ. ಸೃಷ್ಟಿಕರ್ತನೊಬ್ಬನಾದರೆ ಲಯಕರ್ತನು ಮತ್ತೊಬ್ಬನೂ ರಕ್ಷಕನು ಮಗ-ದೊಬ್ಬನೂ ಆಗುವುದಾದರೆ ಅಂತಹ ಸ್ವತಂತ್ರಾಧಿಕಾರಿಗಳ ಪರಸ್ಪರ ಸಂಕಲ್ಪಗಳು ವಿರೋಧದಿಂದ ಅವ್ಯವಸ್ಥೆಯು ಏರ್ಪಟ್ಟು ಕ್ರಮಬದ್ಧವಾದ ಸೃಷ್ಟ್ಯಾದಿಗಳು

ನಡೆಯಲು ಅವಕಾಶವೇ ಇಲ್ಲದಂತಾಗುತ್ತದೆ. ಪರಮಾಣುಗಳು ಜಗತ್ಕಾರಣ-ವೆಂಬ ವಾದಕ್ಕೂ ಈ ಮೊದಲಾದ ಯುಕ್ತಿವಿರೋಧಗಳು ಅನ್ವಯಿಸುತ್ತವೆ. ಶೂನ್ಯ ಮತ್ತು ವಿಜ್ಞಾನತತ್ವಗಳೇ ಜಗತ್ಕಾರಣಗಳೆಂದು ತಿಳಿಯುವ ಮತಗಳೂ ನಾನಾ ಪ್ರಕಾರವಾದ ಯುಕ್ತಿ ವಿರೋಧಗಳಿಗೆ ಎಡೆ ಕೊಡುವುದಲ್ಲದೆ ಆಗಮ ಪ್ರಮಾಣಗಳಿಗೂ ವಿರುದ್ಧವಾಗಿರುತ್ತವೆ. ಈ ಮತಗಳ ವಿರೋಧವನ್ನು ಪರಿಹರಿಸಿ, ವಿಷ್ಣುವೇ ಜಗತ್ಕರ್ತನೆಂಬ ಸಿದ್ಧಾಂತವನ್ನು ಸಾಧಿಸುವ ಪ್ರಕರಣ-ದಲ್ಲಿ, ಈ ಮುಂದೆ ಈ ಮತಗಳನ್ನು ಸ್ವಲ್ಪಮಟ್ಟಿಗೆ ವಿಸ್ತರಿಸಲಾಗುತ್ತದೆ.

ಪ್ರಳಯಕಾಲ ಮುಗಿದು ಸೃಷ್ಟಿಕಾಲವು ಪ್ರಾಪ್ತವಾದಾಗ ಸರ್ವವಸ್ತುಗಳ ಸೃಷ್ಟಿಯಾಗುತ್ತದೆ. ಹೀಗೆ ಎಲ್ಲವನ್ನೂ **ಸೃಷ್ಟಿಮಾಡುವವನು ಸ್ವತಂತ್ರ ಈಶ್ವರನೇ ಎಂದು ಆಗಮಗಳು ನಿರವಕಾಶ ವಾಕ್ಯಗಳಿಂದ ಘೋಷಿಸುತ್ತವೆ.** ಈಶ್ವರನ ಅಧೀನಳಾದ ಪ್ರಕೃತಿ, ಲಕ್ಷ್ಮೀ, ಬ್ರಹ್ಮಾದಿ ಸರ್ವಕ್ಕೂ ಸೃಷ್ಟಿಯುಂಟು. ಒಂದು ವಿವಕ್ಷೆ-ಯಿಂದ ಸೃಷ್ಟಿಕರ್ತನಾದ ಈಶ್ವರನು ತನ್ನನ್ನೂ ತಾನು ಸೃಷ್ಟಿಮಾಡಿಕೊಳ್ಳುತ್ತಾನೆ.

ಈ ರೂಪದ ಸರ್ವಸೃಷ್ಟಿ ಪ್ರಕಾರದ ವಿವರಗಳನ್ನು ಯಥಾರ್ಥವಾಗಿ ತಿಳಿಯುವುದರಿಂದ ಮಾತ್ರ ವೇದಾದಿ ಸಕಲ ಆಗಮಗಳ ಮಹಾತಾತ್ಪರ್ಯ-ವಾದ ನಾರಾಯಣನ ಸರ್ವೋತ್ತಮತ್ವವೆಂಬ ಮಹಾಪ್ರಮೇಯದ ಜ್ಞಾನ-ವಾಗುತ್ತದೆ. ಈ ದೃಷ್ಟಿಯಿಂದ ಜಗತ್ ಸೃಷ್ಟ್ಯಾದಿಗಳನ್ನು, ಈ ಹಿಂದೆ ನಿರೂಪಿಸಿದ ಸೂಕ್ಷ್ಮ, ಸ್ಥೂಲ ಸೃಷ್ಟಿಗಳೆಂಬುದರ ಜೊತೆಗೆ, ಪ್ರಕಾರಾಂತರ-ದಿಂದಲೂ ಆಗಮಗಳನ್ನು ನಿರೂಪಿಸುತ್ತವೆ. **ಶುದ್ಧಸೃಷ್ಟಿ, ಪರಾಧೀನ ವಿಶೇಷಾ-ವಾಪ್ತಿ ಸೃಷ್ಟಿ, ಮಿಶ್ರಸೃಷ್ಟಿ ಮತ್ತು ಕೇವಲ ಸೃಷ್ಟಿಗಳೆಂದು ಈ ನಿರೂಪಣೆಯು ನಾಲ್ಕು ಪ್ರಕಾರವಾದುದು.** ಪ್ರಳಯಕಾಲದಲ್ಲಿ ತನ್ನ ಅನಂತರೂಪಗಳನ್ನು ಮೂಲರೂಪದಲ್ಲಿ ಐಕ್ಯಗೊಳಿಸಿ ಪೂರ್ಣಾನಂದಸ್ವರೂಪನಾದ ನಾರಾಯಣನು ಒಬ್ಬನೇ ಲಕ್ಷ್ಮೀಸಮೇತನಾಗಿ ಪ್ರಳಯೋದಕದಲ್ಲಿ ಯೋಗನಿದ್ರೆಯಲ್ಲಿರುವನು. ಆ ಪ್ರಳಯಕಾಲದ ಅಷ್ಟಮಾಂಶವು ಉಳಿದಿರುವಾಗ, ಎಂದರೆ-ಪ್ರಳಯ ಕಾಲವನ್ನು ಒಂದು ರಾತ್ರೆ ಎಂದು ತಿಳಿದರೆ ಬೆಳಗಿನ ಜಾವದ ನಾಲ್ಕುವರೆ ಗಂಟೆ ಹೊತ್ತಿನಲ್ಲಿ - ದುರ್ಗಾರೂಪಳಾದ ವೇದಾಭಿಮಾನಿ ರಮಾದೇವಿಯಿಂದ

ಪ್ರಾರ್ಥಿತನಾಗಿ ಶ್ರೀಮನ್ನಾರಾಯಣನು, ಸೃಷ್ಟಿಪ್ರವರ್ತಕನಾಗಲು ಸಂಕಲ್ಪಿಸುತ್ತಾನೆ. ಸೃಷ್ಟಿ, ಸ್ಥಿತಿ, ಲಯಾದಿ ಅಷ್ಟಕರ್ತೃತ್ವವನ್ನು ನಿರ್ವಹಿಸಲು (ಮೂಲರೂಪದಿಂದಲೇ ಸಮರ್ಥನಾದರೂ) ಲೀಲೆಗಾಗಿ ಮೂಲರೂಪದಿಂದ ಅತ್ಯಂತ ಅಭಿನ್ನಗಳಾದ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧನೆಂಬ ರೂಪಗಳನ್ನು ಪ್ರಕಟಗೊಳಿಸುತ್ತಾನೆ. ಹೀಗೆ **ನಾರಾಯಣನು ವಿವಿಧ ರೂಪಗಳನ್ನು ಪ್ರಕಟಗೊಳಿಸುವುದು ಶುದ್ಧಸೃಷ್ಟಿ ಅಥವ ಈಶಸೃಷ್ಟಿ ಎಂದು ಕರೆಯಲ್ಪಡುತ್ತದೆ.** ಮೂಲನಾರಾಯಣನಿಂದ ವಾಸುದೇವಾದಿ ರೂಪಗಳು ಉಕ್ತಕ್ರಮದಲ್ಲಿ ಪ್ರಕಟವಾಗುತ್ತವೆ. ಈ ರೂಪಗಳನ್ನು ಸೇವಿಸಲು ಶ್ರೀ ಮಹಾಲಕ್ಷ್ಮಿಯು ಕ್ರಮದಿಂದ ಮಾಯಾ, ಜಯಾ, ಕೃತಿ ಮತ್ತು ಶಾಂತೀ ನಾಮಕ ರೂಪಗಳನ್ನು ಸ್ವೀಕರಿಸುತ್ತಾಳೆ. ಹಿಂದಿನ ಬ್ರಹ್ಮಕಲ್ಪದಲ್ಲಿ ಮೋಕ್ಷಕ್ಕಾಗಿ ಆಗಬೇಕಾದ ಸಾಧನೆಗಳನ್ನು ಮುಗಿಸಿ ಲಿಂಗಭಂಗವನ್ನು ಹೊಂದಿ ಚತುರ್ಮುಖನೊಂದಿಗೆ ಪ್ರಳಯಕಾಲದಲ್ಲಿ ಶ್ರೀಹರಿಯ ಉದರ ಪ್ರವೇಶಮಾಡಿ ಮುಕ್ತಲೋಕಗಳಿಗೆ ಹೊರಡಲು ಸಿದ್ಧರಾಗಿರುವ ಜೀವರಿಗೆ ವೈಕುಂಠಾದಿ ಯೋಗ್ಯಸ್ಥಾನಗಳನ್ನು ಹೊಂದಿಸುವುದು, ಈ ವಾಸುದೇವ ರೂಪ[12] ಸಂಕರ್ಷಣ ರೂಪವು ಪ್ರಳಯಕಾರಕವಾದುದು ಚೇತನಾತ್ಮಕ ಸಕಲ ಜಗತ್ತನ್ನು ಲಯಗೊಳಿಸಿ ಸೂಕ್ಷ್ಮರೂಪವನ್ನು ಹೊಂದಿಸುವುದು. ಲಯಕಾರಕ ಶಕ್ತಿಯನ್ನು ಮೃತ್ಯು - ಎನ್ನುವರು. ಪರಮ ಮುಖ್ಯಾರ್ಥದಲ್ಲಿ ಸಂಕರ್ಷಣನೇ ಸರ್ವಮೃತ್ಯುವು. **ಮೃತ್ಯುವನ್ನು ಸಿದ್ಧಗೊಳಿಸಿಯೇ ನಂತರ ಸೃಷ್ಟಿಯು. ಇದರಿಂದಲೇ ಜಗತ್ತಿನಲ್ಲಿ ಸಕಲಪ್ರಾಣಿಗಳು ಬೆನ್ನಹಿಂದೆ ಮೃತ್ಯುವುಳ್ಳವರಾಗಿಯೇ ಹುಟ್ಟುತ್ತಾರೆ.** ಪ್ರಳಯಕಾಲದಲ್ಲಿ ಲೋಕಗಳನ್ನು ದಹಿಸುವ ರುದ್ರದೇವನ ಮೂರನೆಯ ಕಣ್ಣಿನಲ್ಲಿಯೂ, ಶೇಷದೇವನ ಮುಖಾಗ್ನಿಯಲ್ಲಿಯೂ ಇದ್ದು ಜಗತ್ತನ್ನು ಸುಡುವಾತನು ಈ ಸಂಕರ್ಷಣ ರೂಪೀ ನೃಸಿಂಹನೇ. ಪ್ರಳಯಾಗ್ನಿಯಿಂದ ಪಾಕಗೊಳಿಸಲ್ಪಟ್ಟ (ರಮಾದೇವಿಯಿಂದ ಸಿದ್ಧಗೊಳಿಸಲ್ಪಟ್ಟ) ವಿಶ್ವವನ್ನು ಭಕ್ಷಿಸುವವನೂ ಈತನೇ.

---

12. ತಾಮಸಜೀವರಿಗೆ ನಿತ್ಯದುಃಖರೂಪದ ತಮಸ್ಸನ್ನು ಹೊಂದಿಸುವವನು ವಾಸುದೇವನೇ. ಆದರೆ ನಿತ್ಯಾನಂದಸ್ಥಿತಿರೂಪದ ವೈಕುಂಠಾದಿಸ್ಥಾನವನ್ನು ಲಿಂಗದೇಹವನ್ನು ಭಂಗಗೊಳಿಸಿ (ವಿರಜಾಸ್ನಾನದಿಂದ ಅಲ್ಲ) ತಮಸ್ಸಿನಲ್ಲಿ ಹಾಕಿಸುತ್ತಾನೆ. ಈ ಸಂಬಂಧದ ವಿವರಗಳನ್ನು ಮುಂದಿನ ರತ್ನಗಳಲ್ಲಿ ಕಾಣುತ್ತೀರಿ.

ಪ್ರದ್ಯುಮ್ನನು[13] ಸೃಷ್ಟಿಕರ್ತನು. ಸಕಲ ಪ್ರಾಣಿದೇಹಗಳಲ್ಲಿದ್ದು, ಗರ್ಭಾಧಾನ ಮಾಡುವ ಪುರುಷಪ್ರಾಣಿಗಳಲ್ಲಿ ಕಾಮವನ್ನು ಉದ್ದೀಪನಗೊಳಿಸಿ ರೇತೋ-ತ್ಸರ್ಜನದ್ವಾರಾ ಗರ್ಭಸ್ಥಾಪಕನಾದ ಸರ್ವಜಗತ್ಪಿತನು, ಈ ಪ್ರದ್ಯುಮ್ನನೇ. ಈ ಕಲ್ಪದಲ್ಲಿ ಸೃಷ್ಟಿಗೆ ಬರತಕ್ಕ ಜೀವರನ್ನು ಅನಿರುದ್ಧನಲ್ಲಿಟ್ಟು ಅನಿರುದ್ಧನಿಂದ ದತ್ತವಾದ ಸೂಕ್ಷ್ಮದೇಹವುಳ್ಳ ಜೀವರನ್ನು ತನ್ನಲ್ಲಿಟ್ಟುಕೊಂಡು ಮಾತಾ-ಪಿತೃ-ಗಳ ದ್ವಾರಾ ಸ್ಥೂಲದೇಹದಿಂದ ಹುಟ್ಟಿಸಿ ಸ್ವಯೋಗ್ಯ ಸಾಧನೆಗಳಲ್ಲಿ ತೊಡಗಿಸು-ವಾತನು ಈ ಪ್ರದ್ಯುಮ್ನನು. ಸರ್ವ ವಿಧದಿಂದ ಸರ್ವರ ರಕ್ಷಕನಾಗಿರುವವನು ಅನಿರುದ್ಧನು.[14]

ತ್ರಿಗುಣಾತ್ಮಕವಾದ ಮೂಲ ಪ್ರಕೃತಿಯ ಅಭಿಮಾನಿಯು ಶ್ರೀರಮಾ-ದೇವಿಯು. ಪ್ರಕೃತಿ ವಿಕಾರಗಳಾದ ಮಹದಾದಿ ತತ್ತ್ವಗಳಿಗೆ ಬ್ರಹ್ಮಾದಿ ದೇವತೆಗಳು ಅಭಿಮಾನಿಗಳು. ಪ್ರಳಯಕಾಲದಲ್ಲಿ ಲಕ್ಷ್ಮೀಬ್ರಹ್ಮಾದಿಗಳು ಯಾರೂ ಪ್ರಕೃತ್ಯಾದಿ ತತ್ತ್ವಗಳ ಮೇಲೆ ತಮ್ಮ ಸ್ವಾಮಿತ್ವವನ್ನು (ಶ್ರೀ ಹರ್ಯಧೀನ ಸ್ವಾಮಿತ್ವವನ್ನು) ಉಪಯೋಗಿಸುವುದಿಲ್ಲ- ಚೇತನಾ- ಚೇತನಾತ್ಮಕ ಜಗತ್ತೆಲ್ಲವೂ ಚೇಷ್ಟಾರಹಿತವಾಗಿರುತ್ತವೆ. ಮುಕ್ತಜೀವರು ಧ್ಯಾನದಲ್ಲಿದ್ದರೆ, ಅನ್ಯರು ನಿದ್ರಾ-ವಸ್ಥೆಯಲ್ಲಿರುತ್ತಾರೆ. ಜಡವಿಶ್ವವು ಮೂಲ- ಪ್ರಕೃತಿಯಲ್ಲಿ ಲಯಹೊಂದಿರುತ್ತದೆ. ಸೃಷ್ಟ್ಯಾರಂಭದಲ್ಲಿ ನಾರಾಯಣನ ಆಜ್ಞೆಯಿಂದ ಶ್ರೀ ಮಹಾಲಕ್ಷ್ಮೀದೇವಿಯು, ಪ್ರಕೃತಿಯ ಮೇಲಿನ ತನ್ನ ಸ್ವಾಮಿತ್ವವನ್ನು ಪ್ರಯೋಗಿಸಿ ಅದರಿಂದ ಸೃಷ್ಟಿ-ಕಾರ್ಯಗಳನ್ನು ಮಾಡಿಸುವುದೆಂಬ, ವಿಶೇಷ ಸ್ಥಿತಿಯನ್ನು ಹೊಂದಿಸಲ್ಪಡುತ್ತಾಳೆ.

---

13. ಈಶ್ವರನು ತನ್ನಲ್ಲಿ ಸರ್ವವನ್ನೂ ಧರಿಸುವ—ಎಲ್ಲರೊಳಗೂ ತಾನಿರುವ ಮೊದಲಾದ ಅಚಿಂತ್ಯ ಸಾಮರ್ಥ್ಯವುಳ್ಳವನು. ಅಣುಪ್ರದೇಶದಲ್ಲಿ ವಿಶ್ವವನ್ನು ಸ್ಥಾಪಿಸಬಲ್ಲನು. ಮನಸ್ಸಿನ ವಿವಿಧ ವೃತ್ತಿಗಳಿಗೆ ನಿಯಾಮಕರಾದ ರುದ್ರಾದಿಗಳ ಅಂತರ್ಯಾಮಿಯಾಗಿ ಸ್ವತಂತ್ರ ನಿಯಾಮಕನಾಗಿರುವವನೂ ಈ ಸಂಕರ್ಷಣನೇ.

14. ನಾರಾಯಣಾದಿ ಈ ಪಂಚರೂಪಗಳಿಂದ ಸಕಲ ಜಗತ್ತನ್ನು ನಿಯಮನು ಮಾಡುವ ಪ್ರಕಾರ ಮತ್ತು ಅವುಗಳ ಕ್ರಿಯಾ ವಿಶೇಷಗಳನ್ನು ಆಳವಾದ ಶಾಸ್ತ್ರಾಭ್ಯಾಸದಿಂದಲೇ ತಿಳಿಯಬೇಕು. ಈ ಪ್ರಮೇಯಗಳ ವಿವರಣೆಯು ಕನ್ನಡದಲ್ಲಿ, ಶ್ರೀ ಜಗನ್ನಾಥ ದಾಸವರ್ಯರ 'ಶ್ರೀಹರಿಕಥಾಮೃತಸಾರ'ವೆಂಬ ಗ್ರಂಥದ ಮಾತೃಕಾ ಸಂಧಿ, ವರ್ಣಪ್ರಕ್ರಿಯೆ ಸಂಧಿ ಮೊದಲಾದ ಭಾಗಗಳಲ್ಲಿ, ದೊರೆಯುತ್ತದೆ.

ಹೀಗೆಯೇ, ಸೃಷ್ಟರಾದ ಮಹದಾದಿ ತತ್ತ್ವದ ಅಭಿಮಾನಿಗಳೂ ಸಹ ತಮ್ಮ ತಮ್ಮ ತತ್ತ್ವಗಳ ಮೇಲಿನ (ಪ್ರಳಯ ಕಾಲದಲ್ಲಿಲ್ಲದ) ಸ್ವಾಮಿತ್ವಾದಿ ವಿಶೇಷವನ್ನು ಹೊಂದುತ್ತಾರೆ.[15] ಹೀಗೆ ಲಕ್ಷ್ಮ್ಯಾದಿಗಳಿಗೆ ಪ್ರಕೃತಿ ಸ್ವಾಮಿತ್ವಾದಿ ವಿಶೇಷಗಳನ್ನು ಹೊಂದಿಸುವುದು ಸಹ ಒಂದು ಬಗೆಯ ಸೃಷ್ಟಿ.

**ಮಿಶ್ರಸೃಷ್ಟಿ ಎಂದು ಕರೆಯಲಾಗುವ ಜೀವಸೃಷ್ಟಿಯು, ಸೃಷ್ಟಿಕರ್ತನ ಸರ್ವಜ್ಞತ್ವ, ಪೂರ್ಣೈಶ್ವರ್ಯಾದಿ ಮಹಿಮೆಗಳನ್ನು ಅಧಿಕವಾಗಿ ಪ್ರಕಾಶಿಸುತ್ತದೆ.** ಜೀವರು ಅಸಂಖ್ಯಾಕರು ಮತ್ತು ಸ್ವರೂಪದಿಂದ ನಿತ್ಯರು. ಅನಾದಿ ನಿತ್ಯವಾದ ಜೀವ ಸ್ವರೂಪಕ್ಕೆ ಸೃಷ್ಟಿ ಎಂಬುದಿಲ್ಲ. ಜೀವಸ್ವರೂಪವು ಅನಾದಿ ಕಾಲದಿಂದ ೧೬ ಕಲೆಗಳಿಂದ ನಿರ್ಮಿತವಾದ (ಪಂಚಭೂತಗಳು, ದಶೇಂದ್ರಿಯಗಳು ಮತ್ತು ಮನಸ್ಸುಗಳೆಂಬ ತತ್ತ್ವಗಳ ಸೂಕ್ಷ್ಮಾಂಶಗಳಿಂದ ನಿರ್ಮಿತವಾದ) ಲಿಂಗದೇಹ-ವೆಂದು ಕರೆಯಲ್ಪಡುವ ಪ್ರಾಕೃತ ಆವರಣದಿಂದ ಆಚ್ಛಾದಿತವಾಗಿದೆ. ಈ ಆವರಣರೂಪದ ಬಂಧವನ್ನು ತೊರೆದು ಸ್ವಸ್ವರೂಪದ ಆವಿರ್ಭಾವದ ನಿತ್ಯಸ್ಥಿತಿಯನ್ನು ಹೊಂದಲು ಆಗಬೇಕಾದ ಸಾಧನೆಗಳಿಗೆ ಅವಶ್ಯಕವಾದ ಸ್ಥೂಲ ಪ್ರಾಕೃತದೇಹಗಳ ಸಂಬಂಧವನ್ನು ಜೀವರಿಗೆ ಉಂಟು ಮಾಡುವುದೇ ಸೃಷ್ಟಿಯು. ಬಹು ಭಿನ್ನ ಯೋಗ್ಯತೆಯ ಸ್ವರೂಪಗಳುಳ್ಳ ಮತ್ತು ಬಹು ಪ್ರಕಾರದ ಬಂಧಕ ಆವರಣಗಳುಳ್ಳ ಅಸಂಖ್ಯಾತ ಜೀವರಿಗೆ ಸೃಷ್ಟಿಕಾಲದಲ್ಲಿ ಮತ್ತು ಮುಂದೆ ಸ್ಥಿತಿಕಾಲದಲ್ಲಿ (ಕಾಲಕಾಲಕ್ಕೆ) ಅವರವರ ಗತಿ ಸಾಧಕವಾಗುವ ಇಂದ್ರಿಯಾದಿ ಸಾಮಗ್ರಿಗಳಿಂದ ಯುಕ್ತವಾದ ದೇಹಗಳನ್ನಿತ್ತು ಜಗತ್ ಸೃಷ್ಟಿಯ ಮುಖ್ಯ ಪ್ರಯೋಜನವನ್ನು ಸಾಧಿಸುವುದು, ಅನಂತ ಜೀವರಾಶಿಗಳನ್ನೂ, ಅವರವರ ತರತಮ ಭಾವಗಳನ್ನೂ ತ್ರಿಕಾಲಗಳಲ್ಲಿ ಅವರಿಗೆ ದೊರೆಯಬೇಕಾದ ಸ್ಥಿತಿ ವಿಶೇಷಗಳನ್ನೂ ಬಲ್ಲ ಸರ್ವಜ್ಞನೂ, ತನ್ನ ಇಚ್ಛಾನುಸಾರವಾದ ನಾನಾ ಸಾಧನದೇಹಗಳನ್ನು ಸೃಷ್ಟಿ ಮಾಡುವ ಅಚಿಂತ್ಯಾದ್ಭುತ ಶಕ್ತಿಯುಳ್ಳ ಸ್ವತಂತ್ರ-ಪ್ರಭುವೂ ಆದವನಿಗೆ ಮಾತ್ರ ಸಾಧ್ಯವೆಂದು ಯುಕ್ತಿಯಿಂದ ಸಹ ಸುಲಭವಾಗಿ

---

15. ಪರಾಧೀನ ವಿಶೇಷಾವಾಪ್ತಿ ರೂಪಾಸೃಷ್ಟಿಸ್ತು ಲಕ್ಷ್ಮ್ಯಾದೀನಾಂ ಭಗವದಾಜ್ಞಯಾ ಪ್ರಕೃತಿಸ್ವಾಮಿತ್ವಾದಿ ವಿಶೇಷಾವಾಪ್ತಿಃ (ಭಾವಪ್ರಕಾಶಿಕಾ.)

ಗ್ರಹಿಸಬಹುದು. ಅಲ್ಪಜೀವರಿಂದ ಆರಂಭಿಸಿ ಚತುರ್ಮುಖ ಪರ್ಯಂತರಾದ ಎಲ್ಲ ಜೀವರೂ ಅಣುಸ್ವರೂಪರು. ಜ್ಞಾನಾದಿಗುಣಗಳಿಂದ ಅಲ್ಪರು. ನಿತ್ಯ ಸ್ವರೂಪ ಉಳ್ಳವರಾದುದರಿಂದ ಕಾಲತಃ ವ್ಯಾಪ್ತಿಯುಳ್ಳವರು ಎಂದರೆ ತ್ರಿಕಾಲ-ಗಳಲ್ಲಿಯೂ ಇರತಕ್ಕವರು. ಅಣುಗಳಾದುದರಿಂದ ದೇಶತಃ ವ್ಯಾಪ್ತಿ-ಯುಳ್ಳವರಲ್ಲ. ಹೀಗಿರುವ ಜೀವರು ಈಶ್ವರನಿಂದಲೇ ನಾನಾ ದೇಹಗಳನ್ನು ಹೊಂದುತ್ತಾ ಸ್ವಯೋಗ್ಯತೆಯ ಪೂರ್ಣಾವಿರ್ಭಾವವನ್ನು ಹೊಂದಲು ಅವಶ್ಯಕವಾದಷ್ಟು ಕಲ್ಪ[16]ಗಳವರೆಗೆ ಸೃಷ್ಟಿಯಲ್ಲಿ ಸುತ್ತುತ್ತಿರುವರು. ಕೆಲವು ವಿಶಿಷ್ಟಯೋಗ್ಯತೆಯ ಜೀವರು ಸೃಷ್ಟವಾದ ಜಗತ್ತಿನ ನಿಯಮನಾದಿ ಕಾರ್ಯದಲ್ಲಿ ಈಶ್ವರನಿಂದ ನಿಯೋಜಿಸಲ್ಪಡುತ್ತಾರೆ; ಅದೂ ಅವರ ಸಾಧನ ಪರಿಪೂರ್ತಿಗಾಗಿಯೇ. ಆಗ ಅಣುಸ್ವರೂಪರಾದ ಇವರು, ಈಶ್ವರಾಚಿಂತ್ಯ ಶಕ್ತಿಯಿಂದ, ಅಸಂಖ್ಯಾತವಾದ ಅಂಶಗಳಿಂದ ಇತರ ಅಧಿಷ್ಠಾನಗಳಲ್ಲಿ ನೆಲೆಸಿ ಭಗವದಾಜ್ಞಾನುಸಾರವಾದ ಕಾರ್ಯಗಳನ್ನು ನಿರ್ವಹಿಸಲು ಶಕ್ತರಾಗುತ್ತಾರೆ. ಸನ್ಮಾರ್ಗಪ್ರೇರಕರಾದ ಇವರು ತತ್ತ್ವಾಭಿಮಾನಿ ದೇವತೆಗಳೆಂದೂ, ದುಷ್ಕರ್ಮ-ಪ್ರೇರಕರಾದ ವಿಶಿಷ್ಟ ಜೀವರು ದೈತ್ಯಾಭಿಮಾನಿಗಳೆಂದೂ ಆಗಮಗಳಲ್ಲಿ ಪ್ರಸಿದ್ಧರಾಗಿರುವರು. ಈಶ್ವರಾಜ್ಞೆಯಿಂದ ಉಭಯಾತ್ಮಕ ಕರ್ಮಪ್ರೇರಕರಾದ ಈ ಜೀವರು (ದೇವತೆಗಳು ಮತ್ತು ದೈತ್ಯರು) ಆ ಕರ್ಮಗಳ ಫಲಾಂಶವನ್ನು ಹೊಂದಿಸಲ್ಪಡುವರು. ದೇಹಗತ ಜೀವನಾದರೋ ಸ್ವಯೋಗ್ಯತಾನುಗುಣವಾದ ಅಲ್ಪಫಲಕ್ಕೆ ಮಾತ್ರ ಭಾಗಿಯಾಗುವನು. ತತ್ತ್ವಾಭಿಮಾನಿ ದೇವತೆಗಳೇ ಪುಣ್ಯಪಾಪಗಳೆರಡಕ್ಕೂ ಪ್ರೇರಕರಾದರೂ ಪಾಪಕರ್ಮಗಳಲ್ಲಿ ದೈತ್ಯದ್ವಾರಾ ಜೀವನನ್ನು ಪ್ರೇರಿಸುವುದರಿಂದ ಪಾಪಕರ್ಮಗಳ ಫಲಗಳಿಗೆ ಅವರು ಭಾಗಿಗಳಲ್ಲ.[17] ಕಿಂತು ದ್ವೇಷಾದಿ ಭಾವಯುಕ್ತರಾಗಿ ಜೀವನನ್ನು ಪಾಪ

16. ಕಲ್ಪ ಚತುರ್ಮುಖನ ಆಯುಷ್ಯದ 100 ವರ್ಷಗಳ ಕಾಲ ಒಬ್ಬ ಬ್ರಹ್ಮನ ಕಾಲ.

17. ವಾಸುದೇವಾಜ್ಞಯಾ ಚೈವ ಪೂರ್ವಕರ್ಮಾನುಸಾರತಃ ।
ಪ್ರೇರಯಂತಿ ಹಿ ತೇ ಜೀವಾನ್ ಪುಣ್ಯಪಾಪೇಷು ನಿತ್ಯಶಃ ।
ಅರಾಗದ್ವೇಷತಶ್ಚೈವ ಕಥಂ ದೋಷಾನವಾಪ್ನುಯುಃ ।
ಹರಿಪೂಜೇತಿ ಚೋದ್ದೇಶಾತ್ ಕಥಂ ನ ಶುಭಮಾಪ್ನುಯುಃ ॥ (ಅನುವ್ಯಾಖ್ಯಾನ)

ಕರ್ಮಗಳಲ್ಲಿ ಪ್ರೇರಿಸುವ ದೈತ್ಯಾಭಿಮಾನಿಗಳೇ ಅವುಗಳ ಫಲಕ್ಕೆ ಮುಖ್ಯ ಭಾಗಿಗಳಾಗಿರುತ್ತಾರೆ. ಹೀಗೆಂಬ ಈ ಹಿಂದೆ ವಿವರಿಸಿರುವ ಪ್ರಮೇಯವನ್ನು ಓದುಗರು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಈ ತತ್ತ್ವಾಭಿಮಾನಿಗಳು ಉಭಯರೂ ಅನ್ಯ ಪ್ರಾಣಿದೇಹಗಳಲ್ಲಿದ್ದು ತಮ್ಮ ಪ್ರೇರಕ ವ್ಯಾಪಾರದಿಂದ ಪಡೆಯುವ ಪುಣ್ಯಪಾಪಗಳಲ್ಲದೇ,[18] ಅವರು ತಮ್ಮ ಸಾಧನಪರಿಪೂರ್ತಿಗಾಗಿ ಪ್ರತ್ಯೇಕ ದೇಹಗಳನ್ನೂ ಹೊಂದಿ ದುಡಿಯುತ್ತಾರೆ ಅಂಶಗಳಿಂದ ಅವತರಿಸಿ ನಾನಾ ಕಾರ್ಯಗಳನ್ನೂ ಸಾಧಿಸುತ್ತಾರೆ.[19] ಈ ಎಲ್ಲ ವಿಧದ ಶಕ್ತಿ ವಿಶೇಷಗಳನ್ನು ಒದಗಿಸುವ ಈಶ್ವರನ ಅಚಿಂತ್ಯ ವ್ಯಾಪಾರವನ್ನೂ, ಸರ್ವಜ್ಞತ್ವ ಪ್ರಭುತ್ವಗಳನ್ನೂ ಮಾನವನು ಬುದ್ಧ್ಯಾ ಗ್ರಹಿಸುವುದು ದುಸ್ಸಾಧ್ಯವೇ ಸರಿ. ಈ ಪರಿಯ ಕಾರ್ಯಗಳನ್ನು ಲೀಲೆಯಿಂದ ನಿರ್ವಹಿಸುವ ಈಶ್ವರನನ್ನು ಆಶ್ಚರ್ಯನೆಂದು ಮಾತ್ರ ಗ್ರಹಿಸಬಹುದು. ಆತನನ್ನು ಜ್ಞಾನಿಗಳು ಆಶ್ಚರ್ಯನೆಂದೇ ಕಾಣುವರು; ಕಂಡವರು ಆಶ್ಚರ್ಯನೆಂದೇ ಹೇಳುವರು; ಕೇಳಿದವರು ಇತರರಿಗೆ ಆಶ್ಚರ್ಯನೆಂದೇ ಪುನಃ ವಿವರಿಸುವರು. ಇಷ್ಟಲ್ಲದೆ ಈಶ್ವರನನ್ನು ಪೂರ್ಣವಾಗಿ ತಿಳಿದವರೂ, ತಿಳಿಯುವ ಶಕ್ತಿಯುಳ್ಳವರೂ, ಯಾರೂ ಇಲ್ಲ. ಅರ್ಧಾಂಗಿಯಾಗಿ ಆತನೊಂದಿಗೆ ನಿತ್ಯವಿರುವ ಶ್ರೀ ಮಹಾಲಕ್ಷ್ಮಿಯೇ ಪೂರ್ಣವಾಗಿ ತಿಳಿಯಳು.

ಚಕ್ಷುರಾದಿ ಇಂದ್ರಿಯಪ್ರತ್ಯಕ್ಷ ಸಿದ್ಧವಾದ ಜಡಜಗತ್ತು ಅಸಂಖ್ಯ ವಿವಿಧ ವಸ್ತುಗಳಿಂದ ಪೂರ್ಣವಾದುದು. ಚಂದ್ರಸೂರ್ಯಾದಿ ಗ್ರಹಗಳು, ನಕ್ಷತ್ರಗಳು

---

– ಅವರವರ ಪೂರ್ವಕರ್ಮಾನುಸಾರವಾಗಿ ಜೀವರನ್ನು ಪುಣ್ಯಪಾಪಗಳಲ್ಲಿ ಭಗವದಾಜ್ಞೆಯಿಂದಲೇ ಪ್ರೇರಿಸುವವರಾದ್ದರಿಂದಲೂ ಮತ್ತು ರಾಗದ್ವೇಷರಹಿತ-ರಾದ್ದರಿಂದಲೂ ಆ ತತ್ತ್ವಾಭಿಮಾನಿ ದೇವತೆಗಳು ದೋಷಭಾಗಿಗಳು ಹೇಗಾದರು? ಶ್ರೀಹರಿ ಪೂಜೆಯೆಂಬ ಉದ್ದೇಶದಿಂದಲೇ ಪ್ರೇರಣೆ ಮಾಡುವುದರಿಂದ ಶುಭ (ಪುಣ್ಯ)ವನ್ನು ಹೇಗೆ ಹೊಂದದೇ ಇರುವನು? – ಪಾಪ ಲೇಪವಿಲ್ಲದೇ ಪುಣ್ಯವನ್ನು ಹೊಂದುವರೆಂದರ್ಥ.

18. ಈ ಪುಣ್ಯ ಪಾಪಗಳು ಐಹಿಕ ಫಲ ಪ್ರಾಪ್ತಗಳಲ್ಲ. ಕಿಂತು ಮೋಕ್ಷ ಮತ್ತು ಅಂಧ ತಮಸ್ಸುಗಳಿಗೆ ಸಾಧಕವಾದ ಭಕ್ತಿ-ದ್ವೇಷಗಳನ್ನು ವೃದ್ಧಿಗೊಳಿಸುತ್ತವೆ.

19. **ತತ್ತ್ವಾಭಿಮಾನಿ ದೇವತೆಗಳೆಲ್ಲರೂ ಅನಾದಿಕಾಲದಿಂದ ಅಪರೋಕ್ಷಿಗಳು.** ಮುಕ್ತಿಯಲ್ಲಿ ಅವರಿಗೆ ದೊರೆಯಲಿರುವ ಆನಂದಾತಿಶಯಕ್ಕೆ ಆಗಬೇಕಾದ ಸಾಧನೆಯು ಇಲ್ಲಿ ಪ್ರಸಕ್ತವಾದುದು.

ಮತ್ತು ಭೂಮಿಯ ಮೇಲಿರುವ ಪರ್ವತ, ವೃಕ್ಷ, ನದಿ, ಸಮುದ್ರಾದಿಗಳು ಇವೆಲ್ಲವು ಹೇಗೆ ಸೃಷ್ಟವಾದವು ಎಂಬ ಪ್ರಶ್ನೆಯು ವೈಜ್ಞಾನಿಕರಿಂದ ನಿರ್ಣಯಿಸ-ಲಾಗಿಲ್ಲ - ವಿವಿಧ ಊಹಾಪೋಹಗಳಲ್ಲಿಯೇ ಪರ್ಯವಸಾನವಾಗುತ್ತಿದೆ. ನಿರ್ಣಯಾತ್ಮಕವಾದ ಸದುತ್ತರಗಳ ಬಗ್ಗೆ ವೇದಾದಿ ಆಗಮಗಳನ್ನು ಶರಣು ಹೊಂದದೆ ಅನ್ಯ ಮಾರ್ಗವಿಲ್ಲ. ಈ ಜಡ ಜಗತ್ತಿನ ಸೃಷ್ಟಿಯನ್ನು ಕೇವಲ ಸೃಷ್ಟಿ ಎಂಬ ವಿಭಾಗದಲ್ಲಿ ಆಗಮಗಳು ಪರಿಷ್ಕರಿಸಿ ನಿರೂಪಿಸುತ್ತವೆ. ತಾಮಸಾಹಂಕಾರ ತತ್ತ್ವದಿಂದ ಪೃಥಿವ್ಯಾದಿ ಪಂಚಭೂತಗಳು ಹುಟ್ಟುವುವೆಂದೂ, ಅವುಗಳ ಪರಸ್ಪರ ಸಂಯೋಗ ವಿನಿಮಯಗಳಿಂದ ಅಶೇಷ ವಸ್ತುಗಳು ನಿರ್ಮಾಣವಾಗುವುದೆಂದೂ ಹೇಳುತ್ತವೆ. ಪ್ರಳಯ ಕಾಲದಲ್ಲಿ ಈ ಎಲ್ಲ ವಸ್ತುಗಳೂ ಪಂಚ ಭೂತಗಳಲ್ಲಿ ಲೀನಗೊಂಡು ಪಂಚ ಭೂತಗಳು ತಮ್ಮ ಉತ್ಪತ್ತಿಗೆ ಕಾರಣವಾದ ತಾಮಸಾಹಂಕಾರದಲ್ಲಿ ಲಯ ಹೊಂದುತ್ತವೆ. ಅದು ಮಹತ್ತತ್ತ್ವದಲ್ಲಿಯೂ, ಆ ಮಹತ್ತತ್ತ್ವವು ಪ್ರಕೃತಿಯಲ್ಲಿಯೂ ಲಯ-ಹೊಂದುತ್ತದೆ. ಸೃಷ್ಟಿಕಾಲದಲ್ಲಿ ಕಾರಣ ತತ್ತ್ವಗಳಿಂದ ಕಾರ್ಯಗಳ ಉತ್ಪತ್ತಿಯೂ ಪ್ರಳಯಕಾಲದಲ್ಲಿ ಕಾರಣಗಳಲ್ಲಿ ಕಾರ್ಯಗಳ ಲಯವೂ ಸಂಭವಿಸುವುದೆಂದು ಆಗಮಗಳ ನಿರ್ಣಯ.

ಪೃಥಿವ್ಯಾದಿ ಪಂಚಭೂತಗಳನ್ನೇ ಮೂಲತತ್ತ್ವಗಳನ್ನಾಗಿ ಭಾವಿಸುವುವೆಂಬ ಭಾರತೀಯ ಆಗಮಗಳು ವೈಜ್ಞಾನಿಕ ದೃಷ್ಟಿಯಿಂದ ಅಜ್ಞಾನಾವಸ್ಥೆಯಲ್ಲಿ ಆದ ಕಲ್ಪನೆಗಳು ಮಾತ್ರ. ಪಂಚಭೂತಗಳು ಮೂಲತತ್ತ್ವಗಳೇ ಅಲ್ಲವೆಂದೂ ಪರಮಾಣುಗಳನ್ನು ಸಹ ವಸ್ತುಮೂಲವೆಂದು ತಿಳಿಯದಿದ್ದ ಅಜ್ಞಾನಾವಸ್ಥೆ-ಯನ್ನು ಸೂಚಿಸುತ್ತವೆಂದೂ ಆಧುನಿಕ ವಿದ್ಯಾಪರಿಣತರು ಭಾವಿಸುತ್ತಾರೆ. ಆದರೆ ಹೀಗೆ ತಿಳಿಯುವುದು ಅವರುಗಳ ಆಗಮಜ್ಞಾನ ಶೂನ್ಯತೆಯನ್ನು ಸ್ಪಷ್ಟಪಡಿಸುತ್ತದೆ. ಜಗನ್ಮೂಲವಾದ ಜಡ ಪ್ರಕೃತಿಯಲ್ಲಿ (ಅವ್ಯಕ್ತತತ್ತ್ವದಲ್ಲಿ ಪಂಚಭೂತಗಳೇ ಮೊದಲಾದ ಎಲ್ಲ ತತ್ತ್ವಗಳು ಅತ್ಯಂತ ಸೂಕ್ಷ್ಮರೂಪದಿಂದ ಇರುವುವೆಂದೂ,[20] ಪದಾರ್ಥಗಳ ಪರಮಾಣುಗಳೂ ಸಹ ಮಾನವ ಕಲ್ಪನೆಗೆ

20. ಅವ್ಯಕ್ತ ತತ್ತ್ವಗತವಾದ ಪೃಥಿವ್ಯಾದಿ ತತ್ತ್ವಗಳು ಸೃಷ್ಟಿಕಾಲದಲ್ಲಿ ಸ್ಥೂಲ ಭಾವವನ್ನು ಹೊಂದಿಸಲ್ಪಟ್ಟನಂತರವೇ ಸ್ವಸ್ವಭಾವ ಧರ್ಮಗಳನ್ನು ಪ್ರಕಟಿಸುತ್ತವೆ.

ನಿಲುಕದಷ್ಟು ಅಂಶಗಳುಳ್ಳವೆಂದೂ ನಿರೂಪಿಸುವ ಆಗಮಗಳ ಮೇಲೆ ಈ ವಿಧದ ಆಪಾದನೆಯು ಸರ್ವಥಾ ನಿಲ್ಲತಕ್ಕದಲ್ಲ. ಈ ಹಿಂದೆ ವಿವರಿಸಿದ ಮಿಶ್ರಸೃಷ್ಟಿಯಂತೆ ಕೇವಲಸೃಷ್ಟಿಯು ಸಹ ಈಶ್ವರಾಚಿಂತ್ಯ ಶಕ್ತಿಯನ್ನೂ ಮತ್ತು ಸರ್ವಜ್ಞತ್ವಾದಿ ಮಹಿಮೆಗಳನ್ನು ಸಾಧಿಸುತ್ತದೆ. ಈ ಕೇವಲ ಸೃಷ್ಟಿಯನ್ನೇ ಜಡಸೃಷ್ಟಿಯೆಂದು ಕರೆಯುವುದುಂಟು.

ಹೀಗೆ ವಾಸುದೇವಾದಿ ನಾಲ್ಕು ರೂಪಗಳಿಂದ ಜಗತ್ತಿನ ಸೃಷ್ಟಾದಿ ಅಷ್ಟ ಕರ್ತೃತ್ವವನ್ನು ಲೀಲೆಯಿಂದ ನಿರ್ವಹಿಸುವ ಈಶ್ವರನು ಅನಂತ ಸುರೂಪಿಯೂ ಆಗಿದ್ದಾನೆ. ಲಕ್ಷ್ಮೀಸಮೇತವಾದ ಅನಂತ ರೂಪಗಳಿಂದ ವಿಶ್ವದಲ್ಲಿ ಸರ್ವತ್ರ ವ್ಯಾಪಿಸಿ ಸ್ಥಿತಿಕಾಲದಲ್ಲಿ ವಿಶ್ವಧಾರಕನೂ ಪೋಷಕನೂ ಆಗಿದ್ದಾನೆ. ಹೀಗಿರುವ ಅದ್ಭುತವಾದ ವಿಶ್ವಸೃಷ್ಟಿಗೆ ಅವ್ಯಕ್ತ ತತ್ತ್ವವು (ಪ್ರಕೃತಿ ಮತ್ತು ಮಹದಾದಿ ಪ್ರಾಕೃತ ತತ್ವಗಳು) ಉಪಾದಾನ ಕಾರಣವು. ನಿಮಿತ್ತ ಕಾರಣಗಳಲ್ಲಿ ದೇಶಕಾಲಗಳು ಪ್ರಧಾನವಾದವುಗಳು. ಶ್ರೀಹರಿಯೇ ಸ್ವತಂತ್ರ ಸೃಷ್ಟಿಕರ್ತನು. ದೇಶಕಾಲಗಳ ಸ್ವರೂಪ-ಸ್ವಭಾವಗಳನ್ನು ಗ್ರಹಿಸಬೇಕಾದುದು ಅವಶ್ಯಕ. ನಿತ್ಯಾಕಾಶ ಅಥವ ಅವ್ಯಾಕೃತಾಕಾಶವೆಂದು ಕರೆಯಲ್ಪಡುವುದೇ ದೇಶ. ದೇಶವು ಎಲ್ಲಿದೆ? ಎಂಬ ಪ್ರಶ್ನೆಗೆ ತನ್ನಲ್ಲಿ ತಾನಿದೆ ಎಂಬುದೇ ಉತ್ತರ. ಇದರಂತೆ ಕಾಲವು ಯಾವಾಗ? ಎಂಬ ಪ್ರಶ್ನೆಗೆ ಕಾಲವಿದ್ದಾಗಲೇ, ಎಂಬುದು ಉತ್ತರ. **ದೇಶಕಾಲ-ಗಳೆರಡೂ ಸ್ವಗತಗಳೆಂದು ಹೇಳಲ್ಪಡುತ್ತವೆ.** ಇದರಿಂದ ದೇಶಕಾಲಗಳು ಸ್ವತಂತ್ರವೆಂದು ತಿಳಿಯಕೂಡದು. ಈ ಎರಡೂ ಈಶಾಧೀನಗಳಾಗಿ ಆತನ ಆಶ್ರಯದಲ್ಲಿಯೇ ಇವೆ ಮತ್ತು ಅನಂತ ಸೂಕ್ಷ್ಮಾಂಶಗಳುಳ್ಳದಾಗಿಯೂ ಇವೆ. ದೇಶದಲ್ಲಿ ಅಣು, ಅಣುತರ, ಅಣುತಮಗಳಾದ ವಿಭಾಗಗಳಿರುವಂತೆ ಕಾಲದಲ್ಲಿ ಸಹ ಸೂಕ್ಷ್ಮ, ಸೂಕ್ಷ್ಮತರ, ಸೂಕ್ಷ್ಮತಮ ಅಂಶಗಳಿವೆ. ಈ ಉಭಯಾಂಶಗಳಿಗೆ ಪರ್ಯವಸಾನವಿಲ್ಲ. ಈ ಮೊದಲಾದ ಪ್ರಮೇಯಗಳು[21] ಪ್ರಮಾಣಗಳಿಂದ

---

21. ನಿತ್ಯಾऽಕಾಶಸ್ತಥಾ ಕಾಲೋ ಮಹಾಂತೌ ಸರ್ವಕಾರಕೌ ।
ಅಪರ್ಯವಸಿತಿಶ್ಚಾಣ್ವೋಃ ದೃಶ್ಯತೇ ಸಾಕ್ಷಿಣಾದ್ವಯೋಃ ॥
ಈಶೋ ದೇಶಶ್ಚ ಕಾಲಶ್ಚ ಸ್ವಗತಾ ಏವ ಸರ್ವದಾ ।
ಈಶಾಧೀನೌ ಚ ತೌ ನಿತ್ಯಂ ತದಾಧಾರೌ ಚ ತದ್ಗತೌ ॥ (ಸ.ರ.ಮಾ)

ಸಿದ್ಧವಾಗುತ್ತವೆ. ಹೀಗೆ ಕೊನೆ ಇಲ್ಲದ ಅಂಶಗಳುಳ್ಳ ದೇಶಕಾಲಗಳನ್ನು ಅವುಗಳ ಸ್ವತಂತ್ರ ಒಡೆಯನಾದ ಈಶ್ವರನು ಸೃಷ್ಟಿಯಲ್ಲಿ ಉಪಯೋಗಿಸಿಕೊಳ್ಳುವ ಪರಿಯು ವಿಚಿತ್ರವಾದುದು-ಅದ್ಭುತವಾದುದು-ಅಲ್ಪಮಾನವನ ಕಲ್ಪನೆಗೆ ಮೀರಿದುದು. ಕಾಲದೇಶಗಳ ಸೂಕ್ಷ್ಮತಮಾಂಶಗಳಲ್ಲಿ ವಿಶ್ವವನ್ನು ಸೃಷ್ಟಿ ಮಾಡಬಲ್ಲ-ಸ್ಥಾಪಿಸಬಲ್ಲ. ಈಶ್ವರಾಚಿಂತ್ಯ ಶಕ್ತಿಯನ್ನು ಅಂಗೀಕರಿಸದಿದ್ದರೆ ಸೃಷ್ಟಿ ವಿಷಯಕ ಪ್ರಮೇಯಗಳನ್ನು ಯುಕ್ತಿಯಿಂದ ಗ್ರಹಿಸುವುದು ಸಾಧ್ಯವಲ್ಲ. ನಿತ್ಯಾಕಾಶವೂ (ದೇಶವೂ), ಕಾಲವೂ ಅನಂತಾಂಶವುಳ್ಳವಾದರೂ ದೇಶಾಣು-ಗಳೆಲ್ಲವೂ ನಿತ್ಯ. ಕಾಲಾಂಶಗಳೆಲ್ಲವೂ ಅನಿತ್ಯ. **ಆದುದರಿಂದ ಅವ್ಯಾಕೃತಾಕಾಶವು ನಿತ್ಯವೆಂದೂ, 'ಕಾಲವು' ನಿತ್ಯಾನಿತ್ಯವೆಂದೂ ಹೇಳಲಾಗಿದೆ.** ಮಹಾಕಾಲವು ನಿತ್ಯ. ಕಾಲಾಂಶಗಳೆಲ್ಲವೂ ಅನಿತ್ಯ. ಕಾಲಾಂಶಗಳೆಲ್ಲವೂ ಮೂಲ ಪ್ರಕೃತಿಯ ವಿಕಾರದಿಂದಾಗುವ ವಿಶ್ವಸೃಷ್ಟಿಯನ್ನು ಸಂಬಂಧಿಸಿಕೊಂಡು ವಿಕಾರರಹಿತ ಪ್ರಕೃತಿಯನ್ನೇ ಉಪಾದಾನ ಕಾರಣವಾಗಿ ಉಳ್ಳವುಗಳು. ದೇಶಕಾಲಗಳ ಸ್ವರೂಪಧರ್ಮಗಳ ವಿಷಯದಲ್ಲಿ ಭಾರತೀಯ ಆಗಮಗಳು ಹೋಗಿರುವಷ್ಟು ದೂರ ಆಧುನಿಕ ವೈಜ್ಞಾನಿಕರು ಹೋಗಿಲ್ಲ-ಮುಂದೆಂದೂ ಹೋಗಲಾರದಷ್ಟು ದೂರ ಹೋಗಿ ಸೂಕ್ಷ್ಮ ವಿವೇಚನೆಗಳಿಂದ ನಿರ್ಣಯಗಳನ್ನು ಕಂಡುಕೊಂಡಿವೆ. ಕಾಲಾಂಶಗಳಿಗೆ (ಕಾಲಾವಯವಗಳಿಗೆ) ಉಪಾದಾನ ಕಾರಣವನ್ನು ನಿರೂಪಿಸುವ ಶಾಸ್ತ್ರಭಾಗವು ಹೀಗಿದೆ :- ''ಕಾಲಾವಯವಾನಾಂ ಅನಿತ್ಯತ್ವೇ ಕಾರಣಂ ವಾಚ್ಯಂ ಇತಿಚೇತ್ ಸತ್ಯಮ್ । ಉಪಾದಾನಂ ಪ್ರಕೃತಿರೇವೇತಿ । ಯಥಾ ಚೈಕಸ್ಯೈವ-ದರ್ಪಣಸ್ಯ ಯುಗಪದನೇಕ ವಿಧ ಮುಖವೃಕ್ಷಾರ್ಕಮಂಡಲಾದಿ ವಿಚಿತ್ರ ಪ್ರತಿ-ಬಿಂಬೋಪಾದಾನತಾ ಈಶಶಕ್ತ್ಯಾದೃಶ್ಯತೇ ತಥಾ ಅತ್ರಾಪಿ ಈಶಶಕ್ತ್ಯಾಪ್ರಕೃತಿತ್ವಾನ ಪಾಯೇನ್ಯೆವ ಕಾಲಪ್ರವಾಹಿನಾಂ ಮಹದಾದೀನಾಂ ಚ ಉಪಾದಾನತ್ವೋಪಪತ್ತೇಃ।'' ಈ ವಾಕ್ಯಗಳ ಭಾವಾರ್ಥ:- ಕಾಲಾಣುಗಳು ಅನಿತ್ಯವೆಂಬುದಕ್ಕೆ ಕಾರಣವನ್ನು ಹೇಳಬೇಕಷ್ಟೆ, ಎಂದರೆ ಸತ್ಯ; ಕಾಲಾಣುಗಳಿಗೆ ಪ್ರಕೃತಿಯೇ ಉಪಾದಾನ-ಕಾರಣವಾಗಿದೆ. ಒಂದೇ ದರ್ಪಣಕ್ಕೆ ಅದರಲ್ಲಿ ಏಕಕಾಲದಲ್ಲಿ ಪ್ರತಿಬಿಂಬಿತ-ವಾಗುವ ಮುಖ, ವೃಕ್ಷ, ಸೂರ್ಯಮಂಡಲಾದಿ ಬಹುವಿಧ ಪ್ರತಿಬಿಂಬಗಳ ಉಪಾದಾನಕಾರಣವಾಗಿರುವಿಕೆಯು ಈಶಶಕ್ತಿಯಿಂದ ಕಂಡಿರುವಂತೆ, ಅದೇ ಈಶಾಚಿಂತ್ಯಶಕ್ತಿಯಿಂದ ಪ್ರಕೃತಿಯ ಪ್ರಕೃತಿತ್ವಕ್ಕೆ ನಷ್ಟವಿಲ್ಲದೆ,

ಕಾಲಪ್ರವಾಹದಲ್ಲಿರುವ ಕಾಲಾಂಶಗಳಿಗೂ ಮಹದಾದಿ ತತ್ತ್ವಗಳಿಗೂ ಏಕ-ಕಾಲದಲ್ಲಿ ಉಪಾದಾನಕಾರಣವಾಗಿರುವಿಕೆಯು (ಉಪಮಾನದಲ್ಲಿ ದರ್ಪಣ ಸ್ಥಾನದಲ್ಲಿರುವ ಪ್ರಕೃತಿಗೆ) ಮೂಲಪ್ರಕೃತಿಗೆ ಕೂಡುತ್ತದೆ. ಪಾಶ್ಚಾತ್ಯ ವಿಜ್ಞಾನವು ದೃಷ್ಟವಸ್ತು ಅಥವಾ ಸಂಭವಗಳನ್ನು ಮಾತ್ರ ಮುಖ್ಯವೆಂದು ಭಾವಿಸುತ್ತದೆ. ಅದರ ಕಾರಣ ಅಥವಾ ಹಿನ್ನಲೆಯನ್ನಲ್ಲ. ಪೌರ್ವಾತ್ಯ ತತ್ತ್ವಜ್ಞಾನವಾದರೋ ದೃಷ್ಟವಸ್ತು ಅಥವಾ ಕಾರ್ಯಗಳಿಗಿಂತ ಅವುಗಳ ಹಿಂದಿರುವ ಕಾರಣವನ್ನೇ ಪ್ರಾಮುಖ್ಯವೆಂದು ಭಾವಿಸುತ್ತದೆ. ಕಾರ್ಯ ಕಾರಣಗಳಲ್ಲಿ ಕಾರ್ಯಕ್ಕೆ ಮುಖ್ಯ-ಸ್ಥಾನವನ್ನು ವಿಜ್ಞಾನವಿತ್ತರೆ, **ಆಗಮಗಳು ಕಾರಣವನ್ನೇ ಪ್ರಧಾನವಾಗಿಟ್ಟು-ಕೊಂಡು ಪ್ರಮೇಯಗಳನ್ನು ನಿರ್ಣಯಿಸುತ್ತವೆ.**

ಹೀಗೆ ಪ್ರಕೃತಿ ಅಥವಾ ಅವ್ಯಕ್ತತತ್ತ್ವವು ಕಾಲಾಂಶಗಳಿಗೆ ಉಪಾದಾನ ಕಾರಣವೆಂಬ ಆಗಮಗಳ ನಿರೂಪಣೆಯು ಯುಕ್ತಿಯುಕ್ತವಾಗುತ್ತದೆ. ದೇಶ ಕಾಲಗಳನ್ನು ಆಳುವ ಸ್ವತಂತ್ರ ಪ್ರಭುವಾದ ಈಶ್ವರನು ತನ್ನ ಇಚ್ಛೆಯಿಂದ ಸೃಷ್ಟ್ಯಾದಿ ಕಾರ್ಯಗಳಲ್ಲಿ ಅವುಗಳನ್ನು ಉಪಯೋಗಿಸಿಕೊಳ್ಳುತ್ತಾನೆ. ತಾನು ದೇಶ ಕಾಲಗಳಿಗೆ ಯಾವ ಪ್ರಕಾರದಿಂದಲೂ ಅಧೀನನಲ್ಲ. ಅಣು ಪ್ರದೇಶದಲ್ಲಿ ವಿಶ್ವವನ್ನಿಡಬಲ್ಲ; ಕ್ಷಣಮಾತ್ರದಲ್ಲಿ ಸೃಷ್ಟಿ ಲಯಾದಿಗಳನ್ನು ಮಾಡಬಲ್ಲ.[22] ಈ ತನ್ನ ಅಚಿಂತ್ಯ ಸಾಮರ್ಥ್ಯವನ್ನು ಶ್ರೀಹರಿಯು, ನಾನಾ ಅವತಾರಗಳಲ್ಲಿ ವಿವೇಕಿಗಳು ವಿಮರ್ಶಿಸಿ ತಿಳಿಯಲು ಸಾಧ್ಯವಾಗುವಂತೆ, ಪ್ರಕಟಮಾಡುತ್ತಾನೆ; ಈ ಪ್ರಕಾರದ ವಿವರಣೆಗಳನ್ನು ಭಾರತ ಭಾಗವತಾದಿ ಪುರಾಣಗಳಲ್ಲಿ ಕಾಣಬಹುದು.

---

22. ಸೂಕ್ಷ್ಮಸೂಕ್ಷ್ಮತಮೇ ಕಾಲೇ ದೇಶೇ ಸೂಕ್ಷ್ಮತಮೇಽಪಿ ಚ ।
ಪೃಥಕ್ ಪೃಥಕ್ತ್ವಮಾತ್ತಷ್ಟುಂ ಸಂಸ್ಥಾಪಯಿತುಮಂಜಸಾ ॥
ಸ್ವಶಕ್ತ್ಯೇಂಕಾಂಶ ಲೇಶಸ್ಯಾಪ್ಯಂಶಾಂಶೇನ ಪ್ರಭುಃಸ್ವಯಂ । (ಸ.ರ.ಮಾ)
-ಸೂಕ್ಷ್ಮತಮಕಾಲದಲ್ಲಿ, ಸೂಕ್ಷ್ಮತಮದೇಶದಲ್ಲಿ ಅನಂತ ವಿಶ್ವಗಳನ್ನು (ಬ್ರಹ್ಮಾಂಡ-ಗಳನ್ನು) ಪ್ರತ್ಯೇಕವಾಗಿ ಸೃಷ್ಟಿಸಲು ಮತ್ತು ಚೆನ್ನಾಗಿ (ವಿಶಾಲ ದೇಶದಲ್ಲಿ ಹೇಗೋ ಹಾಗೆ) ಸ್ಥಾಪಿಸಲಿಕ್ಕೂ ಈಶ್ವರನು ತನ್ನ ಶಕ್ತಿಯ ಅನಂತಾಂಶಗಳಲ್ಲಿ ಒಂದಂಶದಿಂದ, ಸಮರ್ಥನಾಗಿದ್ದಾನೆ.

## ಪರಿಚ್ಛೇದ ೨

## ಸ್ಥಿತಿ ಕರ್ತ - ಶ್ರೀ ಹರಿ

ಈವರೆಗೆ ನಿರೂಪಿಸಲಾದ ನಾಲ್ಕು ವಿಧದ ಸೃಷ್ಟಿಕ್ರಮಗಳನ್ನು ಭಾವಿಸುವುದರಿಂದ ಪರಮಾತ್ಮನ ಸ್ವಾತಂತ್ರ್ಯಾದಿ ಗುಣಗಳನ್ನು ವಿವೇಕಿಗಳಾದವರು ಗ್ರಹಿಸಬಹುದು. ಸೃಷ್ಟ್ಯಾರಂಭದಲ್ಲಿ ಮೂಲರೂಪದಿಂದ ಪ್ರಕಟವಾಗುವ ವಾಸುದೇವಾದಿ ನಾಲ್ಕು ರೂಪಗಳು ಲೀಲೆಯಿಂದ ಜಗತ್ಸೃಷ್ಟ್ಯಾದಿ ಅಷ್ಟ ಕರ್ತೃತ್ವಗಳನ್ನು ನಿರ್ವಹಿಸುತ್ತವೆ. ಮೂಲರೂಪ ಒಂದರಿಂದಲೇ ಈ ಎಲ್ಲವನ್ನೂ ನಿರ್ವಹಿಸಲು ಶಕ್ತನಾದರೂ ಈಶ್ವರನು ಸ್ವೇಚ್ಛೆಯಿಂದಲೇ ವಾಸುದೇವಾದಿ ನಾಲ್ಕು ರೂಪಗಳನ್ನೂ ಇತರ ಬಹುರೂಪಗಳಿಂದ ಯುಕ್ತವಾದ ನಾನಾ ವ್ಯೂಹಗಳನ್ನೂ ರಚಿಸಿ ಅನಂತರೂಪಗಳಿಂದ ವಿಶ್ವದಲ್ಲಿ ವ್ಯಾಪ್ತನಾಗಿ ಕ್ರೀಡಿಸುತ್ತಾನೆ. ಸ್ಥಾವರ ಜಂಗಮ ಜಗತ್ತೆಲ್ಲವೂ ಈತನ ಅಂತರ್ಯಾಮಿ ರೂಪಗಳಿಂದ ನಿಯಮಿಸಲ್ಪಟ್ಟು ಪ್ರವೃತ್ತಿಸುತ್ತವೆ. ಅನಂತರೂಪಿಯಾದ ಶ್ರೀಹರಿಯ ಅನಂತರೂಪಗಳಲ್ಲಿ ಪರಸ್ಪರ ಯಾವ ವಿಶೇಷವೂ ಇರುವುದಿಲ್ಲ. ಎಲ್ಲವೂ ಗುಣಪೂರ್ಣತ್ವಾದಿಗಳಿಂದ ಸಮವಾಗಿದ್ದು ಈ ಎಲ್ಲ ರೂಪಗಳಿಂದ ಶ್ರೀಹರಿಯು ಅಭಿನ್ನನಾಗಿಯೇ ಇದ್ದಾನೆ. ಅಣುರೇಣು ತೃಣಕಾಷ್ಠಾದಿಗಳಿಂದ ಆರಂಭಿಸಿ ಗ್ರಹನಕ್ಷತ್ರಾದಿ ಲೋಕಪರ್ಯಂತ ವಿಸ್ತಾರವುಳ್ಳ ಎಲ್ಲ ವಸ್ತುಗಳಿಗೂ ಶ್ರೀಹರಿಯೇ  ಬಿಂಬನು. ಜಗದ್ವಸ್ತುಗಳೆಲ್ಲವೂ ಆತನ ಪ್ರತಿಬಿಂಬವು.

ಜಗತ್ತೆಲ್ಲವೂ ಶ್ರೀಹರಿಯ ಪ್ರತಿಬಿಂಬವೆಂಬುದನ್ನು ನಿಶ್ಚಿತವಾಗಿ ತಿಳಿಯಬೇಕು. ಪ್ರತಿಬಿಂಬಗಳೆಂದರೆ, ಬಿಂಬನಾದ ಈಶ್ವರನಿಂದ ಅತ್ಯಂತ ಭಿನ್ನವೂ ಅಧೀನವೂ ಯಥಾಯೋಗ್ಯ ಸಾದೃಶವುಳ್ಳವುಗಳೂ, ಆದುದವೆಂದರ್ಥ. ಕನ್ನಡಿಯಲ್ಲಿನ ಪ್ರತಿಬಿಂಬದಂತೆ ಕಾರಣಾಂತರಗಳಿಂದ ಸ್ವರೂಪತಃ ನಾಶಹೊಂದತಕ್ಕವುಗಳೆಂದಲ್ಲ. (ಭಿನ್ನತ್ವ, ತದಧೀನತ್ವ... ತತ್ಸಾದೃಶ್ಯೈರೇವ ಸೂರ್ಯಕಾದ್ಯುಪಮಾ - ಸೂರ್ಯ ಪ್ರತಿಬಿಂಬಾದಿಗಳ ಉಪಮಾನವು ಬಿಂಬಭಿನ್ನತ್ವ ಬಿಂಬಾಧೀನತ್ವ ಮತ್ತು ಬಿಂಬಸಾದೃಶ್ಯಗಳ ವಿವಕ್ಷೆಯಿಂದ ಮಾತ್ರ; ಪ್ರತಿಬಿಂಬವು ಬಿಂಬದಿಂದ ಭಿನ್ನವೆಂಬುದು ಪ್ರತ್ಯಕ್ಷಸಿದ್ಧ; ಹಾಗೆಯೆ ಬಿಂಬಾಧೀನವೆಂಬುದೂ ಸ್ಪಷ್ಟವೇ. ಪ್ರತಿಬಿಂಬದ ಬಿಂಬಸಾದೃಶ್ಯವು

ಪ್ರತಿಬಿಂಬಕ್ಕೆ ಕಾರಣವಾದ ಉಪಾಧಿಯ ಯೋಗ್ಯತೆಯನ್ನು ಅನುಸರಿಸಿರುತ್ತದೆ. ಸ್ವಚ್ಛ ಕನ್ನಡಿ, ಮಲಿನದರ್ಪಣ, ಜಲ ಮೊದಲಾದ ಉಪಾಧಿಗಳಲ್ಲಿ ಮೂಡುವ ಒಂದೇ ಬಿಂಬದ ನಾನಾ ಪ್ರತಿಬಿಂಬಗಳು ಬಿಂಬ ಸಾದೃಶ್ಯದಲ್ಲಿ ನಾನಾ ಪ್ರಕಾರವಷ್ಟೆ. ಜೀವರು ಈಶ್ವರನ ಪ್ರತಿಬಿಂಬರೆಂದು ಹೇಳುವ ಆಗಮ ವಾಕ್ಯಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದ ದರ್ಪಣಾದಿ ಉಪಾಧಿ ಜನ್ಯ ಪ್ರತಿಬಿಂಬಗಳಂತೆ ಎಂದು ಭ್ರಮಿಸಿ ಜೀವೇಶ್ವರರ ಸ್ವರೂಪ ಸಂಬಂಧಗಳನ್ನು ಯಥಾರ್ಥಕ್ಕೆ ವಿರುದ್ಧವಾಗಿ ಪ್ರತಿಪಾದಿಸುವ ವಾದಿಗಳೂ ಇರುವರು. ಕನ್ನಡಿ ಅಥವಾ ಅದರಂತೆ ಪ್ರತಿಬಿಂಬವನ್ನು ಉತ್ಪಾದನೆಮಾಡುವ ಸಾಮರ್ಥ್ಯವುಳ್ಳ ವಸ್ತುವನ್ನು ಉಪಾಧಿ ಎನ್ನುವರು. ಕನ್ನಡಿಯ ಮುಂದಿರುವ ಮುಖ ಮೊದಲಾದ ವಸ್ತುಗಳನ್ನು ಬಿಂಬವೆಂದೂ ಕನ್ನಡಿಯೊಳಗೆ ತೋರುವ ಬಿಂಬ ಸಾದೃಶ್ಯ ವಸ್ತುವನ್ನು ಪ್ರತಿಬಿಂಬವೆಂದೂ ಕರೆಯುವರು. ಬಿಂಬ ನಾಶ, ಉಪಾಧಿನಾಶ ಅಥವಾ ಬಿಂಬ-ಉಪಾಧಿಗಳ ಸಾನ್ನಿಧ್ಯನಾಶದಿಂದ ಪ್ರತಿ-ಬಿಂಬವು ನಷ್ಟವಾಗುತ್ತದೆ. ಪರಬ್ರಹ್ಮನೇ ನಾನಾ ಉಪಾಧಿಗಳಲ್ಲಿ ಪ್ರತಿಫಲಿಸಿ ಅಸಂಖ್ಯ ಜೀವರಾಗಿ ತೋರುತ್ತಾನೆಂದು ಜೀವೇಶ್ವರೈಕ್ಯವಾದಿಗಳು ತಿಳಿಯುತ್ತಾರೆ. ಇವರ ವಾದದಲ್ಲಿ ಮನ ಮೊದಲಾದ ಅಂತಃಕರಣಸಹಿತ ದೇಹಗಳೇ ಉಪಾಧಿಗಳು. ಇವು ಅಜ್ಞಾನಜನ್ಯವಾದವುಗಳು. ಇವುಗಳಲ್ಲಿ ಪರಬ್ರಹ್ಮನು ಪ್ರತಿಫಲಿಸಿ ಜೀವಭಾವವನ್ನು ಹೊಂದಿರುವನು. ಉಪಾಧಿ ನಾಶದಿಂದ ಪ್ರತಿಬಿಂಬದ ನಾಶವಾಗಿ ಪರಬ್ರಹ್ಮನೊಬ್ಬನೇ ಉಳಿಯುತ್ತಾನೆ. ಬ್ರಹ್ಮನು ಜೀವಭಾವವನ್ನು ಹೊಂದುವುದೆಂದರೆ ಆಗಮಗಳಲ್ಲಿ ಹೇಳುವ ಆತನ ಸರ್ವಜ್ಞತ್ವಾದಿಗಳಿಗೆ ವಿರುದ್ಧವಾದ ಅಲ್ಪಜ್ಞತ್ವ, ಅಲ್ಪಶಕ್ತಿಮತ್ತ್ವಾದಿ ಧರ್ಮ-ಗಳನ್ನು ಹೊಂದುವುದೆಂದು ಅರ್ಥ. ಈ ವಾದವು ವಿವೇಕಿಗಳ ದೃಷ್ಟಿಯಲ್ಲಿ ಹಾಸ್ಯಾಸ್ಪದವಾಗದಿರದು. ಅದು ಹೇಗೆಂದರೆ ಆ ವಾದದಂತೆ ಉಪಾಧಿಯು ಅಜ್ಞಾನಜನ್ಯವಾದುದು ಮತ್ತು ಮಿಥ್ಯಾಭೂತವು. (ಇದ್ದಂತೆ ತೋರಿದರೂ ಇಲ್ಲದ್ದು). ಬ್ರಹ್ಮ ಒಂದೇ ಸತ್ಯವೆಂದು ಹೇಳುವುದರಿಂದ ಅಜ್ಞಾನವೂ ಮಿಥ್ಯೆಯೇ. ಮಿಥ್ಯಾಭೂತವಾದ ಅಜ್ಞಾನದಿಂದ ಮಿಥ್ಯಾಭೂತವಾದ ಉಪಾಧಿಯು ಹುಟ್ಟಿ ಬ್ರಹ್ಮನು ಅದರ ಪ್ರಭಾವಕ್ಕೆ ಸಿಕ್ಕು ಜೀವನಾಗುತ್ತನೆಂಬ ವಾದವು ವಿವೇಕಿಗಳ ಮಧ್ಯದಲ್ಲಿ ಶೋಭಿಸಬಹುದೇ? ಸರ್ವಥಾ ಅಗ್ರಾಹ್ಯ. ಬ್ರಹ್ಮ ಒಂದೇ ಸತ್ಯ, ಉಳಿದುದೆಲ್ಲವೂ ಮಿಥ್ಯಾ ಎಂಬುದು ಅದರ ಮೂಲ ಸಿದ್ಧಾಂತ.

ಉಪಾಧಿಯಿಂದ ಬ್ರಹ್ಮನಿಗೆ ಸ್ವಸ್ವರೂಪವಿಷಯಕವಾದ ಅಜ್ಞಾನ ಉಂಟಾಗಿ ಜೀವತ್ವ ಪ್ರಾಪ್ತವಾಗುವುದಾದರೆ ಉಪಾಧಿಯಿಂದ ಅಜ್ಞಾನ ಹುಟ್ಟಿದಂತೆ ಆಲ್ಲವೇ? ಹೀಗೆ ಉಪಾಧಿಯಿಂದ ಅಜ್ಞಾನ; ಅಜ್ಞಾನದಿಂದ ಉಪಾಧಿ ಎಂಬ ಅನ್ಯೋನ್ಯಾಶ್ರಯ ಮೊದಲಾದ ಅನೇಕ ದೋಷಗಳು ಅಪರಿಹಾರ್ಯವಾಗುತ್ತವೆ. ತತ್ತ್ವಮಸ್ಯಾದಿ ಕೆಲವು ವೇದವಾಕ್ಯಗಳು ಜೀವಬ್ರಹ್ಮರ ಐಕ್ಯವನ್ನು ಹೇಳುತ್ತವೆಂದು ಗ್ರಹಿಸಿ, ಅದರ ಆಧಾರದ ಮೇಲೆ ಏರ್ಪಡಿಸಿಕೊಂಡಿರುವುದು ಈ ಉಪಾಧಿವಾದ. ಈ ವಾದಿಗಳ ತತ್ತ್ವಮಸಿ ಮೊದಲಾದ ವಾಕ್ಯಗಳನ್ನು ಮಹಾವಾಕ್ಯಗಳೆಂದು ಹೇಳಿಕೊಂಡು ಅವುಗಳ ಮೇಲೆ ಆಗ್ರಹದಿಂದ ತಮ್ಮ ಅರ್ಥಗಳನ್ನು ಹೇರುವರು, ಇದು ಸರಿಯಲ್ಲ. ಈ ಮಹಾವಾಕ್ಯಗಳು ಮತ್ತು ಅವುಗಳ ಅರ್ಥ ವಿವರಣೆಗಳನ್ನು ಮುಂದಿನ ಪರಿಚ್ಛೇದದಲ್ಲಿ ಸ್ವಲ್ಪಮಟ್ಟಿಗೆ ವಿವರಿಸಲಾಗುತ್ತದೆ. ಪ್ರಕೃತ ಜೀವಬ್ರಹ್ಮರಲ್ಲಿ ಬಿಂಬ-ಪ್ರತಿಬಿಂಬತ್ವ ಸಂಬಂಧ-ವನ್ನು ಹೇಳುವ ವೇದವಾಕ್ಯಗಳಿಗೆ ಜೀವ-ಬ್ರಹ್ಮೈಕ್ಯ ವಿಷಯಕ ಆಗ್ರಹಯುಕ್ತರಾಗಿ ಅರ್ಥವನ್ನು ಯೋಜನೆಮಾಡುವುದು ಸರಿಯಲ್ಲ. ಎಲ್ಲ ಜೀವರೂ ಶ್ರೀಹರಿಯ ಪ್ರತಿಬಿಂಬರೆಂಬ ಪ್ರಕ್ರಿಯೆಯನ್ನು ನಿಸ್ಸಂಶಯವಾಗಿ ಗ್ರಹಿಸುವುದರಿಂದ ಸ್ವತಂತ್ರಪ್ರಭುವಾದ ಶ್ರೀಹರಿಯೇ ಸರ್ವೋತ್ತಮನೆಂದೂ, ಜೀವರೆಲ್ಲರೂ ಆತನ ನಿತ್ಯಾಧೀನರೆಂದೂ ಸಿದ್ಧವಾಗುತ್ತದೆ. ಆದುದರಿಂದ ಈ ಪ್ರಕ್ರಿಯೆಯನ್ನು ಈ ಮುಂದೆ ವಿಸ್ತರಿಸಲಾಗುತ್ತದೆ.

ಪ್ರತಿಬಿಂಬವು (ಕನ್ನಡಿ ಮೊದಲಾದ) ಉಪಾಧಿಜನ್ಯವೆಂಬುದು ಸಾಮಾನ್ಯ ನಿಯಮ. ಪ್ರತಿಬಿಂಬಗಳು ಸೋಪಾಧಿಕ ಮತ್ತು ನಿರುಪಾಧಿಕಗಳೆಂದು ಎರಡು ಪ್ರಕಾರವಾಗಿರುವುವು. *ಸೋಪಾಧಿರನುಪಾಧಿಶ್ಚ ಪ್ರತಿಬಿಂಬೋದ್ವಿಧೇಯತೇ। ಜೀವ ಈಶಸ್ಯಾನುಪಾಧಿರಿಂದ್ರಚಾಪೋ ಯಥಾರವೇಃ॥* (ಭಾಷ್ಯ) ಎಂಬಲ್ಲಿ ಜೀವನು ನಿರುಪಾಧಿಕ ಪ್ರತಿಬಿಂಬನೆಂದು ಹೇಳಲಾಗಿದೆ. ಇಂದ್ರಚಾಪವು (ಕಾಮನಬಿಲ್ಲು) ಹೇಗೆ ಉಪಾಧಿರಹಿತ ಪ್ರತಿಬಿಂಬವೋ ಹಾಗೆ ಜೀವನೂ ಈಶನ ಉಪಾಧಿರಹಿತ ಪ್ರತಿಬಿಂಬನೆಂಬ ದೃಷ್ಟಾಂತವು ತೋರಿಸಲ್ಪಟ್ಟಿದೆ. ಉಪಾಧಿರಹಿತ ಪ್ರತಿಬಿಂಬವೆಂದರೆ ಬಿಂಬ ಪ್ರತಿಬಿಂಬಗಳಿಂದ ಭಿನ್ನವಾದ ಇತರ ಉಪಾಧಿ ಇಲ್ಲದಿರುವುದೆಂದು ಅರ್ಥ. ಇಂದ್ರಚಾಪವು ಬಿಂಬಾತಿರಿಕ್ತ ಉಪಾಧಿಯಿಲ್ಲದ ಪ್ರತಿಬಿಂಬಕ್ಕೆ ಉದಾಹರಣೆ. ಜೀವನಾದರೋ ಪ್ರತಿಬಿಂಬಾತಿರಿಕ್ತ

ಉಪಾಧಿ ಇಲ್ಲದ ಪ್ರತಿಬಿಂಬನು-ಎಂದರೆ ಜೀವಸ್ವರೂಪವೇ ಉಪಾಧಿಯೂ ಪ್ರತಿಬಿಂಬವೂ ಆಗಿದೆ. ದೇಹದ ನೆರಳು ಸಹ ನಿರುಪಾಧಿಕ ಪ್ರತಿಬಿಂಬಕ್ಕೆ ದೃಷ್ಟಾಂತವಾಗಬಲ್ಲುದು. ಇಂದ್ರಚಾಪವು ಸೂರ್ಯತೇಜಸ್ಸಿನ (ಕಿರಣಗಳ) ಪ್ರತಿಬಿಂಬವು. ಸೂರ್ಯಪ್ರಕಾಶದಿಂದ ಭಿನ್ನವಾದ ಉಪಾಧಿಯಿಂದ ಹುಟ್ಟಿದ ಪ್ರತಿಬಿಂಬವಲ್ಲ. ಪ್ರಕಾಶ ಕಿರಣಗಳೇ ಉಪಾಧಿಯೂ ಆಗಿವೆ. ಪ್ರತಿಬಿಂಬವಾದ ಇಂದ್ರಚಾಪದಲ್ಲಿ ಸೂರ್ಯಪ್ರಕಾಶದ ಅಲ್ಪಸಾದೃಶ್ಯವೂ ಇದೆ. ಜಲತುಂತುರು-ಗಳ ಮಧ್ಯದಲ್ಲಿ ಇಂದ್ರಚಾಪವು ಕಾಣುವುದರಿಂದ ಜಲತುಂತುರಗಳು ದರ್ಪಣಾದಿಗಳಂತೆ ಉಪಾಧಿಗಳೆಂದು ಭ್ರಮಿಸಲಾಗದು. ಇವು ಸೂರ್ಯ-ಕಿರಣಗಳಲ್ಲಿರುವ ವಿವಿಧ ಬಣ್ಣಗಳನ್ನು ಪೃಥಕ್ಕರಿಸುವ (ಬೇರ್ಪಡಿಸುವ) ನಿಮಿತ್ತಮಾತ್ರ. ಪ್ರಕಾಶದಲ್ಲಿಯೇ ಇಂದ್ರಚಾಪವು ತೋರುವುದಲ್ಲದೆ ಜಲಬಿಂದುಗಳಲ್ಲಿ ಅಲ್ಲ. ಕನ್ನಡಿಯೊಳಗಿನ ಪ್ರತಿಬಿಂಬಕ್ಕೆ ಕನ್ನಡಿಯ ಸೂಕ್ಷ್ಮಾಂಶ-ಗಳು ಈಶಾಚಿಂತ್ಯ ಶಕ್ತಿಯಿಂದ ಉಪಾದಾನ ಕಾರಣವಾಗಿರುವಂತೆ ಇಂದ್ರಚಾಪಕ್ಕೆ ಜಲಬಿಂದುಗಳು ಉಪಾದಾನ ಕಾರಣಗಳಲ್ಲ. ಅನ್ಯತ್ರ (prism) ಗಾಜು ಮೊದಲಾದವುಗಳಲ್ಲಿ ಕಾಣಬಹುದಾದ ಏಳುಬಣ್ಣಗಳ ಪ್ರತಿಬಿಂಬವನ್ನು ದೃಷ್ಟಾಂತವಾಗಿ ತೋರಿಸದೆ ಇಂದ್ರಚಾಪವನ್ನೇ ಉದಹರಿಸಿರುವುದು ಬಹ್ವರ್ಥ-ಗರ್ಭಿತವಾಗಿದೆ. ವೃಷ್ಟಿಸೂಚಕವಾಗಿ ಅಥವಾ, ವೃಷ್ಟಿವಿರಾಮ, ಅಥವಾ ಇತರ ಅನಿಷ್ಟಸೂಚಕವಾಗಿ ಭಗವದಿಚ್ಛೆಯಿಂದ ಇಂದ್ರಚಾಪದ ಉದಯವಾಗುವುದು. *ಸೂರ್ಯೇಣ ವಿನಾ ಪ್ರಾಯೇಣ ಇಂದ್ರ ಚಾಪಸ್ಯ ಅನವಸ್ಥಾನಾತ್*-ಸೂರ್ಯ-ನಿಲ್ಲದೆ ಪ್ರಾಯಃ ಕಾಮನಬಿಲ್ಲು ಮೂಡುವುದಿಲ್ಲವಾದುದರಿಂದ ಮತ್ತು *'ಭಾವ್ಯನಿಷ್ಟ ಸೂಚನಾರ್ಥಂ ಕದಾಚಿತ್ ಸೂರ್ಯಾಸ್ತಮಯಾನಂತರಂ ತೇನ ವಿನಾಪಿ ಅವಸ್ಥಾನ ಸದ್ಭಾವಾತ್'* 'ಮುಂದಿನ ಅನರ್ಥಸೂಚಕವಾಗಿ ಕೆಲವು ವೇಳೆ ಸೂರ್ಯನು ಮುಳುಗಿದನಂತರ ಸೂರ್ಯಪ್ರಕಾಶವಿಲ್ಲದೇ ಇಂದ್ರ-ಚಾಪವು ಕಾಣುವುದರಿಂದಲೂ' ಇತ್ಯಾದಿ ವಾಕ್ಯಗಳಲ್ಲಿ ಮೇಲೆ ಉದಹರಿಸಿದ ಭಾಷ್ಯವಾಕ್ಯದ ವ್ಯಾಖ್ಯಾನಭಾಗದಲ್ಲಿ ಟೀಕಾಟಿಪ್ಪಣಿಕಾರರು ಈ ಪ್ರಕ್ರಿಯೆಯನ್ನು ವಿಮರ್ಶಿಸಿರುವುದನ್ನು ಕಾಣಬಹುದು. ಪ್ರತಿಬಿಂಬದ ಉದಯಕ್ಕೆ ಭಗವದಿಚ್ಛೆಯೇ ಮೂಲ ಮತ್ತು ಮುಖ್ಯ ಕಾರಣವೆಂದು ತಿಳಿದು ಬರುತ್ತದೆ. ಜೀವಸ್ವರೂಪವೇ ಉಪಾಧಿಯಾಗಿರುವುದರಿಂದಲೂ ಜೀವಸ್ವರೂಪವು ನಿತ್ಯ-ವಾದ್ದರಿಂದಲೂ, ಸರ್ವತ್ರ ವ್ಯಾಪ್ತನಾದ ಶ್ರೀಹರಿಯೇ ಬಿಂಬನಾದ್ದರಿಂದಲೂ

ಪ್ರತಿಬಿಂಬನಾಶಕ್ಕೆ ಕಾರಣಗಳೆಂದು ಈ ಹಿಂದೆ ಹೇಳಲಾದ ಸನ್ನಿವೇಶಗಳಿಗೆ ಅವಕಾಶವೇ ಇಲ್ಲ.

*ಜೀವೋಪಾಧಿರ್ದ್ವಿಧಾ ಪ್ರೋಕ್ತಂ ಸ್ವರೂಪಂ ಬಾಹ್ಯಮೇವ ಚ । ಬಾಹ್ಯೋಪಾಧಿರ್ಲಯಂ ಯಾತಿ ಮುಕ್ತಾವನ್ಯಸ್ಯ ತುಸ್ಥಿತಿಃ॥ ಸರ್ವೋಪಾಧಿ ವಿನಾಶೇತು ಪ್ರತಿಬಿಂಬಃ ಕಥಂಭವೇತ್ ಕಥಂಚಾತ್ಮ ವಿನಾಶಾಯ ಪ್ರಯತ್ನಃ ಸೇತ್ಸ್ಯತೇ ಕ್ವಚಿತ್॥ ಜ್ಞಾನಜ್ಞೇಯಾದ್ಯಭಾವಾಚ್ಚ ಸರ್ವಥಾ ನೋಪಪದ್ಯತೇ । ತಸ್ಮಾದೇತನ್ಮಮತಂ ಯೇಷಾಂ ತಮೋ ನಿಷ್ಠಾ ಹಿ ತೇ ಮತಾಃ॥* ಎಂಬ ಭಾಷ್ಯೋದಾಹೃತ ಪ್ರಮಾಣವಾಕ್ಯಗಳು ಹೇಳುವಂತೆ ಜೀವನಿಗೆ ತನ್ನ ಸ್ವರೂಪ-ದಿಂದ ಭಿನ್ನವಾದ ಬಾಹ್ಯೋಪಾಧಿಯೂ ಇದೆ. ಅದು ದೇಹೇಂದ್ರಿಯಾಂತಃ ಕರಣಾದಿ ರೂಪವಾದುದು. ಅದು ನಾಶವುಳ್ಳದ್ದು. ಇದರ ಆತ್ಯಂತಿಕ ನಾಶ-ವಾದಾಗ ಜೀವನು ಮುಕ್ತನಾಗುತ್ತಾನೆ. ಆದರೆ ಸ್ವರೂಪರೂಪದ ಉಪಾಧಿಯು ಮುಕ್ತಿಯಲ್ಲೂ ಇರತಕ್ಕದ್ದೇ. ಉಭಯ ಉಪಾಧಿಗಳೂ ನಾಶವಾದರೆ ಪ್ರತಿ-ಬಿಂಬವು ಇರಲಾರದಷ್ಟೆ. ಆತ್ಮನಾಶಕ್ಕಾಗಿ ಯತ್ನವು ಯುಕ್ತವಾದೀತೆ? ಮೋಕ್ಷ-ವೆಂಬುದು ಪುರುಷಾರ್ಥವೆಂದಾದರೂ ಹೇಗಾಗಬಲ್ಲದು? ಜ್ಞಾನಜ್ಞೇಯಾದಿಗಳೇ ಇಲ್ಲವೆಂದರೆ ಮೋಕ್ಷವು ಸರ್ವಥಾ ಪುರುಷಾರ್ಥವಾಗಲಾರದು. ಸರ್ವೋ-ಪಾಧಿನಾಶವನ್ನು ಹೇಳುವವರ ಈ ಮತವು ತಮೋನಿಷ್ಠವೇ ಸರಿ.

**ಸಂಸಾರಿಜೀವನು ನಾಲ್ಕು ದೇಹಗಳುಳ್ಳವನು-ಸ್ವರೂಪ ದೇಹ, ಲಿಂಗದೇಹ, ಅನಿರುದ್ಧದೇಹ ಮತ್ತು ಸ್ಥೂಲದೇಹ.** ಇವುಗಳಲ್ಲಿ ನಿತ್ಯವಾದ ಸ್ವರೂಪ ದೇಹವನ್ನು ಬಿಟ್ಟು ಉಳಿದ ಮೂರು ದೇಹಗಳು ಬಾಹ್ಯೋಪಾಧಿಗಳು. ಜೀವಸ್ವರೂಪ ಭೂತವಾದ ಚಿನ್ಮನವು ಭಗವಂತನ ಶಕ್ತಿ ವಿಶೇಷದಿಂದ ಪ್ರೇರಿತ-ವಾಗಿ ಲಿಂಗದೇಹಾದಿಗಳಲ್ಲಿರುವ ಸೂಕ್ಷ್ಮ ಅಚಿನ್ಮನದೊಂದಿಗೆ ಸಂಕ್ರಾಂತವಾಗಿ ಸ್ಥೂಲದೇಹ ಮತ್ತು ತದ್ಗತ ಇಂದ್ರಿಯಗಳ ನಾನಾ ಕಾರ್ಯ ನಿಷ್ಪತ್ತಿಗೆ ಕಾರಣವಾಗುತ್ತದೆ. ಸ್ವರೂಪದೇಹದ ಕವಚಗಳಂತಿರುವ ಬಾಹ್ಯದೇಹಗಳಲ್ಲಿರುವ ಅಂತಃಕರಣಗಳಲ್ಲುಂಟಾಗುವ ಜೀವ ಕ್ರಿಯೆಗಳು ಸ್ವರೂಪಶಕ್ತಿ ಪ್ರೇರಕನಾದ ಬಿಂಬರೂಪೀ ಶ್ರೀ ಹರಿಯ ಪ್ರತಿಬಿಂಬವೇ ಸರಿ. ಈ ಪ್ರತಿಬಿಂಬವು ಎಂದರೆ, ಮನ ಮೊದಲಾದ ಪ್ರಾಕೃತೇಂದ್ರಿಯಗಳದ್ವಾರಾ ನಡೆಯುವ ಜೀವಕ್ರಿಯೆಗಳು

ಅಂತಃಕರಣರೂಪ ಬಾಹ್ಯೋಪಾಧಿಯು ನಾಶವಾದಾಗ ನಷ್ಟ ಹೊಂದುತ್ತದೆ. ಆಗ ಜೀವನು ಕೇವಲ ಸ್ವರೂಪ ಮಾತ್ರದಿಂದ ಸ್ಥಿತನಾಗುವನು. ಮುಕ್ತಿರ್ಹಿತ್ವಾऽನ್ಯಥಾ ರೂಪಂ ಸ್ವರೂಪೇಣ ವ್ಯವಸ್ಥಿತಿಃ ಎಂಬ ಮುಕ್ತಿ ನಿರೂಪಣೆಯು ಹೀಗೆಯೇ ಹೇಳುತ್ತದೆ. ಮತ್ತು ತದಧೀನಸ್ತತ್ಸದೃಶೋ ಹರೇರ್ಜೀವೋ ನ ಸಂಶಯಃ। ಪ್ರತಿಬಿಂಬಸ್ಯ ಶಬ್ದಾರ್ಥೋऽಹ್ಯಯಮೇವ ಉದಾಹೃತಃ।। (ಬ್ರಹ್ಮಕಾಂಡ) ಎಂಬ ಪ್ರಮಾಣವೂ ಇದನ್ನೇ ಸಾಧಿಸುತ್ತದೆ.

ಇನ್ನು, ಅಚೇತನ ಜಗತ್ತು ಈಶನ ಪ್ರತಿಬಿಂಬವೆಂಬ ಪ್ರಕ್ರಿಯೆಯನ್ನು ಗಮನಿಸುವ. ಪ್ರತಿಬಿಂಬನಾದ ಜೀವನಿಗಾದರೋ ಬಿಂಬನಾದ ಶ್ರೀಹರಿಯ ಸಾದೃಶ್ಯವನ್ನು ಜ್ಞಾನಾದಿ ಗುಣಗಳಿಂದ ತಿಳಿಯಬಹುದು. *'ಆನಂದೋ ನೇದೃಶಾನಂದಃ'* ಇತ್ಯಾದಿ ವೇದವಾಕ್ಯಗಳು ಶ್ರೀಹರಿಯ ಅನಾದಿಗುಣಗಳು ಜೀವಗುಣಗಳಿಂದ ಅತ್ಯಂತ ವಿಲಕ್ಷಣವೆಂದು ಸಾರುತ್ತವೆ. ಈ ಗುಣಗಳು ವಿಲಕ್ಷಣಗಳಾದರೂ ಜೀವರಿಗೆ ಕಿಂಚಿತ್ ಸಾದೃಶ್ಯವನ್ನು ತಿಳಿಯಬಹುದು. ಆಕಾರ ಸಾದೃಶ್ಯವು ಜೀವರಲ್ಲಿದೆ. ಪಶು, ಪಕ್ಷಿ, ವೃಕ್ಷ, ಲತೆ, ತೃಣಾದಿಗಳಲ್ಲಿ ಸಹ ಬಿಂಬಾಕಾರದ ಸಾದೃಶ್ಯವಿದೆ. ಭಗವಂತನಲ್ಲಿ ಸರ್ವಾಕಾರಗಳೂ ನಿತ್ಯ ಸಿದ್ಧವಾಗಿರುವುದರಿಂದ ಈ ಸಾದೃಶ್ಯವನ್ನು ಅಂಗೀಕರಿಸಬಹುದು. *'ಭಗವತಿ ಸರ್ವಾಕಾರಾಣಾಂ ನಿತ್ಯಸಿದ್ಧತ್ವಾತ್'* ಮತ್ತು *'ಚಿಚ್ಚೇತ್ಯಮೇತದಖಿಲಂ ಅಂಶಾಂಶ ಪ್ರತಿಬಿಂಬಿತಂ'* (ಸ.ರ.ಮಾ) ಈ ವಾಕ್ಯಗಳಲ್ಲಿ ಪ್ರಸಕ್ತ ಪ್ರಕ್ರಿಯೆಯ ವಿಮರ್ಶೆಯನ್ನು ಕಾಣಬಹುದು. ಭಗವಂತನ ಎಲ್ಲ ಆಕೃತಿಗಳೂ ಸೌಂದರ್ಯ-ಸಾರಗಳೆ ಆಗಿವೆ-ಕುರೂಪದ ಆಕೃತಿಗಳು ಯಾವುವೂ ಇಲ್ಲ. ಜಗತ್ತಿನಲ್ಲಿ ನಾನಾ ಜೀವರು ಹೊಂದಿರುವ ಕುರೂಪಯುಕ್ತ ದೇಹಗಳು-ಅವುಗಳ ಊನ-ಹೀನತ್ವಗಳು ಶ್ರೀಹರಿಯ ಅಧೀನಗಳು ದುಃಖಾದಿಗಳಂತೆ. ಹೀಗೆ ಜಡವಸ್ತು-ಗಳಲ್ಲಿ ಅಧೀನತ್ವದ ಪ್ರಾಧಾನ್ಯದಿಂದ ಶ್ರೀಹರಿಯ ಪ್ರತಿಬಿಂಬವನ್ನು ತಿಳಿಯ-ಬೇಕು. ಜೀವರಂತೆ ಇವುಗಳಿಗೆ ಜ್ಞಾನಾದಿಗುಣಗಳಿಂದ ಸಾದೃಶ್ಯವಿಲ್ಲ. ತಮೋ-ಯೋಗ್ಯ ಜೀವರೂ ಶ್ರೀಹರಿಯ ಪ್ರತಿಬಿಂಬರೇ-ಸತ್ತಾ, ಚೇತನತ್ವ (ಜ್ಞಾನ-ವಸ್ತು ಗ್ರಹಣಶಕ್ತಿ,) ಸುಖ ದುಃಖಾನುಭವದ ಅರ್ಹತೆ ಇತ್ಯಾದಿ ಅಲ್ಪಗುಣಗಳಲ್ಲಿ ಮಾತ್ರ ಅತ್ಯಲ್ಪ ಸಾದೃಶ್ಯವನ್ನು ತಿಳಿಯಬೇಕು.

ಬಿಂಬ-ಪ್ರತಿಬಿಂಬ ಭಾವದ ಈ ಪ್ರಕ್ರಿಯೆಯ ವಿಮರ್ಶೆಯಿಂದ ಶ್ರೀಹರಿಯು, ಜಡಚೇತನಾತ್ಮಕ ಸರ್ವಜಗತ್ತಿನ ಬಿಂಬನೆಂದೂ, *'ತೇನ ವಿನಾ ತೃಣಮಪಿ ನ ಚಲತಿ'* ಎಂಬ ಮೊದಲಾದ ವೇದವಾಕ್ಯಗಳು ಸಾರುವಂತೆ ಶ್ರೀಹರಿಯು, ಸರ್ವಚೇಷ್ಟಾಪ್ರದನಾದ ಸ್ವತಂತ್ರ ಪ್ರಭುವೆಂದೂ ಸರ್ವವಸ್ತು ಸ್ವಭಾವಗಳನ್ನು ಯೋಗ್ಯತೆಗಳನ್ನೂ ತಿಳಿದು ತದನುಸಾರವಾಗಿ ಅವುಗಳನ್ನು ಪ್ರೇರಿಸಿ ಪ್ರವರ್ತಿಸುವ ಸರ್ವಜ್ಞನೆಂದೂ, ಈ ಎಲ್ಲವನ್ನೂ ನಿರ್ವಹಿಸುವ ಅಚಿಂತ್ಯಾದ್ಭುತಶಕ್ತಿಯುತನೆಂದೂ ಸಿದ್ಧವಾಗುತ್ತದೆ.[23]

ಹೀಗೆ ಸರ್ವ ಜಗದಂತರ್ಯಾಮಿಯಾದ ಶ್ರೀಹರಿಯು ಉಚ್ಚ ನೀಚ-ಗಳಾದ ನಾನಾ ವಸ್ತುಗಳ ಬಿಂಬನಾದರೂ ಶ್ರೀಹರಿಯ ಅನಂತರೂಪಗಳಲ್ಲಿ ಯಾವ ಪ್ರಕಾರದ ವಿಶೇಷವೂ ಇರುವುದಿಲ್ಲ. ಎಲ್ಲ ರೂಪಗಳೂ ಸ್ವಾತಂತ್ರ್ಯ, ಸರ್ವಜ್ಞತ್ವಾದಿ ಅನಂತ ಗುಣಪರಿಪೂರ್ಣವಾದವುಗಳೆಂದು ಆಗಮಗಳು ಹೇಳುತ್ತವೆ. ಈ ಎಲ್ಲ ರೂಪಗಳೂ ಪರಸ್ಪರ ಅಭಿನ್ನಗಳೇ. ಶ್ರೀಹರಿಯು ಜಗದ್ರಕ್ಷಣಾರ್ಥವಾಗಿ ನಾನಾ ಅವತಾರಗಳನ್ನು ಎತ್ತುತ್ತಾನೆ. ಪ್ರಸಿದ್ಧ ಮತ್ಸ್ಯಕೂರ್ಮಾದಿ ದಶಾವತಾರಗಳಲ್ಲದೆ ಅಸಂಖ್ಯಾತವಾದ ಅನ್ಯಾವ-ತಾರಗಳೂ ಇವೆ. ಅಲ್ಲದೇ ಮನುಷ್ಯಾದಿ ಪ್ರತಿ ಪ್ರಾಣಿದೇಹಗಳಲ್ಲಿಯೂ ಸಹ ಬಹುರೂಪಗಳಿಂದ ಇದ್ದು ದೇಹೇಂದ್ರಿಯಾದಿಗಳಿಂದ ಆಗುವ ಸಕಲ ವ್ಯಾಪಾರಗಳನ್ನೂ ಅಭಿಮಾನಿ ದೇವತೆಗಳ ದ್ವಾರಾ ಅಂತಸ್ಥನಾಗಿ ನಿಂತು ತಾನೆ ಮಾಡಿಸುತ್ತಾನೆ. ಸಾಧನ ಪರಿಕರಗಳಿಂದ ಪೂರ್ಣವೆನಿಸಿರುವ ಮನುಷ್ಯ ದೇಹವನ್ನು ಉದಾಹರಣೆಗೆ ತೆಗೆದುಕೊಂಡು, ಈ ಪ್ರಕ್ರಿಯೆಯನ್ನು ಲಕ್ಷಿಸಿ, ನಂತರ ವಿಶಾಲ ವಿಶ್ವಕ್ಕೆ ಅನ್ವಯಿಸುವಂತೆ ಹಿಗ್ಗಿಸಿ ತಿಳಿದು ಶ್ರೀಹರಿಯ ಅನಂತಮಹಿಮೆಯನ್ನು ಭಾವಿಸಿ ಆನಂದಿಸಬಹುದು. ತಥಾಹಿ:- **ಜೀವ-ನಿಗಿರುವ ಸ್ವರೂಪ, ಲಿಂಗ, ಅನಿರುದ್ಧ ಮತ್ತು ಸ್ಥೂಲಗಳೆಂಬ ನಾಲ್ಕು ದೇಹಗಳಲ್ಲಿ ಒಂದೊಂದಂಶದಿಂದ ಒಂದೊಂದು ರೂಪದಿಂದ ಶ್ರೀಹರಿಯು ಇದ್ದಾನೆ.**

23. ಜಗತ್ತೆಲ್ಲವೂ ಭಗವಂತನ ಪ್ರತಿಬಿಂಬವೇ ಆದರೂ, ಚೇತನರು ತಾರತಮ್ಯಾನು-ಸಾರವಾಗಿ ತಮಗಿಂತ ಉತ್ತಮರಾದವರ ಪ್ರತಿಬಿಂಬರೂ ಆಗಿರುವರೆಂಬ ಮುಂತಾದ ವಿಶೇಷಗಳನ್ನು ಶಾಸ್ತ್ರಾಭ್ಯಾಸದಿಂದ ತಿಳಿಯಬೇಕು. ಸ್ವೋತ್ತಮರೆಲ್ಲರೂ ಬಿಂಬರೆಂದರೆ ಅಧಮರು (ಕೆಳಗಿನವರು......ಅವರರು) ಉತ್ತಮರ ಅಧೀನರು ಮತ್ತು ಸದೃಶರು ಎಂದರ್ಥ.

ಜೀವಸ್ವರೂಪವನ್ನು ಆಚ್ಛಾದಿಸಿರುವ ಕವಚಗಳಂತೆ ಮೇಲಿರುವ ಮೂರು ದೇಹಗಳಲ್ಲಿ ಸ್ಥಿತವಾದ ಪ್ರಾಕೃತ ಷೋಡಶ ಕಲೆಗಳಲ್ಲಿ ಮತ್ತು ತತ್ತ್ವಗಳಲ್ಲಿ ಪ್ರತಿಯೊಂದರಲ್ಲಿಯೂ ಪ್ರತ್ಯೇಕ ರೂಪಗಳಿಂದ ಇದ್ದಾನೆ. ಸ್ಥೂಲದೇಹ-ಗಳಲ್ಲಿರುವ ಸಪ್ತಧಾತುಗಳು, ಪಂಚಪ್ರಾಣಶಕ್ತಿಗಳು ಮತ್ತು ಅವುಗಳಲ್ಲಿರುವ ಮುಖ್ಯ ಪ್ರಾಣರೂಪಗಳು, ಇವೆಲ್ಲವುಗಳಲ್ಲಿ ಒಂದೊಂದು ರೂಪದಿಂದ ಶ್ರೀಹರಿಯು ಇರುವನು. ದೇಹದಲ್ಲಿರುವ ಎಪ್ಪತ್ತೆರಡು ಸಾವಿರ (೭೨,೦೦೦) ನಾಡಿಗಳಲ್ಲಿ ತದ್ಗತ ಭಾರತೀ ಮುಖ್ಯಪ್ರಾಣರ ಅಂಶಗಳಿಗೆ ನಿಯಾಮಕವಾದ ಶ್ರೀಹರಿಯ ೭೨,೦೦೦ ರೂಪಗಳಿವೆ. ಹೃದಯದಲ್ಲಿ ಮತ್ತು ಸುಷುಮ್ನಾದಿ ಪ್ರಧಾನ ನಾಡಿಗಳಲ್ಲಿ ಸಹ ಶ್ರೀಹರಿಯ ರೂಪಗಳಿವೆ. ದೇಹೇಂದ್ರಿಯಾದಿಗಳಿಂದ ಸಂಭವಿಸುವ ವಿವಿಧ ಕಾರ್ಯಗಳನ್ನು ಅಂತರ್ಯಾಮಿ ರೂಪಗಳಿಂದ ಮಾಡಿಸುವ ವಿವಿಧ ಬಹು ರೂಪಗಳೂ ಇವೆ. ಉದಾಹರಣೆಗಾಗಿ ಪಂಚ-ಪ್ರಾಣರಲ್ಲಿ ಮತ್ತು ನಾಡಿಗಳಲ್ಲಿ ಶ್ರೀಹರಿಯು ನಿಂತು ಮಾಡಿಸುವ ಕೃತಿಗಳನ್ನು ಗಮನಿಸಬಹುದು. *'ಏಷಪ್ರಾಣಃ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ।'* ಮುಖ್ಯ ಪ್ರಾಣನು ಇತರ ಪ್ರಾಣರನ್ನು ದೇಹದಲ್ಲಿ ಬೇರೆ ಬೇರೆ ಸ್ಥಾನಗಳಲ್ಲಿ ಸ್ಥಾಪಿಸುತ್ತಾನೆ; *'ಪಾಯೂಪಸ್ಥೇಽಪಾನಂ ಚಕ್ಷುಃ ಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರತಿಷ್ಠತೇ॥ಮಧ್ಯೇತು ಸಮಾನಃ ಏಷಹ್ಯೇತದ್ಧುತಮನ್ನಂ ಸಮಂ ನಯತಿ । ತಸ್ಮಾದೇತಾಃ ಸಪ್ತಾರ್ಚಿಷೋ ಭವಂತಿ ॥ ಅತ್ರೈತದೇಕ ಶತಂ ನಾಡೀನಾಂ । ತಾಸಾಂ ಶತಂ ಶತಮೇಕ್ಕೈಕಸ್ಯಾಂ ದ್ವಾಸಪ್ತತಿಂ ಪ್ರತಿಶಾಖಾ ನಾಡೀ ಸಹಸ್ರಾಣ್ಯಾ ಸುವ್ಯಾನಶ್ಚರತ್ಯಥೈಕಯೋರ್ಧ್ವ ಮುದಾನಃ । ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮುಭಾ-ಭ್ಯಾಮೇವ ಮನುಷ್ಯ ಲೋಕಂ॥'* (ಷಟ್ಪ್ರಶ್ನೋಪನಿಷತ್) ಗುದಉಪಸ್ಥಗಳಲ್ಲಿ ಅಪಾನನನ್ನೂ, ಕಣ್ಣು ಕಿವಿ ಮುಖ ನಾಸಿಕಗಳಲ್ಲಿ ಪ್ರಾಣನನ್ನೂ, ತನ್ನಾಮಕ ತನ್ನ ರೂಪಗಳಿಂದಲೇ ಪ್ರವೃತ್ತಿಸುತ್ತಾನೆ; ತಿಂದ ಅನ್ನವನ್ನು ಯೋಗ್ಯ ರೀತಿಯಿಂದ ದೇಹದ ನಾನಾ ಭಾಗಗಳಿಗೆ ಮುಟ್ಟಿಸುವುದರಿಂದ ಸಮಾನನೆಂದು ಕರೆಯಲ್ಪಡುವರು ''ಸಮಾನ'' ಪ್ರಾಣನು, ಪ್ರಾಣ ಅಪಾನರ ಮಧ್ಯದಲ್ಲಿ (ನಾಭಿ ಪ್ರದೇಶದಲ್ಲಿ) ಇರುತ್ತಾನೆ. ಸಮಾನನು ಹೀಗೆ ಆಹಾರವನ್ನು ಸಮೀಕರಿಸುವುದರಿಂದ ಏಳು ಜ್ಞಾನೇಂದ್ರಿಯ ವ್ಯಾಪಾರಗಳು ಚಕ್ಷುರಾದಿ ಐದು (೫) ಮನಸ್ಸು ಮತ್ತು ಬುದ್ಧಿ ನಡೆಯುತ್ತವೆ. ದೇಹದಲ್ಲಿ (೧೦೧)

ನೂರೊಂದು ನಾಡಿಗಳಿವೆ. ಒಂದೊಂದರಲ್ಲಿ ನೂರರಂತೆ ಉಪನಾಡಿಗಳಿವೆ. ಒಟ್ಟು ೧೦,೧೦೦ ನಾಡಿಗಳಾದವು. ಇವುಗಳಲ್ಲಿ ೧೦,೦೦೦ ನಾಡಿಗಳಲ್ಲಿ ಪ್ರತಿಯೊಂದರಲ್ಲಿ ಏಳೇಳು ಶಾಖಾ ನಾಡಿಗಳಿವೆ. (೭೦,೦೦೦) ನಾಡಿಗಳಾದವು. ಉಳಿದ ನೂರು ನಾಡಿಗಳಲ್ಲಿ ಪ್ರತಿಯೊಂದರಲ್ಲಿ ಇಪ್ಪತ್ತು (೨೦) ಶಾಖಾ ನಾಡಿಗಳಿವೆ. ಇವು ೨,೦೦೦ ಆದವು. ಹೀಗೆ ಒಟ್ಟು ೭೨,೦೦೦ ನಾಡಿಗಳು ಶರೀರದಲ್ಲೆಲ್ಲ ಹರಡಿಕೊಂಡಿವೆ. ದೇಹದ ಆಯಾ ಭಾಗಕ್ಕೆ ಅವಶ್ಯಕವಾದ ವಿವಿಧ ಅನ್ನರಸಗಳನ್ನು ಈ ನಾಡಿಗಳಲ್ಲಿ ಒಯ್ಯುವವನು ವ್ಯಾನನು. ನಾಡಿಗಳ ಮಧ್ಯದಲ್ಲಿರುವ ಸುಷುಮ್ನಾ ಎಂಬ ಒಂದು ನಾಡಿಯಲ್ಲಿ, ಮೇಲ್ಮುಖವಾಗಿ ಸಂಚರಿಸುವುದರಿಂದ ಉದಾನನೆಂದು ಕರೆಯಲ್ಪಡುವ ಪ್ರಾಣನಿದ್ದಾನೆ. ಈತನು ಜೀವನನ್ನು ಜೀವಕೃತ ಪುಣ್ಯದಿಂದ ಸ್ವರ್ಗಾದಿ ಪುಣ್ಯಲೋಕವನ್ನೂ (ಜ್ಞಾನದಿಂದ ಮೋಕ್ಷವನ್ನೂ) ಪಾಪದಿಂದ ನರಕಾದಿಗಳನ್ನೂ, ಸಮಪಾಪಪುಣ್ಯಗಳಿಂದ ಮನುಷ್ಯ ಲೋಕವನ್ನೂ ಹೊಂದಿಸುತ್ತಾನೆ.[24] *'ತಾನ್ ನಯತಿ ಪ್ರಾಣಃ ಆಜ್ಞಾಪಯತಿ ರಾಜವತ್ । ಸ್ವಯಂ ಚ ಪಂಚರೂಪಸ್ಸನ್ ದದ್ಯಾನ್ಮೋಕ್ಷಾದಿಕಂ ಪ್ರಭುಃ ।'*

---

24. ಷಟ್ ಪ್ರಶ್ನೋಪನಿಷತ್ತು ದೇಹದಲ್ಲಿ ಪ್ರಾಣಾಪಾನರ ಅಧಿಷ್ಠಾನಗಳನ್ನು ಹೇಳಿದರೆ, ಬೃಹದಾರಣ್ಯ ಭಾಷ್ಯದಲ್ಲಿ ಪಂಚಪ್ರಾಣರ ಕಾರ್ಯಗಳನ್ನು ಹೀಗೆ ವಿವರಿಸಲಾಗಿದೆ:-

ತದ್ವಿವೇಕೇ ಧಿಯಂ ಚೈವ ತದಜ್ಞಾನೇ ಭಿಯಂ ತಥಾ
ವಾಚಂ ನಿತ್ಯಂ ತದ್ಗುಣೋಕ್ತೌ ಪ್ರಾಣಂ ತತ್ಕರ್ಮಣಿ ಸ್ಫುಟಮ್ ।
ತದನ್ಯಕರ್ಮ ಸಂತ್ಯಾಗೇ ಚಾಪಾನಂ ವ್ಯಾನಮಸ್ಯ ಚ ।
ವಿರೋಧಿನಾಂ ನಿರಾಸೇ ತಥೋದಾನಂ ಯೋಗಧಾರಣೇ ।
ಮನೋವಾಗಾದೀಂದ್ರಿಯಾಣಾಂ ಸಮಾನಂ ನಿಯಮೇಽತ್ರತು
ಅನ್ನಮುಕ್ತೇಷು ಸುಸ್ಥೈರ್ಯೇ ನರಃ ಕುರ್ಯಾತ್ಸದೈವ ಹಿ ॥

ಎಂದರೆ, ಜೀವೇಶ್ವರ ಭೇದವನ್ನು ಗ್ರಹಿಸಲಿಕ್ಕಾಗಿ (ತದ್ವಿವೇಕೇ) ಬುದ್ಧಿಯನ್ನು ಯೋಜಿಸಬೇಕು; ಶ್ರೀಹರಿಯ ಅಜ್ಞಾನದಲ್ಲಿ ಭಯವಿರಬೇಕು (ಭೇದಜ್ಞಾನವಿಲ್ಲದಿದ್ದರೆ ನರಕಾದ್ಯನರ್ಥವುಂಟೆಂಬ ಭಯವಿರಬೇಕು); ಶ್ರೀಹರಿ ಗುಣಗಳ ಕೀರ್ತನೆಯಲ್ಲಿ ವಾಗಿಂದ್ರಿಯವನ್ನು ವಿನಿಯೋಗಿಸಬೇಕು; ಶ್ರೀಹರಿ ಸೇವಾರೂಪ ಕರ್ಮಗಳಲ್ಲಿ ಪ್ರಾಣನನ್ನೂ, ಅನ್ಯಕರ್ಮಗಳನ್ನು ಬಿಡುವುದರಲ್ಲಿ ಅಪಾನನನ್ನೂ, ಶ್ರೀಹರಿ ವಿರೋಧಿಗಳ ನಿರಾಸಕ್ಕಾಗಿ ವ್ಯಾನನನ್ನೂ, ಯೋಗಾನುಷ್ಠಾನದಲ್ಲಿ ಉದಾನನನ್ನೂ, ಮನಸ್ಸು, ವಾಕ್ ಮೊದಲಾದ ಇಂದ್ರಿಯಗಳನ್ನು ಸನ್ಮಾರ್ಗದಲ್ಲಿಡಲು ಸಮಾನನನ್ನೂ ಶ್ರೀಹರಿಯನ್ನು ಪ್ರಾರ್ಥಿಸಿ ವಿನಿಯೋಗಿಸಿಕೊಳ್ಳಬೇಕು. ಹೀಗಾದರೆ ಪ್ರಾಣರ ಕ್ರಿಯೆಗಳು ವಿಷ್ಣ್ವನ್ನಗಳಾಗುತ್ತವೆ.

ಪ್ರಾಣಾದಿಗಳನ್ನು ಪ್ರವೃತ್ತಿಗೊಳಿಸುವ ಮುಖ್ಯಪ್ರಾಣನು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನರೆಂಬ ಐದು ಪ್ರಾಣರಲ್ಲಿ ಅದೇ ನಾಮದ ಐದು ರೂಪಗಳಿಂದ ಇದ್ದು ರಾಜನಂತೆ ಆಜ್ಞಾಪಿಸುತ್ತಾನೆ ಮತ್ತು ಮೋಕ್ಷಾದಿ ಪುರುಷಾರ್ಥಗಳನ್ನೂ ಕೊಡುತ್ತಾನೆ. ಈ ಮುಖ್ಯಪ್ರಾಣನಿಗೂ ಪ್ರಾಣಶಬ್ದ ಮುಖ್ಯವಾಚ್ಯನಾದ ವಿಷ್ಣುವೇ ಪ್ರೇರಕನಾಗಿ ನಿಂತು ಎಲ್ಲವನ್ನೂ ಮಾಡಿಸುತ್ತಾನೆ. ಜಗತ್ತಿನ ಸೃಷ್ಟ್ಯಾದಿ ಕಾರ್ಯಗಳನ್ನು ಶ್ರೀಹರಿಯು ಸರ್ವತ್ರ ಲಕ್ಷ್ಮೀ ಮುಖ್ಯಪ್ರಾಣರಿಂದ ಸಹಿತನಾಗಿಯೇ ನಡೆಸುತ್ತಾನೆ. ಜಗತ್ಸಂಬಂಧವಾದ ಎಲ್ಲ ಕರ್ಮಗಳನ್ನೂ ಸ್ವತಂತ್ರ ಕರ್ತನಾದ ನಾರಾಯಣನೊಬ್ಬನ ಅಧೀನನಾಗಿ ಮುಖ್ಯ ಪ್ರಾಣನು ತಾನೂ ನಿರ್ವಹಿಸುತ್ತಾನೆ. *'ಯಾನಿಯಾನೀಹ ಕರ್ಮಾಣಿ ಜಗತಿ ಸೂರ್ಯಮಾಪತೇಃ। ಪ್ರಾಯಃ ಪ್ರಾಣಾಧಿಪೇತಾನಿ ಸಮಸ್ತಾನಿ ನ ಸಂಶಯಃ॥'* (ಸ.ರ.ಮಾ.) ಹೀಗೆ ಪರಮಾತ್ಮನೊಂದಿಗೆ ಸರ್ವಕರ್ತನಾದ ಮುಖ್ಯಪ್ರಾಣನು ಸಕಲೇಂದ್ರಿಯಗಳನ್ನೂ, ಇಂದ್ರಿಯಾಭಿಮಾನಿ ದೇವತೆ-ಗಳನ್ನೂ ನಿಯಮನ ಮಾಡುತ್ತಾನೆ. ಮುಖ್ಯಪ್ರಾಣನು ಸರ್ವಪ್ರಾಣಿ ದೇಹ-ಗಳಲ್ಲಿದ್ದು ಶ್ವಾಸನಿಯಾಮಕನಾಗಿ ಹಂಸಮಂತ್ರವನ್ನು ಜಪಿಸಿ ಶ್ರೀಹರಿಯಲ್ಲಿ ಅರ್ಪಿಸುತ್ತಾನೆ. ಸಕಲ ಇಂದ್ರಿಯಾಭಿಮಾನಿ ದೇವತೆಗಳ ಅಂತರ್ಯಾಮಿ-ಯಾಗಿದ್ದು ಸರ್ವಚೇಷ್ಟಕನೂ ಆಗಿದ್ದಾನೆ. ಅತಏವ ಜಗತ್ ಪ್ರಾಣನೆಂದೂ (ಜಗಜ್ಜೀವನನೆಂದೂ) ಆಗಮಗಳಲ್ಲಿ ಪ್ರಸಿದ್ಧನಾಗಿದ್ದಾನೆ. ಪ್ರಾಣಿ ದೇಹಗಳಲ್ಲಿ ಮಾತ್ರವಲ್ಲ, ಇಡೀ ವಿಶ್ವದಲ್ಲಿ ಸರ್ವತ್ರ ಇದ್ದು ಸರ್ವಕಾರ್ಯಗಳನ್ನೂ ನಿರ್ವಹಿಸುತ್ತಾನೆ. ವಿವಹ, ಆವಹ ಮೊದಲಾದ ವಾಯುಗಳಲ್ಲಿ ತನ್ನಾಮಕ-ನಾಗಿ ಪ್ರತ್ಯೇಕ ರೂಪಗಳಿಂದ ಬ್ರಹ್ಮಾಂಡದ ಖರ್ಪರದವರೆಗೆ ವಿಸ್ತಾರವಾಗಿ ವ್ಯಾಪಿಸಿರುವ ಅಂಡೋದಕದಲ್ಲಿ ಕೂರ್ಮರೂಪದಿಂದಿದ್ದು ಲೋಕಗಳನ್ನೂ, ಗ್ರಹನಕ್ಷತ್ರಾದಿಗಳನ್ನೂ, ಶೇಷದೇವರಿಂದ ಸಹಿತವಾದ ಬ್ರಹ್ಮಾಂಡವನ್ನು ಧರಿಸಿದ್ದಾನೆ. ಸರ್ವರ ಜಾಗ್ರದಾದಿ ಅವಸ್ಥೆಗಳ ನಿಯಾಮಕನೂ ಆಗಿದ್ದಾನೆ. ರಮಾ ನಾರಾಯಣರನ್ನು ಬಿಟ್ಟು ಮುಖ್ಯ ವೃತ್ತಿಯಿಂದ ಸರ್ವವೇದ ಪ್ರತಿಪಾದ್ಯನಾಗಿದ್ದಾನೆ-ಇತರ ದೇವತೆಗಳಂತೆ ಕೆಲಕೆಲವು ವೇದಭಾಗಗಳಿಂದ ಮಾತ್ರ (ಅಗ್ನ್ಯಾದಿಗಳಂತೆ) ಪ್ರತಿಪಾದ್ಯನಲ್ಲ. ಈ ವಿಧವಾದ ಅದ್ಭುತ ಮಹಿಮೋಪೇತನಾದ ಮುಖ್ಯಪ್ರಾಣನು ಜಗತ್ಸಂಬಂಧವಾದ ಸೃಷ್ಟ್ಯಾದಿ ಸಕಲ ಕರ್ಮಗಳನ್ನೂ ಶ್ರೀಹರಿಯೊಂದಿಗೆ ತಾನೂ ಮಾಡುತ್ತಾನೆ. ಈ

ಕಾರ್ಯಗಳಲ್ಲಿ ನಾರಾಯಣನ ನಿತ್ಯಭಾರ್ಯಳಾದ ಶ್ರೀ ಮಹಾಲಕ್ಷ್ಮೀಯು, ಅವಿಯೋಗಿನಿಯಾದುದರಿಂದ ತಾನೂ ಜೊತೆಯಲ್ಲಿಯೇ ಇದ್ದು ತನ್ನ ಪತಿಯ ಆಜ್ಞಾನುಸಾರ ವರ್ತಿಸುತ್ತಾಳೆ. ಬ್ರಹ್ಮ, ವಾಯು, ಶೇಷ, ಗರುಡ, ರುದ್ರ, ಇಂದ್ರ, ಸೂರ್ಯ, ಚಂದ್ರ ಇವರೇ ಮೊದಲಾದ ದೇವತೆಗಳು–ಈಗಿರುವವರು ಮಾತ್ರವಲ್ಲ, ಹಿಂದೆ ಆ ಪದವಿಯಲ್ಲಿ ಇದ್ದು ಹೋದವರು ಮತ್ತು ಮುಂದೆ ಬರುವವರು ಸಹ ತಮ್ಮ ಪದವಿಗಳನ್ನೂ ಅವುಗಳ ಅಧಿಕಾರವನ್ನು ನಿರ್ವಹಿಸಲು ಅವಶ್ಯಕವಾದ ಕರ್ತೃತ್ವ ಸಾಮರ್ಥ್ಯವನ್ನೂ, ಅನಂತಾಂಶಗಳಿಂದ ಅನಂತ ಜೀವಶರೀರಗಳಲ್ಲಿ ನಿಯಾಮಕರಾಗಿ ಕೆಲಸ ಮಾಡುವ ಶಕ್ತಿಯನ್ನೂ, ಪ್ರಕೃತಿ ಮೊದಲಾದ ತತ್ವಗಳಿಗೆ ಅಭಿಮಾನಿಗಳಾಗುವ ಮಹಿಮೆಯನ್ನೂ, ಜ್ಞಾನ ಭಕ್ತ್ಯಾದಿ ಮಹಿಮೆಗಳನ್ನೂ, ಮುಕ್ತಿಯನ್ನೂ, ಮುಕ್ತಿಯಲ್ಲಿ ಆನಂದಾತಿ-ಶಯವನ್ನೂ ಶ್ರೀಮಹಾಲಕ್ಷ್ಮೀಯ ಕಟಾಕ್ಷಲೇಶದಿಂದ ಹೊಂದುವರೆಂದು ವೇದಾದಿ ಆಗಮಗಳು ಘೋಷಿಸುತ್ತವೆ. *'ನಾರಾಯಣೋ ನಾಮ ಹರಿಃ ಸ್ವತಂತ್ರಃ ಶ್ರಿಯಂ ವಿನಾ ನಾಸ್ತಿ ಕದಾಪಿಕಾಲೇ । ಹರಿಂ ವಿನಾ ಶ್ರೀರಪಿ ದೇಶಕಾಲೇ ನಾಸ್ತೀತಿ ಮೋಕ್ಷೇಚ್ಛುಭಿರ್ವೇದಿತವ್ಯಂ ॥'* (ಬ್ರಹ್ಮಕಾಂಡ) ಇತ್ಯಾದಿ ಪ್ರಮಾಣಗಳು ಶ್ರೀಲಕ್ಷ್ಮೀದೇವಿಯನ್ನು ದೇಶಕಾಲಗಳಿಂದ ಸಮಾನ ವ್ಯಾಪ್ತಿಯುಳ್ಳ ಶ್ರೀ ನಾರಾಯಣನ ನಿತ್ಯಾವಿಯೋಗಿನಿಯಾದ ಭಾರ್ಯಳೆಂದು ಹೇಳುತ್ತವೆ. *'ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ'* ಎಂಬ (ವೇದಾಂತ) ಸೂತ್ರವೂ ಇದೇ ನಿರ್ಣಯವನ್ನು ಹೇಳುತ್ತದೆ.

**ದ್ವಾಸಪ್ತತಿ ಸಹಸ್ರಾಣಿ ರೂಪಾಣ್ಯೇವಂ ರಮಾಪತೇಃ ।**
**ಶತಾಬ್ದಾನಾಂ ಅಹೋರಾತ್ರ ದೈವತಾನ್ಯುತ್ತಮಾನಿ ಚ ॥**

**ಬೃಹತೀ ಸಹಸ್ರವರ್ಣಾನಾಮಪಿ ಧ್ಯಾತ್ವಾಽಖಿಳಾನ್ಯಪಿ ।**
**ಶತವರ್ಷ ಹರಿಧ್ಯಾನ ಫಲಮಾಪ್ನೋತಿ ಪೂರುಷಃ ॥**

**ದ್ವಾಸಪ್ತತಿಸಹಸ್ರಾಣಿ ರೂಪಾಣಿ ಹಿ ರಮಾಪತೇಃ ।**
**ಬೃಹತೀ ಸಹಸ್ರ ಸಂಸ್ಥಾನಿ ಸ್ವರವ್ಯಂಜನ ಭೇದತಃ ॥**
**ತಾನ್ಯೇವ ಪುರುಷಸ್ಥಾನಿ......................(ಐ. ಭಾಷ್ಯ)**

(ಈ ಮೊದಲಾದ ವಾಕ್ಯಗಳು ೭೨,೦೦೦ ಪುರುಷ ದೇಹಗತ ನಾಡಿಗಳಲ್ಲಿ ೭೨,೦೦೦ ರೂಪಗಳಿಂದ ರಮಾಸಮೇತನಾಗಿ ನಾರಾಯಣನು ಇರುವನೆಂದು ಹೇಳುತ್ತವೆ. ಬೃಹತೀ ಛಂದಸ್ಸಿನ ಒಂದು ಋಕ್ಕಿನಲ್ಲಿ ೩೬ ಅಕ್ಷರಗಳು ಇರುತ್ತವೆ. ಈ ಛಂದಸ್ಸಿನ ೧,೦೦೦

ಋಕ್ಕುಗಳಲ್ಲಿ ೩೬,೦೦೦ ವರ್ಣಗಳಿದ್ದು ಸ್ವರವ್ಯಂಜನ ಭೇದದಿಂದ (ಕ=ಕ್ + ಅ) ೭೨,೦೦೦ ವರ್ಣಗಳಿಗೆ ಮುಖ್ಯಾಭಿಮಾನಿಗಳೆನಿಸುವ ರಮಾನಾರಾಯಣರ ೭೨,೦೦೦ ರೂಪಗಳಿವೆ. ಒಂದು ನೂರು ವರ್ಷಗಳ ಅಹೋರಾತ್ರಿಗಳಿಗೆ (೩೬,೦೦೦ ಹಗಲು ೩೬,೦೦೦ ರಾತ್ರಿ) ಈ ರೂಪಗಳು ನಿಯಾಮಕಗಳೆಂದು ಧ್ಯಾನಿಸಬೇಕು. ಈ ಧ್ಯಾನಾಧಿಕಾರಿಯು ಹೀಗೆ ಧ್ಯಾನಿಸಿ ಒಂದು ನೂರು ವರ್ಷಕಾಲ ಹರಿಧ್ಯಾನ ಮಾಡಿದ ಫಲವನ್ನು ಹೊಂದುತ್ತಾನೆ. *'ದ್ವಾಸಪ್ತತಿ ಸಹಸ್ರಾಣಿ ತಾನ್ಯೇವಾಹರ್ನಿಶಾಸು ಚ । ವಿಷ್ಣು ರೂಪಾಣಿ ಸೂರ್ಯೇಽಪಿ ತ್ವಹೋರಾತ್ರಂ ಹಿ ಸೂರ್ಯಗಮ್ ॥'* ಎಂಬಲ್ಲಿ ಹಗಲು ರಾತ್ರಿಗಳು ಸೂರ್ಯಗತಿ ನಿಯತವಾದುದರಿಂದ ಇವೇ ೭೨,೦೦೦ ವಿಷ್ಣುರೂಪಗಳು ಸೂರ್ಯನಲ್ಲಿಯೂ ಇವೆ).

ಸೂರ್ಯಗತ ಈ ವಿಷ್ಣುರೂಪಗಳೇ ಪುರುಷ ದೇಹದ ನಾಡಿಗಳಲ್ಲಿಯೂ ಇವೆ. ಬೃಹತೀ ಸಹಸ್ರವು ಮುಖ್ಯಪ್ರಾಣನ ಪ್ರತಿಮೆಯೆನಿಸಿದೆ. **ಮುಖ್ಯಪ್ರಾಣನು ಶ್ರೀಹರಿಯ ಮುಖ್ಯ ಅಧಿಷ್ಠಾನನಾದುದರಿಂದ ಈ ನಾಡಿಗಳಲ್ಲಿ ಸಹ ಮುಖ್ಯ ಪ್ರಾಣನ ರೂಪಗಳಿವೆ.** ಇಂದ್ರಿಯಾಭಿಮಾನಿ ದೇವತೆಗಳೇ (ಸೂರ್ಯಾದಿಗಳೇ) ಶ್ರೀಹರಿಯ ವಿಶೇಷಾನುಗ್ರಹ ಬಲದಿಂದ ಅನಂತಾಂಶಗಳಿಂದ ಪ್ರತಿ ಪ್ರಾಣಿ ದೇಹದಲ್ಲಿದ್ದು ಪ್ರೇರಕರಾಗಿರುವಾಗ ಅವರಿಗೆ ಈ ಶಕ್ತಿಯನ್ನಿತ್ತು, ಅವರಲ್ಲಿ ನಿಂತು ವಿಶ್ವವನ್ನೇ ಚೇಷ್ಟಿಸುವ ಶ್ರೀಹರಿಯು ಅನಂತರೂಪಿಯಾಗಿದ್ದನೆಂಬುದು ಯಾವ ಪ್ರಕಾರದಿಂದಲೂ ಯುಕ್ತಿ ವಿರುದ್ಧವಲ್ಲ. ತತ್ತ್ವಾಭಿಮಾನಿ ದೇವತೆಗಳ ಮಹಿಮೋಪೇತ ಲಕ್ಷಣಗಳನ್ನು ಶಾಸ್ತ್ರಗಳಲ್ಲಿ ಹೀಗೆ ವರ್ಣಿಸಲಾಗಿದೆ:- *'ಪಾರೋಕ್ಷ್ಯಾಚ್ಚ ತು ಪೂರ್ಣಂ ಸ್ಯಾತ್ತೇಷಾಂ ಜ್ಞಾನಂ ಸದೈವ ಹಿ । ವಿಶೇಷಣಾ ಪರೋಕ್ಷ್ಯಾಚ್ಚ ಕ್ರಮಾದ್ವೃದ್ಧಿರಿತೀರಿತಾ ॥' ಅನಾದಿತೋಽಪ್ಯಾಪರೋಕ್ಷ ಯುಕ್ತಾ ರೂಪೇಷು ಚ ಕ್ವಚಿತ್।* ಋಜು ಮೊದಲಾದ ತಾತ್ತ್ವಿಕ ದೇವತೆಗಳು ಅನಾದಿ ಕಾಲದಿಂದ ಸಾಮಾನ್ಯಾಪರೋಕ್ಷವುಳ್ಳವರು. ಪರೋಕ್ಷ ಜ್ಞಾನದಿಂದ ಸದಾ ಪೂರ್ಣರು. ಭಗವದಪರೋಕ್ಷವು ಸಾಧನಾ ನಂತರದಲ್ಲಿ ಹೆಚ್ಚು ಸ್ಪಷ್ಟವಾಗುತ್ತಾ ಅವರವರ ತಾರತಮ್ಯಾನುಸಾರವಾಗಿ ಅಧಿಕ ಭಗವದ್ರೂಪಗಳ ಅಪರೋಕ್ಷದಿಂದ ವೃದ್ಧಿ ಹೊಂದುತ್ತದೆ. ಈ ಅಭಿಪ್ರಾಯವನ್ನೇ ಶ್ರೀ ಜಗನ್ನಾಥ ದಾಸರು ಹರಿಕಥಾಮೃತಸಾರದಲ್ಲಿ ಹೀಗೆ ನಿರೂಪಿಸಿದ್ದಾರೆ:- ಸಾಧನಾ-ಪೂರ್ವದಲ್ಲಿ ಈ ಋಜ್ವಾದಿ ತಾತ್ವಿಕರೆನಿಪ ಸುರಗಣ ಅನಾದಿ ಸಾಮಾನ್ಯಾ-ಪರೋಕ್ಷಿಗಳೆಂದು ಕರೆಸುವರು ಇತ್ಯಾದಿ.[25] ಈ ವಿಧ ಮಹಾಮಹಿಮರಾದ

25. ಪೃಥಿವ್ಯಾದ್ಯಭಿಮಾನಿನ್ಯೋ ದೇವತಾಃ ಪ್ರಥಿತೌಜಸಃ ।

ತಾತ್ವಿಕ ದೇವತೆಗಳಲ್ಲಿ ಸಹ ಅಂತರ್ನಿಯಾಮಕನಾಗಿದ್ದು ಅವರಿಂದಾಗುವ (ಆಗಬೇಕಾದ) ಸರ್ವಕಾರ್ಯಗಳನ್ನು ಮಾಡಿ ಮಾಡಿಸುವ ಮುಖ್ಯಪ್ರಾಣನ ಮಹಿಮೆಯು ಅಚಿಂತ್ಯವಾದುದೇ ಸರಿ. ಈತನಿಂದ (ಮುಖ್ಯಪ್ರಾಣನಿಂದ) ಕೋಟಿ ಗುಣಾಧಿಕಳೂ, ನಿತ್ಯಮುಕ್ತಳೂ, ಶ್ರೀಹರಿಯಲ್ಲಿ ನಿತ್ಯನೂತನ ಗುಣವಿಶೇಷಗಳನ್ನು ಕಾಣುತ್ತಿರುವಳೂ ಆದ ಶ್ರೀಮಹಾಲಕ್ಷ್ಮೀಯು, ಮುಖ್ಯ ಪ್ರಾಣನಲ್ಲಿ ಶ್ರೀಹರಿಯೊಂದಿಗೆ ನಿಂತು ಜಗತ್ಸಂಬಂಧವಾದ ಸರ್ವಚೇಷ್ಟೆಗಳಿಗೂ ಕಾರಣಳಾಗಿದ್ದಾಳೆ. ಹೀಗೆ ಮುಖ್ಯಪ್ರಾಣನೂ ರಮಾನಾರಾಯಣರೂ ವಿಶ್ವಚೇಷ್ಟಕರಾಗಿರುವವರು - ತಾತ್ವಿಕದೇವತೆಗಳೇ ಮೊದಲಾದ ಇತರರು ಏಕದೇಶಮಾತ್ರ ಪ್ರೇರಕರಾಗಿ ಭಗವದಾಜ್ಞಾಧಾರಕರಾಗಿ ತಮ್ಮ ಭಾಗದ ಕರ್ತವ್ಯಗಳನ್ನು ನಿರ್ವಹಿಸಿ, ತಮ್ಮ ಗತಿಗಳನ್ನು ಸಾಧಿಸಿಕೊಳ್ಳುತ್ತಾರೆ.

ಈಶ್ವರನು ಜಡವಿಶ್ವದ ಸ್ವತಂತ್ರನಿಯಾಮಕನೂ ಆಗಿದ್ದಾನೆ. ಸಕಲ ಜಗದ್ವಸ್ತುಗಳಲ್ಲಿದ್ದು ಆಯಾ ವಸ್ತುಗಳ ಅಸ್ತಿತ್ವವನ್ನೂ, ಅವುಗಳ ಸ್ವಾಭಾವಿಕ ಗುಣಧರ್ಮಗಳನ್ನೂ ರಕ್ಷಿಸುತ್ತಾನೆ. ಪ್ರಕೃತಿ, ಪ್ರಾಕೃತ ತತ್ವಗಳಿಂದ-ಪಂಚಭೂತಾದಿಗಳಿಂದ ನಿರ್ಮಿತವಾದವು, ಬ್ರಹ್ಮಾಂಡ ಮತ್ತು ತದ್ಗತ ಅನಂತ ವಸ್ತುಗಳು; ಈ ಎಲ್ಲವುಗಳಲ್ಲಿ ತದಾಕಾರನಾಗಿ ತನ್ನಾಮಕನಾಗಿ ಆ ಎಲ್ಲದರ ಸ್ಥಿತಿ-ಲಯಗಳನ್ನು ಹಾಗೂ ಅವುಗಳಿಂದಾಗಬೇಕಾದ (ಆಯಾಕಾಲದ ಸಮಸ್ತ ಕಾರ್ಯಗಳನ್ನು, ತಾನೇ ನಿರ್ವಹಿಸುತ್ತಾನೆ. ಸಕಲ ವಸ್ತುಗಳ ನಾಮರೂಪಗಳ ನಿಯಾಮಕನೂ ಆತನೇ. ಶ್ರೀಹರಿಯು, ಸರ್ವರೂಪನು, ಸರ್ವನಾಮನು-ಸರ್ವ ಶಬ್ದವಾಚ್ಯನು. ಸರ್ವವಸ್ತುಗತ ಸದ್ಗುಣಸ್ವರೂಪನು-ದೋಷಗಳೆಲ್ಲವೂ

---

ಅಚಿಂತ್ಯಾಃ ಶಕ್ತಯಸ್ತಾಸಾಂ ದೃಶ್ಯಂತೇ ಮುನಿಭಿಶ್ಚ ತಾಃ ।
ತಾಶ್ಚ ಸರ್ವಗತಾನಿತ್ಯಂ ವಾಸುದೇವೈಕ ಸಂಶ್ರಯಾಃ ॥ (ಭಾಷ್ಯ-ಅಭಿಮಾನ್ಯಧಿಕರಣ)

- ಪೃಥಿವ್ಯಾದಿ ತತ್ವಗಳ ಅಭಿಮಾನಿ ದೇವತೆಗಳು ಅಪಾರ ಸಾಮರ್ಥ್ಯವುಳ್ಳವರು; ಇವರ ಕಾರ್ಯಶಕ್ತಿಗಳು (ಮಾನವರಿಂದ) ಅಚಿಂತ್ಯವಾದವುಗಳು; ತಮ್ಮಿಂದ ಅಭಿಮನ್ಯವಾದ ತತ್ವಗಳಿರುವಲ್ಲೆಲ್ಲಾ (ಸರ್ವತ್ರ) ಇರುವ ಇವರನ್ನು ಋಷ್ಯಾದಿ ಜ್ಞಾನಿಗಳು ಕಾಣುತ್ತಾರೆ; ಈ ಎಲ್ಲರೂ ಮುಖ್ಯವಾಗಿ ವಾಸುದೇವನನ್ನೇ ಆಶ್ರಯಿಸಿರುವರು. ಹೀಗೆ ತಾತ್ವಿಕ ದೇವತೆಗಳ ಮಹಿಮೆಯು ವರ್ಣಿತವಾಗಿದೆ.

ಆತನ ಇಚ್ಛಾಧೀನಗಳು. ವಸ್ತುಗಳ ಸ್ವಭಾವ ಸಿದ್ಧವಾದ ಅನಾದಿ ನಿತ್ಯ ಗುಣ-ದೋಷಗಳನ್ನು ವ್ಯತ್ಯಸ್ತವಾಗದಂತೆ ರಕ್ಷಿಸುವನು; ಆದ್ದರಿಂದಲೇ ಸರ್ವ-ಸಮನು. ಹೀಗಿರಬೇಕೆಂಬುದೇ ಆತನ ಸಂಕಲ್ಪವು - ಆತನು ಸತ್ಯಸಂಕಲ್ಪನು - ಅದೆಂದಿಗೂ ಅನ್ಯಥಾ ಆಗುವುದೇ ಇಲ್ಲ.

ಶ್ರೀಹರಿಯ ಸ್ಥಿತಿಕರ್ತೃತ್ವರೂಪ ಮಹಿಮೆಯು ಹೀಗೆ ಅತ್ಯದ್ಭುತ-ವಾದುದು. ಪ್ರಸಂಗತ್ವೇನ, ಸ್ಥಿತಿಕರ್ತೃತ್ವದಿಂದ ಅವಿನಾಭೂತವಾದ (ಒಂದಿಗೆ ಕೂಡಿಕೊಂಡಿರುವ) ನಿಯಮನ ಕರ್ತೃವೂ ಈ ಪರಿಚ್ಛೇದದಲ್ಲಿ ಸಾಕಷ್ಟು ವಿಸ್ತರಿಸಲಾಗಿದೆ. ಸ್ವತಂತ್ರ ಸರ್ವನಿಯಾಮಕನೇ ಸರ್ವಪ್ರಕಾರದಿಂದ ಸರ್ವ ರಕ್ಷಕನೂ ಆಗಿರಬಹುದಷ್ಟೆ. ಸೃಷ್ಟ್ಯಾದಿ ಕರ್ಮಗಳಿಂದ ನಿರ್ಲಿಪ್ತನಾದ ಶ್ರೀಹರಿಯು ತನ್ನಿಂದಲೇ ಸೃಷ್ಟವಾದ ಸಕಲ ವಿಶ್ವವನ್ನು ಲಯಗೊಳಿಸುವ ಪ್ರಕಾರವನ್ನು ಈ ಮುಂದೆ ವಿವರಿಸಲಾಗುತ್ತದೆ.

## ಪರಿಚ್ಛೇದ ೩

## ಪ್ರಳಯಕಾರಕ - ಶ್ರೀಹರಿ

ನಿತ್ಯತೃಪ್ತನೂ ಆನಂದಪೂರ್ಣನೂ ಅಪಾರ ಮಹಿಮನೂ ಸರ್ವೋತ್ತಮನೂ ಆದ ಶ್ರೀಹರಿಗೆ ಈ ವಿಶ್ವದ ಸೃಷ್ಟಿ ಸ್ಥಿತ್ಯಾದಿಗಳಿಂದ ಯಾವ ಸ್ವಪ್ರಯೋಜನವೂ ಇಲ್ಲದಿರುವಂತೆ, ಪ್ರಳಯಕಾಲದಲ್ಲಿ ಎಲ್ಲವನ್ನೂ ಲಯಗೊಳಿಸಿ ತನ್ನ ಉದರ-ದಲ್ಲಿಟ್ಟುಕೊಳ್ಳುವುದರಿಂದ ಸಹ ಯಾವ ಪ್ರಯೋಜನವೂ ಇರುವುದಿಲ್ಲ. ಆತನು ಲೀಲೆಯಿಂದ ನಡೆಯಿಸುವ ಸೃಷ್ಟ್ಯಾದಿ ಕರ್ಮಗಳಿಂದ ಸದಾ ನಿರ್ಲಿಪ್ತನೇ ಆಗಿರುವನು. ಅವು ಯಾವುವೂ ಅವನ ಸುಖಾಧಿಕ್ಯಕ್ಕೆ ಕಾರಣವಲ್ಲ-ದುಃಖಕ್ಕಂತೂ ಎಷ್ಟುಮಾತ್ರವೂ ಕಾರಣಗಳಲ್ಲ. ''**ಮಳಲ ಮನೆಗಳಮಾಡಿ ಕೆಲವು ಕಾಲದಲಾಡಿ ಮಕ್ಕಳು ತುಳಿದು ಕೆಡಿಸುವ ತೆರದಿ ಈ ಲೋಕಗಳ**'' ಎಂದು ಶ್ರೀ ಜಗನ್ನಾಥದಾಸಾರ್ಯರು ಶ್ರೀಹರಿಯ ಈ ನಿರ್ಲಿಪ್ತತೆಯನ್ನು ವರ್ಣಿಸಿರುವರು.

ಪ್ರಳಯವೆಂಬುದು ನಿತ್ಯ, ನೈಮಿತ್ತಿಕ, ಪ್ರಾಕೃತಿಕ ಮತ್ತು ಆತ್ಯಂತಿಕವೆಂದು ನಾಲ್ಕು ಪ್ರಕಾರವೆಂದು ಭಾಗವತಾದಿಗಳಲ್ಲಿ ವರ್ಣಿತವಾಗಿದೆ.[26] ಜಗತ್ತಿನಲ್ಲಿ ಪ್ರತಿಕ್ಷಣದಲ್ಲಿಯೂ ಅನೇಕ ಪ್ರಾಣಿಗಳು ಹುಟ್ಟುತ್ತವೆ, ಹಾಗೂ ಮರಣ-ಹೊಂದುತ್ತವೆ. ಮೃತರಾದ ಆ ಪ್ರಾಣಿದೇಹಗಳು ಯಥಾಯೋಗ್ಯ ಸಂಸ್ಕಾರದಿಂದ ಪಂಚಭೂತಗಳಲ್ಲಿ ಲೀನವಾಗುತ್ತವೆ. ಹೀಗೆ ಪ್ರತಿನಿತ್ಯವೂ ನಡೆದಿರುವ ವಿನಾಶವು **ನಿತ್ಯಪ್ರಳಯ**ವೆಂದು ಕರೆಯಲ್ಪಡುತ್ತದೆ.[27]

ಮನುಷ್ಯರ ಒಂದು ವರ್ಷಕಾಲವು ದೇವತೆಗಳ ಒಂದು ದಿನ. ದೇವಮಾನದಿಂದ ಕಲಿಯುಗವು ಒಂದು ಸಾವಿರವರ್ಷ ಮಿತಿಯುಳ್ಳದ್ದು. ದ್ವಾಪರಯುಗವು ಅದೇ ದೇವಮಾನದಿಂದ ಎರಡುಸಾವಿರ (೨೦೦೦) ವರ್ಷ, ತ್ರೇತಾಯುಗವು ಮೂರುಸಾವಿರ (೩೦೦೦) ವರ್ಷ, ಕೃತಯುಗವು ನಾಲ್ಕುಸಾವಿರ (೪೦೦೦) ವರ್ಷ. ಈ ನಾಲ್ಕು ಯುಗಗಳ ಮಧ್ಯದ ಸಂಧಿ ಕಾಲವು ದೇವಮಾನದಿಂದ ಒಟ್ಟು ಎರಡುಸಾವಿರ (೨೦೦೦) ವರ್ಷ. ಹೀಗೆ ಸಂಧಿಕಾಲ ಸಮೇತವಾದ ಚತುರ್ಯುಗಗಳಿಗೆ ಒಟ್ಟು ಹನ್ನೆರಡುಸಹಸ್ರ (೧೨೦೦೦) ವರ್ಷಗಳಾಗುತ್ತವೆ. ಚತುರ್ಯುಗವನ್ನು ಮಹಾಯುಗವೆಂದೂ ಕರೆಯುವುದುಂಟು. ಒಂದು ಸಾವಿರ (೧೦೦೦) ಮಹಾಯುಗಗಳಿಗೆ ಸತ್ಯಲೋಕಾಧಿಪತಿಯಾದ ಚತುರ್ಮುಖಬ್ರಹ್ಮನ ಒಂದು ಹಗಲು. ಇದೇ

---

26. ನಿತ್ಯೋ ನೈಮಿತ್ತಿಕಶ್ಚೈವ ತಥಾ ಪ್ರಾಕೃತಿಕೋ ಲಯಃ ।
ಆತ್ಯಂತಿಕಶ್ಚ ಕಥಿತಃ ಕಾಲಸ್ಯ ಗತಿರೀದೃಶೀ ॥
– ನಿತ್ಯ, ನೈಮಿತ್ತಿಕ, ಪ್ರಾಕೃತಿಕ ಮತ್ತು ಆತ್ಯಂತಿಕವೆಂಬ ನಾಲ್ಕು ವಿಧ ಲಯವು ಹೇಳಲ್ಪಟ್ಟಿತು ಕಾಲದ ಗತಿಯು ಈ ಪ್ರಕಾರವಾದುದು.

27. ನಿತ್ಯದಾ ಸರ್ವಭೂತಾನಾಂ ಬ್ರಹ್ಮಾದೀನಾಂ ಪರಂತಪ ।
ಉತ್ಪತ್ತಿ ಪ್ರಲಯಾವೇಕೇ ಸೂಕ್ಷ್ಮಜ್ಞಾಃ ಸಂಪ್ರಚಕ್ಷತೇ ॥
– ಬ್ರಹ್ಮನಿಂದ ಸೃಷ್ಟವಾದ ಸಕಲ ಪ್ರಾಣಿಗಳಿಗೂ ನಿತ್ಯವೂ (ಒಂದು ಪ್ರಕಾರದ) ಉತ್ಪತ್ತಿ ಲಯಗಳುಂಟೆಂದು ಕೆಲವು ಸೂಕ್ಷ್ಮಜ್ಞರು ತಿಳಿಯುತ್ತಾರೆ. ನಿತ್ಯವೂ ಸಂಭವಿಸುವ ಜನನ ಮರಣಗಳಲ್ಲದೇ, ಪ್ರಾಣಿದೇಹಗಳಲ್ಲಿ ಸೂಕ್ಷ್ಮಜ್ಞಾನಿಗಳು ಕಾಣಬಹುದಾದ ಉಪಚಯ-ಅಪಚಯಗಳೂ (ವೃದ್ಧಿ ಹ್ರಾಸಗಳೂ) ಒಂದು ಪ್ರಕಾರದ ಉತ್ಪತ್ತಿ ಲಯಗಳೇ ಆಗಿರುವುವು.

ಪ್ರಮಾಣದ ಒಂದು ರಾತ್ರಿಯೂ ಸೇರಿ ಬ್ರಹ್ಮದೇವನ ಒಂದು ದಿನವಾಗುತ್ತದೆ. ಬ್ರಹ್ಮನ ರಾತ್ರಿ ಪ್ರಾಪ್ತವಾಗಲು-ಎಂದರೆ-ಒಂದುಸಾವಿರ (೧೦೦೦) ಮಹಾ-ಯುಗಗಳು ಕಳೆದಾಗ-ಬ್ರಹ್ಮದೇವನು ನಿದ್ರಾಸಕ್ತನಾದಂತೆ ಮಲಗುತ್ತಾನೆ. ಆಗ ಭೂಲೋಕ ಅಂತರಿಕ್ಷಲೋಕ ಮತ್ತು ಸ್ವರ್ಗಲೋಕಗಳು ನಾಶಹೊಂದುತ್ತವೆ. ಪ್ರಳಯೋದಕದಲ್ಲಿಪರಬ್ರಹ್ಮನು (ಶೇಷಶಾಯಿ ಶ್ರೀಹರಿಯು) ಮಲಗುತ್ತಾನೆ-ಬ್ರಹ್ಮನೂ ಮಲಗುತ್ತಾನೆ. ಈ ಶಯನ ನಿಮಿತ್ತದಿಂದ **ನೈಮಿತ್ತಿಕ**ವೆಂದು ಈ ಪ್ರಳಯವು ಕರೆಯಲ್ಪಡುತ್ತದೆ.[28] ೧೦೦೦ ಮಹಾಯುಗಗಳಷ್ಟು ಕಾಲದ ಮಹಾರಾತ್ರಿ ಕಳೆದನಂತರ ಪುನಃ ಈ ಮೂರುಲೋಕಗಳ ಸೃಷ್ಟಿಯಾಗುತ್ತದೆ. ಬ್ರಹ್ಮದೇವನ ಒಂದು ಹಗಲಿನಲ್ಲಿ ಹದಿನಾಲ್ಕು (೧೪) ಮನುಗಳು ಕ್ರಮದಿಂದ ಅಧಿಕಾರಾರೂಢರಾಗಿರುತ್ತಾರೆ. ಪ್ರತಿ ಮನುವಿನ ಕಾಲವೂ ಮನ್ವಂತರವೆಂದು ಕರೆಯಲ್ಪಡುತ್ತದೆ.

ಬ್ರಹ್ಮದೇವನಿಗೆ ೧೦೦ ವರ್ಷಗಳ ಆಯುಷ್ಯವು. ಈ ಕಾಲವು ಪರವೆಂದು ಕರೆಯಲ್ಪಡುತ್ತದೆ. ಮೊದಲಿನ ೫೦ ವರ್ಷಗಳು ಪ್ರಥಮ ಪರಾರ್ಧವೆಂದೂ, ಎರಡನೆಯ ೫೦ ವರ್ಷಗಳು ದ್ವಿತೀಯ ಪರಾರ್ಧವೆಂದೂ, ಕರೆಯಲ್ಪಡುತ್ತದೆ. ಈಗ ದ್ವಿತೀಯ ಪರಾರ್ಧದ ಮೊದಲನೆಯ ದಿನ ಮಾತ್ರ ಕಳೆದಿದೆ. ಪರನಾಮಕ ಬ್ರಹ್ಮನ ಆಯುಷ್ಯವು ಪೂರ್ಣವಾದೊಡನೆಯೇ ಹದಿನಾಲ್ಕು ಲೋಕಾತ್ಮಕವಾದ ಇಡೀ ಬ್ರಹ್ಮಾಂಡವು ಲಯಹೊಂದುತ್ತದೆ. ಆಗ ಈ ಹಿಂದೆ ಸೃಷ್ಟಿಪರಿಚ್ಛೇದದಲ್ಲಿ ಸಂಗ್ರಹವಾಗಿ ಹೇಳಿರುವಂತೆ ಎಲ್ಲ ಪ್ರಾಕೃತತತ್ತ್ವಗಳೂ ತಮತಮಗೆ ಕಾರಣಗಳಾದ ಮೇಲಿನ ತತ್ತ್ವಗಳಲ್ಲಿ ಲಯಹೊಂದುತ್ತಾ, ಎಲ್ಲ ತತ್ತ್ವಗಳೂ

---

28. ತದಂತೇ ಪ್ರಲಯಸ್ತಾವಾನ್ ಬ್ರಾಹ್ಮೀರಾತ್ರಿರುದಾಹೃತಾ ।
ತ್ರಯೋಲೋಕಾ ಇಮೇ ತತ್ರ ಕಲ್ಪಂತೇ ಪ್ರಲಯಾಯ ಹಿ ॥
ಏಷ ನೈಮಿತ್ತಿಕಃ ಪ್ರೋಕ್ತಃ ಪ್ರಲಯೋ ಯತ್ರ ವಿಶ್ವಸೃಕ್ ।
ಶೇತೇ ಅನಂತಾಸನೋ ವಿಶ್ವಮಾತ್ಮಸಾತ್ಕೃತ್ಯಚಾತ್ಮಭೂಃ ॥

– ಈ ಬ್ರಹ್ಮನ ಹಗಲು ಕಳೆದರೆ ಬ್ರಹ್ಮನ ರಾತ್ರಿಯ ಆರಂಭವಾಗುವುದು; ಆಗ ಈ (ಭೂಃ, ಭುವಃ, ಸುವಃ) ಮೂರು ಲೋಕಗಳು ನಾಶಹೊಂದುತ್ತವೆ. ಇದು ನೈಮಿತ್ತಿಕ ಲಯವೆಂದು ಕರೆಯಲ್ಪಡುತ್ತದೆ. ಆಗ ಶ್ರೀಹರಿಯು, ಲೋಕಗಳನ್ನು ತನ್ನಲ್ಲಿಟ್ಟು-ಕೊಂಡು, ಶೇಷಶಯನದಲ್ಲಿ ಮಲಗುತ್ತಾನೆ. ಬ್ರಹ್ಮದೇವನೂ ಶಯನ ಮಾಡುತ್ತಾನೆ.

ಮೂಲ ಪ್ರಕೃತಿಯಲ್ಲಿ ಲೀನವಾಗಿ ಸೂಕ್ಷ್ಮರೂಪದಿಂದ ನಿಲ್ಲುತ್ತವೆ. ಆಗ ಪ್ರಕೃತಿಯೇ ಜಲರೂಪದಿಂದ ಬ್ರಹ್ಮಾಂಡದ ಆವರಣಗಳನ್ನು ವ್ಯಾಪಿಸಿ ಅವ್ಯಾಕೃತಾಕಾಶಪರ್ಯಂತ ವಿಸ್ತಾರವಾಗುತ್ತದೆ. ಆ ಪ್ರಲಯೋದಕದಲ್ಲಿ ಶ್ರೀಹರಿಯು ಲಕ್ಷ್ಮೀಸಮೇತನಾಗಿ ಪವಡಿಸುತ್ತಾನೆ. ಚೇತನಾಚೇತನಾತ್ಮಕವಾದ ಸಕಲ ವಿಶ್ವವನ್ನೂ ತನ್ನ ಉದರದಲ್ಲಿ ಧಾರಣೆಮಾಡಿರುತ್ತಾನೆ. ಎಲ್ಲವೂ ನಿಷ್ಕ್ರಿಯಾವಸ್ಥೆಯಲ್ಲಿರುತ್ತದೆ. ಯೋಗನಿದ್ರೆಯಲ್ಲಿ (ನಿದ್ರಾವಿಡಂಬನ) ಬ್ರಹ್ಮದೇವನ ೧೦೦ ವರ್ಷಗಳ ಆಯುಷ್ಯದಷ್ಟು ಕಾಲ ಮಲಗಿರುವನು. ಅದರಲ್ಲಿ ಅಷ್ಟಮಾಂಶ ಮಾತ್ರ ಉಳಿದಾಗ ಪುನಃ ಸೃಷ್ಟಿಕಾರ್ಯದಲ್ಲಿ ತೊಡಗಲು ದುರ್ಗಾರೂಪಳಾದ ಶ್ರೀಲಕ್ಷ್ಮೀದೇವಿಯ ಪ್ರಾರ್ಥನಾನುಸಾರ ಶ್ರೀಹರಿಯು ಸಂಕಲ್ಪಿಸುತ್ತಾನೆ. ಈ ಪ್ರಲಯವನ್ನು ಮಹಾಪ್ರಲಯವೆಂದು ಕರೆಯುವರು. ಇದೇ **ಪ್ರಾಕೃತಿಕ ಲಯವು**.[29]

ಸೃಷ್ಟಿಕಾಲ ಪ್ರಾಪ್ತವಾಗಲು (ಮಹಾಪ್ರಲಯದ ನಂತರ) ಹಿಂದಿನ ಬ್ರಹ್ಮಕಲ್ಪದಲ್ಲಿ ಸಾಧನ ಪರಿಪೂರ್ತಿಯನ್ನು ಹೊಂದಿ ಮುಕ್ತಿಯನ್ನು ಪಡೆಯಲು ಸಿದ್ಧವಾಗಿರುವ ಜೀವರಿಗೆ ವಾಸುದೇವರೂಪಿಯಾದ ಶ್ರೀಹರಿಯು ವೈಕುಂಠಾದಿ ಸ್ವಯೋಗ್ಯ ಮುಕ್ತಸ್ಥಾನಗಳಿಗೆ ಕಳುಹಿಸಿಕೊಡುತ್ತಾನೆ. ಜೀವರಿಗೆ ಅನಾದಿ-ಕಾಲದಿಂದ ಸಂಬಂಧಿಸಿಕೊಂಡಿರುವ ಲಿಂಗದೇಹದ ನಾಶವಾಗಿ ಅವರು ಸ್ವಸ್ವರೂಪದ ಸ್ಥಿತಿಯನ್ನು ಹೊಂದುವುದು ಆತ್ಯಂತಿಕ ಲಯವೆಂದು ಹೇಳಲ್ಪಡುತ್ತದೆ.[30] ಜೀವರಿಗೆ ಪ್ರಾಕೃತ ಬಂಧದ ಆತ್ಯಂತಿಕ ವಿನಾಶದಿಂದ ಈ ಲಿಂಗಭಂಗಕ್ಕೆ **ಆತ್ಯಂತಿಕ ಲಯ**ವೆಂಬ ನಾಮವು ಅನ್ವರ್ಥವೂ ಆಗಿದೆ.

---

29. 'ದ್ವಿಪರಾರ್ಧೇತ್ವತಿಕ್ರಾಂತೇ ಬ್ರಹ್ಮಣಃ ಪರಮೇಷ್ಠಿನಃ ।
ತದಾ ಪ್ರಕೃತಯಃ ಸಪ್ತ ಕಲ್ಪಂತೇ ಪ್ರಲಯಾಯ ವೈ ॥
ಏಷಪ್ರಾಕೃತಿಕೋರಾಜನ್ ಪ್ರಲಯೋ ಯತ್ರಲೀಯತೇ ।
ಅಂಡಕೋಶಸ್ತು.....' (ಭಾಗವತ)
– ಬ್ರಹ್ಮದೇವನ ಎರಡು ಪರಾರ್ಧಗಳು ಕಳೆಯಲು, ಸಪ್ತ ಪ್ರಕೃತಿಗಳು ಲಯ ಹೊಂದುತ್ತವೆ (ಪಂಚಭೂತಗಳು, ಅಹಂಕಾರ ಮತ್ತು ಮಹತ್ತತ್ವಗಳು). ಹೇ! ಪರೀಕ್ಷಿತ, ಇದನ್ನು ಪ್ರಾಕೃತಿಕ ಲಯವೆನ್ನುವರು ಆಗ ಬ್ರಹ್ಮಾಂಡವೇ ಲಯ-ಹೊಂದುತ್ತದೆ.

30. ಯದ್ಯೆವಮೇತೇ ನ ವಿವೇಕ ಹೇತಿನಾ
ಮಾಯಾಮಯಾಹಂಕರಣಾತ್ಮ ಬಂಧನಮ್ ।

ಈ ವಿಧದ ನಾಲ್ಕು ಲಯಗಳ ಪೂರ್ವಭಾವಿಯಾಗಿ ಸಂಭವಿಸುವ ಪರಿಸ್ಥಿತಿಗಳನ್ನು (೧೦೦ ವರ್ಷಗಳ ಅನಾವೃಷ್ಟಿ ನಂತರ ೧೦೦ ವರ್ಷಗಳ ಸತತ ವೃಷ್ಟಿ ಇತ್ಯಾದಿ) ಭಾಗವತಾದಿ ಶಾಸ್ತ್ರದಲ್ಲಿ ವಿಸ್ತಾರವಾಗಿ ಓದಿ ತಿಳಿಯಬಹುದು. ಪ್ರಲಯಕಾಲದಲ್ಲಿ ಪರಮಾತ್ಮನ ಉದರಪ್ರವೇಶ ಮಾಡುವ ಜೀವರು ಯಾವ ಯಾವ ಮಾರ್ಗದಿಂದ ಬ್ರಹ್ಮದೇವನನ್ನು ಬಂದು ಸೇರಿ ಆತನೊಂದಿಗೆ ಲಕ್ಷ್ಮೀದ್ವಾರಾ ಪರಮಾತ್ಮನ ಉದರಪ್ರವೇಶಮಾಡುವರೆಂಬ ಮುಂತಾದ ವಿವರಗಳನ್ನು ಮುಂದಿನ ರತ್ನಗಳಲ್ಲಿ ಪ್ರಸಂಗಾನುಸಾರ ವಿಸ್ತರಿಸಲಾಗುತ್ತದೆ. ಸೃಷ್ಟಿಸ್ಥಿತ್ಯಾದಿಗಳ ನಿರ್ವಹಣೆಗಾಗಿ ಶ್ರೀಹರಿಯು ಲೀಲೆಯಿಂದ ಸ್ವೀಕರಿಸಿರುವ ಆತನ ಅನಂತರೂಪಗಳು ಪ್ರಲಯಕಾಲದಲ್ಲಿ ಮೂಲರೂಪದಲ್ಲಿ ಏಕೀಭಾವ ಹೊಂದುತ್ತವೆ. ಅನಂತ ಜೀವಸ್ವರೂಪಗಳಲ್ಲಿ ಸ್ಥಿತವಾಗಿರುವ ಶ್ರೀಹರಿಯ ಅನಂತಬಿಂಬರೂಪಗಳು ಸಹ ಒಂದಂಶದಿಂದ ಮೂಲರೂಪದಲ್ಲಿ ಐಕ್ಯ- ಹೊಂದುತ್ತವೆ. ಜೀವರುಗಳ ಸ್ವರೂಪ ರಕ್ಷಣಾರ್ಥವಾಗಿ ಇಚ್ಛಾರೂಪದ ಒಂದಂಶಮಾತ್ರ ಅವರಲ್ಲಿ ನಿಲ್ಲುತ್ತದೆ. ಎಲ್ಲ ಜೀವರೂ ಪರಮಾತ್ಮನ ಉದರದಲ್ಲಿ ಇರುತ್ತಾರೆಂಬ ಸ್ಥಾನೈಕ್ಯವನ್ನು ಹೊಂದಿರುವರು. ಮುಕ್ತರಾದ ಎಲ್ಲ ಜೀವರೂ (ಸರ್ವಮುಕ್ತರೂ) ಪ್ರಲಯಕಾಲದಲ್ಲಿ ಧ್ಯಾನಗತರಾಗಿ ಆನಂದಿಸುತ್ತಾ ಇರುವರು. ಇತರ ಸರ್ವಜೀವರು ನಿದ್ರಾವಸ್ಥೆಯಲ್ಲಿರುವರು. ಪ್ರಲಯೇऽಪಿ ಪ್ರತಿಭಾತಪರಾವರರಾದ ವಾಯುಬ್ರಹ್ಮರು (ಪ್ರಲಯಕಾಲದಲ್ಲಿಯೂ ಸಹ ಪರಮಾತ್ಮನನ್ನೂ ಕೆಳಗಿನ ತತ್ತ್ವಗಳನ್ನು ತಿಳಿಯುವ ಜ್ಞಾನಕ್ಕೆ ತೀರೋಧಾನ- ವಿಲ್ಲದಿರುವ ಇವರು) ಶ್ರೀಹರಿಯ ಲಕ್ಷ್ಮೀರಮಣತ್ವ ಒಂದನ್ನುಳಿದು ಸರ್ವವಿಷಯಕ ಜ್ಞಾನವುಳ್ಳವರಾಗಿದ್ದರೂ ಮುಕ್ತರಂತೆ ಧ್ಯಾನದಲ್ಲಿರುತ್ತಾ

---

ಛಿತ್ವಾಚ್ಯುತಾತ್ಮಾನುಭವೋऽವತಿಷ್ಠತೇ
ತಮಾಹುರಾತ್ಯಂತಿಕಮಂಗ ಸಂಪ್ಲವಮ್ ॥ (ಭಾಗವತ)
- ಯಾವಾಗ ಸುಜ್ಞಾನವೆಂಬ ಖಡ್ಗದಿಂದ, ಪ್ರಾಕೃತ ಕಲೆಗಳಿಂದಾದ ಮತ್ತು ಜೀವನನ್ನು ಅಹಂಕಾರಾದಿಗಳ ದ್ವಾರಾ ಸಂಸಾರದಲ್ಲಿ ಬಂಧಿಸಿರುವ, ಲಿಂಗದೇಹವನ್ನು ಕತ್ತರಿಸಿ, ಸ್ವರೂಪಾನಂದದಲ್ಲಿ ನಿತ್ಯಸ್ಥಿತನಾಗುವನೋ, ಆಗ ಆತನನ್ನು ಆತ್ಯಂತಿಕ ಲಯವನ್ನು ಪಡೆದವನೆಂದು ಹೇಳುತ್ತಾರೆ.

ಯೋಗನಿದ್ರೆಯನ್ನು ವಿಡಂಬನಮಾಡುತ್ತಿರುವರು. ಶ್ರೀಹರಿಯ ಪ್ರಲಯಕಾರಕ ಸಂಕರ್ಷಣರೂಪದಿಂದಲೇ ಬ್ರಹ್ಮಾದಿಗಳಿಗೆಲ್ಲರಿಗೂ ಲಯವು ಸಂಭವಿಸುವುದು. ಪ್ರಲಯ ಸಂಬಂಧದ ವಿವರಗಳನ್ನು ವಿಸ್ತಾರವಾಗಿ ಆಗಮಗಳಿಂದ ಅಭ್ಯಸಿಸಿದರೆ ಶ್ರೀಹರಿಯ ಅಪಾರ ಮಹಿಮಾಜ್ಞಾನವಾಗುವುದರಲ್ಲಿ ಸಂಶಯವಿಲ್ಲ.

## ಪರಿಚ್ಛೇದ ೪

## ಶ್ರೀಹರಿ ಮಹಿಮೆ-ಜ್ಞಾನಾಜ್ಞಾನ-ಬಂಧಮೋಕ್ಷಪ್ರದತ್ವ

ಚಕ್ಷುರಾದಿ ಜ್ಞಾನೇಂದ್ರಿಯಗಳ ದ್ವಾರಾ ಜೀವನಿಗುಂಟಾಗುವ ವಸ್ತು-ವಿಷಯಕ ಜ್ಞಾನವು ಮತ್ತು ಹಾಗೆ ಆಗದಿರುವುದೆಂಬ ಅಜ್ಞಾನವು, ಜ್ಞಾನ-ಅಜ್ಞಾನ ಶಬ್ದಗಳಿಂದ ಸಾಮಾನ್ಯವಾಗಿ ಹೇಳಲ್ಪಡುತ್ತವೆ. ಆದರೆ ಮುಖ್ಯಾರ್ಥದಲ್ಲಿ ಸ್ವಸ್ವರೂಪ ಮತ್ತು ಪರಮಾತ್ಮಸ್ವರೂಪದ ಸಾಕ್ಷಾತ್ಕಾರವು ಜ್ಞಾನವೆಂದೂ, ಈ ಜ್ಞಾನದ ಅಭಾವ ಅಥವಾ ಯಥಾರ್ಥಕ್ಕೆ ವಿರುದ್ಧವಾದ ಮಿಥ್ಯಾ ಜ್ಞಾನವು ಅಜ್ಞಾನವೆಂದೂ ಕರೆಯಲ್ಪಡುತ್ತವೆ. ಜೀವಚೇತನರಿಗೆ ಶ್ರೀಹರಿಯು ಜ್ಞಾನಾ-ಜ್ಞಾನಗಳನ್ನು ಕೊಡುವವನೆಂಬುದು ಆತನ ನಿಯಮನ ಕರ್ತೃತ್ವದಲ್ಲಿ ಸಹ ಅಡಕವಾಗಬಹುದು. ಆದರೆ ಸ್ವರೂಪಾವಿರ್ಭಾವಕ್ಕೆ ಕಾರಣವಾಗುವ **''ಶ್ರೀಹರಿ ಸ್ವರೂಪದ ಯೋಗ್ಯಾಪರೋಕ್ಷದರ್ಶನ'' ಮತ್ತು ''ಮಿಥ್ಯಾಜ್ಞಾನ ಪರಿಪಕ್ವತೆಗಳನ್ನೂ'' ದೊರಕಿಸುವುದೇ ಜ್ಞಾನಾಜ್ಞಾನಗಳ ಕರ್ತನೆಂಬುದರ ಮುಖ್ಯಾರ್ಥವಾಗಿದೆ.** ಜೀವಸ್ವಭಾವಗಳಿಗೆ ವಿರುದ್ಧವಾದ ಜ್ಞಾನನಿಶ್ಚಯವನ್ನು ಪರಮಾತ್ಮನು ಎಂದೂ ಕೊಡುವುದಿಲ್ಲ. ಜೀವಸ್ವಭಾವವನ್ನು ಯಾವ ಕಾಲಕ್ಕೂ ಬದಲಿಸುವುದಿಲ್ಲ. ಜೀವಸ್ವರೂಪಗಳನ್ನು ವ್ಯತ್ಯಾಸಗೊಳಿಸಿ ಅವರ ಸ್ವಭಾವಸಿದ್ಧ ಗುಣಗಳಿಗೆ ವಿರುದ್ಧವಾದ ಗತಿಗಳನ್ನು ಹೊಂದಿಸುವುದು ಶ್ರೀಹರಿ ಸಂಕಲ್ಪವಲ್ಲ-ಆತನು ಸತ್ಯಸಂಕಲ್ಪನು. ತನ್ನ ಅಚಿಂತ್ಯ ಶಕ್ತಿ ಸ್ವಾತಂತ್ರ್ಯಗಳ ಬಲದಿಂದ ಎಲ್ಲ ಜೀವರಿಗೆ ಶಾಶ್ವತ ಸುಖರೂಪವಾದ ಉತ್ತಮ ಗತಿಗಳನ್ನೇ ಕೊಟ್ಟರೆ ಆತನಿಗೆ ವೈಷಮ್ಯಾದಿ ದೋಷಗಳು ತಪ್ಪದೆ ಬರುತ್ತವೆ. ಜ್ಞಾನಾದಿ ಗುಣಸ್ವರೂಪರಾದ

ಸುಜೀವರಿಗೆ ಕೊಡುವ ಉತ್ತಮ ಗತಿಯನ್ನು ದ್ವೇಷಾಜ್ಞಾನಾದಿ ಸ್ವರೂಪವುಳ್ಳ ತಮೋಯೋಗ್ಯರಿಗೂ ಕೊಡುವುದು ವೈಷಮ್ಯವಲ್ಲವೆ! ಜೀವರು ಭಿನ್ನಸ್ವಭಾವ-ಗಳುಳ್ಳ ಅನಾದಿ ನಿತ್ಯ ಸ್ವರೂಪವುಳ್ಳವರೆಂದೂ ಸ್ವಭಾವದಿಂದಲೇ ತ್ರಿವಿಧರೆಂದೂ ಆಗಮಗಳು ಹೇಳುತ್ತವೆ. ಲೋಕಾನುಭವದಿಂದಲೂ ಯುಕ್ತಿಯಿಂದಲೂ ಜೀವತ್ರೈವಿಧ್ಯವು ಸಾಮಾನ್ಯವಾಗಿ ಸಿದ್ಧವಾಗುತ್ತದೆ.[31]

ಸಾಧುಸ್ವಭಾವದ ಉತ್ತಮರು, ಪ್ರಾಯಃ ದುಷ್ಕೃತ್ಯಗಳಲ್ಲಿಯೇ ಪ್ರವೃತ್ತ-ರಾಗುವ ದುಷ್ಟಸ್ವಭಾವದ ನೀಚರು ಮತ್ತು ಈ ಉಭಯ ಗುಣಗಳ ಮಿಶ್ರಸ್ವಭಾವದ ಮಧ್ಯಮರು ಎಂಬ ಮೂರು ವರ್ಗಗಳಲ್ಲಿ ಸರ್ವಜೀವರೂ ಸಮಾವೇಶಗೊಳ್ಳುತ್ತಾರೆ. ಈ ತ್ರಿವರ್ಗದ ಜೀವರಲ್ಲಿ ಜಗತ್ತಿನಲ್ಲಿ ಕಂಡು ಬರುವ ನಾನಾ ಭೇದಗಳನ್ನೂ, ಅನ್ಯಕಾರಣಗಳನ್ನು ಹೇಳಿ ಪರಿಹರಿಸಲಾಗದ ಮೂಲಭೂತ ವ್ಯತ್ಯಾಸಗಳು ಅವರ ಇಚ್ಛಾ, ಜ್ಞಾನ, ಪ್ರಯತ್ನಗಳಲ್ಲಿರುವುದನ್ನೂ ಲಕ್ಷಿಸಿದರೆ ಅವರ ಸ್ವರೂಪಗಳೇ ಭಿನ್ನವಾದವುಗಳೆಂದು ಸಿದ್ಧವಾಗುತ್ತದೆ. ಆಗಮಗಳು ಈ ತ್ರೈವಿಧ್ಯವನ್ನು ದೇವ, ಅಸುರ ಮತ್ತು ಮಿಶ್ರ ಎಂಬ ಶಬ್ದಗಳಿಂದ ಹೇಳುತ್ತವೆ. ಈ ಪ್ರಮೇಯವನ್ನು ನಿರೂಪಿಸುವ ವೇದ ಮತ್ತು ಪುರಾಣ ವಾಕ್ಯಗಳು ನಿರವಕಾಶಗಳಾಗಿವೆ. ನಿತ್ಯಾನಂದಸ್ಥಿತಿ ರೂಪದ ಮೋಕ್ಷವನ್ನು ಹೊಂದುವ ಜ್ಞಾನಾನಂದಾತ್ಮಕಸ್ವರೂಪವುಳ್ಳ ಮುಕ್ತಿ ಯೋಗ್ಯರನ್ನು ದೇವ-ವರ್ಗರೆಂದೂ, ನಿತ್ಯ ದುಃಖರೂಪದ ತಮಸ್ಸನ್ನು ಹೊಂದುವ ದುಃಖದ್ವೇಷಾದಿ-ಸ್ವರೂಪವುಳ್ಳ ತಮೋಯೋಗ್ಯರನ್ನು ಅಸುರ ವರ್ಗವೆಂದೂ, ಸಂಶಯ-ಜ್ಞಾನಸ್ವರೂಪರಾದ ಸುಖದುಃಖ ಮಿಶ್ರಗತಿಗಳನ್ನು ಹೊಂದುವ ನಿತ್ಯಸಂಸಾರಿ-ಗಳೆಂಬುವರನ್ನು ಮಿಶ್ರವರ್ಗವೆಂದೂ ಆಗಮಗಳು ವ್ಯವಹರಿಸುತ್ತವೆ. ಇವರ ಸ್ವರೂಪಗಳು ಯಾವ ಕಾಲಕ್ಕೂ ಯಾವ ಕಾರಣದಿಂದಲೂ ವ್ಯತ್ಯಾಸಹೊಂದ-ತಕ್ಕವುಗಳಲ್ಲವೆಂದು ಸ್ಪಷ್ಟವಾಗಿ ಘೋಷಿಸುವ ಆಗಮ ವಾಕ್ಯಗಳು ಹೇರಳವಾಗಿವೆ. (ಬ್ರಹ್ಮಸೂತ್ರಗಳ ಮೂರನೆ ಅಧ್ಯಾಯದ ನಾಲ್ಕನೆಯ ಜ್ಞಾನಪಾದದಲ್ಲಿ ಉಭಯಲಿಂಗಾಧಿಕರಣದಲ್ಲಿ ಜೀವತ್ರೈವಿಧ್ಯವು ನಿರ್ಣಯಿಸಿ ನಿರೂಪಿಸಲ್ಪಟ್ಟಿವೆ.) ನಿದರ್ಶನಾರ್ಥವಾಗಿ ಕೆಲವನ್ನು ಇಲ್ಲಿ ಉದಹರಿಸಲಾಗುತ್ತದೆ:-

31. ರತ್ನ 1, ನಾಸ್ತಿಕ್ಯನಿರಾಸ, ಪರಿಚ್ಛೇದ 6 ರಲ್ಲಿ ಓದಿಕೊಳ್ಳಬಹುದು.

ಶ್ರುತಿಗಳು :-

೧. ನಾಸುರಣಾಂ ದೈವಂ ರೂಪಂ, ನ ದೇವಾನಾಮಾಸುರಂ, ನ ಚೋಭಯಂ ಮನುಷ್ಯಾಣಾಂ

- ಅಸುರರಿಗೆ ದೇವಸ್ವರೂಪವೂ, ದೇವತೆಗಳಿಗೆ ಅಸುರಸ್ವರೂಪವೂ, ಮನುಷ್ಯರಿಗೆ ಇವೆರಡರಲ್ಲಿ ಯಾವುದೊಂದೂ ಪ್ರಾಪ್ತವಾಗುವುದಿಲ್ಲ.

೨. ಯೋ ಯದ್ರೂಪಃ ಸ ತದ್ರೂಪೋ ನಿಸರ್ಗೋ ಹ್ಯೇಷ ಭವತಿ

- ಯಾರು ಯಾವ ಸ್ವರೂಪದವನೋ ಅವನು ಆ ತನ್ನ ಸ್ವಭಾವರೂಪವನ್ನೇ ಹೊಂದುತ್ತಾನೆ.

೩. ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತಿ, ಆಸುರೀಮೇವಚಾಸುರಾಃ, ನೈತಯೋರಭಿಭವಃ ಕದಾಚಿತ್ ಸ್ವಭಾವ ಏವ ಹ್ಯವತಿಷ್ಠತೇ

- ದೇವತೆಗಳು ದೇವಸ್ವಭಾವವನ್ನೂ, ಅಸುರರು ಅಸುರಸ್ವಭಾವವನ್ನೂ ಹೊಂದುತ್ತಾರೆ. ಈ ನಿಯಮಕ್ಕೆ ಎಂದೂ ಅಭಿಭವವಿಲ್ಲ (ವ್ಯತ್ಯಾಸವಿಲ್ಲ ತಿರಸ್ಕಾರವಿಲ್ಲ.) ಅವರವರ ಸ್ವಭಾವವೇ ಶಾಶ್ವತವಾಗಿ ನಿಲ್ಲುತ್ತದೆ.

೪. ಶ್ರುಣ್ವೇವೀರ ಉಗ್ರಮುಗ್ರಂ ದಮಾಯನ್ನನ್ಯಮನ್ಯಮತಿ ನೇನೀಯ ಮಾನಃ ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ (ಋಗ್ವೇದ)

ಈ ವಾಕ್ಯಗಳ ಭಾವಾರ್ಥಗಳು ಹೀಗಿವೆ:-

- ವೀರಃ = ಸರ್ವಶಕ್ತನಾದ, ಇಂದ್ರಃ = ಇಂದ್ರನು (ಮಹದೈಶ್ವರ್ಯ-ಸಂಪನ್ನನಾದ ಪರಮಾತ್ಮನು), ಉಗ್ರಮುಗ್ರಂ = ಅಸುರಸ್ವಭಾವದ ಪ್ರತಿಯೊಬ್ಬನನ್ನೂ ದಮಯನ್ = ಶಿಕ್ಷಿಸುವವನಾಗಿ (ನಿಗ್ರಹಿಸುವವನಾಗಿ), ಅನ್ಯಮನ್ಯಂ = ಭಿನ್ನ ಸ್ವಭಾವದ (ದೇವಸ್ವಭಾವದ) ಪ್ರತಿಯೊಬ್ಬನನ್ನೂ, ಅತಿನೇನೀಯಮಾನಃ = ಸಂಸಾರದಿಂದ ದಾಟಿಸುವನೆಂದೂ, ಶ್ರುಣ್ವೇ = ಕೇಳಿಬರುತ್ತಾನೆ (ಶ್ರುತಿ ಪ್ರಸಿದ್ಧನಾಗಿದ್ದಾನೆ). ಏಧಮಾನದ್ವಿಟ್ = ಸ್ವಯೋಗ್ಯತೆ-ಯನ್ನು ಅತಿಕ್ರಮಿಸುವವರನ್ನು ಸಹಿಸದವನು, ಉಭಯಸ್ಯ ರಾಜಾ = ದೇವಾಸುರ ಉಭಯವರ್ಗದ ಜೀವರಿಗೂ ಸ್ವಾಮಿಯೂ, ಮನುಷ್ಯಾನ್ ವಿಶಃ = ರಾಜಸರಾದ ಮನುಷ್ಯರನ್ನು, ಚೋಷ್ಕೋಯತೇ = ಸುತ್ತಿಸುತ್ತಾನೆ (ಸುಖದುಃಖಾನುಭವಗಳಲ್ಲಿಡುತ್ತಾನೆ.)

ಮೇಲೆ ಉದಹರಿಸಿದ ಶ್ರುತ್ಯರ್ಥಗಳನ್ನೇ ಸ್ಪಷ್ಟವಾಗಿ ವಿವರಿಸುವ ಸ್ಮೃತಿ-ವಾಕ್ಯಗಳು ಈ ರೀತಿ ಇವೆ:- *ಅಸುರಾ ಅಸುರೇಣೈವ ಸ್ವಭಾವೇನ ಚ ಕರ್ಮಣಾ। ಜ್ಞಾನೇನ ವಿಪರೀತೇನ ತಮೋ ಯಾಂತಿ ವಿನಿಶ್ಚಯಾತ್ ॥ ದೇವಾ ದೇವ-ಸ್ವಭಾವೇನ ಕರ್ಮಣಾ ಚಾಪ್ಯಸಂಶಯಂ । ಸಮ್ಯಕ್ ಜ್ಞಾನೇನ ಪರಮಾಂಗತಿಂ ಗಚ್ಛಂತಿ ವೈಷ್ಣವೀಂ ॥ ನಾನಯೋರನ್ಯಥಾಭಾವಃ ಕದಾಚಿತ್ಕ್ವಾಪಿ ವಿದ್ಯತೇ । ಮಾನುಷಾ ಮಿಶ್ರಮತಯೋ ವಿಮಿಶ್ರ ಗತಯೋಪಿ ಚ ॥* (ಸ್ಕಾಂದ)

-ಅಸುರರು ತಾಮಸಕರ್ಮಗಳಿಂದಲೂ ಮಿಥ್ಯಾಜ್ಞಾನದಿಂದಲೂ ನಿಶ್ಚಯವಾಗಿ ತಮಸ್ಸನ್ನೇ ಹೊಂದುತ್ತಾರೆ. ದೇವತೆಗಳು ಸತ್ಕರ್ಮಗಳಿಂದಲೂ ಯಥಾರ್ಥಜ್ಞಾನದಿಂದಲೂ ಉತ್ತಮವಾದ ವಿಷ್ಣುಲೋಕವನ್ನು ಹೊಂದುತ್ತಾರೆ. ಈ ನಿಯಮಕ್ಕೆ ಎಂದೂ ಎಲ್ಲಿಯೂ ವ್ಯತ್ಯಾಸವಿಲ್ಲ. ಮಿಶ್ರ ಜ್ಞಾನವುಳ್ಳ ಮನುಷ್ಯರು ಸುಖದುಃಖ ಮಿಶ್ರಗತಿಯನ್ನೇ ಹೊಂದುತ್ತಾರೆ. ಈ ಎಲ್ಲರಿಗೂ ಯಥಾಯೋಗ್ಯವಾದ ಜ್ಞಾನ ಅಜ್ಞಾನಾದಿಪ್ರದನು ಶ್ರೀ ಹರಿಯೇ. ಹೀಗೆಂಬುದು ಸಹ ಆಗಮಸಿದ್ಧ ಪ್ರಮೇಯವೇ. *''ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮತಿರ್ಜ್ಞಾನಮಪೋಹನಂ ಚ - ಮತ್ತು ಬುದ್ಧಿ-ರ್ಜ್ಞಾನಮಸಂಮೋಹಃ ಕ್ಷಮಾಸತ್ಯಂ ದಮಶ್ಶಮಃ । ಸುಖಂ ದುಃಖಂಭವೋ-ಭಾವೋ ಭಯಂಚಾಭಯಮೇವ ಚ ॥ ಅಹಿಂಸಾ ಸಮತಾ ತುಷ್ಟಿಸ್ತಪೋದಾನಂ ಯಶೋಯಶಃ । ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥''* ಸರ್ವಪ್ರಾಣಿಗಳ ಹೃದಯದಲ್ಲಿಯೂ ಇರುವ ನನ್ನಿಂದಲೇ ಜ್ಞಾನ, ಅಜ್ಞಾನ ಸ್ಮರಣೆಗಳು ಉಂಟಾಗುತ್ತವೆ. ಮತ್ತು ಬುದ್ಧಿ, ಜ್ಞಾನ, ಅಸಮ್ಮೋಹ, ಕ್ಷಮಾ, ಸತ್ಯ, ದಮ, ಶಮ, ಸುಖ, ದುಃಖ, ಭಕ್ತಿ ಮತ್ತು ಅದರ ಅಭಾವ, ಅಹಿಂಸಾ, ಸಮತ್ವ, ತುಷ್ಟಿ, ತಪಸ್ಸು, ದಾನ, ಕೀರ್ತಿ, ಅಪಕೀರ್ತಿ, ಈ ಮೊದಲಾದ ನಾನಾ ಭಾವಗಳು ಪ್ರಾಣಿಗಳಿಗೆ ನನ್ನಿಂದಲೇ ಉಂಟಾಗುತ್ತವೆ ಎಂಬುದಾಗಿ ಗೀತೆಯಲ್ಲಿ ಶ್ರೀಕೃಷ್ಣನು ಹೇಳಿರುತ್ತಾನೆ. *ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ । ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ ॥* (ಶ್ರುತಿ)-ಅಜ್ಞಾನಿಗಳಿಗೆ ಜ್ಞಾನಪ್ರದನೂ, ಜ್ಞಾನಿಗಳಿಗೆ ಮೋಕ್ಷಪ್ರದನೂ, ಮುಕ್ತರಿಗೆ ಆನಂದಪ್ರದನೂ, ಸ್ವತಂತ್ರನಾದ ಶ್ರೀಹರಿಯೇ-ಎಂಬುದಾಗಿ ಈ

ಶ್ರುತಿ ವಾಕ್ಯಗಳೂ ಹೇಳುತ್ತವೆ. ಇತ್ಯಾದಿ ಶ್ರುತಿ ಸ್ಮೃತಿಗಳ ಪ್ರಮಾಣದಿಂದ ಜೀವತ್ರೈವಿಧ್ಯವೂ ಸಿದ್ಧಿಸುವುದಲ್ಲದೆ ಎಲ್ಲ ಜೀವರಿಗೆ ಜ್ಞಾನಾಜ್ಞಾನಾದಿ ಪ್ರದನೂ ಶ್ರೀಹರಿಯೇ ಎಂದೂ ಸಿದ್ಧವಾಗುತ್ತದೆ.

*ಬಂಧಕೋ ಭವಪಾಶೇನ ಮೋಚಕಶ್ಚ ಸ ಏವಹಿ* / ಇತ್ಯಾದಿ ಶ್ರುತಿಗಳು; *ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ ಇತ್ಯಾದಿ* ಸ್ಮೃತಿ (ಗೀತಾ) ವಾಕ್ಯಗಳೂ ತ್ರಿವಿಧ ಜೀವರಿಗೂ ಬಂಧಮೋಕ್ಷಪ್ರದನು ಶ್ರೀಹರಿಯೇ ಎಂದೂ ಸಾರುತ್ತವೆ. ಬಂಧಕತ್ವ-ಮೋಚಕತ್ವರೂಪದ ಶ್ರೀಹರಿಮಹಿಮೆಗಳನ್ನು ಗ್ರಹಿಸಲು ''ಬಹ್ವಂಶಗಳ ದೀರ್ಘ ವಿಮರ್ಶೆಯು'' ಅವಶ್ಯಕವಾಗುತ್ತದೆ. ಜೀವರಿಗೆ ಬಂಧಸ್ವರೂಪವೇನು? ಅದು ಎಂದಿನಿಂದ ಇದೆ? ಹೇಗೆ ಬಂದಿತು? ಜೀವರನ್ನು ಶ್ರೀಹರಿಯು ಏಕೆ ಬಂಧಿಸಿರುವನು? ಬಂಧ ನಿವೃತ್ತಿಯು ಶ್ರೀಹರಿಯ ಇಚ್ಛಾಮಾತ್ರದಿಂದ ಶಕ್ಯವಿರಲು ಕಷ್ಟಸಾಧ್ಯವಾದ ದೀರ್ಘಕಾಲದ ಸಾಧನೆಗಳೇಕೆ? ಸಮಾನ ಯೋಗ್ಯತೆಯ ಎಲ್ಲ ಜೀವರಿಗೆ ಏಕಕಾಲಕ್ಕೆ ಮೋಕ್ಷವಾಗದಿದ್ದರೆ ಪರಮಾತ್ಮನಿಗೆ ವೈಷಮ್ಯಾದಿ ದೋಷ ತಗಲುವುದಿಲ್ಲವೆ? ಕಾಲವಿಶೇಷಗಳಲ್ಲಿ ಜೀವರಿಗೆ ಸ್ವಸ್ವರೂಪ ಪ್ರಾಪ್ತಿ ರೂಪದ ಮೋಕ್ಷವು ಲಭಿಸುವುದಾದರೂ ಒಂದು ಕಾಲಕ್ಕೇ ಜಗತ್ಸೃಷ್ಟಿಯು ನಿಲ್ಲಬೇಕಲ್ಲವೆ? ಸಮಸ್ತರಿಗೂ ಅವರವರ ಗತಿ ದೊರೆತಮೇಲೆ ಸೃಷ್ಟಿಯ ಅವಶ್ಯಕತೆ ಏನು? ಆಗ ಜಗಜ್ಜನ್ಮಾದಿ ಕಾರಣತ್ವರೂಪದ ಮಹಿಮೆಯು ಇಲ್ಲದಂತಾಗಿ ಪ್ರಧಾನ ಬ್ರಹ್ಮಲಕ್ಷಣಕ್ಕೆ ಲೋಪ ಉಂಟಾಗುವುದಿಲ್ಲವೆ? ಬಂಧಮೋಕ್ಷಗಳೆರಡಕ್ಕೂ ಈಶ್ವರನೇ ಸ್ವತಂತ್ರಕಾರಣನಾದರೆ ಜೀವ ಪ್ರಯತ್ನಾದಿಗಳಿಗೆ ಏನು ಸ್ಥಾನವಿದೆ? ಇತ್ಯಾದಿ ಬಹು ಪ್ರಕ್ರಿಯೆಗಳ ಪರಿಷ್ಕಾರವಾಗಬೇಕಲ್ಲವೇ? ತಥಾಹಿ:

**ಬದ್ಧ ಮತ್ತು ಮುಕ್ತರೆಂದು ಜೀವರು ಎರಡು ವಿಧ.** ಉಭಯ ವರ್ಗದ ಜೀವರ ಸಂಖ್ಯೆಯು ಅನಂತ. ಪ್ರತಿ ಬ್ರಹ್ಮಕಲ್ಪದಲ್ಲಿ ಬಹುಜೀವರು ಬಂಧ ವಿಮೋಚನೆಯನ್ನು ಹೊಂದುತ್ತಲೇ ಇರುವರು. ಇವರೇ ಮುಕ್ತರೆಂಬುವರು. ಬದ್ಧ ಜೀವರು[32], ಸೃಜ್ಯರು ಮತ್ತು ಅಸೃಜ್ಯರು ಎಂದು ಎರಡು ವಿಧ.

32. ಒಂದು ವಿವಕ್ಷೆಯಿಂದ ಜೀವರೆಲ್ಲರೂ ನಿತ್ಯಬದ್ಧರು-ಮುಕ್ತರೂ ಬದ್ಧರೇ. ಮುಕ್ತ-ಸ್ಯಾಪಿತು ಬದ್ಧತ್ವಮಸ್ತಿ ಯತ್ಸಹರೇರ್ವಶಃ । ಮುಕ್ತಾಖ್ಯಾ ದುಃಖ ಮೋಕ್ಷಾಸ್ಯಾತ್

ಸೃಷ್ಟ್ಯಾರಂಭದಲ್ಲಿ ಪ್ರಾಕೃತ ಸ್ಥೂಲಸಾಧನ ದೇಹಗಳನ್ನು ಹೊಂದಿ, ಸ್ವಸ್ವರೂಪ-ಗಳ ಆವಿರ್ಭಾವದಿಂದ ಸ್ವಯೋಗ್ಯ ನಿತ್ಯಗತಿಗಳನ್ನು ದೊರಕಿಸಿಕೊಳ್ಳುವ ಜೀವರು ಸೃಜ್ಯರೆನಿಸುವರು. ಹಾಗೆ ಸಾಧನೆಯಲ್ಲಿ ತೊಡಗಿಸಲ್ಪಡದ ಜೀವರು ಅಸೃಜ್ಯರು. ಅಸೃಜ್ಯ ಜೀವರನ್ನೊಳಗೊಂಡ ಅಸಂಖ್ಯ ಜೀವರಾಶಿಗಳಿವೆ. ಸಮಾನಯೋಗ್ಯತೆಯ ಜೀವರೆಲ್ಲರೂ ಪ್ರತ್ಯೇಕರಾಶಿಗಳಲ್ಲಿರುವರು. ಇಂಥ ರಾಶಿಗಳು ಅಸಂಖ್ಯವಾಗಿವೆ. ಒಂದೊಂದು ರಾಶಿಯಲ್ಲಿಯೂ ಅನಂತ ಜೀವರಿದ್ದಾರೆ.[33] ಜೀವಸ್ವರೂಪಗಳು ತರತಮ ಭಾವಗಳಿಂದ ಬಹು ಭಿನ್ನವಾಗಿವೆ. ತ್ರಿವಿಧರಾದ ಜೀವರಲ್ಲಿ ಪ್ರತಿವರ್ಗದ ಜೀವರಿಗೂ ಬಹುಪ್ರಕಾರದ ತಾರ-ತಮ್ಯಗಳಿವೆ. ಒಂದೊಂದು ವರ್ಗವನ್ನೂ ಅಸಂಖ್ಯ ಉಪವರ್ಗಗಳನ್ನಾಗಿ ವಿಭಾಗ ಮಾಡಲು ಅವಕಾಶವಿದ್ದರೂ ಪ್ರಧಾನವಾದ ಕೆಲವು ಉಪವರ್ಗಗಳನ್ನು ಮಾತ್ರ ನಾಮಗ್ರಹಣಪೂರ್ವಕ ಆಗಮಗಳು ನಿರೂಪಿಸುತ್ತವೆ. ಉದಾಹರಣೆ :- ಮುಕ್ತಿಯೋಗ್ಯಜೀವರ ಪಂಗಡವನ್ನು ದೇವತೆಗಳು, ಋಷಿಗಳು, ಪಿತೃಗಳು, ಚಕ್ರವರ್ತಿಗಳು, ಮನುಷ್ಯೋತ್ತಮರೆಂಬ ಐದು ಪ್ರಧಾನ ಉಪವರ್ಗ-ಗಳುಳ್ಳದೆಂದು ಹೇಳಲಾಗುತ್ತದೆ.[34] ಹೀಗೆಯೇ ತಮೋಯೋಗ್ಯರೆಂಬ ಅಸುರ-ಸ್ವಭಾವದ ಜೀವರಲ್ಲಿಯೂ ದೈತ್ಯ, ದಾನವ, ಪಿಶಾಚ, ರಾಕ್ಷಸ ಇತ್ಯಾದಿ ಉಪವರ್ಗಗಳಿವೆ. ಮಧ್ಯಮವರ್ಗದ ಮಿಶ್ರ (ನಿತ್ಯಸಂಸಾರಿ) ಜೀವರಲ್ಲಿಯೂ ಭೂಪ್ರಚುರ, ಸ್ವರ್ಗಪ್ರಚುರ, ನಿರಯಪ್ರಚುರರೆಂಬ ಪ್ರಭೇದಗಳಿವೆ.

---

ಬದ್ಧಾಖ್ಯಾ ಹರ್ಯಧೀನತಾ।। ನಿತ್ಯ ಬದ್ಧಾ ಅಪಿತತೋ ಮುಕ್ತಾ ದುಃಖವಿಮೋಕ್ಷತಃ। ನಿತ್ಯಮುಕ್ತಸ್ತ್ವೇಕ ಏವ ಹರಿರ್ನಾರಾಯಣಃ ಪ್ರಭುಃ ।।

-ಶ್ರೀಹರಿಯ ವಶನಾದುದರಿಂದ ಮುಕ್ತನಿಗೂ ಬದ್ಧತ್ವವಿದೆ. ಮುಕ್ತನೆಂಬ ನಾಮಕ್ಕೆ ದುಃಖವಿಮೋಚನೆಯೇ ಕಾರಣ. ಶ್ರೀಹರಿಯು ಅಧೀನತೆಯೇ ಬದ್ಧನೆಂಬುದಕ್ಕೆ ಕಾರಣ. ಆದುದರಿಂದ ಎಲ್ಲ ಮುಕ್ತಜೀವರೂ ನಿತ್ಯಬದ್ಧರೇ ಸರಿ. ಸ್ವತಂತ್ರನಾದ ಶ್ರೀಹರಿಯೊಬ್ಬನೇ ನಿತ್ಯಮುಕ್ತನು. (ನಿತ್ಯಾವಿಯೋಗಿನಿಯೂ, ಅರ್ಧಾಂಗಿಯೂ ಆದ ರಮಾದೇವಿಯು ನಿತ್ಯಮುಕ್ತಳು - ಶ್ರೀಹರಿಯ ನಿತ್ಯಾಧೀನಳಾದ್ದರಿಂದ ನಿತ್ಯಬದ್ಧಳೂ ಅಹುದು.)

33. 'ಅಣುಪ್ರದೇಶೇಽಪಿ ಜೀವಾಹ್ಯನಂತರಾಶಯಃ' ಎಂಬ ಶ್ರುತಿಯು ಅತಿ ಸೂಕ್ಷ್ಮ-ಪ್ರದೇಶದಲ್ಲಿ ಸಹ ಅನಂತ ಜೀವರಾಶಿಗಳಿವೆ ಎಂದು ಹೇಳುತ್ತದೆ.

34. 'ದೇವರ್ಷಿಪಿತೃಪನರಾಃ ಮುಕ್ತಿಯೋಗ್ಯಾಃ' (ತತ್ತ್ವಸಂಖ್ಯಾನ)

ಈ ವಿಭಾಗಗಳೆಲ್ಲವೂ ಜೀವಸ್ವರೂಪಗಳ ವಿವಕ್ಷೆಯಿಂದ ಹೇಳಲ್ಪಟ್ಟಿವೆ. ಬ್ರಾಹ್ಮಣಾದಿ ವರ್ಣವಿಭಾಗವುಳ್ಳ ಪ್ರಾಕೃತದೇಹಗಳಲ್ಲಿರುವಾಗ ಆಯಾ ವರ್ಣದವರಿಗೆ ವಿಧಿಸಲ್ಪಡುವ ನಾನಾ ಗುಣಧರ್ಮಗಳನ್ನು ಸ್ವರೂಪದಲ್ಲಿಯೇ ಉಳ್ಳ ಜೀವರೂ ಇರುವರೆಂದು ಹೇಳಲಾಗುತ್ತದೆ. ಆದುದರಿಂದ ಸ್ವರೂಪದಲ್ಲಿ ಸಹ ವರ್ಣವಿಭಾಗ ಉಂಟೆಂದು ಹೇಳುವ ಆಗಮ ವಾಕ್ಯಗಳಿಗೆ ಯುಕ್ತಿ-ವಿರೋಧವಿಲ್ಲದಂತೆ ಯೋಗ್ಯ ರೀತಿಯಿಂದ ಅರ್ಥಮಾಡಿಕೊಳ್ಳಬೇಕು. ಇದೇನು! ಸ್ವರೂಪಸ್ಥಿತಿರೂಪವಾದ ಮೋಕ್ಷದಲ್ಲಿಯೂ ವರ್ಣಭೇದಗಳು ಇರುವುದೆಂದಾದರೆ, ಸಂಸಾರದಂತೆ ಮೋಕ್ಷವೂ ಸಹ ಈ ಎಲ್ಲ ವೈವಿಧ್ಯಗಳನ್ನುಳ್ಳದೆಂದೂ, ಅತ ಏವ ಅಲ್ಲಿಯೂ ಪತಿಪತ್ನಿ ಮೊದಲಾದ ಭಾವಗಳಿಂದ ಅಭಿಮಾನಾದಿಗಳೂ, ತಜ್ಜನ್ಯ ದುಃಖಾದಿಗಳೂ ಪ್ರಾಪ್ತವಾಗುತ್ತವೆಂಬ ದೋಷಗಳನ್ನು ಆಪಾದಿಸುವ ಯುಕ್ತಿಗಳನ್ನು ಆಶ್ರಯಿಸುವ ವಾದಗಳಿಗೆ ಮಾರುಹೋಗಿ ಆಗಮೋಕ್ತ ಸತ್ಯಾಂಶಗಳನ್ನು ಪರಿತ್ಯಾಗಮಾಡುವ ದುಷ್ಪರಿಣಾಮಕ್ಕೆ ಎಡೆಯಾಗದಂತೆ ಎಚ್ಚರಗೊಳ್ಳಬೇಕು. ಪ್ರಕೃತ, ಒಂದೊಂದು ಉಪವರ್ಗದಲ್ಲಿರುವ ಜೀವರಲ್ಲಿ ವೈಯಕ್ತಿಕವಾದ ಮತ್ತು ಸಾಂಘಿಕವಾದ ಬಹು ತಾರತಮ್ಯಗಳುಂಟು. ಉದಾ:- ಮುಕ್ತಿಯೋಗ್ಯ ವರ್ಗದಲ್ಲಿ ಮೊದಲನೆಯ ಉಪವರ್ಗವಾದ ದೇವತೆಗಳಲ್ಲಿ ಬಹು ಪ್ರಭೇದಗಳುಳ್ಳ ಶಾಖೆಗಳಿವೆ. ಋಜುಗಳು, ತಾತ್ತ್ವಿಕರು, ಅತಾತ್ತ್ವಿಕರು, ಯೋಗಿಗಳು, ಅಯೋಗಿಗಳು, ಕರ್ಮಜರು, ಆಜಾನಜರು, ಇತ್ಯಾದಿ. ಈ ಶಾಖಾ- ಪ್ರಭೇದಗಳಲ್ಲಿ ಸಹ ಒಂದೊಂದರಲ್ಲಿ ಬಹು ವಿಭಾಗಗಳಿವೆ. ಉದಾ:- ತಾತ್ತ್ವಿಕರಲ್ಲಿ ತತ್ತ್ವಾಭಿಮಾನಿಗಳು, (ಅದೇ ತತ್ತ್ವಕ್ಕೆ) ಅವಾಂತರಾಭಿಮಾನಿಗಳು, ತತ್ತ್ವಾಂಶಗಳಿಗೆ (ಕಲೆಗಳಿಗೆ) ಮಾತ್ರ ಅಭಿಮಾನಿಗಳು – ಹೀಗೆ. ಒಂದೇ ಗುಂಪಿಗೆ ಸೇರಿದ ಸಮಾನರೆಂದು ಪರಿಗಣಿಸಲ್ಪಡುವ ಮನುಷ್ಯೋತ್ತಮರೇ ಮೊದಲಾದ ಜೀವರಲ್ಲಿ ಸಹ ವೈಯಕ್ತಿಕವಾದ ಸೂಕ್ಷ್ಮ ತರತಮಭಾವಗಳು ಇದ್ದೇ ಇವೆ.- ಒಂದೇ ತರಗತಿಯಲ್ಲಿ ನೂರಾರು ಶಾಲಾ ವಿದ್ಯಾರ್ಥಿಗಳಲ್ಲಿ ವೈಯಕ್ತಿಕವಾದ ಪರಸ್ಪರ ತಾರತಮ್ಯಗಳು ಕಂಡುಬರುವಂತೆ.

ಹೀಗೆ ತರತಮಭಾವಸಹಿತರಾದ ಅನಂತ ಜೀವರಾಶಿಗಳಲ್ಲಿ ಪ್ರತಿಬ್ರಹ್ಮ-ಕಲ್ಪದಲ್ಲಿ ಸೃಷ್ಟಿಯಲ್ಲಿ ತರಲ್ಪಡುವ ಜೀವರು ಸೃಜ್ಯರು. ಅವರು ಆ ಕಲ್ಪದಲ್ಲಿ

ಸ್ವಸ್ವಗತಿಗಳನ್ನು ಸಾಧಿಸಿಕೊಳ್ಳುತ್ತಾರೆ. ಅಸೃಜ್ಯರಾಶಿಯಲ್ಲಿರುವ ಇತರ ಜೀವರು ಭಾವೀ ಬ್ರಹ್ಮಕಲ್ಪಗಳಲ್ಲಿ ಶ್ರೀಹರೀಚ್ಛಾನುಸಾರ ಸೃಷ್ಟರಾಗಿ ಸ್ವಗತಿಗಳನ್ನು ಹೊಂದುತ್ತಾರೆ. ಬಹು ಬ್ರಹ್ಮಕಲ್ಪಗಳಾದನಂತರ ಸೃಷ್ಟಿಯಲ್ಲಿ ಬರತಕ್ಕ ಜೀವರೇ ಇಲ್ಲದಂತಾಗಿ ಸೃಷ್ಟಿಯೇ ನಿಂತುಹೋಗುವುದೆಂಬ ಸಂಶಯಕ್ಕೆ ಅವಕಾಶವಿಲ್ಲ. ಏಕೆಂದರೆ, ಅನಂತ ಜೀವರನ್ನೊಳಗೊಂಡ ಅನಂತ ಜೀವರಾಶಿಗಳಿವೆ. ಅನಂತ ಬ್ರಹ್ಮಕಲ್ಪಗಳಲ್ಲಿ ಸೃಷ್ಟರಾಗುತ್ತಲೇ ಇರುವರು. ಅಷ್ಟೇಕೆ ! ಬ್ರಹ್ಮಪದವಿಗೆ ಬರುವ ಋಜುಗಣಕ್ಕೆ ಸೇರಿದ ಜೀವರೇ ಅನಂತ ಸಂಖ್ಯೆಯಲ್ಲಿರುವರು. *ಅನಾಗತಾ ಅತೀತಾಶ್ಚ ಯಾವಂತಃ ಸಹಿತಾಃಕ್ಷಣಾಃ । ಅತೀತಾನಾಗತಾಶ್ಚೈವ ಯಾವಂತಃ ಪರಮಾಣವಃ । ತತೋಽಪ್ಯನಂತಗುಣಿತಾ ಜೀವಾನಾಂ ರಾಶಯಃ ಪೃಥಕ್॥* (ಸ.ರ.ಮಾ) ಮುಂದೆ ಬರುವ ಮತ್ತು ಹಿಂದೆ ಕಳೆದುಹೋದ ಅನಂತಕಾಲದ ಕ್ಷಣಗಳನ್ನೂ ಭೂತಭವಿಷ್ಯತ್ಕಾಲಗಳಲ್ಲಿ ಸೃಷ್ಟವಾಗುವ ಬ್ರಹ್ಮಾಂಡಗಳಲ್ಲಿರುವ ಪರಮಾಣುಗಳ ಸಂಖ್ಯೆಯನ್ನೂ ಒಟ್ಟುಗೂಡಿಸಿದರೆ ಅದರ ಅನಂತ ಗುಣದಷ್ಟು ಅಧಿಕ ಸಂಖ್ಯೆಯ ಪ್ರತ್ಯೇಕ ಜೀವರಾಶಿಗಳಿವೆ. ಇದು ಹೇಗೆ ಶಕ್ಯವೆಂಬ ಸಂಶಯ ಬೇಡ. ಶ್ರೀಹರಿಯ ಅಚಿಂತ್ಯಾದ್ಭುತ ಶಕ್ತಿಯಿಂದ ಈ ಎಲ್ಲವೂ ಶಕ್ಯವೇ.

ಜಗತ್ಸೃಷ್ಟಿಯು ಪ್ರವಾಹತಃ ನಿತ್ಯವೆಂದೂ, ಜೀವರಾಶಿಗಳು ಎಂದಿಗೂ ಮುಗಿಯದ ಆನಂತ್ಯವುಳ್ಳದ್ದೆಂದೂ, ನಿರೂಪಿಸುವ ಆಗಮೋಕ್ತ ಪ್ರಮೇಯಗಳ ವಿಷಯದಲ್ಲಿ ಪ್ರಧಾನವಾದ ಎರಡು ಸಂಶಯಗಳು ಉದ್ಭವಿಸುತ್ತವೆ. ಸೃಷ್ಟಿ-ಕಾಲದಲ್ಲಿ ಸಮಸ್ತ ಜೀವರೂ ಸೃಷ್ಟಿಯಲ್ಲಿರುವರೊ? ಅಥವ, ಸೃಜ್ಯರೆಂಬ ಕೆಲವರು ಮಾತ್ರವೋ? ಇದನ್ನೇ ಬೇರೆ ಶಬ್ದಗಳಲ್ಲಿ ಹೇಳಿದರೆ, ಮುಖ್ಯ ಸೃಷ್ಟಿಯೋ? ಸಮಷ್ಟಿ ಸೃಷ್ಟಿಯೋ? ಎಂಬುದು ಮೊದಲನೆಯ ಸಂಶಯ. ಅಸೃಜ್ಯ ರಾಶಿಯಿಂದ ಒಂದು ಮುಷ್ಟಿ ಜೀವರನ್ನೆತ್ತಿ ಶ್ರೀಹರಿಯು ಸೃಷ್ಟಿಯಲ್ಲಿ ಪ್ರವೇಶಗೊಳಿಸುವನೋ ಅಥವಾ, ಅನಂತ ಜೀವರಾಶಿಗಳುಳ್ಳ ಪೂರಾ ಅಸೃಜ್ಯ-ರಾಶಿಯೇ ಸೃಷ್ಟಿಯಲ್ಲಿ ಬರುತ್ತದೆಯೋ? ಪ್ರತಿ ಬ್ರಹ್ಮಕಲ್ಪದಲ್ಲಿ ಬಹುಜೀವರು ಮುಕ್ತರಾಗುವರಷ್ಟೆ. ಮುಕ್ತ ಜೀವರಾಶಿಗಳಲ್ಲಿ ಎಷ್ಟೋ ಜೀವರು ಅಸಂಖ್ಯ ಬ್ರಹ್ಮಕಲ್ಪಗಳ ಹಿಂದೆ ಮುಕ್ತರಾಗಿದ್ದಾರೆ. ಮುಂದೆ ಸಹಸ್ರಾರು (ಅನಂತ) ಬ್ರಹ್ಮಕಲ್ಪಗಳ ನಂತರ ಸೃಷ್ಟಿಯಲ್ಲಿ ಬಂದು ಮುಕ್ತರಾಗುತ್ತಾರೆ.

ಪ್ರತಿ ಬ್ರಹ್ಮಕಲ್ಪದಲ್ಲಿ ಉತ್ತಮಾಧಮ ಮಧ್ಯಮ ವರ್ಗಗಳಿಗೆ ಸೇರಿದ ಅಸಂಖ್ಯ ಜೀವರು ಸೃಷ್ಟಿಯಲ್ಲಿರುತ್ತಾರೆ. ಶ್ರೀಹರಿಯು ಸಮಾನ ಯೋಗ್ಯತೆಯ ಜೀವರಿಗೆ ಕೆಲವರಿಗೆ ಬೇಗ, ಮತ್ತೆ ಕೆಲವರಿಗೆ ಬಹುಕಾಲದ ನಂತರ ಮುಕ್ತಿಯನ್ನು ಕೊಡುತ್ತಾನೆಂದು ಹೇಳಬೇಕಾಗುತ್ತದೆ. ಇದರಿಂದ ಶ್ರೀಹರಿಯಲ್ಲಿ ವೈಷಮ್ಯ (ಪಕ್ಷಪಾತ) ದೋಷಪ್ರಾಪ್ತವಾಗುವುದಿಲ್ಲವೇ ? ಎಂಬುದು ಎರಡನೆಯ ಸಂಶಯ. ಆಗಮ ಪ್ರಮಾಣಗಳ ತಾತ್ಪರ್ಯವನ್ನು ಗಾಢವಾಗಿ ವಿಮರ್ಶಿಸಿ ತಿಳಿದರೆ ಈ ಸಂಶಯಗಳಿಗೆ ಆಧಾರವಿಲ್ಲೆಂದು ತಿಳಿದು ಬರುತ್ತದೆ.

ಸೃಷ್ಟಿಯು ನಾಲ್ಕು ಪ್ರಕಾರವೆಂದು ಈ ಹಿಂದೆ ನಿರೂಪಿಸಿದುದನ್ನು ಇಲ್ಲಿ ಸ್ಮರಣೆಗೆ ತಂದು, ಅವುಗಳಲ್ಲಿ ಪರಾಧೀನ ವಿಶೇಷಾವಾಪ್ತಿರೂಪದ ಸೃಷ್ಟಿಯ ಬಗ್ಗೆ, ಹೆಚ್ಚು ಗಾಢವಾದ ವಿಮರ್ಶೆಗೆ ಬೇಕಾದ ಕೆಲವು ಸೂಕ್ಷ್ಮ ಪ್ರಮೇಯಗಳನ್ನು ಗಮನಿಸುವುದು ಅವಶ್ಯಕ. ಈ ಬ್ರಹ್ಮಕಲ್ಪದಲ್ಲಿ ಸ್ಥೂಲಸಾಧನ ದೇಹಗಳನ್ನು ಹೊಂದಿ ಸ್ವಗತಿಗಳನ್ನು ಸಾಧಿಸುವ ಜೀವರಿಗೂ ಮತ್ತು ಅಸೃಜ್ಯರಾಗಿಯೇ ಉಳಿಯುವ, ಎಂದರೆ ಮುಂದಿನ ಬ್ರಹ್ಮಕಲ್ಪಗಳಲ್ಲಿ ಸೃಷ್ಟಿಗೆ ಬರಲಿರುವ ಜೀವರಿಗೂ ಸಹ ಒಂದು ಪ್ರಕಾರದ ಪರಾಧೀನ ವಿಶೇಷಾವಾಪ್ತಿ ಉಂಟು. ಅಸೃಜ್ಯ ಜೀವರಿಗೆ ಸಾಧನೋಪಯೋಗಿಗಳಾದ ಸ್ಥೂಲ ಶರೀರದ ಪ್ರಾಪ್ತಿ ಇಲ್ಲ. ಆದರೂ ಪ್ರಲಯಕಾಲದಲ್ಲಿ ಸುಪ್ತಾವಸ್ಥೆಯಲ್ಲಿದ್ದು, ಲಿಂಗ ದೇಹ ಮಾತ್ರದಿಂದ ಯುಕ್ತರಾಗಿದ್ದ ಈ ಜೀವರು, ಸೃಷ್ಟಿಕಾಲದಲ್ಲಿ ತಮ್ಮ ಸಮಾನ ಯೋಗ್ಯತೆಯ ಜೀವರ ಕರ್ಮಾಭಿಮಾನಿಗಳಾಗಿ ಮಾತ್ರ ವರ್ತಿಸುವ ಅವಸ್ಥೆಯನ್ನು ಹೊಂದುತ್ತಾರೆ. ಆಗ ಅವರ ಲಿಂಗದೇಹಗಳೂ ಸ್ವಲ್ಪ ಉಪಚಯಗೊಳ್ಳುತ್ತವೆ. ಇದೇ ಅಸೃಜ್ಯರಿಗೆ ದೊರೆಯುವ ವಿಶೇಷಾವಾಪ್ತಿ; ಇದೇ ಅವರ ಸೃಷ್ಟಿ.[35]

35. ವಿನಾಽಪಿ ದ್ರವ್ಯಾಂತರೋಪಚಯಂ ಸೃಷ್ಟಿ ಸಮಯೇ ಸರ್ವಲಿಂಗ ದೇಹಾನಾಮಪಿ ಕಿಂಚಿತ್ ವಿಕ್ರಿಯಾ ವಿಶೇಷಾಂಗೀಕಾರಾತ್-ದೃಶ್ಯತೇ ಹಿ ಸ್ಪಷ್ಟಂ ಹರಿದ್ರಾಚೂರಣಾದಿ ಬೀಜೇಷು. (ಸ.ರ.ಮಾ.)-ಸೂಕ್ಷ್ಮತತ್ತ್ವಗಳು ವಿಕಾರಗೊಂಡು ಸ್ಥೂಲಭಾವವನ್ನು ಹೊಂದುವಾಗ ಸತ್ವಾದಿ ಗುಣಗಳು ಉಪಚಯ ಸಾಮಗ್ರಿಗಳಾಗಿ ಉಪಯೋಗಿಸಲ್ಪಡುತ್ತವೆ. ಯಾವ ಉಪಚಯ ದ್ರವ್ಯದ ಅವಶ್ಯಕತೆಯೂ ಇಲ್ಲದೆ ಸೃಷ್ಟಿಕಾಲದಲ್ಲಿ ಅಮುಕ್ತ ಸರ್ವಜೀವರ ಲಿಂಗದೇಹಗಳಿಗೂ ಅಲ್ಪವಾದ ವಿಕಾರ ವಿಶೇಷವು ಅಂಗೀಕೃತವಾಗಿದೆ. ಅರಿಶಿನದ ಕೊನೆ ಮೊದಲಾದ ಬೀಜಗಳಲ್ಲಿ ಬಿತ್ತನೆ ಕಾಲದಲ್ಲಿ

ಲಿಂಗದೇಹ ಮಾತ್ರಯುಕ್ತರಾಗಿ ಸ್ವಾಭಿಮನ್ಯಮಾನ ಕರ್ಮಮಾತ್ರ ಜ್ಞಾನವುಳ್ಳವರಾಗಿ ಈ ಅಸೃಜ್ಯರೆಂಬ ಜೀವರು ಸೃಷ್ಟಿಕಾಲದಲ್ಲಿ ಸುಪ್ತಪ್ರಾಯರಾಗಿರುತ್ತಾರೆ.[36] ಅಸೃಜ್ಯ ಜೀವರಿಗೆ ಈ ವಿಧದ ಕರ್ಮಾಭಿಮಾನಿ ದಶಾವನ್ನು ಅಂಗೀಕರಿಸಲೇಬೇಕು. ಇಲ್ಲವಾದರೆ ಒಂದೇ ಬ್ರಹ್ಮಕಲ್ಪದಲ್ಲಿ ಸಮಸ್ತ ಜೀವರೂ

---

ಉಪಚಯ ವಸ್ತುವಿಲ್ಲದೆ, ಅವು ಇದ್ದಲ್ಲಿಯೇ, ಅಲ್ಪ ವಿಕಾರವು ತೋರುತ್ತದೆಂಬುದು ಲೋಕಾನುಭವಸಿದ್ಧವಾಗಿದೆ.

36. ಲಿಂಗದೇಹ ಮಾತ್ರೇಣ ಸ್ವಾಭಿಮನ್ಯಮಾನ ಕರ್ಮಮಾತ್ರ ಶರೀರಾಶ್ಚ ಕರ್ಮಮಾತ್ರ ಜ್ಞಾನಯುಕ್ತಾಃ ಸುಪ್ತಪ್ರಾಯಾ ವರ್ತಂತೆ । ಋಜೂನಾಂ ಋಜು ಕರ್ಮಾಭಿಮಾನಿತ್ವಂ ತಸ್ಮಾತ್ ಕರ್ಮಾಭಿಮಾನಿತಾಯಾಮಪಿ ಅಶೇಷ ಜಗದ್ವಿಷಯಕಜ್ಞಾನಂ ಭಗವತಿ ಪಾರೋಕ್ಷ್ಯೇಣ ಜ್ಞಾನಪೂರ್ತಿಃ ಬಹು ವಿಷಯೇಷ್ವಾಪರೋಕ್ಷ್ಯೇಣ ಚ । ತದಿತರೇಷಾಮುತ್ತಮಾನಾಂ ಉತ್ತಮಕರ್ಮಾಭಿಮಾನಿತ್ವಂ ಇತ್ಯಾದಿ ಕರ್ಮಾಭಿಮಾನಿತಯಾ ಲಿಂಗದೇಹೇನೈವ ಅವಸ್ಥಾನಮಾತ್ರಂ ಕರ್ಮಾಭಿಮಾನಿದಶಾ । ಸ್ವಾತ್ಮಸ್ವಾಭಿಮಾನ ಕರ್ಮ ದೇಶಕಾಲಾದ್ಯತಿರೇಕೇನ ಅನ್ಯವಿಷಯಜ್ಞಾನಶೂನ್ಯಾನಾಂ ಅತಏವ ದರ್ಶನ ಶ್ರವಣಾದಿರಹಿತಾನಾಂ ಕೇವಲಂ ಸುಪ್ತಪ್ರಾಯಾಣಾಂ ಕರ್ಮಾಭಿಮಾನಿನಾಂ ನಾಂತಃ ಕರಣಾದಿ ನಿಯಾಮಕೈಃ ಕೃತ್ಯಮಸ್ತಿ. (ಸ.ರ.ಮಾ) ಲಿಂಗದೇಹ ಮಾತ್ರ ಉಳ್ಳವರಾಗಿ ತಮ್ಮಿಂದ ಅಭಿಮನ್ಯವಾದ (ಸ್ಥೂಲ ಸಾಧನ ದೇಹಗಳನ್ನು ಹೊಂದಿ ಕರ್ಮಗಳಲ್ಲಿ ತೊಡಗಿರುವ ತಮ್ಮ ಸಮಾನ ಜೀವರ) ಕರ್ಮಗಳನ್ನೇ ದೇಹಗಳಾಗಿ ಉಳ್ಳವರಾಗಿ ಆ ಕರ್ಮಗಳ ಜ್ಞಾನ ಮಾತ್ರವುಳ್ಳವರಾಗಿ (ಅವುಗಳ ಸುಖ-ದುಃಖಾದಿ ಅನುಭವರಹಿತರಾಗಿ) ನಿದ್ರಾವಸ್ಥೆಯಲ್ಲಿ ಇರುವಂತೆ ಇರುವರು. ಕರ್ಮಾಭಿಮಾನಿದಶಾ ಎಂದರೆ ಇದೇ. ಋಜುಗಳು (ವಾಯು, ಬ್ರಹ್ಮಪದವಿಗೆ ಬರಲು ಅರ್ಹರಾದವರು) ಇತರ ಋಜು ಜೀವರಲ್ಲಿ ಕರ್ಮಾಭಿಮಾನಿಗಳಾಗಿರುತ್ತಾರೆ. ಈ ಋಜು ಕರ್ಮಾಭಿಮಾನಿಗಳು ಸಮಸ್ತ ಜಗದ್ವಿಷಯಕ ಜ್ಞಾನವನ್ನೂ, ಭಗವದ್ವಿಷಯಕ ಪೂರ್ಣ ಪರೋಕ್ಷಜ್ಞಾನವನ್ನೂ (ಶಾಸ್ತ್ರಾದಿಗಳಿಂದ ದೊರೆಯುವ ಜ್ಞಾನವನ್ನು) ಮತ್ತು ಬಹು ಭಗವದ್ರೂಪಗಳ ಅಪರೋಕ್ಷಜ್ಞಾನವನ್ನೂ ಉಳ್ಳವರಾಗಿರುತ್ತಾರೆ. ಇತರ ಉತ್ತಮ ಜೀವರ ಸ್ವಸಮಾನ ಉತ್ತಮ ಜೀವರಲ್ಲಿ ಕರ್ಮಾಭಿಮಾನಿಗಳಾಗಿರುತ್ತಾರೆ. ತಮ್ಮ ಮತ್ತು ತಮ್ಮಿಂದ ಅಭಿಮನ್ಯಮಾನವಾದ ಕರ್ಮ, ದೇಶ, ಕಾಲಗಳಿಂದ ವ್ಯತಿರಿಕ್ತವಾದ ಅನ್ಯ ವಿಷಯಕ ಜ್ಞಾನರಹಿತರಾಗಿ ಚಕ್ಷುರಾದಿ ಇಂದ್ರಿಯ ವ್ಯಾಪಾರವಿಲ್ಲದೆ ಸುಪ್ತಪ್ರಾಯರಾದ ಕರ್ಮಾಭಿಮಾನಿಗಳಿಗೆ ಅಂತಃಕರಣಾದಿ ನಿಯಾಮಕರಿಂದ ಆಗಬೇಕಾದುದೇನೂ ಇಲ್ಲ. ಆದುದರಿಂದ ಅಸೃಜ್ಯ ಜೀವರ ಲಿಂಗದೇಹಗಳಲ್ಲಿ ಸೃಷ್ಟಿಕಾಲದಲ್ಲಿ ತಾತ್ತ್ವಿಕ ದೇವತೆಗಳ ವ್ಯಾಪಾರವಿಲ್ಲ.

ಸ್ವಗತಿಗಳನ್ನು ಹೊಂದಿ, ಮುಂದೆ ಸೃಷ್ಟಿಯೇ ಅನುಪಪನ್ನವಾಗುತ್ತದೆ. ಪ್ರವಾಹತಃ ನಿತ್ಯವೆಂದು ಸಾರುವ ವೇದಗಳು ಅಪ್ರಮಾಣಗಳಾಗುತ್ತವೆ. ಸರ್ವೋತ್ಕೃಷ್ಟ ಪ್ರಮಾಣಗಳಾದ ವೇದವಾಕ್ಯಗಳು ನಿರವಕಾಶವಾಗಿ ಹೇಳುವ ಅರ್ಥಗಳಿಗೆ ವಿರೋಧಬಾರದಂತೆ ಪ್ರಮೇಯಗಳನ್ನು ನಿರ್ಣಯಿಸಿಕೊಳ್ಳಬೇಕು. ಜೀವನಿಗೆ ಆಚರಿಸಲ್ಪಡುವ ಕರ್ಮಗಳಿಗೆ ಅಭಿಮಾನಿ ಚೇತನರು ಇರುವರು; ಎಂದರೆ ಆ ಕರ್ಮಗಳೇ ಆ ಚೇತನರ ದೇಹಗಳು. ಈ ಪ್ರಮೇಯವನ್ನು ***''ಕರ್ಮಾಣಿತಾನಿ ಚ ಪೃಥಕ್ ಚೇತನಾನ್ಯೇವ ಸರ್ವಶಃ । ಅಚೇತನ ಶರೀರಾಣಿ ಸ್ವಕರ್ಮಫಲ ಭಾಂಜಿ ಚ ।''*** (ಅನುವ್ಯಾಖ್ಯಾನ). ಸರ್ವಜೀವರಲ್ಲಿರತಕ್ಕ ಅವಧಿರಹಿತ ಅನಾದಿ ಕರ್ಮಗಳೆಲ್ಲವೂ ಅಧಿಷ್ಠಾತೃ ಚೇತನ ಸಹಿತವಾದವುಗಳೇ. ಆ ಚೇತನರೂ ತಮ್ಮ ಕರ್ಮಗಳ ಫಲಗಳನ್ನು ಹೊಂದುತ್ತವೆ. ಇತ್ಯಾದಿ ಭಾಗದಲ್ಲಿ, ಕರ್ಮಾಭಿ-ಮಾನಿಗಳಲ್ಲಿಯೂ ಪ್ರತ್ಯೇಕವಾಗಿ ಅಪರಿಮಿತ ಕರ್ಮಗಳಿವೆ; ಈ ಎಲ್ಲವನ್ನೂ ಬಲ್ಲ ಸರ್ವಜ್ಞನಾದ ಶ್ರೀಹರಿಯ ಶಕ್ತಿಯು ಪ್ರತಿಬಂಧರಹಿತ ನಿಸ್ಸೀಮ ಶಕ್ತಿಯೆಂದು ಸಿದ್ಧವಾಗುತ್ತದೆಂದು ನಿರ್ಣಯಿಸಲಾಗಿದೆ. ಮೇಲೆ ಉದಹರಿಸಲಾದ ಅನುವ್ಯಾಖ್ಯಾನ ವಾಕ್ಯಗಳನ್ನು ಪ್ರಮಾಣೀಕರಿಸುತ್ತಾ ಶ್ರೀಸತ್ಯನಾಥತೀರ್ಥರು ತಮ್ಮ ಅಭಿನವ ತರ್ಕತಾಂಡವ ಗ್ರಂಥದ ಅದೃಷ್ಟಸಿದ್ಧಿ ಪ್ರಕರಣದಲ್ಲಿ ಹೀಗೆ ಹೇಳಿರುವರು:- ***''ಕರ್ಮಣಾಂ ಅಚೇತನತ್ವವಾದಸ್ತು ತಚ್ಛರೀರಸ್ಯ ಅಚೇತನತ್ವಾಭಿಪ್ರಾಯೇಣ । ನ ತು ಸರ್ವಾತ್ಮನಾ ಅಚೇತನತ್ವಾತ್''*** - ಕರ್ಮಗಳಿಗೆ ಅಚೇತನತ್ವವನ್ನು ಹೇಳುವ ವಾದವಾದರೋ ಕರ್ಮಾಭಿಮಾನಿಗಳ ಶರೀರತ್ವ-ವುಳ್ಳವುಗಳೆಂಬ ಅಭಿಪ್ರಾಯದಿಂದ (ಆ ಕರ್ಮಗಳು ಕರ್ಮಾಭಿಮಾನಿ ಚೇತನದ ಶರೀರಗಳೆಂಬ ಅಭಿಪ್ರಾಯದಿಂದ),- ಸರ್ವಪ್ರಕಾರದಿಂದ ಅಚೇತನತ್ವ-ವುಳ್ಳವುಗಳೆಂಬ ಕಾರಣದಿಂದ ಅಲ್ಲ. ಕರ್ಮಗಳು ಜಡವೆಂಬುದು ನಿಜ. ಆದರೆ ಅವೂ ಸಹ ಸಜೀವ ಪ್ರಾಣಿದೇಹಗಳಂತೆ ಅಧಿಷ್ಠಾತೃ ಚೇತನಗಳುಳ್ಳವೇ.

ಹೀಗೆ ಸೃಜ್ಯ-ಅಸೃಜ್ಯರೆಂಬ ವಿಭಾಗವು ಸ್ಥೂಲಶರೀರಪ್ರಾಪ್ತಿ ಮತ್ತು ಅಪ್ರಾಪ್ತಿವಿವಕ್ಷೆಯಿಂದ ಮಾತ್ರ. ಸ್ಥೂಲಶರೀರಪ್ರಾಪ್ತಿ ದೃಷ್ಟಿಯಿಂದ ಕೆಲವು ಜೀವರು ಮಾತ್ರ ಸೃಷ್ಟಿಯಲ್ಲಿ ತರಲ್ಪಡುತ್ತಾರೆ. ಕರ್ಮಾಭಿಮಾನಿತ್ವ ದೆಶೆಯಲ್ಲಿ ಅಸೃಜ್ಯ ಜೀವರೆಲ್ಲರೂ ಇರುವರೆಂಬ ದೃಷ್ಟಿಯಿಂದ ಸಮಸ್ತಜೀವರೂ ಸೃಷ್ಟಿಯಲ್ಲಿ

ಬರುವರೆಂದು ಹೇಳುವವರ ಅಭಿಪ್ರಾಯವಾಗಿದೆ. ಈ ವಿವಕ್ಷಾ ಭೇದದಿಂದ ಮುಷ್ಟಿ-ಸಮಷ್ಟಿ ಸೃಷ್ಟಿಗಳಲ್ಲಿ ವಿರೋಧವಿಲ್ಲೆಂದು ತಿಳಿಯಬಹುದು. ಇನ್ನು ಸಮಾನ ಯೋಗ್ಯತೆಯ ಜೀವರಿಗೆ ಮಹತ್ಕಾಲ ವ್ಯವಧಾನದಿಂದ ಮುಕ್ತಿಯನ್ನು ಹೊಂದಿಸುವ ಸೃಷ್ಟ್ಯಾದಿಕರ್ತನಾದ ಪರಮಾತ್ಮನಲ್ಲಿ ವೈಷಮ್ಯದೋಷ ಬರುವುದಿಲ್ಲವೇ? ಎಂಬ ಸಂಶಯವನ್ನು ಪರಿಶೀಲಿಸೋಣ.

ಶ್ರೀಹರಿಯು ಸರ್ವದೋಷದೂರನೆಂದು **ನಿರನಿಷ್ಟೋ ನಿರವದ್ಯಃ** ಇತ್ಯಾದಿ ಶ್ರುತಿಗಳು ಹೇಳುತ್ತವೆ. ಮತ್ತು **ಓಂ ವೈಷಮ್ಯ ನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾ ದರ್ಶಯತಿ ಓಂ** ಎಂದು ಬ್ರಹ್ಮಸೂತ್ರದಲ್ಲಿ ಶ್ರೀಹರಿಯಲ್ಲಿ ವೈಷಮ್ಯಾದಿ ದೋಷಗಳಿಲ್ಲವೆಂದು ನಿರ್ಣಯಿಸಲಾಗಿದೆ. ಸಂಸಾರಾವಸ್ಥೆಯಲ್ಲಿ ಸಮಾನ ಯೋಗ್ಯತೆಯ ಜೀವರಿಗೆ ಸುರ, ನರ, ತಿರ್ಯಗಾದಿ ದೇಹಗಳನ್ನು ಹೊಂದಿಸು-ವುದರಲ್ಲಿ ನಿರ್ನಿಮಿತ್ತ ವ್ಯತ್ಯಾಸವಾದರೆ ವೈಷಮ್ಯವನ್ನು ತಿಳಿಯಬೇಕಾಗ-ಬಹುದು. ಆದರೆ ಈ ವಿಧ ವೈಷಮ್ಯವು ಎಲ್ಲಿಯೂ ಎಂದೂ ಕಂಡುಬರುವುದಿಲ್ಲ. ಸ್ವರೂಪದಿಂದ ಸಮಾನರಾದ ಜೀವರ ಸಾಧನೆಗಳು ಪರಿಪೂರ್ತಿಗೊಳ್ಳುವ ಕಾಲಾವಧಿ, ಆ ಅವಧಿಯಲ್ಲಿ ಅವರಿಗೆ ದೊರೆಯುವ ದೇಹಗಳು, ಅವುಗಳಿಂದಾಗುವ ಕರ್ಮಗಳು, ಭೋಗಿಸುವ ಸುಖದುಃಖಾದಿಗಳ ಮೊತ್ತ, ಇವೇ ಮೊದಲಾದ ವಿಚಾರಗಳಲ್ಲಿ ಅವರಲ್ಲಿ ಸಮತ್ವವೇ ಇರುತ್ತದೆ. ಸಮಾನ ಜೀವರಿಂದ ಹೊಂದಲ್ಪಡುವ ಸ್ವರೂಪಾನಂದ, ಮುಕ್ತಿಸ್ಥಾನಾದಿಗಳು, ಹರಿಪ್ರಿಯತ್ವ, ತದ್ಭಕ್ತಿ ವೈರಾಗ್ಯಾದಿ ಗುಣಗಳು ಮೊದಲಾದ ಅಂಶಗಳಲ್ಲಿ ಸಮರಾಗಿರುವರೆಂಬುದು ಸಾಮ್ಯವನ್ನು ಹೇಳುವ ಶ್ರುತಿಗಳ ಭಾವ. ಹೀಗಿದ್ದರೂ, ಅವಾಂತರ ಅಲ್ಪವ್ಯತ್ಯಾಸಗಳಿರುವುವೆಂಬುದು ಶ್ರುತಿಸಮ್ಮತವೂ ಆಗಿದೆ. ಕೇವಲ ಈಶ್ವರೇಚ್ಛೆಯಿಂದ ಅಸೃಜ್ಯ ಜೀವರ ಕರ್ಮಾಭಿಮಾನಿತ್ವ ದೆಶೆಯಲ್ಲಿ ಕಾಣುವ ಕಾಲಾಧಿಕ್ಯವು ವೈಷಮ್ಯ ದೋಷವಾಗಲಾರದು. ದೋಷದೂರನೆಂದು ಹೇಳುವ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೊರಿಸು-ವುದಕ್ಕಿಂತ, ಅನಂತ ಕಾಲದಲ್ಲಿ ಸಹ ವಿಶ್ವದ ಸೃಷ್ಟ್ಯಾದಿಕರ್ತನಾದ ಸ್ವತಂತ್ರ ಪ್ರಭುವೆಂಬ ಮಹಾವೈಭವವನ್ನು ಸಾಧಿಸಿಕೊಡುವ ಇಂತಹ ಕ್ಷುದ್ರ-ವೈಷಮ್ಯವು ಅಂಗೀಕಾರಾರ್ಹವೇ ಸರಿ.

## ಜೀವರನ್ನೂ ಬಂಧಿಸುವ ಪ್ರಕಾರ

ಈ ಮುಂದೆ ಜೀವರಿಗಿರುವ ಬಂಧಸ್ವರೂಪ ಮತ್ತು ಈಶ್ವರನ ಇಚ್ಛೆಯಿಂದ ಅದು ಜೀವರನ್ನು ಬಂಧಿಸುವ ಪ್ರಕಾರವನ್ನು ನಿರೂಪಿಸಲಾಗುತ್ತದೆ. ಸೃಜ್ಯ-ಅಸೃಜ್ಯ ರಾಶಿಗಳಲ್ಲಿರುವ ಬದ್ಧರೆಂಬ ಅನಂತಜೀವರು ಸಲಿಂಗಿಗಳು (ಲಿಂಗ-ದೇಹವುಳ್ಳವರು). ಮುಕ್ತರೆಲ್ಲರೂ ಲಿಂಗದೇಹಗಳನ್ನು ತೊರೆದು ಸ್ವಸ್ವರೂಪದ ಆವಿರ್ಭಾವವುಳ್ಳವರು. ಅಮುಕ್ತರಾದ ಎಲ್ಲ ಜೀವರ ಸ್ವರೂಪವನ್ನೂ ಲಿಂಗ-ದೇಹವು ಅನಾದಿ ಕಾಲದಿಂದ ಆಚ್ಛಾದಿಸಿದೆ. ಈ ಲಿಂಗದೇಹವು ಜೀವಸ್ವರೂಪದ ಆಕೃತಿಯನ್ನು ಹೋಲುತ್ತಾ, ಮೈಯಿಗೆ ಹತ್ತಿಕೊಂಡಂತೆ ಬಿಗಿಯಾಗಿರುವ ಕವಚದಂತಿದೆ. ಅದು ಜೀವಸ್ವರೂಪದ ಆಕೃತಿ ಸೂಚಕವಾದುದರಿಂದ ಲಿಂಗ ದೇಹವೆಂಬ ಅನ್ವರ್ಥನಾಮವುಳ್ಳದ್ದೂ ಆಗಿದೆ.

ಜೀವಸ್ವರೂಪಗಳು ನಾನಾ ಆಕೃತಿಗಳುಳ್ಳವು-ನಿರಾಕಾರ ವಸ್ತುವೆಂದರೆ ಶೂನ್ಯವೇ. ಲೋಕಾನುಭಾವದಿಂದ ನಾವು ತಿಳಿದಿರುವ ಆಕೃತಿಗಳೆಲ್ಲವೂ ಪ್ರಾಕೃತವಾದವು, ವಿಕಾರ ಮತ್ತು ನಾಶವುಳ್ಳವು. **ಜೀವಸ್ವರೂಪಗಳು ಅಪ್ರಾಕೃತ-ಚೇತನಾತ್ಮಕ; ವಿಕಾರ ಮತ್ತು ನಾಶಗಳಿಲ್ಲದವು.** ಚೇತನಾತ್ಮಕ ವಸ್ತುಗಳು ಎಂದೂ ಕಾಣದ ಅಜ್ಞ ಲೋಕಾನುಭವವನ್ನಾಶ್ರಯಿಸಿ ಚೇತನವು ನಿರಾಕಾರವೆಂದು ತಿಳಿಯುವುದು, ಆಗಮ ಪ್ರಾಮಾಣ್ಯವನ್ನೂ, ಆಗಮಗಳಿಂದ ಸಿದ್ಧವಾಗುವ ಅತೀಂದ್ರಿಯ ವಸ್ತುಗಳನ್ನು ತಿರಸ್ಕರಿಸುವ ವ್ಯಕ್ತಿಯು ನಾಸ್ತಿಕ ಬುದ್ಧಿಯುಳ್ಳವನೇ ಜಡ, ಚೇತನ ವಿಭಾಗವನ್ನೇ ಒಪ್ಪದ ಕೇವಲ ಜಡವಾದಿಗಳಿಗೇ ಶೋಭಿಸುವ ನಿರಾಕಾರವಾದವು ವಿವೇಕಿಗಳಿಂದ ಗ್ರಾಹ್ಯವಲ್ಲ. ಜೀವಸ್ವರೂಪಗಳು ಅವುಗಳ ಸ್ವಾಭಾವಿಕ ಶಕ್ತಿಗಳಾದ ಜ್ಞಾನ, ಇಚ್ಛೆ, ಪ್ರಯತ್ನ (ಕ್ರಿಯಾಶಕ್ತಿ)ಗಳಿಂದ ಅಭಿನ್ನವಾದವುಗಳು. ಸಮಸ್ತ ಚೇತನ ಸಮುದಾಯಕ್ಕೆ ಸಾಧಾರಣವಾದ ಶಕ್ತಿಗಳಿವು. ಜೀವಸ್ವರೂಪಗಳು ಗುಣ ವಿಶಿಷ್ಟವಾಗಿಯೂ ಇವೆ. ಗುಣ-ತಾರತಮ್ಯದಿಂದ ತರತಮಭಾವವುಳ್ಳವುಗಳಾಗಿಯೂ ಇವೆ. ಸುಖ, ಜ್ಞಾನ ಇತ್ಯಾದಿಗಳು ಕೆಲವರ ಸ್ವಭಾವಸಿದ್ಧ ಗುಣಗಳಾದರೆ, ದುಃಖ, ಅಜ್ಞಾನ, ದ್ವೇಷಾದಿಗಳು ಮತ್ತೆ ಕೆಲವರ ಸ್ವರೂಪದ ಗುಣಗಳು. ಈ ಉಭಯಗುಣ ಮಿಶ್ರ ಸ್ವಭಾವದ ಸ್ವರೂಪದವರೂ ಇರುವರು. ಇದನ್ನು ಆಧರಿಸಿಯೇ ಪೂರ್ವೋಕ್ತ

ಜೀವತ್ರೈವಿಧ್ಯವು ವ್ಯವಸ್ಥಿತವಾಗಿ ನಿಂತಿದೆ. ವಸ್ತುಗ್ರಹಣಶಕ್ತಿ ಮಾತ್ರವನ್ನು ಹೇಳುವ (ಸಕಲ ಚೇತನ ಸಾಧಾರಣ ಶಕ್ತಿಯಾದ ಜ್ಞಾನಕ್ಕೂ ವಸ್ತುವನ್ನು ಇದ್ದಂತೆ ತಿಳಿಸುವ ಯಥಾರ್ಥಜ್ಞಾನ ಮತ್ತು ಭಗವದ್ವಿಷಯಕ ಸುಜ್ಞಾನವನ್ನು ಹೇಳುವ ಜ್ಞಾನ ಗುಣಕ್ಕೂ ಇರುವ ವಿಶೇಷವನ್ನು ಮರೆಯದಿರಬೇಕು. ನಿರ್ವಿಕಾರ ನಿತ್ಯಸ್ವರೂಪವುಳ್ಳ (ಮುಕ್ತ) ಜೀವರು ಇಚ್ಛಾನುಸಾರವಾದ ನಾನಾ ಕ್ರಿಯೆಗಳಲ್ಲಿ ತೊಡಗಿ ನಾನಾ ಪ್ರಕಾರದ ಭೋಗಗಳನ್ನು ಅನುಭವಿಸಲು ಅವಶ್ಯಕವಾದ ಕರ, ಚರಣ ಚಕ್ಷುರಾದಿ ಅಪ್ರಾಕೃತ ಇಂದ್ರಿಯಾದಿಗಳನ್ನುಳ್ಳವರಾಗಿದ್ದಾರೆ. ಅವೆಲ್ಲವೂ ಅವರ ಸ್ವರೂಪಗಳಿಂದ ಅಭಿನ್ನಗಳೇ. **ಈ ಕಾರಣದಿಂದ ಜೀವರ ಸ್ವರೂಪವನ್ನು ಸ್ವರೂಪ ದೇಹವೆಂದೇ ಕರೆಯಲಾಗುತ್ತದೆ.**

ಹೀಗಿರುವ ನಿತ್ಯನಿರ್ವಿಕಾರ ಜೀವಸ್ವರೂಪವನ್ನು ಲಿಂಗದೇಹವು ಬಂಧಿಸಿದೆ. ಹೀಗೆ ಲಿಂಗದೇಹ ಬಂಧನವುಳ್ಳವರೆಲ್ಲರೂ ಅಮುಕ್ತರು. ಈ ಲಿಂಗದೇಹವು ಸೂಕ್ಷ್ಮ ಪ್ರಾಕೃತಾಂಶಗಳಿಂದ (ಕಲೆಗಳಿಂದ) ನಿರ್ಮಿತ-ವಾದುದು-ಪಂಚತನ್ಮಾತ್ರೆಗಳು, ದಶೇಂದ್ರಿಯಗಳು ಮತ್ತು ಮನಸ್ಸು-ಹೀಗೆ ೧೬ ಕಲೆಗಳುಳ್ಳದ್ದು. ಜಡ ತತ್ತ್ವಾಂಶಗಳಿಂದ ನಿರ್ಮಿತವಾದ ಈ ಲಿಂಗದೇಹವು ಪ್ರೇರಕ ಚೇತನಶಕ್ತಿಯನ್ನುಳಿದು ಯಾವ ಕಾರ್ಯವನ್ನೂ ಮಾಡಲು ಸಮರ್ಥವಲ್ಲ; ಜೀವಸ್ವರೂಪವನ್ನು ಬಂಧಿಸತಕ್ಕ ಶಕ್ತಿಯೂ ಅದಕ್ಕಿಲ್ಲ. ಸರ್ವಪ್ರೇರಕನಾದ ಈಶ್ವರನೇ ಲಿಂಗದೇಹಕ್ಕೆ ಬಂಧಕಶಕ್ತಿಪ್ರದನು. ಲಿಂಗದೇಹದ ೧೬ ಕಲೆಗಳು ಸತ್ವ-ರಜ-ತಮಗಳೆಂಬ ಪ್ರಾಕೃತ ಗುಣಗಳ ಅತಿ ಸೂಕ್ಷ್ಮ ವಿಕಾರಾಂಶಗಳು. ಈಶ್ವರನ ಇಚ್ಛೆಯಿಂದ ತ್ರಿಗುಣಗಳಿಗೆ ಅಭಿಮಾನಿಯಾದ ಶ್ರೀ ಭೂ ದುರ್ಗಾನಾಮಕ ರಮಾದೇವಿಯು ಮುಖ್ಯ ಬಂಧಕ ಶಕ್ತಿ-ಪ್ರದಾಯಕಳಾಗಿದ್ದಾಳೆ. ತ್ರಿವಿಧಜೀವರೂ ತ್ರಿಗುಣಗಳಿಂದ ಬಂಧಿತ-ರಾಗಿರುವರು. ಹೀಗಿದ್ದರೂ ಉತ್ತಮ ಜೀವಜಾತವು ಸತ್ವಗುಣದಿಂದಲೂ, (ಸತ್ವಪ್ರಚುರವಾದ ತ್ರಿಗುಣಗಳಿಂದಲೂ), ಮಧ್ಯಮ ಜೀವಸಮೂಹವು (ಪ್ರಚುರ) ರಜೋಗುಣದಿಂದಲೂ, ಅಧಮ ಜೀವವರ್ಗವು (ಪ್ರಚುರ) ತಮೋಗುಣದಿಂದಲೂ ಬಂಧಿಸಲ್ಪಟ್ಟಿರುವುವೆಂದು ಹೇಳಲಾಗುತ್ತದೆ. ಸೃಷ್ಟಿ-ಕಾಲದಲ್ಲಿ ಸೃಜ್ಯಜೀವರ ಲಿಂಗದೇಹಗಳು ತ್ರಿಗುಣಗಳಿಂದ ಉಪಚಯವನ್ನು

ಹೊಂದುತ್ತವೆ. ಪ್ರಕೃತಿಬಂಧವೇ ಸಂಸಾರ, ಅದರ ಬಿಡುಗಡೆಯೇ ಮೋಕ್ಷ, ಎಂದು ಆಗಮಗಳು ಅನೇಕ ಸಂದರ್ಭಗಳಲ್ಲಿ ನಿರೂಪಿಸಿರುವುದರಿಂದ ಈ ಪ್ರಾಕೃತ ಬಂಧಪ್ರಕಾರವನ್ನು ವಿಶದವಾಗಿ ಗ್ರಹಿಸಬೇಕಾದುದು ಅತ್ಯವಶ್ಯಕ. ಏಕೆಂದರೆ, ಬಂಧಪ್ರಕಾರದ ಜ್ಞಾನವಾದರೆ ಅದರ ಮೋಚನ ಸಾಧನಗಳನ್ನು ಗ್ರಹಿಸುವುದು ಸುಲಭವಾಗುತ್ತದೆ.

ಸೃಷ್ಟಿಕಾಲದಲ್ಲಿ (ಜಗತ್ಸೃಷ್ಟಿಯ ಆರಂಭಕಾಲದಲ್ಲಿ) ತ್ರಿಗುಣಗಳಿಂದ ಉಪಚಯಗೊಂಡ ಲಿಂಗದೇಹವುಳ್ಳ ಜೀವರು[37] ಅನಿರುದ್ಧರೂಪೀ ಶ್ರೀಹರಿಯ ಉದರವನ್ನು ಮೊದಲು ಪ್ರವೇಶಿಸಿ ಅಲ್ಲಿ ಅನಿರುದ್ಧ ದೇಹವೆಂದೇ ಕರೆಯಲ್ಪಡುವ ಸೂಕ್ಷ್ಮ ದೇಹವನ್ನು ಪಡೆಯುತ್ತಾರೆ. ನಂತರ ಪ್ರದ್ಯುಮ್ನರೂಪೀ ಶ್ರೀಹರಿಯು ಅವರನ್ನು ತನ್ನ ಉದರದಲ್ಲಿ ಧರಿಸಿ ನಾನಾ ಯೋನಿಗಳಲ್ಲಿ ಸ್ಥೂಲದೇಹಗಳನ್ನು ಕೊಟ್ಟು ಹುಟ್ಟಿಸುತ್ತಾನೆ. ಈ ಸ್ಥೂಲದೇಹಗಳ ದ್ವಾರಾ ಜೀವನು ಸುಖಾದಿ ವಿಷಯದಲ್ಲಿ ಪ್ರವರ್ತಿಸಲು ಸತ್ವಾದಿಗುಣಗಳು ಕಾರಣ-ವಾಗುತ್ತವೆ. ಲಿಂಗದೇಹದಲ್ಲಿ ಕಾರಣರೂಪದಿಂದಿದ್ದು ಜೀವನನ್ನು ಬಂಧಿಸಿರುವ ಸತ್ತ್ವಾದಿ ಗುಣಗಳು, ನಾನಾ ಸ್ಥೂಲದೇಹಗಳನ್ನು ಹೊಂದುತ್ತಾ ಜೀವನು ತನ್ನ ಸ್ವರೂಪಸ್ಥಿತಿಯನ್ನು ಹೊಂದುವ ದಿಕ್ಕಿನಲ್ಲಿ ಧಾವಿಸುವಂತೆ ಮಾಡುತ್ತವೆ. ಸತ್ವಾದಿ ಗುಣಗಳನ್ನು ತಮ್ಮ ಕಾರ್ಯಗಳಲ್ಲಿ ಪ್ರವರ್ತಿಸುವಂತೆ ಪ್ರೇರಿಸುವ ಶ್ರೀ ಭೂ ದುರ್ಗಾರೂಪದ ರಮಾದೇವಿಯು ಶ್ರೀಹರೀಚ್ಛಾನುಸಾರವಾಗಿ ಪ್ರೇರಕಳಾಗಿರುವಳು. ಸತ್ವಗುಣವು (ಶ್ರೀದೇವಿಯು) ಸುಖ ವಿಷಯ-ದಲ್ಲಿಯೂ, ರಜೋಗುಣವು (ಭೂದೇವಿಯು) ಕರ್ಮವಿಷಯದಲ್ಲಿಯೂ, ತಮೋಗುಣವು (ದುರ್ಗಾದೇವಿಯು) ಅಧರ್ಮ ಬುದ್ಧಿ, ಆಲಸ್ಯಾದಿಗಳನ್ನು ಉಂಟುಮಾಡುವುದರಲ್ಲಿಯೂ ಪ್ರವರ್ತಕಗಳು. ಸತ್ವಗುಣವು, ಉತ್ಕರ್ಷವನ್ನು ಹೊಂದಿದಾಗ ರಜಸ್ತಮೋಗುಣಗಳ ಕಾರ್ಯಶಕ್ತಿಯನ್ನು ಉಡುಗಿಸುತ್ತದೆ. ಹೀಗೆಯೆ, ರಜೋಗುಣ ತಮೋಗುಣಗಳು ಉತ್ಕರ್ಷಹೊಂದಿದ ಕಾಲದಲ್ಲಿ ಅವುಗಳ ಕಾರ್ಯಗಳೇ ಮೇಲಾಗಿ ಇತರ ಗುಣಕಾರ್ಯಗಳು ಉಡುಗುತ್ತವೆ.

37. ಕರ್ಮಾಭಿಮಾನಿ ಅಸೃಜ್ಯಜೀವರ ಲಿಂಗದೇಹಗಳಿಗೆ ಸತ್ವಾದಿಗುಣಗಳನ್ನು ಬಿಟ್ಟೇ ಕಿಂಚಿದುಪಚಯವು.

ಈ ಸತ್ವಾದಿ ಗುಣಗಳ ಉತ್ಕರ್ಷದಿಂದ ಕ್ರಮವಾಗಿ, ಸುಖ ಜ್ಞಾನಗಳ ವೃದ್ಧಿಯೂ, ಲೋಭ, ಕಾಮ್ಯ ಕರ್ಮಾರಂಭಗಳೂ, ಜ್ಞಾನಾಭಾವ- ಉತ್ಸಾಹ ಶೂನ್ಯತೆ-ಚಾಂಚಲ್ಯ-ಮಿಥ್ಯಾಜ್ಞಾನಗಳೂ ಉಂಟಾಗುತ್ತವೆ. ಜೀವರ ಅನಾದಿ ಕರ್ಮ ಮತ್ತು ಸ್ವರೂಪ ಯೋಗ್ಯತೆಗಳಿಗೆ ಅನುಸಾರವಾಗಿ ತ್ರಿಗುಣಗಳು ರಮಾರೂಪಗಳಿಂದ ಪ್ರೇರಿತಗಳಾಗಿ ಜೀವರನ್ನು ಸ್ಥೂಲದೇಹೇಂದ್ರಿಯಗಳ ದ್ವಾರಾ ಪ್ರವರ್ತಿಸುವಂತೆ ಮಾಡುತ್ತವೆ. ಈ ವಿಧ ಜೀವಪ್ರವೃತ್ತಿಯನ್ನು ಗುಣಕೃತ ಕರ್ತೃತ್ವವೆಂದು ಕರೆಯಲಾಗುತ್ತದೆ. ತ್ರಿಗುಣಗಳ ಪ್ರಭಾವಕ್ಕೊಳಗಾಗಿ ಪ್ರವೃತ್ತಿಸುವುದೇ ಗುಣಬಂಧ. ಇದಕ್ಕೆ ಕಾರಣವಾದ ಗುಣಸಂಬಂಧವೇ ಉಚ್ಚನೀಚ ಯೋನಿಗಳಲ್ಲಿ ಜೀವನು ಜನಿಸುವುದಕ್ಕೆ ಕಾರಣ. ಈ ಗುಣಕೃತ ಕಾರ್ಯಗಳೇ ಸುಖ ದುಃಖಗಳಿಗೆ ಕಾರಣಗಳು. ದೇಹೇಂದ್ರಿಯಾದಿಗಳು ಮತ್ತು ಶಬ್ದಾದಿ ವಿಷಯಗಳು (ಸಕಲ ಭೋಗ್ಯ ವಸ್ತುಗಳು) ಗುಣಜನ್ಯ-ವಾದವುಗಳೇ. ದೇಹೇಂದ್ರಿಯಗಳಿಂದ ಸಂಭವಿಸುವ ಪುಣ್ಯಪಾಪ ರೂಪದ ಕರ್ಮಗಳೂ ಗುಣಕೃತ ಕರ್ಮಗಳೇ. ಗುಣನಿಯಾಮಕಳಾದ ಮಹಾಲಕ್ಷ್ಮಿ-ಯಿಂದ ಅನಂತಮಡಿ ಉತ್ತಮನೂ ಗುಣಪೂರ್ಣನೂ ಆದ ಶ್ರೀಹರಿಯೇ ಸರ್ವೋತ್ತಮನೆಂದು ಜೀವನು ತಿಳಿದಾಗ ಗುಣಬಂಧದಿಂದ ಮುಕ್ತನಾಗುವನು. **ಕಾರಣಂ ಗುಣಸಂಗೋಸ್ಯ ಸದಸದ್ಯೋನಿಜನ್ಮಸು;, ನಾನ್ಯಂಗುಣೇಭ್ಯಃ ಕರ್ತಾರಂ ಯದಾದ್ರಷ್ಟಾನುಪಶ್ಯತಿ । ಗುಣೇಭ್ಯಶ್ಚ ಪರಂವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥** (ಗೀತಾ) ಎಂಬುದಾಗಿ ಶ್ರೀಕೃಷ್ಣನು ಉಕ್ತಪ್ರಮೇಯ-ಗಳನ್ನು ನಿರ್ಣಯಿಸಿ ನಿರೂಪಿಸಿದ್ದಾನೆ.

ಗುಣಕೃತಕರ್ತೃತ್ವವನ್ನು, ಎಂದರೆ, ತ್ರಿಗುಣಗಳ ಪ್ರಭಾವವನ್ನು ಅತಿ-ಕ್ರಮಿಸಿ, ಸ್ವರೂಪ ಗುಣಾನುಸಾರ ಪ್ರವರ್ತಿಸುವಿಕೆಯೇ ತ್ರಿಗುಣಾತೀತತ್ವವು. ಇದನ್ನು ಪಡೆಯವುದೇ ಸಕಲ ಸಾಧನಗಳ ಮುಖ್ಯ ಗುರಿ.

ತ್ರಿಗುಣಗಳಿಗೆ ಅಭಿಮಾನಿಯಾದ ಲಕ್ಷ್ಮೀದೇವಿಯು ಪ್ರಕೃತಿ ಎಂದು ಕರೆಯಲ್ಪಡುತ್ತಾಳೆ. ಸರಸ್ವತೀ, ಭಾರತಿಯರು, ಅವರನಂತರ ಸೌಪರ್ಣೀ, ವಾರುಣೀ, ಉಮಾದೇವಿಯರು ಸಹ ಪ್ರಕೃತಿ ಶಬ್ದವಾಚ್ಯರು. ಗುಣ

ಪ್ರವರ್ತಕಳಾದ ಲಕ್ಷ್ಮೀದೇವಿಯು ಶ್ರೀಹರಿಯ ಪ್ರೇರಣಾನುಸಾರ ಜೀವರ ಗುಣಬಂಧಕ್ಕೆ ಕಾರಣಳಾದರೂ ಆಕೆಯ ಅಧೀನರಾಗಿ ಈ ಕಾರ್ಯದಲ್ಲಿ ತೊಡಗುವ ಪ್ರಕೃತಿ ಶಬ್ದವಾಚ್ಯರಾದ ಸರಸ್ವತೀ ಮೊದಲಾದವರು ಅವಾಂತರ ಗುಣಾಭಿಮಾನಿಗಳೆನಿಸುತ್ತಾರೆ. ಪ್ರಕೃತಿ ಶಬ್ದವಾಚ್ಯರಲ್ಲಿ ಉತ್ತಮರು, ಉತ್ತಮಾಧಿಕಾರಿ ಜೀವರಲ್ಲಿಯೂ, ಕೆಳಕೆಳಗಿನವರು ಅಲ್ಪಾಧಿಕಾರಿಗಳಲ್ಲಿಯೂ ಪ್ರವರ್ತಕರಾಗಿರುತ್ತಾರೆಂಬುದು ಸಾಮಾನ್ಯ ನಿಯಮ. ಜೀವಾಂತರ್ಯಾಮಿ ಭಗವಂತನನ್ನು ಜೀವನಿಗೆ ಗೋಚರಿಸದಂತೆ ಮರೆಮಾಡಿರುವ ಮತ್ತು ಜೀವಸ್ವರೂಪವನ್ನು ಜೀವನಿಗೇ ಮರೆಮಾಡಿರುವ ಪ್ರಕೃತಿ ಶಬ್ದವಾಚ್ಯರಾದ ದುರ್ದೇವತೆಗಳಿಬ್ಬರು ಪ್ರತಿಜೀವರ ಲಿಂಗದೇಹಗಳಲ್ಲಿ ಪಿಶಾಚಿಗಳಂತೆ ಆವಿಷ್ಟರಾಗಿರುತ್ತಾರೆ. ಇವರ ದ್ವಾರಾ ಪ್ರಕೃತಿ ಶಬ್ದ ಮುಖ್ಯವಾಚ್ಯರಾದ ಲಕ್ಷ್ಮ್ಯಾದಿ ಉತ್ತಮರು, ಜೀವನು ತನ್ನನ್ನೂ ಪರಮಾತ್ಮನನ್ನೂ ತಿಳಿಯದಂತೆ ಪ್ರತಿಬಂಧಿಸುತ್ತಾರೆ. ಉತ್ತಮರು ಅಧಮರ ದ್ವಾರಾ ಮೋಕ್ಷ ವಿರೋಧಿ ವ್ಯಾಪಾರಗಳನ್ನು ನಡೆಯಿಸುವುದು ಕನಿಷ್ಠರನ್ನು ಫಲಭಾಗಿಗಳನ್ನಾಗಿ ಮಾಡುವುದಕ್ಕೋಸ್ಕರವೇ, ಎಂಬುದು ಶಾಸ್ತ್ರನಿರ್ಣೀತ ನಿಯಮವಾಗಿದೆ. ಈ ಎರಡು ಪ್ರಕೃತಿಗಳು ಕ್ರಮವಾಗಿ ಪರಮಾಚ್ಛಾದಿಕಾ ಮತ್ತು ಸ್ವಗುಣಾಚ್ಛಾದಿಕಾ ಎಂದು ಕರೆಯಲ್ಪಡುತ್ತವೆ. ಈ ಎರಡು ದುಷ್ಟ ಪ್ರಕೃತಿಗಳಿಂದ ಜೀವನು ವಿಮುಕ್ತನಾಗದಿದ್ದರೆ ತ್ರಿಗುಣಾತೀತನಾಗಲು ಸಾಧ್ಯವಿಲ್ಲ. ಉಭಯ ದುಷ್ಟ ಪ್ರಕೃತಿಗಳಿಂದ ಸುಜೀವರನ್ನು ಬಿಡುಗಡೆ ಮಾಡೆಂದು ಶ್ರೀಲಕ್ಷ್ಮೀದೇವಿಯು ಸೃಷ್ಟಿಕಾಲ ಪ್ರಾಪ್ತವಾದಾಗ ತಾನೇ ಪ್ರಾರ್ಥನೆಯನ್ನು ಶ್ರೀಹರಿಯಲ್ಲಿ ಸಲ್ಲಿಸಿ ನಂತರ ಸೃಷ್ಟಿಕಾರ್ಯದಲ್ಲಿ ಪ್ರವೃತ್ತಳಾಗುತ್ತಾಳೆ. ಈ ಪ್ರಕ್ರಿಯೆಗಳು ಶ್ರೀಮದ್ಭಾಗವತದಲ್ಲಿ ನಿರೂಪಿತವಾಗಿವೆ. *''ಶ್ರೀಃ ಪರಾಪ್ರಕೃತಿಃ ಪ್ರೋಕ್ತಾ-ಬ್ರಹ್ಮಾಣೀತ್ಯವರಾ ತತಃ । ಉಮಾಶಚೀಮುಖಾಸ್ತಸ್ಯಾಃ ಅವರಾಃ ಸಂಪ್ರ-ಕೀರ್ತಿತಾಃ ॥ ಅಥಾನ್ಯೇ ಪ್ರಕೃತೀ ದುಷ್ಟೇನ್ಯಷು ಪ್ರಾತಿಸ್ವಿಕಂ ಸ್ಥಿತೇ । ಸ್ವಗುಣಾ-ಚ್ಛಾದಿಕಾತ್ವೇಕಾ ಪರಮಾಚ್ಛಾದಿಕಾಪರಾ ॥ ಸ್ವಗುಣಾಚ್ಛಾದಿಕಾಂಹತ್ವಾ ಪರಮಾ-ಚ್ಛಾದಿಕಾಂ ಪರಃ । ವ್ಯಾಘುಟ್ಯ ಮೋಕ್ಷಪದವೀಂ ದದಾತಿ ಪುರುಷೋತ್ತಮಃ ॥ ಸರ್ವಾವರೇ ತೇ ಪ್ರಕೃತೀ ಸತತಂ ದುಃಖ ತೇಪಿ ಚ । ಪಿಶಾಚವತ್ಸಮುದ್ದಿಷ್ಟೇ*

*ಪುರುಷಸ್ಯಾಧಿಕಾರಿಣಃ ॥'' ''ಪ್ರೇರಕಾಸ್ತು ತಯೋರ್ದೇವ್ಯಃ ಇಂದಿರಾದ್ಯಾಃ ಸುಖಾತ್ಮಿಕಾಃ ॥''* (ಭಾಗ. ತಾ-ಶ್ರುತಿಗೀತಾ) :- ಲಕ್ಷ್ಮೀದೇವಿಯು ಪ್ರಕೃತಿಶಬ್ದದಿಂದ ಮುಖ್ಯವಾಚ್ಯಳು. ಆಕೆಯ ನಂತರ ಸರಸ್ವತಿಯೂ, ನಂತರ ಪಾರ್ವತೀ ಶಚೀ ಮೊದಲಾದವರೂ ಅಮುಖ್ಯ ಪ್ರಕೃತಿ ಶಬ್ದವಾಚ್ಯರು. ಸ್ವಗುಣಾಚ್ಛಾದಿಕಾ ಮತ್ತು ಪರಮಾಚ್ಛಾದಿಕಾ ಎಂಬ ಎರಡು ದುಷ್ಟ ಪ್ರಕೃತಿಗಳು ಮನುಷ್ಯರಲ್ಲಿ ಪ್ರಪ್ರತ್ಯೇಕವಾಗಿರುತ್ತವೆ. ಇವುಗಳಲ್ಲಿ ಮೊದಲಿನದು ಜೀವ-ಸ್ವರೂಪಭೂತವಾದ ಆನಂದಾದಿಗುಣಗಳ ಜ್ಞಾನವನ್ನು ಪ್ರತಿಬಂಧಿಸುತ್ತದೆ. ಎರಡನೆಯದು ಪರಮಾತ್ಮಜ್ಞಾನ ಪ್ರತಿಬಂಧಕ. ಶ್ರೀಹರಿಯು ಮೊದಲನೆಯ-ದನ್ನು ಸಂಹರಿಸಿ ಎರಡನೆಯದನ್ನು ದೂರೀಕರಿಸಿ ಜೀವರಿಗೆ ಮೋಕ್ಷವನ್ನು ಕೊಡುತ್ತಾನೆ.[38] ಪ್ರಕೃತಿ ಶಬ್ದವಾಚ್ಯರಲ್ಲಿ ಎಲ್ಲರಿಗಿಂತ ನೀಚರಾದ ಈ ಎರಡು ದುರ್ದೇವತೆಗಳು, ಒಂದು ಶರೀರದಲ್ಲಿ ಪಿಶಾಚಿಯು ಆವಿಷ್ಟವಾಗುವಂತೆ, ಅಧಿಕಾರಿ ಜೀವರಲ್ಲಿ ಆವಿಷ್ಟವಾಗಿರುತ್ತವೆ. ಈ ಎರಡೂ ದುಷ್ಟಚೇತನರು ದುಃಖಸ್ವರೂಪವುಳ್ಳವರು. ಸುಖಸ್ವರೂಪರಾದ ರಮಾದಿ ದೇವಿಯರು ಇವರಿಗೆ ಪ್ರೇರಕರು.

ಹೀಗೆ ಲಕ್ಷ್ಮ್ಯಾದಿ ಉತ್ತಮದೇವತೆಗಳಿಂದ ಪ್ರೇರಿಸಲ್ಪಡುವ ಸತ್ವಾದಿ ತ್ರಿಗುಣಗಳಿಂದ ಅನಾದಿ ಕಾಲದಿಂದ ಜೀವರು ಬಂಧಿತರಾಗಿದ್ದಾರೆ. ಸೂಕ್ಷ್ಮವಾದ ಲಿಂಗದೇಹದ ಆವರಕದಲ್ಲಿರುತ್ತಾ ತ್ರಿಗುಣಗಳೂ ಪೂರ್ವೋಕ್ತ ದುಷ್ಟ ಪ್ರಕೃತಿ-ಗಳೂ ಈಶಾಧೀನಗಳಾಗಿ ತಮ್ಮ ಕಾರ್ಯವನ್ನು ನಿರ್ವಹಿಸುತ್ತವೆ. ಇದಕ್ಕೆ ನಿಮಿತ್ತಕಾರಣವಾಗಿ ಜೀವನ ಅನಾದಿ ಕರ್ಮವೂ ಇರುತ್ತದೆ. ಜೀವರು ಅಸೃಜ್ಯರಾಶಿಯಲ್ಲಿರುವ ಪರ್ಯಂತ ಈ ಎಲ್ಲವೂ ಈಶಸಂಕಲ್ಪಾಧೀನಗಳಾಗಿ ಸುಪ್ತಾವಸ್ಥೆಯಲ್ಲಿರುತ್ತವೆ. ಎಂದರೆ, ಜೀವನಲ್ಲಿ ಯಾವ ಕ್ರಿಯೆಗಳನ್ನೂ ಮತ್ತು ತನ್ನಿಮಿತ್ತವಾದ ಸುಖದುಃಖಗಳನ್ನೂ ಉಂಟುಮಾಡುವುದಿಲ್ಲ. ಜೀವನು ಸೃಜ್ಯವರ್ಗಕ್ಕೆ ತರಲ್ಪಟ್ಟು ಸೃಷ್ಟಿಯಲ್ಲಿ ಪ್ರವೇಶಗೊಂಡ ನಂತರವೇ ಈ ಎಲ್ಲ ಬಂಧಕ ಸಾಮಗ್ರಿಗಳೂ ಕಾರ್ಯೋನ್ಮುಖವಾಗುತ್ತವೆ. ಈ ವಿವರಣೆಯು

---

38. ಸ್ವಗುಣಾಚ್ಛಾದಿಕೆಯ ಅಭಿಮಾನಿಯು ತಮೋಯೋಗ್ಯನೆಂದೂ, ಪರಮಾಚ್ಛಾದಿಕೆಯ ಅಭಿಮಾನಿಯು ನಿತ್ಯ ಸಂಸಾರಿಯೆಂದೂ **ಬ್ರಹ್ಮಕಾಂಡ ಪುರಾಣ**ದಲ್ಲಿ ಹೇಳಿದೆ.

ಶ್ರೀಹರಿಯೇ ಬಂಧಕನೆಂಬ ಸಿದ್ಧಾಂತವನ್ನು ಸ್ಪಷ್ಟಗೊಳಿಸುತ್ತದೆ. ಸೃಷ್ಟಿಯಲ್ಲಿ ಪ್ರವಿಷ್ಟನಾದ ನಂತರ ಜೀವನು ತನ್ನ ಸ್ವರೂಪಯೋಗ್ಯತೆ ಮತ್ತು ಅನಾದಿ-ಕರ್ಮಗಳಿಗೆ ಅನುಸಾರವಾದ ಕರ್ಮಗಳಲ್ಲಿ ತೊಡಗಿಸಲ್ಪಡುತ್ತಾನೆ.

ಪ್ರತಿ ಜೀವನಿಗೂ ಅನಾದಿಕರ್ಮವೆಂಬುದುಂಟು. ಅನಾದಿ ಎಂದು ಹೇಳಿದುದರಿಂದಲೇ, ಆ ಕರ್ಮವು (ಕರ್ಮಸಮೂಹವು) ಎಂದು ಸಂಭವಿಸಿ-ತೆಂಬ ಪ್ರಶ್ನೆಯು ಕೂಡುವುದಿಲ್ಲ. ಅದರ ಆರಂಭಕಾಲವೆಂಬುದಿಲ್ಲ- ಜೀವ ಸ್ವರೂಪದಂತೆ ಅನಾದಿಯಾದುದು. ಇಷ್ಟುಮಾತ್ರ ವೈಲಕ್ಷಣ್ಯವುಳ್ಳದ್ದು- ಜೀವಸ್ವರೂಪವು ಅನಾದಿ ನಿತ್ಯ; ಕರ್ಮವು ಅನಾದಿಯಾದರೂ ನಾಶವುಳ್ಳದ್ದು. ಅನಾದಿಕರ್ಮವನ್ನು ಒಡಂಬಡದಿದ್ದರೆ ಸೃಷ್ಟಿಯಲ್ಲಿರುವ ನಾನಾ ಜೀವರ ವಿವಿಧ ಪ್ರವೃತ್ತಿಗಳನ್ನು ಮತ್ತು ಸ್ವರೂಪಯೋಗ್ಯತೆಯಿಂದ ಭಿನ್ನವಾದ (ಅಸ್ವಾಭಾವಿಕ) ಕರ್ಮಗಳಲ್ಲಿ ಜೀವರು ತೊಡಗುವುದನ್ನೂ ಯುಕ್ತಿಗಳಿಂದ ಅಥವಾ ನಿರ್ದಿಷ್ಟ ಹೇತುಗಳಿಂದ ಸಮರ್ಥಿಸುವುದು ದುಸ್ಸಾಧ್ಯವಾಗುತ್ತದೆ ಮತ್ತು ಅನಾದಿಕರ್ಮವೆಂಬುದು ಸರ್ವಜೀವರಿಗೂ ಉಂಟೆಂದೂ, ಸೃಷ್ಟಿ-ಯಲ್ಲಿರುವ ಜೀವರಿಂದ ತದನುಸಾರವಾದ ಮುಂದಿನ ಕರ್ಮಗಳನ್ನು ಮಾಡಿಸುವುದರಿಂದ ಸ್ವತಂತ್ರ ಸರ್ವಪ್ರೇರಕನಾದ ಶ್ರೀಹರಿಯಲ್ಲಿ ವೈಷಮ್ಯಾದಿ ದೋಷಗಳಿಲ್ಲವೆಂದೂ, ಹೇಳುವ ನ್ಯಾಯೋಪೇತ ನಿರವಕಾಶ ಆಗಮವಾಕ್ಯಗಳಿಗೆ ಸಾರ್ಥಕ್ಯವಿಲ್ಲದಂತಾಗುತ್ತದೆ. ಅಸ್ವತಂತ್ರರಾದ ಸಂಸಾರಿಜೀವರು ವಿವಿಧವಾದ ಸುಖದುಃಖಗಳನ್ನು ಅನುಭವಿಸುವರಷ್ಟೆ. ದುಃಖಕ್ಕಾಗಿ ಯಾರೂ ಎಂದೂ ಯತ್ನಮಾಡುವುದಿಲ್ಲ. ಹಾಗಾದರೂ ದುಃಖವೇ ಹೆಚ್ಚಾಗಿ ಲಭಿಸುತ್ತದೆ. ಇದರಂತೆಯೇ ಸುಖವೂ ಸಹ ಜೀವಯತ್ನದಿಂದ ಪ್ರಾಪ್ತವಾದುದಲ್ಲವೆಂದು ತಿಳಿಯಬೇಕು. ಸರ್ವ ಕರ್ಮಫಲಪ್ರದನಾದ ಸ್ವತಂತ್ರ ಶ್ರೀಹರಿಯೇ ಸುಖ-ದುಃಖಪ್ರದನು. ಸುಖದುಃಖಗಳನ್ನು ಎಲ್ಲ ಜೀವರೂ ಏಕಪ್ರಕಾರವಾಗಿ ಹೊಂದುವುದಿಲ್ಲ. ಅಜ್ಞಾನಿಗಳಿಗೆ ಸುಖದುಃಖ ಪ್ರದಾನದಲ್ಲಿ ಸ್ಪಷ್ಟವಾದ ಯಾವ ನಿಯಮವೂ ಇದ್ದಂತೆ ಕಂಡುಬರುವುದಿಲ್ಲ. ಆದುದರಿಂದ ಫಲದಾತನೆಂಬ ಈಶ್ವರನಲ್ಲಿ ಪಕ್ಷಪಾತ, ನಿರ್ದಯತ್ವಾದಿ ದೋಷಗಳನ್ನು ಶಂಕಿಸುತ್ತಾರೆ. ಪುಣ್ಯೇನಪುಣ್ಯಂ ಲೋಕಂ ನಯತಿ ಇತ್ಯಾದಿ ಶ್ರುತಿಗಳು ಸರ್ವರಿಗೂ

ಶ್ರೀಹರಿಯು ಅವರವರ ಕರ್ಮಾನುಸಾರ ಫಲಪ್ರದನೆಂದು ಹೇಳುತ್ತವೆ. ಈ ಶ್ರುತಿಪ್ರಮಾಣ ಬಲದಿಂದ ಈಶ್ವರನಲ್ಲಿ ವೈಷಮ್ಯಾದಿಗಳಿಲ್ಲವೆಂದೂ ಅವನು ಸರ್ವಸಮನೆಂದೂ ತಿಳಿಯಬೇಕಾಗುತ್ತದೆ. ಆದರೆ, ಶ್ರುತಿಗಳು ಜೀವನು ಸ್ವತಂತ್ರನಾಗಿ ಯಾವ ಕರ್ಮವನ್ನೂ ಮಾಡಲಾರನೆಂದೂ ಜೀವಕೃತ ಕರ್ಮಗಳೆಲ್ಲವೂ ಈಶಾಧೀನವೆಂದೂ ಹೇಳುತ್ತವೆ. ಆದುದರಿಂದ ಕರ್ಮಾನು-ಸಾರ ಫಲಪ್ರದನಾದರೂ ಆ ಕರ್ಮವನ್ನು ಮಾಡಿಸುವವನೂ ಶ್ರೀಹರಿಯೇ ಆದುದರಿಂದ ವೈಷಮ್ಯ ದೋಷಪರಿಹಾರವಾಗುವುದಿಲ್ಲವೆಂಬ ಸಂಶಯವು ನಿಲ್ಲುತ್ತದೆ. ಫಲಕ್ಕೆ ಕಾರಣವಾದ ಕರ್ಮವನ್ನು ಮಾಡಿಸಿದವನೂ ಶ್ರೀಹರಿಯೇ ಆದರೂ ಅವನು ಆ ಕರ್ಮವನ್ನು ಪೂರ್ವಕರ್ಮಾನುಸಾರವಾಗಿಯೇ ಮಾಡಿಸಿರುತ್ತಾನೆಂದೂ, ಆ ಪೂರ್ವಕರ್ಮಕ್ಕೆ ಅದರ ಹಿಂದಿನ ಕರ್ಮವು ಕಾರಣವೆಂದೂ ಹೇಳಿ ಕರ್ಮವು ಅನಾದಿಯಾದುದರಿಂದ ತಾನೇ ಜೀವರಲ್ಲಿ ನಿಂತು ಎಲ್ಲ ಕರ್ಮಗಳನ್ನೂ ಮಾಡಿಸಿದರೂ ವೈಷಮ್ಯಾದಿಗಳಿಗೆ ಗುರಿಯಾಗುವು-ದಿಲ್ಲವೆಂದೂ ಶ್ರುತಿಗಳು ಹೇಳುತ್ತವೆ. ಕರ್ಮಾನುಸಾರವಾಗಿಯೇ ಕರ್ಮ-ಗಳನ್ನು ಮಾಡಿಸಿ ತದನುಸಾರಮಾತ್ರ ಫಲಗಳನ್ನು ಕೊಡುತ್ತಾನೆಂಬುದರಿಂದ ಈಶ್ವರನ ಸ್ವಾತಂತ್ರ್ಯಕ್ಕೆ ಹಾನಿ ಇಲ್ಲ. ಅನಾದಿ ಕರ್ಮ, ಜೀವಪ್ರಯತ್ನ[39] ಮತ್ತು ಸ್ವರೂಪ ಯೋಗ್ಯತೆಗಳನ್ನು ಅನುಲಕ್ಷಿಸಿ (ಇವುಗಳ ಸಮಾಹಾರವೇ ಯೋಗ್ಯತೆ ಎಂದೂ ಕರೆಯಲ್ಪಡುತ್ತದೆ.) ಶ್ರೀಹರಿಯು ಪ್ರೇರಿಸುವುದರಿಂದ ಯಾವ ಪ್ರಕಾರದ ದೋಷ ಶಂಕೆಗೂ ಅವಕಾಶವಿಲ್ಲ. ಹೀಗೆ ಜೀವರುಗಳಿಗೆ ಯೋಗ್ಯ-ತಾನುಸಾರವಾದ ಸ್ಥೂಲದೇಹಗಳನ್ನು ಹೊಂದಿಸಿ ಅವರಿಂದ ಯೋಗ್ಯತಾನು-ಗುಣವಾದ ಕರ್ಮಗಳನ್ನು ಮಾಡಿಸಿ, ತತ್ಫಲಗಳಾದ ಸುಖದುಃಖಾನು-ಭವಗಳನ್ನಿತ್ತು, ಅಂತ್ಯದಲ್ಲಿ ಅವರವರ ಗತಿಗಳನ್ನು ಹೊಂದಿಸುವುದು ಶ್ರೀಹರಿಯ ಸೃಷ್ಟ್ಯಾದಿ ವ್ಯಾಪಾರಗಳ ಉದ್ದೇಶವಾಗಿದೆ.

ಜೀವರಲ್ಲಿ ಅನಾದಿಬಂಧವು ಪ್ರಕೃತಿಯಿಂದ ಆದುದು. ಆ ಪ್ರಕೃತಿಯು ಸರ್ವೇಶ್ವರನಾದ ಶ್ರೀಹರಿಯ ಅಧೀನ. ಜೀವರನ್ನು ಬಂಧಿಸುವ ಅದರ ಶಕ್ತಿಯು ಶ್ರೀಹರಿಯ ಶಕ್ತಿಯೇ-ಪ್ರಕೃತಿಯು ಜಡವಾದುದರಿಂದ. ಬಂಧನಕ್ಕೆ

39. ಜೀವಕರ್ತೃತ್ವ ಪ್ರಕ್ರಿಯೆಯು ಮುಂದೆ ವಿಸ್ತಾರವಾಗಿ ಪ್ರಸಕ್ತವಾಗಲಿದೆ.

ಕಾರಣವಾದ ತನ್ನ ಇಚ್ಛೆಯನ್ನು ಶ್ರೀಹರಿಯು ವಿರಾಮಗೊಳಿಸುವುದೇ ಜೀವರು ಬಂಧದಿಂದ ಮುಕ್ತರಾಗಲು ಮುಖ್ಯ ಕಾರಣ. ಏನಂಮೋಚಯಾಮಿ ಎಂಬ ಹರಿಸಂಕಲ್ಪಕ್ಕೆ ಪಾತ್ರನಾದ ಜೀವನು ಪ್ರಕೃತಿ ಬಂಧದಿಂದ ಮುಕ್ತ-ನಾಗುವುದೇನಾಶ್ಚರ್ಯ! ಇಚ್ಛಾ ಮಾತ್ರದಿಂದ ಸಕಲ ಜೀವರನ್ನೂ ವಿಮುಕ್ತ-ರನ್ನಾಗಿ ಮಾಡಲು ಶ್ರೀಹರಿಯು ಶಕ್ತನೇ ಆಗಿರುವನು. ಆದರೂ ಹಾಗೆ ಮಾಡುವುದಿಲ್ಲ; ಅದು ಅವನ ಸಂಕಲ್ಪವಲ್ಲ. ಶಕ್ತನಾದರೂ ಹಾಗೆ ಸಂಕಲ್ಪಿಸದಿರಲು ಯುಕ್ತಿಯುಕ್ತವಾದ ಕಾರಣಗಳನ್ನೂ ತಿಳಿಯಬೇಕು. ಬಂಧಮುಕ್ತರಾದ ತ್ರಿವಿಧ ಜೀವರು, ತಮ್ಮ ಸ್ವರೂಪ ಸ್ಥಿತವಾದ ಜ್ಞಾನಾನಂದಗಳನ್ನೋ, ದುಃಖಾಜ್ಞಾನ-ಗಳನ್ನೋ, ಅಥವಾ ಮಿಶ್ರಸ್ವಭಾವಗಳನ್ನೋ ಹೊಂದಿಸಲ್ಪಡುತ್ತಾರೆ. ಮುಕ್ತಿ-ಯೋಗ್ಯ ಸುಜೀವಗಳ ವಿವಕ್ಷೆಯಿಂದ ಸಾಧನಗಳನ್ನು ಮಾಡಿಸಿಯೇ ಮೋಕ್ಷ-ಪ್ರದನಾಗುವನೆಂಬ ಶ್ರೀಹರಿಯ ಸಂಕಲ್ಪವು ಹೇಗೆ ಉಪಪನ್ನವಾಗುವು-ದೆಂಬುದನ್ನು ಮೊದಲಿಗೆ ಪರಿಶೀಲಿಸುವುದು ಸೂಕ್ತವೆನಿಸುತ್ತದೆ.

ಶ್ರೀಹರಿಯು ಮುಕ್ತಿಯೋಗ್ಯ ಜೀವರಿಗೆ ಮೋಕ್ಷ ಪ್ರದಾನಮಾಡುವ ಪ್ರಕಾರವನ್ನು ಶ್ರುತಿಯು ಹೀಗೆ ನಿರೂಪಿಸುತ್ತದೆ. *''ತದ್ಯ ಥಾ ಪೇಶಸ್ಕರೀಪೇಶಸೋ ಮಾತ್ರಾಮುಪಾದಾಯ ಅನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ । ಏವಮೇವಾಯಮಾತ್ಮಾ ಇದಂ ಶರೀರಂ ನಿಹತ್ಯ ಅವಿದ್ಯಾಂ ಗಮಯಿತ್ವಾ ಅನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ । ಪಿತ್ರ್ಯಂ ವಾ ಗಾಂಧರ್ವಂ ವಾ ದೈವಂ ವಾ ಪ್ರಾಜಾಪತ್ಯಂ ವಾ ಬ್ರಾಹ್ಮಂ ವಾ ಅನ್ಯೇಷಾಂ ಭೂತಾನಾಮ್ ॥''*- (ಋಗ್ವೇದ). ಇದು ಹೇಗೆಂದರೆ - ಅಕ್ಕಸಾಲಿಗನು ಬಂಗಾರದ ತುಂಡೊಂದನ್ನು ತೆಗೆದುಕೊಂಡು ಹೊಸದಾದ ಮಂಗಳಕರವಾದ ರೂಪವನ್ನು (ಕಂಠಭೂಷಣಾದಿ) ಮಾಡುತ್ತಾನಷ್ಟೆ. ಹೀಗೆಯೇ, ಈ ಪರಮಾತ್ಮನೂ ಅಪ್ರಾಕೃತ ಸ್ವರೂಪನಾದ ಜೀವನ ಈ ಭೌತಿಕ ದೇಹವನ್ನು ನಾಶಗೊಳಿಸಿ (ಆವರಕಗಳಾದ ಲಿಂಗದೇಹಾದಿ ಪ್ರಾಕೃತ ದೇಹಗಳ ಸಂಬಂಧವನ್ನು ತಪ್ಪಿಸಿ, ಭೂತಗಳನ್ನು ಆಯಾ ಭೂತಗಳಲ್ಲಿ ಸೇರಿಸಿ) ಅವಿದ್ಯೆಯನ್ನು ಹೋಗ-ಲಾಡಿಸಿ, ನೂತನವಾದ ಮಂಗಳಕರವಾದ (ಅಪ್ರಾಕೃತವಾದ) ರೂಪವನ್ನು ಹೊಂದಿಸುತ್ತಾನೆ. ಪಿತೃಜೀವನಿಗೆ ಪಿತೃಸ್ವರೂಪವನ್ನೂ, ಗಂಧರ್ವ, ದೇವ,

ಪ್ರಜಾಪತಿ, ಚತುರ್ಮುಖ ಮತ್ತು ಇತರ ಮನುಷ್ಯೋತ್ತಮರೇ ಮೊದಲಾದ ಜೀವರಿಗೆ ಅವರವರ ಸ್ವರೂಪದೇಹಗಳನ್ನು ಹೊಂದಿಸಿ, ಮುಕ್ತರನ್ನಾಗಿ ಮಾಡುತ್ತಾನೆ. ಈ ಶ್ರುತ್ಯರ್ಥವನ್ನು ಪುರಾಣ ವಾಕ್ಯಗಳು ಹೀಗೆ ಸ್ಪಷ್ಟಗೊಳಿಸುತ್ತವೆ:-

**ಇದಂ ಶರೀರಂ ಭೂತೇಷು ವಿಲಾಪಯತಿ ಕೇಶವಃ ।**
**ಅವಿದ್ಯಾಂ ಚೈವ ಜೀವಸ್ಯ ಗಮಯೇದ್ಜ್ಞಾನಸರ್ಜನಾತ್ ॥**
**ಸ್ವರ್ಣಕಾರೋ ಯಥಾ ಸ್ವರ್ಣಮಲಮಗ್ನೌನಿಹತ್ಯ ಚ ।**
**ಶುದ್ಧೇನ ತೇನ ಚಾತ್ಮೇಷ್ಟಂ ಕುರುತೇ ರೂಪಮಂಜಸಾ ॥**
**ಏವಂ ಸ ಭಗವಾನ್ವಿಷ್ಣುಃ ಜೀವಸ್ವರ್ಣಸ್ಯ ಯನ್ಮಲಂ ।**
**ಅವಿದ್ಯಾಕಾಮಕರ್ಮಾದ್ಯಮಾತ್ಮಾಗ್ನೌ ನಾಶ್ಯಸರ್ವಕೃತ್ ॥**
**ಸ್ವೇಚ್ಛಯಾ ಕುರುತೇ ರೂಪಂ ಯದ್ಯೋಗ್ಯಂ ಯಸ್ಯ ಮುಕ್ತಿಗಂ ।**
**ಪಿತೃಜೀವಸ್ಯ ಪಿತ್ರ್ಯಂ ಸಃ ಗಾಂಧರ್ವ ತಸ್ಯ ಚೈವ ಹಿ ॥**
**ದೈವಂ ತು ದೇವಜೀವಸ್ಯ ಪ್ರಜಾಪತ್ಯಂ ಪ್ರಜಾಪತೇಃ ।**
**ಬ್ರಹ್ಮಣೋ ಬ್ರಾಹ್ಮಮೇವೇತಿ ನಿತ್ಯಾನಂದ ಸ್ವರೂಪಕಂ ।**
**ನ ಯೋಗ್ಯತಾಂ ವಿನಾಕ್ವಾಪಿ ........... ಇತ್ಯಾದಿ.**

ಇದರ ಭಾವಾರ್ಥ ಹೀಗಿದೆ :

''ಶ್ರೀಹರಿಯು ಜೀವನಿಗಿರುವ ಪ್ರಾಕೃತ ದೇಹಸಂಬಂಧವನ್ನು ತಪ್ಪಿಸಿ, ಭೂತಗಳನ್ನು ಪಂಚಭೂತಗಳಲ್ಲಿ ಸೇರಿಸಿ, ಜೀವನಿಗೆ ಜ್ಞಾನಪ್ರದಾನದಿಂದ ಅವಿದ್ಯೆಯನ್ನು ಹೋಗಲಾಡಿಸುತ್ತಾನೆ. ಸ್ವರ್ಣಕಾರನು ಬಂಗಾರದ ಮಲವನ್ನು ಅಗ್ನಿಯಲ್ಲಿ ದಹಿಸಿ (ಪುಟಕ್ಕೆ ಹಾಕಿ) ಶುದ್ಧಗೊಳಿಸಿ, ಸ್ವೇಚ್ಛಾನುಸಾರವಾದ ಆಭರಣ ರೂಪವನ್ನು ಹೊಂದಿಸುವಂತೆ ಭಗವಾನ್ ವಿಷ್ಣುವೂ ಸಹ ಬಂಗಾರದಂತೆ ಶುದ್ಧ ಸ್ವರೂಪನಾದ ಜೀವನ ಅವಿದ್ಯಾ ಕಾಮಕರ್ಮಾದಿ ಮಲವನ್ನು ಜ್ಞಾನಾಗ್ನಿ-ಯಿಂದ (ದಹಿಸಿ) ಹೋಗಲಾಡಿಸಿ ತನ್ನ ಇಚ್ಛೆಯಿಂದಲೇ ಅವರವರ ಸ್ವರೂಪ-ಗಳನ್ನು ಹೊಂದಿಸಿ ಮುಕ್ತರನ್ನಾಗಿ ಮಾಡುತ್ತಾನೆ.'' ಇವೇ ಮೊದಲಾದ ಶ್ರುತಿ-ಸ್ಮೃತಿ ಪ್ರಮಾಣಗಳಿಂದ ಲಿಂಗದೇಹವನ್ನಾಶ್ರಯಿಸಿ ಅನಾದಿ ಕಾಲದಿಂದ ಜೀವನನ್ನು ಬಂಧಿಸಿರುವ ಅವಿದ್ಯಾ ಕಾಮಕರ್ಮಾದಿಗಳನ್ನು ಹೋಗಲಾಡಿಸುವುದೇ ಸ್ಥೂಲದೇಹಗಳನ್ನು ಕೊಟ್ಟು ಜೀವರಿಂದ ವಿವಿಧ ಸಾಧನೆಗಳನ್ನು ಮಾಡಿಸುವ

ಉದ್ದೇಶವೆಂದೂ, ಇದಕ್ಕಾಗಿ ಸೃಷ್ಟ್ಯಾದಿಗಳನ್ನು ನಡೆಸುವನೆಂದೂ ಸಿದ್ಧವಾಗುತ್ತದೆ. **ಭಕ್ತ್ಯಾದಿ ಗುಣಗಳು ಸುಜೀವರ ಸ್ವರೂಪ ಧರ್ಮಗಳು. ಇವುಗಳ ಆವಿರ್ಭಾವವೇ ಮುಕ್ತಿ.** ಶ್ರೀಹರಿಯಲ್ಲಿ ಸ್ವಯೋಗ್ಯವಾದ ಭಕ್ತ್ಯುದ್ರೇಕವನ್ನು ಹೊಂದಬೇಕು. ಅದು ಸ್ಥಿರವಾಗಿ ನಿಲ್ಲಬೇಕು. ಆಗ ಮಾತ್ರ ತನ್ನ ಸ್ವರೂಪದ ಪೂರ್ಣಾನಂದವನ್ನು ಸುಜೀವನು ಹೊಂದುವನು. ಮುಕ್ತರ ಭಕ್ತಿಯೇ ಸುಖರೂಪವಾದುದು–ಅದರಿಂದ ಪ್ರಾಪ್ತವಾದ ಮತ್ತೊಂದು ಫಲವಿಲ್ಲ. ಈ ಕಾರಣದಿಂದ ಸುಖ ಸ್ವರೂಪರಾದ ಉತ್ತಮ ಜೀವರನ್ನು ಪೂರ್ಣಾನಂದವುಳ್ಳವರನ್ನಾಗಿ ಮಾಡುವುದಕ್ಕಾಗಿ ತನ್ನ ಅದ್ಭುತ ಮಹಿಮೆಗಳ ಜ್ಞಾನವನ್ನು ಅವರಿಗೆ ಉಂಟುಮಾಡಿ, ತನ್ನಲ್ಲಿ ಅವರಿಗೆ ನಿಶ್ಚಲವಾದ ನಿರ್ಮಲ ಪ್ರೇಮವನ್ನುಂಟು–ಮಾಡುತ್ತಾನೆ. ಬಹುಕ್ಲೇಶಗಳನ್ನನುಭವಿಸಿ ಮಹಾಯತ್ನ ಸಾಧ್ಯವಾದ ಸುಖಾನುಭವವನ್ನು ಹೊಂದುವುದಕ್ಕೂ, ಅನಾಯಾಸದಿಂದ ಕರೆದೊಯ್ದು ವೈಕುಂಠದಲ್ಲಿ ಕೂಡಿಸುವುದರಿಂದ ಲಭ್ಯವಾಗುವ ಸುಖಕ್ಕೂ ವ್ಯತ್ಯಾಸವಿಲ್ಲವೇ! ಸ್ವಯಂ ದುಡಿದು ಶ್ರೀಮಂತನಾಗಿ ನಾನಾ ಭೋಗಗಳನ್ನು ಅನುಭವಿಸುವುದಕ್ಕೂ ಪಿತ್ರಾರ್ಜಿತ ಐಶ್ವರ್ಯವನ್ನು ಭೋಗಿಸುವುದಕ್ಕೂ ಬಹು ವೈಲಕ್ಷಣ್ಯವುಂಟಷ್ಟೆ ! ಈ ಮೊದಲಾದ ಯುಕ್ತಿಗಳಿಂದ ಸಾಧನಾನಂತರವೇ ಮುಕ್ತಿಯನ್ನು ಕೊಡುವ ಶ್ರೀಹರಿ ಸಂಕಲ್ಪವು ಸಾಧುವೆಂದು ಮನಗಾಣಬಹುದು. ಮತ್ತು ಶ್ರೀಹರಿಯು ನಿರ್ನಿಮಿತ್ತವಾಗಿ ಇಚ್ಛಾ ಮಾತ್ರದಿಂದ (ಯಾವ ವಿಧ ಸಾಧನೆಯೂ ಇಲ್ಲದೆ) ತಮೋಯೋಗ್ಯ ಜೀವರನ್ನು ನಿತ್ಯನರಕದಲ್ಲಿ ಹಾಕಿದರೆ ನೈರ್ಘೃಣ್ಯ (ನಿರ್ದಯತ್ವ) ರೂಪದೋಷವು ಬರುವುದಿಲ್ಲವೆ? ಈ ಜೀವರಿಂದ ನಿತ್ಯದುಃಖಾನುಭವ ಸಾಧಕವಾದ ದುಷ್ಕರ್ಮಗಳನ್ನು ಮಾಡಿಸಿಯೇ ಅವರನ್ನು ತಮಸ್ಸಿನಲ್ಲಿ ಹಾಕುತ್ತಾನೆ. ತ್ರಿವಿಧರಾದ ಜೀವರನ್ನು, ಅವರವರ ಯೋಗ್ಯತೆಗಳನ್ನು (ಸ್ವರೂಪ ಮತ್ತು ಅನಾದಿ ಕರ್ಮ) ಅನುಸರಿಸಿದ ಕರ್ಮಗಳಲ್ಲಿ ಪ್ರೇರಿಸಿ, ತದನುಸಾರ ಫಲಗಳನ್ನು ಕೊಡುವುದರಿಂದ ಶ್ರೀಹರಿಯು ಸರ್ವಸಮನೆಂಬ ಮಹಿಮೆಯೇ ಸಿದ್ಧವಾಗುತ್ತದೆ. ಹಾಗಲ್ಲದಿದ್ದರೆ ವೈಷಮ್ಯಾದಿ ದೋಷಗಳು ತಪ್ಪುವುದೇ ಇಲ್ಲ. ಆಗಮಗಳಾದರೋ ಪರಮಾತ್ಮನು ಸರ್ವಸಮನೆಂದೂ ವೈಷಮ್ಯಾದಿ ದೋಷದೂರನೆಂದೂ ಸಾರುತ್ತವೆ.

ಇನ್ನು, ಪೂರ್ವಕರ್ಮಾನುಸಾರವಾಗಿ ಜೀವರನ್ನು ಕರ್ಮಗಳಲ್ಲಿ ಪ್ರೇರಿಸಿ ಆ ಕರ್ಮಗಳಿಗನುಸಾರವಾಗಿ ಫಲಪ್ರದನೆಂಬುದರಿಂದ ಶ್ರೀಹರಿಯು ಕರ್ಮಾಧೀನನೆಂದೂ, ಅದರಿಂದ ಅವನ ಸ್ವಾತಂತ್ರ್ಯಕ್ಕೆ ಹಾನಿಯುಂಟೆಂದು ಶಂಕಿಸುವುದೂ, ಉಚಿತವಲ್ಲ. ಶ್ರೀಹರಿಯು ಯಥೇಷ್ಟವಾಗಿ ಜೀವರಿಂದ ಅನಂತ ಕರ್ಮಗಳನ್ನು ಮಾಡಿಸಿ, ತನ್ನ ಇಚ್ಛಾನುಸಾರವಾಗಿ ಅವುಗಳಿಗೆ ಫಲಕೊಡುತ್ತಾನೆಂಬುದು ನಿಜ. ಕೆಲವು ಕರ್ಮಗಳಿಗೆ ಸ್ವೇಚ್ಛೆಯಿಂದ ಫಲಗಳನ್ನೇ ಕೊಡುವುದಿಲ್ಲ. ಮತ್ತೆ ಕೆಲವು ಕರ್ಮಗಳಿಗೆ ಅಲ್ಪಫಲಗಳನ್ನೂ ಕೊಡುತ್ತಾನೆ. ಪ್ರಾಯಶ್ಚಿತ್ತಾದಿ ಕರ್ಮಗಳನ್ನು ಮಾಡಿಸಿ, ಕೆಲವು ಕರ್ಮಗಳನ್ನು ವಿಫಲಗೊಳಿಸುತ್ತಾನೆ. ಎಲ್ಲ ಕರ್ಮಗಳೂ ಫಲಭೋಗದಿಂದಲೇ ನಾಶಹೊಂದಲು ಸಾಧ್ಯವಿಲ್ಲ. ಕರ್ಮಗಳು ಅನಂತವಾದುದರಿಂದ, ಅವುಗಳ ಫಲಭೋಗಾ-ನಂತರದಲ್ಲಿ ಮೋಕ್ಷವೆಂದರೆ ಮೋಕ್ಷವಾರ್ತೆಯೇ ಲೋಪವಾಗಬೇಕಾಗುವುದು. ಅನಂತ ಕರ್ಮಗಳ ಫಲಗಳನ್ನು ಭೋಗಿಸಿ ಮುಗಿಸುವುದು ದುಸ್ಸಾಧ್ಯವೇ ಸರಿ. ತನ್ನ ಸಾಕ್ಷಾದ್ದರ್ಶನವೆಂಬ ಅಪರೋಕ್ಷ ಜ್ಞಾನದಿಂದ ಅನಂತ ಕರ್ಮರಾಶಿಗಳನ್ನು ಸುಟ್ಟು ಬೂದಿ ಮಾಡುತ್ತಾನೆ. ಜೀವರಿಗೆ ಕರ್ಮಫಲಗಳನ್ನು ಭೋಗಿಸುವಂತೆ ಮಾಡುವುದರಲ್ಲಿ ಕರ್ಮವು ಕೇವಲ ನಿಮಿತ್ತ. ಸ್ವತಂತ್ರ ಫಲದಾತನು ಶ್ರೀಹರಿಯೇ. ಆದುದರಿಂದ ಜೀವರ ಕರ್ಮಗಳನ್ನು ಅನುಲಕ್ಷಿಸಿ ಶ್ರೀಹರಿಯು ಫಲಕೊಡುತ್ತಾನೆಂಬುದರಿಂದ ಅವನು ಕರ್ಮಾಧೀನನೆಂದು ಏರ್ಪಡುವುದಿಲ್ಲ. ಸ್ವಾತಂತ್ರ್ಯಕ್ಕೆ ಯಾವ ಪ್ರಕಾರದ ಕೊರತೆಯೂ ಉಂಟಾಗುವುದಿಲ್ಲ. ಆದರೆ ಇಷ್ಟು ಮಾತ್ರ ಗಮನದಲ್ಲಿಡಬೇಕು. ಸತ್ಕರ್ಮಗಳಿಗೆ ದುಃಖಾದಿ ಅನಿಷ್ಟ ಫಲಗಳನ್ನೂ, ದುಷ್ಕರ್ಮಗಳಿಗೆ ತದ್ವಿರುದ್ಧ ಫಲಗಳನ್ನೂ ಎಂದಿಗೂ ಕೊಡುವುದಿಲ್ಲ. *ಸ್ವತಂತ್ರ ಈಶ ಏವೈಕಸ್ತದ್ವಶಂ ಕರ್ಮ ಸರ್ವದಾ । ಅತ ಈಶತ್ವಮೀಶಸ್ಯ ನ ಹೀಶೋಽನ್ಯಃ ಕಥಂಚನ* ಎಂಬ ಶ್ರುತಿಯು ಸರ್ವ ಕರ್ಮವೂ ಸದಾ ಶ್ರೀಹರಿಯ ಅಧೀನವೆಂದೂ, ಕರ್ಮಾನುಸಾರ ಗತಿಪ್ರದನೆಂಬುದು ಅವನ ಸರ್ವೇಶ್ವರತ್ವಕ್ಕೆ ಹಾನಿಯನ್ನು ತರತಕ್ಕದಲ್ಲವೆಂದೂ ಹೇಳುತ್ತದೆ. - *ಕರ್ಮಾಣ್ಯನಂತಾನಿ ಯಥೇಷ್ಟಮೀಶಃ ಸಂಪಾದ್ಯ ತೇಷಾಂ ಫಲಮಿಚ್ಛಯೈವ । ಕ್ವಚಿದ್ದದಾತಿ ಕ್ವಚನೋದದಾತಿ ನ ಹ್ಯಾನಂತ್ಯಾತ್ಕರ್ಮಣಾಂ ಭೋಗನಾಶಃ ।*

*ಸ್ವಾತಂತ್ರ್ಯಂಚೇತ್ಕರ್ಮಣಾಂ ಸರ್ವಭೋಗಃ ಸ್ಯಾನ್ನಹ್ಯೇವಂ ಕ್ವಾಪಿ ತತ್ಕೇನಚಿತ್ಸ್ಯಾತ್ ।। ಅತೋಽಪಿ ಸ ಸ್ವೇಚ್ಛಯಾ ಕಿಂಚಿದೇವ ಫಲಂ ಕುರ್ಯಾದ್ವಿಫಲಂ ಪ್ರಾಯತಶ್ಚ । ಕ್ವಚಿದ್ಜ್ಞಾನಂ ಜನಯನ್ ಭಸ್ಮಕುರ್ಯಾತ್ ಸ್ವೇಚ್ಛಾವೃತ್ತಿಸ್ತಸ್ಯ ವಿಷ್ಣೋಸ್ಸದೈವ।।'' (ಬ್ರಹ್ಮಾಂಡ).*

– ಶ್ರೀಹರಿಯು ಅನಂತಾನಂತ ಕರ್ಮಗಳನ್ನು ಯಥೇಷ್ಟವಾಗಿ ಜೀವರಿಂದ ಮಾಡಿಸಿ, ಸ್ವೇಚ್ಛೆಯಿಂದಲೇ ಅವುಗಳಿಗೆ ಫಲವನ್ನು ಕ್ವಚಿತ್ ಕೊಡುತ್ತಾನೆ-ಕ್ವಚಿತ್ ಕೊಡುವುದಿಲ್ಲ. ಕರ್ಮಗಳು ಅನಂತವಾದುದರಿಂದ ಭೋಗದಿಂದ ಪೂರಾ ನಾಶವಾಗುವುದೂ ಇಲ್ಲ. ಕರ್ಮಗಳಿಗೆ ಸ್ವಾತಂತ್ರ್ಯ-ವಿರುತ್ತಿದ್ದರೆ ಸರ್ವ ಕರ್ಮಗಳ ಭೋಗವೇ ಆಗಬೇಕಾಗಿತ್ತು. ಹೀಗೆ ಎಲ್ಲಿಯೂ ಎಂದಿಗೂ ಸರ್ವಭೋಗವು ಆಗಲಾರದಷ್ಟೆ ! ಶ್ರೀಹರಿಯು ಸರ್ವಸ್ವತಂತ್ರ-ನಾದುದರಿಂದಲೇ ತನ್ನ ಇಚ್ಛೆಯಿಂದ ಕೆಲವು ಕರ್ಮಗಳನ್ನು ಸಫಲವನ್ನಾಗಿ ಮಾಡುತ್ತಾನೆ. ಪ್ರಾಯಶ್ಚಿತ್ತಾದಿ ನಿಮಿತ್ತಾಂತರಗಳಿಂದ ಕೆಲವನ್ನು ವಿಫಲಗಳನ್ನಾಗಿ ಮಾಡುತ್ತಾನೆ. ಅಪರೋಕ್ಷಜ್ಞಾನವನ್ನು ಹುಟ್ಟಿಸಿ ಕರ್ಮವನ್ನು ಭಸ್ಮೀಕರಿಸುತ್ತಾನೆ. ಹೀಗೆ ಶ್ರೀ ವಿಷ್ಣುವು ಯಾವಾಗಲೂ ಸ್ವೇಚ್ಛೆಯಿಂದಲೇ ವರ್ತಿಸುವ ಸ್ವತಂತ್ರನಾಗಿದ್ದಾನೆ.

ಜಡಚೇತನಾತ್ಮಕ ವಿಶ್ವದ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಲ್ಲಕ್ಕೂ ಶ್ರೀಹರಿಯು ಸ್ವತಂತ್ರ ಹಾಗೂ ಪ್ರಧಾನ-ಕಾರಣನೆಂದು ಆಗಮಗಳು ಪ್ರತಿಪಾದಿಸುವುದರಿಂದ ವಿಷ್ಣುವೇ ಸರ್ವೋತ್ತಮ-ನೆಂದು ಸಿದ್ಧವಾಗುತ್ತದೆ. ಈ ಜ್ಞಾನದ ನಿಶ್ಚಯದಿಂದಲೇ ಮುಕ್ತಿಯೋಗ್ಯ-ಜೀವರೆಲ್ಲರೂ ಅನಾದಿ ಪ್ರಾಕೃತ ಗುಣಬಂಧದಿಂದ ಬಿಡುಗಡೆ ಹೊಂದಿ, ನಿತ್ಯಸ್ವರೂಪಾನಂದಾವಿರ್ಭಾವದಿಂದ ಮುಕ್ತರೆನಿಸಿ, ವೈಕುಂಠಾದಿ ಮುಕ್ತ-ಸ್ಥಾನಗಳನ್ನು ಹೊಂದುತ್ತಾರೆ. ಹೀಗೆ ಜಗತ್ತಿನ ಸೃಷ್ಟ್ಯಾದಿ ಅಷ್ಟಕರ್ತೃತ್ವವನ್ನು ಶ್ರೀಹರಿಯು ಜೀವರಿಗೆ ಅವರವರ ಗತಿಗಳನ್ನು ಹೊಂದಿಸುವುದಕ್ಕಾಗಿ ನಿರ್ವಹಿಸುತ್ತಾನಲ್ಲದೆ ಸ್ವಪ್ರಯೋಜನವೆಂಬುದು ಲೇಶಮಾತ್ರವೂ ಇಲ್ಲ. ಆಗಮಗಳು ಶ್ರೀಹರಿಯನ್ನು ಸರ್ವ ಕರ್ಮಫಲಭೋಕ್ತನೆಂದೂ ಹೇಳುವುದ-ರಿಂದ ತನ್ನ ಭೋಗಾರ್ಥವಾಗಿಯೇ ಸೃಷ್ಟ್ಯಾದಿಗಳನ್ನು ಮಾಡುತ್ತಾನೆಂದು

ಶಂಕಿಸುವುದು ಸರಿಯಲ್ಲ. ಪ್ರತಿ ಕಲ್ಪದಲ್ಲಿ ಸೃಷ್ಟರಾದ ಅಸಂಖ್ಯಾತಜೀವರಿಂದ ಅನಂತ ವಿವಿಧ ಶುಭಕರ್ಮಗಳನ್ನು ಮಾಡಿಸಿ, ಅವುಗಳ ಮುಖ್ಯ ಫಲರೂಪವಾದ ಸುಖ ವಿಶೇಷಗಳನ್ನು ಅನುಭವಿಸುವವನೂ ಶ್ರೀಹರಿಯೇ. ಶುಭಕರ್ಮಗಳ ಫಲರೂಪವಾದ ಸುಖದಲ್ಲಿ ಅಲ್ಪರಾದ ಜೀವರು ಅಲ್ಪಾಂಶವನ್ನು ಮಾತ್ರ ಶ್ರೀಹರೀಚ್ಛೆಯಿಂದಲೇ ಭೋಗಿಸಿ ಸುಖಿಸುತ್ತಾರೆ. ಅವರಿಗೆ ಸುಖದಾನ ಮಾಡಲಿಕ್ಕಾಗಿಯೇ ಶ್ರೀಹರಿಯು ತಾನು ಭೋಗಿಸುತ್ತಾನೆ. ಪೂರ್ಣಾನಂದನಿಗೆ ಈ ಭೋಗದಿಂದ ಏನಾಗಬೇಕಾಗಿದೆ ! ಈ ಅನಂತ ಸುಖಭೋಗಗಳು ಶ್ರೀಹರಿಯ ಸ್ವರೂಪದಲ್ಲಿ ನಿತ್ಯದಲ್ಲಿಯೂ ಇದ್ದೇ ಇವೆ. ಜೀವರಿಗೆ ಅವರಿಂದ ತಾನು ಮಾಡಿಸಿದ ದುಷ್ಕರ್ಮಗಳ ದುಃಖರೂಪ ಫಲಭೋಗವು ಉಂಟಾಗ-ಲೆಂದು ಶ್ರೀಹರಿಯು ಇಚ್ಛಿಸುವುದೇ ಶ್ರೀಹರಿಯ ಭೋಗವು-ಇದೇ ಜೀವರ ದುಃಖಾನುಭವಕ್ಕೆ ಕಾರಣ. ಸ್ವತಂತ್ರನಾದ ಶ್ರೀಹರಿಯು ದುಃಖವನ್ನು ಎಂದೂ ಭೋಗಿಸನು. ಹೀಗಿದ್ದರೂ ಕೆಲವರು ಜಗತ್ತಿನ ಸೃಷ್ಟ್ಯಾದಿಗಳು ಶ್ರೀಹರಿಯ ಭೋಗಾರ್ಥವಾಗಿಯೇ ಎಂದು ತಿಳಿಯುತ್ತಾರೆ. ಮತ್ತೆ ಕೆಲವರು ಯಥೇಚ್ಛ-ಪೂರ್ಣ ಭೋಗವುಳ್ಳ ಚಕ್ರವರ್ತಿ ಸಾರ್ವಭೌಮಾದಿಗಳು ಚೆಂಡಾಟ, ಹವಾ-ಸಂಚಾರ ಮೊದಲಾದ ಕ್ರೀಡೆಗಳಲ್ಲಿ ತೊಡಗುವಂತೆ ಶ್ರೀಹರಿಯು ಕ್ರೀಡೆಗಳಿಗಾಗಿ ಸೃಷ್ಟ್ಯಾದಿಗಳನ್ನು ಮಾಡುತ್ತಾನೆಂದು ತಿಳಿಯುತ್ತಾರೆ. ಈ ವಿಧ ಕ್ರೀಡೆಗಳು ಸಹ ಚಕ್ರವರ್ತಿ ಮೊದಲಾದವರಿಗೆ ಶ್ರಮ, ಆಲಸ್ಯ, ಬೇಸರ ಮೊದಲಾದವುಗಳ ಪರಿಹಾರರೂಪದ ಪ್ರಯೋಜನಗಳುಳ್ಳವಾಗಿರುತ್ತವೆ. ಶ್ರಮ ಚಿಂತಾದಿ ಅಶೇಷ ದೋಷದೂರನಾದ ಶ್ರೀಹರಿಯು ಕ್ರೀಡೆಗಾಗಿ ಸೃಷ್ಟ್ಯಾದಿಗಳಲ್ಲಿ ತೊಡಗುತ್ತಾ-ನೆಂಬುದೂ ಯುಕ್ತವಲ್ಲ-ಅದು ಯಾವ ವಿಧದ ಪ್ರಯೋಜನವೂ ಇಲ್ಲದ ಕೇವಲ ಲೀಲಾಮಾತ್ರವು. ಸ್ವಭಾವಸಿದ್ಧ ಪೂರ್ಣಾನಂದದಲ್ಲಿ ಮಗ್ನನಾದ ನಿತ್ಯ ಸುಖಾತಿಶಯವುಳ್ಳ ಶ್ರೀಹರಿಗೆ ಲೀಲೆ ಎಂಬ ಪ್ರಯೋಜನ ತಾನೆ ಹೇಗೆ ಕೊಡುತ್ತದೆ? ಕ್ರೀಡಾವಿಹಾರವೂ, ತಜ್ಜನ್ಯ ಸುಖವೂ, ಅಪೂರ್ಣ ಸುಖವುಳ್ಳವನಿಗೆ ಮಾತ್ರ ಕೂಡುತ್ತದಷ್ಟೆ ! ಸೃಷ್ಟ್ಯಾದಿ ಲೀಲೆಯು ಸ್ವಪ್ರಯೋಜನರಹಿತವೂ ಇಚ್ಛಾಮಾತ್ರದಿಂದ ಸಂಭವಿಸತಕ್ಕದ್ದೂ, ಆದ ಸ್ವಾಭಾವಿಕ ವ್ಯಾಪಾರವೆಂದು, ವೇದಾದಿ ಆಗಮಗಳ ಮಹಾ ತಾತ್ಪರ್ಯವಾಗಿದೆ. ಹೀಗಿದ್ದರೂ ಸೃಷ್ಟ್ಯಾದಿಗಳು ವ್ಯರ್ಥವಲ್ಲ. ಅನಾದಿ ಬಂಧ ನಿವೃತ್ತಿಪೂರ್ವಕ ಸ್ವಸ್ವರೂಪ

ಸ್ಥಿತಿಯನ್ನು ಹೊಂದುವುದೆಂಬ ಮಹಾ ಪ್ರಯೋಜನವನ್ನು ಜೀವರಿಗೆ ಸಾಧಿಸತಕ್ಕವುಗಳಾಗಿವೆ.[40]

ಜಗತ್ಸೃಷ್ಟ್ಯಾದಿಗಳು ಶ್ರೀಹರಿಗೆ ಲೀಲಾಮಾತ್ರವೆಂದು ಹೇಳಿದುದನ್ನು ಲೌಕಿಕ ಯುಕ್ತಿಗಳಿಂದಲೂ ಮನಗಾಣಬಹುದು. ಲೋಕದಲ್ಲಿ ದುಃಖಿಗಳಾದವರು ಕರ್ಮದಲ್ಲಿ ಪ್ರವೃತ್ತರಾಗುವುದು ಕಂಡುಬಂದಿಲ್ಲ. ಮೂರ್ಛಾದಿ ಅವಸ್ಥಾಂತರಗಳಲ್ಲಿರುವವರಂತೂ ಯಾವ ಕರ್ಮಗಳನ್ನೂ ಮಾಡುವುದಿಲ್ಲ. ಸುಖಿಗಳು ಕರ್ಮದಲ್ಲಿ ಪ್ರವೃತ್ತರಾಗುತ್ತಾರೆ. ಯಾರು ಎಷ್ಟೆಷ್ಟು ಸುಖಿಗಳೋ ಅಷ್ಟಷ್ಟು ಕರ್ಮ ಪ್ರವೃತ್ತಿಯುಳ್ಳವರೆಂದು ಕಂಡುಬರುತ್ತದೆ. ಅಲ್ಪಸುಖದಿಂದ ಅಲ್ಪಪ್ರವೃತ್ತಿಯೆಂದೂ ಅದ್ಭುತವಾದ ಮಹಾಪ್ರವೃತ್ತಿಯಿಂದಲೇ ಸಾಧ್ಯವಾದ ಜಗತ್ತಿನ ಸೃಷ್ಟ್ಯಾದಿ ಅಷ್ಟಕರ್ತೃತ್ವದ ನಿರ್ವಹಣೆಯ ಮಹಾನಂದಪೂರ್ಣದಿಂದಲೇ ಸಾಧ್ಯವೆಂದೂ ಶ್ರುತಿಯು ಹೇಳುತ್ತದೆ. *ಕೋಹ್ಯೇವಾನ್ಯಾತ್ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನಂದೋ ನ ಸ್ಯಾತ್॥''* ಪ್ರಕಾಶರೂಪನಾದುದರಿಂದ ಆಕಾಶನೆಂದು ಕರೆಯಲ್ಪಡುವ ಈ ಹರಿಯು ಪೂರ್ಣಾನಂದಸ್ವರೂಪನಾಗದಿದ್ದಲ್ಲಿ ಈ ಚೇತನಾಚೇತನ ಜಗತ್ತನ್ನು ಚೇಷ್ಟಿಸಬಲ್ಲನೇ? ಶ್ರೀಹರಿಯಲ್ಲದೇ ಬೇರೆ ಯಾವನು ಪ್ರೇರಿಸಬಲ್ಲನು? (ಪ್ರಾಣ್ಯಾತ್= ಯಜ್ಞ ದಾನಾದಿ ಸತ್ಕರ್ಮಗಳಲ್ಲಿ ಪ್ರೇರಿಸಬಲ್ಲನು) ಎಂಬ ಅರ್ಥದ ಈ ಶ್ರುತಿಯನ್ನು ವ್ಯಾಖ್ಯಾನಮಾಡುತ್ತಾ ತಮ್ಮ ತೈತ್ತಿರೀಯ ಭಾಷ್ಯದಲ್ಲಿ ಶ್ರೀಮದಾನಂದತೀರ್ಥ ಭಗವತ್ಪಾದರು ಈ ರೀತಿ ಹೇಳಿರುವರು. *ಅಲ್ಪಾತ್ಸುಖಾದಲ್ಪ ಕರ್ಮಪೂರ್ಣಾನಂದಾದ್ಧಿ ಸರ್ವಕೃತ್ । ನಹ್ಯಾರ್ತಾಃ ಕರ್ಮ ಕುರ್ವಂತಿ ಮುಗ್ಧಾಶ್ಚೈವ ವಿಶೇಷತಃ ॥ ತಸ್ಮಾದ್ಯಾದೃಕ್ ಸುಖಂ*

40 ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿಚಾಪರೇ ॥
ದೇವಸ್ಯೈಷ ಸ್ವಭಾವೋಽಯಂ ಆಪ್ತಕಾಮಸ್ಯಕಾ ಸ್ಪೃಹಾ ॥
ಮತ್ತು, ಇಚ್ಛಾಮಾತ್ರಂ ಪ್ರಭೋಸ್ಸೃಷ್ಟಿಃ ಇತಿಸೃಷ್ಟೌ ವಿನಿಶ್ಚಿತಾಃ ॥
'ಸೋಽಕಾಮಯತ' ಇತ್ಯಾದಿ ಶ್ರುತ್ಯರ್ಥಗಳನ್ನು ಬ್ರಹ್ಮಸೂತ್ರಗಳ ನ ಪ್ರಯೋಜನವತ್ವಾಧಿಕರಣದಲ್ಲಿ ''**ಓಂ ಲೋಕವತ್ತು ಲೀಲಾ ಕೈವಲ್ಯಂ ಓಂ**'' ಮೊದಲಾದ ಸೂತ್ರಗಳಲ್ಲಿ ಶ್ರೀ ಬಾದರಾಯಣರು ಹೀಗೆಂದು ನಿರ್ಣಯಿಸಿ ನಿರೂಪಿಸಿರುತ್ತಾರೆ.

*ತಾದೃಕ್ಕರ್ಮಪೂರ್ಣ ಸುಖಿಸ್ತತಃ । ತತ್ಪೂರ್ಣಾನಂದ ದೇಹೇನ ಕಾರಿತಃ ಪ್ರಾಣಿತಿ ಸ್ಫುಟಮ್ ।। ಆದೀಪ್ತಸ್ತ್ವೇಷಭಗವಾನ್ಯದ್ಯಾನಂದೋಽಭವೇನ್ನ ಚ । ಸಾಮಾನ್ಯಚೇಷ್ಟಾಧರ್ಮ್ಯಾಶ್ಚ ಕಸ್ಯ ಸ್ಯುಸ್ತಮೃತೇ ಪ್ರಭುಮ್ ।।* ಅಲ್ಪ ಸುಖದಿಂದ ಲೋಕದಲ್ಲಿ ಅಲ್ಪ ಕರ್ಮಪ್ರವೃತ್ತಿ ಕಂಡುಬರುತ್ತದೆ. ಶ್ರೀಹರಿಯು ಪೂರ್ಣಾನಂದನಾದ ಪ್ರಯುಕ್ತವೇ ಸರ್ವಕರ್ತನಾಗಿದ್ದಾನೆ.

ಲೋಕದಲ್ಲಿ ದುಃಖಿಗಳು ಕರ್ಮವನ್ನು ಮಾಡುವುದಿಲ್ಲ. ಮೂರ್ಛಿತರಂತೂ ಸುತರಾಂ ಮಾಡುವುದಿಲ್ಲ. ಆದುದರಿಂದ ಯಾವ ರೀತಿ ಸುಖವಿದೆಯೋ ಅದನ್ನನುಸರಿಸಿಯೇ ಕರ್ಮಪ್ರವೃತ್ತಿಯು ಇರುವುದು. ಆದುದರಿಂದ ಪೂರ್ಣಾನಂದನಾದ ಶ್ರೀಹರಿಯಿಂದಲೇ ನಿಖಿಲಜಗತ್ತು ಪ್ರೇರಿತವಾಗಿ ಎಲ್ಲ ವ್ಯಾಪಾರಗಳನ್ನೂ (ಸಾಮಾನ್ಯ ಕ್ರಿಯೆಗಳನ್ನೂ, ಯಜ್ಞಾದಿ ಧರ್ಮ-ರೂಪಕರ್ಮಗಳನ್ನು) ಚೆನ್ನಾಗಿ ಮಾಡುತ್ತದೆ. ಜಗತ್ಸೃಷ್ಟ್ಯಾದಿಗಳನ್ನು ಸರ್ವದಾ ಕ್ರಮಬದ್ಧವಾದ ನಿಯಮಗಳಿಗನುಸಾರವಾಗಿ ತಪ್ಪದೆ ನಡೆಸುತ್ತಾನೆಂಬುದು ಸಹ ಶ್ರೀಹರಿಯ ಪೂರ್ಣಶಕ್ತಿ ಮತ್ತು ಸ್ವಾತಂತ್ರ್ಯಗಳನ್ನು ಸಾಧಿಸುತ್ತದೆ. *ನಿಯತ ಕ್ರೀಡನಾದೇವ ಕರ್ತಾನಾನ್ಯೋಽಸ್ತಿ ಕಸ್ಯಚಿತ್ । ಅಸ್ವತಂತ್ರೋ ಹಿ ಚಲತಿ ಚಲಚಿತ್ತಾದಶಕ್ತಿತಃ ।। ಸ್ವತಂತ್ರಃ ಪೂರ್ಣಶಕ್ತಿಃ ಸನ್ಕುತೋಽಸೌನಿಯತಿಂ ತ್ಯಜೇತ್ । ಇತಿ ಶ್ರುತೇಶ್ಚ ।।* (ನ್ಯಾಯ ವಿವರಣ):- ಸೃಷ್ಟ್ಯಾದಿ ವಿಷಯಕ ಶ್ರೀಹರಿಯ ಕ್ರೀಡೆಯು ನಿಯತವಾದುದು-ಎಂದರೆ ನಿಯಮಾನುಸಾರ (ವ್ಯತ್ಯಾಸವಿಲ್ಲದೆ) ನಡೆಯುತ್ತದೆ. ಅಸ್ವತಂತ್ರನೂ ಚಂಚಲಚಿತ್ತನೂ ಅಶಕ್ತನೂ ಆದವನು ತನ್ನ ಕಾರ್ಯದಿಂದ ಚ್ಯುತನಾಗುತ್ತಾನೆ. ಸ್ವತಂತ್ರನೂ ಅಪರಿಮಿತ ಶಕ್ತಿಯುಳ್ಳವನೂ ಆದ ಶ್ರೀಹರಿಯು ತನ್ನ ನಿಯಮವನ್ನು ಏಕೆ ಪರಿತ್ಯಾಗಮಾಡುವನು? ಎಂಬರ್ಥದ ಶ್ರುತಿಯಿಂದ, ಸರ್ವದೇಶ ಕಾಲಗಳಲ್ಲಿ ಸೃಷ್ಟ್ಯಾದಿಗಳನ್ನು ಶ್ರೀಹರಿಯೇ ಮಾಡುವವನಾದುದರಿಂದ ಅವನೇ ಸರ್ವಸ್ವತಂತ್ರನು ಮತ್ತು ಪೂರ್ಣಶಕ್ತಿಯುತನು. ಈ ಮೊದಲಾದ ವೇದಾದಿ ಆಗಮಸಮ್ಮತ ಯುಕ್ತಿ-ಗಳಿಂದ ಸೃಷ್ಟ್ಯಾದ್ಯಷ್ಟಕರ್ತನಾದ ಶ್ರೀಹರಿಯು, ಸ್ವಾತಂತ್ರ್ಯ, ಸರ್ವಜ್ಞತ್ವ ಸರ್ವಶಕ್ತಿಮತ್ತ್ವ, ಪೂರ್ಣಾನಂದಾದಿ ಗುಣರೂಪನೂ, ದುಃಖಾಜ್ಞಾನಾದಿ ಸರ್ವದೋಷದೂರನೂ, ಸರ್ವಸ್ವಾಮಿಯೂ, ಎಂದು ಸಿದ್ಧವಾಗುತ್ತದೆ.

ಈ ಮಹಾಪ್ರಮೇಯವೇ ವೇದಗಳ ಮಹಾ ತಾತ್ಪರ್ಯವೆಂದು ಶ್ರೀ ಬಾದ-ರಾಯಣರು ವೇದಾಂತಸೂತ್ರಗಳಲ್ಲಿ ಸಯುಕ್ತಿಕವಾಗಿ ನಿರ್ಣಯಿಸಿರುವರು. ಇವೇ ಪ್ರಸಿದ್ಧ ಬ್ರಹ್ಮಸೂತ್ರಗಳೆಂಬವು. ಇವುಗಳನ್ನೊಳಗೊಂಡ ನಾಲ್ಕು ಅಧ್ಯಾಯಗಳುಳ್ಳ ಗ್ರಂಥವು ಬ್ರಹ್ಮಮೀಮಾಂಸಾಶಾಸ್ತ್ರವೆಂದೂ ಪ್ರಸಿದ್ಧವಾಗಿದೆ. ಇದನ್ನೇ ಪರವಿದ್ಯೆ ಎಂದೂ ಕರೆಯುವರು. ಇದರಿಂದಲೇ ತತ್ತ್ವಜ್ಞಾನ ನಿಶ್ಚಯವು-ಶ್ರೀಹರಿ ಪ್ರಸಾದವೂ-ಮೋಕ್ಷವೂ, ಸನ್ಮೋಕ್ಷಾಪೇಕ್ಷಿಗಳೆಲ್ಲರೂ ಮೋಕ್ಷಕ್ಕೆ ಸಾಕ್ಷಾತ್ಸಾಧನವಾದ ಶ್ರೀವಿಷ್ಣುಪ್ರಸಾದವನ್ನು ದೊರೆಕಿಸಿಕೊಳ್ಳಲು ಬ್ರಹ್ಮಮೀಮಾಂಸಾ ಶಾಸ್ತ್ರಾಭ್ಯಾಸವನ್ನು ವಿಧ್ಯುಕ್ತಕ್ರಮದಿಂದ ಆಚರಿಸಲೇ- ಬೇಕು - ಇದೇ ಪ್ರಧಾನ ಸಾಧನ. ಗುರು ಶುಶ್ರೂಷೆಯಿಂದ ಲಭ್ಯವಾದ ಗುರುಪ್ರಸಾದವುಳ್ಳವನು ಗುರೂಪದೇಶದಿಂದ ಮಾತ್ರ ಜ್ಞಾನವನ್ನು ದೊರೆಕಿಸಿ-ಕೊಳ್ಳಬಲ್ಲನು. ಹಾಗಲ್ಲದೇ ಶಾಸ್ತ್ರಗ್ರಂಥಗಳನ್ನು ಸ್ವಯಂ ಅಭ್ಯಸಿಸುವ ಮಾತ್ರದಿಂದ ವಿಷ್ಣುಪ್ರಸಾದಕ್ಕೆ ಸಾಧಕವಾದ ಜ್ಞಾನ ಲಾಭವಾಗಬಹುದೆಂದು ತಿಳಿಯುವುದು ಕೇವಲ ಭ್ರಮೆ. ಹೀಗೆಂದ ಮಾತ್ರಕ್ಕೆ ಸ್ವಯಂ ಶಾಸ್ತ್ರಾಭ್ಯಾಸದಲ್ಲಿ ತೊಡಗುವುದು ವ್ಯರ್ಥವೆಂದಲ್ಲ. ಅದು ಗುರೂಪದೇಶ, ಗುರುಪ್ರಸಾದಗಳಿಗೆ ಅರ್ಹನನ್ನಾಗಿ ಮಾಡುವ ದಿಕ್ಕಿನಲ್ಲಿ ಬಹುದೂರ ಕರೆದೊಯ್ಯಬಲ್ಲುದು. ಈ ಬ್ರಹ್ಮಮೀಮಾಂಸಾ ಶಾಸ್ತ್ರವು ಶ್ರೀಹರಿಯ ಅನಂತ ಗುಣಪೂರ್ಣತ್ವ - ಸಕಲ ದೋಷದೂರತ್ವಗಳನ್ನು ಹೇಗೆ ಸಾಧಿಸುತ್ತದೆಂಬುದನ್ನು ಮುಂದಿನ ಪರಿಚ್ಛೇದಗಳಲ್ಲಿ ಅತಿ ಸಂಕ್ಷಿಪ್ತವಾಗಿ ನಿರೂಪಿಸಲಾಗುತ್ತದೆ.

## ಪರಿಚ್ಛೇದ ೫

## ಶ್ರೀಹರಿಯೇ ಅನಂತ ಕಲ್ಯಾಣಗುಣಪರಿಪೂರ್ಣನು

ಬ್ರಹ್ಮಮೀಮಾಂಸಾ ಶಾಸ್ತ್ರವು ನಾಲ್ಕು ಅಧ್ಯಾಯಗಳುಳ್ಳದ್ದು. ಮೊದಲನೆ ಅಧ್ಯಾಯದಲ್ಲಿ ನಾರಾಯಣನ ಗುಣಪೂರ್ಣತ್ವವನ್ನೂ, ಎರಡನೆಯ ಅಧ್ಯಾಯದಲ್ಲಿ ಸರ್ವದೋಷ ದೂರತ್ವವನ್ನೂ, ಮೂರನೆಯ ಅಧ್ಯಾಯದಲ್ಲಿ ಮೋಕ್ಷ ಸಾಧನೆಗಳನ್ನೂ, ನಾಲ್ಕನೆಯ ಅಧ್ಯಾಯದಲ್ಲಿ ಆ ಸಾಧನೆಗಳಿಂದ ದೊರೆಯುವ ಫಲವಿಶೇಷಗಳನ್ನೂ ಪ್ರತಿಪಾದಿಸಲಾಗಿದೆ. ಈ ಪರಿಚ್ಛೇದದಲ್ಲಿ

ಮೊದಲನೆಯ ಅಧ್ಯಾಯದ ಸಾರವನ್ನೂ ಸಂಗ್ರಹವಾಗಿ ನಿರೂಪಿಸಲಾಗುತ್ತದೆ. ಪ್ರಸನ್ನಚಿತ್ತರಾದ ಗುರುಗಳ ಉಪದೇಶದಿಂದಲೇ ಲಭ್ಯವಾಗುವ ಈ ಜ್ಞಾನವನ್ನು ಪುಣ್ಯವಂತರಾದ ಸುಜೀವಿಗಳು ಮಾತ್ರ ಯೋಗ್ಯ ಗುರುಗಳನ್ನಾಶ್ರಯಿಸಿ ದೊರೆಕಿಸಿಕೊಳ್ಳಲು ಯತ್ನಿಸುತ್ತಾರೆ. ಆದುದರಿಂದ ಈ ಚಿಕ್ಕ ಗ್ರಂಥದಲ್ಲಿ ಹೆಚ್ಚು ವಿಸ್ತಾರವನ್ನು ಓದುಗರು ನಿರೀಕ್ಷಿಸಬಾರದು. ಅನಾದಿ ಪ್ರಕೃತಿಬಂಧ-ಕ್ಕೊಳಗಾಗಿರುವ ಜೀವರು ಪ್ರಕೃತಿಸ್ವಾಮಿಯಾದ ಶ್ರೀಹರೀಚ್ಛೆಯಿಂದಲೇ ಆ ಬಂಧದಿಂದ ಮುಕ್ತರಾಗಬೇಕು. ಈ ಜೀವನನ್ನು ಬಂಧದಿಂದ ಬಿಡುಗಡೆ ಮಾಡುತ್ತೇನೆ - ಎಂಬ ಸಂಕಲ್ಪರೂಪದ ಶ್ರೀಹರಿಪ್ರಸಾದಕ್ಕೆ ಪಾತ್ರನಾದ ಜೀವನು ಮಾತ್ರ ಮುಕ್ತನಾಗುತ್ತಾನೆ. ಮೋಕ್ಷವೆಂಬುದು ಸಾಮಾನ್ಯವಾಗಿ ದ್ವಿವಿಧವೆಂದು ಹೇಳಲಾಗುತ್ತದೆ. ಜ್ಞಾನಾನಂದ ಸ್ವರೂಪರಾದ ಸುಜೀವರು ಬಂಧಮುಕ್ತರಾಗಿ-ಎಂದರೆ, ಮತ್ತೆಂದಿಗೂ ಪ್ರಾಕೃತ ದೇಹಗಳನ್ನು ಹೊಂದದೇ, ಸ್ವಸ್ವರೂಪದಿಂದಿರುವ ನಿತ್ಯಾನಂದ ಸ್ಥಿತಿಯನ್ನು ಹೊಂದುವುದು ಸನ್ಮೋಕ್ಷವು. ತಮೋಯೋಗ್ಯ ಜೀವರು ದ್ವೇಷಾಜ್ಞಾನಗಳ ಪರಿಪಕ್ವತೆಯನ್ನು ಹೊಂದಿ, ಶ್ರೀಹರೀಚ್ಛೆಯಿಂದ ಲಿಂಗ ಭಂಗವನ್ನೂ ಹೊಂದಿ, ಸ್ವರೂಪಾವಿರ್ಭಾವದಿಂದ ನಿತ್ಯ ದುಃಖಸ್ಥಿತಿಯನ್ನು ಹೊಂದಿ, ಸ್ವರೂಪಾವಿರ್ಭಾವದಿಂದ ನಿತ್ಯ ದುಃಖ-ಸ್ಥಿತಿಯನ್ನು ಹೊಂದುವುದು ಅಸನ್ಮೋಕ್ಷವು. *ಮಾನುಷಾ ವಿಮಿಶ್ರ ಮತಯಃ ವಿಮಿಶ್ರಗತಯೋಽಪಿ ಚ* - ಮಿಶ್ರಜ್ಞಾನವುಳ್ಳ ಮಧ್ಯಮ ಜೀವರು ಲಿಂಗಭಂಗದಿಂದ ಸುಃಖದುಃಖ ಮಿಶ್ರವಾದ ನಿತ್ಯಸ್ಥಿತಿಯನ್ನು ಹೊಂದುವರೆಂದು ತಿಳಿಯುವ ಕೆಲವು ಜ್ಞಾನಿಗಳ ಅಭಿಪ್ರಾಯದಂತೆ ಮೋಕ್ಷವು ತ್ರಿವಿಧವಾಗಿರುತ್ತದೆ. ಪ್ರಕೃತ, ಬ್ರಹ್ಮಮೀಮಾಂಸಾ ಶಾಸ್ತ್ರದಿಂದ ವಿಷ್ಣುವೇ ಸರ್ವೋತ್ತಮನೆಂಬ ಜ್ಞಾನ ನಿಶ್ಚಯವನ್ನು ಹೊಂದಿ ನಿತ್ಯಾನಂದ ರೂಪದ ಸನ್ಮೋಕ್ಷವನ್ನು ಹೊಂದಲರ್ಹ-ರಾದವರು, ಮುಕ್ತಿಯೋಗ್ಯ ಜೀವರೇ ಆಗಿದ್ದಾರೆ.

ಆದುದರಿಂದ ಈ ಮುಂದೆ ಮೋಕ್ಷ ಅಥವಾ ಮುಕ್ತಿ ಶಬ್ದಗಳು ಸನ್ಮೋಕ್ಷಪರವಾಗಿ ಉಪಯೋಗಿಸಲಾಗುತ್ತವೆ. ಈ ಅರ್ಥದಲ್ಲಿ ಈ ಶಬ್ದಗಳನ್ನು ಪ್ರಯೋಗಿಸುವುದು ಶಾಸ್ತ್ರರೂಢಿಯೂ ಆಗಿದೆ.

ಮೋಕ್ಷಪ್ರಾಪ್ತಿಗೆ ಅವ್ಯವಹಿತ ಪ್ರಧಾನ ಸಾಧನವು ವಿಷ್ಣುಪ್ರಸಾದವೇ. ವಿಷ್ಣುಪ್ರಸನ್ನತೆ ಇಲ್ಲದೆ ಯಾವ ಜೀವನೂ ಎಂದೂ ಏನನ್ನೂ ಸಾಧಿಸಲಾರನು. ಆದರೆ ಮೋಕ್ಷ ಸಾಧನವಾದ ಪ್ರಸಾದವು, ಉತ್ತಮಪ್ರಸಾದ. ಮಧ್ಯಮಾಧಮ ಪ್ರಸಾದಗಳೂ ಉಂಟೆಂದು ಆಗಮಗಳು ನಿರೂಪಿಸುತ್ತವೆ. ವಿಧ್ಯುಕ್ತ ಕರ್ಮಗಳನ್ನು ಆಚರಿಸಿ ಶ್ರೀಹರಿಯಲ್ಲಿ ಅರ್ಪಿಸುವುದರಿಂದ ಲಭ್ಯವಾಗುವ ಪ್ರಸಾದವು ಅಧಮ ಪ್ರಸಾದವೆಂದೂ ಸಚ್ಛಾಸ್ತ್ರಗಳ ಶ್ರವಣ ಮನನಾದಿಗಳನ್ನು ಯಥೋಚಿತ ಭಕ್ತಿಯಿಂದ ಆಚರಿಸುವುದರಿಂದ ಲಭಿಸುವ ಪ್ರಸಾದವು ಮಧ್ಯಮ ಪ್ರಸಾದವೆಂದೂ, ಮೋಕ್ಷ ಸಾಧನವಾದ (ಏನಂಮೋಚಯಾಮಿ) ಎಂಬ ಪ್ರಸಾದವು ಉತ್ತಮ ಪ್ರಸಾದವೆಂದೂ ಹೇಳಲಾಗುತ್ತದೆ. ಅಧಮ ಪ್ರಸಾದದಿಂದ ಸ್ವರ್ಗಾದಿ ಲೋಕಗಳೂ, ಮಧ್ಯಮ ಪ್ರಸಾದದಿಂದ ಜನೋ-ಲೋಕ ಮೊದಲಾದ ಲೋಕಗಳೂ, ಉತ್ತಮ ಪ್ರಸಾದದಿಂದ ವೈಕುಂಠಾದಿ ಮುಕ್ತ ಲೋಕಗಳೂ ದೊರೆಯುವುವೆಂದೂ ವರ್ಣಿತವಾಗಿದೆ.[41] ಉತ್ತಮ ಪ್ರಸಾದವಾದರೋ, ಸರ್ವೇಶ್ವರನಾದ ಸ್ವತಂತ್ರಪ್ರಭು ಶ್ರೀಹರಿಯಲ್ಲಿ ಶ್ರೇಷ್ಠ ಭಕ್ತಿಯನ್ನು ಹೊಂದಿ ಅನನ್ಯವಾಗಿ ಶರಣು ಹೊಂದುವುದರಿಂದ ಮಾತ್ರ ಲಭ್ಯ. ಈ ವಿಧ ಶ್ರೇಷ್ಠಭಕ್ತಿಯು ಶ್ರೀಹರಿಯ ಸಾಕ್ಷಾದ್ದರ್ಶನವಾದನಂತರವೇ ಉದಯಿಸುತ್ತದೆ - ಆ ಮೊದಲು ಅದು ಆತನ ಮಹಿಮಾಜ್ಞಾನ ನಿಶ್ಚಯದಿಂದ (ಶಾಸ್ತ್ರಜನ್ಯ ಪರೋಕ್ಷ ಜ್ಞಾನದಿಂದ) ದೊರೆತ ಸಾಮಾನ್ಯಾಕಾರದ ಪ್ರೇಮ-ರೂಪದಿಂದ ಇರುತ್ತದೆ. ಯಾವುದೊಂದು ವಸ್ತುವಿನ ಗುಣಗಳ ಶ್ರವಣದಿಂದ ಅದರಲ್ಲಿ ಪ್ರೀತಿ ಹುಟ್ಟುತ್ತದೆ. ತದೇಕಚಿತ್ತನಾಗಿ ಆ ವಸ್ತುವನ್ನು ಗುಣಸಹಿತ ನಿರಂತರ ಚಿಂತಿಸುತ್ತಾನೆ. ಅದನ್ನು ಸಾಕ್ಷಾತ್ತಾಗಿ ಕಂಡನಂತರ ಆ ವಸ್ತುವಿನಲ್ಲಿ ಉಚ್ಚಮಟ್ಟದ ಅಧಿಕ ಪ್ರೇಮವು ದೃಢವಾಗಿ ನಿಲ್ಲುತ್ತದೆ. ಹೀಗೆಯೇ ಶ್ರೀ ವಿಷ್ಣುವಿನ ಅತ್ಯರ್ಥ ಪ್ರಸಾದಕ್ಕೆ ಸಾಧನವಾದ ಶ್ರೇಷ್ಠ ಭಕ್ತಿಯು ಆತನ

41. ಕರ್ಮಣಾತ್ವಧಮಃ ಪ್ರೋಕ್ತಃ ಪ್ರಸಾದಃ ಶ್ರವಣಾದಿಭಿಃ ।
ಮಧ್ಯಮೋ ಜ್ಞಾನಸಂಪತ್ತ್ಯಾ ಪ್ರಸಾದಸ್ತೂತ್ತಮೋಮತಃ ॥
ಪ್ರಸಾದಾತ್ತ್ವಧಮಾದ್ವಿಷ್ಣೋಃ ಸ್ವರ್ಗಲೋಕಃ ಪ್ರಕೀರ್ತಿತಃ ।
ಮಧ್ಯಮಾಜ್ಜನಲೋಕಾದಿರುತ್ತಮಸ್ತ್ವೇವ ಮುಕ್ತಿದಃ ॥ (ಭಾಷ್ಯ)
ಈ ವಾಕ್ಯಗಳು ಉಕ್ತಪ್ರಮೇಯಗಳನ್ನು ಪ್ರಮಾಣೀಕರಿಸುತ್ತವೆ.

ಸಾಕ್ಷಾದ್ದರ್ಶನದಿಂದಲೇ ಲಭಿಸುತ್ತದೆ. ಈ ಸಾಕ್ಷಾತ್ಕಾರಕ್ಕೆ ವೇದಾದಿ ಸಚ್ಛಾಸ್ತ್ರಗಳ ಶ್ರವಣ, ಮನನ, ಧ್ಯಾನಗಳು ಮುಖ್ಯ ಸಾಧನಗಳು. *ಆತ್ಮಾ ವಾರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ* ಎಂಬ ಶ್ರುತಿಯು, ಪರಮಾತ್ಮನ ದರ್ಶನಕ್ಕೆ ಶ್ರವಣ ಮನನ ಧ್ಯಾನಗಳೇ ಸಾಧನಗಳೆಂದು ಹೇಳುತ್ತದೆ. ಜಿಜ್ಞಾಸಾ ಶಬ್ದದಿಂದ ಈ ಮೂರನ್ನೂ ತಿಳಿಯಬೇಕು. ಆದುದರಿಂದ ಮೋಕ್ಷಾಪೇಕ್ಷಿಗಳು ಬ್ರಹ್ಮಜಿಜ್ಞಾಸೆಯಲ್ಲಿ ತೊಡಗಬೇಕು. ಬ್ರಹ್ಮನೆಂದರೆ ಗುಣಪೂರ್ಣ - ಅವನೇ ವಿಷ್ಣು. ವಿಷ್ಣು ಜಿಜ್ಞಾಸಾ ಎಂದರೆ ವಿಷ್ಣುವಿಷಯಕ ಶ್ರವಣ ಮನನ ಧ್ಯಾನಗಳು. ಶ್ರವಣವೆಂದರೆ ಶ್ರೀವಿಷ್ಣು ಮಹಿಮೆಗಳನ್ನು ಗುರುಮುಖದಿಂದ ಕೇಳಿ ತಿಳಿಯುವುದು. ಮನನವೆಂದರೆ ಶ್ರವಣದಿಂದ ತಿಳಿದ ಪ್ರಮೇಯಗಳನ್ನು ವಿಷಯಕ್ಕೆ ಪ್ರಾಪ್ತವಾಗುವ ಸಂಶಯ-ವಿಪರ್ಯಯಗಳನ್ನು ಪರಿಹರಿಸಿ-ಕೊಳ್ಳವುದಕ್ಕಾಗಿ ಮಾಡುವ ವಿಮರ್ಶಾತ್ಮಕ ವಿಚಾರ. ಧ್ಯಾನವೆಂದರೆ ಶ್ರವಣ ಮನನಗಳಿಂದ ಲಭ್ಯವಾದ ನಿಶ್ಚಿತ ತತ್ತ್ವವನ್ನು ಚಿಂತಿಸುವುದು. ಧ್ಯಾನವೆಂಬುದು ಮನಸ್ಸಿನ ಪರಿಸ್ಥಿತಿಗಳಲ್ಲೊಂದು; ಧಾರಣ, ಧ್ಯಾನ, ಸಮಾಧಿಗಳೆಂಬವು ಮನಸ್ಸಿನ ಪರಿಸ್ಥಿತಿ ವಿಶೇಷಗಳು. ಚಿಂತನೆಗೆ ಗುರಿಯಾದ ವಸ್ತುವು ಮತ್ತೆ ಮತ್ತೆ ಮರೆಯಾಗುತ್ತ ಬಹುಕಾಲ ಮನಸ್ಸಿನಲ್ಲಿ ನಿಲ್ಲದಿದ್ದರೆ ಆ ಮನಃಸ್ಥಿತಿಯು ಧಾರಣವೆನಿಸುತ್ತದೆ. ಮನಸ್ಸಿನ ಪ್ರವೃತ್ತಿಯು ತೈಲಧಾರೆಯಂತೆ ಏಕಪ್ರಕಾರ-ವಾಗಿರದೆ ಮಧ್ಯೆ ಮಧ್ಯೆ ವಿಚ್ಛಿತ್ತಿಯುಳ್ಳುದ್ದಾಗಿರುವಿಕೆ. ತೈಲಧಾರೆಯಂತೆ ಮನಸ್ಸು ತನ್ನ ಗುರಿಯಾದ ವಸ್ತುವಿನಲ್ಲಿ ಏಕಪ್ರಕಾರವಾಗಿ ಹರಿಯುತ್ತಾ ಕೆಲವು ಕಾಲದವರೆಗೆ (ಅವರವರ ಯೋಗ್ಯತಾನುಸಾರವಾಗಿ ಘಳಿಗೆ, ಮುಹೂರ್ತ ಪರ್ಯಂತ) ಆ ವಸ್ತುವನ್ನು ನಿರಂತರ ಗ್ರಹಿಸುತ್ತಿದ್ದರೆ ಆ ಮನಃಸ್ಥಿತಿಯು ಧ್ಯಾನವೆನಿಸುತ್ತದೆ. ಮನಸ್ಸು ಸ್ವಾಭಾವಿಕವಾಗಿ ಬಹು ಚಂಚಲ. ಒಂದು ವಸ್ತುವಿನಲ್ಲಿ ಸ್ಥಿರವಾಗಿ ನಿಲ್ಲುವುದಿಲ್ಲ. ಕ್ಷಣಕ್ಷಣಕ್ಕೆ ಬೇರೆ ಬೇರೆ ಕಡೆಗೆ ಹರಿದುಹೋಗುತ್ತದೆ. ಅದನ್ನು ಬಹು ಪ್ರಯತ್ನದಿಂದ ಏಕತ್ರ ನಿಲ್ಲಿಸ-ಬೇಕಾಗುತ್ತದೆ. ಹೀಗೆ ಯತ್ನಪೂರ್ವಕವಾಗಿ ಮನಸ್ಸನ್ನು ಬಿಗಿ ಹಿಡಿದು ಒಂದೆಡೆ ನಿಲ್ಲಿಸುವುದು ಧ್ಯಾನಾವಸ್ಥೆಯು. ಅಭ್ಯಾಸ ಬಲದಿಂದ ಯತ್ನವಿಲ್ಲದೆ ಧ್ಯಾನಾವಸ್ಥೆಯಲ್ಲಿ ಮನಸ್ಸು ಸ್ಥಿರವಾಗಿ ನಿಂತರೆ ಅದನ್ನೇ ಸಮಾಧಿ ಎನ್ನುತ್ತಾರೆ.

ಬ್ರಹ್ಮಜಿಜ್ಞಾಸೆಯಲ್ಲಿ ಪ್ರವೃತ್ತನಾಗಲು ಮತ್ತು ಆ ಪ್ರವೃತ್ತಿಯು ಫಲಕಾರಿ-ಯಾಗಲು, ತತ್ಪೂರ್ವದ ಕೆಲವು ಅರ್ಹತೆಗಳು ಅವಶ್ಯಕ. ಅವುಗಳಲ್ಲಿ ಮೊದಲನೆಯದು ಮತ್ತು ಪ್ರಧಾನವಾದುದು ಜೀವಸ್ವರೂಪ - ಜ್ಞಾನಾ-ನಂದಾತ್ಮಕವಾದ ಮುಕ್ತಿಯೋಗ್ಯವಾದ ಸ್ವರೂಪವುಳ್ಳವನಾಗಿರಬೇಕು. ಇದಿಲ್ಲದಿದ್ದರೆ ಬ್ರಹ್ಮಜಿಜ್ಞಾಸೆಯು ನಿಷ್ಫಲವೇ ಆಗುತ್ತದೆ. *''ಓಂ ಸರ್ವಥಾಪಿ ತು ತ ಏವೋಭಯಲಿಂಗಾತ್ ಓಂ''* ದೇಶಕಾಲ ಗುರೂಪದೇಶ ಉತ್ಸಾಹ-ಗಳಿಂದಲೂ, ಶ್ರವಣ ಮನನ ಧ್ಯಾನಾದಿ ಆಚರಣೆಗಳಿಂದಲೂ (ಅಪಿಸರ್ವಥಾ) ಸಮಾನರಾಗಿದ್ದರೂ ಅನಾದಿಯೋಗ್ಯತೆಯುಳ್ಳವರಿಗೇ ಎಂದರೆ, ಮುಕ್ತಿ ಯೋಗ್ಯರಿಗೆ ಮಾತ್ರ ಶ್ರೀಹರಿಯ ಅಪರೋಕ್ಷವಾಗುತ್ತದೆ; ಯೋಗ್ಯಾ-ಯೋಗ್ಯರಲ್ಲಿ (ಸಮಾನವಾದ ವಿರಿಂಚೋಪದೇಶವಿದ್ದರೂ ಇಂದ್ರ-ವಿರೋಚನರಿಗೆ ಪ್ರಾಪ್ತವಾದಂತೆ) ಸಮ್ಯಕ್ ಮತ್ತು ವಿಪರೀತ ಜ್ಞಾನಪ್ರಾಪ್ತಿ ಎಂಬ ಉಭಯಪ್ರಕಾರ ಜ್ಞಾನವಾಗುವುದು ಕಂಡುಬರುವುದರಿಂದ, ಜ್ಞಾನ ಸ್ವರೂಪರಿಗೇ ಅಪರೋಕ್ಷ-ಅನ್ಯರಿಗಿಲ್ಲ. ಈ ಸೂತ್ರಭಾಗದಲ್ಲಿ ಈ ಪ್ರಧಾನ ಅರ್ಹತೆಯು ನಿರ್ಣಯಿಸಲ್ಪಟ್ಟಿದೆ. ಈ ಅರ್ಹತೆಯುಳ್ಳ ಮುಕ್ತಿಯೋಗ್ಯ ಜೀವನು ಬ್ರಹ್ಮಜಿಜ್ಞಾಸೆಯಲ್ಲಿ ಅಧಿಕಾರಿಯಾಗಬೇಕಾದರೆ (ಬ್ರಹ್ಮಜಿಜ್ಞಾಸೆಯ ಫಲವನ್ನು ಹೊಂದಬೇಕಾದರೆ) ಶಮದಮಾದಿ ಸಂಪತ್ತುಗಳನ್ನು ಹೊಂದಿರಬೇಕು. *ಶಾಂತೋದಾಂತ ಉಪರತಸ್ತಿತಿಕ್ಷುಸ್ಸಮಾಹಿತೋ ಭೂತ್ವಾ ಆತ್ಮನ್ಯೇವಾತ್ಮಾನಂ ಪಶ್ಯೇತ್* - ಭಗವನ್ನಿಷ್ಠ ಬುದ್ಧಿಯುಳ್ಳವನೂ, ಇಂದ್ರಿಯವನಿಗ್ರಹವುಳ್ಳವನೂ, ವಿಷಯಾಲಂಬುದ್ಧಿಯುಳ್ಳವನೂ, ಸುಖದುಃಖಾದಿ ದ್ವಂದ್ವ ಸಹಿಷ್ಣುವೂ, ಯಥಾರ್ಥವನ್ನು ಗ್ರಹಿಸುವ ಸಾಮರ್ಥ್ಯವುಳ್ಳವನೂ ಆಗಿದ್ದು, ಧ್ಯಾನದಿಂದ ತನ್ನ ಮನಸ್ಸಿನಲ್ಲಿ ಪರಮಾತ್ಮನನ್ನು ತಿಳಿಯಬೇಕು ಎಂಬುದಾಗಿ ಶ್ರುತಿಯು ಸಾಧನ ಸಂಪತ್ತುಗಳನ್ನು ವರ್ಣಿಸುತ್ತದೆ. (ಶಮ) ಭಗವನ್ನಿಷ್ಠೆ ಎಂದರೆ - ಸರ್ವಶಕ್ತನಾದ ಪರಮಾತ್ಮನಲ್ಲಿ ವಿಶ್ವಾಸ-ಆತನನ್ನು ತಿಳಿದು ನೋಡಬೇಕೆಂಬ ಹಂಬಲ-ಆಸ್ತಿಕ್ಯಭಾವ ಮತ್ತು ಶ್ರದ್ಧೆ; (ದಮ) ಇಂದ್ರಿಯನಿಗ್ರಹವೆಂದರೆ-ಜ್ಞಾನೇಂದ್ರಿಯಗಳನ್ನೂ ಮನಸ್ಸನ್ನೂ ತನ್ನ ಅಧೀನದಲ್ಲಿಟ್ಟುಕೊಂಡು ತನ್ನ ಇಚ್ಛೆಗೆ ವಿರುದ್ಧವಾಗಿ ಅವು ವಿಷಯಗಳ ಕಡೆ ಧಾವಿಸದಂತೆ ನಿರೋಧಿಸುವುದು.

ವಿಷಯಭೋಗದಲ್ಲಿ ಆಸಕ್ತನಾಗದಿರುವುದು ವೈರಾಗ್ಯ. ಇಂದ್ರಿಯನಿಗ್ರಹ-ವುಳ್ಳವರಿಗೇ ವೈರಾಗ್ಯವು - ಅನ್ಯರಿಗಿಲ್ಲ. ವೈರಾಗ್ಯವಿಲ್ಲದೆ ಶ್ರವಣಾದಿಗಳು ಯಥಾರ್ಥ ಜ್ಞಾನಜನಕಗಳಾಗುವುದಿಲ್ಲ; ಮತ್ತು ನಿಶ್ಚಿತಜ್ಞಾನವಿಲ್ಲದೆ ಧ್ಯಾನವೂ ಸಾಧಿಸುವುದಿಲ್ಲ.

ಬ್ರಹ್ಮಜಿಜ್ಞಾಸೆಗೆ ಪ್ರಕಾರಾಂತರದ ಅಧಿಕಾರಗಳ ಅವಶ್ಯಕತೆ-ಬ್ರಾಹ್ಮಣಾದಿ ವರ್ಣ, ಉಪನಯನಾದಿ ಸಂಸ್ಕಾರ, ಇತ್ಯಾದಿಗಳು. ಅಧಿಕಾರಿಗಳೆಂದರೆ ಬ್ರಹ್ಮ-ಜಿಜ್ಞಾಸೆಯಿಂದ ಉಕ್ತಫಲಗಳನ್ನು ಪಡೆಯಲು ಅರ್ಹತೆಯುಳ್ಳವರು. ಈ ಅಧಿಕಾರಿಗಳು ಮಂದ, ಮಧ್ಯಮ, ಉತ್ತಮರೆಂದು ತ್ರಿವಿಧರು. *ಮಂದ ಮಧ್ಯೋತ್ತಮತ್ವೇನ ತ್ರಿವಿಧಾಹ್ಯಧಿಕಾರಿಣಃ । ತತ್ರ ಮಂದಾ ಮನುಷ್ಯೇಷು ಯ ಉತ್ತಮಗಣಾ ಮತಾಃ ॥ ಮಧ್ಯಮಾ ಋಷಿಗಂಧರ್ವಾ ದೇವಾಸ್ತತ್ರೋತ್ತಮಾ ಮತಾಃ । ಇತಿ ಜಾತಿಕೃತೋಭೇದಃ ತಥಾನ್ಯೋ ಗುಣ ಪೂರ್ವಕಃ ॥ ಭಕ್ತಿಮಾನ್ ಪರಮೇವಿಷ್ಣೌ ಯಸ್ತ್ವಧ್ಯಯನವಾನ್ನರಃ । ಅಧಮಃ ಶಮಾದಿ ಸಂಯುಕ್ತೋ ಮಧ್ಯಮಸ್ಸಮುದಾಹೃತಃ ॥ ಆಬ್ರಹ್ಮಸ್ತಂಬ ಪರ್ಯಂತಮಸಾರಂ ಚಾಪ್ಯ-ನಿತ್ಯಕಮ್ । ವಿಜ್ಞಾಯ ಜಾತ ವೈರಾಗ್ಯೋ ವಿಷ್ಣು ಪಾದೈಕಸಂಶ್ರಯಃ । ಸ ಉತ್ತಮೋಧಿಕಾರೀಸ್ಯಾತ್.....॥* (ಭಾಷ್ಯ) - ತ್ರಿವಿಧಾಧಿಕಾರಿಗಳ ಮಧ್ಯದಲ್ಲಿ ಮನುಷ್ಯೋತ್ತಮರು ಮಂದರು; ಋಷಿ ಗಂಧರ್ವರು ಮಧ್ಯಮರು; ದೇವತೆಗಳು ಉತ್ತಮರು; ಈ ವಿಭಾಗವು ಜೀವಸ್ವಭಾವಗಳಿಂದಾದುದು. ಗುಣನಿಮಿತ್ತವಾದ ವಿಭಾಗವೂ ಇದೆ; ವಿಷ್ಣುವೇ ಸರ್ವೋತ್ತಮನೆಂದು ತಿಳಿದು ಭಕ್ತಿಪೂರ್ವಕ ಶಾಸ್ತ್ರಾಧ್ಯಯನವುಳ್ಳವನು ಅಧಮನು; ಶಮದಮಾದಿ ಗುಣ-ಯುಕ್ತನು ಮಧ್ಯಮನು; ಚತುರ್ಮುಖ ಬ್ರಹ್ಮನಿಂದಾರಂಭಿಸಿ ತೃಣ-ಪರ್ಯಂತವಾದ ಈ ಜಗತ್ತು ಅಸಾರವೂ ಅನಿತ್ಯವೂ ಎಂಬ ನಿಶ್ಚಯ-ವುಳ್ಳವನಾಗಿ, ವಿರಕ್ತನಾಗಿ ವಿಷ್ಣುಪಾದವನ್ನೇ ಆಶ್ರಯಿಸಿದವನು ಉತ್ತಮಾಧಿಕಾರಿ. - ಎಂಬುದಾಗಿ ಅಧಿಕಾರ ತ್ರೈವಿಧ್ಯವನ್ನು ಈ ಪ್ರಮಾಣಗಳು ನಿರೂಪಿಸುತ್ತವೆ.

ಏವಂಚ, ಬ್ರಹ್ಮಜಿಜ್ಞಾಸೆಯಲ್ಲಿ ಅಧಿಕಾರವುಳ್ಳವನು ಶ್ರವಣಾದಿಗಳನ್ನು ಭಕ್ತಿಪೂರ್ವಕವಾಗಿಯೇ ಆಚರಿಸಬೇಕು. ಜಿಜ್ಞಾಸೆಯಲ್ಲಿ ಮುಂದುವರಿದಂತೆ ಭಕ್ತಿಯೂ ಸಹ ವೃದ್ಧಿಹೊಂದುತ್ತಾ ಗಾಢವಾಗುತ್ತದೆ. ಅಭ್ಯಾಸಬಲದಿಂದ

ಮನಸ್ಸು ಸಮಾಧ್ಯವಸ್ಥೆಯನ್ನು ಹೊಂದಿದಾಗ ಶ್ರೀಹರಿಯು ತನ್ನ ಭಕ್ತನಿಗೆ ತನ್ನ ದಿವ್ಯದರ್ಶನವನ್ನು ದಯಪಾಲಿಸಲು ಸಂಕಲ್ಪಿಸಿದೊಡನೆ ಪರಿಶುದ್ಧವಾದ ತನ್ನ ಮನಸ್ಸಿನಲ್ಲಿ ದರ್ಶನಭಾಗ್ಯವನ್ನು ಪಡೆಯುತ್ತಾನೆ. ಈತನೇ ಆತ್ಮಜ್ಞನು – ಅಪರೋಕ್ಷಜ್ಞಾನಿಯು. ಈ ಸಂದರ್ಶನದಿಂದ ಶ್ರೀಹರಿಯ ಅತ್ಯರ್ಥಪ್ರಸಾದಕ್ಕೆ ಕಾರಣವಾಗುವ ಶ್ರೇಷ್ಠಭಕ್ತಿಯ ಉದಯವಾಗುತ್ತದೆ. ಹೀಗೆ ಶ್ರೀಹರಿಯ ಸಾಕ್ಷಾತ್ಕಾರವಾಗುವ ಕಾಲದಲ್ಲಿ ಫಲ ಕೊಡಲಿಕ್ಕೆ ಪ್ರಾರಂಭವಾದ (ಪ್ರಾರಬ್ಧ) ಕರ್ಮದ ಭೋಗ ಮುಗಿದೊಡನೆ ಪ್ರಾಕೃತ ದೇಹಕ್ಕೆ ಹಿಂದಿರುಗದ ನಿತ್ಯ ಸ್ಥಾನವನ್ನು ಹೊಂದುತ್ತಾನೆ. ಮುಂದೆ ಲಿಂಗದೇಹ ಭಂಗದಿಂದ ಸ್ವಯೋಗ್ಯ ಮುಕ್ತಸ್ಥಾನವನ್ನು ಹೊಂದಿ ಯೋಗ್ಯತಾನುಗುಣವಾದ ಪೂರ್ಣಾನಂದವನ್ನೂ ಕಾಲವಿಶೇಷಗಳಲ್ಲಿ ಇಚ್ಛಿತ ಭೋಗಗಳನ್ನೂ ಹೊಂದುತ್ತಾ ನಿತ್ಯಸುಖಿ-ಯಾಗುತ್ತಾನೆ. ಹೀಗೆ ಶ್ರೀಹರಿಯ ಪರಮಪ್ರಸಾದದಿಂದಲೇ ನಿತ್ಯನಿರ್ದುಃಖಾನಂದನುಭವರೂಪದ ಶಾಶ್ವತ ಸ್ಥಾನವೂ ದೊರೆಯುವುದರಿಂದ ಎಲ್ಲ ಮುಮುಕ್ಷುಗಳೂ ಅವಶ್ಯಕವಾಗಿ, ಬಹು ಜನ್ಮಾರ್ಜಿತ ಪುಣ್ಯಪ್ರಭಾವದಿಂದ ಶ್ರೀಹರಿದತ್ತವಾಗಿ ಲಭಿಸಿರುವ ಅಧಿಕಾರಯುಕ್ತ ಸಾಧನ ದೇಹವನ್ನು ಸಾರ್ಥಕ-ಪಡಿಸಿಕೊಳ್ಳಲು ಯತ್ನಿಸಬೇಕು – ಇತ್ಯಾದಿ ಬ್ರಹ್ಮಸೂತ್ರಗಳ ಆದ್ಯಸೂತ್ರವಾದ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂಬ ಮಂಗಳ ಸೂತ್ರವು, ಸಜ್ಜನರಿಗೆ ಆದೇಶವನ್ನೀಯುತ್ತದೆ.

ಆತ್ಮಾವಾರೇ ದ್ರಷ್ಟವ್ಯಃ ಎಂಬ ಶ್ರುತಿಯು ಬ್ರಹ್ಮಸಾಕ್ಷಾತ್ಕಾರವನ್ನು ಇಚ್ಛಿಸಿದರೆ ಶ್ರವಣ ಮನನ ಧ್ಯಾನಗಳನ್ನು ಮಾಡಬೇಕೆಂದು ವಿಧಿಸುತ್ತದೆ. ಶ್ರವಣ ಮನನಗಳಿಂದ ಪರಮಾತ್ಮನ ಮಹಿಮಾಜ್ಞಾನವು ನಿಶ್ಚಿತವಾಗುತ್ತದೆ. *ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ (ಗೀತಾ); ಜ್ಞಾನೇನೈವ ಅಮೃತೀ ಭವತಿ; ವಿದ್ಯಯಾ ಅಮೃತಮಶ್ನುತೇ*, ಇತ್ಯಾದಿ ಶ್ರುತಿಗಳು ಸಹ ಜ್ಞಾನದಿಂದಲೇ ಮೋಕ್ಷವೆಂದು ಸಾರುತ್ತವೆ. ಹೀಗಿರಲು ಸ್ವಯೋಗ್ಯ ವಿಧ್ಯುಕ್ತ ಕರ್ಮಗಳನ್ನೂ ಶ್ರವಣ ಮನನ ಧ್ಯಾನಗಳನ್ನೂ ಭಕ್ತಿಪೂರ್ವಕವಾಗಿ ಆಚರಿಸಬೇಕೆಂದೂ, ಅಪರೋಕ್ಷ ದರ್ಶನದಿಂದ ಲಭಿಸುವ ಶ್ರೇಷ್ಠಭಕ್ತಿಯೇ ಶ್ರೀಹರಿಯ ಅತ್ಯರ್ಥಪ್ರಸಾದಕ್ಕೆ ಕಾರಣವೆಂದೂ ಹೇಗೆ ಸಿದ್ಧವಾಗುತ್ತದೆ?

ಎಂಬ ಆಪಾತತಃ ತೋರುವ ಸಂಶಯವು ನಿರಾಧಾರವೂ ಅನುಪಪನ್ನವೂ ಆದುದು. ಜ್ಞಾನವೆಂದರೆ ಮುಖ್ಯಾರ್ಥದಲ್ಲಿ ಬ್ರಹ್ಮದರ್ಶನವೆಂದೇ ಅರ್ಥವಾದರೂ ತತ್ಪೂರ್ವದಲ್ಲಿ ಶ್ರವಣ ಮನನಗಳಿಂದ ದೊರೆಯುವ ಶ್ರೀಹರಿಯ ಮಹಾತ್ಮ್ಯಜ್ಞಾನವೂ ಜ್ಞಾನವೆಂದೇ ಕರೆಯಲ್ಪಡುತ್ತದೆ. ಮೊದಲಿನದು ಅಪರೋಕ್ಷಜ್ಞಾನವೆಂದೂ, ಕರೆಯಲ್ಪಡುತ್ತದೆ. ಉಭಯವಿಧ ಜ್ಞಾನಗಳೂ ಭಕ್ತಿಯುತವಾದವುಗಳೇ. ಪರೋಕ್ಷಜ್ಞಾನವು ವಿಸ್ತಾರಗೊಂಡು ಗಾಢವಾಗುತ್ತ ಸಾಗಿದಂತೆ ಭಕ್ತಿಯು ವೃದ್ಧಿಹೊಂದುತ್ತಾ ಹೋಗುತ್ತದೆ. ಅಪರೋಕ್ಷಜ್ಞಾನದಿಂದ ಆ ಜೀವನ ಯೋಗ್ಯತೆಗೆ ಪೂರ್ಣವಾದ ಭಕ್ತಿಯು ಉದಯಿಸುತ್ತದೆ. ಮೇಲೆ ಉದಹರಿಸಿದ ಶ್ರುತಿ ಸ್ಮೃತಿ ವಾಕ್ಯಗಳಲ್ಲಿರುವ ವಿದ್ಯೆ ಮತ್ತು ಜ್ಞಾನ ಶಬ್ದಗಳು ಭಕ್ತಿ ಎಂಬ ಅರ್ಥದಲ್ಲಿಯೇ ಇರುತ್ತವೆ. ಭಗವಂತನ ಮಾಹಾತ್ಮ್ಯಜ್ಞಾನ ಸಹಿತವಾದ (ಆತನಲ್ಲಿ ಹುಟ್ಟುವ) ಪ್ರೇಮವೇ ಭಕ್ತಿ ಎನಿಸುತ್ತದೆ. *ಮಾಹಾತ್ಮ್ಯ-ಜ್ಞಾನ ಪೂರ್ವಸ್ತು ಸುದೃಢಸ್ಸರ್ವತೋಧಿಕಃ। ಸ್ನೇಹೋ ಭಕ್ತಿರಿತಿಪ್ರೋಕ್ತಃ ತಯಾ ಮುಕ್ತಿರ್ನಚಾನ್ಯಥಾ ॥* ಎಂದು ಭಕ್ತಿಯ ಸ್ವರೂಪ ನಿರೂಪಣೆ ಇರುತ್ತದೆ. ಮತ್ತು *ಜ್ಞಾನಸ್ಯ ಭಕ್ತಿಭಾಗತ್ವಾದ್ಭಕ್ತಿರ್ಜ್ಞಾನಮಿತೀರ್ಯತೇ ।* (ಅನು. ವ್ಯಾ.) ಎಂಬಲ್ಲಿ ಜ್ಞಾನವು ಭಕ್ತಿಯ ಅಂಶವೇ ಆದುದರಿಂದ ಭಕ್ತಿಯು (ಸಂದರ್ಭೋಚಿತವಾಗಿ) ಜ್ಞಾನವೆಂದೇ ಹೇಳಲ್ಪಡುತ್ತದೆ. *ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಸ್ತಥೈವ ಚ । ಸಾಧನಂ ಜ್ಞಾನಸಂಪತ್ತೌ ಪ್ರಧಾನಂ ನಾನ್ಯದಿಷ್ಯತೇ ।* ಅಪರೋಕ್ಷಜ್ಞಾನ ಪ್ರಾಪ್ತಿಯಲ್ಲಿ ಶ್ರವಣ ಮನನ ಧ್ಯಾನಗಳಂತೆಯೇ ಭಕ್ತಿಯೂ ಪ್ರಧಾನ ಸಾಧನವಾಗಿದೆ-ಬೇರೆ ಯಾವುದೂ ಅಲ್ಲ. ಇತ್ಯಾದಿ ಪ್ರಮಾಣಗಳು ಪೂರ್ವೋಕ್ತ ಸಂಶಯಕ್ಕೆ ಎಡೆ ಇಲ್ಲವೆಂದು ಸಾಧಿಸುತ್ತವೆ.

*ಧ್ಯಾನಂ ನಿಶ್ಚಿತ ತತ್ತ್ವಸ್ಯ*-ತತ್ತ್ವಜ್ಞಾನ ನಿಶ್ಚಯವುಳ್ಳವನೇ ಧ್ಯಾನಾಧಿಕಾರಿಯೆಂದು ಬಹುಪರಿಯಿಂದ ಆಗಮಗಳು ಪ್ರತಿಪಾದಿಸುತ್ತವೆ. ನಿಶ್ಚಿತ ತತ್ತ್ವನೆಂದರೆ ಧ್ಯಾನಮಾಡಬೇಕಾದ ವಸ್ತುವಿನ ಸ್ವರೂಪಜ್ಞಾನ ನಿಶ್ಚಯವುಳ್ಳವನು. ಹೀಗೆ ಹೇಳುವುದರಿಂದ ವಸ್ತುಸ್ವರೂಪದ ಸಾಕ್ಷಾತ್ಕಾರವುಳ್ಳವನೆಂದಲ್ಲ-ಪರೋಕ್ಷಜ್ಞಾನ ನಿಶ್ಚಯವುಳ್ಳವನೆಂದರ್ಥ. ಧ್ಯಾನದಿಂದ ಆ ತತ್ತ್ವದ (ವಸ್ತುವಿನ) ಸಾಕ್ಷಾತ್ಕಾರವಾಗಬೇಕು. ಅಲ್ಲದೇ ಬ್ರಹ್ಮ ವಸ್ತುವಿನ ಲಕ್ಷಣಜ್ಞಾನವಿಲ್ಲದೆ ಬ್ರಹ್ಮಧ್ಯಾನವು

ಕೂಡುವುದಿಲ್ಲ. ಆದುದರಿಂದ ಓಂ ಜನ್ಮಾದ್ಯಸ್ಯ ಯತಃ ಓಂ ಎಂಬ ಎರಡನೆಯ ಸೂತ್ರದಲ್ಲಿ ಚೇತನಾಚೇತನಾತ್ಮಕವಾದ, ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾದ, ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ-ಗಳೆಂಬ ಅಷ್ಟಕರ್ತೃತ್ವಗಳನ್ನು ನಿರ್ವಹಿಸುವವನೇ ಬ್ರಹ್ಮಶಬ್ದವಾಚ್ಯನಾದ ವಿಷ್ಣುವೆಂದು ನಿರ್ಣಯಿಸಲಾಗಿದೆ. ಶ್ರೀಹರಿಯ ಸೃಷ್ಟ್ಯಾದ್ಯಷ್ಟ ಕರ್ತೃತ್ವಗಳ ಮಹಿಮೆಯನ್ನು ಈ ಹಿಂದಿನ ಪರಿಚ್ಛೇದಗಳಲ್ಲಿ ಸಾಕಷ್ಟು ವಿವರಿಸಲಾಗಿದೆ. '*ಯ ತೋ ವಾ ಇಮಾನಿ ಭೂತಾನಿಜಾಯಂತೇ! ಯೇನ ಜಾತಾನಿ ಜೀವಂತಿ। ಯತ್ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ, ತದ್ಬ್ರಹ್ಮೇತಿ*' ಇತ್ಯಾದಿ ಶ್ರುತಿಗಳು ಈ ಬ್ರಹ್ಮಲಕ್ಷಣಗಳನ್ನು ಸಾಧಿಸುತ್ತವೆ. ಈ ವಿಧ ಮಹಾ ಮಹಿಮೋಪೇತನೆಂದೇ ಧ್ಯಾನಿಸತಕ್ಕದ್ದೆಂದೂ ಸಿದ್ಧವಾಗುತ್ತದೆ. ಈ ಮಹಾ ಮಹಿಮೆಗಳನ್ನಾದರೋ ಪ್ರತ್ಯಕ್ಷ ಮತ್ತು ಅನುಮಾನಗಳಿಂದ ವಿಷ್ಣುವಿನಲ್ಲಿ ಸಾಧಿಸಲು ಬರುವುದಿಲ್ಲ. ಪರಮಾತ್ಮನು ಅತೀಂದ್ರಿಯನು-ಸೂಕ್ಷ್ಮತಮನು, ಅವ್ಯಕ್ತನು (ಸ್ವಾನುಗ್ರಹ-ವಿಲ್ಲದೆ ವ್ಯಕ್ತನಾಗುವವನಲ್ಲ). ಈತನನ್ನು ಶಾಸ್ತ್ರಗಳಿಂದಲೇ ತಿಳಿಯಬೇಕು. *ಋಗ್ಯಜುಸ್ಸಾಮಾರ್ಥರ್ವಾಶ್ಚ ಭಾರತಂ ಪಂಚರಾತ್ರಕಂ । ಮೂಲ-ರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೆ ।* ಋಕ್, ಯಜು, ಸಾಮ, ಅಥರ್ವಗಳೆಂಬ ನಾಲ್ಕು ವೇದಗಳು, ಭಾರತ, ಪಂಚರಾತ್ರ ಮತ್ತು ಮೂಲ-ರಾಮಾಯಣಗಳು, ಶಾಸ್ತ್ರಗಳೆಂದು ಕರೆಯಲ್ಪಡುತ್ತವೆ. ಶಾಸ್ತ್ರಗಳು ಆಗಮ-ಗಳೆಂದೂ ಕರೆಯಲ್ಪಡುತ್ತವೆ. ಅವು ಸ್ವತಃ ಪ್ರಮಾಣಗಳು.[42] ಬ್ರಹ್ಮವಸ್ತುವು ಆಗಮೈಕ ವೇದ್ಯವು. ಆಗಮಗಳ ಮಹಾತಾತ್ಪರ್ಯವಾದರೋ ಉಪಕ್ರಮಾದಿ ತಾತ್ಪರ್ಯಲಿಂಗಗಳಿಗನುಸಾರವಾಗಿ[43], ಆಪಾತತಃ ತೋರುವ ವಿರೋಧಗಳನ್ನು ಪರಿಹರಿಸಿಕೊಂಡು ತಿಳಿಯಲ್ಪಡತಕ್ಕದ್ದು. ಹೀಗೆಂಬ ನಿರ್ಣಯಗಳನ್ನು ಓಂ ಶಾಸ್ತ್ರಯೋನಿತ್ವಾತ್ ಮತ್ತು ಓಂ ತತ್ತು ಸಮನ್ವಯಾತ್ ಎಂಬ ಮೂರು-ನಾಲ್ಕನೆಯ ಸೂತ್ರಗಳಲ್ಲಿ ನಿರ್ಣಯಿಸಲಾಗಿದೆ. *ಯತೋ ವಾಚೋ ನಿವರ್ತಂತೇ, ಅಪ್ರಾಪ್ಯ ಮನಸಾ ಸಹ* ಇತ್ಯಾದಿ ಶ್ರುತಿಗಳು ಮತ್ತು ಅನೇಕ ಸ್ಮೃತಿಗಳು

42. ರತ್ನ 2. ಆಗಮಪ್ರಮಾಣಗಳು ಎಂಬ ಗ್ರಂಥದಲ್ಲಿ ವಿಸ್ತರಿಸಲಾಗಿದೆ.

43. ರತ್ನ 2. 4ನೇ ಪರಿಚ್ಛೇದವನ್ನು ನೋಡಿ.

ಪರಮಾತ್ಮನು ಅವಾಙ್ಮನಸಗೋಚರನೆಂದು ಹೇಳುವಂತೆ ತೋರುತ್ತದೆ. ಎಂದರೆ ಪರಮಾತ್ಮನು ಶಬ್ದಗಳಿಂದ ಅವಾಚ್ಯನೆಂದೂ ಮನ ಆದಿ ಇಂದ್ರಿಯಗಳಿಗೆ ಅಗೋಚರನೆಂದೂ ಇವುಗಳ ಮೇಲೆ ತೋರುವ ಅರ್ಥಗಳಾಗಿರುತ್ತವೆ. ಆದರೆ ಇವುಗಳ ತಾತ್ಪರ್ಯವು ಹೀಗಲ್ಲ. *ಪಶ್ಯಂತೋಪಿ ನ ಪಶ್ಯಂತಿ ಮೇರೋಃ ರೂಪಂ ವಿಪಶ್ಚಿತ*:-ಮೇರುಪರ್ವತವನ್ನು ಬಲ್ಲವರೆಲ್ಲರೂ ನೋಡಿದರೂ ಸಹ ನೋಡದಿರುವಂತೆ, ಎಂದರೆ ಪೂರ್ಣವಾಗಿ ನೋಡಲಾರರೆಂಬಂತೆ ಶ್ರೀ ವಿಷ್ಣು-ವನ್ನು ಸಹ ಯಾರೂ ಸಾಕಲ್ಯೇನ ತಿಳಿಯಲಾರರೆಂದರ್ಥ. ಶಾಸ್ತ್ರಾಭ್ಯಾಸಿಗಳು ಯಥಾಯೋಗ್ಯವಾಗಿ ತಿಳಿಯಬಲ್ಲರು ಮತ್ತು ಕಾಣಬಲ್ಲರು. *ನಭಃ ಪತಂತಿ ಆತ್ಮಸಮಂ ಪತತ್ರಿಣಃ ಮತ್ತು ಸ್ವಾತ್ಮಸಮಂ ವಿಚಕ್ಷ್ಮಹೇ* ಇತ್ಯಾದಿ ಭಾಗವತ ವಾಕ್ಯಗಳು ಅಧಿಕಾರಿಗಳೆಲ್ಲರೂ ತಮ್ಮ ಯೋಗ್ಯತೆಗನುಗುಣವಾಗಿ ತಿಳಿದು ನೋಡುತ್ತಾರೆಂದು ಹೇಳುತ್ತದೆ. ಈ ಸಂಬಂಧವಾದ ಸಂಶಯಗಳನ್ನು ಪರಿಹರಿಸಿ ಓಂ ಈಕ್ಷತೇರ್ನಾಶಬ್ದಂ ಓಂ ಎಂಬ ಐದನೆ ಸೂತ್ರವು ನಿರ್ಣಯವನ್ನು ಹೇಳುತ್ತದೆ. ಅರ್ಥ:-ಅಶಬ್ದಂ= (ಬ್ರಹ್ಮನು) ಅವಾಚ್ಯನು, ನ=ಅಲ್ಲ; ಈಕ್ಷತೇಃ= ಶಾಸ್ತ್ರಗಳಿಂದ ವಾಚ್ಯನಾಗಿ ತಿಳಿಯಲ್ಪಡುತ್ತಾನಾದುದರಿಂದ. (ಬ್ರಹ್ಮನು ಸಂಪೂರ್ಣ-ವಾಗಿ ಹೇಳಲೂ ಅಥವಾ ತಿಳಿಯಲೂ ಸಾಧ್ಯನಾದವನಲ್ಲವೆಂದರ್ಥ).

ಎರಡನೆಯ ಪರಿಚ್ಛೇದದಲ್ಲಿ ಸರ್ವೇಶ್ವರನಾದ ಶ್ರೀಹರಿಯ ರಕ್ಷಣ ಕರ್ತೃತ್ವ ಮತ್ತು ವಿಶ್ವನಿಯಮನ ಪ್ರಕಾರಗಳನ್ನು ನಿರೂಪಿಸುವ ಪ್ರಸಂಗದಲ್ಲಿ ಈಶ್ವರನು ಜಗತ್ತಿನ ಒಳಹೊರಗೆ ತುಂಬಿಕೊಂಡಿರುವನೆಂದೂ ಅಣು ಮಹತ್ತಾದಿ ಸಕಲ ವಸ್ತುಗಳಲ್ಲಿ ಅಂತರ್ಯಾಮಿಯಾಗಿದ್ದು ಆಯಾ ವಸ್ತುಗಳ ರೂಪಾದಿ ಗುಣಧರ್ಮಗಳ ರಕ್ಷಕನೂ ನಿಯಾಮಕನೂ ಆಗಿರುವನೆಂದೂ ಹೇಳಲಾಗಿದೆ-ಯಷ್ಟೆ. ತದರ್ಥವಾಗಿ ಈಶ್ವರನು ಸಕಲ ವಸ್ತುಗಳಲ್ಲಿ ತನ್ನಾಮಕ ತದಾಕಾರದ ರೂಪಗಳಿಂದ ಇರುತ್ತಾ ಅನಂತರೂಪಗಳಿಂದ ವಿಶ್ವನಿಯಾಮಕನಾಗಿರುವನು. **ಶ್ರೀಹರಿಯ ಪ್ರತಿರೂಪದಲ್ಲಿಯೂ ಆತನ ಅನಂತ ರೂಪಗಳಿವೆ.** ಎಲ್ಲ ರೂಪಗಳೂ ಅನಂತಗುಣಪೂರ್ಣಗಳಾಗಿವೆ. ಎಲ್ಲ ವಸ್ತುಗಳ ರೂಪಗಳೂ ಮತ್ತು ನಾಮಗಳೂ ಮುಖ್ಯವಾಗಿ ಆತನವೇ ಆಗಿವೆ. ಸರ್ವನಾಮಗಳೂ ಮುಖ್ಯವೃತ್ತಿಯಿಂದ ವಿಷ್ಣುವಾಚಕಗಳೇ - ಅವನ ಮಹಿಮೆಗಳನ್ನೇ ಹೇಳುವ

ಅವನ ಹೆಸರುಗಳೇ – ಅನ್ವರ್ಥನಾಮಗಳೇ ಆಗಿವೆ. ಅಷ್ಟೇಕೆ ! ಸಮುದ್ರಘೋಷ – ಮೇಘಗರ್ಜನೆ-ಕ್ರಿಮಿಕೀಟಗಳ ಶಬ್ದಗಳು ಮೊದಲಾದ ಧ್ವನ್ಯಾತ್ಮಕ ಶಬ್ದಗಳು ಸಹ ಆತನ ಮಹಿಮೆಗಳನ್ನೇ ಹೇಳುತ್ತವೆ. *ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇಘೋಷಾಃ ಏಕೈವ ವ್ಯಾಹೃತಿಃ*- (ಐ. ಉ.) ಈ ವಾಕ್ಯದ ವ್ಯಾಖ್ಯಾನಾವಸರದಲ್ಲಿ ಸಮುದ್ರ ಮೇಘ ವೃಕ್ಷಪತನ ಭೇರಿತಾಡನಾದಿ *ಸರ್ವಘೋಷಾ ಅಪಿ ತಸ್ಯೈವ ನಾಮಾನಿ* ಎಂದರೆ ಧ್ವನ್ಯಾತ್ಮಕ ಶಬ್ದಗಳೆಲ್ಲವೂ ವಿಷ್ಣುನಾಮಗಳೆಂದು ಹೇಳಲಾಗಿದೆ. ವರ್ಣಾತ್ಮಕ ಶಬ್ದಗಳಾದ ಎಲ್ಲ ವೇದಗಳೂ ವಿಷ್ಣು ನಾಮಗಳೇ ಎಂದು ಭಾಷ್ಯದಲ್ಲಿ ಸಾಧಿಸಲಾಗಿದೆ. ಧ್ವನ್ಯಾತ್ಮಕ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯಗೊಳಿಸುವ ಪ್ರಕಾರವನ್ನು ಬೃಹತ್ಸಂಹಿತಾ ಎಂಬ ಗ್ರಂಥವು ವಿವರಿಸುತ್ತದೆ. **ಸರ್ವಶಬ್ದ ಮುಖ್ಯವಾಚ್ಯನೆಂಬುದರಿಂದ ವಿಷ್ಣುವು ಅನಂತಗುಣ ಪರಿಪೂರ್ಣನೆಂದು ಸಿದ್ಧವಾಗುತ್ತದೆ.** ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಗುರುಮುಖದಿಂದ ಅಧ್ಯಯನಮಾಡುವ ಯೋಗ್ಯಾಧಿಕಾರಿಯು ಈ ಪ್ರಮೇಯವನ್ನು ಸ್ಪಷ್ಟವಾಗಿ ಗ್ರಹಿಸಬಲ್ಲನು. ಬ್ರಹ್ಮಸೂತ್ರಗಳ ಒಂದನೆ ಅಧ್ಯಾಯದಲ್ಲಿ ವಿಷ್ಣುವಿನಲ್ಲಿ ಸರ್ವಶಬ್ದ ಸರ್ವಸಮನ್ವಯ ಪ್ರಕಾರವನ್ನು ಸಾಧಿಸಿ ನಿರ್ಣಯಗಳನ್ನು ಹೇಳಿದ್ದಾರೆ. ಈ ಮಹಾಶಾಸ್ತ್ರದ ಅಧ್ಯಯನದಲ್ಲಿ ಕುತೂಹಲ ಮತ್ತು ಆದರಗಳನ್ನು ಓದುಗರಲ್ಲಿ ಉತ್ಪಾದಿಸಬಹುದೆಂದು ಆಶಿಸಿ ಈ ಮುಂದೆ ಅದನ್ನು ಸಂಗ್ರಹಿಸಲಾಗುತ್ತದೆ.

ಪರಬ್ರಹ್ಮನನ್ನು ಅಪೌರುಷೇಯಗಳಾದ ವೇದಗಳಿಂದಲೇ ತಿಳಿಯ-ಬೇಕಲ್ಲದೆ ಅನ್ಯಸಾಧನವಿಲ್ಲ. ವೇದವಾಕ್ಯಗಳಲ್ಲಿ ಆಪಾತತಃ (ಅವಿಮರ್ಶ ದೆಶೆಯಲ್ಲಿ) ತೋರುವ ಪರಸ್ಪರ ವಿರೋಧಗಳು, ಉಪಕ್ರಮೋಪಸಂಹಾರಾದಿ ತಾತ್ಪರ್ಯಲಿಂಗಗಳಿಂದ ಪರಿಹಾರವಾಗಿ ವೇದಗಳ ಮುಖ್ಯಾರ್ಥಜ್ಞಾನ-ವಾಗುತ್ತದೆ. ಸರ್ವಶಬ್ದಗಳು ವಿಷ್ಣು ವಾಚಕಗಳಾದರೂ ವಿಷ್ಣು ಭಿನ್ನ-ಗಳಾದ ಚೇತನಾಚೇತನಾತ್ಮಕ ಜಗದ್ವಸ್ತುಗಳನ್ನು ನಿರ್ದೇಶಿಸಲು ಸಹ ಉಪಯೋಗಿಸಲ್ಪಡುತ್ತವೆ. ಆಗ ಆಯಾ ಶಬ್ದಗಳು ಅಮುಖ್ಯ ವೃತ್ತಿಯಿಂದ ಆಯಾ ವಸ್ತು ವಾಚಕಗಳೂ ಆಗುತ್ತವೆ.[44] ಹೀಗೆ ಅನ್ಯವಸ್ತುಗಳ ನಿರ್ದೇಶನಕ್ಕಾಗಿ

44. ರತ್ನ 2. ಪರಿಚ್ಛೇದ 3 ರಲ್ಲಿ ವಿವರಿಸಲಾದ ಮಹಾಯೋಗ-ಮಹಾರೂಢಿಗಳೆಂಬ ಪ್ರಭೇದಸಹಿತವಾದ ಮುಖ್ಯ ವೃತ್ತಿ ಸ್ವರೂಪವನ್ನು ನೋಡಬಹುದು.

ಪ್ರಯೋಗಿಸಲ್ಪಡುವ ಶಬ್ದಗಳು ನಾಮಾತ್ಮಕ ಮತ್ತು ಲಿಂಗಾತ್ಮಕವೆಂದು ಎರಡುವಿಧ. ಪ್ರಾಣ, ಇಂದ್ರ, ಆಕಾಶ, ಗಾಯತ್ರೀ ಮೊದಲಾದ ಶಬ್ದಗಳು ಅನ್ಯವಸ್ತುಗಳ ಹೆಸರುಗಳನ್ನು ಹೇಳುವ ಶಬ್ದಗಳು ಎಂದರೆ- ಆ ವಸ್ತುಗಳಲ್ಲಿ ಪ್ರಸಿದ್ಧವಿರುವ ನಾಮಾತ್ಮಕ ಶಬ್ದಗಳು. ಇವೇ ಮೊದಲಾದ ಎಲ್ಲ ನಾಮಾತ್ಮಕ ಶಬ್ದಗಳೂ ವಿಷ್ಣುವನ್ನೇ ಹೇಳುತ್ತವೆಂದು ಈ ಅಧ್ಯಾಯದ ಮೊದಲನೆಯ ಪಾದದಲ್ಲಿ ಸಾಧಿಸಲಾಗಿದೆ. ಪ್ರಾಣ, ಇಂದ್ರ, ಆಕಾಶ ಇತ್ಯಾದಿ ಶಬ್ದವಾಚ್ಯರು, ವೇದಗಳಲ್ಲಿ ಅಲ್ಲಲ್ಲಿ ಜಗತ್ಸೃಷ್ಟ್ಯಾದಿಕರ್ತರೆಂದು ಹೇಳುವುದು ಕಂಡು-ಬರುತ್ತದೆ. ಈ ವಿಧ ವೇದ ವಾಕ್ಯಗಳಿಂದ ಸೃಷ್ಟ್ಯಾದಿಕರ್ತನು ಪ್ರಾಣನೋ, ಇಂದ್ರನೋ, ಆಕಾಶವೋ ಎಂದು ನಾನಾಪ್ರಕಾರದ ಸಂಶಯಗಳು ಪ್ರಾಪ್ತ-ವಾಗುವುವಲ್ಲದೇ ಪರಸ್ಪರ ವಿರೋಧರೂಪದ ಅಪ್ರಾಮಾಣ್ಯ ಶಂಕೆಯೂ ವೇದಗಳಲ್ಲಿ ಉಂಟಾಗುತ್ತದೆ. ಈ ಸಂಶಯಗಳನ್ನು ಯುಕ್ತಿಯುಕ್ತವಾಗಿ ಪರಿಹರಿಸಿ ಪ್ರಾಣಾದಿ ಶಬ್ದಗಳು ವಿಷ್ಣುವನ್ನೇ ಹೇಳುತ್ತವೆಂದು ನಿರ್ಣಯಿಸಿ-ರುವುದರಿಂದ ಶ್ರೀ ವಿಷ್ಣುವೇ ಜಗತ್ಕಾರಣನೆಂದು ಸಿದ್ಧವಾಗುತ್ತದೆ.

ಈ ಅಧ್ಯಾಯದ ಎರಡನೆ ಪಾದದಲ್ಲಿ ಅನ್ಯತ್ರ (ಇತರ ವಸ್ತುಗಳಲ್ಲಿ) ಪ್ರಸಿದ್ಧವಾದಲಿಂಗಾತ್ಮಕ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯಗೊಳಿಸಲಾಗಿದೆ, ಎಂದರೆ ಅವೆಲ್ಲವೂ ವಿಷ್ಣುವನ್ನೇ ಹೇಳುತ್ತವೆಂದು ಸಾಧಿಸಲಾಗಿದೆ. ಲಿಂಗಾತ್ಮಕ-ವೆಂದರೆ ಧರ್ಮವಾಚಕವೆಂದರ್ಥ. ನಾಮಾತ್ಮಕ ಶಬ್ದ ಸಮನ್ವಯಕ್ಕಾಗಿ ಆಯಾ ನಾಮಗಳಿಂದ ಸೂಚಿತವಾದ ಲಿಂಗ (ಧರ್ಮ)ಗಳನ್ನು ಗಣನೆಗೆ ತಂದು ಆ ಶಬ್ದಬೋಧ್ಯ ಧರ್ಮಗಳು ಶ್ರೀಹರಿಯಲ್ಲಿ ಅನಂತವಾಗಿದ್ದು ಆ ವಸ್ತು-ಧರ್ಮವನ್ನು ನಿಯಮನಮಾಡುವುದರಿಂದ ಆ ನಾಮಾತ್ಮಕ ಶಬ್ದಗಳು ಮುಖ್ಯ ವೃತ್ತಿಯಿಂದ ವಿಷ್ಣುವಾಚಕಗಳೆಂದು ಮೊದಲನೆಯ ಪಾದದಲ್ಲಿ ಸಾಧಿಸಿದರೆ, ಎರಡನೆ ಪಾದದಲ್ಲಿ ಅದಿತಿ-ಚಕ್ಷುರ್ಮಯ-ಅಕ್ಷರ-ವೈಶ್ವಾನರ ಇತ್ಯಾದಿ ವಸ್ತು ಧರ್ಮಬೋಧಕ ಲಿಂಗಾತ್ಮಕ ಶಬ್ದಗಳು ಆಯಾ ಧರ್ಮಗಳುಳ್ಳ ವಸ್ತುಗಳನ್ನು ಸಾಮಾನ್ಯವಾಗಿ ನಿರ್ದೇಶಿಸಿದರೂ ಮುಖ್ಯವಾಗಿ ಎಲ್ಲ ಲಿಂಗಾತ್ಮಕ ಶಬ್ದಗಳಿಂದ ಬೋಧ್ಯವಾದ ಸರ್ವಧರ್ಮಗಳುಳ್ಳ ವಿಷ್ಣುವನ್ನೇ ಪ್ರತಿಪಾದಿಸುತ್ತವೆಂದು ಸಾಧಿಸಲಾಗಿದೆ. ನಾಮ ಸಮನ್ವಯಕ್ಕೆ ಆವಶ್ಯಕವಾದ ಲಿಂಗ ನಿರ್ಣಯವನ್ನು

ಮೊದಲನೆಯ ಪಾದದಲ್ಲಿ ಮಾಡಿದರೆ, ಲಿಂಗಸಮನ್ವಯಕ್ಕೆ ಅವಶ್ಯವೆನಿಸುವ ನಾಮಗಳನ್ನು ತೆಗೆದುಕೊಂಡು, ಅವುಗಳನ್ನು ಎರಡನೆಯ ಪಾದದಲ್ಲಿ ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಹೀಗೆ ಸರ್ವಧರ್ಮ ವಾಚಕ ಶಬ್ದಗಳ ಸಮನ್ವಯದಿಂದ ಸರ್ವತ್ರಸ್ಥಿತನಾದ ವಿಷ್ಣುವೇ ಸರ್ವಕರ್ಮಪ್ರೇರಕನೂ, ಜ್ಞಾನದಾತನೂ, ಫಲಪ್ರಾಪಕನೂ, ಜಗತ್ತಿನ ಧಾರಣ ಪೋಷಣಕರ್ತನೂ, ಸಂಹಾರಕರ್ತನೂ ಆಗಿರುವ ಸ್ವತಂತ್ರ ಪ್ರಭುವೆಂದು ಏರ್ಪಡುತ್ತದೆ. ಪ್ರಕೃತಿ ಮತ್ತು ಜೀವರು ಆತನಿಂದ ಅತ್ಯಂತ ಭಿನ್ನರೂ ಆತನ ಅಧೀನರೂ ಆಗಿರುವರೆಂದು ಸಹ ಸಿದ್ಧವಾಗುತ್ತದೆ.

ಒಂದಕ್ಕಿಂತ ಹೆಚ್ಚಾದ ವಸ್ತುಗಳನ್ನು ನಿರ್ದೇಶಿಸಲಿಕ್ಕಾಗಿ ಪ್ರಯೋಗಿಸಲ್ಪಡುವ ನಾಮಾತ್ಮಕ ಮತ್ತು ಲಿಂಗಾತ್ಮಕ (ಉಭಯಾತ್ಮಕ) ಶಬ್ದಗಳನ್ನು ಮುಖ್ಯ ವೃತ್ತಿಯಿಂದ ವಿಷ್ಣುವಿನಲ್ಲಿ ಸಮನ್ವಯಗೊಳಿಸಿ ವಿಷ್ಣುವೇ ಅನಂತ-ನಾಮಗಳುಳ್ಳವನೆಂದೂ, ಅನಂತ ಮಹಿಮೆಗಳುಳ್ಳವನೆಂದೂ, ಮೂರನೆ ಪಾದದಲ್ಲಿ ಸಾಧಿಸಲಾಗಿದೆ. ಈಶಾನ-ಸತ್-ಅಕ್ಷರ ವಜ್ರ ಜ್ಯೋತಿ ಮುಂತಾದ ಶಬ್ದಗಳಿಂದ ಮುಖ್ಯವಾಚ್ಯನಾದ ವಿಷ್ಣುವು, ತನ್ನ ಅಧೀನಗಳಾದ ಆಯಾ ಶಬ್ದ ವಾಚ್ಯ ವಸ್ತುಗಳಿಗೆ ಆಯಾ ಧರ್ಮಪ್ರಾಪಕನಾಗಿ ಆಯಾ ನಾಮಗಳಿಂದ ಕರೆಯಲ್ಪಡುತ್ತಾನೆಂಬ ಮಹಿಮೆಯೂ ಈ ಪಾದದಿಂದ ಸಿದ್ಧವಾಗುತ್ತದೆ. ಭೂಮ್ಯಾದಿಗಳಿಗೂ ಮುಕ್ತಲೋಕಗಳಿಗೂ, ಮುಕ್ತಾಮುಕ್ತ ಸಕಲ ಜೀವರಿಗೂ ವಿಷ್ಣುವೇ ಆಶ್ರಯನೆಂದೂ, ಸಕಲ ಜೀವರು ವಿಷ್ಣು ಭಿನ್ನರೆಂದೂ, ವಿಷ್ಣು ಸರ್ವಗತನೆಂದೂ, ಲೋಕರೀತ್ಯಾ ವಿರುದ್ಧಗಳೆಂದು ತೋರುವ ಅಣು ಮಹದಾದಿ ಸಕಲ ಧರ್ಮಗಳುಳ್ಳವನೆಂದೂ, ವಿಷ್ಣುವೇ ಹೃತ್ಕಮಲಸ್ಥಿತನೆಂದು ನಿರ್ಣಯಿಸುವುದರ ಮೂಲಕ ವಿಷ್ಣುವು ಜೀವಭಿನ್ನನೂ, ಜೀವನಿಯಾಮಕನೂ ಆಗಿರುವನೆಂದೂ, *''ತಸ್ಯ ಭಾಸಾ ಸರ್ವಮಿದಂ ವಿಭಾತಿ ಚರಾಚರಂ''* ಎಂಬ ಶ್ರುತ್ಯರ್ಥವನ್ನು ನಿರ್ಣಯಿಸುವುದರ ಮೂಲಕ ಅಧಿಷ್ಠಾನಗತ ಗುಣಪ್ರಕಾಶನ ಸಂಕಲ್ಪವುಳ್ಳವನೆಂದೂ ಈ ಪಾದದಿಂದ ಸಿದ್ಧವಾಗುತ್ತದೆ. ಈ ಪಾದದ ಕೊನೆಯ ಅಧಿಕರಣದಲ್ಲಿ ವಿಷ್ಣುವಿಗೆ ಸಾರ್ವತ್ರಿಕ, ಸಾರ್ವಕಾಲಿಕ, ಸಾರ್ವಭೌಮ ಪದವಿಯನ್ನು ಸಾಧಿಸಲಾಗಿದೆ. ಹೀಗೆ ಉಭಯತ್ರ ಪ್ರಸಿದ್ಧಗಳಾದ (ಪರಮಾತ್ಮ ಪರವಾಗಿಯೂ ಅನ್ಯವಸ್ತುಗಳ ಪರವಾಗಿಯೂ) ಪ್ರಯೋಗಿಸಲ್ಪಡುವ

ಶಬ್ದಗಳನ್ನು ವಿಷ್ಣುವಿನಲ್ಲಿಸಮನ್ವಯಮಾಡಿ ಅನ್ಯತ್ರೈವ ಪ್ರಸಿದ್ಧ (ಪರಮಾತ್ಮೇತರ ವಸ್ತುಗಳಲ್ಲಿ ಮಾತ್ರ ಲೋಕಪ್ರಸಿದ್ಧಿಯುಳ್ಳ ದುಃಖೀ - ಬದ್ಧ - ಪ್ರಕೃತಿ - ಜ್ಯೋತಿಷ್ಟೋಮ - ಶೂನ್ಯ ಇತ್ಯಾದಿ ಶಬ್ದಗಳನ್ನೂ ಸಯುಕ್ತಿಕವಾಗಿ ಮುಂದಿನ ನಾಲ್ಕನೆ ಪಾದದಲ್ಲಿ ವಿಷ್ಣುವಿನಲ್ಲಿ ಸಮನ್ವಯಗೊಳಿಸಲಾಗಿದೆ.

ಹೀಗೆ ಮೊದಲನೆ ಅಧ್ಯಾಯದ ನಾಲ್ಕು ಪಾದಗಳಿಂದ, ವಿಷ್ಣುವಿನಲ್ಲಿ ಸರ್ವಶಬ್ದ ಸಮನ್ವಯವನ್ನು ಸಾಧಿಸಿ ವಿಷ್ಣುವೇ ಅನಂತ ಗುಣಪೂರ್ಣನೆಂದು ಸಿದ್ಧಾಂತಿಸಲಾಗಿದೆ. ವಿಷ್ಣುವಿನ ಜಗತ್ಕರ್ತೃತ್ವ ಮೊದಲಾದ ಮಹಿಮೆಗಳನ್ನು ವೇದವಾಕ್ಯಗಳು ಮಾತ್ರವಲ್ಲದೇ, ವೇದಗಳಲ್ಲಿರುವ ಎಲ್ಲ ವಾಕ್ಯ, ಪದ, ವರ್ಣಗಳು ಸಹ ವಿಷ್ಣುವಾಚಕವೆಂದೂ ನಿರ್ಣಯಿಸಲಾಗಿದೆ. ಹೀಗಿದ್ದರೂ ಸಾಕ್ಷಾತ್ತಾಗಿ ವಿಷ್ಣುಮಹಿಮೆಗಳನ್ನು ಪ್ರತಿಪಾದಿಸದ ವರ್ಣ, ಪದ, ವಾಕ್ಯಗಳು ರಮಾಬ್ರಹ್ಮಾದಿ ಇತರ ದೇವತೆಗಳನ್ನೂ, ವಿಷ್ಣುಪ್ರಸಾದಜನಕಗಳಾದ ಯಜ್ಞಾದಿ ಕರ್ಮಗಳು ಮತ್ತು ತದಂಗ ವಸ್ತುಗಳನ್ನೂ ನಿರ್ದೇಶಿಸಲಿಕ್ಕಾಗಿ, ಸಮಾಕರ್ಷಿತ-ವಾಗಿ (ಅನ್ಯತ್ರಪ್ರಯೋಗಕ್ಕಾಗಿ ವಿಷ್ಣುವಿನಿಂದ ಸೆಳೆಯಲ್ಪಟ್ಟು) ಉಪಯೋಗಿಸ-ಲಾಗುತ್ತವೆ. ಇಷ್ಟುಮಾತ್ರವಲ್ಲ. ಸ್ವರಪೂರ್ವಕ ಉಚ್ಚಾರ ಮಾಡಬೇಕಾದ ವೇದಗಳಲ್ಲಿ, ಉದಾತ್ತಾದಿ ಸ್ವರ ವ್ಯತ್ಯಾಸಗಳು ಮತ್ತು ಆಪಾತತಃ ಅರ್ಥಶೂನ್ಯ-ಗಳೆಂದು ತೋರುವ ಹಾ ಊ-ಹಾ ಈ-ಈಹ-ಈ-ಊ-ಔಹೋಯೀ ಇತ್ಯಾದಿ ಶಬ್ದಗಳು ಸಹ ಭಗವನ್ಮಹಿಮೆಗಳನ್ನು ಪ್ರತಿಪಾದಿಸುತ್ತವೆಂದು ಛಾಂದೋಗ್ಯೋಪ-ನಿಷತ್ತು, ಅದರ ಭಾಷ್ಯ ಟಿಪ್ಪಣಿ ಮೊದಲಾದ ಗ್ರಂಥಗಳ ಅಭ್ಯಾಸದಿಂದ ತಿಳಿಯಬಹುದಾಗಿದೆ. ವೇದಗಳಲ್ಲಿ ನಿರರ್ಥಕವಾದ ಸ್ವರ, ವರ್ಣ, ಪದ, ವಾಕ್ಯಗಳು ಯಾವುವೂ ಇರುವುದಿಲ್ಲ.[45] ಈ ಮೊದಲು ಹೇಳಿದಂತೆ ಇತರ ದೇವತೆಗಳನ್ನೂ ಕರ್ಮಗಳನ್ನೂ ಪ್ರತಿಪಾದಿಸುವ ಎಲ್ಲ ಪದ, ವಾಕ್ಯಗಳನ್ನೂ ಮತ್ತು ಸ್ವರ, ವರ್ಣಗಳನ್ನೂ ವಿಷ್ಣು ಪರವಾಗಿ ಯೋಜನೆಮಾಡಿಕೊಳ್ಳುವ ಪ್ರಕಾರವನ್ನು ಐತರೇಯೋಪನಿಷತ್ ಮತ್ತು ಭಾಷ್ಯಗಳು ವಿಶಿಷ್ಟರೀತಿಯಿಂದ ನಿರೂಪಿಸುತ್ತವೆ. ಸರ್ವಶಬ್ದ ವಾಚ್ಯತ್ವದಿಂದ ಸಿದ್ಧವಾಗುವ ಶ್ರೀ ವಿಷ್ಣುವಿನ ಅನಂತಗುಣ ಪೂರ್ಣತ್ವವೂ, ಸರ್ವೋತ್ತಮತ್ವವೂ ಗುರುಮುಖೇನ

45 ರತ್ನ 2. ಪರಿಚ್ಛೇದ 2 ನ್ನು ನೋಡಿ.

ಆಚರಿಸಲ್ಪಡುವ ಶಾಸ್ತ್ರಾಭ್ಯಾಸದಿಂದಲೇ ದೊರಕಿಸಿಕೊಳ್ಳಬೇಕಲ್ಲದೆ ಅನ್ಯ-ಮಾರ್ಗವಿಲ್ಲ. ತತ್ಸಂಬಂಧವಾದ ಅನೇಕ ಪ್ರಮೇಯ ರಹಸ್ಯಗಳೂ ಇವೆ. ಗ್ರಂಥವಿಸ್ತಾರ ಭಯದಿಂದ ಅವುಗಳನ್ನು ಇಲ್ಲಿ ಪ್ರಸ್ತಾಪಿಸಲಾಗುವುದಿಲ್ಲ.

## ಪರಿಚ್ಛೇದ ೬

## ಶ್ರೀಹರಿಯ ದೋಷದೂರತ್ವ-ಗುಣ ಪರಿಪೂರ್ಣತ್ವಕ್ಕೆ ಪ್ರಾಪ್ತವಾಗಬಹುದಾದ ಯುಕ್ತಿ ವಿರೋಧಗಳ ಪರಿಹಾರ

ಲೋಕದಲ್ಲಿ ಗುಣದೋಷಗಳ ಸಾಹಚರ್ಯವು ನಿಯಮೇನ ಕಂಡು-ಬರುತ್ತದೆ. ಗುಣವಿದ್ದಲ್ಲಿ ದೋಷವಿದ್ದೇ ಇರುವುದು. ದೋಷಪ್ರಮಾಣದಲ್ಲಿ ಹೆಚ್ಚುಕಡಿಮೆ ಇರಬಹುದು. ಆದರೆ ನಿರ್ದೋಷ ವಸ್ತುವೆಂಬುದು ಎಲ್ಲಿಯೂ ಇಲ್ಲ - ಅಪ್ರಸಿದ್ಧ. ಆದುದರಿಂದ ಪರಮಾತ್ಮನು ಗುಣಪೂರ್ಣನೆಂದು ಸಾಧಿಸುವುದರೊಂದಿಗೆ ದೋಷರಹಿತನೆಂದೂ ಸಾಧಿಸಲೇಬೇಕು. ದೋಷ-ರಹಿತನೆಂದು ಪ್ರತಿಜ್ಞಾಪೂರ್ವಕ ಹೇಳಿದರೆ ಮಾತ್ರ ವಿರೋಧಗಳ ಉದಯ-ವಾಗುತ್ತದೆ. ಶ್ರೀವಿಷ್ಣುವಿನ ನಿರುಪಚರಿತ ಸ್ವಾತಂತ್ರ್ಯಾದಿ ಗುಣಪೂರ್ಣತ್ವ ವಿಷಯದಲ್ಲಿ ವಿರೋಧರೂಪದ ಸಂಶಯಗಳು ಹುಟ್ಟಬೇಕು ಮತ್ತು ಅವುಗಳ ಸಪ್ರಮಾಣ ನಿರಾಕರಣೆಯಾಗಬೇಕು. ಆಗ ಮಾತ್ರ ತತ್ತ್ವಜ್ಞಾನವು ದೃಢ-ವಾಗುತ್ತದೆ. ಶ್ರೀವಿಷ್ಣುವೇ ಸರ್ವೋತ್ತಮನೆಂಬ ನಿಶ್ಚಿತ ಜ್ಞಾನದಿಂದ ಸಂತತ ಪ್ರೇಮಪ್ರವಾಹರೂಪ ಭಕ್ತಿಯ ಉದಯವಾಗುತ್ತದೆ. ಅದರಿಂದ ಅಪರೋಕ್ಷ-ಜ್ಞಾನವೂ, ತಜ್ಜನ್ಯಶ್ರೇಷ್ಠ ಭಕ್ತಿಯಿಂದ ಮೋಕ್ಷಕ್ಕೆ ಅವ್ಯವಹಿತ ಸಾಧನವಾದ ಶ್ರೀವಿಷ್ಣುವಿನ ಪರಮ ಪ್ರಸಾದವೂ ಲಭ್ಯವಾಗುತ್ತದೆ.

ಶ್ರೀವಿಷ್ಣುವೇ ಅನಂತಗುಣಪೂರ್ಣನೆಂಬ ನಿರ್ಣಯಕ್ಕೆ ಪ್ರಾಪ್ತವಾಗ-ಬಹುದಾದ ವಿರೋಧಗಳೆಲ್ಲವನ್ನೂ, ಯುಕ್ತಿ ವಿರೋಧ - ಸಮಯ ವಿರೋಧ - ಶ್ರುತಿ ವಿರೋಧ - ನ್ಯಾಯೋಪೇತ ಶ್ರುತಿ ವಿರೋಧಗಳೆಂದು ನಾಲ್ಕು ಪ್ರಕಾರ ವಿಂಗಡಿಸಿ ಬ್ರಹ್ಮಸೂತ್ರಗಳ ಎರಡನೆಯ ಅಧ್ಯಾಯವು ಅವುಗಳೆಲ್ಲವನ್ನೂ ಪರಿಹರಿಸಿ, ಮೊದಲನೆ ಅಧ್ಯಾಯದಲ್ಲಿ ಸಾಧಿಸಲಾದ ಶ್ರೀಹರಿಯ ಗುಣ-ಪೂರ್ಣತ್ವವನ್ನು ಸ್ಥಿರವಾಗಿ ಸ್ಥಾಪಿಸುತ್ತದೆ.



ಶ್ರೀವಿಷ್ಣುವೇ ಸರ್ವೋತ್ತಮನೆಂಬ ವೇದಸಿದ್ಧ ಮಹಾಪ್ರಮೇಯಕ್ಕೆ ಪ್ರಾಪ್ತವಾಗಬಹುದಾದ ಎಲ್ಲ ವಿರೋಧಗಳೂ ಸಾಮಾನ್ಯವಾಗಿ ಯುಕ್ತಿಯನ್ನು ಆಶ್ರಯಿಸಿಕೊಂಡೇ ಪ್ರವೃತ್ತವಾಗುತ್ತವೆ. ಆದುದರಿಂದ ಪ್ರಬಲವಾದ ಯುಕ್ತಿ ವಿರೋಧವನ್ನು ಈ ಅಧ್ಯಾಯದ ಮೊದಲನೆಯ ಪಾದದಲ್ಲಿ ಪರಿಹರಿಸಲಾಗಿದೆ. ಪಾಶುಪತ, ಸಾಂಖ್ಯ, ಕಾಣಾದ ಮೊದಲಾದ ಸ್ಮೃತಿಗಳು ರುದ್ರಾದಿಗಳನ್ನು ಜಗತ್ಸೃಷ್ಟ್ಯಾದಿಕರ್ತರೆಂದು ನಿರವಕಾಶ ವಾಕ್ಯಗಳಿಂದ ಪ್ರತಿಪಾದಿಸುತ್ತವೆ. ಈ ಸ್ಮೃತಿಗಳಿಂದ ವಿಷ್ಣುವೇ ಜಗತ್ಕಾರಣನೆಂದು ನಿರವಕಾಶವಾಗಿ ಹೇಳುವ ಪಾಂಚರಾತ್ರಾದಿ ಸ್ಮೃತಿಗಳಿಗೆ ವಿರೋಧವಿದೆ. ಈ ವಿರೋಧವನ್ನು, ಪಾಶುಪತಾದಿ ಸ್ಮೃತಿಗಳಿಗೆ ವೇದಾನುಸಾರಿತ್ವವಿರುವುದಿಲ್ಲವೆಂಬ ಮುಖ್ಯ ಹೇತುವಿನಿಂದ ಪರಿಹರಿಸಿ ಆ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಸಾಧಿಸಲಾಗಿದೆ. ***ಕಾರೀರ್ಯಾ ಯಜೇತ ವೃಷ್ಟಿಕಾಮಃ*** ಇತ್ಯಾದಿ ಶ್ರುತಿ ವಾಕ್ಯಗಳು ಹೇಳುವಂತೆ ಆ ಯಾಗವನ್ನು ಮಾಡಿದರೂ ಮಳೆ ಬರದಿರುವುದು ಕಂಡಿದೆಯಾದುದರಿಂದ ಶ್ರುತಿಗಳ ಮತ್ತು ತದನುಸಾರಿಗಳೆಂಬ ಪಾಂಚರಾತ್ರಾದಿ ಸ್ಮೃತಿಗಳಿಗೂ ಅಪ್ರಮಾಣಗಳೆಂಬ ಸಂಶಯವನ್ನು, ಅಪೌರುಷೇಯತ್ವಾದಿ ಹೇತುಗಳಿಂದ ಶ್ರುತಿ ಪ್ರಾಮಾಣ್ಯವನ್ನು ಸಾಧಿಸಿ, ಪರಿಹರಿಸಲಾಗಿದೆ.

ಯಾಗಕರ್ತರ ಅದೃಷ್ಟ, ಅಧಿಕಾರ ನ್ಯೂನತೆ ಮೊದಲಾದ ಕಾರಣಗಳಿಂದ ಮಳೆಯಾಗದಿರಬಹುದಲ್ಲದೆ ವೇದವು ಅಸತ್ಯವನ್ನು ಹೇಳುತ್ತದೆಂದಲ್ಲ, ಎಂದು ನಿರ್ಣಯಿಸಲಾಗಿದೆ. ***ಮೃದಬ್ರವೀತ್, ಓಷಧಯಃ ಸಂವದಂತಿ*** ಇತ್ಯಾದಿ ಶ್ರುತಿವಾಕ್ಯಗಳು ಪ್ರತ್ಯಕ್ಷಕ್ಕೆ ವಿರುದ್ಧವಾಗಿ ಜಡವಸ್ತುಗಳು ಮಾತನಾಡುತ್ತವೆಂದು ಮುಂತಾಗಿ ಹೇಳುವುದರಿಂದ ಶ್ರುತಿಗಳಿಗೆ ಪ್ರಾಮಾಣ್ಯವು ಕೂಡುವುದಿಲ್ಲವೆಂಬ ಯುಕ್ತಿ ವಿರೋಧವನ್ನು, ಮೃದಾದಿ ಅಭಿಮಾನಿ ದೇವತೆಗಳನ್ನು ಆ ವಾಕ್ಯಗಳು ಹೇಳುತ್ತವೆಂದು ನಿರ್ಣಯಿಸಿ, ಪರಿಹರಿಸಲಾಗಿದೆ. ಶ್ರುತಿ ಪ್ರಾಮಾಣ್ಯವನ್ನು ಅಂಗೀಕರಿಸಿದರೂ, ***ಅಸದೇವೇದಮಗ್ರ ಆಸೀತ್*** ಇತ್ಯಾದಿ ವಾಕ್ಯಗಳು ಅಸತ್ತಿಗೆ (ಶೂನ್ಯಕ್ಕೆ) ಜಗತ್ಕಾರಣತ್ವವನ್ನು ಹೇಳುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲವೆಂಬ ಸಂಶಯವನ್ನು ಅಸತ್ ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯಗೊಳಿಸುವ ಯುಕ್ತಿಯಿಂದ ಪರಿಹರಿಸಿ ***ಪರೇವ್ಯಯೇ ಸರ್ವ ಏಕೀ***

***ಭವಂತಿ*** ಇತ್ಯಾದಿ ಶ್ರುತಿ ವಾಕ್ಯಗಳ ಅರ್ಥ ನಿರ್ಣಯದಿಂದ (ವಿಷ್ಣುವಿನೊಂದಿಗೆ ಸ್ವಾರ್ಥೈಕ್ಯ, ಮತ್ಸೈಕ್ಯಗಳನ್ನು ಹೇಳಿ) ಜೀವೇಶ್ವರರ ಭೇದವನ್ನೂ, ಅತ ಏವ ವಿಷ್ಣುವೇ ಜಗತ್ಕಾರಣನೆಂಬ ನಿರ್ಣಯವನ್ನೂ ದೃಢಪಡಿಸಲಾಗಿದೆ. ತರ್ಕವು ಪ್ರತಿಕರ್ತದಿಂದ ನಿಯಮೇನ ವ್ಯಾಹತವಾಗಲು ಇರುವ ಅವಕಾಶವನ್ನು ಪ್ರತಿಪಾದಿಸಿ, ಶುಷ್ಕತರ್ಕದ ಅಪ್ರತಿಷ್ಠಾನವನ್ನು (ಪ್ರತ್ಯಕ್ಷ ಮತ್ತು ಆಗಮಗಳನ್ನು ಅನುಸರಿಸದ ತರ್ಕಕ್ಕೆ ಅಪ್ರಾಮಾಣ್ಯವನ್ನು) ನಿರ್ಣಯಿಸಲಾಗಿದೆ. ಪ್ರತ್ಯಕ್ಷಸಿದ್ಧ-ನಲ್ಲದ ಒಬ್ಬ ಈಶ್ವರನನ್ನು ಕಲ್ಪಿಸಿ, ಅವನಿಗೆ ಸರ್ವಕರ್ತೃತ್ವ ಸ್ವಾತಂತ್ರ್ಯಾದಿಗಳನ್ನು ಹೇಳುವುದು ಕಲ್ಪನಾಗೌರವವೆಂಬ ಸಂಶಯವನ್ನು ***ನಾನ್ಯಃ ಕರ್ತಾ, ಸ ಹಿ ಸ್ವತಂತ್ರಃ*** ಇತ್ಯಾದಿ ಶ್ರುತಿಗಳು ಈಶ್ವರನಿಗೆ ಸರ್ವಕರ್ತೃತ್ವ ಸ್ವಾತಂತ್ರ್ಯಾದಿಗಳನ್ನು ನಿರವಕಾಶವಾಗಿ ಸಾಧಿಸಿಕೊಡುತ್ತಿರಲು, ಜೀವನಿಗೆ ಸ್ವತಂತ್ರ ಕರ್ತೃತ್ವಾದಿಗಳನ್ನು ಹೇಳುವುದೇ ಕಲ್ಪನಾಗೌರವವೆಂದು ನಿರ್ಣಯಿಸಲಾಗಿದೆ. ಸಾಮಾನ್ಯ ದೇವತೆ-ಗಳಿಗೂ, ಅದೇಕೆ ! ಪಿಶಾಚಾದಿಗಳಿಗೂ ಅದರ್ಶನ ಶಕ್ತಿಯು ಕಂಡಿರಲು ಪ್ರತ್ಯಕ್ಷಸಿದ್ಧನಲ್ಲವೆಂಬ ಕಾರಣದಿಂದ ಈಶ್ವರನನ್ನು ಕಲ್ಪಿತನೆಂದು ತಿಳಿಯುವುದು ಯುಕ್ತವಲ್ಲವೆಂದೂ ನಿರ್ಣಯಿಸಲಾಗಿದೆ. ಜೀವನಿಗೆ ಸ್ವತಂತ್ರ ಕರ್ತೃತ್ವವನ್ನು ಹೇಳುವುದರಿಂದ ಬರಬಹುದಾದ ದೋಷಗಳು ಈಶ್ವರನಲ್ಲಿ ಸಹ ಬರಬಹುದೆಂಬ ಶಂಕೆಯನ್ನು, ಸರ್ವಶಕ್ತಿತ್ವ, ಆಗಮೈಕವೇದ್ಯತ್ವ ಮೊದಲಾದ ಶ್ರುತಿಸಿದ್ಧ ಹೇತುಗಳಿಂದ ನಿವಾರಿಸಲಾಗಿದೆ. ಶ್ರೀ ವಿಷ್ಣುವು ಗುಣಪೂರ್ಣನಾದರೆ ಪ್ರಯೋಜನವಿಲ್ಲದ ಸೃಷ್ಟ್ಯಾದಿ ಕಾರ್ಯಗಳಲ್ಲಿ ಆತನಿಗೆ ಪ್ರವೃತ್ತಿಯೇ ಕೂಡುವುದಿಲ್ಲವೆಂಬ ಸಂಶಯವನ್ನು, ಆನಂದೋದ್ರೇಕದಿಂದ ಪರ-ಪ್ರಯೋಜನಾರ್ಥವಾಗಿ ಸೃಷ್ಟ್ಯಾದಿ ಪ್ರವೃತ್ತಿಯು ಪೂರ್ಣಕಾಮನಿಗೂ ಯುಕ್ತವೇ ಆಗುತ್ತದೆಂದು ಹೇಳಿ ಪರಿಹರಿಸಲಾಗಿದೆ. ಶ್ರೀ ವಿಷ್ಣುವೇ ಸರ್ವಕರ್ತನೆಂದು ಅಂಗೀಕರಿಸುವುದರಿಂದ ಆತನಿಗೆ ವೈಷಮ್ಯ-ದಯಾಶೂನ್ಯತ್ವ ಮೊದಲಾದ ದೋಷಗಳು ಪ್ರಾಪ್ತವಾಗುತ್ತವೆಂಬ ದುಷ್ಟಯುಕ್ತಿಗಳನ್ನು ಸ್ವರೂಪಯೋಗ್ಯತೆ-ಅನಾದಿಕರ್ಮ-ಸಂಸ್ಕಾರ ಮುಂತಾದ ಅದೃಷ್ಟ ಕಾರಣಗಳನ್ನು ನಿಮಿತ್ತೀಕರಿಸಿ, ಈಶ್ವರನು ಜೀವರನ್ನು ಕರ್ಮಗಳಲ್ಲಿ ಪ್ರೇರಿಸಿ ಕರ್ಮಾನುಸಾರ ಫಲಗಳನ್ನು ಕೊಡುವನೆಂದೂ, ಹೀಗೆ ತಿಳಿಯುವುದರಿಂದ ಆತನ ಸ್ವಾತಂತ್ರ್ಯಾದಿ ಧರ್ಮಗಳಿಗೆ ಯಾವ ಅನುಪಪತ್ತಿ ಇಲ್ಲವೆಂದೂ ನಿರ್ಣಯಿಸಿ ಪರಿಹರಿಸಲಾಗಿದೆ.

## ಪರಿಚ್ಛೇದ ೭

# ಶ್ರೀಹರಿಯ ಗುಣಪೂರ್ಣತ್ವಕ್ಕೆ ಪ್ರಾಪ್ತವಾಗಬಹುದಾದ ಇತರ ಸಮಯಗಳ ವಿರೋಧ ಪರಿಹಾರ

ಹೀಗೆ ಶ್ರೀವಿಷ್ಣುವಿಗೆ ಜಗಜ್ಜನ್ಮಾದಿ ಕಾರಣತ್ವವನ್ನು ವಿರೋಧಿಸುವ ಪ್ರಧಾನ ಯುಕ್ತಿಗಳನ್ನು ನಿರಾಕರಿಸಿ, ನ್ಯಾಯಬದ್ಧ ವಾಕ್ಯಗಳಿಂದ (ಸೂತ್ರ ರೂಪದಿಂದ) ನಿರ್ಣಯಗಳನ್ನು ನಿರೂಪಿಸಿ, ಎರಡನೆಯ ಪಾದದಲ್ಲಿ ಇತರ ಸಮಯಗಳ (ಅನ್ಯ ಮತಗಳ) ವಿರೋಧಗಳನ್ನು, ಎಂದರೆ ವಿಷ್ಣುವನ್ನು ಬಿಟ್ಟು ಜಗಜ್ಜನ್ಮಾದಿಗಳಿಗೆ ಅನ್ಯಕಾರಣಗಳನ್ನು ನಿರೂಪಿಸುವ ಇತರ ಮತಗಳನ್ನು (ಸಿದ್ಧಾಂತಗಳೆಂಬ ಅನ್ಯಾಭಿಪ್ರಾಯಗಳ ವಿರೋಧವನ್ನು) ಶ್ರೀ ಬಾದರಾಯಣರು ಪರಿಹರಿಸುತ್ತಾರೆ. ಅನ್ಯಮತ ನಿರಾಕರಣಪೂರ್ವಕವಾದ ಸಿದ್ಧಾಂತಜ್ಞಾನವೇ ಮೋಕ್ಷ ಸಾಧನ-ವಾಗಬಲ್ಲದು. ಸತ್ಯಾನ್ವೇಷಿಯಾದ ವಿಚಾರಶೀಲ ಪುರುಷನಿಗೆ ಪ್ರಾಪ್ತವಾಗುವ ನಾನಾ ಪ್ರಕಾರದ ಸಂಶಯಗಳೇ ಅನ್ಯಮತ ಸಿದ್ಧಾಂತರೂಪದ ಪೂರ್ವ ಪಕ್ಷಗಳು. ಅವುಗಳ ಖಂಡನೆಯಿಂದ ಸಿದ್ಧವಾಗುವ ಅಂತ್ಯ ನಿರ್ಣಯವೇ ಸಿದ್ಧಾಂತ. ಸಕಲ ಸಂಶಯಗಳ ಪರಿಹಾರವಾಗದೆ ತತ್ತ್ವಜ್ಞಾನ ನಿಶ್ಚಯವು ದೊರೆಯಲಾರದು. ***ಸಂಶಯಾತ್ಮಾವಿನಶ್ಯತಿ*** (ಗೀತಾ). - ಸಂಶಯಜ್ಞಾನ ವುಳ್ಳವನು ನಷ್ಟನಾಗುತ್ತಾನೆ. - ಎಂದರೆ ಯೋಗಮಾರ್ಗದಿಂದ ಪತಿತನಾಗುತ್ತಾನೆ. ಎಂಬುದಾಗಿ ಸಂಶಯಜ್ಞಾನದಿಂದಾಗುವ ಅನರ್ಥವನ್ನು ಶ್ರೀಕೃಷ್ಣನು ಹೇಳಿರುತ್ತಾನೆ. ಶ್ರೀವಿಷ್ಣುವೇ ವಿಶ್ವದ ಸೃಷ್ಟ್ಯಾದಿಕರ್ತನೆಂಬ ಮಹಾಪ್ರಮೇಯವನ್ನು ವಿರೋಧಿಸುವ ಮತಗಳಲ್ಲಿ ಮುಖ್ಯವಾದವುಗಳನ್ನು ಶ್ರೀ ಬಾದರಾಯಣರು ಈ ಪಾದದಲ್ಲಿ ನಿರಾಕರಿಸಿರುತ್ತಾರೆ. ಶ್ರೀ ವೇದವ್ಯಾಸರು ಬ್ರಹ್ಮಸೂತ್ರಗಳನ್ನು ರಚಿಸಿದ ಕಾಲದಲ್ಲಿ ಪ್ರಚಾರದಲ್ಲಿದ್ದವುಗಳನ್ನು ಮಾತ್ರ ನಿರಾಕರಿಸಿ ಸ್ವಸಿದ್ಧಾಂತವನ್ನು ನಿರೂಪಿಸಿರುವರೆಂದು ಕೆಲವು ಆಧುನಿಕ ವಿಮರ್ಶಕರ ಅಭಿಪ್ರಾಯವಾಗಿದೆ. ಶ್ರೀ ವೇದವ್ಯಾಸರನ್ನು ಕಶ್ಚನ ಋಷಿಗಳೆಂದು ಈ ವಿಮರ್ಶಕರು ತಿಳಿದಿರುವುದೇ ಇದಕ್ಕೆ ಕಾರಣವಾಗಿದೆ. ಶ್ರೀ ಬಾದರಾಯಣರು ಸಾಕ್ಷಾನ್ನಾರಾಯಣನ ಅವತಾರರಾಗಿದ್ದಾರೆ. ಅವರು ಅನಾದ್ಯನಂತಗಳಾದ ಸರ್ವದೇಶ ಕಾಲಗಳಲ್ಲಿರುವ ಮುಕ್ತಾಮುಕ್ತ ವಿಶ್ವವನ್ನೂ ತದ್ಗತ ಅಣುಮಹತ್ತಾದಿ ಸಕಲ ವಸ್ತುಗಳನ್ನೂ ಅಶೇಷ

ವಿಶೇಷಗಳೊಂದಿಗೆ ತಿಳಿದು ಪ್ರತ್ಯಕ್ಷದಂತೆ ಕಾಣುತ್ತಿರುವ ಸರ್ವಜ್ಞರು. ಅವರು ನಿರಾಕರಿಸಿರುವ ಅನ್ಯ ಸಮಯಗಳೆಲ್ಲವೂ ಅನಾದಿಯಿಂದ ಇರತಕ್ಕವುಗಳೇ. ಕಾಲವಿಶೇಷಗಳಲ್ಲಿ ಕೆಲಕೆಲವು ಅಥವಾ ಒಂದೊಂದು ಲೋಕದ ಪ್ರಜೆಗಳಲ್ಲಿ ಹೆಚ್ಚು ಪ್ರಚಾರಹೊಂದುತ್ತವೆ (ಉನ್ನಾಹವನ್ನು ಹೊಂದುತ್ತವೆ). ಆದುದರಿಂದ ಆ ಕಾಲದಲ್ಲಿ ಪ್ರಚಾರದಲ್ಲಿದ್ದ ಮತಗಳನ್ನು ಮಾತ್ರ ನಿರಾಕರಿಸಿರುವರೆಂಬುದು ಸರಿಯಲ್ಲ. ನಿರಾಕರಿಸಲಾಗಿರುವ ಸಮಯಗಳು ಯಾವುವೆಂದರೆ:-

(೧) ಜಗತ್ತಿನ ಸೃಷ್ಟ್ಯಾದಿಗಳು ಪ್ರಕೃತಿಯಿಂದಲೇ ಆಗುತ್ತವೆಂದು ಹೇಳುವ ನಿರೀಶ್ವರಸಾಂಖ್ಯರು. (೨) ಜಡಪ್ರಕೃತಿಯು ಸ್ವತಂತ್ರ ಪ್ರವೃತ್ತಿರಹಿತವಾದುದೆಂಬ ಕಾರಣದಿಂದ ಈಶ್ವರನೊಬ್ಬನನ್ನು ಒಪ್ಪಿ ಆತನ ಅನುಗ್ರಹಮಾತ್ರದಿಂದ- ಭೂಮಿಯಲ್ಲಿ ಬೆಳೆಯುವ ಸಸ್ಯಾದಿಗಳಿಗೆ ಮಳೆಯಂತೆ - ಪ್ರಕೃತಿಯೇ ಜಗತ್ಕಾರಣವಾಗುವುದೆಂದು ತಿಳಿಯುವ ಸೇಶ್ವರಸಾಂಖ್ಯರು. (೩) ಚೇತನ ಮತ್ತು ಅಚೇತನಗಳೆಂಬ ವಿಭಾಗವನ್ನೇ ಒಪ್ಪದೆ ದೇಹವೇ ಆತ್ಮವೆಂದೂ, ಪ್ರತ್ಯಕ್ಷ ಒಂದೇ ಪ್ರಮಾಣವೆಂದೂ, ಧರ್ಮಾಧರ್ಮಗಳು ಸ್ವಾರ್ಥಿಗಳ ಕುಕಲ್ಪನೆ- ಗಳೆಂದೂ, ಮರಣಪರ್ಯಂತ ಉಂಡುಟ್ಟು ಸುಖದಿಂದಿರುವುದೇ ಸರ್ವರ ಮುಖ್ಯ ಧ್ಯೇಯವಾಗಿರಬೇಕೆಂದೂ, ತಿಳಿದು ಉಪದೇಶಿಸುವ ಚಾರ್ವಾಕರು. (೪) ಚೇತನನು ಜಡಭಿನ್ನನೆಂದೊಪ್ಪಿ, ಚೇತನನ ಸನ್ನಿಧಾನ ಮಾತ್ರದಿಂದ ಪ್ರಕೃತಿಯು ಜಗತ್ಕಾರಣವಾಗಲು ಸಾಧ್ಯವಾಗಿರಲು ಈಶ್ವರನೊಬ್ಬನನ್ನು ಅಂಗೀಕರಿಸುವುದು ಅವಶ್ಯಕವಲ್ಲೆಂದು ವಾದಿಸುವ ನಿರೀಶ್ವರ ಸಾಂಖ್ಯ- ಪ್ರಭೇದಗಳಲೊಬ್ಬರಾದ ಜೀವೋಪಸರ್ಜನ ಪ್ರಕೃತಿ ಕರ್ತೃತ್ವವಾದಿಗಳು. (೫) ಪ್ರಕೃತಿಯ ಸಂಬಂಧರೂಪ ಸಹಾಯದಿಂದ ಜ್ಞಾನವಿಶಿಷ್ಟರಾದ ಚೇತನರು ಸೃಷ್ಟ್ಯಾದಿ ಸರ್ವವನ್ನೂ ನಿರ್ವಹಿಸುತ್ತಾರೆ-ಅನಂತ ಚೇತನರಿದ್ದು ಅವರಿಂದ ಭಿನ್ನಭಿನ್ನ ಕಾರ್ಯಗಳು ನಡೆಯುತ್ತಿರಲು ಸರ್ವಕರ್ತನೆಂಬೊಬ್ಬ ಈಶ್ವರನನ್ನು ಒಪ್ಪುವ ಕಾರಣವಿಲ್ಲವೆಂದು ಸಿದ್ಧಾಂತಿಸುವ ಪ್ರಕೃತ್ಯುಪಸರ್ಜನ ಜೀವಕರ್ತೃತ್ವ- ವಾದಿಗಳು. (೬) ನಿತ್ಯವಾದ ಪರಮಾಣುಗಳೇ ಕಾರ್ಯರೂಪವಾದ ಸಕಲ ಜಗತ್ತಿಗೂ ಕಾರಣವೆಂದು ನಾನಾ ಯುಕ್ತಿಗಳಿಂದ ಸಿದ್ಧಾಂತಿಸುವವರು ವೈಶೇಷಿಕರು. (೭) ಸರ್ವವೂ ಕ್ಷಣಿಕವೆಂಬ ತತ್ತ್ವವನ್ನು ಆಶ್ರಯಿಸಿ ಜಗತ್ತಿನ

ಸ್ವರೂಪವನ್ನು ವಿಲಕ್ಷಣರೀತಿಯಲ್ಲಿ ಪ್ರತಿಪಾದಿಸುವ ಬೌದ್ಧಮತ. ಇದು ನಾಲ್ಕು ಪ್ರಭೇದಗಳುಳ್ಳದ್ದು. ವೈಭಾಷಿಕರು ಮತ್ತು ಸೌತ್ರಾಂತಿಕರೆಂಬ ಮೊದಲಿನ ಎರಡು ಪಂಗಡದವರು ವೈಶೇಷಿಕರಿಂದ ಹೆಚ್ಚು ಅಂತರವುಳ್ಳವರಲ್ಲ. ಇವರು ಪರಮಾಣು ಸಮುದಾಯವೇ ಜಗತ್ತಿಗೆ ಕಾರಣವೆಂದೂ, ಪರಮಾಣುಗಳು ಕಾರ್ಯವನ್ನು ಹುಟ್ಟಿಸಿ ಅದೇ ಕ್ಷಣದಲ್ಲಿ ನಷ್ಟ ಹೊಂದುತ್ತವೆಂದೂ ಮುಂತಾಗಿ ವಾದಿಸುತ್ತಾರೆ. ಮೂರನೆಯ ಪಂಗಡದವರಾದ ಮಾಧ್ಯಮಿಕರು ಜಗತ್ತೆಂಬುದು (ಸರ್ವವೂ) ಶೂನ್ಯವೆಂದೂ, ಆ ಶೂನ್ಯ ತತ್ತ್ವವು ದೇಶ ಕಾಲಗಳಿಂದ ಅಪರಿಚ್ಛಿನ್ನವೂ ಅನಂತವೂ ಅದ್ವಿತೀಯವೂ ಆದುದೆಂದೂ ಹೇಳುತ್ತಾರೆ. ಶೂನ್ಯವೇ ತಾನೆಂಬ ನಿತ್ಯೋಪಾಸನೆಯುಳ್ಳವನು ಶೂನ್ಯಭಾವವನ್ನು ಹೊಂದುವುದೆಂಬ ಮೋಕ್ಷವನ್ನು ಹೊಂದುತ್ತಾನೆಂದು ಇವರು ತಿಳಿಯುತ್ತಾರೆ. ಹಗ್ಗದಲ್ಲಿ ತೋರುವ ಸರ್ಪದಂತೆ (ಭ್ರಮೆ) ಜಗತ್ತು ಭ್ರಾಂತಿಕಲ್ಪಿತವಾದ ಅನಿರ್ವಚನೀಯ ವಸ್ತುವೆಂದು ಹೇಳುತ್ತಾರೆ. ಶೂನ್ಯವನ್ನೇ ಬ್ರಹ್ಮನೆಂದು ಕರೆಯುವ ಮೊದಲಾದ ಕೆಲವು ಶಾಬ್ದಿಕ ವ್ಯತ್ಯಾಸಗಳನ್ನು ಬಿಟ್ಟರೆ ಶೂನ್ಯ ವಾದಿಗಳೆಂಬ ಈ ಬೌದ್ಧಪ್ರಭೇದಿಗಳಿಗೂ (ಮಾಧ್ಯಮಿಕರಿಗೂ) ಮಾಯಾವಾದವೆಂಬ ಪ್ರಸಿದ್ಧವಾಗಿರುವ ಅದ್ವೈತ ಸಿದ್ಧಾಂತಪ್ರಮೇಯಗಳಿಗೂ ವಿಶೇಷವೇನೂ ಕಂಡುಬರುವುದಿಲ್ಲ. ನಾಲ್ಕನೆ ಪಂಗಡದ ಯೋಗಾಚಾರ್ಯರೆಂಬುವರು, ವಿಜ್ಞಾನವೇ ತತ್ತ್ವವೆಂದೂ, ಅದೇ ಜಗತ್ಕಾರಣವಾಗಿ ತೋರುತ್ತದೆಂದೂ ತಿಳಿದು, ಶೂನ್ಯದ ಸ್ಥಾನದಲ್ಲಿ ವಿಜ್ಞಾನವನ್ನಿಟ್ಟು ತಮ್ಮ ಸಿದ್ಧಾಂತಗಳನ್ನು ವ್ಯವಸ್ಥೆಗೊಳಿಸಿಕೊಂಡಿರುವುದು ಕಂಡುಬರುತ್ತದೆ. (೮) ಜೈನಮತವು ಜಗತ್ತನ್ನು ಸತ್-ಅಸತ್-ಸದಸತ್ ಇತ್ಯಾದಿ ಸಪ್ತಪ್ರಕಾರಗಳಿಂದ ನಿರೂಪಿಸಲ್ಪಡುವ ಅರ್ಹವಾದ ವಿಲಕ್ಷಣಸ್ವರೂಪವುಳ್ಳುದೆಂದು ಹೇಳುತ್ತದೆ- ಸತತೋರ್ಧ್ವಗಮನವೇ ಮುಕ್ತಿಯೆಂದು ಮುಂತಾಗಿ ಹೇಳುತ್ತದೆ. ಯದ್ಯಪಿ, ಜನ್ಮಾಂತರಗಳುಂಟು, ಸ್ವರ್ಗನರಕಗಳುಂಟು ಎಂಬ ಮುಂತಾದ ಹಲಕೆಲವು ಪ್ರಕ್ರಿಯೆಗಳನ್ನು ಜೈನಮತವು ಅಂಗೀಕರಿಸಿದರೂ ಈಶ್ವರನೇ ಜಗತ್ಸೃಷ್ಟ್ಯಾದಿ ಕರ್ತನೆಂದೂ ವೇದಗಳು ಪ್ರಮಾಣವೆಂದೂ ಒಪ್ಪುವುದಿಲ್ಲವಾದುದರಿಂದ ಪ್ರಾಚೀನರು ಈ ಮತವನ್ನು ನಾಸ್ತಿಕ ಮತವೆಂದೇ ಗಣಿಸಿರುವರು. (೯) ಶೈವರು, ಪಾಶುಪತರು, ಕಾಲಾಮುಖರು ಮತ್ತು ಮಹಾವ್ರತರೆಂಬ ಪ್ರಭೇದಗಳಿಂದ

ಕೂಡಿದ ಶೈವಮತವು ಶಿವನಿಗೆ ಸರ್ವಜ್ಞತ್ವಾದಿಗಳನ್ನು ಹೇಳಿ, ಅವನೇ ಜಗಜ್ಜನ್ಮಾದಿಕರ್ತನೆಂದು ತಿಳಿಯುತ್ತದೆ. (೧೦) ಶಾಕ್ತರು-ಶಾಂಭವರು-ಆಣವರು ಎಂಬ ಮೂರು ಪಂಗಡಗಳಿಂದ ಕೂಡಿದ ಶಾಕ್ತಮತವು ಆದಿಶಕ್ತಿಯೆಂಬ ದೇವಿಯಿಂದಲೇ ಜಗದುತ್ಪತ್ತ್ಯಾದಿಗಳೆಲ್ಲವೂ ನಡೆಯುವುವೆಂದು ಹೇಳುತ್ತದೆ. ಈ ಎಲ್ಲ ಮತಗಳನ್ನೂ ಕ್ರಮದಿಂದ ಎರಡನೆ ಪಾದದಲ್ಲಿ ನಿರಾಕರಿಸಿ, ಜನ್ಮಾದ್ಯಸ್ಯ ಯತಃ ಎಂಬ ಲಕ್ಷಣ ಸೂತ್ರದಲ್ಲಿ ನಿರ್ಣಯಿಸಿದಂತೆ, ಜನ್ಮಾದ್ಯಷ್ಟ-ಕರ್ತನೂ ಅನಂತಗುಣಪೂರ್ಣನೂ ಆಗಮ ಮುಖ್ಯಪ್ರತಿಪಾದ್ಯನೂ, ಬ್ರಹ್ಮಶಬ್ದ **ಮುಖ್ಯವಾಚ್ಯನೂ ಆದವನು ಶ್ರೀ ವಿಷ್ಣುವೇ ಎಂದು ನಿರ್ಣಯಿಸಲಾಗಿದೆ.** ಹೀಗೆ ನಿರಾಕರಿಸಲಾಗಿರುವ ಮತಗಳು, ಅವಾಂತರ ಪ್ರಭೇದಗಳಿಂದ ಅನ್ಯಮತಗಳೆಂದೇ ಕರೆಯಲ್ಪಡುಬಹುದಾದ ಇತರ ಎಲ್ಲ ವಾದಗಳನ್ನೂ ಪ್ರತಿನಿಧಿಸುತ್ತವೆ. ಆದುದರಿಂದ ಇಲ್ಲಿ ನಿರಾಕರಿಸಲ್ಪಡದಿರುವ ಬೇರೊಂದು ಮತಸಿದ್ಧಾಂತಗಳು ಸತ್ಯವಿರಬಹುದೆಂಬ ಶಂಕೆಗೆ ಅವಕಾಶವಿಲ್ಲ.

ನಿರಾಕೃತಗಳಾದ ಈ ಮತಗಳ ಸಿದ್ಧಾಂತಗಳಾವುವು - ಅವುಗಳು ಹೇಗೆ ದೋಷಯುಕ್ತಗಳಾಗಿವೆ ಮತ್ತು ಯಾವ ಯುಕ್ತಿಗಳಿಂದ ಅಥವಾ ಪ್ರಮಾಣಗಳಿಂದ ಹೇಗೆ ನಿರಾಕರಿಸಲ್ಪಟ್ಟಿವೆ ಎಂಬುದನ್ನು ವಿಸ್ತರಿಸುವುದು ಈ ಗ್ರಂಥದ ಉದ್ದೇಶವಲ್ಲ.

ಒಂದೊಂದು ಮತದ ನಿರಾಕರಣೆಗೂ ಒಂದೊಂದು ಪ್ರತ್ಯೇಕ ಗ್ರಂಥವನ್ನೇ ಬರೆಯಬೇಕಾಗುವುದು. ವೇದಾದಿ ಶಾಸ್ತ್ರಗಳಲ್ಲಿ ಪರಿಣಿತರೂ ವಾಕ್ಯಾರ್ಥದಕ್ಷರೂ ಆದ ಪಂಡಿತರು ಈ ಕಾರ್ಯದಲ್ಲಿ ಪ್ರವೃತ್ತರಾಗಿದ್ದಾರೆ. ಸೃಷ್ಟ್ಯಾದ್ಯಷ್ಟ ಕರ್ತೃತ್ವವನ್ನು ವಿವರಿಸಿರುವ ಈ ಹಿಂದಿನ ಪರಿಚ್ಛೇದಗಳಲ್ಲಿ ಈ ಮತಗಳ ನಿರಾಕರಣ ಯುಕ್ತಿಗಳೂ ಪ್ರಮಾಣಗಳೂ ಸಂಗ್ರಹಿಸಲ್ಪಟ್ಟಿರುವುವೆಂಬುದನ್ನು ಸೂಕ್ಷ್ಮದರ್ಶಿಗಳು ಗ್ರಹಿಸಬಹುದು. ಖಂಡನಪ್ರಕಾರದ ವಿಸ್ತಾರವನ್ನು ತಿಳಿಯ-ಲಪೇಕ್ಷಿಸುವವರು ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಗುರುಮುಖೇನ ವಿಧ್ಯುಕ್ತ-ವಾಗಿ ಅಧ್ಯಯನ ಮಾಡುವುದು ಅವಶ್ಯಕ.

ವೇದಪ್ರಾಮಾಣ್ಯವನ್ನು ಅಂಗೀಕರಿಸಿರುವ ಮತಗಳಲ್ಲಿ ಅತ್ಯಂತ ಮೋಹಕ-ವಾದುದು, ಆತಏವ ಜಗತ್ತಿನಲ್ಲಿ ವಿಶೇಷ ಪ್ರಚಾರವುಳ್ಳದುದು, ಅದ್ವೈತ

ಸಿದ್ಧಾಂತವು. ತತ್ತ್ವವಾದಿಗಳ ಸಿದ್ಧಾಂತ ತತ್ತ್ವಗಳು ಈ ಮತ ಪ್ರಮೇಯಗಳನ್ನು ವಿಶೇಷವಾಗಿ ವಿರೋಧಿಸಿ ನಿರಾಕರಿಸುತ್ತವೆ. ಬೌದ್ಧ ಪ್ರಭೇದಿಗಳಾದ ಶೂನ್ಯ-ವಾದಿಗಳ (ಮಾಧ್ಯಮಿಕರ) ಅಖಂಡಖಂಡನನ್ಯಾಯಗಳು ಈ ಮತಖಂಡನೆಗೂ ಅನ್ವಯಿಸುತ್ತವೆ. ವೇದಾಂತಿಗಳೆಂದು ಹೇಳಿಕೊಳ್ಳುವ ಈ ಮತೀಯರು ಶೂನ್ಯವಾದಿಗಳ ಶೂನ್ಯವನ್ನೇ ಬ್ರಹ್ಮ ಎನ್ನುವರು. ಅಸತ್ ಎಂಬುದನ್ನು ಬಿಟ್ಟು ಜಗತ್ತನ್ನು ಸದಸದ್ವಿಲಕ್ಷಣವೆನ್ನುವರು-ಎಂದರೆ ಸತ್ ಅಥವಾ ಅಸತ್ ಎಂದು ಹೇಳಲಿಕ್ಕೆ ಬಾರದ ಅನಿರ್ವಚನೀಯ ವಸ್ತುವೆಂದರ್ಥ. ಶೂನ್ಯವಾದಿಗಳ ಸಂವೃತಿಯನ್ನೇ (ಅಜ್ಞಾನವನ್ನು) ಮಾಯಾ ಎಂದು ಕರೆಯುತ್ತಾರೆ. ಈ ಮತದ ಪ್ರಧಾನ ಪ್ರಮೇಯಗಳನ್ನೂ ಅವುಗಳ ಖಂಡನ ಪ್ರಕಾರವನ್ನೂ ಸಂಗ್ರಹವಾಗಿ-ಯಾದರೂ ನಿರೂಪಿಸುವುದು, ತತ್ತ್ವವಾದಿಗಳ ಸಿದ್ಧಾಂತವನ್ನು ನಿರೂಪಿಸಲು ಉದ್ಯುಕ್ತವಾಗಿರುವ ಈ ಗ್ರಂಥಮಾಲೆಯಲ್ಲಿ ಅಪ್ರಾಸಂಗಿಕವಲ್ಲ; ಕಿಂತು ಅವಶ್ಯಕವೂ ಆದುದು.

ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವನಾಪರಃ-ಬ್ರಹ್ಮನು ಸತ್ಯ, ಜಗತ್ತು ಮಿಥ್ಯಾ, ಜೀವನು ಬ್ರಹ್ಮನೇ-ಬೇರೆಯಲ್ಲ-ಹೀಗೆಂಬುದು ಅದ್ವೈತ-ಮತದ ಸಿದ್ಧಾಂತಸಾರ. ಈ ಮತವು ಮಾಯಾವಾದವೆಂದೂ ಪ್ರಸಿದ್ಧವಾಗಿದೆ. ಮಾಯಾಶಬ್ದಕ್ಕೆ ಶಾಸ್ತ್ರೀಯವಾದ ನಾನಾರ್ಥಗಳಿವೆ - ಪ್ರಕೃತಿ, ಲಕ್ಷ್ಮೀದೇವಿ, ಭಗವದಿಚ್ಛೆ, ಅಜ್ಞಾನ, ಇತ್ಯಾದಿ. ಮಾಯಾವಾದ ಎಂಬಲ್ಲಿನ ಮಾಯಾಶಬ್ದವು ಅಜ್ಞಾನವೆಂಬ ಅರ್ಥವುಳ್ಳದ್ದು. ಜೀವೇಶ್ವರರ ಐಕ್ಯವನ್ನು ಹೇಳುವ ಈ ಅಭೇದವಾದಿಗಳಲ್ಲಿ ಕೆಲವು ಮುಖ್ಯಪ್ರಭೇದಗಳಿವೆ. ಕೇವಲೈಕ್ಯವಾದಿಗಳು ಮತ್ತು ಭೇದಾಭೇದವಾದಿಗಳೆಂಬ ಎರಡು ಪಂಗಡಗಳು ಪ್ರಧಾನವಾದವು.

ಕೇವಲೈಕ್ಯವಾದಿಗಳು ಹೀಗೆನ್ನುವರು:-ಬ್ರಹ್ಮನು ಜೀವ ಜಡಗಳಿಂದ ಭಿನ್ನವಲ್ಲ - ಯಾವ ಧರ್ಮಗಳೂ ಇಲ್ಲದವನು (ನಿರ್ವಿಶೇಷನು). ಬ್ರಹ್ಮನೊಬ್ಬನೇ ಸತ್ಯ. ಆತನಲ್ಲಿ ಅಜ್ಞಾನವು ಆರೋಪಿತವಾಗಿದೆ. ಇದರಿಂದ ಬ್ರಹ್ಮನು ಈಶ್ವರ, ಜೀವ, ಜಗತ್ತು ಇತ್ಯಾದಿ ರೂಪಗಳಿಂದ ತೋರುತ್ತಾನೆ. ಈ ಅಜ್ಞಾನವು ಅನಾದಿ ಮತ್ತು ಭಾವರೂಪವಾದುದು-ಆದರೂ ಅದು ಸತ್ಯವಲ್ಲ (ಸತ್ತಲ್ಲ) ಅಸತ್ತೂ ಅಲ್ಲ-ಅನಿರ್ವಚನೀಯವಾದುದು. ಈ ಅಜ್ಞಾನವು ಆವರಣ ಮತ್ತು

ವಿಕ್ಷೇಪಗಳೆಂಬ ವ್ಯಾಪಾರವುಳ್ಳದ್ದು. ಆವರಣ ಎಂದರೆ ಬ್ರಹ್ಮನ ಸ್ವರೂಪ ಪ್ರಕಾರವನ್ನು ಪ್ರತಿಬಂಧಿಸುವುದು. ಅತದಾಕಾರ ಪ್ರತಿಭಾಸ ಎಂದರೆ ಸ್ವರೂಪದಲ್ಲಿಲ್ಲದ ದುಃಖಾದಿಗಳನ್ನು ಪ್ರದರ್ಶಿಸುವುದು. ಇದನ್ನು ವಿಕ್ಷೇಪ ಎನ್ನುವರು. ಹೀಗಿರುವ ಅಜ್ಞಾನವು ಮಾಯಾ ಮತ್ತು ಅವಿದ್ಯಾ ಎಂದು ಎರಡು ವಿಧವಾಗಿದೆ. ಮಾಯಾ ವಿಶಿಷ್ಟನಾದ ಬ್ರಹ್ಮನೇ ಈಶ್ವರನು. ಈತನು ಮಾಯಾಮಯಗಳಾದ ಸರ್ವಜ್ಞತ್ವ ಸರ್ವೇಶ್ವರತ್ವಾದಿ ಧರ್ಮಗಳುಳ್ಳವನಾಗಿ ಜಗತ್ಸೃಷ್ಟ್ಯಾದಿ ವ್ಯಾಪಾರಗಳನ್ನು ಮಾಡುತ್ತಾನೆ. ಜಗತ್ತಾದರೋ ಸತ್-ಅಸತ್ -ಸದಸತ್, ಯಾವುದೂ ಅಲ್ಲದ ಅನಿರ್ವಚನೀಯವಾದ ಮಿಥ್ಯಾವಸ್ತುವು- ಮಾಯೆಯೇ ಉಪಾದಾನಕಾರಣವಾಗಿ ಉಳ್ಳದ್ದು. ಶುಕ್ತಿಯಲ್ಲಿ (ಕಪ್ಪೇಚಿಪ್ಪು ಅಥವಾ ಸಿಂಪಿನಲ್ಲಿ) ರಜತವು (ಬೆಳ್ಳಿಯು) ಆರೋಪಿತವಾಗಿ ಭ್ರಮಕಾಲದಲ್ಲಿ ತೋರುವಂತೆ ಜಗತ್ತು ಬ್ರಹ್ಮನಲ್ಲಿ ಆರೋಪಿತವಾಗಿ ತೋರುತ್ತದೆ. ಆದುದರಿಂದ ಈಶ್ವರನ ಜಗತ್ಕರ್ತೃತ್ವಾದಿಗಳು ಮಾಯಾಮಯಗಳೇ (ಮಿಥ್ಯೆಯೇ). ಈಶ್ವರನು ಸ್ವಾಶ್ರಯವಾದ ಬ್ರಹ್ಮವಸ್ತುವನ್ನು ಯಥಾರ್ಥವಾಗಿ ತಿಳಿದಿರುವುದ- ರಿಂದ ಅವನಿಗೆ ಮೋಹವಿಲ್ಲ.-ಆದರೂ ಆರೋಪಿತ ಜಗತ್ತನ್ನು ನೋಡುತ್ತಾನೆ. ಅವಿದ್ಯಾವಿಷ್ಟನಾದ ಬ್ರಹ್ಮನೇ ಜೀವನು. ಕನ್ನಡಿ ಮೊದಲಾದ ಉಪಾಧಿಯಲ್ಲಿ ತೋರುವ ಮುಖದ ಪ್ರತಿಬಿಂಬವು ಮುಖದಲ್ಲಿಲ್ಲದ ಮಾಲಿನ್ಯ ಮೊದಲಾದ ಉಪಾಧಿಗತ ದೋಷಗಳುಳ್ಳದ್ದಾಗುವಂತೆ, ಬ್ರಹ್ಮ ಪ್ರತಿಬಿಂಬನಾದ ಜೀವನಲ್ಲಿ ಅವಿದ್ಯೆಯೇ ಉಪಾದಾನವಾಗಿವುಳ್ಳ ಮಿಥ್ಯಾ ಭೂತವಾದ ಅಹಂಕಾರವೆಂಬ ದ್ರವ್ಯವು (ವಸ್ತು) ಆರೋಪಿಸಲ್ಪಡುತ್ತದೆ. ಈ ಅಹಂಕಾರವು ಜ್ಞಾನಶಕ್ತಿಯ- ನ್ನಾಶ್ರಯಿಸಿ ಮನಸ್ಸೆಂದೂ, ಕರ್ತೃತ್ವ ಶಕ್ತಿಯನ್ನಾಶ್ರಯಿಸಿ ಪ್ರಾಣವೆಂದೂ ಕರೆಯಲ್ಪಡುತ್ತದೆ. ಅಹಂಕಾರ ಧರ್ಮಗಳಾದ ಕರ್ತೃತ್ವ ಭೋಕ್ತೃತ್ವ ಸುಖದುಃ ಖಾದಿಗಳು ಆತ್ಮನಲ್ಲಿ ಆರೋಪಿತವಾಗುತ್ತವೆ. ಅವಿದ್ಯಾ, ಅಹಂಕಾರ ಮೊದಲಾದ ಆರೋಪಿತ ವಸ್ತುಗಳನ್ನು ತಿಳಿಯುವ ಪ್ರತ್ಯಗಾತ್ಮನು (ಜೀವನು) ಸಾಕ್ಷೀ ಎಂದು ಕರೆಯಲ್ಪಡುತ್ತಾನೆ. ಸಾಕ್ಷೀತ್ವವೂ ಅವಿದ್ಯಾಕಲ್ಪಿತವೇ-ಸತ್ಯವಲ್ಲ. ಈ ಮೊದಲಾದ ಪ್ರಕ್ರಿಯೆಗಳುಳ್ಳದ್ದು ಕೇವಲೈಕ್ಯವಾದ. ಇವುಗಳಲ್ಲಿ ಸಾಧನೆಗಾಗಿ ಉಪಯೋಗಿಸುವ ಯುಕ್ತಿಭೇದಗಳಿಂದ ಕೇವಲೈಕ್ಯವಾದಿಗಳಲ್ಲಿ ಏಕಜೀವವಾದ

- ಬಹುಜೀವವಾದಗಳೆಂಬ ಒಳಪಂಗಡಗಳು ಏರ್ಪಟ್ಟಿವೆ. ಏವಂಚ ಜೀವೇಶ್ವರೈಕ್ಯವನ್ನು ಹೇಳಿ ಸರ್ವಪ್ರಕಾರದಿಂದ ಅಭೇದವನ್ನೇ ಸಾಧಿಸುವವರು ಕೇವಲೈಕ್ಯವಾದಿಗಳು.

ಭೇದಾಭೇದವಾದಿಗಳು ಜೀವೇಶ್ವರರಲ್ಲಿ ಭೇದ-ಅಭೇದಗಳೆರಡೂ ಸತ್ಯವೆನ್ನುತ್ತಾರೆ. ಅದರಲ್ಲಿ ಅಭೇದವು ಸ್ವಾಭಾವಿಕವೆಂದೂ, ಭೇದವು ಔಪಾಧಿಕ ವೆಂದೂ ತಿಳಿಯುತ್ತಾರೆ. ಯಾರಿಗೆ ನಿಷ್ಕಾಮಕರ್ಮದಿಂದ ಜೀವೇಶ್ವರೈಕ್ಯ ಜ್ಞಾನವಾಗುವುದೋ ಅವರಿಗೆ ಉಪಾಧಿನಾಶದಿಂದ ಬ್ರಹ್ಮತ್ವ ಸಿದ್ಧಿಸುವುದೆಂದು ಹೇಳುತ್ತಾರೆ. ಇದರಲ್ಲಿ ಸಹ ಪ್ರಧಾನವಾದ ಮೂರು ಒಳಪಂಗಡಗಳಿವೆ. ಹೀಗಿದ್ದರೂ ಜೀವೇಶ್ವರೈಕ್ಯ ಪ್ರಪಂಚ ಮಿಥ್ಯಾತ್ವಗಳು ಈ ಎಲ್ಲರಿಗೂ ಸಮ್ಮತವಾದ ಮುಖ್ಯ ಪ್ರಮೇಯಗಳಾಗಿವೆ.

ಜಗತ್ತನ್ನೇ ಸುಳ್ಳು (ಮಿಥ್ಯಾ) ಎಂದರೆ, ಅಜ್ಞಾನಿಗಳು (ಶಾಸ್ತ್ರಜ್ಞಾನ ರಹಿತ-ರಾದ ಸಾಮಾನ್ಯರು) ಸಹ ಒಪ್ಪುವುದಿಲ್ಲ. ಪ್ರತ್ಯಕ್ಷಸಿದ್ಧವಾದ ಜಗತ್ತನ್ನೇ ಅಲ್ಲಗಳೆದರೆ ಅಂತಹ ಉಪದೇಶವು ಗ್ರಾಹ್ಯವಾಗುವುದಿಲ್ಲ. ಇದನ್ನು ತಿಳಿದೇ ಮಾಯಾವಾದವು ಮಿಥ್ಯೆ ಎಂದರೆ ಸುಳ್ಳಲ್ಲವೆಂದೂ, ಮಿಥ್ಯಾಭೂತವಾದ ವಸ್ತುವಿಗೂ ಒಂದು ಪ್ರಕಾರದ ಸತ್ಯತ್ವವಿರುತ್ತದೆಂದು ಹೇಳುತ್ತದೆ. ಈ ಪ್ರಕ್ರಿಯೆಯನ್ನು ಮಾಯಾವಾದವು ಹೀಗೆ ನಿರೂಪಿಸುತ್ತದೆ- ಸತ್ಯವೆಂಬುದು ಪ್ರಾತಿಭಾಸಿಕ, ವ್ಯಾವಹಾರಿಕ ಮತ್ತು ಪಾರಮಾರ್ಥಿಕವೆಂದು ಮೂರು ವಿಧ. ಶುಕ್ತಿಯಲ್ಲಿ ತೋರುವ ರಜತವು ತತ್ಕಾಲದಲ್ಲಿ ತೋರಿ ಉತ್ತರಕ್ಷಣದಲ್ಲಿ ಇಲ್ಲವೆಂದು (ರಜತವಲ್ಲೆಂದು) ತಿಳಿಯಲ್ಪಡುವುದರಿಂದ ಆ ರಜತವು ಪ್ರಾತಿಭಾಸಿಕ ಸತ್ಯತ್ವ ಉಳ್ಳದ್ದು. ವಿವಿಧ ವ್ಯವಹಾರಗಳಿಗೆ ಅವಕಾಶ ಕೊಡುವ ಜಗತ್ತು, ಜೀವಬ್ರಹ್ಮೈಕ್ಯ ಜ್ಞಾನವಾಗುವವರೆಗೆ ತೋರುತ್ತಿರುವುದರಿಂದ ವ್ಯಾವಹಾರಿಕ ಸತ್ಯತ್ವವುಳ್ಳದ್ದೆಂದೂ, ತ್ರಿಕಾಲಗಳಲ್ಲಿ ಸಹ ಏಕಪ್ರಕಾರವಾಗಿ ಜ್ಞಾನ ಗೋಚರವಾಗುವ ವಸ್ತು ಮಾತ್ರ ಪಾರಮಾರ್ಥಿಕ ಸತ್ಯತ್ವವುಳ್ಳದ್ದೆಂದೂ ಹೇಳಲಾಗುತ್ತದೆ. ಜೀವಬ್ರಹ್ಮರು ಅಭಿನ್ನರೆಂಬ ಜ್ಞಾನದ ಸಾಕ್ಷಾತ್ಕಾರವಾದಾಗ ವ್ಯಾವಹಾರಿಕ ಸತ್ಯತ್ವವುಳ್ಳ ಜಗತ್ತಿನ ಭ್ರಮವು ನಷ್ಟವಾಗಿ ಪಾರಮಾರ್ಥಿಕ ಸತ್ಯವಾದ ಬ್ರಹ್ಮಸ್ವರೂಪ ಒಂದೇ

ಉಳಿಯುತ್ತದೆ. ವಸ್ತುತಃ ಇಲ್ಲದ ಪ್ರಾತಿಭಾಸಿಕ ರಜತವು ಇಲ್ಲವೇ ಇಲ್ಲೆಂಬ ಯಥಾರ್ಥಜ್ಞಾನ ಹುಟ್ಟಿದೊಡನೆಯೇ (ಬಾಧಜ್ಞಾನದಿಂದ) ನಷ್ಟವಾಗುವಂತೆ, ಜೀವನು ತಾನೇ ಬ್ರಹ್ಮನೆಂಬ ಜ್ಞಾನದ ಸಾಕ್ಷಾತ್ಕಾರವನ್ನು ಹೊಂದಿದೊಡನೆಯೇ ವ್ಯಾವಹಾರಿಕ ಸತ್ಯಜಗತ್ತು ನಷ್ಟಹೊಂದುತ್ತದೆ - ಇಲ್ಲದಂತಾಗುತ್ತದೆ- ಬ್ರಹ್ಮನೊಬ್ಬನೇ ಉಳಿಯುತ್ತಾನೆ. ಏವಂಚ ಇಲ್ಲ - ಇರಲಿಲ್ಲ - ಇರುವುದಿಲ್ಲ ಎಂಬ ತ್ರಿವಿಧಜ್ಞಾನಕ್ಕೆ ವಿಷಯವಾಗುವಿಕೆಯೇ ಮಿಥ್ಯಾ ಎನಿಸುತ್ತದೆ. ಅದ್ವೈತಿಗಳ ಮಿಥ್ಯಾತ್ವ ಪರಿಷ್ಕಾರವು ಹೀಗೆಯೇ ಇದೆ ನಾಸ್ತಿ-ನಾಸೀನ್ನ ಭವಿಷ್ಯತಿ ಇತ್ಯಾಕಾರಕ ಜ್ಞಾನ ವಿಷಯತ್ವಂ ಮಿಥ್ಯಾತ್ವಂ - ಎಂದರೆ, ಶುಕ್ತಿಯಲ್ಲಿ ಕಂಡ ಬೆಳ್ಳಿಯು ಈಗಿಲ್ಲ (ಭ್ರಮರಹಿತರಿಗೆ ಕಾಣುವುದಿಲ್ಲ); ಹಿಂದಿರಲಿಲ್ಲ; ಮುಂದಿರುವುದಿಲ್ಲ (ಬಾಧಜ್ಞಾನೋತ್ತರ-ಕಾಲದಲ್ಲಿ ಇರುವುದಿಲ್ಲ); ಹೀಗಿದ್ದರೂ ಇದ್ದಂತೆ ತೋರಿತು. ಇದೇ ಮಿಥ್ಯಾ ವಸ್ತುಸ್ವರೂಪವು. ಮಿಥ್ಯಾ ಬೆಳ್ಳಿಯಂತೆ ಅಲ್ಪಕಾಲ ಮಾತ್ರವಿರುವ ಜಗತ್ತು ಬಹುಕಾಲಿಕ ಭ್ರಮೆಯು. ಸತ್ಯ ವಸ್ತುವಾಗಿದ್ದರೆ ಹೇಗೋ ಹಾಗೆ ವ್ಯವಹಾರಗಳಿಗೆ ಜಗದ್ಭ್ರಮೆಯು ಅವಕಾಶವನ್ನಿತ್ತಿರುತ್ತದೆ. ಆ ಭ್ರಮೆಯ ಪರಿಹಾರವು (ಬಾಧಜ್ಞಾನವು) ಐಕ್ಯಜ್ಞಾನದಿಂದಲೇ ಉಂಟಾಗುತ್ತದೆ. ಈ ಕಾರಣದಿಂದ ಇದನ್ನು ವ್ಯಾವಹಾರಿಕ ಸತ್ಯವೆಂದು ಕರೆಯಲಾಗುತ್ತದೆ. ಪ್ರಾತಿಭಾಸಿಕ ರಜತದಿಂದ ಯಾವ ವ್ಯವಹಾರಾದಿಗಳೂ ನಡೆಯುವುದಿಲ್ಲ. (ಆಭರಣಾದಿಗಳ ನಿರ್ಮಾಣಕ್ಕೆ ಉಪಯೋಗಿಸಲಾಗುವುದಿಲ್ಲ). ಮಾಯಾ-ವಾದಿಗಳ ಸತ್ಯತ್ವದ ಈ ವಿವರಣೆಗಳನ್ನು ಪರಿಶೀಲಿಸಿದರೆ ಜಗತ್ತನ್ನು ಅವರು ವ್ಯಾವಹಾರಿಕ ಸತ್ಯವೆಂದು ಕರೆಯುವುದು ಕೇವಲ ಸಾಂಕೇತಿಕವೆಂದು ತಿಳಿದುಬರುತ್ತದೆ. ಈ ಪಾರಿಭಾಷಿಕ ಶಬ್ದವನ್ನು ಪ್ರಯೋಗಿಸಿ ನಾವೂ ಜಗತ್ತನ್ನು ಸತ್ಯವೆಂದು ಅಂಗೀಕರಿಸುತ್ತೇವೆಂದು ಹೇಳಿಕೊಳ್ಳುವುದು ಜನಸಾಮಾನ್ಯರನ್ನು ವಂಚಿಸುವ ಮಾತುಗಳೆಂದು ಯಾರಿಗೆ ತಿಳಿಯುವುದಿಲ್ಲ? ಅಸತ್ಯವನ್ನೇ ಸತ್ಯವೆಂದು ಕರೆದರೆ ಸತ್ಯವಾದಿಯಾಗುವನೇ? ಈ ಪ್ರಸಂಗದಲ್ಲಿ ಸತ್ಯ-ಮಿಥ್ಯಗಳ ಲಕ್ಷಣಗಳನ್ನು ಕೆಲಮಟ್ಟಿಗೆ ವಿವರಿಸುವುದು ಅವಶ್ಯಕವೆನಿಸುತ್ತದೆ.

ಸತ್ಯ-ಮಿಥ್ಯಾವಸ್ತುಗಳು ವಿರುದ್ಧ ಲಕ್ಷಣಗಳುಳ್ಳವು. ಮಿಥ್ಯೆಯಾದುದು ಪ್ರತೀತಿ ಕಾಲದಲ್ಲಿ ಮಾತ್ರ ಜನ್ಮವುಳ್ಳದ್ದು. ಹಗ್ಗವನ್ನು ನೋಡಿ ಸರ್ಪವೆಂದು

ಭ್ರಮಿಸುವ ಕಾಲದಲ್ಲಿ, ಹಗ್ಗದಲ್ಲಿ ತೋರಿದ ಸುಳ್ಳು ಸರ್ಪದ ಉತ್ಪತ್ತಿ-ಅದು ಹುತ್ತದಲ್ಲಿರುವ ಸರ್ಪವಲ್ಲ. ಈ ಸುಳ್ಳು ಸರ್ಪವು ಹಿಂದೆ ಇರಲಿಲ್ಲ. (ತೋರಿದ ಕಾಲಕ್ಕೆ ಹಿಂದೆ); ಮುಂದೆ ಇರುವುದಿಲ್ಲ; ಭ್ರಮಕಾಲದಲ್ಲಿ ಮಾತ್ರ ಇದ್ದಂತೆ ತೋರುತ್ತದೆ. ಅದು **ಉಪಾದಾನ ಮತ್ತು ನಿಮಿತ್ತ ಕಾರಣಗಳಿಂದ ಹುಟ್ಟಿದುದಲ್ಲ.** ಮಣ್ಣು (ಉಪಾದಾನ) ಮತ್ತು ಚಕ್ರ, ದಂಡ, ಕುಂಬಾರ ಇತ್ಯಾದಿ (ನಿಮಿತ್ತ) ಕಾರಣಗಳಿಂದ ಹುಟ್ಟುವುದು ಸತ್ಯವಾದ ಘಟ(ಗಡಿಗೆ). ಕಣ್ಣು ಮೊದಲಾದ ಇಂದ್ರಿಯಗಳ ದೋಷ, ಅತಿ ದೂರದಲ್ಲಿರುವಿಕೆ, ಅತಿ ಸಾಮೀಪ್ಯ, ಅತಿ ಸೂಕ್ಷ್ಮತ್ವ, ಇತ್ಯಾದಿ ದೋಷಗಳಿಂದ ಒಂದು ವಸ್ತುವನ್ನು ಕಂಡು ಅನ್ಯವಸ್ತುವೆಂಬ ಭ್ರಮ ಉಂಟಾಗುತ್ತದೆ. ಇದರಿಂದ ಮಿಥ್ಯೆಯಾದುದು ದೋಷಯುಕ್ತ ಪ್ರತ್ಯಕ್ಷಾದಿ ಜ್ಞಾನಕ್ಕೆ ಮಾತ್ರ ವಿಷಯವಾಗುವುದೆಂದು ತಿಳಿಯಬೇಕಾಗುವುದು. ಭ್ರಮೆಯು ಬಾಧಜ್ಞಾನವುಳ್ಳದು - ಎಂದರೆ, ಹತ್ತಿರ ಹೋಗಿ ನೋಡಿದಾಗ-ಇದು ಸರ್ಪವಲ್ಲ; ಹಗ್ಗವೇ ಎಂಬ ಜ್ಞಾನದಿಂದ ಸರ್ಪಜ್ಞಾನವು ಬಾಧಿತವಾಗುತ್ತದೆ. **ಮಿಥ್ಯಾವಸ್ತುವಿಗೆ ಅರ್ಥ ಕ್ರಿಯಾಕಾರಿತ್ವವಿಲ್ಲ.** ರಜ್ಜು ಸರ್ಪ ಕಚ್ಚಿ ಯಾರೂ ಸಾಯುವುದಿಲ್ಲ. ಭ್ರಮಕಾಲದಲ್ಲಿ ಉಂಟಾದ ಭಯಕಂಪಾದಿಗಳು ಸತ್ಯಸರ್ಪಜ್ಞಾನದಿಂದ ಆದುದಲ್ಲದೆ ರಜ್ಜುಸರ್ಪದಿಂದ ಅಲ್ಲ. ಸತ್ಯಸರ್ಪದ ''ಜ್ಞಾನವು'' ಸತ್ಯವೇ. ಸತ್ಯವಸ್ತುವು ಬಹುದೇಶಕಾಲ ಸಂಬಂಧವುಳ್ಳದ್ದು-ಉಪಾದಾನ ನಿಮಿತ್ತ ಕಾರಣಗಳಿಂದ ಜನ್ಯವಾದುದು. ನಿರ್ದುಷ್ಟವಾದ ಇಂದ್ರಿಯಗಳಿಂದ, ಅನ್ಯದೋಷಗಳಿಲ್ಲದಾಗ, ಇದ್ದಂತೆ ಗ್ರಹಿಸಲ್ಪಡುತ್ತದೆ; ಬಾಧಜ್ಞಾನರಹಿತವಾದುದು; ಅರ್ಥಕ್ರಿಯಾಕಾರಿಯಾದುದು; ಸತ್ಯವಾದ ಬೆಳ್ಳಿಯಿಂದ ಭೂಷಣಾದಿಗಳನ್ನು ಮಾಡಿಸುವಂತೆ ಶುಕ್ತಿ-ರಜತವನ್ನು ಉಪಯೋಗಿಸಲಾದೀತೆ? ಮಿಥ್ಯೆ ಎಂದರೆ ಅಸತ್ಯವೆಂದು ಹೇಳಿದಂತೆಯೇ ಸರಿ.

ಸತ್ಯೆ-ಮಿಥ್ಯೆಗಳೆರಡೂ ಒಂದೆಡೆ ಇರಲು ಶಕ್ಯವಿಲ್ಲ. ಸತ್ಯವೂ-ಅಸತ್ಯವೂ ಆದ (ಸದಸದ್ವಸ್ತುವಿಗೆ) ಯಾವ ದೃಷ್ಟಾಂತವೂ ಇಲ್ಲ. ಅಂತೆಯೇ, ರಜ್ಜು ಸರ್ಪವನ್ನು ಸದಸದ್ವಿಲಕ್ಷಣವೆನ್ನುತ್ತಾರೆ. ರಜ್ಜು - ಸರ್ಪ, ಶುಕ್ತಿ - ರಜತ-ಗಳಂತೆ ಜಗತ್ತು ಸಹ ಭ್ರಮಾತ್ಮಕವೆಂದು ಮಾಯಾವಾದಿಗಳು ಹೇಳುತ್ತಾರೆ.

ಉಳಿಯುತ್ತದೆ. ವಸ್ತುತಃ ಇಲ್ಲದ ಪ್ರಾತಿಭಾಸಿಕ ರಜತವು ಇಲ್ಲವೇ ಇಲ್ಲೆಂಬ ಯಥಾರ್ಥಜ್ಞಾನ ಹುಟ್ಟಿದೊಡನೆಯೇ (ಬಾಧಜ್ಞಾನದಿಂದ) ನಷ್ಟವಾಗುವಂತೆ, ಜೀವನು ತಾನೇ ಬ್ರಹ್ಮನೆಂಬ ಜ್ಞಾನದ ಸಾಕ್ಷಾತ್ಕಾರವನ್ನು ಹೊಂದಿದೊಡನೆಯೇ ವ್ಯಾವಹಾರಿಕ ಸತ್ಯಜಗತ್ತು ನಷ್ಟಹೊಂದುತ್ತದೆ - ಇಲ್ಲದಂತಾಗುತ್ತದೆ- ಬ್ರಹ್ಮನೊಬ್ಬನೇ ಉಳಿಯುತ್ತಾನೆ. ಏವಂಚ ಇಲ್ಲ - ಇರಲಿಲ್ಲ - ಇರುವುದಿಲ್ಲ ಎಂಬ ತ್ರಿವಿಧಜ್ಞಾನಕ್ಕೆ ವಿಷಯವಾಗುವಿಕೆಯೇ ಮಿಥ್ಯಾ ಎನಿಸುತ್ತದೆ. ಅದ್ವೈತಿಗಳ ಮಿಥ್ಯಾತ್ವ ಪರಿಷ್ಕಾರವು ಹೀಗೆಯೇ ಇದೆ ನಾಸ್ತಿ-ನಾಸೀನ್ನ ಭವಿಷ್ಯತಿ ಇತ್ಯಾಕಾರಕ ಜ್ಞಾನ ವಿಷಯತ್ವಂ ಮಿಥ್ಯಾತ್ವಂ - ಎಂದರೆ, ಶುಕ್ತಿಯಲ್ಲಿ ಕಂಡ ಬೆಳ್ಳಿಯು ಈಗಿಲ್ಲ (ಭ್ರಮರಹಿತರಿಗೆ ಕಾಣುವುದಿಲ್ಲ); ಹಿಂದಿರಲಿಲ್ಲ; ಮುಂದಿರುವುದಿಲ್ಲ (ಬಾಧಜ್ಞಾನೋತ್ತರ-ಕಾಲದಲ್ಲಿ ಇರುವುದಿಲ್ಲ); ಹೀಗಿದ್ದರೂ ಇದ್ದಂತೆ ತೋರಿತು. ಇದೇ ಮಿಥ್ಯಾ ವಸ್ತುಸ್ವರೂಪವು. ಮಿಥ್ಯಾ ಬೆಳ್ಳಿಯಂತೆ ಅಲ್ಪಕಾಲ ಮಾತ್ರವಿರುವ ಜಗತ್ತು ಬಹುಕಾಲಿಕ ಭ್ರಮೆಯು. ಸತ್ಯ ವಸ್ತುವಾಗಿದ್ದರೆ ಹೇಗೋ ಹಾಗೆ ವ್ಯವಹಾರಗಳಿಗೆ ಜಗದ್ಭ್ರಮೆಯು ಅವಕಾಶವನ್ನಿತ್ತಿರುತ್ತದೆ. ಆ ಭ್ರಮೆಯ ಪರಿಹಾರವು (ಬಾಧಜ್ಞಾನವು) ಐಕ್ಯಜ್ಞಾನದಿಂದಲೇ ಉಂಟಾಗುತ್ತದೆ. ಈ ಕಾರಣದಿಂದ ಇದನ್ನು ವ್ಯಾವಹಾರಿಕ ಸತ್ಯವೆಂದು ಕರೆಯಲಾಗುತ್ತದೆ. ಪ್ರಾತಿಭಾಸಿಕ ರಜತದಿಂದ ಯಾವ ವ್ಯವಹಾರಾದಿಗಳೂ ನಡೆಯುವುದಿಲ್ಲ. (ಆಭರಣಾದಿಗಳ ನಿರ್ಮಾಣಕ್ಕೆ ಉಪಯೋಗಿಸಲಾಗುವುದಿಲ್ಲ). ಮಾಯಾ-ವಾದಿಗಳ ಸತ್ಯತ್ವದ ಈ ವಿವರಣೆಗಳನ್ನು ಪರಿಶೀಲಿಸಿದರೆ ಜಗತ್ತನ್ನು ಅವರು ವ್ಯಾವಹಾರಿಕ ಸತ್ಯವೆಂದು ಕರೆಯುವುದು ಕೇವಲ ಸಾಂಕೇತಿಕವೆಂದು ತಿಳಿದುಬರುತ್ತದೆ. ಈ ಪಾರಿಭಾಷಿಕ ಶಬ್ದವನ್ನು ಪ್ರಯೋಗಿಸಿ ನಾವೂ ಜಗತ್ತನ್ನು ಸತ್ಯವೆಂದು ಅಂಗೀಕರಿಸುತ್ತೇವೆಂದು ಹೇಳಿಕೊಳ್ಳುವುದು ಜನಸಾಮಾನ್ಯರನ್ನು ವಂಚಿಸುವ ಮಾತುಗಳೆಂದು ಯಾರಿಗೆ ತಿಳಿಯುವುದಿಲ್ಲ? ಅಸತ್ಯವನ್ನೇ ಸತ್ಯವೆಂದು ಕರೆದರೆ ಸತ್ಯವಾದಿಯಾಗುವನೇ? ಈ ಪ್ರಸಂಗದಲ್ಲಿ ಸತ್ಯ-ಮಿಥ್ಯಗಳ ಲಕ್ಷಣಗಳನ್ನು ಕೆಲಮಟ್ಟಿಗೆ ವಿವರಿಸುವುದು ಅವಶ್ಯಕವೆನಿಸುತ್ತದೆ.

ಸತ್ಯ-ಮಿಥ್ಯಾವಸ್ತುಗಳು ವಿರುದ್ಧ ಲಕ್ಷಣಗಳುಳ್ಳವು. ಮಿಥ್ಯೆಯಾದುದು ಪ್ರತೀತಿ ಕಾಲದಲ್ಲಿ ಮಾತ್ರ ಜನ್ಮವುಳ್ಳದ್ದು. ಹಗ್ಗವನ್ನು ನೋಡಿ ಸರ್ಪವೆಂದು

ಭ್ರಮಿಸುವ ಕಾಲದಲ್ಲಿ, ಹಗ್ಗದಲ್ಲಿ ತೋರಿದ ಸುಳ್ಳು ಸರ್ಪದ ಉತ್ಪತ್ತಿ-ಅದು ಹುತ್ತದಲ್ಲಿರುವ ಸರ್ಪವಲ್ಲ. ಈ ಸುಳ್ಳು ಸರ್ಪವು ಹಿಂದೆ ಇರಲಿಲ್ಲ. (ತೋರಿದ ಕಾಲಕ್ಕೆ ಹಿಂದೆ); ಮುಂದೆ ಇರುವುದಿಲ್ಲ; ಭ್ರಮಕಾಲದಲ್ಲಿ ಮಾತ್ರ ಇದ್ದಂತೆ ತೋರುತ್ತದೆ. ಅದು **ಉಪಾದಾನ ಮತ್ತು ನಿಮಿತ್ತ ಕಾರಣಗಳಿಂದ ಹುಟ್ಟಿದುದಲ್ಲ.** ಮಣ್ಣು (ಉಪಾದಾನ) ಮತ್ತು ಚಕ್ರ, ದಂಡ, ಕುಂಬಾರ ಇತ್ಯಾದಿ (ನಿಮಿತ್ತ) ಕಾರಣಗಳಿಂದ ಹುಟ್ಟುವುದು ಸತ್ಯವಾದ ಘಟ(ಗಡಿಗೆ). ಕಣ್ಣು ಮೊದಲಾದ ಇಂದ್ರಿಯಗಳ ದೋಷ, ಅತಿ ದೂರದಲ್ಲಿರುವಿಕೆ, ಅತಿ ಸಾಮೀಪ್ಯ, ಅತಿ ಸೂಕ್ಷ್ಮತ್ವ, ಇತ್ಯಾದಿ ದೋಷಗಳಿಂದ ಒಂದು ವಸ್ತುವನ್ನು ಕಂಡು ಅನ್ಯವಸ್ತುವೆಂಬ ಭ್ರಮ ಉಂಟಾಗುತ್ತದೆ. ಇದರಿಂದ ಮಿಥ್ಯೆಯಾದುದು ದೋಷಯುಕ್ತ ಪ್ರತ್ಯಕ್ಷಾದಿ ಜ್ಞಾನಕ್ಕೆ ಮಾತ್ರ ವಿಷಯವಾಗುವುದೆಂದು ತಿಳಿಯಬೇಕಾಗುವುದು. ಭ್ರಮೆಯು ಬಾಧಜ್ಞಾನವುಳ್ಳದು - ಎಂದರೆ, ಹತ್ತಿರ ಹೋಗಿ ನೋಡಿದಾಗ-ಇದು ಸರ್ಪವಲ್ಲ; ಹಗ್ಗವೇ ಎಂಬ ಜ್ಞಾನದಿಂದ ಸರ್ಪಜ್ಞಾನವು ಬಾಧಿತವಾಗುತ್ತದೆ. **ಮಿಥ್ಯಾವಸ್ತುವಿಗೆ ಅರ್ಥ ಕ್ರಿಯಾಕಾರಿತ್ವವಿಲ್ಲ.** ರಜ್ಜು ಸರ್ಪ ಕಚ್ಚಿ ಯಾರೂ ಸಾಯುವುದಿಲ್ಲ. ಭ್ರಮಕಾಲದಲ್ಲಿ ಉಂಟಾದ ಭಯಕಂಪಾದಿಗಳು ಸತ್ಯಸರ್ಪಜ್ಞಾನದಿಂದ ಆದುದಲ್ಲದೆ ರಜ್ಜುಸರ್ಪದಿಂದ ಅಲ್ಲ. ಸತ್ಯಸರ್ಪದ ''ಜ್ಞಾನವು'' ಸತ್ಯವೇ. ಸತ್ಯವಸ್ತುವು ಬಹುದೇಶಕಾಲ ಸಂಬಂಧವುಳ್ಳದ್ದು-ಉಪಾದಾನ ನಿಮಿತ್ತ ಕಾರಣಗಳಿಂದ ಜನ್ಯವಾದುದು. ನಿರ್ದುಷ್ಟವಾದ ಇಂದ್ರಿಯಗಳಿಂದ, ಅನ್ಯದೋಷಗಳಿಲ್ಲದಾಗ, ಇದ್ದಂತೆ ಗ್ರಹಿಸಲ್ಪಡುತ್ತದೆ; ಬಾಧಜ್ಞಾನರಹಿತವಾದುದು; ಅರ್ಥಕ್ರಿಯಾಕಾರಿಯಾದುದು; ಸತ್ಯವಾದ ಬೆಳ್ಳಿಯಿಂದ ಭೂಷಣಾದಿಗಳನ್ನು ಮಾಡಿಸುವಂತೆ ಶುಕ್ತಿ-ರಜತವನ್ನು ಉಪಯೋಗಿಸಲಾದೀತೆ? ಮಿಥ್ಯೆ ಎಂದರೆ ಅಸತ್ಯವೆಂದು ಹೇಳಿದಂತೆಯೇ ಸರಿ.

ಸತ್ಯೆ-ಮಿಥ್ಯೆಗಳೆರಡೂ ಒಂದೆಡೆ ಇರಲು ಶಕ್ಯವಿಲ್ಲ. ಸತ್ಯವೂ-ಅಸತ್ಯವೂ ಆದ (ಸದಸದ್ವಸ್ತುವಿಗೆ) ಯಾವ ದೃಷ್ಟಾಂತವೂ ಇಲ್ಲ. ಅಂತೆಯೇ, ರಜ್ಜು ಸರ್ಪವನ್ನು ಸದಸದ್ವಿಲಕ್ಷಣವೆನ್ನುತ್ತಾರೆ. ರಜ್ಜು - ಸರ್ಪ, ಶುಕ್ತಿ - ರಜತ-ಗಳಂತೆ ಜಗತ್ತು ಸಹ ಭ್ರಮಾತ್ಮಕವೆಂದು ಮಾಯಾವಾದಿಗಳು ಹೇಳುತ್ತಾರೆ.

ಭ್ರಮ-ಕಾಲದಲ್ಲಿ ತೋರುತ್ತದೆಂಬ ಜಗತ್ತನ್ನು ಸದಸದ್ವಿಲಕ್ಷಣವೆನ್ನಲಿ (ಸತ್ಯ-ದಿಂದ ಭಿನ್ನ), ಅಸದ್ವಿಲಕ್ಷಣವೆನ್ನಲಿ, ಸದ್ವಿಲಕ್ಷಣದಿಂದ ಕೂಡಿದ ಅಸದ್ವಿ-ಲಕ್ಷಣವೆನ್ನಲಿ, ಅಥವಾ ಸದಸತ್ತುಗಳೆರಡಕ್ಕೂ ಆಶ್ರಯವಲ್ಲದ್ದೆನ್ನಲಿ, ವ್ಯಾವಹಾರಿಕ ಸತ್ಯವೆನ್ನಲಿ - ಏನೇ ಹೇಳಿದರೂ ಈ ಯಾವ ನಿರೂಪಣೆಯೂ ಯುಕ್ತಿ ವಿಮರ್ಶೆಯನ್ನು ಎದುರಿಸಿ ನಿಲ್ಲಲಾರದು. ಆದುದರಿಂದ ಜಗತ್ತು ಮಿಥ್ಯೆ-ಯೆಂದರೆ, ಮೊಲದ ಕೊಂಬು-ಗಗನ ಪುಷ್ಪಗಳಂತೆ ಅತ್ಯಂತ ಅಸತ್ತೆಂದೇ (ಎಂದೂ ಯಾವ ಕಾಲದಲ್ಲಿಯೂ ಇರದ ಸುಳ್ಳು ವಸ್ತುವೆಂದೇ) ಮಾಯಾವಾದಿಗಳ ಅಭಿಪ್ರಾಯವೆಂದು ಏರ್ಪಡುತ್ತದೆ. ಇದನ್ನೇ ವ್ಯಾವಹಾರಿಕ ಸತ್ಯವೆಂದು ಕರೆಯುವುದು, ತಮಗೂ ಜಗತ್ತು ಸತ್ಯವೆಂದು ಹೇಳಿಕೊಳ್ಳುವ ಸೋಗು ಮಾತ್ರ-ವಂಚನೆಯ ಮಾತು.

ನಿತ್ಯವಸ್ತು (ಭೂತ, ವರ್ತಮಾನ, ಭವಿಷ್ಯತ್ಕಾಲಗಳಲ್ಲಿರುವುದು) ಸತ್ಯವಾದುದು. ಆದರೆ ಸತ್ಯವಸ್ತುಗಳೆಲ್ಲವೂ ನಿತ್ಯವಾಗಿರಬೇಕೆಂಬ ನಿಯಮ-ವಿಲ್ಲ. ಅಲ್ಪಕಾಲ ಮಾತ್ರ ಇದ್ದು, ಹಿಂದೆ ಇರದೆ, ಉತ್ಪತ್ತಿಯುಳ್ಳ ಎಷ್ಟೋ ವಸ್ತುಗಳು ನಾಶಹೊಂದುವುದನ್ನು ಕಾಣುತ್ತೇವೆ. ಅವೆಲ್ಲವೂ ಮಿಥ್ಯಾಜ್ಞಾನದಿಂದ ಹುಟ್ಟಿ, ಬಾಧಜ್ಞಾನದಿಂದ ನಷ್ಟಹೊಂದಿದವುಗಳಲ್ಲ. ಯಾವುದೇ ವಸ್ತುವಾಗಲಿ ಸತ್ಯ-ವಾಗಿರಬೇಕು ಅಥವಾ ಸುಳ್ಳಾಗಿರಬೇಕು - ಎರಡೂ ಆದುದು ಎಲ್ಲಿಯೂ ಇಲ್ಲ-ಎರಡೂ ಅಲ್ಲದುದು ಸಹ ಎಲ್ಲಿಯೂ ಇಲ್ಲ. ಆದುದರಿಂದ ಸದಸದ್ವಿಲಕ್ಷಣ. ವಿಲಕ್ಷಣವಿಲಕ್ಷಣ ಇತ್ಯಾದಿ ಪ್ರಕಾರಾಂತರದಿಂದ ನಿರೂಪಿಸಬಹುದಾದ ವಸ್ತು ಇರುತ್ತದೆಂಬುದು ದೂರವೇ ಉಳಿಯಿತು (ಅಸಂಭಾವಿತವೇ ಸರಿ).

ಜಗತ್ಸತ್ಯತ್ವವನ್ನು ಸಾರುವ ಅನೇಕ ನಿರವಕಾಶ ಶ್ರುತಿವಾಕ್ಯಗಳಿವೆ-ಸ್ಮೃತಿ-ವಾಕ್ಯಗಳೂ ಹೇರಳವಾಗಿವೆ. ಮುಕ್ತರೂ ಸಹ ಜಗತ್ತನ್ನು ನೋಡುವರೆಂದು ಶ್ರುತಿಗಳೇ ಹೇಳುತ್ತವೆ. ಬಂಧಜ್ಞಾನವೆಂಬುದು ಯಾವ ಕಾಲಕ್ಕೂ ಇಲ್ಲದ ಪ್ರಯುಕ್ತ ಜಗತ್ತು ಸತ್ಯ. ಪ್ರಳಯಕಾಲದಲ್ಲಿ ಪ್ರಾಕೃತ ಸಕಲ ವಸ್ತುಗಳೂ ಸೂಕ್ಷ್ಮರೂಪದಿಂದ ಮೂಲಕಾರಣದಲ್ಲಿ ಸೇರುತ್ತವೆಯಲ್ಲದೆ ವಿನಾಶ-ಹೊಂದುವುದಿಲ್ಲ.[46]

46. (1) 'ಯಚ್ಚಿಕೇತ ಸತ್ಯಮಿತ್ತನ್ನಮೋಘಂ' ಸ್ಪಷ್ಟವಾದ ಜಗತ್ತೆಲ್ಲವೂ ಸತ್ಯವೇ; ಸುಳ್ಳಲ್ಲ. (2) 'ವಿಶ್ವಂ ಸತ್ಯಂ ಮಘವಾನಾ' ಇಂದ್ರ ಬೃಹಸ್ಪತಿಗಳೇ, ನೀವು ಪಾಲಿಸುವ ಜಗತ್ತೆಲ್ಲವೂ ಸತ್ಯವಾದುದು.

ಜಗತ್ತಿನಲ್ಲಿ ಭ್ರಮಕಾಲದಲ್ಲಿ ತೋರುವ ರಜ್ಜುಸರ್ಪಾದಿಗಳ ಲಕ್ಷಣ-ಗಳಾವುವೂ ಇಲ್ಲ. ಎರಡು ಸತ್ಯವಸ್ತುಗಳು ಮತ್ತು ಅವುಗಳಲ್ಲಿ ಪರಸ್ಪರ ಸಾದೃಶ್ಯವಿರದ ವಿನಾ ಭ್ರಮಜ್ಞಾನವೇ ಹುಟ್ಟುವುದಿಲ್ಲ. ಹಗ್ಗ(ಅಧಿಷ್ಠಾನ) ಮತ್ತು ಸರ್ಪ (ಪ್ರಧಾನ) ಇವೆರಡೂ ಸತ್ಯವಾಗಿದ್ದು ಇವುಗಳಲ್ಲಿ ಸಾದೃಶ್ಯ-ಎಂದರೆ, ಡೊಂಕಾಗಿರುವುದು ಮೊದಲಾದ ಸಮಾನ ಲಕ್ಷಣವಿದ್ದರೆ ಮಾತ್ರ ಹಗ್ಗವನ್ನು ಕಂಡು ಸರ್ಪವೆಂಬ ಭ್ರಮೆಯುಂಟಾಗಬಹುದು. ಸತ್ಯವಾದ ಸರ್ಪದ ಜ್ಞಾನವೇ ಇಲ್ಲದವನಿಗೆ ರಜ್ಜುವಿನಲ್ಲಿ ಸರ್ಪಭ್ರಮೆಯೇ ಹುಟ್ಟುವುದಿಲ್ಲ. ಜಗತ್ತು, ಆತ್ಮ (ಬ್ರಹ್ಮ)ನಲ್ಲಿ ಆರೋಪಿತವಾಗಿ ಇಲ್ಲದ್ದು ಇದ್ದಂತೆ ತೋರುವ ಮಿಥ್ಯಾವಸ್ತುವೆಂದು ಸಿದ್ಧವಾಗಬೇಕಾದರೆ ಸತ್ಯವಾದ ಬೇರೊಂದು ಜಗತ್ತು ಇರಬೇಕು. ಅದರ ಜ್ಞಾನವಿರಬೇಕು. ಅಲ್ಲದೆ ಅಧಿಷ್ಠಾನನಾದ ಬ್ರಹ್ಮನಿಗೂ ಸತ್ಯಜಗತ್ತಿಗೂ (ಪ್ರಧಾನಕ್ಕೂ) ಸಾದೃಶ್ಯವಿರಬೇಕು.[47] ಆತ್ಮನಲ್ಲಿ ಅನಾತ್ಮದ (ಜಡದ) ಮತ್ತು ಶಶ್ವದೇಕ ಪ್ರಕಾರದ (ಅಖಂಡ) ಬ್ರಹ್ಮನಲ್ಲಿ ನಾನಾತ್ವವುಳ್ಳ (ಅನಂತ ವಿವಿಧ ವಸ್ತುಗಳುಳ್ಳ) ಜಗತ್ತಿನ ಆರೋಪವು ಕೂಡುವುದಿಲ್ಲ.

(3) 'ಅನಾದ್ಯನಂತಂ ಜಗದೇತದೀದೃಕ್ ಪ್ರವರ್ತತೇ ನಾತ್ರ ವಿಚಾರ್ಯಮಸ್ತಿ । ನ ಚಾನ್ಯಥಾ ಕ್ವಾಪಿ ಚ ತಸ್ಯ ಚೇದಮಭೂತ್ಪುರಾ ನಾಪಿ ತಥಾಭವಿಷ್ಯತ್ ॥' (ಋಗ್ವೇದ)-ಆದ್ಯಂತಗಳಿಲ್ಲದ ಪ್ರವಾಹದಂತೆ, ಈ ಜಗತ್ತು ಪ್ರತಿ ಕಲ್ಪದಲ್ಲಿಯೂ ಇರುತ್ತದೆ-ವಿಚಾರ ಮಾಡುವ ಕಾರಣವಿಲ್ಲ. ಹೀಗೆಂಬುದು ನಿಶ್ಚಯ, ಸಂದೇಹಕ್ಕೆ ಎಡೆಯಿಲ್ಲ. ಈ ಜಗತ್ತು ಯಾವ ದೇಶ ಕಾಲಗಳಲ್ಲಿಯೂ ಯಾವ ಪುರುಷನಿಗೂ ಅನ್ಯಥಾ ಆಗಿಲ್ಲ (ಬೇರೆ ಪ್ರಕಾರವಾಗಿ ಕಂಡಿಲ್ಲ-ಬಾಧಿತವಾಗಿಲ್ಲ) ಪೂರ್ವದಲ್ಲಿ ಎಂದಿಗೂ ಬಾಧಿತವಾಗಿಲ್ಲ-ಭವಿಷ್ಯತ್ಕಾಲದಲ್ಲಿ ಆಗುವುದೂ ಇಲ್ಲ.

(4) 'ಕವಿರ್ಮನೀಷೀ ಪರಿಭೂಃ ಸ್ವಯಂಭೂಃ ಯಥಾತಥ್ಯತೋರ್ಥಾನ್ ವ್ಯದಧಾಚ್ಛಾಶ್ವತೀಭ್ಯಸ್ಸಮಾಭ್ಯಃ' (ಈಶಾವಾಸ್ಯ) – ಸರ್ವಜ್ಞನೂ, ಸರ್ವಪ್ರೇರಕನೂ, ಸರ್ವವನ್ನೂ ವಶದಲ್ಲಿಟ್ಟುಕೊಂಡಿರುವವನೂ, ಸ್ವತಂತ್ರನೂ ಆದ ಈಶ್ವರನು, ಯಥಾರ್ಥವಾಗಿರುವ (ಸತ್ಯವಾದ) ವಸ್ತುಗಳನ್ನು ನಿರ್ಮಾಣ ಮಾಡಿದನು.

47. 'ಅಧಿಷ್ಠಾನಂ ಚ ಸದೃಶಂ ತಥ್ಯವಸ್ತುದ್ವಯಂ ವಿನಾ । ನ ಭ್ರಾಂತಿರ್ಭವತಿ ಕ್ವಾಪಿ ಸ್ವಪ್ನ ಮಾಯಾದಿಕೇಷ್ವಪಿ ॥' ಸ್ವಪ್ನದಲ್ಲಿ ಮತ್ತು ಇಂದ್ರಜಾಲ ನಿರ್ಮಿತ ವಸ್ತು ಮೊದಲಾದವು-ಗಳಲ್ಲಿ ಸಹ ಅಧಿಷ್ಠಾನ ಮತ್ತು ಪ್ರಧಾನಗಳೆಂಬ ಎರಡು ಸತ್ಯ ವಸ್ತುಗಳು ಮತ್ತು ಅವುಗಳಲ್ಲಿ ಸಾದೃಶ್ಯವೂ ಇಲ್ಲದಿದ್ದರೆ ಭ್ರಾಂತಿ ಎಂಬುದು ಎಲ್ಲಿಯೂ ಕಂಡಿಲ್ಲ-(ತತ್ವನಿರ್ಣಯ)

ಜಗತ್ತು ಜೀವ ಜಡ ಉಭಯಾತ್ಮಕವಾದುದಷ್ಟೆ! ಜಡಜಗತ್ತಿನ ಆರೋಪವು ಬ್ರಹ್ಮನಲ್ಲಿ ಅಯುಕ್ತವಾಗಲಿ; ಜೀವಚೇತನರೆಂಬುವರು ಬ್ರಹ್ಮನಲ್ಲಿ ಆರೋಪಿತ-ರಾದ ಚೇತನರೇಕೆ ಆಗಿರಬಾರದು? ಎಂಬ ಸಂಶಯವನ್ನು ವಿಮರ್ಶಿಸೋಣ.

ಈ ಹಿಂದೆ ಹೇಳಿದಂತೆ ಅವಿದ್ಯಾವೃತ ಬ್ರಹ್ಮನೇ ಜೀವನು-ಬ್ರಹ್ಮನ ಪ್ರತಿಬಿಂಬನು. ಅವಿದ್ಯೆಯೇ ಉಪಾದಾನವಾಗಿವುಳ್ಳ, ಆದರೂ ಮಿಥ್ಯಾ ಭೂತವಾದ, ಅಹಂಕಾರವೆಂಬ ದ್ರವ್ಯವು ಪ್ರತಿಬಿಂಬನಾದ ಜೀವನಲ್ಲಿ ಆರೋಪಿತವಾಗುತ್ತದೆ. ಈ ಅಹಂಕಾರದ ಧರ್ಮಗಳಾದ ಕರ್ತೃತ್ವ ಭೋಕ್ತೃತ್ವಾದಿಗಳು ಜೀವನಲ್ಲಿ ಆರೋಪಿತವಾಗಿ, ಈ ಆರೋಪಿತ ದ್ರವ್ಯಗಳನ್ನು ನೋಡುವ ಪ್ರತ್ಯಗಾತ್ಮನು (ಬ್ರಹ್ಮಪ್ರತಿಬಿಂಬನು) ಒಬ್ಬನೇ. ಆತನಿಗೆ ನಿಷ್ಕಾಮ ಕರ್ಮಾದಿಗಳಿಂದ ಬ್ರಹ್ಮೈಕ್ಯ ಜ್ಞಾನವಾದೊಡನೆಯೇ ಅವನಿಂದ ಕಲ್ಪಿತರಾದ ಇತರ ಎಲ್ಲ ಜೀವರೊಂದಿಗೆ ಮುಕ್ತನಾಗುತ್ತಾನೆ. ಜೀವನು ಒಬ್ಬನೇ. ಇತರರೆಲ್ಲರೂ ಅವನ ಅಜ್ಞಾನದಿಂದ ಕಲ್ಪಿತರೆಂಬುದು ಏಕಜೀವವಾದಿಗಳ ಮತ. ಈ ವಾದದಲ್ಲಿ ತೋರುವ ಅನುಪಪತ್ತಿಗಳನ್ನು ಪರಿಹರಿಸಿಕೊಳ್ಳಲು ಬಹುಜೀವವಾದಿಗಳು ಹೀಗೆ ಸಿದ್ಧಾಂತಿಸುತ್ತಾರೆ :- ಅಜ್ಞಾನಜನ್ಯವಾದ ಮಿಥ್ಯಾ ಉಪಾಧಿಯು ಅಂತಃಕರಣಾದಿ (ದೇಹೇಂದ್ರಿಯಾದಿ) ಬಹು ರೂಪಗಳುಳ್ಳದ್ದು. ಉಪಾಧಿಗಳು ಅಸಂಖ್ಯ. ಬ್ರಹ್ಮನೆಂಬ ಒಂದೇ ಬಿಂಬವು ಈ ಅಸಂಖ್ಯಾತ ಉಪಾಧಿಗಳಲ್ಲಿ ಭಿನ್ನಭಿನ್ನ ಅನೇಕ ಜೀವಭಾವವನ್ನು ಹೊಂದುತ್ತದೆ. ಉಪಾಧಿಯಿಂದ ಜೀವಭಾವವನ್ನು ಹೊಂದಿದ ಬ್ರಹ್ಮನು ಅಜ್ಞಾನವುಳ್ಳವನಾಗಿರುತ್ತಾನೆ.

ಅಜ್ಞಾನದಿಂದ ಉಪಾಧಿಯೂ, ಉಪಾಧಿಯಿಂದ ಅಜ್ಞಾನವೂ ಹುಟ್ಟುತ್ತದೆಂದು ಹೇಳುವ ಈ ವಾದದಲ್ಲಿ ಅನ್ಯೋನ್ಯಾಶ್ರಯ ದೋಷವು ಸ್ಪಷ್ಟವಾಗಿದ್ದರೂ, ಬೀಜವೃಕ್ಷ ನ್ಯಾಯದಂತೆ (ಬೀಜದಿಂದ ವೃಕ್ಷವೂ-ವೃಕ್ಷದಿಂದ ಬೀಜವೂ ಹುಟ್ಟುವಂತೆ) ಪರಿಹರಿಸಿಕೊಳ್ಳಬೇಕೆಂದು ಹೇಳಲಾಗುತ್ತದೆ. ಆದರೆ, (ಮಿಥ್ಯಾಭೂತವಾದ) ಅಜ್ಞಾನದಿಂದ ಉಪಾಧಿಯೂ, ಉಪಾಧಿ-ಯಿಂದ ಜೀವಬ್ರಹ್ಮ ಭೇದವೂ, ಭಿನ್ನನಾದ ಜೀವನಲ್ಲಿ ಅಜ್ಞಾನವೂ ಎಂದು ಹೇಳುವುದರಿಂದ ಚಕ್ರಕಾಪತ್ತಿ ಮೊದಲಾದ ಇತರ ಯುಕ್ತಿದೋಷಗಳು, ಅನಿವಾರ್ಯವೂ ಅಪರಿಹಾರ್ಯವೂ ಆಗುತ್ತವೆ. ಮಾಯಾವಾದಿಗಳು ಜೀವಜಡಗಳಲ್ಲಿ ಪರಸ್ಪರ ತೋರುವ ಭೇದವೂ ಸಹ ಮಿಥ್ಯೆ ಎಂದೇ ಹೇಳುತ್ತಾರೆ.

ಈ ಭೇದವು ಉಪಾಧಿಕೃತವೆಂದೂ, ಉಪಾಧಿಯು ಸಹ ಮಿಥ್ಯೆಯೆಂದೂ ನಿರೂಪಿಸುತ್ತಾರೆ. ಉಪಾಧಿಯು ಸತ್ಯವೆಂದೊಪ್ಪಿದರೆ ಬ್ರಹ್ಮ ಒಂದೇ ಸತ್ಯವೆಂಬ ಅವರ ಸಿದ್ಧಾಂತಕ್ಕೆ ಹಾನಿಯು. ಬ್ರಹ್ಮನಿಗೆ ಉಪಾಧಿ ಸಂಬಂಧದಿಂದ ಅಲ್ಪಜ್ಞತ್ವಾದಿ ಧರ್ಮಗಳುಳ್ಳ ಜೀವತ್ವ ಪ್ರಾಪ್ತವಾಗುವುದಾದರೆ, ಉಪಾಧಿಗೆ ಕಾರಣವೆಂಬ ಅಜ್ಞಾನವೂ ಮಿಥ್ಯೆ ಎಂದು ಹೇಳುವುದರಿಂದ, ಯಾವ ಯುಕ್ತಿಗೂ ಪ್ರಮಾಣಕ್ಕೂ ನಿಲುಕದ ಅವರ ಈ ಅಜ್ಞಾನವು ಅತ್ಯಂತ ಅಸಂಭಾವಿತವಾಗುತ್ತದೆ. ಪ್ರತ್ಯಕ್ಷದಿಂದಲೂ, ನಿರ್ದುಷ್ಟ ಅನುಮಾನಗಳಿಂದಲೂ, ಈ ಹಿಂದೆ ಉದಹರಿಸಲಾದ ಮತ್ತು ಇತರ ಆಗಮಗಳಿಂದಲೂ, ಜೀವಜಡಗಳ ಭೇದವೂ, ಇವುಗಳಿಂದ ಅತ್ಯಂತ ಭಿನ್ನನಾದ ಈಶ್ವರನು ಸಹ ಸಿದ್ಧವಾಗುತ್ತವೆ. ಹೀಗಿದ್ದರೂ ಮಾಯಾವಾದವು, ಜೀವಬ್ರಹ್ಮೈಕ್ಯವನ್ನೂ, ಪ್ರಪಂಚ ಮಿಥ್ಯಾತ್ವವನ್ನೂ, ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಸಾಧಿಸುವುದು ದುಸ್ಸಾಧ್ಯವೆಂದು ತಿಳಿದು ಆಪಾತತಃ ಹಾಗೆ ಹೇಳುವಂತೆ ತೋರುವ ಕೆಲವು ಆಗಮ ವಾಕ್ಯಗಳನ್ನು ಮುಂದೆ ಮಾಡಿ, ಅನ್ಯಾರ್ಥಕ್ಕೆ ಅವಕಾಶವಿಲ್ಲದಂತೆ ಜಗತ್ತು - ಜೀವ - ಬ್ರಹ್ಮರಲ್ಲಿರುವ ನಿತ್ಯ ಭೇದ ಮತ್ತು ತಾರತಮ್ಯಗಳನ್ನು ಘೋಷಿಸುವ ಆಗಮ ವೃಂದವನ್ನೇ ತಳ್ಳಿ ಹಾಕಿ, ಅವು ಹೇಳುವ ಭೇದಗಳೆಲ್ಲವೂ ವ್ಯಾವಹಾರಿಕವೆಂದು ಕಲ್ಪಿಸಿ,[48] ತನ್ನ ಸಿದ್ಧಾಂತವನ್ನು ರೂಪಿಸಿಕೊಂಡಿದೆ. ಈ ಮತದ ಖಂಡನೆಯನ್ನು ವಿಸ್ತರಿಸುವುದು ಈ ಗ್ರಂಥದ ಉದ್ದೇಶವಲ್ಲದಿದ್ದಾಗ್ಯೂ ಪಂಚಭೇದ, ತಾರತಮ್ಯ ಮತ್ತು ವಿಷ್ಣುಸರ್ವೋತ್ತಮತ್ವಾದಿ ಆಗಮೋಕ್ತ ಸಿದ್ಧಾಂತಗಳನ್ನು ಪ್ರತಿಪಾದಿಸುವುದು (ತತ್ತ್ವವಾದದ) ಗುರಿಯಾದುದರಿಂದ ವಿಚಾರಶೀಲರಾದ ವಿವೇಕಿಗಳಿಗೆ ಲೋಕಾನುಭವ ಮತ್ತು ಸದ್ಯುಕ್ತಿಗಳಿಂದ ಅದ್ವೈತವಾದವು ವೇದಸಮ್ಮತವಲ್ಲೆಂದು ತಿಳಿಯಬಹುದಾದ ಮಟ್ಟಿಗೆ ಸಂಗ್ರಹವಾಗಿ ನಿರೂಪಿಸುವುದು ಅವಶ್ಯಕವೆಂದು ಭಾವಿಸಿ ಈ ಮುಂದಿನ ಪ್ರಧಾನ ಖಂಡನ ಪ್ರಕಾರಗಳನ್ನು ವಿವರಿಸಲಾಗಿದೆ.

48. ವ್ಯಾವಹಾರಿಕ ಸತ್ಯತ್ವವೆಂಬುದು ಅಸತ್ಯವೆಂದೇ ಈ ಹಿಂದೆ ಪ್ರತಿಪಾದಿಸಲಾಗಿದೆ. ಅದರಂತೆಯೇ ವ್ಯಾವಹಾರಿಕ ಭೇದವೆಂದರೆ ಸುಳ್ಳು ಭೇದವೆಂದೇ ಅರ್ಥ. ಈ ಸುಳ್ಳಾದ ಭೇದವನ್ನು ಪ್ರತಿಪಾದಿಸುವ ಆಗಮಗಳು ಅಪ್ರಮಾಣಗಳೆಂದು ಹೇಳಿದಂತಾಗುತ್ತದೆ. ವೇದಪ್ರಾಮಾಣ್ಯವನ್ನು ಅಂಗೀಕರಿಸುವೆವೆಂದು ಹೇಳುವ ಈ ವಾದಿಗಳು ಲೋಕ ವಂಚನೆಗೆ ಮಾತ್ರ ಹೀಗೆ ಹೇಳಿದಂತಾಗುವುದಿಲ್ಲವೇ?

ಅದ್ವೈತವು ಜೀವಬ್ರಹ್ಮೈಕ್ಯವನ್ನು ಸಾಧಿಸುತ್ತವೆಂದು ಕೆಲವು ಶ್ರುತಿ ವಾಕ್ಯಗಳನ್ನು ಆರಿಸಿಕೊಂಡು ಅವುಗಳನ್ನು ಮಹಾವಾಕ್ಯಗಳೆಂದು ಕರೆದಿದ್ದಾರೆ. ವೇದವಾಕ್ಯಗಳೆಲ್ಲವೂ ಪರಮ ಪ್ರಮಾಣಗಳು. ಅವುಗಳಲ್ಲಿ ಮಹಾವಾಕ್ಯ-ಅಲ್ಪವಾಕ್ಯ ಅಥವಾ ಸತ್ಯವನ್ನು ಹೇಳುವ-ವ್ಯಾವಹಾರಿಕ ಸತ್ಯವನ್ನು ಹೇಳುವ ಎಂಬ ಯಾವ ವಿಶೇಷವೂ ಇಲ್ಲ. ವೇದಾರ್ಥ ನಿರ್ಣಯಗಳನ್ನು ನಿರೂಪಿಸುವ ಬ್ರಹ್ಮಸೂತ್ರಗಳಲ್ಲಿ ಸಹ ಜೀವ ಬ್ರಹ್ಮೈಕ್ಯ ಸಾಧನೆಗೆ ಯಾವ ಬೆಂಬಲವೂ ದೊರಕುವುದಿಲ್ಲ. ಬ್ರಹ್ಮಸೂತ್ರಗಳಲ್ಲಿ ಮತ್ತು ಶ್ರೀಮದ್ಭಗವದ್ಗೀತೆಯಲ್ಲಿ ಸಹ ಕೆಲವು ವಾಕ್ಯಗಳನ್ನು ಅದ್ವೈತವು ತೆಗೆದುಕೊಂಡು ಅವು ತಮ್ಮ ಸಿದ್ಧಾಂತವನ್ನು ಸಾಧಿಸುತ್ತವೆನ್ನುತ್ತಾರೆ. ಈ ಕೆಲವಾರು ವಾಕ್ಯಗಳನ್ನು ಬಿಟ್ಟರೆ ಸಮಗ್ರ ಶ್ರುತಿಗಳೂ ಸೂತ್ರಗಳೂ ಮತ್ತಿತರ ಸ್ಮೃತಿಗಳೂ ಜೀವಬ್ರಹ್ಮರ ಭೇದವನ್ನೇ ಪ್ರತಿಪಾದಿಸುತ್ತವೆಂದು ಈ ಮತಸ್ಥಾಪನಾಚಾರ್ಯರೂ ಅವರ ಭಾಷ್ಯಾದಿ ಗ್ರಂಥಗಳ ವ್ಯಾಖ್ಯಾನಕಾರರೂ ಒಪ್ಪಿರುತ್ತಾರೆ. ಮಹಾವಾಕ್ಯಗಳೆಂದು ಅದ್ವೈತವು ಮುಂದಿಡುವ ಶ್ರುತ್ಯಾದಿಗಳು ಜೀವಬ್ರಹ್ಮರಿಗೆ ಅಭೇದವನ್ನು ಹೇಳುವುವೋ, ಅಥವಾ ಭೇದವನ್ನೇ ಹೇಳುವ ನಿರವಕಾಶ ಆಗಮವಾಕ್ಯಗಳಿಗೆ ಅನುಸಾರವಾದ ಭೇದಪರವಾದ ಅರ್ಥವನ್ನೇ ಹೇಳುತ್ತವೆಯೋ ಎಂಬುದನ್ನು ಪರೀಕ್ಷಿಸಲು, ಮಾದರಿಗಾಗಿ ಅವುಗಳಲ್ಲಿ ಕೆಲವು ವಾಕ್ಯಗಳ ಅರ್ಥ ನಿರ್ಣಯ ಪ್ರಕಾರವನ್ನು ಈ ಮುಂದೆ ವಿವರಿಸಲಾಗುತ್ತದೆ. ಅದ್ವೈತವು ತಮ್ಮ ಸಿದ್ಧಾಂತಕ್ಕೆ ಸಾಧಕವೆಂದು ಉದಹರಿಸುವ ವಾಕ್ಯಗಳಾವುವೆಂದರೆ :-

೧. ಸ ಆತ್ಮಾ ತತ್ತ್ವಮಸಿ (ಛಾಂದೋಗ್ಯ). ೨. ಅಹಂ ಬ್ರಹ್ಮಾಸ್ಮಿ (ಬೃಹದಾರಣ್ಯ). ೩. ಏಕಮೇವಾದ್ವಿತೀಯಂ (ಛಾಂದೋಗ್ಯ). ೪. ಪರಮಂ ಬ್ರಹ್ಮವೇದ ಬ್ರಹ್ಮೈವಭವತಿ (ಮುಂಡಕ). ೫. ನೇಹನಾನಾಸ್ತಿ ಕಿಂಚನ (ಕಾಠಕ). ೬. ಶಾಸ್ತ್ರದೃಷ್ಟ್ಯಾತೂಪದೇಶೋವಾಮದೇವವತ್ (ಬ್ರ.ಸೂತ್ರ). ೭. ಆತ್ಮೇತಿತೂಪಗಚ್ಛಂತಿ ಗ್ರಾಹಯಂತಿ ಚ (ಬ್ರ.ಸೂತ್ರ). ೮. ಅವಿಭಾಗೇ ನ ದೃಷ್ಟತ್ವಾತ್ (ಬ್ರ.ಸೂತ್ರ). ೯-೧೨. ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ; ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ; ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ; ಶುನಿಚೈವ ಶ್ವಪಾಕೇಚ ಪಂಡಿತಾಃ ಸಮದರ್ಶಿನಃ-ಇತ್ಯಾದಿ.

ಇವುಗಳಲ್ಲಿ ಒಂದೊಂದು ವಾಕ್ಯದ ಅರ್ಥ ವಿಮರ್ಶೆಯಲ್ಲಿ ಪ್ರವೃತ್ತರಾದರೆ ಒಂದೊಂದು ಗ್ರಂಥವನ್ನೇ ಬರೆಯಬಹುದು-ಬರೆಯಲಾಗಿದೆ. ಆದುದರಿಂದ ಮೊದಲಿಗೆ, ಅನೇಕ ಅದ್ವೈತ ಗ್ರಂಥಗಳಲ್ಲಿ ಪ್ರಧಾನ ಮಹಾವಾಕ್ಯವೆಂದು ಪರಿಗಣಿಸಲ್ಪಟ್ಟು ಮೇಲಿಂದ ಮೇಲೆ ಉದಹರಿಸಲಾಗಿರುವ ಸ ಆತ್ಮಾ ತತ್ತ್ವಮಸಿ ಎಂಬ ವಾಕ್ಯದ ವಿಮರ್ಶೆಯನ್ನು ಸ್ವಲ್ಪ ವಿಸ್ತಾರವಾಗಿಯೇ, ಮಾಡಲಾಗುತ್ತದೆ. ವಾಕ್ಯಾರ್ಥ ವಿಮರ್ಶೆಯು ಶಾಸ್ತ್ರೀಯ ಪದ್ಧತಿಯನ್ನನುಸರಿಸಿದರೆ ಬಹು ಚೆಂದ. ಮೊದಲು, ತತ್ತ್ವವಾದಿಗಳ ಜೀವೇಶ್ವರ ಭೇದ ಪರವಾದ ಅರ್ಥವನ್ನು ಮೂಲ ಆಚಾರ್ಯರ ಭಾಷ್ಯ ಮತ್ತು ಅವರ ಶಿಷ್ಯರ ಟೀಕಾ ಟಿಪ್ಪಣಿಗಳನ್ನನುಸರಿಸಿ, ನಿರೂಪಿಸಬೇಕು. ನಂತರ ಅದ್ವೈತ ಭಾಷ್ಯಕಾರರ ಹಾಗೂ ಅವರ ಶಿಷ್ಯರ ವ್ಯಾಖ್ಯಾನಗಳು ಅಭೇದಪರವಾಗಿ ಹೇಗೆ ಅರ್ಥಮಾಡಿವೆ ಎಂಬುದನ್ನೂ ವಿವರಿಸಬೇಕು. ಅಭೇದಪರವಾಗಿ ಅರ್ಥ ಮಾಡಲು ಬಾಧಕಗಳೇನು ಮತ್ತು ಭೇದಪರವಾಗಿ ಅರ್ಥಮಾಡಲು ಸಾಧಕಗಳೇನು, ಎಂಬುದನ್ನು ವಿವರಿಸಬೇಕು. ಶ್ರುತಿವಾಕ್ಯದಿಂದ ತಿಳಿಯಬಹುದೆಂಬ ಅರ್ಥವನ್ನು ಸಮರ್ಥಿಸುವ ಬೇರೆ ಶ್ರುತಿಗಳು ಮತ್ತು ಸ್ಮೃತಿಗಳು, ಮತ್ತು ಅವುಗಳಲ್ಲಿ ಅಡಕವಾಗಿರುವ ಯುಕ್ತಿ-ಗಳನ್ನೂ ಉದಹರಿಸಬೇಕು. ಈ ಕ್ರಮದಿಂದ ತತ್ತ್ವಮಸಿ ವಾಕ್ಯಾರ್ಥವನ್ನು ವಿಮರ್ಶೆ ಮಾಡುವುದನ್ನು ಗ್ರಂಥ ವಿಸ್ತಾರ ಭಯದಿಂದ ಸಂಕೋಚಗೊಳಿಸಿ, ಭೇದಪರ ಅರ್ಥವೇ ಸಮಂಜಸವೆಂದು ತೋರಿಸುವ ವಾದಗಳನ್ನು ಮಾತ್ರ ಈ ಮುಂದೆ ನಿರೂಪಿಸಲಾಗುತ್ತದೆ.

''**ತತ್ತ್ವಮಸಿ**'' ಎಂಬ ನಾಲ್ಕು ಅಕ್ಷರಗಳ ಈ ವಾಕ್ಯವು ಛಾಂದ್ಯೋ-ಗ್ಯೋಪನಿಷತ್ತಿನ ಎಂಟನೆ ಅಧ್ಯಾಯದ(ಪ್ರಪಾಠಕ) ೮ ರಿಂದ ೧೬ರವರೆಗಿನ ಖಂಡಗಳಲ್ಲಿ, ಪೂರ್ವೋತ್ತರ ಆನುಪೂರ್ವಿಯುಳ್ಳ, ''**ಸ ಯ ಏಷೋಣಿಮೈತ-ದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ**'' ಎಂಬ ಸಮಗ್ರ ವಾಕ್ಯದ ಏಕದೇಶವಾಗಿದೆ. ಈ ಸಮಗ್ರ ವಾಕ್ಯವು ಜೀವಬ್ರಹ್ಮರ ಭೇದವನ್ನೇ ನಿರೂಪಿಸುವ ಬೇರೆ ಬೇರೆ, ೯ (ಪ್ರತಿ ಖಂಡದಲ್ಲಿ ೧ರಂತೆ) ದೃಷ್ಟಾಂತಗಳನ್ನು ಹೇಳಿ, ಪ್ರತಿ ದೃಷ್ಟಾಂತದ ಕೊನೆಯಲ್ಲಿ ಒಂಭತ್ತು ಸಲ ಪಠಿತವಾಗಿದೆ. ಉದ್ದಾಲಕರೆಂಬ ಋಷಿಗಳು ತಮ್ಮ ಮಗನಾದ ಶ್ವೇತಕೇತುವಿಗೆ,

ಅದ್ವೈತವು ಜೀವಬ್ರಹ್ಮೈಕ್ಯವನ್ನು ಸಾಧಿಸುತ್ತವೆಂದು ಕೆಲವು ಶ್ರುತಿ ವಾಕ್ಯಗಳನ್ನು ಆರಿಸಿಕೊಂಡು ಅವುಗಳನ್ನು ಮಹಾವಾಕ್ಯಗಳೆಂದು ಕರೆದಿದ್ದಾರೆ. ವೇದವಾಕ್ಯಗಳೆಲ್ಲವೂ ಪರಮ ಪ್ರಮಾಣಗಳು. ಅವುಗಳಲ್ಲಿ ಮಹಾವಾಕ್ಯ-ಅಲ್ಪವಾಕ್ಯ ಅಥವಾ ಸತ್ಯವನ್ನು ಹೇಳುವ-ವ್ಯಾವಹಾರಿಕ ಸತ್ಯವನ್ನು ಹೇಳುವ ಎಂಬ ಯಾವ ವಿಶೇಷವೂ ಇಲ್ಲ. ವೇದಾರ್ಥ ನಿರ್ಣಯಗಳನ್ನು ನಿರೂಪಿಸುವ ಬ್ರಹ್ಮಸೂತ್ರಗಳಲ್ಲಿ ಸಹ ಜೀವ ಬ್ರಹ್ಮೈಕ್ಯ ಸಾಧನೆಗೆ ಯಾವ ಬೆಂಬಲವೂ ದೊರಕುವುದಿಲ್ಲ. ಬ್ರಹ್ಮಸೂತ್ರಗಳಲ್ಲಿ ಮತ್ತು ಶ್ರೀಮದ್ಭಗವದ್ಗೀತೆಯಲ್ಲಿ ಸಹ ಕೆಲವು ವಾಕ್ಯಗಳನ್ನು ಅದ್ವೈತವು ತೆಗೆದುಕೊಂಡು ಅವು ತಮ್ಮ ಸಿದ್ಧಾಂತವನ್ನು ಸಾಧಿಸುತ್ತವೆನ್ನುತ್ತಾರೆ. ಈ ಕೆಲವಾರು ವಾಕ್ಯಗಳನ್ನು ಬಿಟ್ಟರೆ ಸಮಗ್ರ ಶ್ರುತಿಗಳೂ ಸೂತ್ರಗಳೂ ಮತ್ತಿತರ ಸ್ಮತಿಗಳೂ ಜೀವಬ್ರಹ್ಮರ ಭೇದವನ್ನೇ ಪ್ರತಿಪಾದಿಸುತ್ತವೆಂದು ಈ ಮತಸ್ಥಾಪನಾಚಾರ್ಯರೂ ಅವರ ಭಾಷ್ಯಾದಿ ಗ್ರಂಥಗಳ ವ್ಯಾಖ್ಯಾನಕಾರರೂ ಒಪ್ಪಿರುತ್ತಾರೆ. ಮಹಾವಾಕ್ಯಗಳೆಂದು ಅದ್ವೈತವು ಮುಂದಿಡುವ ಶ್ರುತ್ಯಾದಿಗಳು ಜೀವಬ್ರಹ್ಮರಿಗೆ ಅಭೇದವನ್ನು ಹೇಳುವುವೋ, ಅಥವಾ ಭೇದವನ್ನೇ ಹೇಳುವ ನಿರವಕಾಶ ಆಗಮವಾಕ್ಯಗಳಿಗೆ ಅನುಸಾರವಾದ ಭೇದಪರವಾದ ಅರ್ಥವನ್ನೇ ಹೇಳುತ್ತವೆಯೋ ಎಂಬುದನ್ನು ಪರೀಕ್ಷಿಸಲು, ಮಾದರಿಗಾಗಿ ಅವುಗಳಲ್ಲಿ ಕೆಲವು ವಾಕ್ಯಗಳ ಅರ್ಥ ನಿರ್ಣಯ ಪ್ರಕಾರವನ್ನು ಈ ಮುಂದೆ ವಿವರಿಸಲಾಗುತ್ತದೆ. ಅದ್ವೈತವು ತಮ್ಮ ಸಿದ್ಧಾಂತಕ್ಕೆ ಸಾಧಕವೆಂದು ಉದಹರಿಸುವ ವಾಕ್ಯಗಳಾವುವೆಂದರೆ :-

೧. ಸ ಆತ್ಮಾ ತತ್ತ್ವಮಸಿ (ಛಾಂದೋಗ್ಯ). ೨. ಅಹಂ ಬ್ರಹ್ಮಾಸ್ಮಿ (ಬೃಹದಾರಣ್ಯ). ೩. ಏಕಮೇವಾದ್ವಿತೀಯಂ (ಛಾಂದೋಗ್ಯ). ೪. ಪರಮಂ ಬ್ರಹ್ಮವೇದ ಬ್ರಹ್ಮೈವಭವತಿ (ಮುಂಡಕ). ೫. ನೇಹನಾನಾಸ್ತಿ ಕಿಂಚನ (ಕಾಠಕ). ೬. ಶಾಸ್ತ್ರದೃಷ್ಟ್ಯಾತೂಪದೇಶೋವಾಮದೇವವತ್ (ಬ್ರ.ಸೂತ್ರ). ೭. ಆತ್ಮೇತಿತೂಪಗಚ್ಛಂತಿ ಗ್ರಾಹಯಂತಿ ಚ (ಬ್ರ.ಸೂತ್ರ). ೮. ಅವಿಭಾಗೇ ನ ದೃಷ್ಟತ್ವಾತ್ (ಬ್ರ.ಸೂತ್ರ). ೯-೧೨. ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ; ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ; ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ; ಶುನಿಚೈವ ಶ್ವಪಾಕೇಚ ಪಂಡಿತಾಃ ಸಮದರ್ಶಿನಃ-ಇತ್ಯಾದಿ.

ಇವುಗಳಲ್ಲಿ ಒಂದೊಂದು ವಾಕ್ಯದ ಅರ್ಥ ವಿಮರ್ಶೆಯಲ್ಲಿ ಪ್ರವೃತ್ತರಾದರೆ ಒಂದೊಂದು ಗ್ರಂಥವನ್ನೇ ಬರೆಯಬಹುದು-ಬರೆಯಲಾಗಿದೆ. ಆದುದರಿಂದ ಮೊದಲಿಗೆ, ಅನೇಕ ಅದ್ವೈತ ಗ್ರಂಥಗಳಲ್ಲಿ ಪ್ರಧಾನ ಮಹಾವಾಕ್ಯವೆಂದು ಪರಿಗಣಿಸಲ್ಪಟ್ಟು ಮೇಲಿಂದ ಮೇಲೆ ಉದಹರಿಸಲಾಗಿರುವ ಸ ಆತ್ಮಾ ತತ್ತ್ವಮಸಿ ಎಂಬ ವಾಕ್ಯದ ವಿಮರ್ಶೆಯನ್ನು ಸ್ವಲ್ಪ ವಿಸ್ತಾರವಾಗಿಯೇ, ಮಾಡಲಾಗುತ್ತದೆ. ವಾಕ್ಯಾರ್ಥ ವಿಮರ್ಶೆಯು ಶಾಸ್ತ್ರೀಯ ಪದ್ಧತಿಯನ್ನನುಸರಿಸಿದರೆ ಬಹು ಚೆಂದ. ಮೊದಲು, ತತ್ತ್ವವಾದಿಗಳ ಜೀವೇಶ್ವರ ಭೇದ ಪರವಾದ ಅರ್ಥವನ್ನು ಮೂಲ ಆಚಾರ್ಯರ ಭಾಷ್ಯ ಮತ್ತು ಅವರ ಶಿಷ್ಯರ ಟೀಕಾ ಟಿಪ್ಪಣಿಗಳನ್ನನುಸರಿಸಿ, ನಿರೂಪಿಸಬೇಕು. ನಂತರ ಅದ್ವೈತ ಭಾಷ್ಯಕಾರರ ಹಾಗೂ ಅವರ ಶಿಷ್ಯರ ವ್ಯಾಖ್ಯಾನಗಳು ಅಭೇದಪರವಾಗಿ ಹೇಗೆ ಅರ್ಥಮಾಡಿವೆ ಎಂಬುದನ್ನೂ ವಿವರಿಸಬೇಕು. ಅಭೇದಪರವಾಗಿ ಅರ್ಥ ಮಾಡಲು ಬಾಧಕಗಳೇನು ಮತ್ತು ಭೇದಪರವಾಗಿ ಅರ್ಥಮಾಡಲು ಸಾಧಕಗಳೇನು, ಎಂಬುದನ್ನು ವಿವರಿಸಬೇಕು. ಶ್ರುತಿವಾಕ್ಯದಿಂದ ತಿಳಿಯಬಹುದೆಂಬ ಅರ್ಥವನ್ನು ಸಮರ್ಥಿಸುವ ಬೇರೆ ಶ್ರುತಿಗಳು ಮತ್ತು ಸ್ಮೃತಿಗಳು, ಮತ್ತು ಅವುಗಳಲ್ಲಿ ಅಡಕವಾಗಿರುವ ಯುಕ್ತಿ-ಗಳನ್ನೂ ಉದಹರಿಸಬೇಕು. ಈ ಕ್ರಮದಿಂದ ತತ್ತ್ವಮಸಿ ವಾಕ್ಯಾರ್ಥವನ್ನು ವಿಮರ್ಶೆ ಮಾಡುವುದನ್ನು ಗ್ರಂಥ ವಿಸ್ತಾರ ಭಯದಿಂದ ಸಂಕೋಚಗೊಳಿಸಿ, ಭೇದಪರ ಅರ್ಥವೇ ಸಮಂಜಸವೆಂದು ತೋರಿಸುವ ವಾದಗಳನ್ನು ಮಾತ್ರ ಈ ಮುಂದೆ ನಿರೂಪಿಸಲಾಗುತ್ತದೆ.

''**ತತ್ತ್ವಮಸಿ**'' ಎಂಬ ನಾಲ್ಕು ಅಕ್ಷರಗಳ ಈ ವಾಕ್ಯವು ಛಾಂದ್ಯೋ-ಗ್ಯೋಪನಿಷತ್ತಿನ ಎಂಟನೆ ಅಧ್ಯಾಯದ(ಪ್ರಪಾಠಕ) ೮ ರಿಂದ ೧೬ ರವರೆಗಿನ ಖಂಡಗಳಲ್ಲಿ, ಪೂರ್ವೋತ್ತರ ಆನುಪೂರ್ವಿಯುಳ್ಳ, ''**ಸ ಯ ಏಷೋಣಿಮೈತ-ದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ**'' ಎಂಬ ಸಮಗ್ರ ವಾಕ್ಯದ ಏಕದೇಶವಾಗಿದೆ. ಈ ಸಮಗ್ರ ವಾಕ್ಯವು ಜೀವಬ್ರಹ್ಮರ ಭೇದವನ್ನೇ ನಿರೂಪಿಸುವ ಬೇರೆ ಬೇರೆ, ೯ (ಪ್ರತಿ ಖಂಡದಲ್ಲಿ ೧ರಂತೆ) ದೃಷ್ಟಾಂತಗಳನ್ನು ಹೇಳಿ, ಪ್ರತಿ ದೃಷ್ಟಾಂತದ ಕೊನೆಯಲ್ಲಿ ಒಂಭತ್ತು ಸಲ ಪಠಿತವಾಗಿದೆ. ಉದ್ದಾಲಕರೆಂಬ ಋಷಿಗಳು ತಮ್ಮ ಮಗನಾದ ಶ್ವೇತಕೇತುವಿಗೆ,

ಆ ದೃಷ್ಟಾಂತಗಳಿಂದ ತಿಳಿಸಬೇಕಾದ ಪ್ರಮೇಯದ ಉಪದೇಶವನ್ನು ಈ ಸಮಗ್ರ ವಾಕ್ಯವು ಒಳಗೊಂಡಿದೆ. ಈ ಉಪನಿಷತ್ತಿನ ಈ ಅಧ್ಯಾಯದ ಒಂದನೇ ಖಂಡದಲ್ಲಿ ಶ್ವೇತಕೇತುವಿನ ಚರಿತ್ರೆಯು ಹೇಳಲ್ಪಟ್ಟಿದೆ. ಪ್ರಸಿದ್ಧ ಜ್ಞಾನಿಗಳ ಪರಂಪರೆಯುಳ್ಳ ತಮ್ಮ ವಂಶದಲ್ಲಿ, ತಮ್ಮ ಮಗ ಶ್ವೇತಕೇತುವು ೧೨ ವರ್ಷ ವಯಸ್ಸಾದವನಾದರೂ ವೇದಾಭ್ಯಾಸದಲ್ಲಿ ತೊಡಗದಿರುವುದನ್ನು ಕಂಡು, ಉದ್ದಾಲಕರು ಮತ್ತೊಬ್ಬ ಋಷಿಗಳಲ್ಲಿ ವಿದ್ಯಾಭ್ಯಾಸಕ್ಕಾಗಿ ಮಗನನ್ನು ಕಳುಹಿಸಿಕೊಟ್ಟರು. ಬ್ರಹ್ಮಬಂಧುವಿನಂತಿರುವುದು ಯೋಗ್ಯವಲ್ಲೆಂದು ತಂದೆಯ ಮಾತಿನಿಂದ ಗ್ರಹಿಸಿದ ಶ್ವೇತಕೇತು, ಗುರುಕುಲ ವಾಸಕ್ಕಾಗಿ ತೆರಳಿದನು. ಹನ್ನೆರಡು ವರ್ಷಕಾಲ ವೇದಾಧ್ಯಯನಾದಿಗಳನ್ನು ನಿರಂತರವಾಗಿ ನಡೆಸಿ ಪ್ರಾಪ್ತವಾದ ವಿದ್ಯಾನಿಮಿತ್ತ ''**ದೇವೋ ವಾ ಕೇಶವಾಂಶೋವಾ ಪ್ರಾಯಶೋ ನಾಸ್ಮಿ ಮಾನುಷಃ**''-ನಾನೊಬ್ಬ ದೇವತೆಯೋ, ಕೇಶವಾಂಶನೋ ಇರಬೇಕು; ಪ್ರಾಯಃ ಮನುಷ್ಯ ಮಾತ್ರನಲ್ಲ ಎಂಬ ಮಹತ್ವಬುದ್ಧಿಯುಳ್ಳವನಾಗಿ ದೊಡ್ಡ ಪ್ರಾಜ್ಞನೆಂಬ ದುರಭಿಮಾನದಿಂದ ವಿನಯರಹಿತನಾಗಿ ತಂದೆಯ ಬಳಿ ಬಂದುನಿಂತನು. ಇಪ್ಪತ್ತುನಾಲ್ಕು ವಯಸ್ಸಿನ ಮಗನು ಹೀಗೆ ದುರಹಂಕಾರಿ-ಯಾದುದನ್ನು ಕಂಡು ಮರುಗಿದ ತಂದೆಯು ಪ್ರಾಯೋ ''**ನಾರಾಯಣಂ ದೇವಂ ನೈವ ತ್ವಂ ಪೃಷ್ಟವಾನಸಿ**'' ಸರ್ವವೇದ ಪ್ರತಿಪಾದ್ಯನೂ ಸರ್ವೋತ್ತಮನೂ ಆದ (ಗುಣಪೂರ್ಣನೂ ದೋಷರಹಿತನೂ ಆದ) ನಾರಾಯಣನನ್ನು ಗುರು-ಗಳನ್ನು ಕೇಳಿ, ತಿಳಿದಂತೆ ಕಾಣುವುದಿಲ್ಲ ಎಂದು ಆರಂಭಿಸಿ ಅವನ ದುರಹಂಕಾರ-ವನ್ನು ಶಮನಗೊಳಿಸಲು ನಾನಾ ದೃಷ್ಟಾಂತಗಳಿಂದ ಕೇಶವಾಂಶನಲ್ಲವೆಂದು ಉಪದೇಶ ಮಾಡಿದ್ದಾರೆ. ವಿದ್ಯಾಮದದಿಂದ ಮತ್ತನಾಗಿ ಬಂದ ಅವಿನೀತ ಪುತ್ರನಿಗೆ ನೀನು ಪರಮಾತ್ಮನಿಂದ ಅಭಿನ್ನನು - ಸಾಕ್ಷಾನ್ನಾರಾಯಣನು, ಎಂದು ಉಪದೇಶ ಮಾಡುವುದು ತೀರ ಅಸಂಭವ.

೮ನೇ ಖಂಡದಲ್ಲಿ ಜೀವನು, ಸರ್ವಾವಸ್ಥೆಗಳಲ್ಲಿ ಪರಮಾತ್ಮಾಧೀನನೆಂದು ನಿರೂಪಿಸಿ, ಸರ್ವದಾ ಪರಮಾತ್ಮನ ಆಶ್ರಯದಲ್ಲಿರತಕ್ಕವನೆಂದು ತಿಳಿಸಲು, ದಾರದಿಂದ ಕಟ್ಟಲ್ಪಟ್ಟು ಅದರ ಉದ್ದದಷ್ಟು ಪ್ರದೇಶದಲ್ಲಿ ಮಾತ್ರ ಮೇಲೆ ಕೆಳಗೆ ಹಾರಿ ಬೀಳುತ್ತ, ಕೊನೆಗೆ, ವ್ಯಾಧನು ಆ ದಾರದಿಂದ ತನ್ನನ್ನು ಬಿಗಿದಿರುವ ಗೂಟವನ್ನೇ ಆಶ್ರಯಿಸುವ ಪಕ್ಷಿಯಂತೆ ಎಂಬ ದೃಷ್ಟಾಂತವನ್ನು ಕೊಡಲಾಗಿದೆ. ಈ ಖಂಡದ ಅವ್ಯವಹಿತ ಹಿಂದಿನ

ವಾಕ್ಯದಲ್ಲಿ "**ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ**", ಸತ್ ಶಬ್ದ ವಾಚ್ಯನಾದ ಪರಮಾತ್ಮನಿಂದಲೇ ಎಲ್ಲ ಪ್ರಜೆಗಳೂ (ಜೀವರೂ) ಉತ್ಪತ್ತಿಯುಳ್ಳವರು; ಆತನ ಆಶ್ರಯದಲ್ಲಿ ಮುಕ್ತಾಮುಕ್ತರೆಲ್ಲರೂ ಸದಾ ಇರುವರು ಎಂದು ಹೇಳಲಾಗಿದೆ. ತತ್ತ್ವಮಸಿಯನ್ನೊಳಗೊಂಡ ಸಮಗ್ರ ವಾಕ್ಯದಲ್ಲಿ "**ಐತದಾತ್ಮ್ಯಮಿದಂ ಸರ್ವಂ**" - (ಚೇತನಾಚೇತನಾತ್ಮಕ ಜಗತ್ತು) ಎಲ್ಲವೂ ಆತ್ಮನೇ (ಪರಮಾತ್ಮನೇ) ಸ್ವಾಮಿಯಾಗಿ ಉಳ್ಳದ್ದು. (ನಿಯಾಮಕ ಅಂತರ್ಯಾಮಿಯಾಗಿ ಉಳ್ಳದ್ದು; ಆತ್ಮಾಸ್ವಾಮಿ - ಅಂತರ್ಯಾಮಿ) ಎಂದು ಪುನಃ ಭೇದವನ್ನೇ ಹೇಳಲ್ಪಟ್ಟಿದೆ. ಉದಾಹೃತ ಸಮಗ್ರ ವಾಕ್ಯದ ಅರ್ಥವು ಹೀಗಿದೆ - ಸಾರಸ್ವರೂಪನೂ, ಸರ್ವ-ನಿಯಾಮಕನೂ, ಸರ್ವಾಭೀಷ್ಟಪ್ರದನೂ, ಸ್ವತಂತ್ರ ಸರ್ವಕರ್ತನೂ, ಸರ್ವಾಶ್ರಯನೂ, ಸೂಕ್ಷ್ಮತಮನೂ, ಅತಏವ ಅಗೋಚರನೂ ಆಗಿರುವ ಪರಮಾತ್ಮನ ವಶದಲ್ಲಿ, ಈ ಜಗತ್ತೆಲ್ಲವೂ ಇದೆ. ಹೇ ಶ್ವೇತಕೇತು, ನೀನು ಅವನಿಂದ ಭಿನ್ನನಾಗಿದ್ದಿ-ಅವನೇ ಎಂದು ತಿಳಿಯಬೇಡ ತತ್ತ್ವಮಸಿ ಎಂಬುದಕ್ಕೆ ಅವನೇ ನೀನಲ್ಲವೆಂಬ ಅರ್ಥ ಹೇಗೆ ಸಿದ್ಧ-ವಾಗುವುದೆಂಬುದನ್ನು ಸ್ವಲ್ಪ ಮುಂದೆ ವಿಮರ್ಶಿಸಲಾಗುತ್ತದೆ. ಈ ಖಂಡದಲ್ಲಿ ತೋರಿಸಿರುವ ಶಕುನಿಯ (ಪಕ್ಷಿ) ದೃಷ್ಟಾಂತವು ಪರಮಾತ್ಮನ ಆಶ್ರಯದಲ್ಲಿಯೇ ಜೀವನು ಸುಖಿ, ಎಂದು ಹೇಳಿ ಭೇದವನ್ನೇ ಸಾಧಿಸಿರುತ್ತದೆಂಬುದನ್ನು ಗಮನಿಸಬೇಕು.

ಭ್ರಮರಗಳು (ದುಂಬಿಗಳು-ಜೇನು ಹುಳುಗಳು) ವಿಲಕ್ಷಣಗಳಾದ ನಾನಾ ವೃಕ್ಷರಸಗಳನ್ನು ಪುಷ್ಪಗಳಿಂದ ತಂದು ಏಕತ್ರ ಸೇರಿಸಿ ಮಧುವನ್ನು (ಜೇನುತುಪ್ಪವನ್ನು) ನಿರ್ಮಾಣ ಮಾಡುತ್ತವೆ. ವಿವಿಧ ರಸಗಳು ಮಿಶ್ರವಾಗಿ ಏಕತ್ರ ಇದ್ದರೂ ಅವು, ತಾನು ಇಂತಹ ಪುಷ್ಪದ ರಸ ಅಥವಾ ಈ ವೃಕ್ಷದ ರಸ, ಇತ್ಯಾದಿ ಬೇರೆ ಬೇರೆ ತಿಳಿಯುವುದಿಲ್ಲ. ಹೀಗೆಯೇ ಪರಮಾತ್ಮನ ಶಕ್ತಿ ವಿಶೇಷದಿಂದಲೇ ತಮ್ಮ ಶರೀರದಲ್ಲಿರುತ್ತಾ, ತಮ್ಮೊಡನಿರುವ ಆತನ ಆಶ್ರಯದಲ್ಲಿಯೇ ಇದ್ದರೂ, ಅವನ ಆಶ್ರಯದಲ್ಲಿದ್ದೆವು-ಈಗಲೂ ಅವನ ಆಶ್ರಯದಲ್ಲಿದ್ದೇವೆ - ಮುಂದೆ ಅವನಲ್ಲಿಯೇ ಹೋಗಿ ಸೇರುತ್ತೇವೆ, ಎಂದು ದೇಹಗತರಾದ ಜೀವರು ತಿಳಿಯುವುದಿಲ್ಲ. ಈ ಜ್ಞಾನಾಭಾವದಿಂದ (ಅಜ್ಞಾನದಿಂದ) ಹುಲಿ, ಸಿಂಹ, ತೋಳ, ಹಂದಿ, ಕೀಟ, ಪತಂಗ, ಸೊಳ್ಳೆ, ನೊಣ ಮೊದಲಾದ ನೀಚ-ದೇಹಗಳಲ್ಲಿ ಜನಿಸುತ್ತಾರೆ. ಅಜ್ಞಾನದಿಂದ ಪಾಪಕರ್ಮಗಳೂ, ಅದರಿಂದ ನೀಚ-ಯೋನಿಗಳೂ, ಎಂದು ಯಥಾರ್ಥ ಜ್ಞಾನಶೂನ್ಯರು ಸಂಸಾರದಲ್ಲಿ ಸುತ್ತುವರೆಂಬಲ್ಲಿ ಈ ದೃಷ್ಟಾಂತವನ್ನು ಹೇಳಿ ಒಂಬತ್ತನೆ ಖಂಡವು ತತ್ತ್ವಮಸಿಯನ್ನೊಳಗೊಂಡ ಸಮಗ್ರ ವಾಕ್ಯದಿಂದ ಕೊನೆಗೊಳ್ಳುತ್ತದೆ. ಈ ದೃಷ್ಟಾಂತವೂ ಜೀವಬ್ರಹ್ಮರ ಭೇದವನ್ನೇ ಹೇಳಿ ಬ್ರಹ್ಮನನ್ನು ಯಥಾರ್ಥವಾಗಿ ತಿಳಿಯದಿದ್ದವರಿಗೇ ಸಂಸಾರವೆಂದು ಸಾರುತ್ತದೆ. ಯಾವ ದೃಷ್ಟಿಯಿಂದಲೂ ಅಭೇದ ಸಾಧಕವಲ್ಲ. ವಿವಿಧ ವೃಕ್ಷರಸಗಳು ಏಕತ್ರವಿದ್ದರೂ ತಮ್ಮ ಪರಸ್ಪರ ಭೇದವನ್ನೂ ಸ್ವರೂಪಗಳನ್ನೂ ತಿಳಿಯದಿರುವಂತೆ, ದೇಹದಲ್ಲಿರುವ ಇತರ

ಚೇತನರನ್ನೂ (ತತ್ತ್ವಾಭಿಮಾನಿಗಳನ್ನು) ಪರಮಚೇತನನಾದ ಶ್ರೀಹರಿಯನ್ನೂ ಜೀವನು ತಿಳಿಯುವುದಿಲ್ಲ. ಜ್ಞಾನಿಗಳು, ಇತರ ಚೇತನರು ಇರುವುದನ್ನೂ ಅವರಿಂದ ತಾವು ಭಿನ್ನರೆಂಬುದನ್ನೂ ಕಾಣುತ್ತಾರೆ. ಅಜ್ಞಾನಿಗಳು ಕಾಣದ ಮಾತ್ರಕ್ಕೆ ಅನ್ಯರಾದರೂ ತನ್ನೊಂದಿಗೆ ಇಲ್ಲವೆಂದಾಗಲಿ ಅವರಿಂದ ತಾನು ಭಿನ್ನನಲ್ಲವೆಂದಾಗಲಿ ತಿಳಿಯಬಾರದು. ಈ ದೃಷ್ಟಾಂತದಿಂದ ಈ ಪ್ರಮೇಯವು ಉಪದಿಷ್ಟವೆಂದು ತಿಳಿದುಬರುತ್ತದೆ.

ಅಚೇತನಗಳಾದ ವೃಕ್ಷರಸಗಳು ಅನ್ಯರಸಗಳನ್ನೂ ಪರಸ್ಪರ ಭೇದವನ್ನೂ ತಿಳಿಯಲಾರವೆಂಬ ಮಾತ್ರಕ್ಕೆ ಚೇತನನಾದ ತಾನೇಕೆ ತಿಳಿಯಬಾರದೆಂಬ ಸಂಶಯದ ಪರಿಹಾರಕ್ಕಾಗಿ ಹತ್ತನೇ (೧೦) ಖಂಡವು ಪ್ರವೃತ್ತವಾಗಿದೆ. ಗಂಗಾ ಯಮುನಾದಿ ಅಭಿಮಾನಿ ದೇವತೆಗಳಿಂದ ಸಹಿತವಾದ, ಪೂರ್ವ-ಪಶ್ಚಿಮ ವಾಹಿನಿಗಳಾದ, ಗಂಗಾನದಿಗಳು ಸಮುದ್ರವನ್ನು ಪ್ರವೇಶಿಸುತ್ತವೆ. ಅಲ್ಲಿ ನದ್ಯಭಿಮಾನಿಗಳು ನಾನು ಗಂಗೆ, ನಾನು ಯಮುನೆ, ಇದು ನನ್ನ ಜಲ ಎಂದು ಪ್ರತ್ಯೇಕವಾಗಿ ತಿಳಿಯುವುದಿಲ್ಲ. ಈ ನದಿಗಳಾದರೋ ಸಮುದ್ರದಿಂದಲೇ ಮೇಘ ದ್ವಾರಾ ಭೂಮಿಗೆ ಬಂದು ಪ್ರವಹಿಸುತ್ತವೆ. ತಮ್ಮ ಉತ್ಪತ್ತಿ ಸ್ಥಾನವಾದ ಸಮುದ್ರವನ್ನೇ ಸೇರುತ್ತವೆ. ಸಮುದ್ರದಲ್ಲಿರುವಾಗ ಸಮುದ್ರವು ಸಮುದ್ರವಾಗಿಯೇ ಇರುತ್ತದಲ್ಲದೆ ನದೀಜಲಗಳ ರಸಾದಿಗುಣಗಳನ್ನು ಹೊಂದುವುದಿಲ್ಲ (ಸಮುದ್ರವು ನದಿಯಾಗುವುದಿಲ್ಲ – ನದಿಗಳಂತೆ ಉಕ್ಕಿ ಹರಿದು ಹೋಗುವುದೂ ಇಲ್ಲ). ನದ್ಯಭಿಮಾನಿಗಳಾದ ಗಂಗಾದಿ ದೇವತೆಗಳು ಅಮುಕ್ತಾವಸ್ಥೆಯಲ್ಲಿ ಸಮುದ್ರವನ್ನು ಸೇರಿದಾಗ ಅಲ್ಲಿ ಸ್ವಸ್ವರೂಪಗಳನ್ನೂ ಸ್ವಾಭಿಮನ್ಯ ಜಲಗಳನ್ನೂ ವಿವೇಕಿಸಿ ತಿಳಿಯಲಾರವು. ಇದರಂತೆ ಎಲ್ಲ ಪ್ರಜೆಗಳೂ ಪರಮಾತ್ಮನಿಂದಲೇ ಜನಿಸಿ, ಆತನ ಆಶ್ರಯದಲ್ಲಿಯೇ ಜೀವಿಸಿ, ಆತನನ್ನೇ ಸೇರುತ್ತಾರೆಂದು ಅಜ್ಞಾನಿಗಳು ತಿಳಿಯರು. ಈ ನಿಮಿತ್ತ ವ್ಯಾಘ್ರಾದಿ ನಾನಾ ಯೋನಿಗಳಲ್ಲಿ ಹುಟ್ಟಿ ದುಃಖಿಸುವರೆಂದು ಈ ಖಂಡದಲ್ಲಿ ಉಪದೇಶ- ಮಾಡಲಾಗಿದೆ. ಅಜ್ಞಾನಿಗಳು ಈ ಸತ್ಯವನ್ನು ತಿಳಿಯದ ಮಾತ್ರಕ್ಕೆ ಜ್ಞಾನಿಗಳು ತಿಳಿಯರೆಂದಲ್ಲ.[49] ಈ ನದೀ ಸದ್ದೃಷ್ಟಾಂತವೂ ಸಹ ಜೀವಬ್ರಹ್ಮರ ಭೇದವನ್ನೇ ಸಾಧಿಸುತ್ತದೆ. ಈಶ್ವರನು ಜೀವನಿಂದ ಭಿನ್ನನಾದರೂ ಜೀವನು ಈಶ್ವರನ ಅಧೀನವೆಂದು ಹೇಗೆ ತಿಳಿದುಕೊಳ್ಳಬೇಕೆಂಬ ಅಭಿಪ್ರಾಯದಿಂದ ಶ್ವೇತಕೇತುವು ಪುನಃ ವಿವರವಾಗಿ ಉಪದೇಶಿಸಬೇಕೆಂದು ಪ್ರಾರ್ಥಿಸಿದುದಕ್ಕೆ ಉದ್ದಾಲಕರು ಮುಂದಿನ ಖಂಡಗಳಲ್ಲಿ ಈ ಸಂಬಂಧವಾದ ನಾನಾ ಪ್ರಕಾರದ ಸಂಶಯಗಳನ್ನು ಸದ್ದೃಷ್ಟಾಂತ ಉಪದೇಶಗಳಿಂದ ಪರಿಹರಿಸಿ, ಜೀವ ಬ್ರಹ್ಮರ ಭೇದಜ್ಞಾನವನ್ನೇ ತಾರಕವೆಂದು ಸಾಧಿಸಿರುವರೆಂದು ತಿಳಿಯಬೇಕು.

49. ಸಮುದ್ರದಿಂದ ಜಲವನ್ನು ಸೆಳೆದುಕೊಂಡು ಪರ್ಜ್ಯನ್ಯನು ಮೇಘರೂಪದಿಂದ ಆ ಜಲವನ್ನು ಭೂಮಿಯಲ್ಲಿ ವೃಷ್ಟಿಗರೆಯುತ್ತಾನೆ. ಆಗ ಮೇಘಗಳಲ್ಲಿರುವ ಗಂಗಾನದಿಗಳ ಜಲಭಾಗವು ಆಯಾ ನದಿಗಳ ಪಾತ್ರವನ್ನೇ ಸೇರುವಂತೆ ಸರ್ವಜ್ಞನಾದ ವಾಯು- ದೇವನು ವ್ಯವಸ್ಥೆಗೊಳಿಸುವನೆಂದು ಛಾಂದೋಗ್ಯದಲ್ಲಿ ಹೇಳಲಾಗಿದೆ.

ವೃಕ್ಷದಲ್ಲಿರುವ ಜೀವನು ತನ್ನ ಮೂಲ, ಮಧ್ಯ, ಅಗ್ರಭಾಗಗಳಲ್ಲಿ ಭೇದಿಸಲ್ಪಟ್ಟರೂ, ಅಲ್ಲಿಂದ ರಸವನ್ನು ಸ್ರವಿಸುತ್ತಾನಲ್ಲದೆ ಸಾಯುವುದಿಲ್ಲ (ವೃಕ್ಷವು ಒಣಗುವುದಿಲ್ಲ). ಆದರೆ ಅಲ್ಲಿರುವ ಪರಮಾತ್ಮನು ಆ ವೃಕ್ಷದ ಯಾವ ಶಾಖೆಯನ್ನು ತ್ಯಜಿಸಿದರೂ ಅದು, ಭೇದಾದಿಗಳಿಲ್ಲದಿದ್ದರೂ ಒಣಗುತ್ತದೆ; ಪೂರ ವೃಕ್ಷವನ್ನೇ ತ್ಯಜಿಸಿದರೆ ಆ ವೃಕ್ಷವು ಒಣಗಿ ಬಿದ್ದು ಹೋಗುತ್ತದೆ (ಮೃತವಾಗುತ್ತದೆ. ಈ ದೃಷ್ಟಾಂತವು, ಜೀವನು ಈಶ್ವರನಿಂದ ಭಿನ್ನನೆಂದು ತಿಳಿಸುವುದರೊಂದಿಗೆ ಆತನ ಅತ್ಯಂತ ಅಧೀನನೆಂದೂ ತಿಳಿಸುತ್ತದೆ. ಏಕೆಂದರೆ-ಜೀವನು ಪರಮಾತ್ಮನನ್ನು ಬಿಟ್ಟು ತನ್ನ ದೇಹದಲ್ಲಿ ಅಥವಾ ಆ ದೇಹದ ಏಕದೇಶದಲ್ಲಿ ನಿಲ್ಲಲ್ಲು ಸಹ ಅಸಮರ್ಥನೆಂದು ನಿರೂಪಿಸಲಾಗಿದೆ.

ಹೀಗೆ ಜೀವನಿಗೆ, ಸ್ಥಿತ್ಯಾದಿಗಳಿಗೆ ಕಾರಣನಾದ ಶ್ರೀಹರಿಯು ಸೂಕ್ಷ್ಮ-ತಮನಾದುದರಿಂದ, ಗೋಚರನಾಗುವುದಿಲ್ಲವೆಂದೂ ೧೨ನೇ ಖಂಡವು ನಿರೂಪಿಸುತ್ತದೆ. ಉದ್ದಾಲಕರು ಮಗನಿಂದ ಒಂದು ನ್ಯಗ್ರೋಧ ಫಲವನ್ನು (ಅತ್ತಿ ಹಣ್ಣು) ತರಿಸುತ್ತಾರೆ. ಅದನ್ನು ಒಡೆಯಿಸಿ ಅದರಲ್ಲಿರುವ ಅಸಂಖ್ಯ ಬೀಜಗಳಲ್ಲಿ ಒಂದನ್ನು ತೆಗೆದು ಒಡೆಯುವಂತೆ ಹೇಳುತ್ತಾರೆ. ಅತಿ ಸೂಕ್ಷ್ಮವಾದ ಆ ಬೀಜದಲ್ಲಿ ಒಡೆದಾಗ ಅದರಲ್ಲಿ ಒಳಗೇನೂ ಕಾಣುವುದಿಲ್ಲವೆಂದು ಮಗನು ಹೇಳುತ್ತಾನೆ. ಆಗ ಉದ್ದಾಲಕರು ಬೇರು, ಶಾಖೆ, ಎಲೆಗಳು ಮೊದಲಾದ ಅಂಗಗಳನ್ನೊಳಗೊಂಡ ಮಹಾವೃಕ್ಷಕ್ಕೆ ಕಾರಣವಾಗುವ ಸೂಕ್ಷ್ಮವಾದ ಈ ಬೀಜದಂತೆ ಜೀವನೂ, ಜೀವನಿಗಿಂತ ಅತ್ಯಂತ ಸೂಕ್ಷ್ಮನಾದ ಜೀವಾಂತರ್ಯಾಮಿ ಪರಮಾತ್ಮನೂ ಇರುವರೆಂದು ತಿಳಿ. ಈ ಬೀಜ ದೃಷ್ಟಾಂತದಲ್ಲಿ ಬೀಜದೊಳಗಿರುವನೆಂಬ ಪರಮಾತ್ಮನು ಕಾಣಲ್ಪಡುವುದಿಲ್ಲವೆಂಬ ಕಾರಣದಿಂದ ಉಂಟಾಗಬಹುದಾದ ಸಂಶಯವನ್ನು ಪರಿಹರಿಸಲು ಪುನಃ ಪ್ರಾರ್ಥಿತರಾದ ಉದ್ದಾಲಕರು, ಮುಂದಿನ ೧೩ನೇ ಖಂಡದಲ್ಲಿ ಸದೃಷ್ಟಾಂತವಾಗಿ ಉಪದೇಶಿಸುತ್ತಾರೆ.

ನೀರಿನಲ್ಲಿ ಹಾಕಿದ ಉಪ್ಪಿನುಂಡೆಯು ಕರಗಿ ಕಣ್ಣಿಗೆ ಕಾಣಿಸದಂತಾದರೂ, ಆ ನೀರನ್ನು ಯಾವ ಭಾಗದಿಂದ ತೆಗೆದು ರುಚಿನೋಡಿದರೂ, ಉಪ್ಪಾಗಿ ತೋರುವಂತೆ, ಪರಮಾತ್ಮನು ಕಣ್ಣಿಗೆ ಕಾಣಿಸದಿದ್ದರೂ (ಅವ್ಯಕ್ತನಾದರೂ) ತನ್ನ ಸಾಮರ್ಥ್ಯಾದಿಗಳಿಂದ ಸರ್ವತ್ರ ವ್ಯಾಪ್ತನೆಂಬುದನ್ನು (ಇರುವನೆಂಬುದನ್ನು) ತಿಳಿಸಿಕೊಡುತ್ತಾನೆಂದು ಹೇಳಲಾಗಿದೆ. ಮಹಾವೃಕ್ಷರೂಪದ ಕಾರ್ಯದಿಂದ ಬೀಜದೊಳಗಿರುವ ಈಶ್ವರನ ಸಾಮರ್ಥ್ಯವು ಪ್ರತ್ಯಕ್ಷ ತೋರುತ್ತದೆ. ಹೀಗೆಯೆ ಸೂಕ್ಷ್ಮತಮನಾದ ಈಶ್ವರನ ವ್ಯಾಪ್ತಿಯನ್ನು ಆಯಾ ಅಧಿಷ್ಠಾನಗಳಲ್ಲಿ ಕಾಣುವ ಕಾರ್ಯ ಸಾಮರ್ಥ್ಯದಿಂದ ತಿಳಿಯಬೇಕೆಂದು ಭಾವ.

ವ್ಯಾಪ್ತನೂ ಮಹಾ ಸಾಮರ್ಥ್ಯೋಪೇತನೂ ಆದ ಪರಮಾತ್ಮನನ್ನು ಯಾವ ಉಪಾಯದಿಂದ ಪ್ರತ್ಯಕ್ಷೀಕರಿಸಿಕೊಳ್ಳಬಹುದೆಂಬುದನ್ನು ೧೪ನೇ ಖಂಡವು

ಸದೃಷ್ಟಾಂತವಾಗಿ ನಿರೂಪಿಸುತ್ತದೆ. ಕಣ್ಣು ಕಟ್ಟಿ ಅಡವಿಯಲ್ಲಿ ತಂದುಬಿಡಲ್ಪಟ್ಟ ಯಾವನೊಬ್ಬ ಮನುಷ್ಯನು, ತನ್ನ ಅಸಹಾಯ ಸ್ಥಿತಿಯನ್ನು ದಿಕ್ಕು ದಿಕ್ಕುಗಳಲ್ಲಿ ಸರ್ವರಿಗೂ ಕೇಳುವಂತೆ ಗಟ್ಟಿಯಾಗಿ ಕೂಗಿಕೊಂಡಾಗ, ಕರುಣಾಳುವಾದ ಮಾರ್ಗಸ್ಥ-ನೊಬ್ಬನು ಅವನ ಬಳಿ ಬಂದು ಕಣ್ಣಿನ ಬಂಧವನ್ನು ಬಿಚ್ಚಿ ಮಾರ್ಗಕ್ಕೆ ಕರೆದುಕೊಂಡು ಬಂದು, ಈ ಮಾರ್ಗವಾಗಿ ನಿನ್ನ ಪಟ್ಟಣಕ್ಕೆ ಹೋಗು ಎಂದು ದಿಕ್ಕು ತೋರಿ ಕಳುಹಿಸಿಕೊಡುವಂತೆ, ಅನಾದಿಯಾದ ಅಜ್ಞಾನದಿಂದ ಆಚ್ಛಾದಿತವಾದ ಸ್ವರೂಪವುಳ್ಳ ಮುಕ್ತಿ ಯೋಗ್ಯ ಸಂಸಾರಿ ಜೀವನನ್ನು, ಅಂಗಲಾಚಿ ಬೇಡಿಕೊಳ್ಳುವ ಅವನ ಆರ್ತ ಧ್ವನಿಯನ್ನು ಕೇಳಿ, ಸದ್ಗುರುವು ಜ್ಞಾನೋಪದೇಶಮಾಡಿ ಅನುಗ್ರಹಿಸಿದಾಗ, ಶ್ರವಣ ಮನನ ಧ್ಯಾನಗಳಿಂದ ಪರಮಾತ್ಮನ ಸಾಕ್ಷಾತ್ಕಾರವನ್ನು ಹೊಂದಿ, ತನ್ನ ಜನ್ಮಭೂಮಿಯಾದ ಭಗವಂತನನ್ನೇ ಹೊಂದುತ್ತಾನೆ. ಹೀಗೆಂಬ ಪ್ರಮೇಯವು ಈ ದೃಷ್ಟಾಂತದಿಂದ ಉಪದಿಷ್ಟವೆಂಬುದು ಸ್ಪಷ್ಟವಾಗಿದೆ. ಜೀವಬ್ರಹ್ಮೈಕ್ಯಕ್ಕೆ ಈ ದೃಷ್ಟಾಂತವು ಲೇಶಮಾತ್ರವೂ ಸಾಧಕವಲ್ಲ.

೧೧ನೇ ಖಂಡದಲ್ಲಿ ವೃಕ್ಷಜೀವನ ದೃಷ್ಟಾಂತದಿಂದ ಜೀವನು ಪರಮಾತ್ಮನಿಗೆ ಅತ್ಯಂತ ಅಧೀನನೆಂಬ ಪ್ರಮೇಯವನ್ನು ಉಪದೇಶಿಸಲಾಯಿತು. ಪುನಃ ಮಗನ ಪ್ರಾರ್ಥನಾನುಸಾರ ಮನುಷ್ಯ ಶರೀರದಲ್ಲಿರುವ ಜೀವನು ವೃಕ್ಷ-ಜೀವನಿಗಿಂತ ಜ್ಞಾನಾಧಿಕ್ಯವುಳ್ಳವನೂ ಮತ್ತು ಬುದ್ಧ್ಯಾದಿ ಇಂದ್ರಿಯಗಳ ಸಹಾಯವುಳ್ಳವನೂ ಆದುದರಿಂದ ದೇಹಗತ ಪರಮಾತ್ಮಾಧೀನನಲ್ಲದಿರಬಹುದೆಂಬ ಸಂಶಯವನ್ನು ಪರಿಹರಿಸುತ್ತ, ೧೫ನೇ ಖಂಡದಲ್ಲಿ ಮನುಷ್ಯ ದೇಹದಲ್ಲಿರುವ ಜೀವನು ಪರಮಾತ್ಮಾಧೀನನೆಂಬುದನ್ನು ಸಾಧಿಸಿ ಉಪದೇಶಿಸುತ್ತಾನೆ. ರೋಗ ಪೀಡಿತನಾಗಿ ಮರಣೋನ್ಮುಖನಾಗಿರುವ ಒಬ್ಬ ಮನುಷ್ಯನ ಬಂಧು ಜನರು ಅವನನ್ನು ನೋಡಿ ಮಾತನಾಡಿಸಲು ಬರುತ್ತಾರೆ. ಅವರೆಲ್ಲರೂ ಚಿರಪರಿಚಿತರಾಗಿದ್ದರೂ ಒಬ್ಬೊಬ್ಬರನ್ನೂ ಗುರುತಿಸಿ ಮಾತನಾಡಿಸುತ್ತಾನೆ. ಮತ್ತೊಮ್ಮೆ ಯಾರನ್ನೂ ಗುರುತಿಸುವುದೇ ಇಲ್ಲ. ವಾಗಭಿಮಾನಿದೇವತೆಯು ಮನೋಭಿಮಾನಿಯಲ್ಲಿ ಹೋಗಿ ಸೇರಿ ತನ್ನ ಕಾರ್ಯವನ್ನು ನಿಲ್ಲಿಸಿದಾಗ, ಬಂಧುಗಳನ್ನು ಗುರುತಿಸಿದರೂ ಮಾತನಾಡುವುದಿಲ್ಲ-ಕಣ್ಣಿನಿಂದ ಮಾತ್ರ ನೋಡಿ ಕಣ್ಣೀರಿಡುತ್ತಾನೆ. ಚಕ್ಷುರಭಿಮಾನಿಯು ಮನೋಭಿಮಾನಿಯಲ್ಲಿ ಲೀನನಾದರೆ ಕಣ್ಣನ್ನು ಮುಚ್ಚುತ್ತಾನೆ. ಮನೋಭಿಮಾನಿಯು ಮುಖ್ಯಪ್ರಾಣನಲ್ಲಿಯೂ ಆತನು ತೇಜೋಭಿಮಾನಿ ಲಕ್ಷ್ಮೀದೇವಿಯಲ್ಲಿಯೂ ಆಕೆಯು, ಇವರೆಲ್ಲರನ್ನೂ ಕೂಡಿಕೊಂಡು ಪರದೇವತೆಯಾದ ಪರಮಾತ್ಮನಲ್ಲಿಯೂ ಲೀನಳಾಗಲು, ಜೀವನು ಮೃತನಾಗುತ್ತಾನೆ. ಮನೋಭಿಮಾನಿಯು ಮುಖ್ಯಪ್ರಾಣನಲ್ಲಿ ಲೀನನಾದ ನಂತರ ಸಕಲ ದೇಹೇಂದ್ರಿಯಗಳ ವ್ಯಾಪಾರಗಳಲ್ಲಿ ಜೀವನು ಅಸಮರ್ಥನಾಗುತ್ತಾನೆ. ಪ್ರಾಣವಾಯುಗಳ ವ್ಯಾಪಾರ ಮಾತ್ರ ನಡೆಯುತ್ತಿರುತ್ತದೆ. ಮುಖ್ಯಪ್ರಾಣನು ಲಕ್ಷ್ಮೀಯೊಂದಿಗೆ ಮನುಷ್ಯ

ಶರೀರವನ್ನು ಬಿಟ್ಟು ಹೊರಟ ತಕ್ಷಣವೇ ಜೀವನು ಆ ದೇಹದಲ್ಲಿ ನಿಲ್ಲಲು ಅಸಮರ್ಥನಾಗುತ್ತಾನೆ. ಮುಖ್ಯಪ್ರಾಣನಿಂದ ಶೆಳೆದು ಒಯ್ಯಲ್ಪಡುತ್ತಾನೆ. ಈ ದೃಷ್ಟಾಂತದಿಂದ ಮನುಷ್ಯದೇಹದಲ್ಲಿರುವ ಜೀವನು, ಮನ ಆದಿ ಇಂದ್ರಿಯಗಳ ಅಭಿಮಾನಿ ದೇವತೆಗಳ ಅಧೀನನೂ ಮತ್ತು ಆ ದೇವತೆಗಳಿಗೂ ನಿಯಾಮಕನಾದ ಶ್ರೀಹರಿಯ ಅಧೀನನೂ ಆಗಿರುವನೆಂದು ಸಿದ್ಧವಾಗುತ್ತದೆ.

ಬಗೆಬಗೆಯ ಈ ದೃಷ್ಟಾಂತಗಳನ್ನು ನಿರೂಪಿಸಿ ಉದ್ದಾಲಕರು ಬಹುಪ್ರಕಾರದ ಸಂಶಯಗಳನ್ನು ಪರಿಹರಿಸಿ, (ಅವುಗಳಲ್ಲಿ ಪ್ರಧಾನಗಳಾದ ಕೆಲವು ಸಂಶಯಗಳನ್ನು ಮಾತ್ರ ಇಲ್ಲಿ ನಿರೂಪಿಸಲಾಗಿದೆ), ಪರಮಾತ್ಮನು, ಜೀವನಿಂದ ಅತ್ಯಂತ ಭಿನ್ನನೂ, ಸರ್ವಾಶ್ರಯನೂ, ಸ್ವತಂತ್ರನೂ, ಸರ್ವಕರ್ತನೂ ಆಗಿರುವನೆಂದೂ, ಗುರೂಪದಿಷ್ಟ ಮಾರ್ಗದಿಂದ ಮಾತ್ರ ಲಭ್ಯನೆಂದೂ ಉಪದೇಶಿಸಲು, ಶ್ವೇತಕೇತುವು, ಚೇತನಾಚೇತನಾತ್ಮಕ ಜಗತ್ತಿನಿಂದ ಈಶ್ವರನನ್ನು ಅತ್ಯಂತ ಭಿನ್ನನೆಂದು ತಿಳಿದವನಿಗೂ ತದ್ವಿರುದ್ಧವಾಗಿ ಅಭಿನ್ನನೆಂದು ತಿಳಿಯುವ ಅನ್ಯಥಾ ಜ್ಞಾನಿಗೂ ದೊರೆಯುವ ಫಲ ವೈಲಕ್ಷಣ್ಯವನ್ನು ತಿಳಿಯಲು ಇಚ್ಛಿಸಿ, **''ಭೂಯ ಏವ ಭಗವರ್ ಮಾ ವಿಜ್ಞಾಪಯತು-''** ಹೇ! ಪೂಜ್ಯರೆ, ಈ ವಿಷಯದಲ್ಲಿ ನನ್ನನ್ನು ಪುನಃ ಉಪದೇಶಿಸಿರಿ ಎಂದು ಪ್ರಾರ್ಥಿಸುತ್ತಾನೆ. ಆಗ ಉದ್ದಾಲಕರು ಮುಂದಿನ ೧೬ನೇ ಖಂಡದಲ್ಲಿ ಹೀಗೆ ಉಪದೇಶಿಸುತ್ತಾರೆ:- ರಾಜದ್ರವ್ಯವನ್ನು ಅಪಹರಿಸಿದ ಅಥವಾ ತಾನೇ ರಾಜನೆಂದು ಹೇಳಿಕೊಳ್ಳುವ ಅಪರಾಧವನ್ನೆಸಗಿದವನೆಂದು ಶಂಕಿಸಿ ಸಂಕೋಲೆಗಳಿಂದ ಬಂಧಿಸಿ, ರಾಜಭಟರು ಒಬ್ಬ ಪುರುಷನನ್ನು ರಾಜನ ಎದುರು ತಂದು ನಿಲ್ಲಿಸುತ್ತಾರೆ. ಆ ಪುರುಷನು ತಾನು ನಿರಪರಾಧಿ ಎನ್ನುತ್ತಾನೆ. ಆಗ ರಾಜನು, ಅವನ ಮಾತು ಸತ್ಯವೋ ಸುಳ್ಳೋ ಎಂದು ಪರೀಕ್ಷಿಸಲಿಕ್ಕಾಗಿ ಕಾದ ಕೊಡಲಿಯನ್ನು ಅಪರಾಧಿಯ ಕೈಯಿಂದ ಹಿಡಿಸುತ್ತಾನೆ. ಅವನ ಕೈ ಸುಟ್ಟರೆ ಅಸತ್ಯವನ್ನು ನುಡಿದಿರುವನೆಂದೂ, ಸುಡದಿದ್ದರೆ ಸತ್ಯವನ್ನೇ ಹೇಳಿರುವನೆಂದೂ ನಿರ್ಧರಿಸುತ್ತಾನೆ. ಅಪರಾಧಿಯ ಮಾತು ಸತ್ಯವಾಗಿ ಅವನ ಮೇಲಿನ ಆಪಾದನೆಗಳು ನಿರಾಧಾರಗಳೆಂದು ಸಿದ್ಧವಾದರೆ ಅವನನ್ನು ಮೋಚನೆ ಮಾಡಿ ಸತ್ಯವಂತರ ಹಾಗೆ ಯಥಾಯೋಗ್ಯವಾಗಿ ಗೌರವಿಸುತ್ತಾನೆ. ಆಪಾದನೆಗಳು ನಿಜವೆಂದು ಸ್ಥಿರಪಟ್ಟರೆ ಯೋಗ್ಯ ಶಿಕ್ಷೆಯನ್ನು ವಿಧಿಸುತ್ತಾನೆ. ಆಪಾದನೆಗಳ ಗುರುಲಾಘವಗಳನ್ನನುಸರಿಸಿ ಕಾರಾಗೃಹವಾಸ, ಹಸ್ತಾದಿ ಅವಯವಗಳನ್ನು ಕತ್ತರಿಸುವುದು, ಮರಣದಂಡನೆ ಇತ್ಯಾದಿ ಶಿಕ್ಷೆಗಳನ್ನು ವಿಧಿಸುತ್ತಾನೆ. ಹೀಗೆಯೇ ಜೀವಬ್ರಹ್ಮರ ಭೇದಜ್ಞಾನಿಯನ್ನು ಸಂಸಾರದಿಂದ ಮೋಚನಮಾಡಿ ಸುಖ ಸ್ಥಾನಗಳಲ್ಲಿಡುತ್ತಾನೆ. ಅಭೇದ ಜ್ಞಾನಿಯನ್ನು, ಊರ್ಧ್ವ, ಮಧ್ಯ ಮತ್ತು ಅಧರಗಳೆಂಬ

ಸದೃಷ್ಟಾಂತವಾಗಿ ನಿರೂಪಿಸುತ್ತದೆ. ಕಣ್ಣು ಕಟ್ಟಿ ಅಡವಿಯಲ್ಲಿ ತಂದುಬಿಡಲ್ಪಟ್ಟ ಯಾವನೊಬ್ಬ ಮನುಷ್ಯನು, ತನ್ನ ಅಸಹಾಯ ಸ್ಥಿತಿಯನ್ನು ದಿಕ್ಕು ದಿಕ್ಕುಗಳಲ್ಲಿ ಸರ್ವರಿಗೂ ಕೇಳುವಂತೆ ಗಟ್ಟಿಯಾಗಿ ಕೂಗಿಕೊಂಡಾಗ, ಕರುಣಾಳುವಾದ ಮಾರ್ಗಸ್ಥ-ನೊಬ್ಬನು ಅವನ ಬಳಿ ಬಂದು ಕಣ್ಣಿನ ಬಂಧವನ್ನು ಬಿಚ್ಚಿ ಮಾರ್ಗಕ್ಕೆ ಕರೆದುಕೊಂಡು ಬಂದು, ಈ ಮಾರ್ಗವಾಗಿ ನಿನ್ನ ಪಟ್ಟಣಕ್ಕೆ ಹೋಗು ಎಂದು ದಿಕ್ಕು ತೋರಿ ಕಳುಹಿಸಿಕೊಡುವಂತೆ, ಅನಾದಿಯಾದ ಅಜ್ಞಾನದಿಂದ ಆಚ್ಛಾದಿತವಾದ ಸ್ವರೂಪವುಳ್ಳ ಮುಕ್ತಿ ಯೋಗ್ಯ ಸಂಸಾರಿ ಜೀವನನ್ನು, ಅಂಗಲಾಚಿ ಬೇಡಿಕೊಳ್ಳುವ ಅವನ ಆರ್ತ ಧ್ವನಿಯನ್ನು ಕೇಳಿ, ಸದ್ಗುರುವು ಜ್ಞಾನೋಪದೇಶಮಾಡಿ ಅನುಗ್ರಹಿಸಿದಾಗ, ಶ್ರವಣ ಮನನ ಧ್ಯಾನಗಳಿಂದ ಪರಮಾತ್ಮನ ಸಾಕ್ಷಾತ್ಕಾರವನ್ನು ಹೊಂದಿ, ತನ್ನ ಜನ್ಮಭೂಮಿಯಾದ ಭಗವಂತನನ್ನೇ ಹೊಂದುತ್ತಾನೆ. ಹೀಗೆಂಬ ಪ್ರಮೇಯವು ಈ ದೃಷ್ಟಾಂತದಿಂದ ಉಪದಿಷ್ಟವೆಂಬುದು ಸ್ಪಷ್ಟವಾಗಿದೆ. ಜೀವಬ್ರಹ್ಮೈಕ್ಯಕ್ಕೆ ಈ ದೃಷ್ಟಾಂತವು ಲೇಶಮಾತ್ರವೂ ಸಾಧಕವಲ್ಲ.

೧೦ನೇ ಖಂಡದಲ್ಲಿ ವೃಕ್ಷಜೀವನ ದೃಷ್ಟಾಂತದಿಂದ ಜೀವನು ಪರಮಾತ್ಮನಿಗೆ ಅತ್ಯಂತ ಅಧೀನನೆಂಬ ಪ್ರಮೇಯವನ್ನು ಉಪದೇಶಿಸಲಾಯಿತು. ಪುನಃ ಮಗನ ಪ್ರಾರ್ಥನಾನುಸಾರ ಮನುಷ್ಯ ಶರೀರದಲ್ಲಿರುವ ಜೀವನು ವೃಕ್ಷ-ಜೀವನಿಗಿಂತ ಜ್ಞಾನಾಧಿಕ್ಯವುಳ್ಳವನೂ ಮತ್ತು ಬುದ್ಧ್ಯಾದಿ ಇಂದ್ರಿಯಗಳ ಸಹಾಯವುಳ್ಳವನೂ ಆದುದರಿಂದ ದೇಹಗತ ಪರಮಾತ್ಮಾಧೀನನಲ್ಲದಿರಬಹುದೆಂಬ ಸಂಶಯವನ್ನು ಪರಿಹರಿಸುತ್ತ, ೧೫ನೇ ಖಂಡದಲ್ಲಿ ಮನುಷ್ಯ ದೇಹದಲ್ಲಿರುವ ಜೀವನು ಪರಮಾತ್ಮಾಧೀನನೆಂಬುದನ್ನು ಸಾಧಿಸಿ ಉಪದೇಶಿಸುತ್ತಾನೆ. ರೋಗ ಪೀಡಿತನಾಗಿ ಮರಣೋನ್ಮುಖನಾಗಿರುವ ಒಬ್ಬ ಮನುಷ್ಯನ ಬಂಧು ಜನರು ಅವನನ್ನು ನೋಡಿ ಮಾತನಾಡಿಸಲು ಬರುತ್ತಾರೆ. ಅವರೆಲ್ಲರೂ ಚಿರಪರಿಚಿತರಾಗಿದ್ದರೂ ಒಬ್ಬೊಬ್ಬರನ್ನೂ ಗುರುತಿಸಿ ಮಾತನಾಡಿಸುತ್ತಾನೆ. ಮತ್ತೊಮ್ಮೆ ಯಾರನ್ನೂ ಗುರುತಿಸುವುದೇ ಇಲ್ಲ. ವಾಗಭಿಮಾನಿದೇವತೆಯು ಮನೋಭಿಮಾನಿಯಲ್ಲಿ ಹೋಗಿ ಸೇರಿ ತನ್ನ ಕಾರ್ಯವನ್ನು ನಿಲ್ಲಿಸಿದಾಗ, ಬಂಧುಗಳನ್ನು ಗುರುತಿಸಿದರೂ ಮಾತನಾಡುವುದಿಲ್ಲ-ಕಣ್ಣಿನಿಂದ ಮಾತ್ರ ನೋಡಿ ಕಣ್ಣೀರಿಡುತ್ತಾನೆ. ಚಕ್ಷುರಭಿಮಾನಿಯು ಮನೋಭಿಮಾನಿಯಲ್ಲಿ ಲೀನನಾದರೆ ಕಣ್ಣನ್ನು ಮುಚ್ಚುತ್ತಾನೆ. ಮನೋಭಿಮಾನಿಯು ಮುಖ್ಯಪ್ರಾಣನಲ್ಲಿಯೂ ಆತನು ತೇಜೋಭಿಮಾನಿ ಲಕ್ಷ್ಮೀದೇವಿಯಲ್ಲಿಯೂ ಆಕೆಯು, ಇವರೆಲ್ಲರನ್ನೂ ಕೂಡಿಕೊಂಡು ಪರದೇವತೆಯಾದ ಪರಮಾತ್ಮನಲ್ಲಿಯೂ ಲೀನಳಾಗಲು, ಜೀವನು ಮೃತನಾಗುತ್ತಾನೆ. ಮನೋಭಿಮಾನಿಯು ಮುಖ್ಯಪ್ರಾಣನಲ್ಲಿ ಲೀನನಾದ ನಂತರ ಸಕಲ ದೇಹೇಂದ್ರಿಯಗಳ ವ್ಯಾಪಾರಗಳಲ್ಲಿ ಜೀವನು ಅಸಮರ್ಥನಾಗುತ್ತಾನೆ. ಪ್ರಾಣವಾಯುಗಳ ವ್ಯಾಪಾರ ಮಾತ್ರ ನಡೆಯುತ್ತಿರುತ್ತದೆ. ಮುಖ್ಯಪ್ರಾಣನು ಲಕ್ಷ್ಮೀಯೊಂದಿಗೆ ಮನುಷ್ಯ

ಶರೀರವನ್ನು ಬಿಟ್ಟು ಹೊರಟ ತಕ್ಷಣವೇ ಜೀವನು ಆ ದೇಹದಲ್ಲಿ ನಿಲ್ಲಲು ಅಸಮರ್ಥನಾಗುತ್ತಾನೆ. ಮುಖ್ಯಪ್ರಾಣನಿಂದ ಶೆಳೆದು ಒಯ್ಯಲ್ಪಡುತ್ತಾನೆ. ಈ ದೃಷ್ಟಾಂತದಿಂದ ಮನುಷ್ಯದೇಹದಲ್ಲಿರುವ ಜೀವನು, ಮನ ಆದಿ ಇಂದ್ರಿಯಗಳ ಅಭಿಮಾನಿ ದೇವತೆಗಳ ಅಧೀನನೂ ಮತ್ತು ಆ ದೇವತೆಗಳಿಗೂ ನಿಯಾಮಕನಾದ ಶ್ರೀಹರಿಯ ಅಧೀನನೂ ಆಗಿರುವನೆಂದು ಸಿದ್ಧವಾಗುತ್ತದೆ.

ಬಗೆಬಗೆಯ ಈ ದೃಷ್ಟಾಂತಗಳನ್ನು ನಿರೂಪಿಸಿ ಉದ್ದಾಲಕರು ಬಹುಪ್ರಕಾರದ ಸಂಶಯಗಳನ್ನು ಪರಿಹರಿಸಿ, (ಅವುಗಳಲ್ಲಿ ಪ್ರಧಾನಗಳಾದ ಕೆಲವು ಸಂಶಯಗಳನ್ನು ಮಾತ್ರ ಇಲ್ಲಿ ನಿರೂಪಿಸಲಾಗಿದೆ), ಪರಮಾತ್ಮನು, ಜೀವನಿಂದ ಅತ್ಯಂತ ಭಿನ್ನನೂ, ಸರ್ವಾಶ್ರಯನೂ, ಸ್ವತಂತ್ರನೂ, ಸರ್ವಕರ್ತನೂ ಆಗಿರುವನೆಂದೂ, ಗುರೂಪದಿಷ್ಟ ಮಾರ್ಗದಿಂದ ಮಾತ್ರ ಲಭ್ಯನೆಂದೂ ಉಪದೇಶಿಸಲು, ಶ್ವೇತಕೇತುವು, ಚೇತನಾಚೇತನಾತ್ಮಕ ಜಗತ್ತಿನಿಂದ ಈಶ್ವರನನ್ನು ಅತ್ಯಂತ ಭಿನ್ನನೆಂದು ತಿಳಿದವನಿಗೂ ತದ್ವಿರುದ್ಧವಾಗಿ ಅಭಿನ್ನನೆಂದು ತಿಳಿಯುವ ಅನ್ಯಥಾ ಜ್ಞಾನಿಗೂ ದೊರೆಯುವ ಫಲ ವೈಲಕ್ಷಣ್ಯವನ್ನು ತಿಳಿಯಲು ಇಚ್ಛಿಸಿ, **''ಭೂಯ ಏವ ಭಗವರ್ ಮಾ ವಿಜ್ಞಾಪಯತು-''** ಹೇ! ಪೂಜ್ಯರೆ, ಈ ವಿಷಯದಲ್ಲಿ ನನ್ನನ್ನು ಪುನಃ ಉಪದೇಶಿಸಿರಿ ಎಂದು ಪ್ರಾರ್ಥಿಸುತ್ತಾನೆ. ಆಗ ಉದ್ದಾಲಕರು ಮುಂದಿನ ೧೬ನೇ ಖಂಡದಲ್ಲಿ ಹೀಗೆ ಉಪದೇಶಿಸುತ್ತಾರೆ:- ರಾಜದ್ರವ್ಯವನ್ನು ಅಪಹರಿಸಿದ ಅಥವಾ ತಾನೇ ರಾಜನೆಂದು ಹೇಳಿಕೊಳ್ಳುವ ಅಪರಾಧವನ್ನೆಸಗಿದವನೆಂದು ಶಂಕಿಸಿ ಸಂಕೋಲೆಗಳಿಂದ ಬಂಧಿಸಿ, ರಾಜಭಟರು ಒಬ್ಬ ಪುರುಷನನ್ನು ರಾಜನ ಎದುರು ತಂದು ನಿಲ್ಲಿಸುತ್ತಾರೆ. ಆ ಪುರುಷನು ತಾನು ನಿರಪರಾಧಿ ಎನ್ನುತ್ತಾನೆ. ಆಗ ರಾಜನು, ಅವನ ಮಾತು ಸತ್ಯವೋ ಸುಳ್ಳೋ ಎಂದು ಪರೀಕ್ಷಿಸಲಿಕ್ಕಾಗಿ ಕಾದ ಕೊಡಲಿಯನ್ನು ಅಪರಾಧಿಯ ಕೈಯಿಂದ ಹಿಡಿಸುತ್ತಾನೆ. ಅವನ ಕೈ ಸುಟ್ಟರೆ ಅಸತ್ಯವನ್ನು ನುಡಿದಿರುವನೆಂದೂ, ಸುಡದಿದ್ದರೆ ಸತ್ಯವನ್ನೇ ಹೇಳಿರುವನೆಂದೂ ನಿರ್ಧರಿಸುತ್ತಾನೆ. ಅಪರಾಧಿಯ ಮಾತು ಸತ್ಯವಾಗಿ ಅವನ ಮೇಲಿನ ಆಪಾದನೆಗಳು ನಿರಾಧಾರಗಳೆಂದು ಸಿದ್ಧವಾದರೆ ಅವನನ್ನು ಮೋಚನೆ ಮಾಡಿ ಸತ್ಯವಂತರ ಹಾಗೆ ಯಥಾಯೋಗ್ಯವಾಗಿ ಗೌರವಿಸುತ್ತಾನೆ. ಆಪಾದನೆಗಳು ನಿಜವೆಂದು ಸ್ಥಿರಪಟ್ಟರೆ ಯೋಗ್ಯ ಶಿಕ್ಷೆಯನ್ನು ವಿಧಿಸುತ್ತಾನೆ. ಆಪಾದನೆಗಳ ಗುರುಲಾಘವಗಳನ್ನನುಸರಿಸಿ ಕಾರಾಗೃಹವಾಸ, ಹಸ್ತಾದಿ ಅವಯವಗಳನ್ನು ಕತ್ತರಿಸುವುದು, ಮರಣದಂಡನೆ ಇತ್ಯಾದಿ ಶಿಕ್ಷೆಗಳನ್ನು ವಿಧಿಸುತ್ತಾನೆ. ಹೀಗೆಯೇ ಜೀವಬ್ರಹ್ಮರ ಭೇದಜ್ಞಾನಿಯನ್ನು ಸಂಸಾರದಿಂದ ಮೋಚನಮಾಡಿ ಸುಖ ಸ್ಥಾನಗಳಲ್ಲಿಡುತ್ತಾನೆ. ಅಭೇದ ಜ್ಞಾನಿಯನ್ನು, ಊರ್ಧ್ವ, ಮಧ್ಯ ಮತ್ತು ಅಧರಗಳೆಂಬ

ತ್ರಿವಿಧ ತಮಸ್ಸು[50]ಗಳಲ್ಲಿ ಯೋಗ್ಯತೆಯನ್ನನುಸರಿಸಿ ಇಡುತ್ತಾನೆ. ಪರರ ಸ್ವತ್ತನ್ನು ಅಪಹರಿಸುವುದಕ್ಕಿಂತ ರಾಜದ್ರವ್ಯವನ್ನು ಅಪಹರಿಸುವುದೂ, ಅದಕ್ಕಿಂತ ರಾಜನಲ್ಲಿರುವ ಸ್ವಾತಂತ್ರ್ಯಾದಿ ಗುಣಗಳನ್ನು ತಿರಸ್ಕರಿಸುವುದೂ, ಅದಕ್ಕಿಂತ ಆ ಗುಣಗಳೆಲ್ಲವೂ ತನ್ನಲ್ಲಿಯೇ ಇವೆ ಎಂದು ಹೇಳಿಕೊಳ್ಳುವುದೂ ಒಂದಕ್ಕಿಂತ ಒಂದು ಅಧಿಕಾಪರಾಧಗಳು. ಆ ರಾಜಗುಣಗಳೆಲ್ಲವೂ ತನ್ನಲ್ಲಿರುತ್ತವೆಂದು ತಿಳಿಯುವವನು ಮಹಾಚೋರನು- ಅವನನ್ನು ಬ್ರಹ್ಮಸ್ತೇನನೆಂದೂ ಆಗಮಗಳು ಕರೆಯುತ್ತವೆ. ಈ ಖಂಡದಲ್ಲಿ ಮಾಡಿರುವ ಉಪದೇಶವು ಅಭೇದಜ್ಞಾನಿಗೆ ದೊರೆಯುವ ನಿತ್ಯದುರ್ಗತಿಯನ್ನು ನಿರೂಪಿಸಿ ಜೀವಬ್ರಹ್ಮರ ಭೇದವನ್ನೇ ಸಾಧಿಸುತ್ತದೆ. ಹೀಗೆ ಉಪದೇಶಿಸಿ, ''**ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ**'' ಎಂದು ಉಪಸಂಹಾರ ಮಾಡಿರುವುದನ್ನು ಗಮನಿಸಿದರೆ ತತ್ತ್ವಮಸಿ ಎನ್ನುವುದಕ್ಕೆ ನೀನು ಆತ್ಮನಲ್ಲ, ಅವನಿಂದ ಭಿನ್ನನೂ, ಅಧೀನನೂ ಆಗಿರುವೆ ಎಂಬ ಅರ್ಥವು, ಈ ವಾಕ್ಯವನ್ನು ಕಾಕುಸ್ವರದಿಂದ (ಪ್ರಶ್ನಾರ್ಥಕವಾಗಿ) ಓದಿಕೊಂಡರೆ ಸಿದ್ಧವಾಗುತ್ತದೆ. ಇಂತಹ ಮಹಾ ಮಹಿಮನಾದ ಪರಮಾತ್ಮನು ನೀನೆ ಆಗಿರುವೆಯಾ? ಹೇ ! ಶ್ವೇತಕೇತೋ ಎಂದು ಉದ್ದಾಲಕರು ಆಕ್ಷೇಪಿಸಿ, ತನ್ಮೂಲಕ ಭೇದಜ್ಞಾನವೇ ಯಥಾರ್ಥವೆಂದು ಉಪದೇಶಿಸಿರುವರೆಂದು ಸ್ಪಷ್ಟವಾಗುತ್ತದೆ.

ಹೀಗೆ ಪುನಃ ಪುನಃ (೯ ಪ್ರಕಾರದಿಂದ) ಮಾಡಿದ ಸದೃಷ್ಟಾಂತ ಉಪದೇಶವು ಭೇದವನ್ನೇ ಸ್ಥಾಪಿಸುತ್ತಿರಲಾಗಿ-**ಸ ಆತ್ಮಾ ತತ್ತ್ವಮಸಿ** ಎಂಬ, ಪ್ರತಿ ಉಪದೇಶದ ಅಂತ್ಯದಲ್ಲಿ ಬರುವ ವಾಕ್ಯಕ್ಕೆ, ಜೀವೇಶ್ವರರ ಅಭೇದ ಪರವಾದ ಅರ್ಥವನ್ನು ತಿಳಿಯುವುದು ಯುಕ್ತಿ ವಿರೋಧವಾಗುತ್ತದೆ. ಇದೂ ಅಲ್ಲದೆ, ಈ ವಾಕ್ಯವನ್ನು ಭೇದಪರವಾಗಿ ಅರ್ಥಮಾಡಲು ಯಾವ ವಿರೋಧವೂ ಇಲ್ಲ. ವ್ಯಾಕರಣ ನಿಯಮವನ್ನನುಸರಿಸಿಯೇ ಈ ವಾಕ್ಯವನ್ನು ಸಃ, ಆತ್ಮಾ, ಅತತ್, ತ್ವಂ, ಅಸಿ ಎಂದು ಪದಚ್ಛೇದ ಮಾಡಲು ಬರುತ್ತದೆ. ಹೀಗೆಂಬುದನ್ನು ಅದ್ವೈತಿಗಳೂ ಒಪ್ಪುತ್ತಾರೆ. ಹೀಗೆ ಪದಚ್ಛೇದ ಮಾಡುವುದರಿಂದ ಅವನೇ ಪರಮಾತ್ಮನು, ನೀನು ಅವನಲ್ಲ-ಅವನಿಂದ ಭಿನ್ನನು ಎಂಬ ಅರ್ಥವು ಸಿದ್ಧವಾಗುತ್ತಿದ್ದರೂ, ಇದೇ ಉಪನಿಷತ್ತಿನಲ್ಲಿ ಏಕಮೇವಾದ್ವಿತೀಯಂ ಮತ್ತು ತತ್ತ್ವಮಸಿಯನ್ನೊಳ- ಗೊಂಡ ಸಮಗ್ರ ವಾಕ್ಯದಲ್ಲಿ ಐತದಾತ್ಮ್ಯಮಿದಂ ಎಂದರೆ ಇರುವುದು

50. ಊರ್ಧ್ವ ತಮಸ್ಸು ಸಾಮಾನ್ಯ ಕಾರಾಗೃಹದಂತೆ; ಮಧ್ಯ ತಮಸ್ಸು ಹಸ್ತ ಛೇದಾದಿ ಶಿಕ್ಷೆಗಳನ್ನು ಅನುಭವಿಸುವ ನರಕಗಳಂತೆ; ಅಧರ ತಮಸ್ಸು ಮಹಾಂಧಕಾರವುಳ್ಳ, ವರ್ಣಿಸಲಾಗದ ನಾನಾ ದುಃಖಗಳುಳ್ಳದ್ದು, ನಿತ್ಯ ಮರಣ ದಂಡನೆರೂಪವಾದುದು. ಈ ಮೂರು ತಮಸ್ಸಿನ ವಿಭಾಗಗಳು ನಿತ್ಯವಾದವುಗಳೇ.

ಬ್ರಹ್ಮವಸ್ತು ಒಂದೇ - ಎಲ್ಲ ಜಗತ್ತೂ ಏತಚ್ಛಬ್ದದಿಂದ ಹೇಳಲ್ಪಡುವ ಬ್ರಹ್ಮಸ್ವರೂಪವೇ ಆಗಿದೆ ಎಂದು ಹೇಳಿರುವುದರಿಂದ ಮೇಲೆ ಹೇಳಿದಂತೆ ಪದಚ್ಛೇದ ಮಾಡಕೂಡದೆಂದು ಅದ್ವೈತಿಗಳು ಹೇಳುತ್ತಾರೆ. ಈ ವಾದವು ಅಂಗೀಕಾರಾರ್ಹವಲ್ಲ. ಏಕಮೇವಾದ್ವಿತೀಯಂ ಎಂಬುದಕ್ಕೆ ಸಮಾಧಿಕರಹಿತ ಸರ್ವೋತ್ತಮನೆಂದರ್ಥ- ಇರುವುದೇ ಒಂದು ವಸ್ತುವೆಂದರ್ಥವಲ್ಲ. ಈತನು ಅದ್ವಿತೀಯ ಪಂಡಿತ ಅಥವಾ ಮಲ್ಲ ಎಂದರೆ ಅನ್ಯಪಂಡಿತರೂ ಮತ್ತು ಮಲ್ಲರೂ ಇಲ್ಲವೆಂದರ್ಥವಲ್ಲ-ಕಿಂತು ಈತನೇ ಸರ್ವಶ್ರೇಷ್ಠನೆಂದರ್ಥ. ಏಕ ಎಂದರೆ ಶ್ರೇಷ್ಠ; ಅದ್ವಿತೀಯ ಎಂದರೆ ಸಮಾಧಿಕರಹಿತ. **ಐತದಾತ್ಮ್ಯಂ** ಎಂಬುದಕ್ಕೆ (ಈತನೇ) ಪರಮಾತ್ಮನೇ ಸ್ವಾಮಿಯಾಗಿ ಉಳ್ಳದ್ದು ಎಂದರ್ಥ. ತತ್, ತ್ವಂ ಅಸಿ ಎಂದು ಪದಭೇದ ಮಾಡಿದರೂ ಅಭೇದಾರ್ಥವೇ ಸಿದ್ಧವಾಗುತ್ತ-ದೆಂದು ಹೇಳಲಾಗುವುದಿಲ್ಲ. **ಸುಪಾಂಸುಲುಕ್ ಎಂಬ ವ್ಯಾಕರಣ ಸೂತ್ರವು,** ಪ್ರಾತಿಪದಿಕದ ಮುಂದಿರುವ ಏಳು ವಿಭಕ್ತಿಗಳ ಪ್ರತ್ಯಯಗಳಿಂದ ಕೂಡಿದ ಶಬ್ದ ಸ್ವರೂಪವು ಪ್ರಥಮಾವಿಭಕ್ತ್ಯಂತ ಶಬ್ದದಂತೆ ಆಗುತ್ತದೆಂದು ಹೇಳುತ್ತದೆ. ಇದರಿಂದ ತತ್ ಎಂಬುದು ಪ್ರಥಮಾ ವಿಭಕ್ತಿ ಶಬ್ದದಂತೆ ಕಂಡರೂ ಅದಕ್ಕೆ ಏಳು ವಿಭಕ್ತಿಗಳ ಅರ್ಥವೂ ಮುಖ್ಯ ವೃತ್ತಿಯಿಂದಲೇ ಕೂಡುತ್ತದೆಂದು ಸಿದ್ಧವಾಗುತ್ತದೆ. ಹೀಗೆ ತತ್, ತ್ವಂ, ಅಸಿ ಎಂಬಲ್ಲಿರುವ ತತ್ ಶಬ್ದಕ್ಕೆ ಅನ್ಯ ವಿಭಕ್ತ್ಯರ್ಥಗಳನ್ನು ತಿಳಿದರೆ ಆತ್ಮನ ಸಂಬಂಧಿಯಾಗಿರುವಿ, ಅವನಿಂದ ಹುಟ್ಟಿರುವಿ, ಅವನ ಆಶ್ರಯದಲ್ಲಿರುವಿ ಇತ್ಯಾದಿ ನಾನಾ ವಿಭಕ್ತಿಗಳಿಂದ ಬೋಧ್ಯವಾದ ಅರ್ಥಗಳನ್ನು ತಿಳಿಯಲು ವ್ಯಾಕರಣ ರೀತ್ಯಾ ಅವಕಾಶವಿದೆ. ಹೀಗೆ ಅರ್ಥಗಳನ್ನು ತಿಳಿಯುವುದ-ರಿಂದ ಮುಖ್ಯ ವೃತ್ತಿಯನ್ನು ಬಿಟ್ಟಂತೆ ಅಲ್ಲ - ವ್ಯಾಕರಣ ವಿರೋಧವಿಲ್ಲ - ದೃಷ್ಟಾಂತಗಳಲ್ಲಿ ಕಂಡುಬರುವ ಸಾದೃಶ್ಯಾರ್ಥಗಳಿಗೆ ವಿರೋಧವೂ ಉಂಟಾಗುವುದಿಲ್ಲ.

ತತ್ತ್ವಮಸಿ ವಾಕ್ಯದಲ್ಲಿರುವ ತತ್ ಪದದಿಂದ ಬೋಧ್ಯನಾದ ಬ್ರಹ್ಮನು ಸರ್ವಜ್ಞನೂ ಸ್ವತಂತ್ರನೂ ಸರ್ವೇಶನೂ ಆಗಿರುವನು. ತ್ವಂ ಪದದಿಂದ ಬೋಧ್ಯನಾದ ಜೀವನು ಅಲ್ಪಜ್ಞನೂ ಅಸ್ವತಂತ್ರನೂ, ದುಃಖಿಯೂ ಆಗಿರುವನೆಂಬುದು ಸರ್ವರ ಅನುಭವಸಿದ್ಧವಾಗಿದೆ. ಹೀಗೆ ವಿರುದ್ಧ ಧರ್ಮ-ಗಳುಳ್ಳ ಎರಡು ವಸ್ತುಗಳಿಗೆ ಐಕ್ಯವು ಕೂಡುವುದಿಲ್ಲ. ತತ್ ಮತ್ತು ತ್ವಂ ಪದ ಬೋಧ್ಯರಾದ ಬ್ರಹ್ಮ ಮತ್ತು ಜೀವರು ವಿರುದ್ಧ ಧರ್ಮಗಳುಳ್ಳವರೆಂಬುದನ್ನು

ಅದ್ವೈತಿಗಳೂ ಒಪ್ಪಿರುವರು. ಈ ಉಭಯರಿಗೆ ಐಕ್ಯವು ಯುಕ್ತಿ ವಿರೋಧ ಎಂಬುದನ್ನು ಅದ್ವೈತ ಭಾಷ್ಯಕಾರರೂ ಅಂಗೀಕರಿಸಿದ್ದಾರೆ.[51] ಈ ಯುಕ್ತಿ ವಿರೋಧವನ್ನು ಪರಿಹರಿಸಲು ಅವರು, ತತ್ಪದಬೋಧ್ಯನಾದ ಸರ್ವಜ್ಞತ್ವಾದಿ ಧರ್ಮವಿಶಿಷ್ಟ ಬ್ರಹ್ಮಚಿತ್ ಮತ್ತು ತ್ವಂ ಪದಬೋಧ್ಯನಾದ ಅಲ್ಪಜ್ಞತ್ವಾದಿ ಧರ್ಮವಿಶಿಷ್ಟ ಜೀವಚಿತ್ ಇವುಗಳ ಧರ್ಮಗಳನ್ನು ಬಿಟ್ಟು ಉಭಯತ್ರ ಮುಖ್ಯ ಬೋಧ್ಯನಾದ ಕೇವಲ ಚಿತ್ ಎಂಬ ಅರ್ಥವನ್ನು ಗ್ರಹಿಸಿ (ಚೇತನನು ನಿರ್ವಿಶೇಷನಾದುದರಿಂದ) ಅಸಿ ಎಂಬ ಪದವು ಇವುಗಳ (ಉಭಯ ಚಿತ್‌ಗಳ) ಐಕ್ಯವನ್ನು ಹೇಳುತ್ತದೆಂದು ವಾದಿಸುತ್ತಾರೆ. ಆದುದರಿಂದ ತತ್ತ್ವಮಸಿ ವಾಕ್ಯವು ಜೀವಬ್ರಹ್ಮರ ಅಭೇದದಲ್ಲಿ ಪ್ರಮಾಣವೆನ್ನುತ್ತಾರೆ. ಈ ವಾದವು ಎಷ್ಟು ಶೋಭಿಸುತ್ತದೆ ಮತ್ತು ಗ್ರಾಹ್ಯವೇ ಎಂಬುದನ್ನು ವಾಚಕರೇ ನಿರ್ಧರಿಸಿಕೊಳ್ಳಬಹುದು.

ಹೀಗೆಯೇ, ಬೃಹದಾರಣ್ಯಕೋಪನಿಷತ್ತಿನಲ್ಲಿ ಬರುವ ''**ಅಹಂ ಬ್ರಹ್ಮಾಸ್ಮಿ**'' ಎಂಬ ವಾಕ್ಯವು ಜೀವಬ್ರಹ್ಮರ ಐಕ್ಯವನ್ನು ಹೇಳುವುದಿಲ್ಲ; ಪರಂತು ಭೇದವನ್ನೇ ಹೇಳುತ್ತದೆ. ಪ್ರಸಕ್ತ ವಾಕ್ಯವನ್ನೊಳಗೊಂಡ ಸಮಗ್ರ ವಾಕ್ಯವು ಹೀಗಿದೆ- ''**ಬ್ರಹ್ಮವಾ ಇದಮಗ್ರ ಆಸೀತ್ ತದಾತ್ಮಾನಮೇವಾವೇತ್ ಅಹಂ ಬ್ರಹ್ಮಾಸ್ಮೀತಿ ।**'' ಬ್ರಹ್ಮವಾ - ಬ್ರಹ್ಮನೇ, ಇದಮಗ್ರೇ - ಈ ಜಗತ್ತಿಗೆ (ಸೃಷ್ಟಿಗೆ) ಪೂರ್ವದಲ್ಲಿ, ಆಸೀತ್ - ಇದ್ದನು; ತತ್- ಆ ಬ್ರಹ್ಮನು, ಆತ್ಮಾನಮೇವ-ತನ್ನನ್ನೇ, ಅಹಂ ಬ್ರಹ್ಮಾಸ್ಮೀತಿ-ನಾನು ಬ್ರಹ್ಮನಾಗಿದ್ದೇನೆ ಎಂದು, ಅವೇತ್ ತಿಳಿದನು. ಈ ಸಮಗ್ರ ವಾಕ್ಯದಲ್ಲಿರುವ ಅಹಂ, ಬ್ರಹ್ಮ, ಅಸ್ಮಿ, ಎಂಬ ಮೂರು ಪದಗಳನ್ನು ಮಾತ್ರ ಬೇರ್ಪಡಿಸಿ ತೆಗೆದುಕೊಂಡು ಅದನ್ನು ಮಹಾವಾಕ್ಯವೆಂಬ ಪದವಿಗೇರಿಸಿ, ಅಹಂ ಶಬ್ದದಿಂದ ಬೋಧ್ಯನಾದವನು ಸಂಸಾರಿ ಜೀವನೆಂಬ ಅರ್ಥವನ್ನು ಹೇಳಿ, ಜೀವ ಬ್ರಹ್ಮರ ಅಭೇದವನ್ನು ಹೇಳುತ್ತದೆಂದು ವಾದಿಸುವುದು ಸರ್ವಥಾ ಯುಕ್ತವಲ್ಲ. ಈ ಸಮಗ್ರ ವಾಕ್ಯದ ಮುಂದಿನ ವಾಕ್ಯವು ಹೀಗಿದೆ:- ''**ತಸ್ಮಾತ್ ತತ್ಸರ್ವಮಭವತ್ ತದ್ಯೋಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್ ತಥರ್ಷೀಣಾಂ ತಥಾ ಮನುಷ್ಯಾಣಾಂ**'' ತಸ್ಮಾತ್-ಆದುದರಿಂದ (ತಾನು ಬ್ರಹ್ಮನೆಂದು

51. ಸರ್ವ ವೇದಾಂತ ಸಿದ್ಧಾಂತಸಾರ ಸಂಗ್ರಹ-ಶಂಕರಾಚಾರ್ಯರು.

ಅನಾದಿಯಿಂದಲೂ ತಿಳಿದಿರುವುದರಿಂದ) ತತ್ -ಬ್ರಹ್ಮನು, ಸರ್ವಂ ಅಭವತ್ -ಪೂರ್ಣನಾದನು; ಯೋ ಯೋ ದೇವಾನಾಂ-ದೇವತೆಗಳ ಮಧ್ಯದಲ್ಲಿ ಯಾರು ಯಾರು, ಪ್ರತ್ಯಬುಧ್ಯತ-ಬ್ರಹ್ಮನನ್ನು ಹೀಗೆ ತಿಳಿದರೊ, (ಬ್ರಹ್ಮನು ತನ್ನನ್ನು ತಾನು ಸರ್ವದಾ ಪೂರ್ಣನೆಂದು ತಿಳಿದಿದ್ದಾನೆಂದು ತಿಳಿದವರೆಲ್ಲರೂ) ಸಏವ-ಆಯಾ ದೇವತೆಯು, ತದಭವತ್-ಪೂರ್ಣನಾದನು (ಬ್ರಹ್ಮನಾದನು); ತಥರ್ಷೀಣಾಂ ತಥಾ ಮನುಷ್ಯಾಣಾಂ-ಋಷಿಗಳಲ್ಲಿ ಮತ್ತು ಮನುಷ್ಯರಲ್ಲಿ ಹೀಗೆ ತಿಳಿದವರೆಲ್ಲರೂ ಪೂರ್ಣರಾದರು. ಬ್ರಹ್ಮಶಬ್ದಕ್ಕೆ ಪೂರ್ಣ ಎಂಬುದು ಮುಖ್ಯಾರ್ಥ; ಕಮಲಾಸನ (ಚತುರ್ಮುಖ), ಜೀವ ಇತ್ಯಾದಿ ಬೇರೆ ಅರ್ಥಗಳೂ ಇವೆ. ಬ್ರಹ್ಮಶಬ್ದದ ಮುಖ್ಯಾರ್ಥವನ್ನು ಪರಮಾತ್ಮನೇ ಎಂಬುದನ್ನು ಸ್ಪಷ್ಟಗೊಳಿಸಲಿಕ್ಕಾಗಿಯೇ ಪರಬ್ರಹ್ಮ ಎಂದೂ ಹೇಳಲಾಗುತ್ತದೆ. (ಬ್ರಹ್ಮನೆಂದರೆ ಪರಬ್ರಹ್ಮನೆಂದೇ). ಪರಬ್ರಹ್ಮನ ಜ್ಞಾನವನ್ನು ಹೊಂದಿದವರೆಲ್ಲರೂ ತಾವು ಪೂರ್ಣರಾದರು. ತಮ್ಮ ಸ್ವರೂಪಗಳ ಪೂರ್ಣಾವಿರ್ಭಾವವನ್ನು ಪಡೆದರು, ಎಂದು ಈ ಶ್ರುತಿ ವಾಕ್ಯವು ಹೇಳುತ್ತದೆ. ಏವಂಚ ಅಹಂ ಬ್ರಹ್ಮಾಸ್ಮಿ ಎಂಬಲ್ಲಿರುವ ಅಹಂ ಶಬ್ದಕ್ಕೆ ಅಲ್ಪಜ್ಞ-ಅಸ್ವತಂತ್ರನಾದ ಸಂಸಾರಿ ಜೀವನೆಂಬರ್ಥವು ಸರ್ವಥಾ ಕೂಡುವುದಿಲ್ಲ.[52] ಹೀಗೆಯೇ, ಅಭೇದವಾದಿಗಳು ಉದಹರಿಸುವ ಇತರ

52. 'ಅಹಂ-ಬ್ರಹ್ಮ-ಅಸ್ಮಿ' ಎಂಬ ಶಬ್ದಗಳಿಗೆ, ಅಹೇಯನಾದುದರಿಂದ (ತ್ಯಾಜ್ಯನಲ್ಲದ್ದರಿಂದ) 'ಅಹಂ' ಎಂದೂ, ಪೂರ್ಣನಾದುದರಿಂದ, 'ಬ್ರಹ್ಮ'ನೆಂದೂ, ಮೇಯನಾದುದರಿಂದ (ಜ್ಞೇಯ-ಯಥಾಯೋಗ್ಯವಾಗಿ ತಿಳಿಯಲ್ಪಡುವವನಾದುದರಿಂದ) 'ಅಸ್ಮಿ' ಎಂದೂ, ಅರ್ಥಗಳು ವಾಕ್ಯಾರ್ಥ ವಿಮರ್ಶೆಯಿಂದ ಸಿದ್ಧವಾಗುತ್ತವೆ. ''ಓಂ ಶಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವವತ್ ಓಂ'' ಎಂಬ ಸೂತ್ರದಲ್ಲಿ, ನಿಯಾಮಕನಾದ ಅಂತರ್ಯಾಮಿ ವಿಷ್ಣುವಿಗೆ, (ಒಳಗಿದ್ದು ಶಾಸನಕರ್ತನೆಂಬ ದೃಷ್ಟಿಯಿಂದ), ಸರ್ವನಾಮತ್ವವನ್ನು ನಿರ್ಣಯಿಸಲಾಗಿದೆ. ಅಹಂ ಮನುರಭವಂ ಸೂರ್ಯಶ್ಚ- (ನಾನು ಮನುವೂ ಸೂರ್ಯನೂ ಆಗಿದ್ದೇನೆ) ಎಂದು ವಾಮದೇವ ಋಷಿಯು, ಉಪದೇಶಿಸಿದಂತೆ, ಬೃಹತೀ ಸಹಸ್ರದ ಸ್ತೋತ್ರದಿಂದ ತುಷ್ಟನಾದ ಇಂದ್ರನು, ವಿಶ್ವಾಮಿತ್ರನಿಗೆ ಪ್ರಾಣೋವಾ ಅಹಂ- (ಪ್ರಾಣ ಶಬ್ದವಾಚ್ಯನಾದ ವಿಷ್ಣುವೇ ನಾನು) ಎಂದು ಉಪದೇಶಿಸಿದಂತೆ, ''ಓಂ ನ ವಕ್ತುರಾತ್ಮೋಪದೇಶಾದಿತಿ ಚೇತ್ ಅಧ್ಯಾತ್ಮ ಸಂಬಂಧ ಭೂಮಾಹ್ಯಸ್ಮಿನ್ ಓಂ'' ಎಂಬ ಸೂತ್ರದಲ್ಲಿ ನಿರ್ಣಯಿಸಿದ ಪ್ರಕಾರ, ಅಹಂ ಮೊದಲಾದ ಸರ್ವನಾಮ ಶಬ್ದಗಳಿಂದ ಮುಖ್ಯವಾಚ್ಯನು ವಿಷ್ಣುವೇ ಎಂದು ತಿಳಿಯಬೇಕು. ಈ ವಿಷಯಕ್ಕೆ ತಸ್ಯೋಪನಿಷದಹಮಿತಿ (ಬೃ. 7ನೇ ಅ-5ನೇ

ಮಹಾವಾಕ್ಯಗಳೆಂಬುವೂ ಸಹ ಭೇದವನ್ನೇ ಹೇಳುತ್ತವೆಯೆಂದು ತಿಳಿಯಲು ಸಾಕಷ್ಟು ಅವಕಾಶವಿದೆ. ಅವು ಅಭೇದಬೋಧಕ ನಿರವಕಾಶ ವಾಕ್ಯಗಳಲ್ಲ. ಪೂರ್ವಾಗ್ರಹರಹಿತವಾಗಿ ಆ ವಾಕ್ಯಗಳನ್ನು ಸಾವಧಾನಮನಸ್ಕರಾಗಿ, ತಾತ್ಪರ್ಯ ಲಿಂಗಗಳನ್ನನುಸರಿಸಿ ವಿಚಾರ ಮಾಡಿದರೆ ಜೀವಬ್ರಹ್ಮರ ಭೇದವನ್ನೇ ಹೇಳುತ್ತವೆಂದು ತಿಳಿಯಬಹುದಾಗಿದೆ. ವೇದಾರ್ಥ- ಗಳನ್ನು ನಿರ್ಣಯಿಸುವುದಕ್ಕಾಗಿಯೇ ಪ್ರವೃತ್ತವಾದ ಬ್ರಹ್ಮಸೂತ್ರಗಳೆಲ್ಲವೂ ಜೀವೇಶ್ವರರ ಭೇದವನ್ನೇ ಹೇಳುತ್ತವೆ. ''**ಭೇದವ್ಯಪದೇಶಾಚ್ಚಾನ್ಯಃ**'' ಇತ್ಯಾದಿ ಸೂತ್ರಗಳು ಸ್ಪಷ್ಟವಾಗಿ ಭೇದವನ್ನು ನಿರ್ಣಯಿಸಿ ನಿರೂಪಿಸುತ್ತವೆ. **ಪೃಥಗುಪದೇಶಾತ್** ಎಂಬ ಸೂತ್ರದಲ್ಲಿ ತತ್ತ್ವಮಸ್ಯಾದಿ ಆಪಾತತಃ (ಅವಿಮರ್ಶದಶೆಯಲ್ಲಿ) ಅಭೇದಾರ್ಥಕ್ಕೆ ಎಡೆಗೊಡುವ ಶ್ರುತಿಗಳಿಗೂ ದ್ವಾಸುಪರ್ಣಾ ಇತ್ಯಾದಿ ನಿರವಕಾಶಭೇದ ಶ್ರುತಿಗಳಿಗೂ ತೋರುವ ಅರ್ಥವಿರೋಧವನ್ನು ಪರಿಹರಿಸಿ, ಜೀವನು ಪರಮಾತ್ಮನಿಂದ ಅತ್ಯಂತ ಭಿನ್ನನೆಂದೇ ನಿರ್ಣಯಿಸಲಾಗಿದೆ. ಎಲ್ಲ ಸೂತ್ರಗಳೂ ಜೀವಬ್ರಹ್ಮರ ಭೇದವನ್ನೇ ಹೇಳುವುವೆಂದು ಪರಕೀಯರೂ (ಮಾಯಾವಾದಿಗಳೂ) ಒಪ್ಪಿರುತ್ತಾರೆ. ಆದರೆ ಈ ಹಿಂದೆ ಹೇಳಿದಂತೆ, **ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ** ಇತ್ಯಾದಿ ಎರಡು ಮೂರು ಸೂತ್ರಗಳು ಮಾತ್ರ ಅಭೇದಾರ್ಥವನ್ನು ಸೂಚಿಸುತ್ತವೆಂದು ಹೇಳುತ್ತಾರೆ. ಹೀಗೆಂಬುದು ಅತ್ಯಂತ ಅಯುಕ್ತವೆಂದು ಭಾಷ್ಯಾದಿ ಶಾಸ್ತ್ರಗ್ರಂಥಗಳನ್ನು ಅಭ್ಯಸಿಸಿ ತಿಳಿಯಬಹುದಾಗಿದೆ- ವಿಸ್ತಾರ ಭಯದಿಂದ ಇಲ್ಲಿ ಆ ವಿವರಣೆಗೆ ಪ್ರವೃತ್ತನಾಗಿಲ್ಲ.

ಜೀವಬ್ರಹ್ಮರ ಭೇದಪರವಾದ ಶ್ರುತಿ ವಾಕ್ಯಗಳನ್ನು ಉದಾಹರಿಸುವುದು ಅವಶ್ಯಕವಲ್ಲ.[53] ಏಕೆಂದರೆ, ಮಹಾವಾಕ್ಯಗಳೆಂದು ಕರೆಯುವ ಕೆಲವಾರು

---

ಬ್ರಾ.)...ಅಹಂ ಎಂಬುದು ಪರಬ್ರಹ್ಮನ ರಹಸ್ಯನಾಮವು; ಮತ್ತು ಅಂತರ್ಯಾಮಿಣ- ಮೀಶೇಶಂ ಅಪೇಕ್ಷ್ಯಾಹಂ ತ್ವಮಿತ್ಯಮಿ । ಇಮೇ ಶಬ್ದಾಃ ಪ್ರಯುಜ್ಯಂತೇ ಸತಿ ಭೇದೇ(ऽ)ಪಿ ವಸ್ತುಷು ॥ (ಭಾಷ್ಯ) ಅಹಂ, ತ್ವಂ ಇತ್ಯಾದಿ ಶಬ್ದಗಳು ಭಿನ್ನವಸ್ತುಗಳಲ್ಲಿರುವ ಅಂತರ್ಯಾಮಿಯನ್ನು ನಿರೂಪಿಸಲಿಕ್ಕೆ ಉಪಯೋಗಿಸಲ್ಪಡುತ್ತವೆ; ಇತ್ಯಾದಿಗಳು ಪ್ರಮಾಣಗಳಾಗುತ್ತವೆ.

53. (1) ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ- (ಮುಂಡಕ-ಶ್ವೇತಾಶ್ವತರ).

ಸಾವಕಾಶ ಶ್ರುತಿವಾಕ್ಯಗಳನ್ನು ಬಿಟ್ಟರೆ ಅವಶಿಷ್ಟ ವೇದಗಳೆಲ್ಲವೂ ನಿರವಕಾಶವಾಗಿ ಭೇದವನ್ನೇ ಹೇಳುತ್ತವೆ. ಹೀಗೆಂಬುದು ಅದ್ವೈತ ವಾದಿಗಳಿಗೆ ಸಮ್ಮತವೇ ಆಗಿದೆ.

ಇನ್ನು, ಅಲ್ಪನಾದ ಜೀವನು ಜ್ಞಾನಾದಿ ಗುಣಪರಿಪೂರ್ಣನೂ ದೋಷ-ದೂರನು ಸರ್ವೋತ್ತಮನೂ ಆದ ಪರಬ್ರಹ್ಮನಿಂದ ಅಭಿನ್ನನೆಂದು ತಿಳಿದು ಉಪಾಸಿಸುವುದು ಮಹಾ ಅನರ್ಥಕರವೆಂಬುದನ್ನು ಗಮನಿಸಬೇಕಾದುದು ಅತ್ಯವಶ್ಯಕ. ''**ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ**'' ಎಂಬ ಈಶಾವಾಸ್ಯ ವಾಕ್ಯವು ಅನ್ಯಥೋಪಾಸಕರಿಗೆ (ಐಕ್ಯೋಪಾಸಕರಿಗೆ) ಅಂಧ ತಮಸ್ಸೆಂಬ ನಿತ್ಯ ದುಃಖಸ್ಥಾನವೇ ಅಂತ್ಯಗತಿ ಎಂದು ಹೇಳುತ್ತದೆ. ಇದರಲ್ಲಿ ಅಡಕವಾಗಿರುವ ಯುಕ್ತಿಗಳನ್ನು ಲಕ್ಷಿಸಬೇಕು. ಅನ್ಯಥಾ ಜ್ಞಾನವನ್ನು ತೊರೆದು ಪಂಚಭೇದ ತಾರತಮ್ಯಪೂರ್ವಕ ವಿಷ್ಣುವೇ ಸರ್ವೋತ್ತಮನೆಂದು ತಿಳಿದು, ಆತನ ಪ್ರಸನ್ನತೆಯನ್ನು ಪಡೆಯುವುದೇ ನಿತ್ಯಸುಖ ರೂಪದ ಮೋಕ್ಷಕ್ಕೆ ಸಾಧನವೆಂದು ಶ್ರುತಿಗಳು ಘೋಷಿಸುವುದನ್ನು ದುರ್ಲಕ್ಷಿಸಿ, ಅದ್ವೈತವಾದವು ಹೇಳುವಂತೆ, ಪ್ರಪಂಚವು ಕೇವಲ ಭ್ರಮಾತ್ಮಕವೆಂದೂ, ತಾನೇ ಬ್ರಹ್ಮನೆಂದೂ

(2) ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ । ತಮಾತ್ಮಸ್ಥಂ ಯೇನುಪಶ್ಯಂತಿ ಧೀರಾಃ ತೇಷಾಂ ಸುಖಂ ಶಾಶ್ವತಂ ನೇತರೇಷಾಂ । (ಕಾಠಕ).

(3) ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ ಜುಷ್ಟಸ್ತತಸ್ತೇನಾಮೃತತ್ವಮೇತಿ- (ಶ್ವೇತಾಶ್ವತರ).

(4) ಸೋಽಶ್ನುತೇಸರ್ವಾನ್ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ (ತೈತ್ತಿರೀಯ).

(5) ಪರಂಜ್ಯೋತಿರುಪಸಂಪದ್ಯಸ್ವೇನರೂಪೇಣಾಭಿನಿಷ್ಪದ್ಯತೇ । ಸ ತತ್ರಪರ್ಯೇತಿ ಜಕ್ಷನ್ಕ್ರೀಡನ್ರಮಮಾಣಃ (ಛಾಂದೋಗ್ಯ).

(6) ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ- (ಮುಂ.)

(7) ಪರಾತ್ಪರಂ ಪುರುಷಮುಪೈತಿ ದಿವ್ಯಂ- (ಮುಂ.)

(8) ಆತ್ಮಾವಾರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ- (ಬೃಹದಾರಣ್ಯ).

ಇತ್ಯಾದಿ ಅಸಂಖ್ಯ ವೇದವಾಕ್ಯಗಳು ಜೀವಬ್ರಹ್ಮರ ಭೇದವನ್ನು (ಮುಕ್ತಿಯಲ್ಲಿ ಸಹ) ಹೇಳುತ್ತವೆ.

ಸಂಸಾರಿ ಜೀವನು ತಿಳಿಯುವುದು ಮಹಾ ಅನರ್ಥಕ್ಕೆ ಕಾರಣವೆಂದು ಶ್ರುತಿಗಳು ಹೇಳುತ್ತಿದ್ದರೂ ಐಕ್ಯೋಪಾಸನೆಯಲ್ಲಿ ತೊಡಗುವುದು ಮೂರ್ಖತನದ ಪರಮಾವಧಿ ಎನಿಸಲಾರದೇ? ಅದ್ವೈತ ಸಿದ್ಧಿಯನ್ನು ಪಡೆಯಬೇಕೆಂಬ ಯತ್ನವು, ಸಾಧುವೆಂದು ಭಾವಿಸುವುದಾದರೆ, ಆ ಪ್ರಕಾರದ ಉಪಾಸನೆಯಲ್ಲಿ ತೊಡಗುವುದರಿಂದ ಲಭಿಸುವ ತಮಸ್ಸೆಂಬ ಅಂತ್ಯಗತಿಯನ್ನು ಗಣನೆಗೆ ತಾರದಿದ್ದರೂ, ಲೌಕಿಕವಾಗಿ ಸಹ ಬಹು ಅನರ್ಥಗಳು ಅನಿವಾರ್ಯವಾಗುತ್ತವೆ. ಪ್ರಪಂಚವು ಭ್ರಮಾತ್ಮಕವೆಂದು ತಿಳಿದೂ ಸಹ ಭೇದವ್ಯವಹಾರವನ್ನೇ ಮುಂದುವರಿಸಿಕೊಂಡು ಬಂದರೆ ಭ್ರಮೆಯ ಪರಿಹಾರವಾಗುವುದೆಂತು? ಜೀವಬ್ರಹ್ಮರು ಭಿನ್ನರೆಂಬ ಅನುಸಂಧಾನವೇ ಸರ್ವದಾ ಇರುವುದಾದರೆ ಐಕ್ಯಜ್ಞಾನವಾಗುವುದೆಂತು? ವೇದಾದಿ ಶಾಸ್ತ್ರಗಳನ್ನು ಅಭ್ಯಸಿಸಿ ಗುರೂಕ್ತವಾದ ಉಪದೇಶಗಳನ್ನು ಆಚರಣೆಯಲ್ಲಿ ತರಲು ಪ್ರಯತ್ನ ಮಾಡದಿದ್ದರೆ ಅಂತಹ ಶಾಸ್ತ್ರಜನ್ಯ ಜ್ಞಾನವು ವ್ಯರ್ಥವಲ್ಲವೆ? ಐಕ್ಯಸಿದ್ಧಿಗಾಗಿ ಭೇದವ್ಯವಹಾರವನ್ನು ಪರಿತ್ಯಜಿಸಿ ನಿರಂತರ ಅಭೇದಾನುಸಂಧಾನವನ್ನು ಯತ್ನಪೂರ್ವಕವಾಗಿ ಸಾಧಿಸಿಕೊಳ್ಳಬೇಕು. ಸದಾ ತದ್ಭಾವಭಾವಿತನಾದರೆ ಯಾವುದೊಂದು ಭಾವದ ಸಿದ್ಧಿಯು ಸಾಧ್ಯವಾಗುತ್ತದೆ. ಅಜ್ಞಾನವನ್ನು ತಿರಸ್ಕರಿಸುವ ಯತ್ನವೇ ನಡೆಯದಿದ್ದರೆ ಅದರ ನಿವೃತ್ತಿಯು ದುಸ್ಸಾಧ್ಯವೇ ಸರಿ. ಎಲ್ಲವೂ ಒಂದೇ-ಬ್ರಹ್ಮ ವಸ್ತುವೇ-ತದ್ಭಿನ್ನ ವಸ್ತುವೇ ಇಲ್ಲ, ಎಂಬ ಭಾವವನ್ನು ಅನುಷ್ಠಾನದಲ್ಲಿ ತರಲು ಯತ್ನಿಸಿದರೆ ಲೋಕವಿನಾಶಕ ಅನರ್ಥಗಳಿಗೆ ಅವಕಾಶವಾಗುತ್ತದೆ. ಎಲ್ಲವೂ ಬ್ರಹ್ಮನೇ ಆದರೆ ಜಾತಿಭೇದಗಳಿಲ್ಲದೆ ವರ್ಣಸಾಂಕರ್ಯವು ಸ್ಥಿರವಾಗುತ್ತದೆ. ಸೊಸೆಯು ಹೆಂಡತಿಯಾಗಲಿ - ಹೆಂಡತಿಯೂ ತಾಯಿಯಾಗಲಿ (ಗಮ್ಯ-ಅಗಮ್ಯಗಳೆಂಬ ಸ್ತ್ರೀ ವಿಭಾಗವು ಇಲ್ಲದಂತಾಗುತ್ತದೆ); ಹಸು ನಾಯಿಯಾಗಲಿ; ಜ್ಞಾನಿ ಹುಚ್ಚನಾಗಲಿ; ಈ ವಿಧ ಅವ್ಯವಸ್ಥೆಗೆ ಕಾರಣವಾಗುತ್ತದೆ. ಇದಕ್ಕೆ ನಿಮಿತ್ತ-ವಾದ ಸರ್ವಾಭೇದ ಪ್ರತಿಪಾದಕ ಶಾಸ್ತ್ರವು ಪ್ರಾಜ್ಞರ ದೃಷ್ಟಿಯಿಂದ ಉನ್ಮತ್ತ ಪ್ರಲಾಪವೆಂದೆನಿಸಲಾರದೆ? ಅಲ್ಪನಾದ ಜೀವನು ಪರಬ್ರಹ್ಮನ ಸ್ವಾತಂತ್ರ್ಯಾದಿ ಗುಣಗಳನ್ನು ತನ್ನಲ್ಲಿ ಆರೋಪಿಸಿಕೊಳ್ಳುವುದು (ತನ್ನನ್ನು ಪರಬ್ರಹ್ಮನಿಂದ ಅಭಿನ್ನನೆಂದು ತಿಳಿಯುವುದು) ಮತ್ತು ಆ ಗುಣಗಳು ಯಾವುವೂ ಪರಬ್ರಹ್ಮನಲ್ಲಿ ಇಲ್ಲವೆಂದು ತಿಳಿಯುವುದೂ ಗುಣಾಪಹಾರ ರೂಪದ ಚೌರ್ಯವಲ್ಲವೆ? ಜೀವಬ್ರಹ್ಮರಲ್ಲಿ, ಅಲ್ಪಜ್ಞತ್ವ - ಸರ್ವಜ್ಞತ್ವ, ಅಲ್ಪಶಕ್ತಿತ್ವ - ಸರ್ವಶಕ್ತಿತ್ವ

ಪಾರತಂತ್ರ್ಯ-ಸ್ವಾತಂತ್ರ್ಯಾದಿ ಮಹದ್ವೈಲಕ್ಷಣ್ಯವಿರುವಾಗ ಚೇತನತ್ವವೆಂಬ (ಚಿತ್ ಎಂಬ) ಒಂದು ದೃಷ್ಟಿಯಿಂದ ಕಿಂಚಿತ್ ಸಾದೃಶ್ಯವಿದ್ದ ಮಾತ್ರಕ್ಕೆ ಉಭಯರ ಐಕ್ಯವನ್ನು ತಿಳಿಯುವುದು ಮಹಾಪರಾಧವಲ್ಲವೆ? ದ್ರವತ್ವ ಮೊದಲಾದ ಕ್ಷುದ್ರ ಸಾದೃಶ್ಯದಿಂದ ಮೂತ್ರಕ್ಕೂ ಶುದ್ಧೋದಕ ಸಮುದ್ರ ಜಲಕ್ಕೂ, ಕಾರಿಕೆ (ವಮನ ದ್ರವ್ಯ) ಮತ್ತು ಕ್ಷೀರಸಮುದ್ರಕ್ಕೂ, ಖರಮೂತ್ರ - ಭಾಗೀರಥೀ ಜಲಕ್ಕೂ, ಕೂರೆಹೇನು-ಐರಾವತಕ್ಕೂ, ಕಸದಕುಪ್ಪೆ-ಮೇರು ಪರ್ವತಕ್ಕೂ ಸಾಮ್ಯವನ್ನು ಹೇಳಬಹುದೇ? ಸಾಮ್ಯವನ್ನು ಹೇಳುವುದೇ ಅಸಹ್ಯವೆನಿಸುವಾಗ ಅವುಗಳಲ್ಲಿ ಅಭೇದವನ್ನು ತಿಳಿಯುವುದಂತೂ ಅತಿ ಹೇಯವಾದ ಮಿಥ್ಯಾಜ್ಞಾನದ ಕುಕಲ್ಪನೆ ಎಂದು ಸಿದ್ಧವಾಗುವುದಿಲ್ಲವೆ? ನಿರ್ಗುಣ, ನಿರ್ವಿಶೇಷ, ಅಖಂಡನೆಂದು ಮುಂತಾಗಿ ಹೇಳುವ ಮಾಯವಾದ ರೀತ್ಯಾ ಜ್ಞಾನಾದಿ ಯಾವ ಧರ್ಮಗಳೂ ಪರಮಾತ್ಮನಲ್ಲಿರುವುದಿಲ್ಲ. ಹೀಗಿದ್ದೂ ಜೀವೇಶ್ವರರ ಅಭೇದವನ್ನು ಹೇಳುವುದರಿಂದ, ಜೀವನಲ್ಲಿ ಅನುಭವಸಿದ್ಧವಾದ ಅಲ್ಪಜ್ಞತ್ವಾದಿ ಅಲ್ಪತ್ವವನ್ನು ಪರಮಾತ್ಮನಲ್ಲಿ ತಿಳಿದಂತಾಗುತ್ತದೆ. ಇದಕ್ಕಿಂತ ಹೆಚ್ಚಿನ ಶ್ರೀಹರಿ ನಿಂದೆ ಎಂಬುದಿದೆಯೆ? ಬ್ರಹ್ಮನೇ ಜೀವಭಾವವನ್ನು ಹೊಂದಿ ತಾನೇ ಕ್ರಿಮಿ, ಕೀಟ, ಪಶ್ವಾದಿ ನೀಚಯೋನಿಗಳಲ್ಲಿ ಹುಟ್ಟುತ್ತಾ ಕರ್ಮವಶನಾಗಿ ಸಂಸಾರದಲ್ಲಿ ಸುತ್ತುವನೆಂದು ಪ್ರಾಪ್ತವಾಗಿ, ಲೋಕದಲ್ಲಿ ಜೀವರ ವಿಷಯಕ್ಕೆ ಪ್ರಯೋಗಿಸುವ ಜಾರ, ಚೋರ, ಚಂಡಾಲ, ಕುರುಡ, ಕುಂಟ ಇತ್ಯಾದಿ ನೀಚತ್ವ ಸೂಚಕ ನಿಂದೆಗಳು (ದೋಷಗಳು) ಬ್ರಹ್ಮನ ಕುತ್ತಿಗೆಗೆ ಬೀಳುವುದಿಲ್ಲವೆ?

ಜೀವಬ್ರಹ್ಮೈಕ್ಯದ ಸಂತತಾನುಸಂಧಾನವು ಮಹದನರ್ಥಗಳಿಗೆ ಕಾರಣ-ವೆಂಬುದನ್ನು ಯುಕ್ತಿ ಮತ್ತು ಲೋಕಾನುಭವಗಳಿಂದ ತಿಳಿಯಬಹುದು. ಜೀವೇಶ್ವರರ ಭೇದವು ಸತ್ಯವಾಗಿದ್ದು ಈಶ್ವರನು ಸರ್ವ ನಿಯಾಮಕ ಸ್ವತಂತ್ರ-ಪ್ರಭುವಾಗಿದ್ದರೆ, ತಾನೇ ಪ್ರಭುವೆಂದು ತಿಳಿಯುವವನಿಗೆ ದೊರೆಯುವ ಶಿಕ್ಷೆಯನ್ನು ಭಾವಿಸಿದರೆ, ನಿತ್ಯದುಃಖರೂಪದ ಅಂಧ ತಮಸ್ಸು ಸಹ ಅತ್ಯಲ್ಪವೆಂದು ಹೇಳಬೇಕಾಗುತ್ತದೆ. ಆ ಮಹಾಪ್ರಭುವಿನ ನಿತ್ಯಭೃತ್ಯನೆಂದು ನಿರಂತರವೂ ಸೇವಿಸುವ ಪ್ರಜೆಯು (ಜೀವನು) ಈಶ್ವರನ ಪರಮ ಪ್ರಸಾದಕ್ಕೆ ಪಾತ್ರನಾಗಿ ನಿತ್ಯಾನಂದ ಸ್ಥಿತಿಯನ್ನು ಹೊಂದುವುದೇ ಸತ್ಯವೆಂದು ಅಂಗೀಕರಿಸ-ಬೇಕಾಗುತ್ತದೆ. ಜೀವಬ್ರಹ್ಮರ ಅಭೇದವೇ ಸತ್ಯವಾಗಿದ್ದರೂ ಭೇದೋಪಾಸಕನಿಗೆ

ಹಾನಿ ಇಲ್ಲ-ತಮಸ್ಸು ಮೊದಲಾದ ಅನರ್ಥಗಳಿಲ್ಲ. ಆದರೆ, ಭೇದವೇ ಸತ್ಯವಾದರೆ ಅಭೇದೋಪಾಸಕನಿಗೆ ಮಹಾ ಅನರ್ಥಗಳೂ (ಇಹಪರಗಳಲ್ಲಿ) ಅಂತ್ಯಕ್ಕೆ ಅಂಧತಮಸ್ಸೂ ತಪ್ಪಿದ್ದಲ್ಲ. ವೇದಾರ್ಥಗಳನ್ನೇ ಸದೃಷ್ಟಾಂತವಾಗಿ ಬುಧ್ಯಾರೂಡ ಮಾಡಿಕೊಡಲು ಪ್ರವೃತ್ತವಾಗಿರುವ ಭಾರತ ಭಾಗವತಾದಿ ಸ್ಮೃತಿಗ್ರಂಥಗಳು ಸಹ ಜೀವೇಶ್ವರರ ಭೇದವನ್ನೇ ನಿರವಕಾಶವಾಗಿ ಸಾಧಿಸುತ್ತವೆ. ಸರ್ವೇಶ್ವರನಾದ ಶ್ರೀವಿಷ್ಣುಮಹಿಮೆಗಳನ್ನು ತಿಳಿದು ಮೋಕ್ಷಾದಿ ಪುರುಷಾರ್ಥ-ಪ್ರದನಾದ ಆ ಮಹಾ ಪ್ರಭುವಿನ ಪ್ರಸನ್ನತೆಯನ್ನು ದೊರಕಿಸಿಕೊಳ್ಳವುದಕ್ಕಾಗಿ ಸರ್ವಸಂಗ ಪರಿತ್ಯಾಗಮಾಡಿ ಭಕ್ತಿಯಿಂದ ಆತನನ್ನು ಸೇವಿಸಿದ ಭಕ್ತರ ಚರಿತ್ರೆ-ಗಳನ್ನೂ ವರ್ಣಿಸುತ್ತವೆ. ಅಜಾಮಿಳ, ಅಂಬರೀಷ, ಮೊದಲಾದ ವಿಷ್ಣುಭಕ್ತರು ತಮ್ಮ ಸ್ವಾಮಿಯಿಂದ ಅನುದಿನವೂ ರಕ್ಷಿತರಾಗಿ ಸಾಂಸಾರಿಕ ವಿಪತ್ತುಗಳಿ-ಗೊಳಗಾಗದೆ ಇಹಪರ ಶ್ರೇಯಸ್ಸುಗಳನ್ನು ಸಾಧಿಸಿದರೆಂಬ ಅಂಶವು ಸಿದ್ಧವಾಗುತ್ತದೆ. ಜ್ಞಾನವಿಲ್ಲದೆ ಭಕ್ತಿ ಇಲ್ಲ. ಅಭೇದ ಜ್ಞಾನದಲ್ಲಿ ಭಕ್ತಿಗೆ ಸ್ಥಾನವಿಲ್ಲ. ಯಾರು ಯಾರಲ್ಲಿ ಭಕ್ತಿ ಮಾಡಬೇಕು - ಏತಕ್ಕಾಗಿ? ಎಂಬ ಮೊದಲಾದ ಪ್ರಶ್ನೆಗಳಿಗೆ ಆ ಮತದ ರೀತ್ಯಾ ಉತ್ತರವಿಲ್ಲ. ಭಕ್ತಿರಹಿತವಾಗಿ ಆಚರಿಸಲ್ಪಡುವ ಶ್ರವಣ, ಮನನ, ಧ್ಯಾನ, ಯಜ್ಞಾದಿ ಕರ್ಮಗಳು, ಸತ್ಯ, ದಯೆ, ದಾನ, ತಪಸ್ಸು ಮೊದಲಾದ ಯಾವುವೂ ಭಕ್ತಿಯಂತೆ ಶ್ರೀವಿಷ್ಣುವಿನ ಸಾಕ್ಷಾದ್ದರ್ಶನಕ್ಕೆ ಅವಶ್ಯಕವಾದ ಅಂತಃಕರಣ ಶುದ್ಧಿಯನ್ನು ದೊರಕಿಸುವುದಿಲ್ಲವೆಂಬುದು ಸಕಲ ಸ್ಮೃತಿಗಳ ಸಾರಭೂತವಾದ ಉಪದೇಶವಾಗಿದೆ.[54] ಆದುದರಿಂದ ನಾನಾ ಅನರ್ಥಗಳಿಗೆ ಆಕರವಾದ ಮಾಯಾವಾದವು ಅತಿ ಹೇಯವೆಂದು ವಿವೇಕಿಗಳು ಗ್ರಹಿಸುವುದರಲ್ಲಿ ಯಾವ ಕಷ್ಟವೂ ಇಲ್ಲ. ಎಲ್ಲ ವೇದಗಳ ಮಹಾ ತಾತ್ಪರ್ಯವೂ, ಪರಬ್ರಹ್ಮನನ್ನು ಸರ್ವ ದೋಷದೂರನೆಂದೂ ಜ್ಞಾನ, ಆನಂದ, ಶೌರ್ಯ, ಧೈರ್ಯ, ಔದಾರ್ಯ, ದಯಾ, ಇತ್ಯಾದಿ ಅಶೇಷ ಸದ್ಗುಣಸ್ವರೂಪನೆಂದೂ,

54. ಧರ್ಮಃ ಸತ್ಯದಯೋಪೇತೋ ವಿದ್ಯಾವಾ ತಪಸಾಽವೃತಾ । ಮದ್ಭಕ್ತ್ಯಾಪೇತ-ಮಾತ್ಮಾನಾಂ ನ ಸಮ್ಯಕ್ ಪ್ರಪುನಾತಿ ಹಿ ॥ (ಭಾಗವತ). ಇದರ ಭಾವಾರ್ಥವು ಮೇಲೆ ಹೇಳಿದಂತಿದೆ.

ಜೀವಜಡಾತ್ಮಕ ಜಗತ್ತಿನಿಂದ ಅತ್ಯಂತ ಭಿನ್ನನೂ ವಿಲಕ್ಷಣನೂ ಎಂದು ತಿಳಿಸುವುದೇ ಆಗಿದೆ.[55]

ಹೀಗೆ ಮಾಯಾವಾದ ಸಿದ್ಧಾಂತಗಳು ಅನುಪಪನ್ನವೂ ಆಗಮ ವಿರುದ್ಧವೂ ಆಗಿವೆ. ಈ ಹಿಂದೆ ಸೂಚಿಸಲಾದ ಸಾಂಖ್ಯಾದಿ ಇತರ ಮತ ತತ್ತ್ವಗಳೂ ಸಹ ವೇದ ವಿರುದ್ಧಗಳೆಂದು ನ್ಯಾಯಬದ್ಧ ಸೂತ್ರಗಳಿಂದ ನಿರ್ಣಯಿಸಿ ಅಧ್ಯಾಯದ ೨ನೇ ಪಾದವು ನಿರೂಪಿಸಿರುತ್ತದೆ. ಗಾಢವಾದ ಅಭ್ಯಾಸದಿಂದ ಅನ್ಯಮತ ನಿರಾಕರಣಪೂರ್ವಕ ತತ್ತ್ವವಾದದ ಸಿದ್ಧಾಂತಗಳನ್ನು ನಿಸ್ಸಂಶಯವಾಗಿ ಗ್ರಹಿಸಬೇಕಾದುದು ಅತ್ಯವಶ್ಯಕ. ಈವರೆಗಿನ ಸಂಗ್ರಹ ನಿರೂಪಣೆಯು ಅಧಿಕಾರಿಗಳನ್ನು ಈ ದಿಕ್ಕಿನಲ್ಲಿ ಪ್ರಚೋದಿಸುವುದೆಂದು ನಂಬಿದ್ದೇನೆ.

## ಪರಿಚ್ಛೇದ ೮

## ಶ್ರೀ ನಾರಾಯಣನ ಗುಣಪೂರ್ಣತ್ವಕ್ಕೆ ಪ್ರಾಪ್ತವಾಗಬಹುದಾದ ಶ್ರುತಿ ವಿರೋಧದ ಪರಿಹಾರ

''**ಅಸತಃ ಸದಜಾಯತ, ಅಸದೇವೇದಮಗ್ರ ಆಸೀತ್**'' ಇತ್ಯಾದಿ ಶ್ರುತಿ-ವಾಕ್ಯಗಳಿಂದ ತೋರುವ ವಿರೋಧವನ್ನು ಪರಿಹರಿಸಿ ಪರಬ್ರಹ್ಮನಿಗೆ ಸರ್ವಥಾ ಉತ್ಪತ್ತಿ ಇಲ್ಲವೆಂದೂ; ಆಕಾಶ, ಮುಖ್ಯವಾಯುಗಳಿಗೆ ಅನಾದಿತ್ವವನ್ನು ಹೇಳುವಂತೆ ತೋರುವ ಶ್ರುತಿ ವಾಕ್ಯಗಳಿಗೂ, **ಸ ಇದಂ ಸರ್ವಮಸೃಜತ** ಎಂಬ ಶ್ರುತಿಯು ಹೇಳುವಂತೆ ಪರಮಾತ್ಮನು ತನ್ನಿಂದ ಭಿನ್ನವಾದ ಸರ್ವವನ್ನೂ

55. ''ಸರ್ವೋತ್ತಮಂ ಸರ್ವದೋಷ ವ್ಯಪೇತಂ ಗುಣೈರಶೇಷೈಃ ಪೂರ್ಣಮನ್ಯಂ ಸಮಸ್ತಾತ್ । ವೈಲಕ್ಷಣ್ಯಾತ್ ಜ್ಞಾಪಯಂತಿ ಪ್ರವೃತ್ತಾಃ ಸರ್ವೇವೇದಾಃ ಮುಖ್ಯತೋ ನೈವ ಚಾನ್ಯತ್ ॥ (ಮಹೋಪನಿಷತ್)

ಸರ್ವದೋಷ ವ್ಯಪೇತಂ-ಸಕಲ ದೋಷರಹಿತನೂ, ಅಶೇಷೈಃ ಗುಣೈಃ ಪೂರ್ಣಂ-ಸಮಸ್ತ ಗುಣಪೂರ್ಣನೂ, ಸಮಸ್ತಾತ್ ಅನ್ಯಂ-ಚೇತನಾಚೇತನ ವಸ್ತು ಸಮುದಾಯದಿಂದ ಭಿನ್ನನೂ, ಸರ್ವೋತ್ತಮಂ-ಸರ್ವೋತ್ತಮನೂ ಎಂದು, ಸರ್ವೇವೇದಾಃ-ಎಲ್ಲವೇದಗಳೂ, ಮುಖ್ಯತಃ ಪ್ರವೃತ್ತಾಃ-ಮುಖ್ಯ ವೃತ್ತಿಯಿಂದ, ವೈಲಕ್ಷಣ್ಯಾತ್ ಜ್ಞಾಪಯಂತಿ- ಅತ್ಯಂತ ವಿಲಕ್ಷಣನೆಂದು ಪ್ರತಿಪಾದಿಸುತ್ತವೆ; ನ ಚೈವಾನ್ಯತ್-ಬೇರೆ ಅಲ್ಲವೇ ಅಲ್ಲ.

ಸೃಷ್ಟಿಸುವನೆಂದು ಹೇಳುವ ಶ್ರುತಿಗೂ ತೋರುವ ಪರಸ್ಪರ ವಿರೋಧವನ್ನೂ ಪರಿಹರಿಸಿ, ಆಕಾಶ ಮುಖ್ಯವಾಯುಗಳಿಗೆ ಸಹ ಉತ್ಪತ್ತಿ ಉಂಟೆಂದೂ, ಶ್ರೀವಿಷ್ಣುವೇ ಜಗತ್ಸ್ರಷ್ಟ್ರ್ಯಾದಿ ಅಷ್ಟಕರ್ತನೆಂದೂ ನಿರ್ಣಯಿಸಿ, ಈ ಪಾದದಲ್ಲಿ ವೇದವಾಕ್ಯಗಳಲ್ಲಿ ತೋರುವ ಪರಸ್ಪರ ವಿರೋಧ ರೂಪದ ಶ್ರುತಿ ವಿರೋಧವನ್ನು ನಿವಾರಿಸಲಾಗಿದೆ. **ದ್ವಾಸುಪರ್ಣಾ** ಇತ್ಯಾದಿ ಶ್ರುತಿಗಳಿಗೂ **ಅಹಂ ಬ್ರಹ್ಮಾಸ್ಮಿ** ಮೊದಲಾದ ಶ್ರುತಿಗಳಿಗೂ ಆಪಾತತಃ ತೋರುವ ವಿರೋಧಗಳನ್ನು ಪರಿಹರಿಸಿ ಜೀವಬ್ರಹ್ಮರ ಭೇದವನ್ನೂ ಸ್ಥಾಪಿಸಲಾಗಿದೆ. (ಈ ವಿವರಗಳನ್ನು ಹಿಂದಿನ ಪರಿಚ್ಛೇದದಲ್ಲಿ ವಿಸ್ತರಿಸಲಾಗಿದೆ). ಜೀವಸ್ವರೂಪದ ನಿತ್ಯತ್ವವನ್ನೂ ಮುಕ್ತಿಯೋಗ್ಯರ ಜೀವಸ್ವರೂಪವು ಜ್ಞಾನಾನಂದಾತ್ಮಕವೆಂಬುದನ್ನೂ ನಿರ್ಣಯಿಸಿ ನಿರೂಪಿಸಲಾಗಿದೆ. ಜಗತ್ಕರ್ತನಾದ ಶ್ರೀವಿಷ್ಣುವೇ ಸ್ವತಂತ್ರ ಸರ್ವಕರ್ತ-ನಾದುದರಿಂದ ಜೀವರು ಕರ್ತೃತ್ವಶಕ್ತಿಯುಳ್ಳವರೆಂಬುದನ್ನೂ, ಅದನ್ನು ಸ್ವೇಚ್ಛಾನುಸಾರ ಉಪಯೋಗಿಸಿ ನಾನಾವಿಧ ಕಾರ್ಯಗಳನ್ನು ನಿರ್ವಹಿಸಬಲ್ಲ-ರೆಂಬುದನ್ನೂ ತಿರಸ್ಕರಿಸಲು ಬರುವುದಿಲ್ಲ. **ಜೀವಾದ್ಭವಂತಿ ಭೂತಾನಿ** ಇತ್ಯಾದಿ ಶ್ರುತಿಗಳು ಜೀವನಿಗೆ ಕರ್ತೃತ್ವವನ್ನು ಹೇಳುವಂತೆ ತೋರುತ್ತವೆ-ಲೋಕಾನುಭವವೂ ಹೀಗೆಯೇ ಇದೆ. ನಮ್ಮ ಇಚ್ಛಾನುಸಾರ ಯತ್ನಗಳಲ್ಲಿ ತೊಡಗಿ ವಿವಿಧ ಕಾರ್ಯಗಳನ್ನು ಸಾಧಿಸುತ್ತೇವೆ. ಕಾರ್ಯಸಿದ್ಧಿ- ಅಸಿದ್ಧಿಗಳು ಮತ್ತು ಅವುಗಳಿಂದ ಲಭಿಸುವ ಫಲಗಳು ನಮ್ಮ ಅಧೀನಗಳಲ್ಲವೆಂಬ ಅನುಭವವು ಬಹುವೇಳೆ ಉಂಟಾದರೂ, ಇವುಗಳಿಗೆ ಸ್ವತಂತ್ರೇಶ್ವರನೇ ಕಾರಣನೆಂದು ತಿಳಿಯದೆ ಅನ್ಯ ಕಾರಣಗಳನ್ನು ಊಹಿಸಿ, ಅವುಗಳನ್ನು ನಿಯಂತ್ರಿಸಲು ಪ್ರವೃತ್ತರಾಗುತ್ತೇವೆ. ಇಚ್ಛಾನುಸಾರ ವರ್ತಿಸುವ ಸ್ವಾತಂತ್ರ್ಯವು ಜೀವರಿಗಿಲ್ಲವೆಂಬ ಪ್ರಕ್ರಿಯೆಯನ್ನು ಗ್ರಹಿಸುವುದು ಬಹು ಕಷ್ಟ. ಈ ವಿಷಯದಲ್ಲಿ ಆಗಮಗಳು ಅನುಭವವನ್ನು ವಿರೋಧಿಸುವಂತೆ ತೋರುತ್ತವೆ. ಆದುದರಿಂದ ಈ ಪ್ರಕ್ರಿಯೆಯನ್ನು ಸ್ವಲ್ಪ ವಿಸ್ತರಿಸಿ ವಿಮರ್ಶಿಸುವುದು ಅವಶ್ಯಕವೇ ಆಗಿದೆ. **ತಥಾಹಿ:-**

ಕರ್ತೃತ್ವವೆಂದರೆ ಯಾವುದೊಂದು ಕಾರ್ಯವನ್ನು ನಿರ್ವಹಿಸುವ ಶಕ್ತಿ ಎಂದು ಸಾಮಾನ್ಯವಾಗಿ ಹೇಳಬಹುದು. ಈ ವಿಧ ಕ್ರಿಯಾಶಕ್ತಿಯು ಜಡ ವಿಲಕ್ಷಣನಾದ ಜೀವನ (ಚೇತನನ) ಸ್ವರೂಪಧರ್ಮವೇ ಆಗಿದೆ. ಸ್ವತಂತ್ರಃ

ಕರ್ತಾ (ಪಾಣಿನೀ ಸೂತ್ರ ೧-೪-೫೪), **ಕರ್ತೃತ್ವಂ ಪ್ರತಿ ಸ್ವಾತಂತ್ರ್ಯಂ** ಇತ್ಯಾದಿ ವಾಕ್ಯಗಳು, ಕಿಂಚಿತ್ (ಅಲ್ಪ) ಸ್ವಾತಂತ್ರ್ಯವಾದರೂ ಇರದಿದ್ದರೆ ಯಾವುದೊಂದು ವಸ್ತುವನ್ನು ಕರ್ತೃತ್ವವುಳ್ಳದ್ದೆಂದು ತಿಳಿಯುವುದು ಅರ್ಥವಿಲ್ಲದ ಮಾತೆಂದು ಹೇಳುವಂತೆ ತೋರುತ್ತವೆ. **ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷು ಕದಾಚನ** (ಗೀತಾ)- ಕರ್ಮದಲ್ಲಿ ಮಾತ್ರ ಅಧಿಕಾರ ಉಂಟು; ಆದರೆ ಫಲದಲ್ಲಿ ಸ್ವಾತಂತ್ರ್ಯವಿಲ್ಲೆಂಬ ಅರ್ಥವನ್ನು ತಿಳಿದು ಜೀವನಿಗೂ ಕಿಂಚಿತ್ ಸ್ವಾತಂತ್ರ್ಯವಿರಲೇಬೇಕೆಂದು ಕೆಲವರು ಈ ಪ್ರಕ್ರಿಯೆಯನ್ನು ವಿವೇಚಿಸುತ್ತಾರೆ. ಇದೂ ಅಲ್ಲದೆ ವಿಷ್ಣುರಹಸ್ಯಾದಿ ಸ್ಮೃತಿಗಳಲ್ಲಿ ಶ್ರೀಹರಿಯು ತನ್ನ ಸ್ವಾತಂತ್ರ್ಯ ಗುಣವನ್ನು ವಿಭಾಗಿಸಿ ಒಂದಂಶವನ್ನು ಜೀವರಿಗೆ ಸಹ ದಾನಮಾಡಿರುವನೆಂದು ನಿರೂಪಿತವಾಗಿದೆ. ಈ ಕಾರಣಗಳಿಂದ ಜೀವಕರ್ತೃತ್ವ ಪ್ರಕ್ರಿಯೆಯು ಬಹು ತೊಡಕಿನ ಪ್ರಶ್ನೆ ಇದ್ದಂತೆ ತೋರುವುದು ಸಹಜವಾಗಿದೆ. ಎಲ್ಲಕ್ಕೂ ಮೇಲಾಗಿ ಜೀವನಲ್ಲಿ ಇಚ್ಛಾನುಸಾರ ವರ್ತಿಸುವ ಸ್ವಾತಂತ್ರ್ಯವೇ ಇಲ್ಲದಿದ್ದರೆ, ಎಲ್ಲವನ್ನೂ ಶ್ರೀಹರಿಯೇ ಸ್ವತಂತ್ರನಾಗಿ ಮಾಡಿಸುವುದಾದರೆ ಕರ್ಮಫಲಗಳಿಗೆ ಜೀವನು ಏಕೆ ಭಾಗಿಯಾಗಬೇಕೆಂಬ ಶಂಕೆಗೆ ಪರಿಹಾರವೇ ಇಲ್ಲದಂತಾಗುತ್ತದೆ. ಈ ರೂಪದ ನಾನಾ ಸಂಶಯಗಳನ್ನು ನಿರಾಕರಿಸಿ, ಜೀವನು ಕರ್ತನೇ ಸರಿ- ಆದರೆ ಸ್ವತಂತ್ರಕರ್ತನಲ್ಲ ಎಂದು ಈ ಪಾದದ ೧೭ನೆ ಕರ್ತೃತ್ವಾಧಿಕರಣದಲ್ಲಿ ನಿರ್ಣಯಿಸಲಾಗಿದೆ.

ಜೀವನು ಸ್ವತಂತ್ರಕರ್ತನಾದರೆ, ತನಗೆ ಅಪೇಕ್ಷಿತವಾದ ಸುಖವನ್ನು ಏಕೆ ತಪ್ಪದೆ ಸಾಧಿಸಿಕೊಳ್ಳುವುದಿಲ್ಲ ಮತ್ತು ತನ್ನ ಇಚ್ಛೆಗೆ ವಿರುದ್ಧವಾಗಿ ಅಹಿತವಾದ ದುಃಖವನ್ನು ಏಕೆ ಹೊಂದುತ್ತಾನೆಂಬ ಪ್ರಶ್ನೆಗಳನ್ನು ಉತ್ತರಿಸಲಾಗುವುದಿಲ್ಲ.[56] ಆದುದರಿಂದ ಜೀವನು ಅಸ್ವತಂತ್ರ ಅಥವಾ ಪರಾಧೀನ ಕರ್ತನೆಂದು ತಿಳಿಯಬೇಕು. ಪರಾಧೀನಕರ್ತನಿಗೂ ಲೋಕದಲ್ಲಿ ಕಿಂಚಿತ್ ಸ್ವಾತಂತ್ರ್ಯವು ಕಂಡುಬರುತ್ತದೆ. ಭೃತ್ಯನೊಬ್ಬನು ತನ್ನ ಸ್ವಾಮಿಯ ಆಜ್ಞೆಯನ್ನು ಪಾಲಿಸಿ ಆತನ ಪ್ರಸನ್ನತೆಯನ್ನು ಪಡೆಯಬಹುದು; ಅಥವಾ ಉಲ್ಲಂಘಿಸಿ,

---

56. **ಓಂ ಇತರವ್ಯಪದೇಶಾದ್ಧಿತಾಕರಣಾದಿ ದೋಷ ಪ್ರಸಕ್ತಿಃ ಓಂ**, ಮತ್ತು **ಓಂ ಅಶ್ಮಾದಿವಚ್ಚತದನುಪಪತ್ತಿಃ ಓಂ** ಎಂಬ ಸೂತ್ರಗಳಲ್ಲಿ ಈ ಯುಕ್ತಿಗಳನ್ನು ಗಮನಿಸಿ ನಿರ್ಣಯಗಳನ್ನು ಹೇಳಲಾಗಿದೆ.

ಇಲ್ಲವೆ ಅಸಮರ್ಪಕವಾಗಿ ನಡೆಸಿ, ಆತನ ನಿಗ್ರಹ ಅಥವಾ ಕೋಪಕ್ಕೆ ಗುರಿಯಾಗಬಹುದು. ಜೀವಚೇತನರು ಈ ಬಗೆಯ ಪರಾಧೀನ ಕರ್ತೃತ್ವ ಉಳ್ಳವರೆಂದು ತಿಳಿಯಬಾರದು. ಕಲ್ಲು ಮೊದಲಾದ ಜಡವಸ್ತುಗಳು ಚೇತನ ಸಹಾಯವಿಲ್ಲದೆ ಚಲಿಸಲು ಸಹ ಅಸಮರ್ಥಗಳಾಗಿರುವಂತೆ ಜೀವನು, ಈ ಪ್ರೇರಕ ಈಶಶಕ್ತಿಯ ಸಹಾಯವಿಲ್ಲದೆ ಯಾವ ಅಲ್ಪ ಕಾರ್ಯವನ್ನು (ಉಸಿರಾಡಲಿಕ್ಕೆ ಸಹ) ಮಾಡಲು ಅಸಮರ್ಥನು. ಕ್ರಿಯಾಶಕ್ತಿಯು ಜೀವಸ್ವರೂಪವೇ ಆದರೂ ಪರಮಾತ್ಮನ ಪ್ರೇರಕ ಶಕ್ತಿ ಇಲ್ಲದೆ ಪ್ರಕಟವಾಗಲಾರದು. ಹೀಗಿದ್ದರೂ ಜೀವನು ಜಡದಂತೆ ಕರ್ತೃತ್ವಶೂನ್ಯನಲ್ಲ (ಕ್ರಿಯಾ ಶಕ್ತಿರಹಿತನಲ್ಲ) – ಜಡದಷ್ಟು ಅಸ್ವತಂತ್ರನು. ಜೀವನು ಪರಾಧೀನಕರ್ತನೆಂಬುದನ್ನು ಅಂಗೀಕರಿಸದಿದ್ದರೆ ವಿಧಿ ನಿಷೇಧ (ಇದನ್ನು ಮಾಡು–ಬಿಡು ಇತ್ಯಾದಿ) ರೂಪದ ಶಾಸ್ತ್ರಗಳಿಗೆ ವೈಯರ್ಥ್ಯವುಂಟಾಗುತ್ತದೆ (ವ್ಯರ್ಥಪ್ರಯೋಜನರಹಿತ). ವಿಧಿ ನಿಷೇಧಗಳ ಪಾಲನೆಯಿಂದ ಫಲಗಳನ್ನು ಹೊಂದುವ ಅಧಿಕಾರಿಗಳಿಲ್ಲವೆಂದು ಪ್ರಾಪ್ತವಾಗುತ್ತದೆ. ಜ್ಞಾನ, ಇಚ್ಛಾ, ಕ್ರಿಯಾಶಕ್ತಿಗಳಿಲ್ಲದ ಜಡವಸ್ತುಗಳಿಗೆ ವಿಧಿ ನಿಷೇಧಗಳು ಅನ್ವಯಿಸುವುದಿಲ್ಲ. ಸ್ವತಂತ್ರನಾದುದರಿಂದ ಸ್ವೇಚ್ಛಾನುಸಾರ ಕ್ರೀಡಿಸುವ ಈಶ್ವರನಿಗೂ ವಿಧಿ ನಿಷೇಧಗಳು ಸಂಬಂಧಿಸುವುದಿಲ್ಲ. ಶಾಸ್ತ್ರಗಳು ವ್ಯರ್ಥವಲ್ಲ. ಆದುದರಿಂದ ಅಸ್ವತಂತ್ರನಾದ ಜೀವನೇ ವಿಧಿ–ನಿಷೇಧಪಾತ್ರನು.[57] ಮುಕ್ತ್ಯರ್ಥವಾಗಿ ಸಾಧನಾನುಷ್ಠಾನಗಳನ್ನು ಕೈಗೊಳ್ಳುವುದರಿಂದ ಸಂಸಾರಾವಸ್ಥೆಯಲ್ಲಿ ಸಹ ಜೀವನು ಕರ್ತೃತ್ವವುಳ್ಳವನೆಂದು ಕಂಡುಬರುತ್ತದೆ. ಈ ಕರ್ತೃತ್ವವು ಸತ್ಯವಾದುದು, ಕಾಲ್ಪನಿಕವಲ್ಲ. ಸ್ವತಂತ್ರಕರ್ತನೇ ಕರ್ತೃತ್ವವುಳ್ಳವನೆಂದು ತಿಳಿಯುವುದು ಸರಿಯಲ್ಲ. ಜೀವನಲ್ಲಿ ಕರ್ತೃತ್ವವು ಅನುಭವಸಿದ್ಧವಾಗಿದೆ. ಅದು ಸ್ವತಂತ್ರ ಕರ್ತೃತ್ವವಲ್ಲವೆಂಬುದೂ ಅನುಭವಸಿದ್ಧವೇ. ನಮ್ಮ ಇಚ್ಛಾನುಸಾರ ಜ್ಞಾನ ಲಾಭವಾಗುವುದೆಂಬ ನಿಯಮವಿಲ್ಲ– ಅಪರೋಕ್ಷಜ್ಞಾನವು (ಬ್ರಹ್ಮ– ದರ್ಶನವು) ನಾವು ಅಪೇಕ್ಷಿಸಿದಾಗ ದೊರೆಯ–ದಿರುವಂತೆ. ನಮ್ಮ ಇಚ್ಛೆಯಂತೆ ಪ್ರತಿ ಕರ್ಮವನ್ನೂ ಮಾಡಿ ಮುಗಿಸುವೆವೆಂಬ ನಿಯಮವಿಲ್ಲ. ಆ ಕರ್ಮದ ಫಲವನ್ನು ತಪ್ಪದೆ ಪಡೆಯುವೆವೆಂಬ ನಿಯಮವೂ

---

57. **'ಓಂ ಕರ್ತಾ ಶಾಸ್ತ್ರಾರ್ಥವತ್ತ್ವಾತ್ ಓಂ'** ಎಂಬ ಸೂತ್ರದಲ್ಲಿ ಈ ಯುಕ್ತಿಯಿಂದ ಜೀವನು ಆಧೀನ ಕರ್ತೃತ್ವವುಳ್ಳವನೆಂದು ನಿರ್ಣಯಿಸಲಾಗಿದೆ.

ಇಲ್ಲ. ಸ್ವತಂತ್ರಕರ್ತನು ಅಪೇಕ್ಷಿತ ಸರ್ವಸ್ವವನ್ನೂ ಹೊಂದಿ ಪೂರ್ಣನಾಗಿರಬೇಕು. ಮುಕ್ತಿಜೀವರು ಸಹ ಅಪೇಕ್ಷಿತ ಸರ್ವವನ್ನೂ ಇಚ್ಛಾಮಾತ್ರದಿಂದ ಹೊಂದುವರೆಂಬ ಕಾರಣದಿಂದ ಪೂರ್ಣಕಾಮರೆಂದು ತಿಳಿಯಲಾಗದು. ಮುಕ್ತರು ಆಪ್ತಕಾಮರು-ಪೂರ್ಣಕಾಮರಲ್ಲ. ಅವರ ಅಪೇಕ್ಷೆಗಳು ಯೋಗ್ಯತಾನುಗುಣವಾಗಿ ಅಲ್ಪಗಳೇ ಆಗಿರುತ್ತವೆ. ಅವುಗಳನ್ನು ಇಚ್ಛಾಮಾತ್ರದಿಂದ ಹೊಂದುವರಾದುದರಿಂದ, ಒಂದು ದೃಷ್ಟಿಯಿಂದ ಸ್ವಯೋಗ್ಯಪೂರ್ಣರೆಂದೂ ಹೇಳಬಹುದು. ಮುಕ್ತರು ಜಗತ್ಸೃಷ್ಟ್ಯಾದಿಗಳಲ್ಲಿ ಶಕ್ತರಲ್ಲ - ಅದನ್ನು ಇಚ್ಛಿಸುವುದೂ ಇಲ್ಲ. ಕರ್ತೃತ್ವವಿದ್ದರೂ ಪರಾಧೀನತ್ವವಿರಬಹುದೆಂಬಲ್ಲಿ ಲೋಕಾನುಭವವೇ ಸಾಕ್ಷಿ. ಯಜಮಾನನಿಂದ ನಿಯಮ್ಯನಾದ ಬಡಗಿಯು ಗೃಹನಿರ್ಮಾಣ ಕಾರ್ಯದಲ್ಲಿ ತೊಡಗುವುದನ್ನು ದೃಷ್ಟಾಂತವಾಗಿಟ್ಟುಕೊಂಡರೆ, ನಿಯಮ್ಯನೂ ಕರ್ತನೂ ಒಬ್ಬ ವ್ಯಕ್ತಿಯೇ ಆಗಿರಬಹುದೆಂಬುದನ್ನು ಮನಗಾಣಬಹುದು. ಹೀಗೆಯೇ ಜೀವನು ಕರ್ತನೂ ಈಶ್ವರಾಧೀನನೂ ಆಗಿರುವನೆಂದು ತಿಳಿಯುವಲ್ಲಿ ಯಾವ ಅನುಪಪತ್ತಿಯೂ ಇರುವುದಿಲ್ಲ. **''ಓಂ ಯಥಾ ಚ ತಕ್ಷೋಭಯಥಾ ಓಂ''** ಎಂಬ ಸೂತ್ರದಲ್ಲಿ ಜೀವನು ಪರಾಧೀನಕರ್ತನೆಂದು ನಿರ್ಣಯಿಸಲು ಈ ದೃಷ್ಟಾಂತವನ್ನು ಉಪಯೋಗಿಸಲಾಗಿದೆ. ಈ ಪರಾಧೀನ ಕರ್ತೃತ್ವವೂ ಈಶ್ವರಾಧೀನವೆಂದು ಆಗಮಗಳು ಸಾರುತ್ತವೆ.

ಜೀವನು ದತ್ತಸ್ವಾತಂತ್ರ್ಯವುಳ್ಳವನೆಂದು ಹೇಳುವ ಆಗಮವಾಕ್ಯಗಳಿಂದ ಜೀವನು ಈಶ್ವರದತ್ತವಾದ ಕಿಂಚಿತ್ ಸ್ವಾತಂತ್ರ್ಯವುಳ್ಳವನೆಂಬ ಅರ್ಥವನ್ನು ತಿಳಿಯಲು ಅವಕಾಶವಿದೆ. ಆದರೆ ಆ ವಾಕ್ಯಗಳ ಅರ್ಥವು ಹಾಗಲ್ಲ. ಜೀವನು ಜಡದಂತೆ ಪೂರ್ಣ ಅಸ್ವತಂತ್ರನು. ಪರಮಾತ್ಮನೊಬ್ಬನೇ ಸ್ವತಂತ್ರನು. ಸ್ವಾತಂತ್ರ್ಯ-ವೆಂಬುದು ಪರಮಾತ್ಮನಲ್ಲಿ ಮಾತ್ರ ನಿಷ್ಠವಾದ ಗುಣ, ಪರಮಾತ್ಮನಿಗೂ ಅವನ ಗುಣಗಳಿಗೂ ಭೇದವಿಲ್ಲೆಂದೂ, ಗುಣಗಳೇ ಅವನ ಸ್ವರೂಪವೆಂದೂ (ಆತನ ಸ್ವರೂಪವು ಗುಣಾತ್ಮಕವೆಂದೂ) ಆಗಮಗಳು ನಿರವಕಾಶ ವಾಕ್ಯಗಳಿಂದ ನಿರೂಪಿಸುತ್ತವೆ. ಆದುದರಿಂದ ಸ್ವಾತಂತ್ರ್ಯವನ್ನು ಅನ್ಯರಿಗೆ ಕೊಡುವುದೆಂದರೆ, ತಾನೇ ಅವರಲ್ಲಿ ಇರುವುದೆಂದರ್ಥ. ಜ್ಞಾನಾನಂದಾದಿ ಗುಣಗಳಂತೆ

ಪರಮಾತ್ಮನ ಸ್ವಾತಂತ್ರ್ಯಗುಣವೂ ಅಪರಿಮಿತವಾದುದು-ಅನಂತವಾದುದು. ಈ ಅಪಾರವಾದ ಸ್ವಾತಂತ್ರ್ಯಗುಣದಲ್ಲಿ ಒಂದಂಶವನ್ನು ತೆಗೆದರೆ ಅದನ್ನು ಪುನಃಪುನಃ ನಾನಾ ಅಂಶಗಳನ್ನಾಗಿ ವಿಭಾಗಿಸಿದರೆ ಆ ಎಲ್ಲ ಅಂಶಗಳೂ (ಪ್ರತಿಯೊಂದು) ಅಪರಿಮಿತಗಳೇ ಆಗಿರುವುವು. ಪರಮಾತ್ಮನು ಅನಂತಾಂಶ-ಗಳುಳ್ಳವನು. ಪ್ರತಿಯೊಂದು ಅಂಶವೂ ಮೂಲರೂಪದಿಂದ ಅಭಿನ್ನವೂ, ಅದರಂತೆ ಪೂರ್ಣವೂ ಆದುದು. ಈಶ್ವರನು ಏಕಕಾಲದಲ್ಲಿ ಅಣುವಿಗಿಂತ ಅಣುವೂ ಮಹತ್ತಿಗಿಂತ ಮಹತ್ತೂ ಆಗಿದ್ದಾನೆ. ಲೋಕಾನುಭವದಿಂದ ಪರಸ್ಪರ ವಿರುದ್ಧಗಳೆಂದು ಹೇಳಬಹುದಾದ ಎಲ್ಲ ಧರ್ಮಗಳೂ ಆತನಲ್ಲಿವೆ. ಮಹದ್ರೂಪಗಳಲ್ಲಿರುವ ಎಲ್ಲ ಮಹಿಮೆಗಳೂ ಅಣುರೂಪದಲ್ಲಿಯೂ ಇವೆ. ಆತನ ಸರ್ವಾಂಶಗಳೂ ಕರಚರಣಾದಿ ಅವಯವಗಳುಳ್ಳ ಸುಂದರ, ಪವಿತ್ರ (ಅಪ್ರಾಕೃತ) ರೂಪಗಳೇ ಆಗಿವೆ. ಈಶ್ವರನು ಈ ಪ್ರಕಾರದ ಅಚಿಂತ್ಯ ಮಹಿಮೋಪೇತನೆಂದು ಶ್ರುತಿಗಳು ಹೇಳುತ್ತಿರಲು, ಸ್ವಾತಂತ್ರ್ಯದಾನವೆಂದರೆ, ತನ್ನ ಸ್ವಾತಂತ್ರ್ಯಾಂಶಗಳನ್ನು ಜೀವರಲ್ಲಿಡುವುದೆಂದೇ ಅರ್ಥವಾಗುವು-ದಿಲ್ಲವೇ?[58] ಈಶ್ವರನು ತನ್ನ ಕ್ರಿಯೆಗಳಿಂದ, ಅನ್ಯರ ಕ್ರಿಯಾಶಕ್ತಿಗಳನ್ನು ವ್ಯಕ್ತಗೊಳಿಸುವುದು ಮತ್ತು ವ್ಯಕ್ತಗೊಳಿಸದಿರುವುದು ಎಂಬಿವೇ ಸ್ವಾತಂತ್ರ್ಯದಾನ ಮತ್ತು ಅದರ ಅಪಹಾರವು. ಶ್ರೀಹರಿಯು ಹೀಗೆ ತನ್ನ ಸ್ವಾತಂತ್ರ್ಯಾಂಶಗಳನ್ನು ಜೀವರಲ್ಲಿ ಸ್ಥಾಪಿಸಿ, ಅವರ ಕ್ರಿಯಾಶಕ್ತಿಗಳನ್ನು ವ್ಯಕ್ತಗೊಳಿಸುವ, ಅಂಶಗಳು

---

58. **'ತಥಾ ಚ ಸ್ವಾತಂತ್ರ್ಯದಾನಂ ನಾಮ ತದ್ರೂಪೇಣ ಜೀವಪ್ರವೇಶಃ' ; 'ಸ್ವಗತ ಸ್ವಾತಂತ್ರ್ಯ ದತ್ತಸ್ವಾತಂತ್ರ್ಯರೂಪದ್ವಯಂ ಹರೇರೇವ' ; 'ಆವಿರ್ಭೂತ ಸ್ವಸ್ವಾತಂತ್ರ್ಯ ಭಾಗ ಸಾಧ್ಯ ಕ್ರಿಯಾಕರಣಶಕ್ತ್ಯಭಿವ್ಯಕ್ತಿರ್ಭೂಯಾದಿತಿ ಈಶ್ವರ ಸಂಕಲ್ಪ ಏವ ಸ್ವಾತಂತ್ರ್ಯದಾನಂ ನ ತು ಅನ್ಯಾಧೀನ ಸತ್ತಾಕತ್ವರೂಪ ಸ್ವಾಭಿನ್ನ ಸ್ವಾತಂತ್ರ್ಯಸ್ಯ ಅನ್ಯನಿಷ್ಠತ್ವ ಸಂಪಾದನಂ'** - ಸ್ವಾತಂತ್ರ್ಯದಾನವೆಂದರೆ ತನ್ನಾಮಕ ರೂಪದಿಂದ ಜೀವನನ್ನು ಪ್ರವೇಶಿಸುವುದೇ ಆಗಿದೆ. ಸ್ವಗತ ಸ್ವಾತಂತ್ರ್ಯ-ದತ್ತ ಸ್ವಾತಂತ್ರ್ಯವೆಂಬವು ಶ್ರೀಹರಿಯ ಎರಡು ರೂಪಗಳೇ. ತಾನೇ ಅಭಿವ್ಯಕ್ತಿಗೊಳಿಸುವ ಸ್ವಾತಂತ್ರ್ಯಾಂಶಗಳಿಂದಲೇ ಸಾಧ್ಯವಾದ ಜೀವನಿಷ್ಠ ಕ್ರಿಯಾಕರಣ ಶಕ್ತಿಯು, ಪ್ರಕಟವಾಗಲೆಂಬ ಈಶ್ವರ ಸಂಕಲ್ಪವೇ ಸ್ವಾತಂತ್ರ್ಯದಾನವು-ತನ್ನ ಸ್ವರೂಪಭೂತವಾದ ಸ್ವಾತಂತ್ರ್ಯಾಂಶವನ್ನು ಅನ್ಯಾಧೀನಗೊಳಿಸುವುದೆಂಬ ಅರ್ಥದಲ್ಲಿ ಇನ್ನೊಬ್ಬರಲ್ಲಿ ಇಡುವುದಿಲ್ಲ.

ದತ್ತಸ್ವಾತಂತ್ರ್ಯವೆಂಬ ಹೆಸರಿನಿಂದ ಕರೆಯಲ್ಪಡುತ್ತವೆ. ಜೀವನು ಈ ದತ್ತಸ್ವಾತಂತ್ರ್ಯನಾಮಕ ಶ್ರೀಹರಿಯರೂಪದಿಂದ ಪ್ರೇರಿತನಾಗಿ ಶ್ರೀಹರಿಯು ಮಾಡುವ ಕರ್ಮವನ್ನೇ ತಾನು ಮಾಡುತ್ತಾನಲ್ಲದೆ ತನಗೆ ತಾನೇ ಕರ್ಮ-ಮಾಡುವ ಶಕ್ತಿಯುಳ್ಳವನಲ್ಲ.[59]

ಜೀವರಲ್ಲಿರುವ ಶ್ರೀಹರಿಯ ಸ್ವಾತಂತ್ರ್ಯಾಂಶಗಳು ಮೂರು ವಿಧವೆಂದು ಹೇಳಲಾಗುತ್ತದೆ. ದತ್ತಸ್ವಾತಂತ್ರ್ಯ, ಸ್ವಗತ ಸ್ವಾತಂತ್ರ್ಯ ಮತ್ತು ಸರ್ವಸ್ವಾತಂತ್ರ್ಯ-ಗಳೆಂದು ಅವುಗಳ ನಾಮ. ಅವುಗಳಿಂದಾಗುವ ಕಾರ್ಯಗಳು ಪ್ರಪ್ರತ್ಯೇಕ-ವಾದರೂ, ಪ್ರತಿಯೊಂದರಲ್ಲಿ ಈ ಮೂರೂ ಅಂಶಗಳಿವೆ. ಪ್ರಚುರ-ಅಪ್ರಚುರ ವಿಶೇಷಗಳಿಂದ ಪ್ರತ್ಯೇಕ ನಾಮಗಳಿಂದ ವ್ಯವಹರಿಸಲ್ಪಡುತ್ತವೆ. ಇವುಗಳಲ್ಲದೆ ಜೀವಸ್ವರೂಪದಲ್ಲಿರುವ ಬಿಂಬನಾದ ಶ್ರೀಹರಿಯ ಸ್ವಾತಂತ್ರ್ಯಾಂಶವಿದ್ದೇ ಇದೆ. ಇದು ಅನಾದಿ ಮತ್ತು ನಿತ್ಯ-ಮುಕ್ತಜೀವರ ವಿಹಾರಾದಿ ಕ್ರಿಯೆಗಳಿಗೆ ಕಾರಣ ವಾಗುತ್ತದೆ-ಸಂಸಾರಾವಸ್ಥೆಯಲ್ಲಿ ಇದರ ಕಾರ್ಯವಿಲ್ಲ. ತ್ರಿವಿಧ ಜೀವರಿಗೆ ಸೃಷ್ಟ್ಯಾರಂಭದಲ್ಲಿ ಅವರವರ ಗತಿಸಾಧನೆಗಾಗಿ ಸ್ಥೂಲದೇಹ ಸಂಬಂಧವನ್ನಿತ್ತು ಸೃಷ್ಟಿಮಾಡಿ, ಶ್ರೀಹರಿಯು ಪೂರ್ವೋಕ್ತ ತ್ರಿವಿಧ ಸ್ವಾತಂತ್ರ್ಯಾಂಶಗಳಿಂದ ಅವರಲ್ಲಿ (ಪ್ರತಿಜೀವನಲ್ಲಿ) ಪ್ರವೇಶಿಸುತ್ತಾನೆ. ತಾರತಮ್ಯೋಪೇತರಾದ ಬ್ರಹ್ಮಾದಿ ಜೀವರೂಪ ಅಧಿಷ್ಠಾನಗಳಲ್ಲಿ ಶ್ರೀಹರಿಯ ಈ ಅಂಶಗಳು ಸಾಧಿಸಿಕೊಡುವ ಕಾರ್ಯವಿಶೇಷಗಳಿಂದ ತಾರತಮ್ಯಾನುಗುಣವಾದ ಅಧಿಕ ನ್ಯೂನ ಸ್ವಾತಂತ್ರ್ಯಾಂಶಗಳನ್ನು ಅಲ್ಲಲ್ಲಿ ಸ್ಥಾಪಿಸಿರುವನೆಂದು ನಿರೂಪಿಸಲಾಗುತ್ತದೆ. ಈ ದೃಷ್ಟಿಯಿಂದಲೇ ಚತುರ್ಮುಖನಲ್ಲಿ ೫೨, ವಾಯುದೇವರಲ್ಲಿ ೪೮

59 'ದತ್ತಸ್ವಾತಂತ್ರ್ಯನಾಮ್ನಾ ವೈ ಹರೇರೀಶೇನ ಸರ್ವದಾ ।
ಪ್ರೇರಿತಃ ಕರ್ಮಕುರ್ವಾಣೋ ನ ಮೇ ಶಕ್ತಿಃ ಕಥಂಚನ ॥' (ಪ್ರಕಾಶ ಸಂಹಿತಾ)
ಶ್ರೀಹರಿಯ ದತ್ತಸ್ವಾತಂತ್ರ್ಯನಾಮಕ ರೂಪದಿಂದಲೇ ಸರ್ವದಾ ಪ್ರೇರಿತನಾಗಿ ಕರ್ಮ ಮಾಡುವ ನನಗೆ, ಅನ್ಯಥಾ ಕರ್ಮಶಕ್ತಿ ಇಲ್ಲ. **ಕರ್ತೃತ್ವಂ ಕರಣತ್ವಂ ಚ ಸ್ವಭಾವಶ್ಚೇತನಾಧೃತಿಃ । ಯತ್ಪ್ರಸಾದಾದಿಮೇ ಸಂತಿ ನ ಸಂತಿಯದುಪೇಕ್ಷಯಾ ॥** (ಶ್ರುತಿ)- ಕರ್ತೃತ್ವಾದಿ ಜೀವಸ್ವಭಾವ ಧರ್ಮಗಳೆಲ್ಲವೂ ಶ್ರೀಹರಿ ಪ್ರಸಾದದಿಂದಲೇ ಇರುತ್ತವೆ. ಆತನು ಉಪೇಕ್ಷಿಸಿದರೆ ಇವು ಯಾವುವೂ ಇರುವುದಿಲ್ಲ.

ಸ್ವಾತಂತ್ರ್ಯಾಂಶಗಳನ್ನು ಸ್ಥಾಪಿಸಿರುವನೆಂದು ಹೇಳುವ ಆಗಮ ವಾಕ್ಯಗಳನ್ನೂ ಅರ್ಥಮಾಡಿಕೊಳ್ಳಬೇಕು.[60] ಈ ಮೂರರಲ್ಲಿ ದತ್ತಸ್ವಾತಂತ್ರ್ಯವೆಂಬುದು ಲಿಂಗದೇಹದಲ್ಲಿರುವ ಸೂಕ್ಷ್ಮಮನ ಆದಿಗಳ ದ್ವಾರಾಸ್ಥೂಲದೇಹಗಳಲ್ಲಿರುವ ಮನ ಆದಿಗಳೊಂದಿಗೆ ಸೇರಿ ಸ್ಥಿತಿ ಕಾಲದಲ್ಲಿ ಜೀವನಿಂದಾಗಬೇಕಾದ ಕಾರ್ಯನಿಷ್ಪತ್ತಿಗೆ ಕಾರಣವಾಗುತ್ತದೆ. ಜೀವನ ಸಾಧನಾವಸ್ಥೆಯಲ್ಲಿ (ಅಪರೋಕ್ಷಕ್ಕೆ ಮೊದಲು) ಜೀವಯತ್ನಕ್ಕೂ ಅಹಂ ಮಮಕಾರ ರೂಪದ ಭ್ರಮೆಗೂ ಹೇತುವಾಗುತ್ತದೆ. ನನಗೂ ಮಾಡುವ-ಬಿಡುವ ಅಲ್ಪ ಸ್ವಾತಂತ್ರ್ಯ ಉಂಟೆಂಬ ಭ್ರಮೆಗೆ ದತ್ತಸ್ವಾತಂತ್ರ್ಯಾಂಶವು ಕಾರಣವಾಗುತ್ತದೆಂದರ್ಥ. ಸ್ವಗತ ಸ್ವಾತಂತ್ರ್ಯಾಂಶವೂ ಹೀಗೆಯೇ ವಿಭಕ್ತವಾಗಿ ಬ್ರಹ್ಮಾದಿ ವಿವಿಧ ಅಧಿಷ್ಠಾನಗಳಲ್ಲಿದ್ದು ತ್ರಿವಿಧ ಜೀವರ ಪಕ್ವ ಮತ್ತು ಅಪಕ್ವ (ಬ್ರಹ್ಮ ದರ್ಶನದ ನಂತರ ಮತ್ತು ಆ ಮೊದಲೂ ಸಹ) ಉಭಯದೆಶೆಗಳಲ್ಲಿ ಪಾರತ್ರಿಕ ಫಲಸಾಧನ ವಿಷಯದ ಪ್ರವೃತ್ತಿಗಳಿಗೆ ಕಾರಣವಾಗುತ್ತದೆ-ಎಂದರೆ ಈ ವಿಧ ಕಾರ್ಯಗಳನ್ನು ಜೀವನಿಂದ ಮಾಡಿಸುತ್ತದೆ. ಸರ್ವಸ್ವಾತಂತ್ರ್ಯಾಂಶವು ಇತರ ಸ್ವಾತಂತ್ರ್ಯಾಂಶಗಳಂತೆ ವಿಭಾಗಿಸಲ್ಪಟ್ಟು ರಮಾಬ್ರಹ್ಮಾದಿಗಳಲ್ಲಿ ಸ್ಥಾಪಿತವಾಗಿ ಜೀವನ ಪಕ್ವದೆಶೆಯಲ್ಲಿ, ಅಹಂಮಮಕಾರಗಳನ್ನು ತೊರೆದು ವಿರಕ್ತಿಪೂರ್ವಕ ಸರ್ವವೂ ಈಶಾಧೀನವೆಂಬ ಜ್ಞಾನದಿಂದ ಇಷ್ಟಕಾರ್ಯ ಸಂಪಾದನೆಗೆ ಕಾರಣವಾಗುತ್ತದೆ. ಹೀಗೆ ಅನಾದಿ ಕಾಲದಿಂದಲೂ, ಸೃಷ್ಟಿಗೆ ಬಂದನಂತರ ಮುಕ್ತಿಯವರೆಗೂ, ಮುಕ್ತಿಯಲ್ಲಿ ಸಹ, ಪ್ರತಿಬಿಂಬವನ್ನು ಬಿಂಬದಂತೆ, ಅನಂತ ಜೀವರನ್ನು

---

60. ತನ್ನ 400 ಸ್ವಾತಂತ್ರ್ಯಾಂಶಗಳಲ್ಲಿ ತನ್ನಲ್ಲಿ 132-3/4, ಲಕ್ಷ್ಮೀದೇವಿಯಲ್ಲಿ 67-1/4, ಬ್ರಹ್ಮನಲ್ಲಿ 52, ವಾಯುವಿನಲ್ಲಿ 48, ರುದ್ರನಲ್ಲಿ 20, ಇಂದ್ರಕಾಮರಲ್ಲಿ 15, ಇತರ ತತ್ತ್ವಾಭಿಮಾನಿಗಳಲ್ಲಿ 10, ಜೀವನಲ್ಲಿ 10, ಕಲ್ಯಾದಿ ದೈತ್ಯರಲ್ಲಿ 45 ಅಂಶಗಳನ್ನು (ದತ್ತ ಸ್ವಾತಂತ್ರ್ಯನಾಮಕ ಅಂಶಗಳನ್ನು) ವಿಭಾಗದಿಂದ ಸ್ಥಾಪಿಸಿರುವನೆಂದು ಆಗಮ ವಾಕ್ಯಗಳು ನಿರೂಪಿಸುತ್ತವೆ. ಸೃಷ್ಟವಾದ ವಿಶ್ವದ ಸಕಲ ಕಾರ್ಯನಿರ್ವಹಣೆಗಾಗಿ (ಅಸಂಖ್ಯ ಜೀವರ ಸಾಧನಾರ್ಥವಾಗಿ) ಶ್ರೀಹರಿಯು ತನ್ನ ಅನಂತಾನಂತ ಸ್ವಾತಂತ್ರ್ಯಾಂಶಗಳಲ್ಲಿ ಕೆಲವನ್ನು ಮಾತ್ರ ಉಪಯೋಗಿಸುತ್ತಾನೆಂದು ಹೇಳಲಾಗುತ್ತದೆ. ಈ ಅಂಶಗಳ ಸಂಖ್ಯೆಯನ್ನು 400 ಎಂದು ಇಟ್ಟುಕೊಂಡರೆ ಅದರ ವಿಭಾಗವು ಮೇಲೆ ಕಂಡಂತೆ ಇರುತ್ತದೆ.

ನಿಯಮನ ಮಾಡುತ್ತಾ ಶ್ರೀಹರಿಯ ಅನಂತ ಸ್ವಾತಂತ್ರ್ಯಾಂಶಗಳು ಕ್ರೀಡಿಸುತ್ತವೆ.[61] ಹೀಗೆ ಜ್ಞಾನೇಚ್ಛಾಕ್ರಿಯಾಶಕ್ತಿಗಳು ಸ್ವರೂಪ ಧರ್ಮಗಳಾಗಿರುವ ಚೇತನರಿಗೆ ಸ್ವತಂತ್ರ ಕರ್ತೃತ್ವವಿಲ್ಲದಿರುವಾಗ ತದ್ರಹಿತ ಅಚೇತನ ವಸ್ತುವಿಗೆ ಕ್ರಿಯಾಸ್ವಾತಂತ್ರ್ಯ - ವಿಲ್ಲೆಂದು ಹೇಳತಕ್ಕದ್ದೇನಿದೆ? ಈಶ್ವರನ ಈ ಅದ್ಭುತ ಮಹಿಮೆಯನ್ನು, "**ತತ್ರತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತೀಃ ಪ್ರಬೋಧಯನ್ । ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ॥, ಸ ಹಿ ಸರ್ವಕರ್ತಾ, ತೇನ ವಿನಾ ತೃಣಮಪಿ ನ ಚಲತಿ**" ಇತ್ಯಾದಿ ಶ್ರುತಿವಾಕ್ಯಗಳು ನಿರೂಪಿಸುತ್ತವೆ. ಚೇತನಾಚೇತನಗಳೆಲ್ಲವೂ ಸ್ವರೂಪದಿಂದ ಸಹ ಶ್ರೀಹರಿಯ ಅಧೀನಗಳಾದರೂ, ಸತ್ಯಸಂಕಲ್ಪನಾದ ಆತನು ಅವುಗಳ ಅನಾದಿ ನಿತ್ಯಸ್ವಭಾವಗಳ ಸಂರಕ್ಷಕನಾಗಿರುವನು. ಶಕ್ತನಾದರೂ ಅವುಗಳ ಸ್ವಭಾವವನ್ನು ಬದಲಿಸುವುದಿಲ್ಲ - ಜೀವ- ಸ್ವರೂಪಗಳನ್ನು ವ್ಯತ್ಯಾಸಗೊಳಿಸುವುದಿಲ್ಲ. ವಿಭಿನ್ನ ಯೋಗ್ಯತೆಯುಳ್ಳ ಜೀವರಿಂದ ನಾನಾ ಪ್ರಕಾರದ ಭಿನ್ನಕರ್ಮಗಳನ್ನು ಮಾಡಿಸಿದರೂ ಶ್ರೀಹರಿಗೆ ಈ ಕಾರಣದಿಂದ ವೈಷಮ್ಯ ದೋಷವಿಲ್ಲ-ಸತ್ಯ ಸಂಕಲ್ಪನಾದುದರಿಂದ.

ಜಡದಂತೆ ಪೂರ್ಣ ಅಸ್ವತಂತ್ರನಾದ ಜೀವನಿಂದ ಎಲ್ಲವನ್ನೂ ಈಶ್ವರನೇ ಮಾಡಿ, ಮಾಡಿಸುವುದರಿಂದ ವಿಧಿ ನಿಷೇಧಾಚರಣೆಗಳ ಫಲಗಳಿಗೆ ಜೀವನು ಹೇಗೆ ಪಾತ್ರನೆಂಬುದನ್ನು ತಿಳಿಯಬೇಕಾದುದು ಅವಶ್ಯಕ. ಶ್ರೀಹರಿಯ ಪ್ರೇರಣೆಯಂತೆಯೇ ಜೀವನು ನಡೆಯುವುದೆಂಬುದು ಸತ್ಯ. ಈ ಪ್ರಮೇಯದ ಭಾವವನ್ನು ಸ್ಪಷ್ಟವಾಗಿ ಗ್ರಹಿಸಬೇಕು. ವಿಧಿ-ಚೋದನೆ-ಪ್ರೇರಣೆ ಎಂಬ ಶಬ್ದಗಳು ಪರ್ಯಾಯ (ಸಮಾನಾರ್ಥಕ) ಪದಗಳು. ಕರ್ಮಚೋದನೆಗೆ ನಿಮಿತ್ತಗಳು ಮೂರು. ಈಶ್ವರನ ನಿತ್ಯಸಂಬಂಧವುಳ್ಳ ಜೀವನು ಪರಿಜ್ಞಾತಾ ಎನಿಸುವನು.

---

61. ಪ್ರತಿಬಿಂಬ ಕ್ರಿಯಾಯಾಶ್ಚ ಬಿಂಬಕ್ರಿಯಾನುಸ್ಯೂತತಾ ।
ಯದಾಶ್ನಾತಿ ತದಾಶ್ನಾತಿ ಯದಾವಕ್ತಿತದ್ವೈವ ಸಃ ॥
ಕಿಮತ್ರ ಬಹುನೋಕ್ತೇನ ನಾ ಕೃತಂ ಕ್ರಿಯತೇಜನ್ಯೈಃ ॥ - (ಶಾಂಡಿಲ್ಯತತ್ತ್ವ)
ಬಿಂಬನು ಉಂಡರೆ ಪ್ರತಿಬಿಂಬನು ಉಣ್ಣುವನು; ಮಾತನಾಡಿದರೆ ಮಾತನಾಡುವನು; ಹೆಚ್ಚೇನು, ಬಿಂಬ ಮಾಡದ ಏನನ್ನೂ ಪ್ರತಿಬಿಂಬನು ಮಾಡನು. ಪ್ರತಿಬಿಂಬದ (ಜೀವನ) ಕ್ರಿಯೆಯು ಬಿಂಬಕ್ರಿಯಾ ಪ್ರವೇಶವುಳ್ಳದ್ದು.

ವಿಧಿನಿಷೇಧಗಳನ್ನು ನಿರೂಪಿಸುವ ಶ್ರುತಿಸ್ಮತಿಗಳಿಂದಾಗುವ ಅರಿವು ಜ್ಞಾನ-ವೆನಿಸುವುದು. ಕರ್ಮಗಳನ್ನಾಚರಿಸಿ ಫಲಗಳನ್ನು ಹೊಂದಬೇಕೆಂಬ ಇಚ್ಛೆ ಮತ್ತು ಪ್ರಯತ್ನ ಸಹ ಜ್ಞೇಯವೆನಿಸುವುದು. ಕರ್ಮಚೋದನೆಯಲ್ಲಿ ಇವು ಮೂರು ನಿಮಿತ್ತಗಳು. ಹೀಗಿದ್ದರೂ ಕರ್ಮ ಚೋದನೆಯೇ ತ್ರಿವಿಧವೆಂದು ಹೇಳಲ್ಪಡುತ್ತದೆ.[62] ಶ್ರೀಹರಿಯು ಜೀವನಿಗೆ ಅವನ ಯೋಗ್ಯತಾನುಸಾರ ತನ್ನ ಆಜ್ಞಾರೂಪಗಳಾದ ಶ್ರುತಿಸ್ಮತಿಗಳ ಶ್ರವಣ ಪಠಣಾದಿ ದ್ವಾರಾ ಕರ್ತವ್ಯಜ್ಞಾನವನ್ನು ಹುಟ್ಟಿಸಿ ಇಚ್ಛಾಪ್ರಯತ್ನಗಳನ್ನು ಪ್ರವೃತ್ತಿಗೊಳಿಸುತ್ತಾನೆ. ಜೀವಸ್ವರೂಪಭೂತವಾದ ಕ್ರಿಯಾಶಕ್ತಿಯಿಂದಲೇ ಯತ್ನ. ಜೀವನ ಯೋಗ್ಯತೆ ಮತ್ತು ಪೂರ್ವಕರ್ಮ-ಗಳಿಗನುಸಾರವಾಗಿ ಶ್ರೀಹರಿಯಿಂದ ಪ್ರಾಪ್ತವಾಗುವ ಫಲವನ್ನು ಅಭಿವ್ಯಕ್ತಿ-ಗೊಳಿಸುವಲ್ಲಿ ಯತ್ನವು ನಿಮಿತ್ತ ಮಾತ್ರವೆಂದು ಪುರುಷ ಪ್ರಯತ್ನದ ಸ್ಥಾನವನ್ನು ನಿರ್ದೇಶಿಸಲಾಗಿದೆ. '**ಯತ್ನೋಯತೋ ಹಠಕರ್ಮ ಪ್ರಯೋಕ್ತಾ**' ಇತ್ಯಾದಿ ತಾತ್ಪರ್ಯ ನಿರ್ಣಯ ವಾಕ್ಯಗಳು ಈ ಪ್ರಮೇಯವನ್ನು ಸ್ಪಷ್ಟಗೊಳಿಸುತ್ತವೆ. **ಸ್ವಭಾವಾಖ್ಯಾಯೋಗ್ಯತಾ ಯಾ ಹಠಾಖ್ಯಾ ಯಾನಾದಿ ಸಿದ್ಧಾ ಸರ್ವಜೀವೇಷು ನಿತ್ಯಾ । ಸಾಕಾರಣಾ ಪ್ರಥಮಂ ತು ದ್ವಿತೀಯಮನಾದಿ ಕರ್ಮೈವ ತಥಾ ತೃತೀಯಃ। ಜೀವಪ್ರಯತ್ನಃ ಪೌರುಷಾಖ್ಯಸ್ತದೇತತ್‌ತ್ರಯಂ ವಿಷ್ಣೋರ್ವಶಗಂ ಸದೈವ। ಸ ಕಸ್ಯಚಿನ್ನ ವಶೇ ವಾಸುದೇವಃ ಪರಾತ್ಪರಃ ಪರಮೋಸೌ ಸ್ವತಂತ್ರಃ ॥** (ತಾತ್ಪರ್ಯ ನಿರ್ಣಯ)- ಜೀವಸ್ವಭಾವವೆಂಬುದೇ ಯೋಗ್ಯತೆ. ಅದು ಹಠ ಎಂದು ಕರೆಯಲ್ಪಡುತ್ತದೆ. ಈ ಯೋಗ್ಯತೆ ಅಥವಾ ಹಠವು ಸರ್ವ ಜೀವರಲ್ಲಿ ಅನಾದಿ ಸಿದ್ಧವೂ ನಿತ್ಯವೂ ಆಗಿದೆ. ಜೀವರ ನಾನಾ ವಿಧ ಕರ್ಮಪ್ರವೃತ್ತಿಗೆ ಇದು ಮೊದಲನೆಯ ಕಾರಣ. ಅನಾದಿ ಕರ್ಮವು ಎರಡನೆಯ ಕಾರಣ. ಪೌರುಷವೆಂದು ಕರೆಯಲ್ಪಡುವ ಜೀವಪ್ರಯತ್ನವು ಮೂರನೆಯ ಕಾರಣ. ಈ ಮೂರೂ ಸರ್ವದಾ ಶ್ರೀವಿಷ್ಣು ವಶ. ವಿಷ್ಣು ಮಾತ್ರ ಯಾರ ವಶನೂ ಅಲ್ಲ-ಪರಾತ್ಪರನು (ಲಕ್ಷ್ಮೀದೇವಿಗಿಂತ ಅನಂತಗುಣಾಧಿಕನು), ಸರ್ವೋತ್ತಮನು, ಸ್ವತಂತ್ರನು.

62. ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ । (ಗೀತಾ) ಕರ್ಮಚೋದನೆಯು ಜ್ಞಾನ, ಜ್ಞೇಯ, ಪರಿಜ್ಞಾತಾ ಎಂದು ತ್ರಿವಿಧವಾದುದು.

ಜೀವನು ಪರಾಧೀನ ಕರ್ತನಾದುದರಿಂದ ತನ್ನಿಂದ ಸಂಭವಿಸಿದ ಕರ್ಮಗಳ ಫಲಗಳನ್ನು ಭೋಗಿಸಲೇಬೇಕು – ಭೋಗಿಸುವಂತೆ ಶ್ರೀಹರಿಯೇ ಮಾಡುತ್ತಾನೆ. ಫಲಭೋಗವೂ ಆತನ ಅಧೀನವೇ. ಶ್ರೀಹರಿಯು ಪ್ರೇರಕನಾದರೂ, ಆತನು, ಪೂರ್ಣಕಾಮನೂ ನಿರಪೇಕ್ಷನೂ, ಸ್ವತಂತ್ರನೂ ಆದುದರಿಂದ ಜೀವನಿಂದ ಮಾಡಿಸಿದ ಕರ್ಮಗಳ ಫಲಕ್ಕೆ ಪಾತ್ರನಲ್ಲ. ಯೋಗ್ಯಾಯೋಗ್ಯ ಸಕಲ ಕರ್ಮಗಳ ಘಟನೆಗೆ ಅವಶ್ಯಕವಾದ ಐದು ಕಾರಣ ವಸ್ತುಗಳಲ್ಲಿ ಜೀವನೂ ಒಬ್ಬನು. ಅವುಗಳಲ್ಲಿ ಪ್ರಧಾನ ಕಾರಣನಾದ ಶ್ರೀಹರಿಯೊಬ್ಬನೇ ಸ್ವತಂತ್ರನು. ಉಳಿದ ನಾಲ್ಕು ಕಾರಣಗಳೂ ಆತನ ಅಧೀನಗಳು.[63] ಜೀವನು ಹೀಗೆ ಪರಾಧೀನಕರ್ತನಾದರೂ ಆತನೇ ಕರ್ಮದ ಫಲಭಾಗಿ ಎಂಬುದನ್ನು ನಾನಾ ಲೌಕಿಕ ಯುಕ್ತಿಗಳಿಂದಲೂ ತಿಳಿಯಬಹುದಾಗಿದೆ. ಉದಾ:- ಯಜಮಾನನ ಆಜ್ಞೆಯಂತೆ ದುಡಿಯುವ ಕೆಲಸಗಾರನಿಗಲ್ಲದೆ ದೇಹಶ್ರಮಾದಿಗಳು ಯಜಮಾನನಿಗುಂಟೆ? ಯಜಮಾನನ ಆಜ್ಞೆಯಂತೆ ಕೆಲಸವನ್ನು ಶೀಘ್ರವಾಗಿ ಸಮರ್ಪಕವಾಗಿ ನಿಪುಣತರವಾಗಿ ಮಾಡಿ ಪೂರ್ಣಗೊಳಿಸಿದಾಗ ಆಗುವ ಆನಂದವು ಕೆಲಸಗಾರನಿಗೇ ಅಲ್ಲವೆ? ಅದನ್ನು ಮೆಚ್ಚಿ ವೇತನವನ್ನು ಕೊಡುವವನು ಯಜಮಾನನೇ ಆದರೂ ಆ ವೇತನದ ಉಪಯೋಗವನ್ನು ಹೊಂದುವವನೂ ಕೆಲಸಗಾರನೇ ಅಲ್ಲವೆ? ಮಗುವಿನ ಕೈಹಿಡಿದು ತಂದೆಯು ಬರೆಸಿದರೂ ಬರೆದ ಸಂತೋಷವು ಮಗುವಿಗಲ್ಲವೆ? ಇತ್ಯಾದಿ. ಹೀಗೆ ಪರಾಧೀನಕರ್ತನಾದ ಜೀವನು ಸ್ವಕರ್ಮ ಫಲಭಾಗಿಯೂ, ಭೋಗಿಯೂ ಆಗಿದ್ದರೂ, ಈಶ್ವರನೇ ಸರ್ವಕರ್ಮ–ಫಲ ಭೋಕ್ತನೆಂದು ಆಗಮಗಳು ಅವನ ಮಹಿಮೆಯನ್ನು ಕೊಂಡಾಡುತ್ತವೆ. ಇದು ಹೇಗೆಂಬುದನ್ನು ವಿಮರ್ಶಿಸಿ ತಿಳಿಯಬೇಕಾದುದು ಅವಶ್ಯಕ.

---

63. (1) ದೇಹಭೂಮ್ಯಾದಿ ಆಶ್ರಯಸ್ಥಾನ. (2) ಜ್ಞಾನೇಚ್ಛಾ ಕ್ರಿಯಾಶಕ್ತಿಗಳುಳ್ಳ ಜೀವ. (3) ಕರಣಗಳು ವಿವಿಧ ಇಂದ್ರಿಯಾದಿ ಸಾಧನಗಳು. (4) ಈ ಸಾಧನಗಳ ನಾನಾ ಚೇಷ್ಟೆಗಳು (ವ್ಯಾಪಾರಗಳು). (5) ದೈವ (ಅದೃಷ್ಟ ಪ್ರೇರಕ ಶ್ರೀಹರಿ). ನ್ಯಾಯವಾದ ಅಥವಾ ವಿಪರೀತವಾದ ಯಾವುದೊಂದು ಕರ್ಮವು ಸಂಭವಿಸಲಿಕ್ಕೆ ಇವು ಐದೂ ಕೂಡಿಯೇ ಕಾರಣಗಳೆಂದು ಗೀತೆಯ ನಿರ್ಣಯವಾಗಿದೆ.

ಕರ್ಮಫಲಗಳು ಶುಭ ಮತ್ತು ಅಶುಭವೆಂದು ದ್ವಿವಿಧ. ಶುಭಫಲವೆಂಬುದು ಸುಖಪ್ರದ-ಅಶುಭವು ದುಃಖಪ್ರದ. ''**ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್**'' ಎಂಬ ಮೊದಲಾದ ಶ್ರುತಿಗಳು ಪರಮಾತ್ಮನು ಸದಾ ಶುಭವನ್ನೇ ಭೋಗಿಸುವನೆಂದು ಹೇಳುತ್ತವೆ. ಸ ಸರ್ವಭೋಕ್ತಾ ಇತ್ಯಾದಿ ಅನ್ಯಶ್ರುತಿಗಳು ಆತನು ಸರ್ವಭೋಕ್ತನೆಂದು ಹೇಳುತ್ತವೆ. ಈ ಶ್ರುತಿವಾಕ್ಯಗಳಲ್ಲಿ ಮೇಲೆ ತೋರುವ ವಿರೋಧವು, ಭೋಗಶಬ್ದಾರ್ಥವನ್ನು ಸ್ಪಷ್ಟವಾಗಿ ಗ್ರಹಿಸುವುದರಿಂದ ಪರಿಹಾರವಾಗುತ್ತದೆ. ಶ್ರೀಹರಿಯು ಪೂರ್ಣಕಾಮನೂ ಪೂರ್ಣಾನಂದ - ಸ್ವರೂಪನೂ ಆದುದರಿಂದ ಶುಭಕರ್ಮಫಲಗಳ (ಶುಭ ವಿಷಯಗಳ) ಭೋಗದಿಂದ ಆತನಿಗೆ ಯಾವ ಪ್ರಯೋಜನವೂ ಇಲ್ಲ. ತನ್ನಲ್ಲಿಲ್ಲದ ಸುಖವಿಶೇಷವನ್ನು ಅವು ದೊರಕಿಸುವುದಿಲ್ಲ. ಅಶುಭಕರ್ಮಫಲಗಳನ್ನು (ಅಶುಭ ವಿಷಯಗಳನ್ನು ತಜ್ಜನ್ಯ ದುಃಖಗಳನ್ನು) ಶ್ರೀಹರಿಯು ಸರ್ವಶಕ್ತನೂ ಸ್ವತಂತ್ರನೂ ಆದುದರಿಂದ ಭೋಗಿಸುವುದೇ ಇಲ್ಲ. ಅವು ಆತನ ಹತ್ತಿರ ಸಹ ಸುಳಿಯಲಾರವೆಂಬುದು ಯುಕ್ತಿಸಿದ್ಧವೇ ಆಗುತ್ತದೆ. ಭೋಗವೆಂದರೆ ಸ್ವಸುಖಾರ್ಥವಾಗಿ (ಸ್ವಾನುಭವದಿಂದ ಪ್ರಯೋಜನ ಹೊಂದಲಿಕ್ಕಾಗಿ) ಸ್ವೀಕರಿಸುವುದು. ಈ ಅರ್ಥದಲ್ಲಿ ಶ್ರೀಹರಿಯು ಏನನ್ನೂ ಭೋಗಿಸುವುದಿಲ್ಲ - ಭೋಗಿಸಬೇಕಾದುದಿಲ್ಲ. ಭೋಗವೆಂದರೆ, ಸ್ವಪ್ರಯೋಜನವಿಲ್ಲದಿದ್ದರೂ ಸ್ವೀಕರಿಸುವುದೆಂಬುದು ಭೋಗಶಬ್ದದ ವಿಶಾಲವಾದ ಅರ್ಥ. ಈ ಅರ್ಥದಲ್ಲಿ ಶ್ರೀಹರಿಯು ಸರ್ವಭೋಕ್ತನು. ದೇಹೇಂದ್ರಿಯಾದಿಗಳಲ್ಲಿದ್ದು ಶುಭ-ವಿಷಯಗಳನ್ನು ಸ್ವೀಕರಿಸುವುದು ಜೀವನಿಗೆ ಸುಖಾನುಭವವನ್ನುಂಟು ಮಾಡುವುದಕ್ಕೆ ಮಾತ್ರ, ಸ್ವಸುಖಕ್ಕಾಗಿ ಅಲ್ಲ. ಅಶುಭ ವಿಷಯಗಳಿಂದ ಅವುಗಳ ಭೋಗವು (ದುಃಖವು) ಜೀವನಿಗೆ ಉಂಟಾಗಲೆಂದು ಇಚ್ಛಿಸುವುದೇ ಶ್ರೀಹರಿಯ ಅಶುಭ ಭೋಗವು. ವಿಶಾಲವಾದ ಈ ಅರ್ಥದಲ್ಲಿ ಭೋಗವೆಂದರೆ ಸ್ವೀಕಾರವೆಂದೇ ಅರ್ಥ. ಪ್ರಜೆಗಳು ರಾಜನಿಗೆ ಫಲಪುಷ್ಪ ವಸ್ತ್ರಾಭರಣಾದಿ ನಾನಾ ರೂಪದ ಕಾಣಿಕೆಗಳನ್ನು ಅರ್ಪಿಸುತ್ತಾರೆ. ರಾಜನು ಅವುಗಳಲ್ಲಿ ಕೆಲವನ್ನು ದೃಷ್ಟಿ ಮಾತ್ರದಿಂದ ಸ್ವೀಕರಿಸುತ್ತಾನೆ. ಮತ್ತೆ ಕೆಲವನ್ನು ಸ್ಪರ್ಶಮಾತ್ರದಿಂದ (ಕೈಯಿಂದ

ಮುಟ್ಟಿ) ಸ್ವೀಕರಿಸುತ್ತಾನೆ. ತನ್ನಲ್ಲಿ ವಿಶೇಷ ಭಕ್ತಿಗೌರವವುಳ್ಳವರು (ತನಗೆ ಪ್ರಿಯರಾದವರು) ಅರ್ಪಿಸಿದುದನ್ನು, ಅವರಿಗೆ ವಿಶೇಷ ಸಂತೋಷ-ವನ್ನುಂಟುಮಾಡಲು, ಅರ್ಪಿತ ವಸ್ತುಗಳಲ್ಲಿ ಒಂದು ಪುಷ್ಪವನ್ನು ಧರಿಸುತ್ತಾನೆ, ಒಂದು ಫಲವನ್ನು ಭಕ್ಷಿಸುತ್ತಾನೆ, ಅಥವಾ ಒಂದು ವಸ್ತ್ರ ಅಥವಾ ಆಭರಣವನ್ನು ಸ್ವಯಂ ಉಪಯೋಗಿಸುತ್ತಾನೆ. ಇದರಿಂದ ಆ ಪ್ರಜೆಗಳಿಗೆ ವಿಶೇಷಾನಂದ-ವಾಗುತ್ತದೆ. ಶ್ರೀಹರಿಯು, ಇಂದ್ರಿಯಗಳು ಸ್ವಯೋಗ್ಯ ವಿಷಯಗಳನ್ನು ಸಹಜವಾಗಿ ಗ್ರಹಿಸಿದಾಗ ಸುಖಪೂರ್ಣನಾದ ತಾನು ಜೀವನಿಗೆ ಭೋಗ-ವನ್ನೀಯಲು ತಾನೂ ಭೋಗಿಸುತ್ತಾನೆ. ಇದನ್ನರಿತ ಜ್ಞಾನಿಗಳು, ಶ್ರೀಹರಿಗೆ ಅರ್ಪಿತವೆಂಬ ಅನುಸಂಧಾನವುಳ್ಳವರಾಗಿ ವಿಷಯಗಳನ್ನು ಭೋಗಿಸುವುದರಿಂದ ಶ್ರೀಹರಿಯು ಅವರಿಗೆ ಸುಖವಿಶೇಷವನ್ನು ದಯಪಾಲಿಸುತ್ತಾನೆ. ದೇಹದಲ್ಲಿದ್ದು ಶುಭವಿಷಯಗಳನ್ನು ಭೋಗಿಸುತ್ತಾನೆಂದರೆ, ರಾಮಕೃಷ್ಣಾದ್ಯವತಾರ ರೂಪಗಳಿಂದ ಬೆಣ್ಣೆ ಫಲಾದಿಗಳನ್ನು ಭಕ್ಷಿಸುವಂತೆ ಭೋಗಿಸುವುದಿಲ್ಲ. ಭೋಗ್ಯ ವಸ್ತುಗತ ಸ್ವರಸವನ್ನು ಮಾತ್ರ ಭೋಗಿಸುತ್ತಾನೆ. ಸ್ವರಸವು ಭಗವದಾತ್ಮಕವೇ-ಅವನ ಒಂದು ರೂಪ ವಿಶೇಷವೇ. ಅದು ಆ ವಸ್ತುವಿನ ಗುಣಧರ್ಮಗಳನ್ನು ನಿಯಂತ್ರಿಸುವ ರೂಪವು. ತನ್ನ ಒಂದು ರೂಪದೊಂದಿಗೆ ಮತ್ತೊಂದು ರೂಪದಿಂದ ರಮಿಸುವನೆಂದರ್ಥ.[64]

ಜೀವರಿಗೆ ಪರಮಾತ್ಮಾಧೀನವಾದ ಕರ್ತೃತ್ವ ಉಂಟೆಂದು ಹೀಗೆ ನಿರ್ಣಯಿಸಿ, ಮುಂದೆ ಜೀವರು ಪರಮಾತ್ಮನ ಭಿನ್ನಾಂಶರೆಂದೂ, ಪ್ರತಿಬಿಂಬರೆಂದೂ ನಿರ್ಣಯಿಸಲಾಗುತ್ತದೆ. ಈ ಪ್ರಕ್ರಿಯೆಗಳನ್ನು ಪ್ರತಿಪಾದಿಸುವ ಶ್ರುತಿವಾಕ್ಯಗಳಲ್ಲಿ

64. ಪ್ರತಿಭೋಗ್ಯ ವಸ್ತುವೂ ಆರು ವಿಧ ರಸಗಳನ್ನು ಹೊಂದಿರುತ್ತದೆ. ಅವು ಯಾವುವೆಂದರೆ:- (1) ಸ್ವಾಖ್ಯರಸ-ಸ್ವ ಎಂಬ ರಸ. (2) ಲಕ್ಷ್ಮೀಭೋಗ್ಯ ರಸ-ಲಕ್ಷ್ಮ್ಯಾತ್ಮಕ. (3) ಋಜುಭೋಗ್ಯ ರಸ. (4) ಇತರ ತತ್ತ್ವಾಭಿಮಾನಿ ದೇವತಾ ಭೋಗ್ಯ ರಸ. (5) ಅಪರೋಕ್ಷ ಜ್ಞಾನಿಯೋಗ್ಯ ರಸ. (6) ದೇಹಾಭಿಮಾನಿ ಜೀವಯೋಗ್ಯ ರಸ. ಶುಭಕರ್ಮಗಳ ಫಲರೂಪವಾದ ಸುಖವೂ ಅಶುಭ ಕರ್ಮಫಲರೂಪ ದುಃಖವೂ ಸಾಮಾನ್ಯವಾಗಿ ನಾನಾ ವಿಧ ಭೋಗ್ಯವಸ್ತುಗಳ ಪ್ರಾಪ್ತಿ-ಅಪ್ರಾಪ್ತಿಗಳ ದ್ವಾರಾ ಜೀವರಿಗೆ ಉಂಟಾಗುತ್ತವೆ.

ತೋರುವ ಪರಸ್ಪರ ವಿರೋಧಗಳನ್ನೂ ಪರಿಹರಿಸಲಾಗಿದೆ. ಶ್ರುತಿಗಳ ಸಮನ್ವಯ ಪ್ರಕಾರಗಳನ್ನು ನಾನಾ ರೀತಿಯಿಂದ ನಿದರ್ಶನ ಮಾಡಿ, ಶ್ರುತಿಗಳಿಗೆ ಪರಮ ಪ್ರಾಮಾಣ್ಯವನ್ನು ಈ ಪಾದದಿಂದ ಸ್ಥಾಪಿಸಲಾಗಿದೆ. ಚೇತನಾಚೇತನಾತ್ಮಕ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮೋಕ್ಷಗಳೆಲ್ಲವೂ ಶ್ರೀ ವಿಷ್ಣುವಿನಿಂದಲೇ ಸಂಭವಿಸುವುವೆಂದೂ, ಅತಏವ ಆತನೇ ಸರ್ವಸ್ವತಂತ್ರನೂ ಏಕಾಧಿಪತಿಯೂ ಸರ್ವಶರಣ್ಯನೂ ಆದ ಸರ್ವೋತ್ತಮನೆಂದೂ ಈ ಎರಡನೇ ಅಧ್ಯಾಯದ ಮೂರನೇ ಪಾದದಿಂದ ನಿರ್ಣಯಿಸಿ ಸ್ಥಾಪಿಸಲಾಗಿದೆ.

## ಪರಿಚ್ಛೇದ ೯

## ನ್ಯಾಯೋಪೇತ ಶ್ರುತಿ ವಿರೋಧ ಪರಿಹಾರದಿಂದ ಶ್ರೀ ನಾರಾಯಣನ ಗುಣಪೂರ್ಣತ್ವ ಸಮರ್ಥನೆ

ಯುಕ್ತಿಗಳನ್ನು ಹೇಳಿ ಕೆಲವು ಶ್ರುತಿವಾಕ್ಯಗಳು ಪ್ರಮೇಯಗಳನ್ನು ಪ್ರತಿಪಾದಿಸುವಂತೆ ಕಂಡುಬರುತ್ತವೆ. ಈ ವಿಧ ಶ್ರುತಿವಾಕ್ಯಗಳಲ್ಲಿ ವಿರೋಧಗಳೂ ಕಂಡುಬರುತ್ತವೆ. ವಿರುದ್ಧವೆಂದು ತೋರುವ ಇಂತಹ ಶ್ರುತಿವಾಕ್ಯಗಳ ವಿರೋಧವನ್ನು ಪರಿಹರಿಸಿಕೊಂಡು ಪ್ರಮೇಯಗಳನ್ನು ತಿಳಿಯಬೇಕಾಗುತ್ತದೆ. ವಿರೋಧಗಳ ಪರಿಹಾರಗಳಾಗದಿದ್ದರೆ ಪ್ರಮೇಯ ನಿಶ್ಚಯವಾಗುವುದಿಲ್ಲವೆಂದು ಮಾತ್ರವಲ್ಲ-ಶ್ರುತಿಪ್ರಾಮಾಣ್ಯವೂ ಸಂಶಯಾತ್ಮಕವಾಗುತ್ತದೆ. ಇಂದ್ರಿಯಗಳಿಗೆ ಉತ್ಪತ್ತಿಯನ್ನು, ಅನುತ್ಪತ್ತಿಯನ್ನೂ ಹೇಳುವಂತೆ ತೋರುವ ಶ್ರುತಿಗಳ ಅರ್ಥನಿರ್ಣಯವನ್ನು ಮಾಡಿ **''ಆತ್ಮೈವೇದಮಗ್ರ ಆಸೀತ್, ಸ ಪ್ರಾಣಮಸೃಜತ''** ಇತ್ಯಾದಿ ನಿರವಕಾಶ ಶ್ರುತಿಬಲದಿಂದ ಇಂದ್ರಿಯಗಳಿಗೆ (ಪ್ರಾಣಗಳಿಗೆ) ಪರಮಾತ್ಮನಿಂದ ಉತ್ಪತ್ತಿಯುಂಟೆಂದು ಸಾಧಿಸಿ, ವಿರೋಧವನ್ನು ಪರಿಹರಿಸಲಾಗಿದೆ. ಹೀಗೆಯೇ, ಮನಸ್ಸಿಗೂ ವಾಗಿಂದ್ರಿಯಕ್ಕೂ ಉತ್ಪತ್ತಿಯುಂಟೆಂದು ನಿರ್ಣಯಿಸಲಾಗಿದೆ. **''ನೈಷ ಪ್ರಾಣ ಉದೇತಿ''** ಎಂಬ ಶ್ರುತಿಯು

ಮುಖ್ಯಪ್ರಾಣನಿಗೆ ಉತ್ಪತ್ತಿ ಇಲ್ಲವೆಂದು ಹೇಳುತ್ತದೆ. **''ಯತ್ಪ್ರಾಪ್ತಿರ್ಯತ್ಪರಿತ್ಯಾಗಃ ಉತ್ಪತ್ತಿರ್ಮರಣಂ ತಥಾ । ತಸ್ಯೋತ್ಪತ್ತಿರ್ಮೃತಿಶ್ಚೈವ ಕಥಂ ಪ್ರಾಣಸ್ಯ ಯುಜ್ಯತೇ ॥''** ಯಾರ ಸಂಬಂಧದಿಂದ ಜನನವೂ, ಯಾರ ವಿಯೋಗದಿಂದ ಮರಣವೂ ಉಂಟಾಗುವುವೋ ಅಂತಹ ಮುಖ್ಯಪ್ರಾಣನಿಗೆ ಉತ್ಪತ್ತಿ ಮರಣಗಳು ಹೇಗೆ ಕೂಡುತ್ತವೆ? ಎಂಬ ಯುಕ್ತಿಯು ಮುಖ್ಯಪ್ರಾಣನಿಗೆ ಜನನ ಮರಣಗಳಿಲ್ಲವೆಂಬಲ್ಲಿ ಸಾಧಕವಾದರೆ, **''ಆತ್ಮತ ಏಷಪ್ರಾಣೋಜಾಯತೇ''** ಎಂಬ ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗೆ, **ಮಹತ್ವಾನ್ಮಹತಾಂ ವಿಷ್ಣುಃ ಕರ್ತಾ ಪ್ರಾಣಸ್ಯ ಚೈಕರಾಟ್ । ಕಿಂ ನಾಮ ನ ಸೃಜೇದೇಷ ಯೇನ ಶಕ್ತ್ಯೇದಮಾವೃತಂ॥** ಮುಖ್ಯಪ್ರಾಣನಿಗೂ ಸ್ವಾಮಿಯಾದ ಸರ್ವಕರ್ತನೆನಿಸುವ ವಿಷ್ಣುವು ಯಾರನ್ನು ಸೃಷ್ಟಿಮಾಡಲಾರನು? ಎಂಬ ಯುಕ್ತಿಯ ಬೆಂಬಲವಿರುತ್ತದೆ. ಈ ವಿರೋಧವನ್ನು ಪರಿಹರಿಸಿ ಮುಖ್ಯಪ್ರಾಣನಿಗೂ ಉತ್ಪತ್ತಿಯುಂಟೆಂದು **''ಓಂ ಶ್ರೇಷ್ಠಶ್ಚ ಓಂ''** ಎಂಬ ಸೂತ್ರದಿಂದ ನಿಶ್ಚಯಿಸಿ, ಜಗಚ್ಚೇಷ್ಟಕನಾದ ಮುಖ್ಯಪ್ರಾಣನನ್ನೂ ಆಳುವ ಮಹಾಪ್ರಭುವೆಂಬ ವಿಶೇಷ ಮಹಿಮೆಯನ್ನು ವಿಷ್ಣುವಿಗೆ ಸಾಧಿಸಲಾಗಿದೆ. ಇವೇ ಮೊದಲಾದ ಅನೇಕಪ್ರಕಾರದ ಯುಕ್ತಿಸಹಿತ (ನ್ಯಾಯೋಪೇತ) ಶ್ರುತಿಗಳಲ್ಲಿ ತೋರುವ ವಿರೋಧವನ್ನು ಪರಿಹರಿಸಿ ಶ್ರುತಿ ಪ್ರಾಮಾಣ್ಯವನ್ನು ಸ್ಥಿರಪಡಿಸುವುದಲ್ಲದೆ, ಶ್ರೀವಿಷ್ಣುವೇ ಸಕಲೇಂದ್ರಿಯ ನಿಯಾಮಕನೆಂದೂ ಇಂದ್ರಿಯಾಭಿಮಾನಿಗಳಾದ ದೇವತೆಗಳಿಗೂ ನಿಯಾಮಕ-ನಾದ ಮುಖ್ಯಪ್ರಾಣನನ್ನೂ ನಿಯಮಿಸುವ ಮಹಾಸ್ವಾಮಿ ಎಂದೂ ನಿಶ್ಚಯಿಸಲಾಗಿದೆ. ಪ್ರಥಮಾಧ್ಯಾಯದಲ್ಲಿ ನಿರ್ಣಯಿಸಲ್ಪಟ್ಟ ಶ್ರೀವಿಷ್ಣುವಿನ ಅನಂತ ಗುಣಪೂರ್ಣತ್ವವನ್ನು ಸಮರ್ಥಿಸಿ, ಈ ಮಹಾಪ್ರಮೇಯಕ್ಕೆ ಬರಬಹುದಾದ ಸಕಲ ವಿರೋಧಗಳನ್ನೂ ಪರಿಹರಿಸಿ ಶ್ರೀವಿಷ್ಣುವು ಸಕಲ ದೋಷದೂರನೆಂದು, ಎರಡನೇ ಅಧ್ಯಾಯವು ಸಾಧಿಸಿರುತ್ತದೆ.

ಹೀಗೆ ಶ್ರೀವಿಷ್ಣುವು ನಿರವಧಿಕಾನಂತ ಸದ್ಗುಣಪೂರ್ಣನೆಂದೂ ಅಶೇಷ ದೋಷದೂರನೆಂದೂ ಸಿದ್ಧವಾದ ನಂತರ, ಬಹು ದುಃಖಪ್ರದವಾದ ಈ ಘೋರ

ಸಂಸಾರದಿಂದ ಬಿಡುಗಡೆಯನ್ನು ಹೊಂದಿ, ನಿರ್ದುಃಖಾನಂದ ಪೂರ್ಣದ ನಿತ್ಯಸ್ಥಿತಿಯನ್ನು ಪಡೆಯಲು ಅವಶ್ಯಕವಾದ ಶ್ರೀವಿಷ್ಣುಪ್ರಸಾದ ಪ್ರಾಪ್ತಿಗಾಗಿ ಸಾಧಕ ಜೀವರು (ಮುಮುಕ್ಷುಗಳು) ಕೈಗೊಳ್ಳಬೇಕಾದ ಸಾಧನಗಳ ವಿಮರ್ಶೆ ಮತ್ತು ತತ್ಸಂಬಂಧ ನಿರ್ಣಯಗಳನ್ನು ಮುಂದಿನ ಭಾಗದಲ್ಲಿ ಓದುಗರ ಮುಂದಿಡಲು ಸಂಕಲ್ಪಿಸಿದ್ದೇನೆ. ಈ ನನ್ನ ಸಂಕಲ್ಪವನ್ನು ಪೂರ್ಣಗೊಳಿಸಲೆಂದು ಶ್ರೀಹರಿಯನ್ನು ಪ್ರಾರ್ಥಿಸಿ ಈ ಮೂರನೇ ರತ್ನವನ್ನು ಆತನ ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಅರ್ಪಿಸಿದ್ದೇನೆ.

॥ ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ॥

॥ ಶ್ರೀಕೃಷ್ಣಾರ್ಪಣಮಸ್ತು ॥

ರತ್ನ - ೪, ೫

# ಮೋಕ್ಷಮಾರ್ಗ

ಮತ್ತು

# ಮುಕ್ತಿ

ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ।
ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ॥

ಲೇಖಕರು :
ಕೀರ್ತಿಶೇಷ ಮಾಧ್ವಭೂಷಣ ಶ್ರೀ ಬಿ. ಭೀಮರಾವ್
ದಾವಣಗೆರೆ

# ವಿಷಯಾನುಕ್ರಮಣಿಕೆ

## ರತ್ನ - ೪



## ರತ್ನ - ೫

# ಮುನ್ನುಡಿ

**(ಪ್ರಥಮ ಪ್ರಕಟಣೆಯಲ್ಲಿರುವ ನುಡಿ)**

**'ಯತ್ಪದಂ ವೇದ ಸಂವೇದ್ಯಂ ಕಟಾಕ್ಷೇಣಾಪಿ ವೀಕ್ಷಿತುಮ್ ।**
**ನ ಕ್ಷಮಂತೇ ವಿಮತಯಃ ತಮುಪಾಸೇ ಶ್ರಿಯಃಪತಿಮ್ ॥'**

ದಾವಣಗೆರೆಯ ಸರ್ವಜ್ಞಾಚಾರ್ಯ ಸೇವಾ ಸಂಘವೇ ಶ್ರೀಭೀಮರಾಯರು - ಶ್ರೀಭೀಮರಾಯರೇ ಸರ್ವಜ್ಞಾಚಾರ್ಯ ಸೇವಾ ಸಂಘ ಎಂಬ ಅಭೇದ ವ್ಯವಹಾರ ವಿಷಯರಾದ ಶ್ರೀ ಬಿ. ಭೀಮರಾಯರು ೧೯೬೮ರಲ್ಲಿ ಪ್ರಾರಂಭಿಸಿದ 'ಸಂದೇಶ ರತ್ನಮಾಲಾ' ಎಂಬ ಗ್ರಂಥಮಾಲೆಯಲ್ಲಿ ಕ್ರಮವಾಗಿ 'ನಾಸ್ತಿಕ್ಯ ನಿರಾಸ', 'ಆಗಮ ಪ್ರಾಮಾಣ್ಯ', 'ಆಗಮಸಾರ' ಎಂಬ ಮೂರು ರತ್ನಗಳನ್ನು ಈವರೆಗೆ ಪ್ರಚುರಪಡಿಸಿ ಈಗ ೪ ಮತ್ತು ೫ನೆಯ ರತ್ನಗಳನ್ನು 'ಮೋಕ್ಷಮಾರ್ಗ' - 'ಮುಕ್ತಿ' ಎಂಬ ಹೆಸರಿನಲ್ಲಿ ಒಂದೇ ಹೊತ್ತಿಗೆಯಾಗಿ ಪ್ರಚುರಪಡಿಸಿರುವರು. ಮೊದಲನೆಯ ಗ್ರಂಥವನ್ನು ಪ್ರಚುರ ಮಾಡುವ ಕಾಲದಲ್ಲಿಯೇ ದೇಹಾಲಸ್ಯದಿಂದ ಬಳಲುತ್ತಿದ್ದ ಶ್ರೀಭೀಮರಾಯರು ಸಂದೇಶ ಮಾಲೆಯ ೫ ರತ್ನಗಳನ್ನೂ ಪ್ರಚುರಪಡಿಸುವ ಯೋಗವುಳ್ಳವರಾಗಿರುವುದೇ ಅವರ ಭಕ್ತಿದಾರ್ಢ್ಯಗಳಿಗೆ ಸಾಕ್ಷಿಗಳಾಗಿವೆ. ಶ್ರೀಮಧ್ವಶಾಸ್ತ್ರದಲ್ಲಿ ಅತ್ಯಂತ ಶ್ರದ್ಧಾವಂತರಾಗಿ ಅದರ ಆದೇಶದಂತೆ ತಮ್ಮ ಆಚಾರ ವ್ಯವಹಾರಗಳನ್ನು ಅಳವಡಿಸಿಕೊಂಡಿರುವ ಅವರ ಜೀವನ ಸಾರ್ಥಕತೆಯೇ ಈ ಗ್ರಂಥಮಾಲೆಯು.

ಈ ರತ್ನಗಳಲ್ಲಿ ಮೊದಲನೆಯದಾದ 'ನಾಸ್ತಿಕ್ಯ ನಿರಾಸ'ದಲ್ಲಿ ಗ್ರಂಥಕರ್ತರು ಶಾಸ್ತ್ರ ವಿಚಾರಕ್ಕೆ ಪೂರ್ವಭಾವಿಯಾಗಿರಬೇಕಾದ ಆಸ್ತಿಕ ಮನೋಭಾವವನ್ನು ಸಮರ್ಥಿಸಿರುವರು. ಈ ಭಾವನೆಯು ನಾಸ್ತಿಕಭಾವನೆಯ ನಿರಸನೆಯಿಂದಲೇ ಯುಕ್ತವಾಗುವುದು. ಆದುದರಿಂದ ಅನಾದಿಕಾಲದಿಂದಲೂ ಆಗಾಗ್ಗೆ ಪ್ರಾದುರ್ಭವಿಸುವ ನಾಸ್ತಿಕಭಾವದ ವೈವಿಧ್ಯತೆಗಳನ್ನು ಆಧುನಿಕ ವೈಚಾರಿಕರಿಗೂ ಸಮ್ಮತವಾಗುವ ರೀತಿಯಲ್ಲಿ ವಿಮರ್ಶಾಪೂರ್ವಕವಾಗಿ ನಿರಾಕರಣೆ ಮಾಡಿರುವರು. ಆಸ್ತಿಕತೆ ಎಂದರೆ, ಸ್ಥೂಲವಾಗಿ ಅತೀಂದ್ರಿಯಗಳಾದ ಧರ್ಮಾಧರ್ಮಗಳು, ಪುಣ್ಯಪಾಪಗಳು, ಈಶ್ವರ ಮುಂತಾದುವುಗಳಲ್ಲಿ ನಂಬಿಕೆಯು. ಇಂತಹ ನಂಬಿಕೆಯು ಸಂಭಾವಿತ ಅಥವಾ ಸುಸ್ಥಿರವಾದ ಮೇಲೆ ಅವುಗಳ ವಿಷಯದಲ್ಲಿ ಪ್ರಾಮಾಣಿಕವಾದ ಜ್ಞಾನವು ಕೇವಲ ಆಗಮ (ಶಾಸ್ತ್ರ)ದಿಂದಲೇ ಲಭ್ಯವಾದುದರಿಂದ ಅಂತಹ ಆಗಮದ ಪ್ರಾಮಾಣ್ಯದ ನಿಶ್ಚಯವು ಆವಶ್ಯಕವು. ಆದುದರಿಂದ ಪ್ರಮಾಣ ಎಂದರೇನು, ಪ್ರಮಾಣಗಳು ಯಾವುವು, ಪ್ರಮಾಣಗಳಲ್ಲಿ ಪ್ರಸಕ್ತವಾಗಬಹುದಾದ ದೋಷಗಳು

ಯಾವುವು, ಅತೀಂದ್ರಿಯ ವಿಷಯದಲ್ಲಿ ಅಪೌರುಷೇಯವಾದ ವೇದವೇ ಹೇಗೆ ಪ್ರಮಾಣವು, ಅಂತಹ ವೇದವು ಹೇಗೆ ಅಪೌರುಷೇಯ ಎಂಬ ಉಪಯುಕ್ತ ಮತ್ತು ಆವಶ್ಯಕ ವಿಷಯಗಳನ್ನು ಎಲ್ಲರಿಗೂ ಅರ್ಥವಾಗುವ ರೀತಿಯಲ್ಲಿ ತಮ್ಮ ಎರಡನೆಯ 'ರತ್ನ'ವಾದ 'ಆಗಮ ಪ್ರಾಮಾಣ್ಯ'ದಲ್ಲಿ ಪ್ರತಿಪಾದಿಸಿರುವರು. ಹೀಗೆ ಆಗಮದ ಆವಶ್ಯಕತೆ ಮತ್ತು ಪ್ರಾಮಾಣ್ಯಗಳು ಸಿದ್ಧವಾದಮೇಲೆ ಅಂತಹ ಆಗಮದ ಮುಖ್ಯ ತಾತ್ಪರ್ಯವೇನು ಎಂಬ ಪ್ರಶ್ನೆಯು ಉದ್ಭವಿಸುವುದು. ಇದಕ್ಕೆ ಉತ್ತರವೇ ಮೂರನೆಯ 'ರತ್ನ' 'ಆಗಮಸಾರ'ವು. ಇದರಲ್ಲಿ 'ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋರ್ಮಹಾತಾತ್ಪರ್ಯಂ' ಎಂಬ ಪೈಂಗಿ ಶ್ರುತ್ಯುಕ್ತವಾದ ವಿಷ್ಣು ಸರ್ವೋತ್ತಮತ್ವವೇ ಆಗಮಸಾರ ಎಂದು ಪ್ರತಿಪಾದಿತವಾಗಿರುವುದು. ವಿಷ್ಣುವು ಸರ್ವೋತ್ತಮ ಎಂದು ಹೇಳಲು ಅವನಿಂದ ಭಿನ್ನವಾದ ಮತ್ತು ಸತ್ಯವಾದ ಚೇತನಾಚೇತನ ಪ್ರಪಂಚ-ವಿರುವುದೆಂದು ಹೇಳಲೇಬೇಕು. ಆದುದರಿಂದ ಚೇತನಾಚೇತನಾತ್ಮಕ ಈ ಜಗತ್ತು ಸತ್ಯವಾದುದು ಮತ್ತು ಅವನಿಂದ ಅತ್ಯಂತ ಭಿನ್ನವಾದುದು ಎಂದು ವೈಚಾರಿಕ ರೀತಿಯಿಂದ ಪ್ರತಿಪಾದನೆ ಮಾಡಲ್ಪಟ್ಟಿರುವುದು. ಈ ಸಂದರ್ಭದಲ್ಲಿ ಜೀವಬ್ರಹ್ಮರಿಗೆ ಅಭೇದ ಎಂಬ ತೋರಿಕೆಯ 'ತತ್ವಮಸಿ' ಮುಂತಾದ ಶ್ರುತಿಗಳ ನೈಜ ತಾತ್ಪರ್ಯವು ಜೀವಬ್ರಹ್ಮರ ಭೇದದಲ್ಲಿಯೇ ಎಂಬುದನ್ನು ಸಯುಕ್ತಿಕವಾಗಿ ಪ್ರತಿಪಾದಿಸಿರುವರು. ಈ ಪ್ರತಿಪಾದನೆಯ ಮುಖ್ಯಫಲವು 'ವಿಷ್ಣುಸರ್ವೋತ್ತಮತ್ವ' ಸಿದ್ಧಿಯು.

ಆಗಮಸಾರವು 'ವಿಷ್ಣು ಸರ್ವೋತ್ತಮತ್ವ' ಎಂದು ತಿಳಿದಮೇಲೆ ಅಧಿಕಾರಿಯ ಕರ್ತವ್ಯವೇನು ಮತ್ತು ಅಂತಹ ಕರ್ತವ್ಯಪಾಲನೆಯಿಂದ ಲಭಿಸುವ ಫಲವೇನು ಎಂಬುದನ್ನು ಬ್ರಹ್ಮಸೂತ್ರಗಳ ೩ನೆಯ ಮತ್ತು ೪ನೆಯ ಅಧ್ಯಾಯಗಳನ್ನು ಆಧರಿಸಿ ಕ್ರಮವಾಗಿ 'ಮೋಕ್ಷ ಮಾರ್ಗ' ಎಂಬ ೪ನೆಯ 'ರತ್ನ'ವನ್ನು ಮತ್ತು 'ಮುಕ್ತಿ' ಎಂಬ ೫ನೆಯ ಕೊನೆಯ ರತ್ನವನ್ನೂ ಈಗ ಕೊನೆಯ ಹೊತ್ತಿಗೆಯಾಗಿ ಶ್ರೀಭೀಮರಾಯರು ಪ್ರಚುರಪಡಿಸಿರುವರು. ಈ ಪ್ರಕಟಣೆಯನ್ನು ಶ್ರೀಮಧ್ವಸಿದ್ಧಾಂತದ ಬೆಳವಣಿಗೆಗೆ ಆಧಾರಸ್ತಂಭರಾದ ಶ್ರೀಮತ್ ಟೀಕಾಚಾರ್ಯರ ಪುಣ್ಯದಿವಸದಲ್ಲಿ (೧೩-೭-೭೧) ಪ್ರಚುರಪಡಿಸುವ ಶ್ರೀ ರಾಯರ ಉದ್ದೇಶವು ಅತ್ಯಂತ ಯುಕ್ತವೇ ಸರಿ. ಈ ಎರಡು 'ರತ್ನ'ಗಳಲ್ಲಿ ಶ್ರೀ ಭೀಮರಾಯರು ಬ್ರಹ್ಮಸೂತ್ರಗಳಲ್ಲಿ ನಿರ್ಣಯಿಸಲ್ಪಟ್ಟಿರುವ ವಿಷಯಗಳನ್ನು ಸರಳ ರೀತಿಯಿಂದ ಪ್ರತಿಪಾದಿಸಿರುವರು. ಮೋಕ್ಷ ಮಾರ್ಗದಲ್ಲಿ ಮೊದಲನೆಯ ಮೆಟ್ಟಿಲು ವೈರಾಗ್ಯವು; ವೈರಾಗ್ಯ ಯುಕ್ತವಾದ ಭಕ್ತಿಯೇ ಎರಡನೆಯ

ಮೆಟ್ಟಿಲು; ಭಕ್ತಿಯಿಂದ ಮಾಡುವ ಉಪಾಸನೆಯೇ ಮೂರನೆಯ ಮೆಟ್ಟಿಲು; ಅದರಿಂದ ಉಂಟಾಗುವ ಭಗವಂತನ ಅಪರೋಕ್ಷಜ್ಞಾನವೇ ಮೋಕ್ಷ ಮಾರ್ಗದ ಕೊನೆಯ ಮೆಟ್ಟಿಲು. ಅಂತಹ ಜ್ಞಾನದ ಮಹಾತ್ಮೆಯು ಅಗಾಧವಾದುದು. ಈ ವಿಷಯಗಳು ೪ನೆಯ ರತ್ನದಲ್ಲಿ ಪ್ರತಿಪಾದಿತವಾಗಿರುವುವು.

ಅಧಿಕಾರಿಯ, ಮೇಲೆ ಹೇಳಿದ ಸಾಧನೆಯು ಪರಿಪಕ್ವವಾದಮೇಲೆ, ಅವನಿಗೆ ಲಭಿಸುವ ಫಲವನ್ನು ಬ್ರಹ್ಮಸೂತ್ರಗಳ ೪ನೆಯ ಫಲಾಧ್ಯಾಯವು ವರ್ಣಿಸುವುದು. ಇದನ್ನು ತಮ್ಮ ಗ್ರಂಥಮಾಲೆಯ ಕೊನೆಯ ರತ್ನವಾದ 'ಮುಕ್ತಿ'ಯಲ್ಲಿ ಶ್ರೀಭೀಮರಾಯರು ಅತ್ಯಂತ ಮನೋಜ್ಞ ರೀತಿಯಲ್ಲಿ ಉಪಪಾದಿಸಿರುವರು. ಅಧಿಕಾರಿಯ ಸಾಧನೆಯ ಫಲವು (೧) ಕರ್ಮಕ್ಷಯ, (೨) ಉತ್ಕ್ರಾಂತಿ, (೩) ಮಾರ್ಗ ಮತ್ತು (೪) ಭೋಗ ಎಂದು ಚತುರ್ವಿಧವಾಗಿರುವುದು. ಶ್ರೀ ಮಧ್ವ ಸಿದ್ಧಾಂತದಲ್ಲಿ ವೈಶಿಷ್ಟ್ಯ ರೂಪಗಳಾದ ಈ ವಿಷಯಗಳು ಈ ರತ್ನದಲ್ಲಿ ಅತ್ಯಂತ ಆಕರ್ಷಕ ರೀತಿಯಲ್ಲಿ ನಿರೂಪಿಸಲ್ಪಟ್ಟಿರುವುವು.

ಅಂತೂ ಈ ಪಂಚ ರತ್ನಗಳ ಮೂಲಕ ಶ್ರೀಮದಾಚಾರ್ಯರ ಅಮೋಘ ಗ್ರಂಥಗಳಾದ ಶ್ರೀವಿಷ್ಣು ತತ್ವವಿನಿರ್ಣಯ ಮತ್ತು ಬ್ರಹ್ಮಸೂತ್ರ ಭಾಷ್ಯಗಳ ಹೆದ್ದಾರಿಗಳನ್ನು ಅನುಸರಿಸಿ ಶ್ರೀ ಮಧ್ವದರ್ಶನದ ಅತ್ಯಂತ ಸೂಕ್ಷ್ಮ ಪ್ರಮೇಯಗಳನ್ನೂ ಸರಳ ಮತ್ತು ಲಲಿತ ರೀತಿಯಲ್ಲಿ ಪ್ರತಿಪಾದನೆ ಮಾಡಿ ಯುವಕರಿಗೆ ಕಣ್ಣು ತೆರೆಯುವಂತೆ, ಪಾಮರರಿಗೆ ಉಪಕಾರಿಯಾಗಿರುವಂತೆ ಮತ್ತು ಪಂಡಿತರಿಗೆ ಆನಂದದಾಯಕವಾಗುವಂತೆ ಮಾಡಿದ ಶ್ರೀ ಬಿ. ಭೀಮರಾಯರು ಸಮಸ್ತ ಮಾಧ್ವ ವೃಂದದ ಕೃತಜ್ಞತೆಗೆ ಪಾತ್ರರಾಗಿರುವರು.

ಶ್ರೀಭೀಮರಾಯರು ಇನ್ನೂ ಅನೇಕ ವರ್ಷಗಳ ಆಯುರ್ಭಾಗ್ಯವನ್ನು ಹೊಂದಿ ಶ್ರೀಮದಾಚಾರ್ಯರ ಸೇವೆಯನ್ನು ಇತೋಪ್ಯಧಿಕವಾಗಿ ಇತರ ಗ್ರಂಥ ರಚನಾರೂಪದಲ್ಲಿ ಮಾಡುವ ಮಹಾ ಭಾಗ್ಯವನ್ನು ಶ್ರೀ ಮಧ್ವಾಂತರ್ಗತ ವೇದವ್ಯಾಸಾಭಿನ್ನ ಶ್ರೀ ಲಕ್ಷ್ಮೀಪತಿಯು ಕರುಣಿಸಲೆಂದು ಹಾರೈಸುತ್ತೇನೆ.

ಮುಳಬಾಗಿಲು
ಆಷಾಢ ಶುದ್ಧ ದಶಮಿ
೩-೭-೧೯೭೧

**ಬಿ.ಎ. ಕೃಷ್ಣಸ್ವಾಮಿರಾವ್**
ಪ್ರಿನ್ಸಿಪಾಲ್, ಎಂ.ಇ.ಎಸ್. ಕಾಲೇಜ್

# ಸಮರ್ಪಣ ನುಡಿ

**(ಪ್ರಥಮ ಪ್ರಕಟಣೆ 1971ರಲ್ಲಿ ಲೇಖಕರ ನುಡಿ)**

ಶ್ರೀಮನ್ನಾರಾಯಣನ ಆಜ್ಞೆಯಂತೆ, ದುರ್ಮತಗಳನ್ನು ಖಂಡಿಸಿ, ಸಜ್ಜನರಿಗೆ ತತ್ತ್ವಜ್ಞಾನವನ್ನು ದೊರಕಿಸಲಿಕ್ಕಾಗಿಯೇ ಅವತರಿಸಿದ, ವಾಯ್ವಂಶರಾದ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು, ಸಚ್ಛಾಸ್ತ್ರ ಗ್ರಂಥಗಳನ್ನು ರಚಿಸಲು ಸಂಕಲ್ಪಿಸಿ, ಮೊದಲಿಗೆ ಶ್ರೀಮದ್ಭಗವದ್ಗೀತೆಗೆ ಭಾಷ್ಯವನ್ನು ರಚಿಸಿ, ಅದನ್ನು ಬದರೀನಾಥನಲ್ಲಿ ಅರ್ಪಿಸಿದರು. ಕಾಷ್ಠ ಮೌನಾದಿ ವ್ರತಗಳನ್ನಾಚರಿಸಿ ಶ್ರೀಹರಿಯನ್ನು ವಿಶೇಷವಾಗಿ ಸೇವಿಸುತ್ತ ಬದರಿಯಲ್ಲಿರುವಾಗ ಒಂದು ರಾತ್ರಿ ಶ್ರೀ ವೇದವ್ಯಾಸರು ಅವರಿಗೆ ದರ್ಶನವಿತ್ತು ಕಲಿಗಾಲ ನಿಮಿತ್ತ ತಾವು ವಾಸವಾಗಿರುವ, ಮನುಷ್ಯರಿಗೆ ಅಗಮ್ಯವಾದ, ಬದರಿಕಾಶ್ರಮಕ್ಕೆ ಬಂದು ಹೋಗಲು ಆಜ್ಞಾಪಿಸಿದರು. ಶ್ರೀಮದಾನಂದತೀರ್ಥರು, ವ್ಯಾಸಾಶ್ರಮಕ್ಕೆ (ಹಿರೇ ಬದರಿಗೆ) ಹೊರಡುವ ಮುನ್ನ ಶಿಷ್ಯ ಶಿಕ್ಷಾರ್ಥವಾಗಿ, ಈ ಮುಂದಿನ ಸಂದೇಶವನ್ನು, ಮೌನವ್ರತಸ್ಥರಾದ್ದರಿಂದ ಲೇಖನಮಾಡಿಟ್ಟು ಹೋದರು. ಕರುಣಾಸಮುದ್ರರಾದ ಅವರ ಆ ದಿವ್ಯ ಸಂದೇಶವು ಹೀಗಿದೆ :-

**'ನೇದೃಶಂ ಸ್ಥಲಮಲಂ ಶಮಲಘ್ನಂ ನಾಸ್ಯ ತೀರ್ಥಸಲಿಲಸ್ಯ ಸಮಂ ವಾಃ ।**
**ನಾಸ್ತಿ ವಿಷ್ಣು ಸದೃಶಂ ನನು ದೈವಂ ನಾಸ್ಮದುಕ್ತಿ ಸದೃಶಂ ಹಿತರೂಪಮ್ ॥'**

ಎಂದರೆ, 'ಈ ಬದರಿಗೆ ಸದೃಶವಾದ ಪಾಪಪರಿಹಾರಕ ಕ್ಷೇತ್ರವಿಲ್ಲ; ಇಲ್ಲಿ ಪ್ರವಹಿಸುವ ಅಲಕನಂದಾ (ಗಂಗಾ) ಜಲಕ್ಕೆ ಸದೃಶವಾದ ತೀರ್ಥವಿಲ್ಲ; ಶ್ರೀ ವಿಷ್ಣುವಿಗೆ ಸದೃಶನಾದ ದೇವನಿಲ್ಲ; ನಮ್ಮ ನುಡಿಗೆ ಸದೃಶವಾದ ಹಿತವಚನಗಳಿಲ್ಲ.' ತಮ್ಮ ಉಪದೇಶಗಳನ್ನೊಳಗೊಂಡು ಸಕಲ ವೇದಾರ್ಥಸಾರವನ್ನು ನಿರೂಪಿಸುವ, ತಮ್ಮ ಗೀತಾಭಾಷ್ಯದಲ್ಲಿ ಪ್ರತಿಪಾದಿಸಲ್ಪಡುವ ಸಿದ್ಧಾಂತ ತತ್ತ್ವಗಳೇ ಸಂಸಾರತರಣಕ್ಕೆ ಶ್ರೇಷ್ಠ ಸಾಧನವೆಂದೂ, ಆ ತತ್ತ್ವಗಳ ಜ್ಞಾನಮಾತ್ರದಿಂದ ಲಭ್ಯವಾದುದು ಶ್ರೀ ವಿಷ್ಣು ಸರ್ವೋತ್ತಮತ್ವರೂಪ ಮಹಾ ಪ್ರಮೇಯಜ್ಞಾನವೆಂದೂ, ಅವರ ಉದಾಹೃತ ಸಂದೇಶವು ಸಾರುತ್ತದೆ. ಪವಿತ್ರ ಭರತ ಖಂಡದಲ್ಲಿ ಮಾನವನಾಗಿ ಹುಟ್ಟಿ, ಸರ್ವ ಪ್ರಯತ್ನದಿಂದ ದೇಹತಃ ಸಾಧಿಸಬೇಕಾದ ಮಹಾಕಾರ್ಯಗಳಲ್ಲಿ ಗಂಗಾಸ್ನಾನ ಮತ್ತು ಬದರೀ ಯಾತ್ರೆಗಳು ಪ್ರಧಾನವಾದವು. ಇದರಂತೆ, ಶ್ರೀಮದಾನಂದತೀರ್ಥರ ಶಾಸ್ತ್ರ ಗ್ರಂಥಗಳನ್ನು ಅಧ್ಯಯನಾದಿಗಳಿಂದ ಸೇವಿಸಿ, ಅದರಿಂದ ಶ್ರೀ ವಿಷ್ಣುವೇ ಸರ್ವೋತ್ತಮನೆಂಬ ದೃಢಜ್ಞಾನವನ್ನು ಸಂಪಾದಿಸುವುದು ಮಹಾಕಾರ್ಯವು. ಅಷ್ಟು ಮಾತ್ರವಲ್ಲ, ಗಂಗಾಸ್ನಾನ ಬದರೀಯಾತ್ರೆಗಳಕ್ಕಿಂತ ಅತಿಶಯವಾದ ಮೋಕ್ಷಸಾಧನವು. ದುರ್ಲಭವಾದ

ತೀರ್ಥಯಾತ್ರೆಗಳು ಬಹು ಪುಣ್ಯಸಾಧ್ಯಗಳು - ಬಹುಭಾಗದ ಭಾರತೀಯರಿಗೆ ಸಹ ಅನೇಕ ಕಾರಣಗಳಿಂದ ಲಭಿಸುವುದಿಲ್ಲ. ಸರ್ವಜ್ಞ ಶಾಸ್ತ್ರವನ್ನು ಅಭ್ಯಸಿಸುವ ಮಹಾಯೋಗವು ಬಹು ಜನ್ಮಾರ್ಜಿತ ಮಹಾಪುಣ್ಯಜನಿತ ಗುರ್ವಾದಿ ಸ್ವೋತ್ತಮರ ಪ್ರಸಾದದಿಂದ ಮಾತ್ರ ಲಭಿಸತಕ್ಕದ್ದು.

''ಶ್ರೀ ವಿಷ್ಣುವೇ ಸರ್ವೋತ್ತಮನು - ಸರ್ವಸ್ವಾಮಿಯು - ಮುಕ್ತಿಪ್ರದನು; ಇದನ್ನು ಸಾಧಿಸುವ ಮಧ್ವಶಾಸ್ತ್ರಕ್ಕೆ ಸಮನಾದ ಶಾಸ್ತ್ರವಿಲ್ಲ'' ಎಂಬೀ ಸಂದೇಶದ ವಿವರಣರೂಪದ ನಿರೂಪಣೆಯೇ 'ಸಂದೇಶ ರತ್ನಮಾಲಾ' ಎಂಬ ನಾಮದಿಂದ ಪ್ರವೃತ್ತವಾಗಿರುವ ಈ ಗ್ರಂಥಶ್ರೇಣಿಯ ವಿಷಯವು. ಈ ಮಹಾಸಂದೇಶದ ಲಾಭವನ್ನು ಪಡೆಯುವ ಸುಜೀವರಿಗೆ, ಮೊದಲಿಗೆ ನಾಸ್ತಿಕ್ಯ ಭಾವನೆಗಳು ತೊಲಗಬೇಕು. ಆಸ್ತಿಕ್ಯ ಬುದ್ಧಿಯುಳ್ಳ ಸುಜೀವರಿಗೆ ಸಹ, **ತತ್ವಜಿಜ್ಞಾಸೆಯಲ್ಲಿ ತೊಡಗುವ ಮುನ್ನ, ಯಥಾರ್ಥಜ್ಞಾನಸಾಧಕ ಪ್ರಮಾಣಗಳು ಯಾವುವೆಂಬುದರ ನಿಶ್ಚಯವಿರಬೇಕು. ಹಾಗಿಲ್ಲದಿದ್ದರೆ ನಿರರ್ಥಕವಾಗಿ ವಿಚಾರಶಕ್ತಿಯ** ಅಪವ್ಯಯವಾಗುತ್ತದೆ. ಪ್ರಮಾಣಗಳು ಯಾವುವೆಂಬುದನ್ನು ನಿರ್ಧರಿಸಿಕೊಂಡು ಶಾಸ್ತ್ರ ಶ್ರವಣಾದಿಗಳನ್ನು ಮುಂದುವರಿಸಬೇಕು. ಆಗ ಯೋಗ್ಯ ಗುರೂಪದೇಶ ಮತ್ತು ವಿಚಾರ ವಿಮರ್ಶೆಗಳಿಂದ ಸಕಲ ವಿರೋಧಗಳ ಪರಿಹಾರಪೂರ್ವಕವಾದ ಶ್ರೀ ವಿಷ್ಣು ಸರ್ವೋತ್ತಮತ್ವ ಜ್ಞಾನಲಾಭವಾಗುತ್ತದೆ - ಶ್ರೀ ವಿಷ್ಣುವೇ ಸಕಲ ಕಲ್ಯಾಣಗುಣಪೂರ್ಣರನೆಂದೂ ದೋಷಗಂಧವಿದೂರನೆಂದೂ ತಿಳಿದು, ಅಧಿಕಾರಿಜೀವನು ಆತನನ್ನೇ ಶರಣು ಹೊಂದುತ್ತಾನೆ. ಶ್ರೀ ವಿಷ್ಣುಪ್ರಸಾದ ಮಾತ್ರ ಲಭ್ಯವಾದ ನಿತ್ಯನಿರ್ದುಃಖಾನಂದ ಸ್ಥಿತಿ ರೂಪವಾದ ಮೋಕ್ಷವನ್ನು ಸಾಧಿಸಲು ಅವಶ್ಯ ಕೈಗೊಳ್ಳಬೇಕಾದ ಸಾಧನಗಳ ಅನುಷ್ಠಾನದಲ್ಲಿ ತೊಡಗುತ್ತಾನೆ. ಸಾಧನ ಪರಿಪೂರ್ತಿಯನ್ನುಹೊಂದಿದವನಿಗೆ ಶ್ರೀ ವಿಷ್ಣು ಪ್ರಸಾದದಿಂದ, ಸ್ವಹೃದಯದಲ್ಲಿ ಆತನ ದಿವ್ಯ ದರ್ಶನವು ಲಭಿಸುತ್ತದೆ. ಈ ದರ್ಶನಭಾಗ್ಯವೇ ಬ್ರಹ್ಮಜ್ಞಾನವೆಂಬುದು. ಬ್ರಹ್ಮಜ್ಞಾನದ ಮಹಾಫಲವನ್ನು ಜ್ಞಾನಿಯು ತಪ್ಪದೇ ಹೊಂದುತ್ತಾನೆ. ಈ ಗ್ರಂಥಮಾಲೆಯ ೧ ರಿಂದ ೫ರವರೆಗಿನ ರತ್ನಗಳು, ಪೂರ್ವೋಕ್ತ ವಿಷಯಗಳನ್ನು ಉಕ್ತಕ್ರಮದಲ್ಲಿ ಪ್ರತಿಪಾದಿಸುತ್ತವೆ.

ಯೋಗ್ಯಾಧಿಕಾರಿಗಳಾದ ಸತ್ಯಾನ್ವೇಷಿಗಳಿಗೆ ಸಿದ್ಧಿಸುವ ನಿರ್ಣೀತ ಪ್ರಮೇಯಗಳೇ ತತ್ವಸಾರವು - ಅದರ ನಿರೂಪಣೆಯೇ ತತ್ವವಾದವು - ಇದನ್ನೇ ಸರ್ವದಾ ಪ್ರತಿಪಾದಿಸುವವರು ತತ್ವವಾದಿಗಳು. **ಈ ದೃಷ್ಟಿಯಿಂದ ಮಧ್ವಮತವೇ ತತ್ವವಾದವು.** ಮಧ್ವಮತದ ಸಿದ್ಧಾಂತ ತತ್ವಗಳನ್ನು, ಯುಕ್ತಿ ಮತ್ತು ಲೋಕಾನುಭವಗಳನ್ನು ಹೆಚ್ಚಾಗಿ ಆಶ್ರಯಿಸಿ, ಅವಶ್ಯವೆನಿಸುವಲ್ಲಿ ನಿರವಕಾಶವಾದ ಪ್ರಧಾನ ಶ್ರುತಿ ಸ್ಮೃತ್ಯಾದಿಶಾಸ್ತ್ರವಾಕ್ಯಗಳನ್ನೂ ಉದಹರಿಸಿ ವಿಮರ್ಶಾತ್ಮಕ ವಿಚಾರಕ್ಕೊಳಪಡಿಸಿ, ವಿದ್ಯಾವಂತರಾದ ಆಧುನಿಕ ತರುಣರಿಗೂ

ಒಪ್ಪಿಗೆಯಾಗಬಹುದಾದ ರೀತಿಯಲ್ಲಿ ನಿರೂಪಿಸಲು, ಈ ಗ್ರಂಥ ಶ್ರೇಣಿಯ ಗುಚ್ಛಗಳಲ್ಲಿ ಪ್ರಯತ್ನಿಸಲಾಗಿದೆ. ಜೀವೇಶ್ವರರ ಸ್ವರೂಪ ಸಂಬಂಧಗಳ ವಿಷಯದಲ್ಲಿ ಉದ್ಭವಿಸುವ **ಬಿಂಬ ಪ್ರತಿಬಿಂಬ ಭಾವ, ಜೀವ ಕರ್ತೃತ್ವ, ಅನಾದಿಕರ್ಮ, ಮುಕ್ತಭೋಗ ಮೊದಲಾದ ಚರ್ಚಾಸ್ಪದವಾದ (moot) ಪ್ರಮೇಯಗಳನ್ನು ಸುದೀರ್ಘವಾಗಿ, ಆಗಮಾನುಸಾರಿಗಳಾದ ಯುಕ್ತಿಗಳಿಂದ, ವಿಮರ್ಶಿಸಿ, ನಿರ್ಣಯಗಳನ್ನು ನಿರೂಪಿಸಲಾಗಿದೆ. ವೇದಾಂತ ವಿದ್ಯೆಯು** ಅಪಾರವಾದ ಸಾಗರದಂತಿದೆ. ಸಂಗ್ರಹವಾಗಿಯಾದರೂ ಪ್ರಧಾನಪ್ರಮೇಯ-ಗಳನ್ನು ನಿರೂಪಿಸಲು ಉದ್ಯುಕ್ತನಾದ ನಾನು ಅಲ್ಪಮತಿಯು. ವಿದ್ಯಾಪರಿಣತರು ಹಂಸಕ್ಷೀರ ನ್ಯಾಯದಿಂದ, ಗುಣಗಳನ್ನು ಮಾತ್ರ ಗ್ರಹಿಸುವವರೆಂದು ನಂಬಿದ್ದೇನೆ. ಈ ಗ್ರಂಥಗಳಲ್ಲಿರಬಹುದಾದ ದೋಷಗಳು ನನ್ನವು - ಉಪಯುಕ್ತ ಗುಣಗಳು ಬುದ್ಧಿಪ್ರೇರಕ ತತ್ತ್ವಾಭಿಮಾನಿಗಳಿಗೆ ಸೇರಿದವು.

ಈ ಗ್ರಂಥಶ್ರೇಣಿಯನ್ನು ಮುದ್ರಿಸಿ ಪ್ರಕಟಿಸಲು ಒಪ್ಪಿ, ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘದವರು, ಜ್ಞಾನಪ್ರಚಾರ ರೂಪದ ಈ ಸೇವಾಭಾಗ್ಯವನ್ನು ನನಗೆ ದೊರಕಿಸಿಕೊಟ್ಟಿದ್ದಾರೆ. ಶ್ರೀ ಸಂಘದ ಕಾರ್ಯಕರ್ತರಿಗೂ, ಈ ಗ್ರಂಥಮಾಲೆಯ ರಚನಾಕಾರ್ಯದಲ್ಲಿ ನನಗೆ ಬಹು ಪರಿಯ ಸಹಾಯ ನೀಡಿರುವ, ಮಾನ್ಯ ಮಿತ್ರರೂ ಸಂಘದ ಸದಸ್ಯರೂ ಆದ ಶ್ರೀ ಎಚ್. ವೆಂಕೋಬಾಚಾರ್ಯ ಮತ್ತು ಶ್ರೀ ಚೀಳಂಗಿ ಕೃಷ್ಣಮೂರ್ತಿರಾಯರಿಗೂ ನಾನು ಕೃತಜ್ಞನಾಗಿದ್ದೇನೆ. ಸಂಘದ ಕಾರ್ಯದರ್ಶಿಗಳಾದ ಶ್ರೀ ತಾಡಪತ್ರಿ ವೆಂಕೋಬರಾಯರ ಪೂರ್ಣ ಸಹಕಾರದಿಂದ ಈ ಕಾರ್ಯವು ಪರಿಸಮಾಪ್ತಿಗೊಂಡಿದೆ. ಅವರನ್ನೂ ಕೃತಜ್ಞನಾಗಿ ವಂದಿಸುತ್ತೇನೆ. ಶ್ರೀಮಜ್ಜಯತೀರ್ಥರ ಆರಾಧನೋತ್ಸವದ ಈ ಪವಿತ್ರ ದಿನದಲ್ಲಿ, ಇಲ್ಲಿ ಸನ್ನಿಹಿತರಾಗಿರುವ ಶ್ರೀ ಸರ್ವಜ್ಞಾಚಾರ್ಯರ ದಿವ್ಯಚರಣ ಕಮಲಗಳಲ್ಲಿ, ಈ ಗ್ರಂಥಮಾಲೆಯನ್ನು ಭಕ್ತಿಪೂರ್ವಕವಾಗಿ ಅರ್ಪಿಸಿರುತ್ತೇನೆ. ಅದ್ಭುತ ಮಹಿಮರೂ ಕೃಪಾಸಮುದ್ರರೂ ಆದ ಶ್ರೀ ಸರ್ವಜ್ಞರು, ಈ ನನ್ನ ಅಲ್ಪ ಸೇವೆಯನ್ನು ಸ್ವೀಕರಿಸಿ, ನನ್ನನ್ನು ತಮ್ಮ ಕೃಪಾಕಟಾಕ್ಷಪಾತ್ರನನ್ನಾಗಿ ಮಾಡಿ ಅನುಗ್ರಹಿಸಲೆಂದು ದೀನನಾಗಿ ಪ್ರಾರ್ಥಿಸುತ್ತೇನೆ. ಶ್ರೀ ಹರಿಯೂ ಸುಪ್ರೀತನಾಗಿ ನನಗೆ ಜ್ಞಾನ ಭಕ್ತಿ ವೈರಾಗ್ಯಗಳನ್ನು ಕರುಣಿಸಿ ಸದ್ಗತಿ ಪ್ರದನಾಗಲೆಂದು ಅನನ್ಯನಾಗಿ ಯಾಚಿಸುತ್ತೇನೆ.

'ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತುಮೇ ಜನ್ಮ ಜನ್ಮನಿ'

॥ ಶ್ರೀ ಕೃಷ್ಣಾರ್ಪಣಮಸ್ತು ॥

# ಮೋಕ್ಷ ಮಾರ್ಗ
## (ಮುಕ್ತಿ ಸಾಧನಗಳು)

### (ರತ್ನ - ೪)

### ಪರಿಚ್ಛೇದ ೧

### ವೈರಾಗ್ಯ

ಶ್ರೀ ನಾರಾಯಣಾದಿ ಅನಂತ ಪವಿತ್ರನಾಮಗಳುಳ್ಳ ಪರಬ್ರಹ್ಮನು, ಜ್ಞಾನಾನಂದಾದಿ ಅನಂತ ಗುಣಪೂರ್ಣನೂ, ನಿರ್ದೋಷಿಯೂ, ವಿಶ್ವ ಕರ್ತನೂ, ಮೋಕ್ಷಾದಿ ಸರ್ವಾಭೀಷ್ಟಪ್ರದನೂ, ಸರ್ವಸ್ವತಂತ್ರನೂ ಎಂದು, ಸರ್ವಸದಾಗಮಗಳಿಂದ ಸಿದ್ಧವಾಗುತ್ತದೆಂದು ರತ್ನ ೩ರಲ್ಲಿ ನಿರೂಪಿಸಲಾಯಿತಷ್ಟೆ. ಕ್ಷುದ್ರ ಕ್ಷಣಿಕ ಸುಖಬಿಂದುಗಳಿಂದ ಮಿಶ್ರವಾದ ಈ ದುಃಖಮಯ ಸಂಸಾರ ಸಾಗರದಿಂದ, ಮುಕ್ತಿಯೋಗ್ಯ ಜೀವರು, ಪಾರಾಗಿ ಅಪೇಕ್ಷಿತ ನಿತ್ಯ ನಿರ್ದುಃಖಾನಂದ ಸ್ಥಿತಿಯನ್ನು ಹೊಂದಲು ಅನುಸರಿಸಬೇಕಾದ ಮಾರ್ಗವನ್ನು ಈ ಗ್ರಂಥದಲ್ಲಿ ವಿವೇಚಿಸಲಾಗುತ್ತದೆ.

ಜಗಜ್ಜನ್ಮಾದಿಕರ್ತನೂ ಸರ್ವೋತ್ತಮನೂ ಆದ ಶ್ರೀ ಹರಿಯ ಪ್ರಸನ್ನತೆಯಿಂದ ಮಾತ್ರ ಲಭ್ಯವಾದ ಆತನ ದರ್ಶನವೇ (ಬ್ರಹ್ಮಸಾಕ್ಷಾತ್ಕಾರವೇ) ಮುಕ್ತಿಗೆ ಪ್ರಧಾನ ಸಾಧನವೆಂದು ಆಗಮಗಳು ಸಾರುತ್ತವೆ.''[1]

ವೇದಾದಿ ಆಗಮಗಳಿಂದ ದೊರೆಯುವ ಶ್ರೀಹರಿಯ ಜ್ಞಾನವು 'ಪರೋಕ್ಷ ಜ್ಞಾನವು'; ಶ್ರೀ ಹರಿಯ ಸಾಕ್ಷಾದ್ದರ್ಶನವು 'ಅಪರೋಕ್ಷ ಜ್ಞಾನ'ವೆನಿಸುತ್ತದೆ. ಅನ್ಯಸಾಧನಗಳಿಂದ ತಿಳಿಯುವುದು 'ಪರೋಕ್ಷವು'; ಸ್ವಯಂ (ಸ್ವಸ್ವರೂಪದಿಂದ) ಗ್ರಹಿಸುವುದು 'ಅಪರೋಕ್ಷವು', ಮುಕ್ತರು ನಿತ್ಯಾಪರೋಕ್ಷವುಳ್ಳವರು. ಅಮುಕ್ತರು ಸಮಾಧಿಯಲ್ಲಿ (ನಿಶ್ಚಲ ಧ್ಯಾನಾವಸ್ಥೆಯಲ್ಲಿ), ಮಿತಕಾಲಾವಧಿ ಪರ್ಯಂತ ಶ್ರೀಹರಿ ದರ್ಶನವನ್ನು ಪಡೆಯುತ್ತಾರೆ. ಇದನ್ನೂ ಅಪರೋಕ್ಷವೆಂದೇ

1. ಯಮೇವೈಷವೃಣುತೇ ತೇನಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ । (ಶ್ರುತಿ)

ಕರೆಯಲಾಗುತ್ತದೆ. ಶ್ರೀಹರಿ ದರ್ಶನವನ್ನು ಪಡೆಯುವ ಜ್ಞಾನಿಯ ಪರಿಶುದ್ಧ ಮನಸ್ಸು, ಅಪರೋಕ್ಷಕ್ಕೆ ನಿಮಿತ್ತ ಮಾತ್ರವು; ಜಾಗ್ರದವಸ್ಥೆಯಲ್ಲಿ ಅನ್ಯವಸ್ತುಗಳನ್ನು ಗ್ರಹಿಸುವ ಚಕ್ಷುರಾದಿಗಳಂತೆ ಉಪಕರಣವಲ್ಲ. ಇಂದ್ರಿಯಗಳು ತಮ್ಮ ಸಹಜ ಶಕ್ತಿಯಿಂದ ಸ್ವಯೋಗ್ಯ ವಿಷಯಗಳನ್ನು ಸ್ವಾಭಾವಿಕವಾಗಿ ಗ್ರಹಿಸುವಂತೆ ಸಮಾಧಿಯನ್ನು ಹೊಂದಿದ ಮನಸ್ಸು, ಪರಮಾತ್ಮನನ್ನು ಗ್ರಹಿಸುವುದಿಲ್ಲ. ಮುಕ್ತರು ಪ್ರಾಕೃತೇಂದ್ರಿಯಾದಿ ಉಪಕರಣಗಳುಳ್ಳವರಲ್ಲ; ಎಲ್ಲವನ್ನೂ (ಅಪ್ರಾಕೃತ ಚೇತನಾತ್ಮಕ) ಸ್ವರೂಪೇಂದ್ರಿಯಗಳಿಂದಲೇ ನಿರ್ವಹಿಸುವ ಸಾಮರ್ಥ್ಯವುಳ್ಳವರು. ಮುಕ್ತರು ಸರ್ವದಾ ಶ್ರೀಹರಿಯ ಸಾಕ್ಷಾದ್ದರ್ಶನ-ಭಾಗ್ಯವುಳ್ಳವರು.[2]

ಮೋಕ್ಷಕ್ಕೆ ಪ್ರಧಾನ ಸಾಧನವಾದ ಬ್ರಹ್ಮದರ್ಶನವನ್ನು , ಸಂಸಾರಿ ಜೀವರು, ಧ್ಯಾನಸಿದ್ಧಿಯಿಂದ ಪಡೆಯುವರೆಂದೂ, ಧ್ಯಾನಸಿದ್ಧಿಗೆ ಶ್ರವಣ ಮನನ ಸಾಧ್ಯವಾದ ತತ್ವನಿಶ್ಚಯವು (ಪರೋಕ್ಷಜ್ಞಾನ ನಿಶ್ಚಯವು) ಅವಶ್ಯಕವೆಂದೂ ಈ ಹಿಂದೆ ಸಂಕ್ಷೇಪದಿಂದ ಸೂಚಿಸಲಾಗಿದೆ. ಪಂಚಭೇದ, ತಾರತಮ್ಯ ಸಹಿತವಾದ ಶ್ರೀಹರಿ ಸರ್ವೋತ್ತಮತ್ವಜ್ಞಾನವೇ ನಿಸ್ಸಂಶಯವಾಗಿ ಸ್ಥಿರವಾಗಿ ನಿಂತರೆ, ಅದೇ **'ತತ್ವನಿಶ್ಚಯ'** ವೆನಿಸುವುದು. ಈ ಪ್ರಕಾರದ ತತ್ವನಿಶ್ಚಯವು, ಜ್ಞಾನಾಧಿಕಾರಿಗಳಾದ ಮುಕ್ತಿಯೋಗ್ಯ ಜೀವರಿಗೆ ಮಾತ್ರ ಲಭಿಸುತ್ತದೆ. ಸ್ವರೂಪ ಯೋಗ್ಯತೆಯಿಂದ ಜ್ಞಾನಾಧಿಕಾರಿಯಾದರೂ, ಈ ವಿಧ ತತ್ವಜ್ಞಾನವು, ವೈರಾಗ್ಯವಿಲ್ಲದ ಶ್ರವಣಾದಿ ಸಾಧನಗಳಿಂದ ದೊರೆಯುವುದಿಲ್ಲ. ಆದ್ದರಿಂದ ಸಕಲ ಸಾಧನಗಳಲ್ಲಿ ಮುಖ್ಯ-ವಾದುದೂ ಮತ್ತು ಶ್ರವಣಾದಿ ಜ್ಞಾನ - ಸಾಧನಗಳಿಗೆ ಆಧಾರಭೂತ-ವಾದುದೂ; ವೈರಾಗ್ಯವು.

ಇಂದ್ರಿಯಗಳಿಂದ ನಾನಾ ವಿಷಯಗಳನ್ನು ಭೋಗಿಸಿ ಪಡೆಯುವ ಸುಖವು ಕ್ಷಣಿಕ ಮತ್ತು ಕ್ಷುದ್ರವಾದುದು. ಸರ್ವಾಪೇಕ್ಷಿತವಾದ ದುಃಖ ಲೇಶದ ಸಂಬಂಧವಿಲ್ಲದ ನಿತ್ಯಸುಖವೆಂಬ ಮೋಕ್ಷ ಸುಖವು - ಈ ಕ್ಷುದ್ರ ಸುಖದಿಂದ

2. 'ಸೌಂದರ್ಯ ಸಾರೈಕರಸಂ ರಮಾಪತೇಃ ರೂಪಂ ಸದಾಽನಂದಯತೀಹ ಮೋಕ್ಷಿಣಃ' - ಸೌಂದರ್ಯಸಾರವೇ ಮೂರ್ತಿವೆತ್ತ ರಮಾಪತಿಯು, ಮುಕ್ತಲೋಕಗಳಲ್ಲಿ ತನ್ನ ರೂಪವನ್ನು ಸಂದರ್ಶಿಸಿ, ಮುಕ್ತರನ್ನು ಸದಾ ಆನಂದಗೊಳಿಸುತ್ತಾನೆ. (ಸುಮಧ್ವ ವಿಜಯ)

ಅತ್ಯಂತ ವಿಲಕ್ಷಣವಾದುದು-ಅಪಾರವಾದುದು-ನಿತ್ಯವಾದುದು. ಈ ಉಭಯ ವಿಧ ಸುಖಸ್ವರೂಪಗಳಲ್ಲಿರುವ ಅಂತರವನ್ನು ಗ್ರಹಿಸಲು, ಹಿಮಕಾಲದಲ್ಲಿ ಆಕಾಶದಲ್ಲಿ ಕಾಣಬಹುದಾದ ಜಲತುಂತುರುಗಳಿಗೂ, ಪ್ರಳಯ ಕಾಲದಲ್ಲಿ ಕಾಲಮೇಘಗಳಿಂದ ಸುರಿಯುವ ಜಲಧಾರೆಗಳಿಗೂ ಇರುವ ಅಂತರವನ್ನು ನಿದರ್ಶನಾರ್ಥ ಉದಾಹರಿಸಬಹುದು. ಕ್ಷುದ್ರವಾದ ವೈಷಯಿಕ ಸುಖವನ್ನೇ ಪುರುಷಾರ್ಥವೆಂದು ಭಾವಿಸುವುದು ಕೇವಲ ಭ್ರಮೆಯು. ದೇಹ, ಗೇಹ, ದಾರಾ ಪುತ್ರಾದಿ ಸಕಲ ವಸ್ತುಗಳೂ ಮತ್ತು ತಾನೂ (ಜೀವ ಸ್ವರೂಪವೂ) ಸಹ ಶ್ರೀ ಹರಿಯ ಅಧೀನವೆಂದು ತಿಳಿದು, ಅಹಂ ಮಮಕಾರಗಳನ್ನು (ನಾನು-ನನ್ನದು ಎಂಬ ಅಭಿಮಾನವನ್ನು) ತೊರೆದು, ಭಗವದಿತರ ಸಮಸ್ತ ವಸ್ತುಗಳಲ್ಲಿ ಸಂಗವನ್ನು ಪರಿತ್ಯಾಗಮಾಡಿ, ಶ್ರೀಹರಿಯನ್ನೇ ಅನನ್ಯನಾಗಿ ಆಶ್ರಯಿಸಿ ಜಲದಲ್ಲಿರುವ ಕಮಲ ಪತ್ರದಂತೆ ನಿರ್ಲಿಪ್ತನಾಗಿ ಜೀವಿತವನ್ನು ನಡೆಸುವುದು ವೈರಾಗ್ಯವು. ಈ ಲಕ್ಷಣಗಳುಳ್ಳ ಉಚ್ಚಮಟ್ಟದ ಮನೋಭಾವನೆಯು ಬ್ರಹ್ಮದರ್ಶನವನ್ನು ಪಡೆದ ಜ್ಞಾನಿಗೆ ಮಾತ್ರ ಇರುತ್ತದೆ. ಸಾಧಕ ಜೀವರಲ್ಲಿ (ಅಪರೋಕ್ಷಕ್ಕೆ ಪೂರ್ವದಲ್ಲಿ), ಸಾಮಾನ್ಯಮಟ್ಟದ ಕೆಲವು ಲಕ್ಷಣಗಳು, ಕಾಲ ವಿಶೇಷಗಳಲ್ಲಿ ಮಾತ್ರ ಕಂಡು-ಬರುತ್ತವೆ. ಉತ್ತಮವಾದ ಉಚ್ಚ ಲಕ್ಷಣಗಳುಳ್ಳ ವೈರಾಗ್ಯವಿಲ್ಲದೇ ಜ್ಞಾನವಿಲ್ಲೆಂದರೆ, ವೈರಾಗ್ಯವಿಲ್ಲದೇ ಜ್ಞಾನವಿಲ್ಲ - ಜ್ಞಾನವಿಲ್ಲದೇ ವೈರಾಗ್ಯವಿಲ್ಲೆಂದು ಪ್ರಾಪ್ತವಾಗಿ ಈ ಪ್ರಕ್ರಿಯೆಯು ಬಹು ಯುಕ್ತಿ ವಿರುದ್ಧವಾಗುತ್ತದೆ. ಆದ್ದರಿಂದ, ವೈರಾಗ್ಯ-ವಿಲ್ಲದೇ ಜ್ಞಾನವಿಲ್ಲೆಂದು ಹೇಳುವಲ್ಲಿರುವ ವೈರಾಗ್ಯ ಶಬ್ದದಿಂದ ಅಪರೋಕ್ಷ ಜ್ಞಾನಿಗಿರುವ ದೃಢವೈರಾಗ್ಯವೆಂದು ತಿಳಿಯಕೂಡದು. ಕಿಂಚಿತ್ ವೈರಾಗ್ಯ ಭಾವನೆಯೂ ಇಲ್ಲದವನ ಮನಸ್ಸು ಇಂದ್ರಿಯಗಳ ದ್ವಾರಾ ವಿಷಯಗಳಲ್ಲಿ ಧಾವಿಸುವುದರಿಂದ, ಪರೋಕ್ಷಜ್ಞಾನ ನಿಶ್ಚಯಕ್ಕೆ ಅವಶ್ಯಕವಾದ ಮನಸ್ಸಿನ ಏಕಾಗ್ರತೆಯು ಅಶಕ್ಯವಾಗುವುದೆಂಬುದನ್ನು ಅನುಭವದಿಂದಲೂ ತಿಳಿಯ-ಬಹುದಾಗಿದೆ. ಈ ಲೋಕಾನುಭವವನ್ನು ಆಧರಿಸಿ, ಶ್ರೀಕೃಷ್ಣನು ಗೀತೆಯಲ್ಲಿ, **'ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ । ಸಂಗಾತ್ಸಂಜಾಯತೇ ಕಾಃ ಕಾಮಾತ್ ಕ್ರೋಧೋಭಿಜಾಯತೇ । ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ ಸ್ಮೃತಿ ವಿಭ್ರಮಃ । ಸ್ಮೃತಿ ಭ್ರಂಶಾತ್ ಬುದ್ಧಿನಾಶೋ**

**ಬುದ್ಧಿ ನಾಶಾತ್ ಪ್ರಣಶ್ಯತಿ ॥**' ಎಂದರೆ, 'ಇಂದ್ರಿಯ ಭೋಗ್ಯ ವಿಷಯಗಳನ್ನು ಮನಸ್ಸಿನಲ್ಲಿ ತಂದರೆ, ಅವುಗಳನ್ನು ಭೋಗಿಸಬೇಕೆಂಬ ಇಚ್ಛೆಯು (ಭೋಗಾ-ಸಕ್ತಿಯು) ಹುಟ್ಟುತ್ತದೆ; ಇದರಿಂದ ವಿಷಯ ಕಾಮನೆಯೂ (ದೊರೆಕಿಸಿ-ಕೊಳ್ಳಬೇಕೆಂಬ ಆಶೆಯೂ), ಅದರಿಂದ (ಆ ಕಾಮಪೂರ್ತಿಗೆ ಉಂಟಾಗುವ ವಿರೋಧಗಳಿಂದ ಕ್ರೋಧವೂ, ಕ್ರೋಧದಿಂದ ವಿವೇಕನಾಶವೂ ಶಾಸ್ತ್ರಜ್ಞಾನ ಸಾಧ್ಯವಾದ ವಿವೇಕವೇ ನಷ್ಟವಾಗಲು, ಅದರೊಂದಿಗೆ ಶಾಸ್ತ್ರ ವಿಸ್ಮರಣೆಯೂ, ಅದರಿಂದ ಬುದ್ಧಿನಾಶವೂ ಉಂಟಾಗಿ, ಸಾಧನ ಮಾರ್ಗದಿಂದ ಚ್ಯುತನಾಗುತ್ತಾನೆ' ಎಂಬುದಾಗಿ ವಿಷಯಾಸಕ್ತಿಯಿಂದ ಉಂಟಾಗುವ ಅನರ್ಥ ಪರಂಪರೆಗಳನ್ನು ಚಿತ್ರಿಸಿರುವನು. ವಿಷಯಾಸಕ್ತರಿಗೆ, ಮುಖ್ಯವಾಗಿ ಜ್ಞಾನಾರ್ಜನೆಗೆ ಅವಶ್ಯಕ-ವಾದ ಮನಸ್ಸಿನ ಏಕಾಗ್ರತೆಯೇ ದುರ್ಲಭವಾಗಿ, ಪರಮ ಪ್ರಮಾಣಗಳೂ ಉತ್ಕೃಷ್ಟ ಜ್ಞಾನಸಾಧನಗಳೂ ಆದ ವೇದಾದಿ ಆಗಮಗಳು ಸಹ ಯಥಾರ್ಥ ಜ್ಞಾನವನ್ನು ದೊರಕಿಸುವಲ್ಲಿ ಅಸಮರ್ಥಗಳಾಗುತ್ತವೆ.[3] ವೈರಾಗ್ಯವಿಲ್ಲದವನು ಬಹು ಶ್ರಮವಹಿಸಿ (ಕಥಂಚಿತ್) ಜ್ಞಾನಾರ್ಥವಾಗಿ ಯತ್ನಿಸಿದರೂ, ಬುದ್ಧಿ ಮೋಹದಿಂದ ದುರರ್ಥಗಳನ್ನು ಗ್ರಹಿಸಿ, ಅನ್ಯಥಾ ಜ್ಞಾನಿಯಾಗುವ ಸಂಭವವೇ ಹೆಚ್ಚು. ಆದ್ದರಿಂದ ತತ್ವಜ್ಞಾನಾರ್ಥಿಯಾದ ಪ್ರತಿಯೊಬ್ಬನೂ, ಮೊದಲಿಗೆ ವೈರಾಗ್ಯಕ್ಕಾಗಿ ಯತ್ನಿಸಬೇಕು. ಕಿಂಚಿತ್ ವೈರಾಗ್ಯದಿಂದ, ವಿವೇಕದ್ವಾರಾ ಸ್ವಲ್ಪ ಜ್ಞಾನವೂ, ಅದರಿಂದ ವೈರಾಗ್ಯದಾರ್ಢ್ಯವೂ ಅದರಿಂದ ಅಧಿಕ ಜ್ಞಾನವೂ, ಅದರಿಂದ ದೃಢತರವಾದ ವೈರಾಗ್ಯವೂ, ಹೀಗೆ ಪರಸ್ಪರ ವೈರಾಗ್ಯ-ಜ್ಞಾನಗಳು ವೃದ್ಧಿಗೊಳ್ಳುತ್ತವೆ. ಜ್ಞಾನದೊಂದಿಗೆ (ವಿಷ್ಣು ಮಹಿಮೆಗಳ ಜ್ಞಾನದಿಂದ) ಭಕ್ತಿಯೂ ಬೆಳೆಯುತ್ತ ಸಾಗುತ್ತದೆ.

---

3. 'ನ ತಸ್ಯ ತತ್ತ್ವಗ್ರಹಣಾಯ ಸಾಕ್ಷಾದ್ವರೀಯಸೀರಪಿ ವಾಚಃ ಸಮಾಸನ್ । ಸ್ವಪ್ನೇ ನಿರುಕ್ತ್ಯಾ ಗೃಹಮೇಧಿ ಸೌಖ್ಯಂ ನ ಯಸ್ಯ ಹೇಯಾನುಮಿತಂ ಸ್ವಯಂ ಸ್ಯಾತ್ ॥ (ಭಾಗವತ).

– ಸ್ತ್ರೀ ಭೋಗಾದಿ ವಿಷಯವು, ಸ್ವಪ್ನದಂತೆ ಅನಿತ್ಯವೂ ಕ್ಷಣಿಕವೂ ಆದುದರಿಂದ, ಯಾವ ಪುರುಷನಿಗೆ ಹೇಯವೆಂದು ತಿಳಿಯುವುದಿಲ್ಲವೋ ಅವನಿಗೆ ನಿರ್ದುಷ್ಟ ಪ್ರಮಾಣಗಳಾದ ವೇದವಾಕ್ಯಗಳೂ ಸಹ ಯಥಾರ್ಥ ಜ್ಞಾನಜನಕಗಳಾಗುವುದಿಲ್ಲ - ತತ್ತ್ವಜ್ಞಾನವನ್ನು ಉಂಟು ಮಾಡಲು ಅಸಮರ್ಥಗಳಾಗುತ್ತವೆ.

ಹೀಗೆ ಜ್ಞಾನಭಕ್ತಿಗಳಿಗೂ ತನ್ಮೂಲಕ ಶ್ರೀವಿಷ್ಣುಪ್ರಸಾದಕ್ಕೂ ಕಾರಣ-ವಾಗುವ ವೈರಾಗ್ಯವು ಮುಮುಕ್ಷು ಜೀವರಿಗೆ ಒಂದು ದೊಡ್ಡ ಭಾಗ್ಯವು. ಈ ಭಾಗ್ಯವನ್ನು ಶ್ರೀ ಹರಿಯೇ ದಯಪಾಲಿಸಬೇಕಲ್ಲದೇ ಅನ್ಯಮಾರ್ಗವಿಲ್ಲ. ಜೀವರು ತಮ್ಮ ಯತ್ನ ಮಾತ್ರದಿಂದ ದೊರಕಿಸಿಕೊಳ್ಳಲಾರರು. ವಿವಿಧ ಮನೋಭಾವಗಳ ನಿಯಂತೃವಾದ ಶ್ರೀಹರಿಯನ್ನೇ ಪ್ರಾರ್ಥಿಸಿ ಶರಣು ಹೊಂದಬೇಕು. ಜೀವರ ಸ್ವರೂಪ ಯೋಗ್ಯತೆ ಪೂರ್ವ ಪುಣ್ಯಾದಿಗಳನ್ನು ನಿಮಿತ್ತೀಕರಿಸಿ ಸರ್ವಕರ್ತನಾದ ಶ್ರೀಹರಿಯೇ ಪ್ರೇರಿಸಿ, ಜೀವರಿಂದ ಯಥಾ ಯೋಗ್ಯವಾದ ಯತ್ನವನ್ನೂ ಮಾಡಿಸಿ, ವೈರಾಗ್ಯವೆಂಬ ಮಹಾಭಾಗ್ಯವನ್ನು ಅನುಗ್ರಹಿಸುತ್ತಾನೆ.[4] ಈ ಪ್ರಕ್ರಿಯೆಗಳ ರಹಸ್ಯವನ್ನರಿತ ಜ್ಞಾನಿಗಳಾದ ಹರಿದಾಸರು 'ವಿಷಯದ ವಿಚಾರ ಬಿಡು ವಿಹಿತ ಕರ್ಮವ ಮಾಡು ವೈರಾಗ್ಯ ಭಾಗ್ಯ ಬೇಡು' ಎಂದಿರುವರು. ಈ ನುಡಿಯಲ್ಲಿರುವ, ಬಿಡು-ಮಾಡು ಬೇಡು ಎಂಬ ಕ್ರಿಯೆಗಳು ಸಹ ಶ್ರೀ ಹರಿ ಪ್ರೇರಣೆಯಿಂದಲೇ ಸಾಧ್ಯವಾದವುಗಳು; ಅವುಗಳನ್ನು ಶ್ರೀಹರಿಯು, ಜೀವರಿಂದ ಯಥಾಕಾಲದಲ್ಲಿ ಯಥಾ ಯೋಗ್ಯವಾಗಿ ಮಾಡಿಸಿ, ಸಫಲಗೊಳಿಸುವ ಅಥವಾ ವಿಫಲಗೊಳಿಸುವ ಸ್ವತಂತ್ರ ಪ್ರಭುವೂ ಆಗಿದ್ದಾನೆ. ಸರ್ವಕರ್ತನ ಈ ಸ್ವಾತಂತ್ರ್ಯವನ್ನು ತಿಳಿದು ತನ್ನ ಪರಾಧೀನತೆಯ ಸಂತತ ಸ್ಮರಣೆಯುಳ್ಳವನಾಗಿಯೇ ಜೀವನು ಯತ್ನಿಸಬೇಕು.

**ವಿಃ ಎಂದರೆ ವಿಷ್ಣು; ಅವನಲ್ಲಿ ರಾಗ ಎಂದರೆ ಭಕ್ತಿ. ವಿಷ್ಣುಭಕ್ತಿಯುತ-ನಾಗುವುದೂ ವೈರಾಗ್ಯವೇ.** ವಿಷಯಾಸಕ್ತಿಯನ್ನು ತ್ಯಜಿಸುವುದೆಂಬ ಅರ್ಥದಲ್ಲಿ ವೈರಾಗ್ಯ ಶಬ್ದದ ರೂಢಿಯಿದ್ದರೂ, ಅದರಿಂದ ಜ್ಞಾನದ್ವಾರಾ ಪ್ರಾಪ್ತವಾಗುವುದು ವಿಷ್ಣುಭಕ್ತಿಯೇ ಎಂಬುದನ್ನು ಗಮನಿಸಿದರೆ, ವೈರಾಗ್ಯ ಶಬ್ದದ ಈ ಯೌಗಿಕಾರ್ಥವೂ ಯುಕ್ತವೆಂಬುದನ್ನು ಮನಗಾಣಬಹುದು. ವಿಷಯ ಚಿಂತೆಯನ್ನು ಬಿಟ್ಟು ತಮತಮಗೆ ವಿಹಿತವಾದ (ಕಾರ್ಯ ಅಕಾರ್ಯಗಳ) ವ್ಯವಸ್ಥೆಗೆ ಅವಶ್ಯಕವಾದ ಶಾಸ್ತ್ರಗಳಲ್ಲಿ ಹೇಳಲಾಗುವ ಕರ್ಮಗಳಲ್ಲಿ ಆಸಕ್ತರಾಗಬೇಕಾದರೆ, ಶ್ರೀಹರಿಯೇ ಸರ್ವೇಶ್ವರನೂ ಸರ್ವನಿಯಾಮಕನೂ

4. ರತ್ನ 3- ಪುಟ 361 ರಿಂದ 371 ರವರೆಗಿನ ಜೀವಕರ್ತೃತ್ವ ವಿವರಣೆಯ ಭಾಗವನ್ನು ನೋಡಬಹುದು.

ಸರ್ವಕರ್ತನೂ ಎಂಬ ಜ್ಞಾನವು ಅವಶ್ಯಕವಾದರೂ, ಈ ಜ್ಞಾನ ನಿಶ್ಚಯವಿಲ್ಲದೇ ವೈರಾಗ್ಯಕ್ಕಾಗಿ ಯತ್ನಿಸುವುದು ಕೂಡುವುದಿಲ್ಲವೆಂದಾಗಲಿ, ಅಂತಹ ಯತ್ನವು ನಿಷ್ಫಲವೆಂದಾಗಲಿ ತಿಳಿಯುವುದು ತಪ್ಪು. ಈ ಹಿಂದೆ (ರತ್ನ೧, ಪರಿಚ್ಛೇದ೭ರಲ್ಲಿ) ನಿರೂಪಿಸಿರುವಂತೆ, ಯುಕ್ತಿ (reason) ಮತ್ತು ಲೋಕಾನುಭವ (experience) ಗಳಿಂದ ಸಾಮಾನ್ಯಾಕಾರವಾಗಿ ಸಿದ್ಧವಾಗುವ ಜಡ-ಚೇತನ ವಿಭಾಗಯುಕ್ತ ಜಗತ್ತನ್ನೂ, ಈ ಜಗತ್ತನ್ನು ನಿಯಂತ್ರಿಸುವ ಸ್ವತಂತ್ರೇಶ್ವರ ಶಕ್ತಿಯನ್ನೂ, ಅದೃಷ್ಟ-ಜನ್ಮಾಂತರಾದಿಗಳ ಅಸ್ತಿತ್ವವನ್ನೂ, ವಿವೇಕಿಗಳು ದುರ್ಲಕ್ಷಿಸುವುದಿಲ್ಲ-ದುರ್ಲಕ್ಷಿಸಬಾರದು. ಈ ಪ್ರಕ್ರಿಯೆಗಳ ಸಮಾಲೋಚನೆಯಿಂದ ಕಿಂಚಿತ್ ವೈರಾಗ್ಯವು ಅಂಕುರಿಸಲು ಅವಕಾಶವಿದೆ. ಈ ಅಂಕುರವು ಮೊಳೆತು ಬೆಳೆದು ಹೆಮ್ಮರವಾಗಲು ಜ್ಞಾನವೆಂಬ ಸೂರ್ಯಪ್ರಕಾಶವು ಅತ್ಯವಶ್ಯಕ, ವೈರಾಗ್ಯವೆಂಬ ಅಂಕುರವು ವೃಕ್ಷರೂಪವನ್ನು ಹೊಂದುವುದರೊಳಗೆ, ಜ್ಞಾನವೆಂಬ ಸೂರ್ಯನು ಕ್ರಮವಾಗಿ ಪ್ರಖರ ಕಿರಣಗಳಿಂದ ಉಜ್ವಲಗೊಳ್ಳುತ್ತಾನೆ. ಎಂದರೆ, ಜ್ಞಾನವೂ ವೃದ್ಧಿಗೊಳ್ಳುತ್ತದೆ. ವೈರಾಗ್ಯವೆಂಬ ಅಂಕುರವನ್ನು ಬೆಳೆಸಿ ವೃಕ್ಷವನ್ನಾಗಿಸುವ ಜ್ಞಾನವು, ಜಗದ್ವಿಷಯಕ ಜ್ಞಾನವಲ್ಲ; ಕಿಂತು ವಿಷ್ಣು ಸರ್ವೋತ್ತಮತ್ವ ಸಾಧಕ ಪರಾಪರತತ್ತ್ವ ವಿಷಯಕವಾದುದು. ವೈರಾಗ್ಯವು ದೃಢಗೊಳ್ಳುವುದಕ್ಕೆ ಪ್ರಾಕೃತ ಗುಣಬಂಧ ನಿಮಿತ್ತವಾಗಿ ಜೀವರು ಅನುಭವಿಸುತ್ತಿರುವ ಸಂಸಾರ ಸ್ವರೂಪದ ಯಥಾರ್ಥ ಜ್ಞಾನವಾಗಬೇಕು. ಸಂಸಾರವು ಅಸಾರವೂ ಅನಿತ್ಯವೂ ಆದುದೆಂಬ ಜ್ಞಾನವಿಲ್ಲದೇ ವಿರಕ್ತಿಯು ಹುಟ್ಟಲಾರದು. ಮರಣ - ಜನನ - ಸ್ವರ್ಗ - ನರಕ - ಗರ್ಭವಾಸ ಇತ್ಯಾದಿಗಳ ನಿಜಸ್ವರೂಪವನ್ನು ತಿಳಿದು, ತತ್ಸಂಬಂಧವಾದ ಪ್ರಮೇಯಗಳ ಬೌದ್ಧಿಕ ನಿಶ್ಚಯಗಳನ್ನು ಹೊಂದುವುದು ಬಹುಮಟ್ಟಿಗೆ ವೈರಾಗ್ಯ ದಾರ್ಢ್ಯತೆಗೆ ಕಾರಣವಾಗುತ್ತದೆ. ಆದ್ದರಿಂದ ಈ ವಿಷಯಗಳ ಬಗ್ಗೆ ವೇದಾದಿ ಆಗಮಗಳ ನಿರ್ಣಯಗಳೇನೆಂಬುದನ್ನು ಮೊದಲಿಗೆ ತಿಳಿಯಬೇಕು. ಇವು ಯುಕ್ತಿ ಮಾತ್ರದಿಂದ (reason) ನಿರ್ಣಯಿಸಿಕೊಳ್ಳುವ ವಿಷಯಗಳಲ್ಲ. ಮರಣ ಜನನ-ಗರ್ಭವಾಸಾದಿಗಳ ವಿಷಯದಲ್ಲಿ, ವೈದ್ಯಕೀಯ ಪ್ರವೀಣರ ಅಭಿಪ್ರಾಯಗಳಲ್ಲಿ ಮತ್ತು ಜೀವಶಾಸ್ತ್ರ (Biology), ಶರೀರದ ಅಂಗಗಳನ್ನು ಅವುಗಳ ವಿಕಾಸಾದಿಗಳನ್ನು ವಿವರಿಸುವ ಶರೀರಶಾಸ್ತ್ರ (Anatomy) ಮೊದಲಾದ

ಆಧುನಿಕ ವೈಜ್ಞಾನಿಕ ಪ್ರಗತಿಸಿದ್ಧ ಅಭಿಪ್ರಾಯಗಳಲ್ಲಿ ಏಕವಾಕ್ಯತೆಯನ್ನು ಕಾಣಲಾರೆವು. ಯುಕ್ತಿಯೇ (reason) ಮೂಲಾಶ್ರಯವಾಗಿ ಉಳ್ಳ ಇವು ಯಾವುವೂ ಎಂದೂ ಯಾವ ನಿರ್ಣಯಗಳನ್ನೂ ಸಾಧಿಸಲಾರವು. ಪ್ರವೀಣ-ರೆಂಬುವರಲ್ಲಿ ಪರಸ್ಪರ ಅಭಿಪ್ರಾಯ ವಿರೋಧಗಳು ಅನಿವಾರ್ಯವಾಗುತ್ತದೆ. ಏಕೆಂದರೆ ಅವರ ಬುದ್ಧಿ ಶಕ್ತಿಗಳಲ್ಲಿ ತಾರತಮ್ಯವಿರುತ್ತದೆ - ಬುದ್ಧಿ ವ್ಯಾಪಾರ-ದಿಂದಲೇ ನಾನಾ ಪ್ರಕಾರದ ಊಹೆಗಳು ಮತ್ತು ನಿರ್ಣಯಗಳು ಏರ್ಪಡುತ್ತವೆ. ಸ್ವರ್ಗ ನರಕಗಳೆಂದೂ ಪ್ರತ್ಯಕ್ಷ ಸಿದ್ಧವಲ್ಲ. ಇಂದ್ರಿಯ ಗೋಚರವಲ್ಲದ ವಿಷಯಗಳಲ್ಲಿ ಪ್ರತ್ಯಕ್ಷ-ಅನುಮಾನಗಳಿಂದ ನಿರ್ಣಯಗಳನ್ನು ಕಾಣುವುದು ಶಕ್ಯವಿಲ್ಲ- ಆಗಮಗಳನ್ನೇ ಶರಣು ಹೊಂದಬೇಕು. ಆಗಮಗಳ ನಿರ್ಣಯಗಳನ್ನು ಹೇಳಲಿಕ್ಕೆ ಪ್ರವೃತ್ತವಾದ ಬ್ರಹ್ಮಮೀಮಾಂಸಾ ಶಾಸ್ತ್ರವು ಹೇಳುವ ಈ ವಿಷಯಕ ನಿರ್ಣಯಗಳನ್ನು ತಿಳಿಯೋಣ.

ವೈರಾಗ್ಯ ವಿಷಯಕ ಪ್ರಮೇಯಗಳನ್ನು ಬ್ರಹ್ಮಸೂತ್ರಗಳು, ೩ನೇ ಅಧ್ಯಾಯದ ೧ನೇ ಪಾದದಲ್ಲಿ, ನಿರ್ಣಯಿಸಿ ನಿರೂಪಿಸುತ್ತವೆ. '**ಭೂತ ಬಂಧಸ್ತು ಸಂಸಾರಃ ಮುಕ್ತಿಸ್ತೇಭ್ಯೋ ವಿಮೋಚನಮ್ ॥**' - 'ಪಂಚಭೂತಗಳಿಂದಾದ ದೇಹಬಂಧವೇ ಜೀವನಿಗೆ ಸಂಸಾರವು ಅದರಿಂದ ಬಿಡುಗಡೆಯನ್ನು ಹೊಂದುವುದೇ ಮುಕ್ತಿಯು' ಎಂಬ ನುಡಿಯು, ಲೋಕಾನುಭವವನ್ನು ನಿರೂಪಿಸುವಂತೆ ತೋರುತ್ತದೆ. ಮಹತ್ಕಾರ್ಯಗಳನ್ನು ಸಾಧಿಸಲು ಯತ್ನಿಸಿ, ಅವುಗಳನ್ನು ಪೂರ್ಣಗೊಳಿಸಲು, ಅಸಮರ್ಥರಾದಾಗ, ಈ ದೇಹವು ನಮ್ಮನ್ನು (ಜೀವನನ್ನು) ಬಂಧಿಸಿರುವುದೆಂಬ ಅನುಭವವುಂಟಾಗುತ್ತದೆ. ಚೇತನನ ಉತ್ಸಾಹಕ್ಕೆ ಅನುಗುಣವಾಗಿ (ಅದನ್ನು ಸರಿಗಟ್ಟುವಂತೆ) ದೇಹವು ಕೆಲಸ ಮಾಡಲಸಮರ್ಥವಾದಾಗ ದೇಹಗತ ಚೇತನನ್ನು ದೇಹವು ಬಂಧಿಸಿರುವುದೆಂಬ ಅನುಭವವುಂಟಾಗುವುದು ಸಹಜವಲ್ಲವೇ? ಈಗ ಈ ಬಂಧವಿಲ್ಲದಿದ್ದರೆ, ಏನು ಬೇಕಾದರೂ ಸಾಧಿಸಬಹುದಾಗಿತ್ತೇನೋ ಎನಿಸುತ್ತದೆ. ಈ ದೇಹ ರೂಪದ ಪ್ರಾಕೃತ ಬಂಧವು ಮರಣದಿಂದ ಸಹಜವಾಗಿ ತೊಲಗುತ್ತದೆ. ಮರಣವಾದರೋ ಹುಟ್ಟಿದವರಿಗೆಲ್ಲ ಸಿದ್ಧವೇ ಆಗಿದೆ. '**ಜಾತಸ್ಯ ಹಿ ಧ್ರುವೋ ಮೃತ್ಯುಃ**' - (ಗೀತಾ), ಹುಟ್ಟಿದವನಿಗೆ ಮರಣವು ನಿಶ್ಚಯವೆಂದು

ಶ್ರೀಕೃಷ್ಣನ ನಿರ್ಣಯ. ಅನಾದಿ ಕಾಲದಿಂದ ಮಾನವನು ಮರಣವನ್ನು ಗೆಲ್ಲಲು ಪ್ರಯತ್ನಿಸುತ್ತಾ ಬಂದಿದ್ದಾನೆ. ಈಗಲೂ ವೈದ್ಯ ಪ್ರವೀಣರ ತಂಡವು, ಅದಕ್ಕಾಗಿ ತಮ್ಮ ಜೀವಿತ ಕಾಲವನ್ನು ಮೀಸಲಾಗಿಟ್ಟು, ದುಡಿಯುತ್ತಿದೆ. ಆದರೆ ಶ್ರೀಕೃಷ್ಣನ ಮಾತು ಎಂದಿಗೂ ಸುಳ್ಳಾಗುವುದಲ್ಲ. ಮರಣದಿಂದ ಭೌತಿಕ ದೇಹವು ತಾನಾಗಿಯೇ ಜೀವನನ್ನು ಬಿಟ್ಟು ತೊಲಗುವುದರಿಂದ, ಬಂಧವಿಮೋಚನೆಗಾಗಿ (ಅದರಿಂದ ದೊರೆಯುವ ಮುಕ್ತಿಗಾಗಿ) ವೈರಾಗ್ಯಾದಿ ಸಾಧನಗಳು ಅನವಶ್ಯಕ-ವೆಂಬ ಸಂಶಯವನ್ನು ಮೊದಲಿಗೆ ಪರಿಹರಿಸಲಾಗಿದೆ. ಮರಣವು ಪಂಚಭೂತ-ಗಳಿಂದ ನಿಶ್ಶೇಷ ಬಿಡುಗಡೆಯನ್ನು ದೊರಕಿಸುವುದಿಲ್ಲವೆಂದು ನಿರ್ಣಯಿಸ-ಲಾಗಿದೆ. ಪಂಚಭೂತಗಳು - ಇಂದ್ರಿಯಗಳು ಮತ್ತು ಮನಸ್ಸುಗಳು, ಮರಣ ಕಾಲದಲ್ಲಿ ಜೀವನು ದೃಶ್ಯಮಾನವಾದ ಸ್ಥೂಲದೇಹವನ್ನು ಬಿಟ್ಟು ಹೊರಡುವಾಗ, ಸೂಕ್ಷ್ಮರೂಪದಿಂದ ಜೀವನನ್ನು ಅನುಸರಿಸುತ್ತವೆ. ಮನ ಮೊದಲಾದ ಇಂದ್ರಿಯಗಳ ಮತ್ತು ಪಂಚಭೂತಗಳ ಸೂಕ್ಷ್ಮಾಂಶಗಳು ಕರ್ಮಾನುಸಾರವಾಗಿ ಈ ಜೀವನು ಹೊಂದಿಸಲ್ಪಡುವ ಸ್ಥೂಲದೇಹದೊಂದಿಗೆ ಸೇರಿ ಪುನಃ ಪ್ರಕಟವಾಗುತ್ತವೆ. ಈ ನಿರ್ಣಯವು ಮರಣದಿಂದ ಭೂತ ಬಂಧದ (ಸಂಸಾರದ) ಬಿಡುಗಡೆಯೆಂಬುದನ್ನು ನಿರಾಕರಿಸುತ್ತವೆ. ಅಷ್ಟು ಮಾತ್ರವಲ್ಲ, ಭೂತಗಳು ಪಂಚಭೂತಗಳಲ್ಲಿಯೂ, ಚಕ್ಷುರಾದಿ ಇಂದ್ರಿಯಾಭಿಮಾನಿ ದೇವಾಂಶಗಳು ಆಯಾ ದೇವತೆಗಳ ರೂಪದಲ್ಲಿಯೂ ಸೇರುತ್ತವೆಂದು ಹೇಳುವಂತೆ ತೋರುವ ಶ್ರುತಿಗಳ[5] ವಿರೋಧವನ್ನೂ ಪರಿಹರಿಸಿ, '**ಪುರುಷಸ್ಯ ಮೃತೌ ಬ್ರಹ್ಮನ್**

5. 'ಅಗ್ನಿಂವಾಗಪ್ಯೇತಿ ವಾತಂ ಪ್ರಾಣಃ ಚಕ್ಷುರಾದಿತ್ಯಂ ಮನಶ್ಚಂದ್ರಮಸಂ ದಿಶಃ ಶ್ರೋತ್ರಂ....(ಬೃಹದಾರಣ್ಯ) ವಾಗಿಂದ್ರಿಯವು ಅಗ್ನಿಯನ್ನೂ, ಪ್ರಾಣವು ವಾಯುವನ್ನು, ಚಕ್ಷುವಿಂದ್ರಿಯವು ಸೂರ್ಯನನ್ನು, ಮನಸ್ಸು ಚಂದ್ರನನ್ನು, ಶ್ರೋತ್ರೇಂದ್ರಿಯವು ದಿಕ್ಕುಗಳನ್ನು,' ಕೂಡಿಕೊಳ್ಳುತ್ತವೆಂದು ಹೇಳುವುದರಿಂದ ಮರಣಕಾಲದಲ್ಲಿ ಜೀವನೊಂದಿಗೆ ಇಂದ್ರಿಯಗಳ ಗಮನವಿಲ್ಲ ಮತ್ತು ಇಂದ್ರಿಯ-ಗಳಿಂದ ವ್ಯಾಪ್ಯಗಳಾದ ಭೂತಗಳಿಗೆ ಜೀವನೊಂದಿಗೆ ಗಮನವು ಕೂಡುವುದಿಲ್ಲ. ಈ ಅರ್ಥವನ್ನು ಹೇಳುವಂತೆ ತೋರುವ ಈ ಮುಂತಾದ ಶ್ರುತಿಗಳ ವಿರೋಧದಿಂದ ಬರುವ ಸಂಶಯವನ್ನು ಪರಿಹರಿಸಲಾಗಿದೆ. ಪ್ರಾಣಾಃ - ಮನಸ್ಸು ಮೊದಲಾದ ಇಂದ್ರಿಯಗಳು, ಭಾಗತಃ ಏವ ಆಧಿದೈವಂ ಪ್ರಾಪ್ನುವಂತಿ - ಅಂಶದಿಂದ ಮಾತ್ರ ಅಧಿದೈವನನ್ನು ಹೊಂದುತ್ತವೆ; ಭಾಗತಃ ತಂ ಅನುವ್ರಜಂತಿ - ಅಂಶದಿಂದ ಆ

**ಪ್ರಾಣಾಭಾಗತ ಏವ ತು । ಅಧಿದೈವಂ ಪ್ರಾಪ್ನುವಂತಿಭಾಗತೋಽನು ವ್ರಜಂತಿ ತಮ್ । ಪುನಃ ಶರೀರ ಸಂಪ್ರಾಪ್ತೌ ತಮೇವಾನುವಿಶಂತಿ ಚ ॥** (ಬ್ರಾಹ್ಮ) ಮತ್ತು **ಮೃತಿಕಾಲೇ ಜಹತ್ಯೇನಂ ಪ್ರಾಣಾ ಭೂತಾನಿ ಪಂಚ ಚ। ಭಾಗತೋ ಭಾಗತಸ್ತ್ವೇನಮನುಗಚ್ಛಂತಿ ಸರ್ವಶಃ ॥**' (ಬ್ರಹ್ಮಾಂಡ) ಸ್ಮೃತಿಗಳು ಹೇಳುವಂತೆ, (ವಾಗಾದಿ) ಇಂದ್ರಿಯಗಳು ಒಂದಂಶದಿಂದ (ಅಗ್ನಿ ಮೊದಲಾದ) ದೇವತೆಗಳನ್ನು ಹೊಂದುತ್ತವೆಂದೂ, ಒಂದಂಶದಿಂದ ಮರಣಕಾಲದಲ್ಲಿ ಜೀವನನ್ನು ಅನುಸರಿಸುತ್ತವೆಂದೂ, ಪುನಃ ಆ ಜೀವನಿಗೆ ಅನ್ಯ ಸ್ಥೂಲದೇಹ ಪ್ರಾಪ್ತವಾಗಲು, ಜೀವನೊಂದಿಗೆ ಈ ಅಂಶಗಳೂ ಅಲ್ಲಿ ಪ್ರವೇಶಮಾಡುವುದೆಂದೂ ನಿರ್ಣಯಿಸಲಾಗಿದೆ. ''ಅಪಾಮಸೋಮಮಮೃತಾಬಭೂಮ'' ಇತ್ಯಾದಿ ಶೃತಿವಾಕ್ಯಗಳಿಂದ ತಿಳಿದು ಬರುವಂತೆ, ಯಜ್ಞಯಾಗಾದಿಕರ್ಮಗಳನ್ನಾಚರಿಸಿ ಅಮೃತತ್ವವನ್ನು (ಮುಕ್ತಿಯನ್ನು) ಹೊಂದಬಹುದಾಗಿರಲು, ವೈರಾಗ್ಯಾದಿ-ಗಳೇಕೆಂಬ ಸಂಶಯವೂ ಅಯುಕ್ತವೇ. ಈ ಶೃತಿಗಳಲ್ಲಿ ಹೇಳುವ 'ಅಮೃತತ್ವ'ವು ಅಮುಖ್ಯವಾದ ಸ್ವರ್ಗಾದಿ ಸುಖಭೋಗಸ್ಥಾನವೆಂದು ತಿಳಿದುಬರುತ್ತದೆ. ಮತ್ತು ಸ್ವರ್ಗವನ್ನು ಹೊಂದಿದವರು, ಭೋಗದಿಂದ ಪುಣ್ಯವು ಮುಗಿಯುತ್ತ ಬರಲು, ಇನ್ನೂ ಅಲ್ಪ ಪುಣ್ಯವಿರುವಾಗಲೇ ಸ್ವರ್ಗಚ್ಯುತರಾಗುತ್ತಾರೆ. ಹೀಗಿದ್ದರೂ, ಪುಣ್ಯಶೇಷದಿಂದ ಭೂಲೋಕದಲ್ಲಿ ಜನಿಸಿ, ಪುನಃ ಯಜ್ಞಾದಿ ಕರ್ಮಗಳಿಂದ ಪುಣ್ಯವನ್ನು ಸಂಪಾದಿಸಿ ಮತ್ತೆ ಸ್ವರ್ಗಸುಖವನ್ನು ಸಂಪಾದಿಸುತ್ತಾ, ಹೀಗೆ ನಿರಂತರ ಸುಖವನ್ನೇ ಭೋಗಿಸುತ್ತಿರಬಹುದೆಂಬ ವಾದವೂ ಅಯುಕ್ತವೇ ಸರಿ. ಏಕೆಂದರೆ, ಅಲ್ಪ ಪಾಪವನ್ನು ಸಹ ಮಾಡದೆ, ಸದಾ ಪುಣ್ಯಕರ್ಮಗಳನ್ನೇ ಭೋಗ ಸ್ಥಾನಗಳಿಂದ ಭೂಲೋಕದಲ್ಲಿ ಜನಿಸಲು, ತಿರುಗಿ ಬರುವ ಮಾರ್ಗವು, ಅಲ್ಲಿಗೆ ಹೋದ ಮಾರ್ಗದಂತೆ ಸುಖಕರವಾಗಿಯೇ ಇರುವುದೆಂಬ ನಿಯಮವಿಲ್ಲ. ಅದು ಕ್ಲೇಶಕರವೂ ಆಗಿರಬಹುದು. ಮತ್ತು ಕೆಲವರು ತಮ್ಮ ಇತರ ಕರ್ಮಾನು-ಸಾರವಾಗಿ ಸ್ವರ್ಗದಿಂದ ನೇರವಾಗಿ ನರಕಕ್ಕೆ ಬರುವುದೂ ಉಂಟೆಂದು ಹೇಳುವ ಆಗಮ ವಾಕ್ಯಗಳೂ ಇವೆ. ಎಲ್ಲಕ್ಕೂ ಮೇಲಾಗಿ ಅಮೃತತ್ವವು (ನಿತ್ಯಸುಖ-

---

ಜೀವನನ್ನು ಅನುಸರಿಸಿ ಹೋಗುತ್ತವೆ; ಎಂಬ ನಿರ್ಣಯವನ್ನು 'ಅಗ್ನ್ಯಾದಿ ಗತಿ ಶ್ರುತೇರಿತಿ ಚೇನ್ನ ಭಾಕ್ತತ್ವಾತ್' ಎಂಬ ಸೂತ್ರವು ಹೇಳುತ್ತದೆ.

ರೂಪ ಮೋಕ್ಷವು) ಕರ್ಮಲಭ್ಯವಲ್ಲವೆಂದೂ, '**ಕರ್ಮಣಾ ಜ್ಞಾನಮಾತನೋತಿ, ಜ್ಞಾನೇನೈವ ಅಮೃತೀ ಭವತಿ**' ಇತ್ಯಾದಿ ಶ್ರುತಿಗಳು, ಜ್ಞಾನದಿಂದಲೇ ಮೋಕ್ಷವೆಂದು ಸ್ಪಷ್ಟವಾಗಿ ಸಾರುತ್ತವೆ.

ವಿಧಿ ನಿಷೇಧಗಳನ್ನು ಮೀರುವೆನೆಂಬ ಭಯವೂ, ಕರ್ಮಫಲೇಚ್ಛೆಯೂ ಜೀವನನ್ನು ಬಂಧಿಸುತ್ತವೆ - ಸುಖದುಃಖಗಳಿಗೆ ಕಾರಣವಾಗುತ್ತವೆ. ಆದ್ದರಿಂದ ವಿಧಿನಿಷೇಧರೂಪದ ವೇದಾದಿ ಆಗಮ ವಿಹಿತಕರ್ಮಗಳನ್ನೇ ತ್ಯಜಿಸಿ, ಮನಬಂದಂತೆ ವರ್ತಿಸುವವರಿಗೆ ಬಂಧನಕ್ಕೆ ಕಾರಣವಿಲ್ಲದಂತೆ ಆಗುವುದರಿಂದ, ಸ್ವೇಚ್ಛಾಪ್ರವೃತ್ತಿಯೇ ಯೋಗ್ಯವೆಂಬ ಮುಂತಾದ ಯುಕ್ತಿವಾದಗಳು ನಾಸ್ತಿಕರಿಗೆ ಮಾತ್ರ ಶೋಭಿಸುತ್ತವೆ. ಸ್ವೇಚ್ಛಾ ವಿಹಾರಿಗಳಿಗೆ ವೇದಗಳನ್ನು ಅತಿಕ್ರಮಿಸಿದ ಪಾಪವೂ, ಅದರಿಂದ ನರಕಾದಿ ಅನರ್ಥಗಳೂ ತಪ್ಪಿದ್ದಲ್ಲವೆಂದು ನಿರ್ಣಯಿಸಿ, ಸ್ವರ್ಗ-ನರಕಗಳೆಂಬ ಸುಖ-ದುಃಖ ಭೋಗಸ್ಥಾನಗಳು (ಪ್ರತ್ಯೇಕ ಲೋಕಗಳು) ಉಂಟೆಂದೂ ಸಾಧಿಸಲಾಗಿದೆ. ಸ್ವರ್ಗಾದಿ ಲೋಕಗಳಿಂದ ಹಿಂದಿರುಗಿ, ಪುಣ್ಯ-ಶೇಷದಿಂದ ಭೂಮಿಯಲ್ಲಿ ಮಾನವರಾಗಿ ಹುಟ್ಟುವಂತೆ, ನರಕಸ್ಥಾನಗಳಿಂದ ಹಿಂದಿರುಗಿ ಪಾಪ ಶೇಷದಿಂದ ನೀಚಯೋನಿಗಳಲ್ಲಿ (ಅಥವಾ ರೋಗ-ದಾರಿದ್ರ್ಯ-ಅಜ್ಞಾನಗಳುಳ್ಳ ಮನುಷ್ಯ ದೇಹದಲ್ಲಿ) ಹುಟ್ಟುವುದೂ ಉಂಟು. ಸ್ವರ್ಗ-ನರಕಗಳೆಂಬ ಲೋಕಗಳು ಪುಣ್ಯ-ಪಾಪ ಕರ್ಮಗಳ ಫಲವಾಗಿ ದೊರೆಯುವ ಸ್ಥಾನವಿಶೇಷಗಳು. ಈ ಲೋಕಗಳಿಂದ ತಿರುಗಿ ಬಂದವರಾರೂ ಅವುಗಳ ಬಗ್ಗೆ ಯಾವ ಸಾಕ್ಷ್ಯವನ್ನು ನುಡಿಯುವವರಿಲ್ಲ. ಪ್ರತ್ಯಕ್ಷ ಮಾತ್ರ ಪ್ರಮಾಣವೆಂಬ ಚಾರ್ವಾಕಾದಿ ನಾಸ್ತಿಕರು ಸ್ವರ್ಗ ನರಕಗಳನ್ನು ಹೇಗೆ ನಂಬುವರು? ಮೇಲಾಗಿ '**ಅತ್ರೈವ ನರಕಃ ಸ್ವರ್ಗ ಇತಿ ಮಾತಃ ಪ್ರಚಕ್ಷತೇ । ಯಾ ಯಾತನಾ ವೈ ನಾರಕ್ಯಸ್ತಾ ಇಹಾಪ್ಯುಪಲಕ್ಷಿತಾಃ ॥**' (ಭಾಗವತ) - ಎಂದರೆ, 'ಹೇ! ಜನನಿ, ನರಕ ಸ್ವರ್ಗಗಳು ಇಲ್ಲಿಯೇ ಇರುತ್ತವೆಂದು ಜ್ಞಾನಿಗಳು ಹೇಳುವರು; ನರಕ ಲೋಕದ ಯಾತನೆಗಳೆಂಬುವು ಇಲ್ಲಿಯೇ ಇರುವುವು' ಎಂದು ಕಪಿಲರೂಪೀ ಶ್ರೀಹರಿಯು, ತನ್ನ ತಾಯಿ ದೇಹೂತೀದೇವಿಗೆ ಉಪದೇಶಿಸಿರುವ ಮುಂತಾದ ಆಗಮ ವಾಕ್ಯಗಳ ಬೆಂಬಲವೂ ಹೀಗೆ ವಾದಿಸುವವರಿಗೆ ದೊರೆಯಬಹುದೆಂದು ತೋರುತ್ತದೆ. ಆದರೆ ಈ ಲೋಕದಿಂದ ಹೊರಗಿರುವ (ಬಾಹ್ಯ-ಮೇರೆ) ನರಕಾದಿ

ಲೋಕಗಳಿಲ್ಲವೆಂದು ಈ ವಾಕ್ಯಗಳ ತಾತ್ಪರ್ಯವಲ್ಲ. 'ಇಹಾಪಿ ಉಪಲಕ್ಷಿತಾಃ' ಎಂಬ ಉದಾಹೃತ ಭಾಗವತ ಶ್ಲೋಕದಲ್ಲಿರುವ ಶಬ್ದಗಳು ಈ ಲೋಕದಲ್ಲಿ ಸಹ (ಈ ದೇಹದಲ್ಲಿಯೇ) ಸತ್ಕರ್ಮ-ದುಷ್ಕರ್ಮಗಳ ಫಲಗಳಾದ ಸುಖ ದುಃಖಗಳನ್ನು ಅನುಭವಿಸಬೇಕಾಗುತ್ತವೆಂಬರ್ಥವನ್ನು ಸೂಚಿಸುತ್ತವೆ. '**ಅತ್ಯುತ್ಕಟೈಃ ಪುಣ್ಯ - ಪಾಪೈಃ ಇಹೈವ ಫಲಮಶ್ನುತೇ ।**' ಉತ್ಕಟ ಪುಣ್ಯಪಾಪಗಳ ಫಲವನ್ನು (ಸ್ವರ್ಗ ನರಕಗಳ ಪ್ರಾಪ್ತಿಗೆ ಮೊದಲು) ಇಲ್ಲಿಯೇ ಅನುಭವಿಸುತ್ತಾನೆಂದು ಹೇಳುವ ಪ್ರಮಾಣವಾಕ್ಯವೂ ಇದನ್ನೇ ಹೇಳುತ್ತದೆ. 'ನರಕ ಸ್ವರ್ಗಗಳೆರಡು ಇರುತಿಹವು ಇಲ್ಲೆ ವಿ । ಸ್ಮರಣೆಯೇ ನರಕ ಸ್ಮೃತಿ ಸ್ವರ್ಗ । ಸ್ಮೃತಿ ಸ್ವರ್ಗವಿರೆ ಬಾಹ್ಯ ನರಕ ಭಯಕಂಜೆ ಎಂದೆಂದು' (ಜಗನ್ನಾಥದಾಸರು - ತತ್ವಸುವ್ವಾಲಿ), **ಹರಿಸ್ಮರಣೆಯೇ ಸ್ವರ್ಗ - ವಿಸ್ಮರಣೆಯೇ ನರಕವೆಂದು** ಹೇಳಿ, ಹರಿಸ್ಮೃತಿರೂಪ ಸ್ವರ್ಗವಿದ್ದರೆ, ಬಾಹ್ಯ ನರಕ ಭಯಕ್ಕೆ ಹೆದರುವುದಿಲ್ಲೆಂದು ಹೇಳಿ, ಈ ಅರ್ಥವನ್ನೇ ಸಮರ್ಥಿಸಿರುವರು. ಲೋಕದಲ್ಲಿ ಮಹನೀಯ ಸಜ್ಜನರನ್ನು ಗೌರವಿಸಲಿಕ್ಕೂ, ಅಪರಾಧಿಗಳನ್ನು ಶಿಕ್ಷಿಸಲಿಕ್ಕೂ ಪ್ರತ್ಯೇಕ ಸ್ಥಾನ ವ್ಯವಸ್ಥೆಗಳನ್ನು ಕಾಣುತ್ತಿರುವ ವಿವೇಕಿಗಳಿಗೆ ಸ್ವರ್ಗ-ನರಕಗಳುಂಟೆಂಬ ಆಗಮಘೋಷಣೆಗಳು ಯುಕ್ತಿ-ವಿರುದ್ಧವೆಂದು ತೋರುವುದೇ ಇಲ್ಲ. ಆದ್ದರಿಂದ ಸ್ವರ್ಗನರಕಗಳುಂಟೆಂದೂ[6] ಅವು ಪುಣ್ಯಪಾಪಗಳಿಂದ ದೊರೆಯುವ ಸ್ಥಾನ ವಿಶೇಷಗಳೆಂದೂ ದೃಢವಾದ ನಂಬಿಕೆಯುಳ್ಳವರಾಗಬೇಕು. ನರಕವು ನಿತ್ಯ-ಅನಿತ್ಯ ಭೇದದಿಂದ ಎರಡು ವಿಧವಾಗಿದೆ. ರೌರವ, ಮಹಾ ರೌರವ, ವಹ್ನಿ, ವೈತರಣಿ, ಕುಂಭೀಪಾಕ-ಗಳೆಂಬವು ಐದು ಅನಿತ್ಯ ನರಕಗಳೆಂದು, ತಾಮಿಸ್ರ ಮತ್ತು ಅಂಧತಾ-ಮಿಸ್ರಗಳೆಂಬ ಎರಡು ನಿತ್ಯ ನರಕಗಳೆಂದೂ[7] ನಿರ್ಣಯಿಸಿ, ಅವುಗಳ ಯಥಾರ್ಥ ಸ್ವರೂಪಗಳನ್ನೂ ಚಿತ್ರಿಸಲಾಗಿದೆ. ವೇದವಿಹಿತ ಕರ್ಮಗಳನ್ನು ತ್ಯಜಿಸುವುದೂ ನಿಷಿದ್ಧಕರ್ಮಗಳನ್ನಾಚರಿಸುವುದೂ ನರಕ ಸಾಧನವೆಂದೂ ನಿರ್ಣಯಿಸಿ,

---

6. ಆಗಮಗಳು ಕೆಲವು ಸಂದರ್ಭಗಳಲ್ಲಿ 'ನರಕ' ಶಬ್ದವನ್ನು ಪಶ್ವಾದಿ ನೀಚಯೋನಿ-ಗಳೆಂಬರ್ಥದಲ್ಲಿ ಸಹ ಉಪಯೋಗಿಸುತ್ತವೆ. ಭಗವದ್‌ಜ್ಞಾನ ಸಂಪಾದನೆಗೆ ಅವಕಾಶವಿರದ ಪಶುವೃಕ್ಷಾದಿ ದೇಹಗಳು ಸುಜೀವಿಗಳಿಗೆ ನರಕಪ್ರಾಯವೇ ಸರಿ. ದುಃಖಕರವೇ ಸರಿ.

7. ನಿತ್ಯನರಕಗಳ ತ್ರೈವಿಧ್ಯವನ್ನು ರತ್ನ-3 ಪರಿಚ್ಛೇದ 2 ನೋಡಬೇಕು.

ಮಿಥ್ಯಾಜ್ಞಾನಿಗಳಾದ ತಮೋಯೋಗ್ಯರಿಗೆ ಮಾತ್ರ , ಅನ್ಯಥಾ ಜ್ಞಾನದ ಪರಿಪಾಕದಿಂದ ನಿತ್ಯನರಕಗಳ ಪ್ರಾಪ್ತಿಯಾಗುವುವೆಂದೂ, ಇತರ ಪಾಪ-ಕರ್ಮಗಳಿಂದ, ಯಥಾಯೋಗ್ಯವಾಗಿ ಅನಿತ್ಯ ನರಕಗಳ ಪ್ರಾಪ್ತಿಯೆಂದೂ ಸಾಧಿಸಲಾಗಿದೆ. ನಿತ್ಯನರಕದಿಂದ ಪುನರಾವೃತ್ತಿಯಿಲ್ಲ - ಅಂದರೆ, ಈ ಲೋಕದಲ್ಲಿ (ನೂತನ ಭೌತಿಕ ದೇಹಗಳಿಂದ) ಹುಟ್ಟುವುದೆಂಬುದಿಲ್ಲ. ಅನಿತ್ಯ ನರಕಗಳು ಹಾಗಲ್ಲ. ಅಲ್ಲಿ ಪಾಪದ ಫಲವಾದ ನಾನಾ ದುಃಖಗಳನ್ನು ಅನುಭವಿಸಿ, ಪುನಃ ತನ್ನ ಮುಂದಿನ ಗತಿ ಸಾಧನೆಗಾಗಿ ಈ ಲೋಕದಲ್ಲಿ (ಕರ್ಮಭೂಮಿಯಲ್ಲಿ) ಹುಟ್ಟುತ್ತಾನೆ. ನಿತ್ಯನರಕದಲ್ಲಿರುವ ಜೀವರು, ದುಃಖಜ್ಞಾನವುಳ್ಳವರಾಗಿ (ದುಃಖವನ್ನು ಅನುಭವಿಸುತ್ತಿರುವೆವೆಂದು ತಿಳಿದು) ದುಃಖವನ್ನು ಅನುಭವಿಸರೋ ಅಥವಾ ಮಲದಲ್ಲಿ ಬಿದ್ದಿರುವ ಕ್ರಿಮಿಗಳಂತೆ ಅದೇ ಸುಖವೆಂದು ಭ್ರಮಿಸಿರುವರೋ (ತಮ್ಮ ದೃಷ್ಟಿಯಿಂದ ಸುಖವಾಗಿರುವೆ-ನೆಂದು ತಿಳಿದಿರುವರೋ) ಎಂಬ ಸಂಶಯವನ್ನು ಪರಿಹರಿಸಿ, ಶೃತಿಗಳು, ಚತುರ್ಮುಖನ ಪ್ರತ್ಯಕ್ಷ, ನಾನಾ - ಸ್ಮೃತಿಗಳು ಮತ್ತು ಯುಕ್ತಿಗಳಿಂದ, ದುಃಖಿಗಳೆಂಬ ಜ್ಞಾನ ವಿಶಿಷ್ಟರಾಗಿಯೇ ದುಃಖವನ್ನು ಅನುಭವಿಸುವರೆಂದು, ಸುಖಲೇಶವಿಲ್ಲದ ಅತ್ಯಂತ ದುಃಖವನ್ನೇ ಅನುಭವಿಸುವರೆಂದೂ ನಿರ್ಣಯಿಸ-ಲಾಗಿದೆ. ಅನ್ಯಥಾ ಜ್ಞಾನರೂಪದ ಭಗವದ್ದ್ವೇಷದ ಫಲವು ಸುಖರೂಪವಾಗಿರಲು ಶಕ್ಯವೇ? ಸರ್ವಥಾ ಇಲ್ಲ.[8] ಸರ್ವತ್ರ (ನರಕಲೋಕಗಳಲ್ಲಿಯೂ ನರಕಸ್ಥ

8. ಅನ್ಯಥಾಜ್ಞಾನವೇ ಭಗವಂತನ ದ್ವೇಷವು ಶ್ರೀ ಹರಿಯಲ್ಲಿ ಮಾಡುವ ಭಕ್ತಿಯು ನವವಿಧವಾಗಿರುವಂತೆ, ದ್ವೇಷವೂ ನವವಿಧವೆಂದು ಹೇಳಲಾಗಿದೆ.

ನವವಿಧ ಭಕ್ತಿ :- 'ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ । ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥ (ಭಾಗವತ) ಹರಿಕಥಾ-ಶ್ರವಣ; ಹರಿಮಹಿಮೆಗಳ ಕೀರ್ತನ; ಹರಿಸ್ಮರಣೆ; ಹರಿಪಾದ ಸೇವೆ; ಹರಿಮೂರ್ತಿಗಳ ಪೂಜೆ; ಹರಿನಮಸ್ಕಾರ; ಹರಿದಾಸನೆಂಬ ನಿತ್ಯಭಾವನೆ; ಅನಾದ್ಯನಂತಕಾಲದಲ್ಲಿಯೂ ನಮ್ಮೊಡನಿರುವ ಅನಿಮಿತ್ತೋಪಕಾರಿಯಾದ ನಿತ್ಯಸಖನೆಂದು ತಿಳಿಯುವುದು (ಸಖ್ಯ); ಆತ್ಮನಿವೇದನ ಎಂದರೆ ಸ್ವಸ್ವರೂಪವೂ ಶ್ರೀಹರಿಯ ನಿತ್ಯಾಧೀನವೆಂದು ತಿಳಿದು ತನ್ನನ್ನೇ ಹರಿಪಾದದಲ್ಲಿ ಅರ್ಪಿಸಿಕೊಳ್ಳುವುದು.

ನವವಿಧ ದ್ವೇಷಗಳು :- ಜೀವಾಭೇದೋ ನಿರ್ಗುಣತ್ವಂ ಅಪೂರ್ಣ ಗುಣತಾ ತಥಾ।

ಜೀವರಲ್ಲಿಯೂ) ಇರುವ ಭಗವಂತನಿಗೂ ನರಕ ದುಃಖಸಂಬಂಧ-ವಾಗಬೇಕಾಗುವುದೆಂಬ ದುರ್ಯುಕ್ತಿಯನ್ನಾಶ್ರಯಿಸಿದ ಸಂಶಯವನ್ನು ನಿರಾಕರಿಸಿ, ಸರ್ವದೇಶಕಾಲದಲ್ಲಿ ವ್ಯಾಪ್ತನಾದ ಭಗವಂತನು ಅಚಿಂತ್ಯ ಸಾಮರ್ಥ್ಯವುಳ್ಳವನಾದ್ದರಿಂದ ನರಕದಲ್ಲಿದ್ದರೂ ನಿತ್ಯನಿರ್ಲಿಪ್ತನಾಗಿ, ಪೂರ್ಣಾನಂದಸ್ವರೂಪನಾದ ತಾನು, ಸ್ವರೂಪಭೂತವಾದ ಅಮಿತಾನಂದವನ್ನೇ ಭೋಗಿಸುತ್ತಿರುವನೆಂದು ನಿರ್ಣಯಿಸಲಾಗಿದೆ. ಪೂರ್ವೋಕ್ತ ನಿರ್ಣಯಗಳ ವಿಮರ್ಶೆಯಿಂದ ಮೋಕ್ಷಾಪೇಕ್ಷಿಯಾದ ಸುಜೀವನು, ವಿಹಿತಕರ್ಮಗಳನ್ನು (ಸ್ವ-ಸ್ವವರ್ಣಾಶ್ರಮ ಧರ್ಮಗಳನ್ನು ಆಚರಿಸಬೇಕು. ನಿಷಿದ್ಧ ಕರ್ಮಗಳನ್ನು ಪರಿತ್ಯಜಿಸಬೇಕು. ವರ್ಣಾಶ್ರಮ ವಿಭಾಗಕ್ಕೊಳಪಡದವರು ಸಹ ವೇದವಿಹಿತ ಮಾನವಧರ್ಮಗಳನ್ನು ಅನುಷ್ಠಾನ ಮಾಡಬೇಕು[9] ಎಂಬ ಪ್ರಮೇಯಗಳು ಸಿದ್ಧವಾಗುತ್ತವೆ. ಜಗತ್ಸೃಷ್ಟ್ಯಾದಿ ಕರ್ತನೂ, ಸ್ವತಂತ್ರನೂ, ನಿತ್ಯಗುಣಪೂರ್ಣನೂ ಆದ ಶ್ರೀಹರಿಯೇ ಸರ್ವಸ್ವಾಮಿಯೂ ಸರ್ವೋತ್ತಮನೂ ಎಂಬ ಜ್ಞಾನವನ್ನು ಸಂಪಾದಿಸಿ, ಭಗವದ್ಭಕ್ತಿಯನ್ನು ವೃದ್ಧಿಗೊಳಿಸಿಕೊಳ್ಳಬೇಕು. ಇದಕ್ಕಾಗಿ ಸಂಸಾರದಲ್ಲಿ ಸುತ್ತಿ ಬಳಲುವುದಕ್ಕೆ ಮುಖ್ಯ ಕಾರಣವಾದ ಅಹಂಮಮಕಾರಗಳನ್ನು ತ್ಯಜಿಸಬೇಕು. ಸತ್ಸಂಗವನ್ನು ಯತ್ನಪೂರ್ವಕ ದೊರಕಿಸಿಕೊಳ್ಳಬೇಕು. ಮಹತ್ಸೇವಾಸಕ್ತನಾಗಬೇಕು. ಬುದ್ಧೀಂದ್ರಿಯಾದಿ ಸಾಧನ ಸಾಮಗ್ರಿಗಳಿಂದ

---

ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ! ಪ್ರಾದುರ್ಭಾವ ವಿಪರ್ಯಾಸಃ ತದ್ಭಕ್ತದ್ವೇಷ ಏವ ಚ । ತತ್ಪ್ರಮಾಣಸ್ಯ ನಿಂದಾಚ ದ್ವೇಷಾ ಏತೇಽಖಿಲಾಮತಾಃ ॥ (ಭಾರತ ತಾತ್ಪರ್ಯ)

ಜೀವನು ಶ್ರೀಹರಿಯಿಂದ ಅಭಿನ್ನನೆಂದು ತಿಳಿಯುವುದು; ಶ್ರೀಹರಿಯು ಆನಂದಾದಿ ಗುಣಶೂನ್ಯನೆಂದೂ; ಗುಣವಿದ್ದರೂ ಅಪೂರ್ಣಗುಣನೆಂದು; ರಮಾ ಬ್ರಹ್ಮಾದಿಗಳಿಗೆ ಸಮನೆಂದೂ; ಅನ್ಯರನ್ನು ಅಧಿಕರೆಂದೂ; ಆತನ ರೂಪಗಳಿಗೂ ಪ್ರತಿರೂಪದ ಕರಚರಣಾದಿ ಅವಯವಗಳಿಗೂ ಭೇದವುಂಟೆಂದೂ ಅವತಾರಗಳನ್ನು ಪ್ರಾಕೃತ ದೇಹಗಳೆಂದೂ ತಿಳಿಯುವುದು; ಆತನ ಭಕ್ತರನ್ನು ದ್ವೇಷಿಸುವುದು ಮತ್ತು ವೇದಾದಿ ಪ್ರಮಾಣಗಳನ್ನು ನಿಂದಿಸುವುದು (ಅಪ್ರಮಾಣವೆಂದು ವಾದಿಸುವುದು).

9. ವೇದವಿಧಿಗಳನ್ನು ವಿಸ್ತರಿಸಿ ವಿವರಿಸುವ ಧರ್ಮಶಾಸ್ತ್ರಾದಿ ಗ್ರಂಥಗಳಿಂದ ಇವುಗಳನ್ನು ತಿಳಿಯಬೇಕು. ನಿರಂತರ ಹರಿಸ್ಮರಣೆ, ಏಕಾದಶೀ ಮೊದಲಾದ ಉಪವಾಸಗಳು, ಇಂದ್ರಿಯನಿಗ್ರಹ, ಭಗವನ್ನಿಷ್ಠೆ, ಭಗವಂತನ ಕಥಾಶ್ರವಣ ಮನನಾದಿಗಳು ಸರ್ವಾಧಿಕಾರಿಕ ಧರ್ಮಗಳು.

ಪೂರ್ಣವಾದ ಮನುಷ್ಯದೇಹವನ್ನು ಹೊಂದಿಸಲ್ಪಟ್ಟಿರುವ ಜೀವಿತ ಕಾಲವನ್ನು ವ್ಯರ್ಥಗೊಳಿಸದೆ ಪರಮಾತ್ಮನ ಪ್ರಸಾದ ಪ್ರಾಪ್ತಿಗಾಗಿ ದುಡಿಯಬೇಕು. ಈ ಮಾರ್ಗವು, ಜ್ಞಾನಮಾರ್ಗ-ಕರ್ಮಮಾರ್ಗವೆಂದು ಸಾಮಾನ್ಯವಾಗಿ ಎರಡು ವಿಧ. ಯಜ್ಞ - ದಾನ - ತಪಸ್ಸುಗಳು ಸಕಲ ಮಾನವರಿಂದ ತಪ್ಪದೇ ಆಚರಿಸಲ್ಪಡಬೇಕಾದ ಕರ್ಮಗಳು. ಯಾವ ಕರ್ಮವನ್ನೂ ಮಾಡದೇ ಯಾರೂ ಕ್ಷಣ ಮಾತ್ರವೂ ಇರಲಾರರು. ಆಯಾ ಅಧಿಕಾರಿಗಳ ಯೋಗ್ಯತೆ(ಅರ್ಹತೆ)-ಗಳನ್ನನುಸರಿಸಿದ ನಾನಾ ಪ್ರಕಾರದ ಯಜ್ಞ ದಾನ ತಪಸ್ಸುಗಳುಂಟು - ಆ ವಿವರಗಳನ್ನು ತಿಳಿದು ಆಚರಿಸಬೇಕು. ಇವುಗಳಲ್ಲಿ ಜ್ಞಾನಭಾಗಕ್ಕೆ ಪ್ರಾಧಾನ್ಯವುಳ್ಳ ಯಜ್ಞಾದಿಗಳನ್ನು ಆಚರಿಸುವವರು ಜ್ಞಾನಮಾರ್ಗದಲ್ಲಿರುವರೆಂದೂ, ಕರ್ಮಭಾಗಕ್ಕೆ ಹೆಚ್ಚು ಪ್ರಾಶಸ್ತ್ಯವನ್ನಿತ್ತು, ಯಜ್ಞಾದಿಗಳನ್ನೇ ಆಚರಿಸುವವರು ಕರ್ಮಮಾರ್ಗದಲ್ಲಿರುವರೆಂದೂ ಕರೆಯಲ್ಪಡುತ್ತಾರೆ. ಯಾವುದೊಂದು ಮಾರ್ಗದಲ್ಲಿದ್ದರೂ ಅವರು ಆಚರಿಸುವ ಯಜ್ಞಾದಿ ಕರ್ಮಗಳ ಫಲವಾಗಿ, ಈ ದೇಹವನ್ನು ಬಿಟ್ಟನಂತರ, ಜ್ಞಾನಮಾರ್ಗದಲ್ಲಿರುವವರಿಗೆ (ಜ್ಞಾನಯೋಗಿಗಳಿಗೆ) ದೇವಯಾನವೆಂಬ ಮಾರ್ಗವೂ, ಕರ್ಮಮಾರ್ಗದಲ್ಲಿದ್ದು ಫಲಾಪೇಕ್ಷೆಯಿಂದ ವಿಧ್ಯುಕ್ತ ಯಜ್ಞಾದಿಗಳನ್ನು ಆಚರಿಸುವವರಿಗೆ (ಕರ್ಮಿಗಳಿಗೆ)[10] ಪಿತೃಯಾನವೆಂಬ ಮಾರ್ಗವೂ ದೊರೆಯುತ್ತವೆ. ವೇದವಿಹಿತವಾದ ಜ್ಞಾನ-ಕರ್ಮಗಳೆಂಬ ಉಭಯ-ಮಾರ್ಗಗಳನ್ನು ತೊರೆದವರಿಗಾದರೋ ನರಕವು ತಪ್ಪಿದ್ದಲ್ಲವೆಂದು ಆಗಮಗಳು ಹೇಳುತ್ತವೆ. ಆದ್ದರಿಂದ ಈ ಎರಡರಲ್ಲಿ ಒಂದು ಮಾರ್ಗವನ್ನು ಹಿಡಿದು ತಮ್ಮ ಕರ್ಮಾನುಸಾರ ಸುಖಭೋಗವನ್ನು ಅನುಭವಿಸುತ್ತ-ನರಕದಿಂದ ದೂರವಿರಲು ಶಕ್ಯವಿರುವಾಗ, ಕ್ಲೇಶಕರ ವೈರಾಗ್ಯಾದಿಗಳೇಕೆಂಬ ಸಂಶಯವನ್ನು ಪರಿಹರಿಸಲಾಗಿದೆ. ಜ್ಞಾನ-ಕರ್ಮಗಳೆಂಬ ಉಭಯ ಸಾಧನಗಳಲ್ಲಿ ಒಂದನ್ನೂ ಹೊಂದಿರದವರು, ತಿರ್ಯಗ್ಯೋನಿಗಳನ್ನಾಗಲಿ, ನರಕ ಅಥವಾ ತಮಸ್ಸುಗಳನ್ನಾಗಿ ಹೊಂದುತ್ತಾರೆ. ಮತ್ತು ಜೀವರಿಗೆ ಇಚ್ಛಿತ ಕರ್ಮಗಳನ್ನಾಚರಿಸುವ ಮತ್ತು ಇಚ್ಛಿತ ಮಾರ್ಗಗಳನ್ನು ಹೊಂದುವ, ಸ್ವಾತಂತ್ರ್ಯವಿಲ್ಲ. ಉಕ್ತವಾದ ಎರಡರಲ್ಲೊಂದು

10. ನಿಷ್ಕಾಮಕರ್ಮಗಳನ್ನು ಆಚರಿಸುವ ಕರ್ಮಯೋಗಿಗಳಿಗೂ ಪುನರಾವೃತ್ತಿರಹಿತ ದೇವಯಾನ ಮಾರ್ಗವೇ ಲಭಿಸುತ್ತದೆ. ವಿವರಗಳನ್ನು ರತ್ನ 5 ರಲ್ಲಿ ಕಾಣುತ್ತೀರಿ.

ಮಾರ್ಗವನ್ನು (ಜ್ಞಾನ-ಕರ್ಮಮಾರ್ಗಗಳು ಮತ್ತು ತಲ್ಲಭ್ಯ ದೇವಯಾನ-ಪಿತೃಯಾನಗಳನ್ನು) ಹೊಂದುವುದಕ್ಕೆ ಸಹ ವೈರಾಗ್ಯದ ಅವಶ್ಯಕತೆಯುಂಟೆಂದೂ ನಿರ್ಣಯಿಸಲಾಗಿದೆ.

ವಿಷಯಾಸಕ್ತಿ ಪರಿತ್ಯಾಗವೆಂಬುದು ವೈರಾಗ್ಯದ ಲಕ್ಷಣ.[11] ಹೀಗಿದ್ದರೂ, ಸ್ವಯೋಗ್ಯ ಯಜ್ಞಾದಿ ವಿಹಿತ ಕರ್ಮಗಳನ್ನು, ಫಲಾಶೆಯನ್ನು ಬಿಟ್ಟು, ಈಶ್ವರ ಪ್ರೀತ್ಯರ್ಥವಾಗಿ ಆಚರಿಸುವುದೆಂಬುದು, ವೈರಾಗ್ಯದ ಮುಖ್ಯ ಲಕ್ಷಣ. ಫಲಾಪೇಕ್ಷೆಯಿಂದ ಮಾಡುವ (ಸಕಾಮ) ಕರ್ಮಗಳಿಗೆ ದೊರೆಯುವುವೆಂದು ವೇದಾದಿಗಳಲ್ಲಿ ನಿರೂಪಿಸಲ್ಪಡುವ ಲೋಕಗಳು ನಶ್ವರವಾದವುಗಳು; ಸ್ವರ್ಗಾದಿ ಲೋಕಗಳ ವಾಸಾನಂತರ, ವೃಷ್ಟಿ (ಮಳೆ), ಧಾನ್ಯಾದಿ ದ್ವಾರಾ ತಂದೆಯ ದೇಹವನ್ನು ಪ್ರವೇಶಿಸಿ, ನಂತರ ಆತನ ರೇತೋದ್ವಾರಾ ತಾಯಿಯ ಉದರದಲ್ಲಿ ಬಂದು, ಗರ್ಭವಾಸ ದುಃಖವನ್ನು ತಪ್ಪದೇ ಅನುಭವಿಸಬೇಕಾಗುವುದು. ಗರ್ಭವಾಸದಿಂದ ಮರಣಪರ್ಯಂತವೂ, ಮರಣಾನಂತರ ಪುನಃ ಮಾತೃಗರ್ಭ ಪ್ರವೇಶದವರೆಗೂ ಜೀವನಿಗೆ ಪ್ರಾಪ್ತವಾಗುವ ನಾನಾ ಅವಸ್ಥೆಗಳನ್ನೂ , ಅಲ್ಲಿ

---

11. ಯನ್ಮೈಥುನಾದಿ ಗೃಹಮೇಧಿ ಸುಖಂ ಹಿ ತುಚ್ಛಂ
ಕಂಡೂಯನೇನ ಕರಯೋರಿವ ದುಃಖ ದುಃಖಮ್ ।
ತೃಪ್ಯಂತಿ ದೇಹಕೃಪಾಯಾ ಬಹು ದುಃಖಭಾಜಃ
ಕಂಡೂತಿವನ್ಮನಸಿಜಂ ವಿಷಹೇತ ಧೀರಃ ।। (ಭಾಗವತ)

ಇದರ ಅರ್ಥ :-

ಮೈಥುನಾದಿ ಗೃಹಮೇಧಿಸುಖಂ ಯತ್ - ಸ್ತ್ರೀ ಸಂಭೋಗಾದಿ ಗೃಹಸ್ಥನ ವಿಷಯ-ಭೋಗ ಸಮುದಾಯವು, ಕರಯೋಃ ಕಂಡೂಯನೇನ - ಕಜ್ಜಿ, ತುರಿ ಹತ್ತಿರ ಕೈಗಳನ್ನು ಪರಸ್ಪರ ಉಜ್ಜುವುದರಿಂದ, ಇವ- ಉಂಟಾಗುವ ಸುಖದಂತೆ, ದುಃಖ ದುಃಖಂ - ಬಹು ದುಃಖಕ್ಕೆ ಕಾರಣವು; (ಉಜ್ಜುವುದನ್ನು ನಿಲ್ಲಿಸಿದ ಮೇಲೆ ಉಂಟಾಗುವ ಅತಿಶಯವಾದ ಉರಿಯು ಅನುಭವಸಿದ್ಧ); ತುಚ್ಛಂ ಹಿ- (ವಿಷಯಭೋಗದಿಂದ ದೊರೆಯುವ ದುಃಖಶಿರಸ್ಕವಾದ ಸುಖವು) ಅಲ್ಪವೂ ಕ್ಷಣಿಕವಾದದೂ ಅಲ್ಲವೇ! ದೇಹ ಕೃಪಣಾಃ - ದೇಹ ಪೋಷಣೆಯಲ್ಲಿ ಮಾತ್ರ ಆಸಕ್ತರಾದ, ಬಹು ದುಃಖಭಾಜಃ - ಬಹುದುಃಖಭಾಗಿಗಳು, ತೃಪ್ಯಂತಿ - (ಈ ವಿಷಯ ಸುಖದಿಂದ) ತೃಪ್ತರಾಗುತ್ತಾರೆ (ಜ್ಞಾನಿಗಳಲ್ಲ); ಧೀರಃ ಕಂಡೂತಿವತ್ ಮನಸಿಜಂ ವಿಷಹೇತ - ವಿವೇಕಿಯು ಕೈ ತುರಿಯಂತೆ ವಿಷಯಾಶೆಯನ್ನು ಮರ್ದನಮಾಡಬೇಕು. (ಸಹಿಸಿಕೊಳ್ಳಬೇಕು - ವಶನಾಗಬಾರದು).

ಅವಶ್ಯ ಅನುಭವಿಸಬೇಕಾದ ವಿವಿಧ ದುಃಖಗಳನ್ನೂ ಭಾಗವತಾದಿ ಆಗಮಗಳು ಬಹುಪರಿಯಿಂದ ವರ್ಣಿಸುತ್ತವೆ.[12] ಈ ಸಂಬಂಧವಾದ ನಿರ್ಣಯಗಳನ್ನು ಗಮನಿಸಿ, ಜನನ-ಮರಣಾದಿಗಳ ಸ್ವರೂಪಗಳ ಯಥಾರ್ಥ ಜ್ಞಾನದಿಂದ ಅಂಕುರಿತವಾಗುವ ವೈರಾಗ್ಯವನ್ನು ಜ್ಞಾನ-ಭಕ್ತಿಗಳಿಂದ ದೃಢಪಡಿಸಿಕೊಂಡು ವೇದವಿಹಿತ ಯಜ್ಞಾದಿ ಕರ್ಮಗಳನ್ನು ಶ್ರೀಹರಿ ಪ್ರೀತ್ಯರ್ಥವಾಗಿ ಆಚರಿಸಬೇಕು. ವೇದಗಳು ಯಜ್ಞಗಳಲ್ಲಿ ಪಶುಮೇಧವನ್ನು ವಿಧಿಸುವುದರಿಂದ ಪ್ರಾಣಿಹಿಂಸಾ ರೂಪದ ಮಹಾ ದೋಷಯುಕ್ತ ಕರ್ಮಗಳೆಂದು ಅಜ್ಞದೃಷ್ಟಿಗೆ ಕಾಣುವ ಯಜ್ಞಾದಿಗಳು, ವೇದವಿಹಿತವಾದುದರಿಂದಲೇ ನಿರ್ದುಷ್ಟಗಳೆಂದೂ ಜ್ಞಾನಿಗ್ರಾಹ್ಯವೆಂದೂ ನಿರ್ಣಯಿಸಿ,[13] ವೇದಾದಿ ಶಾಸ್ತ್ರೋಕ್ತವಾದುದೇ ಧರ್ಮವೆಂದು ನಿರೂಪಿಸಲಾಗಿದೆ. ಆಗಮ ವಿಹಿತವೇ ಧರ್ಮವು-ತದ್ವಿರುದ್ಧ ಸರ್ವವೂ ಅಧರ್ಮವೇ. ಧರ್ಮಾಧರ್ಮಗಳನ್ನು ಸ್ವಬುದ್ಧಿಬಲ ಮಾತ್ರದಿಂದ ಎಂದೂ ನಿರ್ಣಯಿಸಬಾರದು. '**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾ-ಕಾರ್ಯೌ ವ್ಯವಸ್ಥಿತೌ ॥**' ಎಂಬುದೇ ಶ್ರೀಕೃಷ್ಣನ ನಿರ್ಣಯವು. ಆದ್ದರಿಂದ ವಿಷಯಾಸಕ್ತಿಯನ್ನು ಪರಿತ್ಯಜಿಸಿ, ಆಗಮವಿಹಿತಸ್ವೋಚಿತ ಕರ್ಮಗಳನ್ನಾಚರಿಸಿ

---

12. ಮಾತುರ್ಜಗ್ಧಾನ್ನಪಾನಾದ್ಯೈರೇಧತ್ಯಾತುರಸಂಮತಃ। ಆಸ್ತೇ ವಿಣ್ಮೂತ್ರಯೋರ್ಗರ್ತೇ ಸಜಂತುರ್ಜಂತು ಸಂಭವೇ ॥ ಕೃಮಿಭಿಃ ಕ್ಷತ ಕಡ್ವಂಗಃ ಸೌಕುಮಾರ್ಯಾತ್ಪ್ರತಿಕ್ಷಣಮ್। ಮೂರ್ಛಾಮಾಪ್ನೋತ್ಯುರುಕ್ಲೇಶಃ ತತ್ರತ್ಯೈಃ ಕ್ಷುಧಿತೈರ್ಮುಹುಃ ॥ ಇತ್ಯಾದಿ (ಭಾಗವತ 3-32-6,7) ಶ್ಲೋಕಗಳಲ್ಲಿ ಕಪಿಲ ಪರಮಾತ್ಮನು, ದೇವಹೂತಿಗೆ ಜೀವನು ದೇಹ ಸಂಬಂಧದಿಂದ ಜನಿಸುವ ಕ್ರಮವನ್ನೂ ಗರ್ಭವಾಸ ದುಃಖಗಳನ್ನೂ ವರ್ಣಿಸಿರುವನು. ಉದಾಹೃತಶ್ಲೋಕಗಳ ಭಾವಾರ್ಥ - ಮಾತೃಗರ್ಭದಲ್ಲಿರುವ (ತತ್ರತ್ಯೈಃ) ಹಸಿದ ಕ್ರಿಮಿಗಳಿಂದ ಮತ್ತೆ ಮತ್ತೆ ಕಚ್ಚಲ್ಪಟ್ಟ ಕಾರಣ ತಿನಸು (ತುರಿ) ಹತ್ತಿದ ಅಂಗಗಳಿಂದ ಬಹುದುಃಖಿತನಾದ ಜೀವನು, ಕೋಮಲ ದೇಹಯುಕ್ತ-ನಾದ್ದರಿಂದ ಕ್ಷಣಕ್ಷಣಕ್ಕೂ ಮೂರ್ಛೆಯನ್ನು ಹೊಂದುತ್ತಾನೆ; ತಾಯಿಯು ಭಕ್ಷಣ ಮಾಡಿದ, ಕಹಿ,ಅತ್ಯುಷ್ಣ, ಉಪ್ಪು, ಹುಳಿ ಮೊದಲಾದ ಆಹಾರ ವಸ್ತುಗಳಿಂದ ತಪ್ತನಾಗಿ, ಸರ್ವಾವಯವಗಳ ವೇದನೆಯುಳ್ಳವನಾಗುತ್ತಾನೆ.

13. ಕಲಿಯುಗದಲ್ಲಿ ಯಜ್ಞದಲ್ಲಿ ಪಶುವಧೆಯು ನಿಷೇಧಿಸಲ್ಪಟ್ಟಿದೆ. ಪಿಷ್ಟ ಪಶುವನ್ನು ಉಪಯೋಗಿಸಬೇಕೆಂಬ ನಿಯಮಕ್ಕೆ ಸಂಬಂಧಿಸಿದ ವಿವರಗಳನ್ನು ಗ್ರಂಥಾಂತರ-ಗಳಿಂದ ತಿಳಿಯಬೇಕು.

ಶ್ರೀಹರಿ ಪ್ರೀತ್ಯರ್ಥವಾಗಿ ಶ್ರೀಹರಿಯಲ್ಲಿ ಅರ್ಪಿಸುವ ಮನೋಭಾವವನ್ನು ಸ್ಥಿರಪಡಿಸಿಕೊಳ್ಳುವುದೆಂಬ 'ವೈರಾಗ್ಯ'ವನ್ನು ಸರ್ವ ಮುಮುಕ್ಷುಗಳೂ ಅವಶ್ಯವಾಗಿ ಸಾಧಿಸಿಕೊಳ್ಳಬೇಕೆಂದು ಬ್ರಹ್ಮಸೂತ್ರಗಳ ೩ನೇ ಅಧ್ಯಾಯದ ಪ್ರಥಮ ಪಾದವು, ಸಾಧಿಸಿ ಉಪದೇಶಿಸುತ್ತದೆ.

## ಪರಿಚ್ಛೇದ - ೨

## ಭಕ್ತಿ

**'ಏನಂ ಮೋಚಯಾಮಿ'** - ಈ ಜೀವನನ್ನು ಸಂಸಾರ ಬಂಧದಿಂದ ಬಿಡುಗಡೆ ಮಾಡುತ್ತೇನೆಂಬ ಶ್ರೀಹರಿ ಸಂಕಲ್ಪವೇ ಮೋಕ್ಷ ಪ್ರಾಪ್ತಿಗೆ ಪ್ರಧಾನ ಸಾಧನವು. ಹೀಗೆ ಸಂಕಲ್ಪಿಸುವಂತೆ ಪ್ರತಿಜೀವನೂ ಶ್ರೀಹರಿಯನ್ನು ಭಕ್ತಿಯಿಂದ ಒಲಿಸಿಕೊಳ್ಳಬೇಕು. ಭಕ್ತಿಯನ್ನುಳಿದು ಬೇರಾವ ಸಾಧನವೂ ಶ್ರೀಹರಿ ಪ್ರಸನ್ನತೆಗೆ ಕಾರಣವಾಗುವುದಿಲ್ಲ. ಆದ್ದರಿಂದಲೇ ಭಕ್ತಿಯೇ ಮುಕ್ತಿಗೆ ಸಾಧನವೆಂದು ಹೇಳಲಾಗುತ್ತದೆ. ಶ್ರೀಹರಿಮಹಿಮೆಗಳ ಜ್ಞಾನದಿಂದ ಆತನಲ್ಲಿ ಉದ್ಭವಿಸುವ ಪ್ರೇಮವೇ ಭಕ್ತಿಯು.ಒಂದು ವಸ್ತುವಿನಲ್ಲಿ ಸ್ನೇಹ ವುಂಟಾಗಲು ಆ ವಸ್ತುವಿನ ಗುಣಜ್ಞಾನವಾಗಬೇಕು.[14] ಶ್ರೀಹರಿಯ ಕಲ್ಯಾಣ ಗುಣಗಳ ಜ್ಞಾನವು ವೈರಾಗ್ಯ-ವಿಲ್ಲದೇ ದೊರೆಯುವುದಿಲ್ಲವಾದ್ದರಿಂದ **ಮೋಕ್ಷ ಸಾಧನಗಳಲ್ಲಿ, ವೈರಾಗ್ಯವೇ ಮೊದಲಿನದೆಂದು,** ಒಂದನೇ ಪಾದದಲ್ಲಿ ನಿರ್ಣಯಿಸಿ, ವೈರಾಗ್ಯಧಾರ್ಢ್ಯತೆಗೆ ಕಾರಣವಾದ ಮತ್ತು ಭಗವದುಪಾಸನೆಗೆ (ಧ್ಯಾನಕ್ಕೆ-ಗುಣಜ್ಞಾನ-ಪೂರ್ವಕ ಭಗವಚ್ಚಿಂತನೆಗೆ) ಮುಖ್ಯಾಂಗವಾದ ಭಕ್ತಿಯನ್ನು ಪಡೆಯಲವಶ್ಯಕವಾದ ಭಗವನ್ಮಹಿಮೆಗಳನ್ನು ಈ ೨ನೇ ಪಾದದಲ್ಲಿ ನಿರ್ಣಯಿಸಿ ನಿರೂಪಿಸಲಾಗುತ್ತದೆ.

---

14. ವಸ್ತುಗತ ಗುಣದೋಷಗಳ ಜ್ಞಾನದಿಂದ ವಸ್ತುವಿನಲ್ಲಿ ಸ್ನೇಹ-ದ್ವೇಷ ಉದಾಸೀನಾದಿ ಭಾವನೆಗಳ ಉದಯವಾಗುತ್ತದೆ. ಪ್ರೀತಿ, ಪ್ರೇಮ, ಕೃಪೆ, ವಾತ್ಸಲ್ಯ, ಭಕ್ತಿಗಳೆಂದು ವ್ಯವಹರಿಸಲಾಗುವ ನಾನಾಭಾವಗಳು ಸದ್ಗುಣಗಳ ಸಹಜವಾದ ಆಕರ್ಷಣ ಶಕ್ತಿಯಿಂದ ಉದಯಿಸುತ್ತವೆ. ರತ್ನ - 1 ಪುಟ 85-86-87ನ್ನು ಇಲ್ಲಿ ನೋಡಿದರೆ ಈ ಪ್ರಮೇಯವು ಹೆಚ್ಚು ಸ್ಪಷ್ಟವಾಗುತ್ತದೆ.

**ಶ್ರೀಹರಿಪ್ರಸನ್ನತೆಗೆ ಕಾರಣವಾದ ಶ್ರೇಷ್ಠ ಭಕ್ತಿಯು, ಆತನ ಸಾಕ್ಷಾತ್ಕಾರ-ವಾದ ನಂತರವೇ ಉಂಟಾಗುತ್ತದೆ.** ತತ್ಪೂರ್ವದ ಭಕ್ತಿಯು, ಗಾಢತೆಯಲ್ಲಿ - ಔತ್ಕಟ್ಯದಲ್ಲಿ ಕೆಳಮಟ್ಟದ್ದಾಗಿರುತ್ತದೆ. ಭಗವಂತನ ಸಾಕ್ಷಾತ್ಕಾರಕ್ಕೆ ಧ್ಯಾನವೇ ಸಾಧನ. ನಿರಂತರ ಚಿಂತನರೂಪದ ಈ ಧ್ಯಾನವು ಫಲಕಾರಿಯಾಗಲು, ಅದು ಭಕ್ತಿಯುಕ್ತವಾಗಿರಬೇಕಾದುದು ಅತ್ಯವಶ್ಯಕ. ಭಕ್ತಿಪೂರ್ವಕ ಧ್ಯಾನಕ್ಕೆ ತತ್ವನಿಶ್ಚಯವು ಅವಶ್ಯಕ, ಎಂದರೆ ಶ್ರೀಹರಿಯೇ ಸರ್ವೋತ್ತಮನೂ ಸ್ವತಂತ್ರನೂ ಮೋಕ್ಷಾದಿ ಸಕಲ ಪುರುಷಾರ್ಥ ಪ್ರದನೂ ಎಂಬ ನಿಶ್ಚಯ ಜ್ಞಾನವು (ಪರೋಕ್ಷ-ಜ್ಞಾನ ನಿಶ್ಚಯವು) ಬೇಕೇ ಬೇಕು - ಅದಿಲ್ಲದೆ ಧ್ಯಾನವೇ ಕೂಡುವುದಿಲ್ಲ - ಮನಸ್ಸು ಅಚಲವಾಗಿ ಏಕತ್ರ ನಿಲ್ಲುವುದಿಲ್ಲ. ಶ್ರವಣದಿಂದ ಭಗವನ್ಮಹಿಮೆಗಳ ಸಂಬಂಧವಾದ ಅಜ್ಞಾನ (ಜ್ಞಾನದ ಅಭಾವ) ಪರಿಹಾರವಾಗುತ್ತದೆ - ಎಂದರೆ ಭಗವನ್ಮಹಿಮೆಗಳ ಜ್ಞಾನವಾಗುತ್ತದೆ. ಮನನದಿಂದ ತತ್ಸಂಬಂಧವಾದ ಸಂಶಯ-ವಿಪರ್ಯಯ (ವಿರೋಧ)ಗಳ ಪರಿಹಾರವಾಗುತ್ತದೆ - ಧ್ಯಾನಕ್ಕೆ ಬೇಕಾದ ಜ್ಞಾನ ನಿಶ್ಚಯವು ಲಭಿಸುತ್ತದೆ. ಶ್ರವಣ-ಮನನಗಳೂ, ಭಕ್ತಿಯುತವಾಗಿಯೇ ಇರಬೇಕು. ಯದ್ಯಪಿ, ಶ್ರವಣಜನ್ಯ ಜ್ಞಾನದಿಂದಲೇ ಭಕ್ತಿಯ ಉದಯವು. ಶ್ರವಣವು ಭಕ್ತಿಯುತವಾಗಿರಬೇಕೆಂದರೆ, ಜ್ಞಾನಯುಕ್ತವಾಗಿರಬೇಕೆಂದು ಹೇಳಿದಂತಾಗುವುದರಿಂದ ಶ್ರವಣದಿಂದ ಹುಟ್ಟಬೇಕಾದ ಜ್ಞಾನವು, ಜ್ಞಾನಯುಕ್ತ ಶ್ರವಣದಿಂದ ಲಭ್ಯವೆಂದು ಹೇಳುವುದು ಯುಕ್ತಿ ವಿರೋಧವಲ್ಲವೇ? ಹಾಗೇನಿಲ್ಲ; ಶ್ರವಣಕಾಲದಲ್ಲಿ ಶ್ರವಣಜನ್ಯ ಜ್ಞಾನವಿರಬೇಕಾದುದಿಲ್ಲ. ಪರಂತು, ಮನಸ್ಸು ನಾಸ್ತಿಕ್ಯ ಭಾವನೆಗಳಿಂದ ದೂರವಾಗಿ, ಭಗವನ್ಮಹಿಮೆಗಳನ್ನು ತಿಳಿಯುವುದರಲ್ಲಿ ಆದರ-ವಿಶ್ವಾಸಗಳಿಂದ ಕೂಡಿರಬೇಕು. ಈ ಶ್ರವಣವು ನನಗೆ ತಾರಕವಾದ ಜ್ಞಾನವನ್ನು ದೊರಕಿಸುತ್ತದೆಂಬ ಉತ್ಸಾಹದ ಮನೋಭಾವವಿರಬೇಕು. ಹಾಗಲ್ಲದೇ, ಪ್ರತ್ಯಕ್ಷದಿಂದ ಕಾಣಲಾಗದ ಲೌಕಿಕ ಯುಕ್ತಿಗಳನ್ನು ವಿರೋಧಿಸುವ, ಅತೀಂದ್ರಿಯ ವಸ್ತು ವಿಷಯಕ ಈ ನಿರೂಪಣೆಗಳಿಂದೇನು ಪ್ರಯೋಜನ - ವಿಶ್ವಾಸಕ್ಕೆ ಅರ್ಹವಲ್ಲದ ಇವುಗಳನ್ನು ಶ್ರವಣಮಾಡದಿದ್ದರೆ ಏನೂ ಹಾನಿಯಿಲ್ಲ-ವೆಂಬ ಇತ್ಯಾದಿ ತಾತ್ಸಾರ - ಉದಾಸೀನ ಭಾವನೆಗಳಿಂದ ರಹಿತವಾದ ಮನಸ್ಸುಳ್ಳವನಾಗಿರಬೇಕು. ಶ್ರದ್ಧೆಯೆಂಬುದು ಜೀವ ಸ್ವರೂಪದಿಂದ ಅಭಿನ್ನವಾದ ಗುಣ. ಸುಜೀವರಿಗೆ (ಮುಕ್ತಿಯೋಗ್ಯರಿಗೆ) ಭಗವನ್ಮಹಿಮೆಗಳ ಶ್ರವಣದಲ್ಲಿ

ಆಂತರಿಕವಾಗಿ, ಸಾಮಾನ್ಯವಾದ ಆಸ್ತಿಕ್ಯ ಶ್ರದ್ಧೆಯು ಮಿನುಗುತ್ತಲೇ ಇರುತ್ತದೆ. ಶ್ರವಣದಿಂದ ಅದನ್ನು (ಅದರ ಪ್ರಾಕಟ್ಯವನ್ನು) ಬೆಳೆಸಿಕೊಳ್ಳಬೇಕು.

ಮನುಷ್ಯ ದೇಹದಲ್ಲಿರುವ ಜೀವರಿಗೆ ನಾನಾ ಅನುಭವಗಳುಂಟಾಗುತ್ತದೆ. ಜಾಗ್ರತ್, ಸ್ವಪ್ನ, ಸುಷುಪ್ತಿ (ನಿದ್ರೆ), ಮೂರ್ಛೆ, ಮುಮೂರ್ಷ (ಮರಣಾವಸ್ಥೆ), ಇತ್ಯಾದಿಗಳು ಅವಸ್ಥಾಪ್ರಭೇದಗಳು. ಇವುಗಳಲ್ಲಿ ಮೊದಲಿನ ಮೂರು ಅವಸ್ಥೆಗಳು ಸರ್ವರ ಅನುಭವ ಸಿದ್ಧವಾದವುಗಳು. ವಿಲಕ್ಷಣ ಅನುಭವ-ಗಳನ್ನುಂಟು ಮಾಡುವ ಸ್ವಪ್ನಾವಸ್ಥೆಯನ್ನು ಸೇರುವುದು, ಬಿಡುವುದು, ನಮ್ಮ ಅಧೀನವಲ್ಲವೆಂಬುದನ್ನು ಎಲ್ಲರೂ ಬಲ್ಲರು. ಸ್ವಾಪ್ನವಸ್ತುಗಳಿಂದ ಉಂಟಾಗುವ ಸುಖ-ದುಃಖ-ಭಯ-ಶೋಕಾದಿಗಳೂ ತಮ್ಮ ಇಚ್ಛಾಧೀನವಲ್ಲವೆಂಬುದನ್ನು ಬಲ್ಲರು. ಆದರೆ, ಸ್ವಪ್ನಾವಸ್ಥೆಯನ್ನು ಏಕೆ ಮತ್ತು ಹೇಗೆ ಹೊಂದುತ್ತೇವೆ; ಸ್ವಾಪ್ನ ವಸ್ತುಗಳ ನಿರ್ಮಾಣವೂ ಅವುಗಳೊಡನೆ ನಮ್ಮ ನಾನಾ ವ್ಯವಹಾರಗಳೂ ಹೇಗೆ ಸಂಭವಿಸುತ್ತವೆ; ಎಂಬೀ ಮೊದಲಾದವುಗಳ ನಿರ್ಣಯವನ್ನು ಯಾರೂ ತಿಳಿಯರು. ಇದರ ನಿಜವನ್ನರಿಯದ ಅಜ್ಞಾನಿಗಳು ಸ್ವಪ್ನವು ಭ್ರಮಾತ್ಮಕವೆಂದೂ ಸ್ವಾಪ್ನ ವಸ್ತುಗಳೆಲ್ಲ ಭ್ರಮಜನ್ಯವಾದ ಸುಳ್ಳು-ವಸ್ತುಗಳೆಂದೂ ತಿಳಿಯುತ್ತಾರೆ. ಎಚ್ಚರಗೊಂಡಾಗ ಅವು ಯಾವುವೂ ಇರುವುದಿಲ್ಲವಾದ್ದರಿಂದ ಸುಳ್ಳೆಂದೇ ನಿರ್ಣಯಿಸುತ್ತಾರೆ. ಆದರೆ, ಸ್ವಪ್ನವು ಸತ್ಯ-ಭ್ರಮ ಜನ್ಯವಲ್ಲ. ಸರ್ವಾವಸ್ಥಾ ಪ್ರೇರಕನಾದ ಶ್ರೀಹರಿಯೇ ಜೀವರನ್ನು ಸ್ವಪ್ನಾವಸ್ಥೆಗೆ ಒಯ್ದು ಜೀವನ ಪೂರ್ವಸಂಸ್ಕಾರಗಳನ್ನು ಉಪಾದಾನ ಕಾರಣವನ್ನಾಗಿಟ್ಟುಕೊಂಡು, ನಾನಾ ಸ್ವಾಪ್ನವಸ್ತುಗಳನ್ನು ತತ್ಕಾಲದಲ್ಲಿ ನಿರ್ಮಾಣಮಾಡಿ, ಜೀವನ ಮನಸ್ಸಿಗೆ, ಆ ಕಾಲದಲ್ಲಿ ಉಪರಮಗೊಂಡಿರುವ ಚಕ್ಷುರಾದಿ ಜ್ಞಾನೇಂದ್ರಿಯಗಳ (ನೋಡುವ - ಕೇಳುವ ಮೊದಲಾದ) ಶಕ್ತಿಯನ್ನಿತ್ತು, ಆ ಸ್ವಾಪ್ನವಸ್ತುಗಳೊಂದಿಗೆ ವ್ಯವಹರಿಸುವಂತೆ ಮಾಡುತ್ತಾನೆ. ಸ್ವಾಪ್ನ ಸರ್ವವಸ್ತು ಚೇಷ್ಟಕನೂ ತಾನೇ ಆಗಿ, ಜೀವನಿಗೆ ನಾನಾ ಅನುಭವಗಳನ್ನುಂಟು ಮಾಡಿದನಂತರ ಸ್ವಪ್ನವನ್ನು ತಿರೋಧಾನಗೊಳಿಸಿ (ಮರೆಮಾಡಿ ಕೊನೆಗಾಣಿಸಿ) ನಿದ್ರಾವಸ್ಥೆಗೋ ಅಥವಾ ಜಾಗೃದವಸ್ಥೆಗೋ ಜೀವನನ್ನುಕರೆತರುವವನೂ ಶ್ರೀಹರಿಯೇ. 'ಅಥ ರಥಾನ್ ರಥಯೋಗಾನ್ ಪಥಃ ಸೃಜತೇ' - ಸ್ವಪ್ನಲೋಕದಲ್ಲಿ ರಥ

ಮೊದಲಾದುವುಗಳಿರಲಿಲ್ಲ. ರಥಾದಿಗಳನ್ನೂ, ಅಶ್ವ-ಮಾರ್ಗ ಮೊದಲಾದವು-ಗಳನ್ನು ಆ ಕ್ಷಣದಲ್ಲಿ ಸೃಷ್ಟಿಸುತ್ತಾನೆಂದು ಮೊದಲಾಗಿ ಹೇಳುವ, ನಿರವಕಾಶ ಶ್ರುತ್ಯರ್ಥಗಳನ್ನು ನಿರ್ಣಯಿಸಿಕೊಂಡು ಈ ಪ್ರಮೇಯಗಳ ನಿಜವನ್ನರಸಬೇಕು. ಸ್ವಪ್ನಸತ್ಯತ್ವವು ಸ್ಥಾಪಿತವಾದರೆ, ಶ್ರೀಹರಿಯ ಮಹಾಮಹಿಮೆಯನ್ನು ಜೀವರು ಮನಗಾಣಲು ಬಹು ಸಹಾಯವಾಗುತ್ತದೆಂಬುದನ್ನೂ ವಿಚಾರಪರರು ಸುಲಭವಾಗಿ ಗ್ರಹಿಸಬಹುದು.

ದೇಹೇಂದ್ರಿಯಗಳು ತನ್ನ ಅಧೀನವೆಂದು ತಿಳಿಯಲಿಕ್ಕೂ, ಅವುಗಳ ಯಜಮಾನನಾದ ತಾನು, ಸ್ವಪ್ರಯತ್ನದಿಂದ ಬಹು ವಿಧ ಕರ್ಮಗಳನ್ನು ಮಾಡಿ, ಫಲಗಳನ್ನೂ ಸಂಪಾದಿಸಿ ಭೋಗಿಸುವೆನೆಂಬ ಭಾವನೆಗೂ, ಜಾಗೃದವಸ್ಥೆಯಲ್ಲಿ ಹೆಚ್ಚು ಅವಕಾಶವಿದೆ. ಈ ಜಾಗ್ರದವಸ್ಥಾ ಪ್ರವರ್ತಕನೂ ಶ್ರೀಹರಿಯೇ; ಜೀವನಿಗೆ ನಿದ್ರಾವಸ್ಥೆಯನ್ನು ಹೊಂದಿಸಿ ಶ್ರಮಪರಿಹಾರ ಮಾಡಿ ಸುಖವಿತ್ತು, ಪುನಃ ಜಾಗ್ರದವಸ್ಥೆಗೆ ತರುವವನೂ ಆತನೇ. ಇದರಂತೆ, ಮೂರ್ಛೆ ಮೊದಲಾದ ಇತರ ಎಲ್ಲ ಅವಸ್ಥಾವಿಶೇಷಗಳ ನಿಯಾಮಕನೂ ಶ್ರೀಹರಿಯೇ. ಆಯಾ ಅವಸ್ಥೆಗಳಲ್ಲಿ ಸರ್ವತ್ರ ಸರ್ವಜೀವರಿಂದ ಸಂಭವಿಸುವ ಎಲ್ಲ ಕರ್ಮಗಳಿಗೂ, ಅವರಿಗೆ ದೊರೆಯುವ ಸರ್ವಾನುಭವಗಳಿಗೂ, ಸರ್ವಕಾಲದಲ್ಲಿ ಶ್ರೀಹರಿಯೇ ಸ್ವತಂತ್ರಕಾರಣನೆಂಬ ಮಹಾಮಹಿಮೆಯನ್ನು ನಿಸ್ಸಂಶಯವಾಗಿ ತಿಳಿಯಬೇಕು. ಈ ಸರ್ವಾವಸ್ಥಾಪ್ರೇರಕತ್ವ ರೂಪದ ಮಹಾಮಹಿಮೆಯು, ಈ ೨ನೇ ಪಾದದ ಆರಂಭದ ಕೆಲವು ಅಧಿಕರಣಗಳಲ್ಲಿ ಸ್ಥಾಪಿಸಲ್ಪಟ್ಟಿದೆ. ವಿವಿಧ ಅವಸ್ಥಾಪ್ರೇರಕಗಳಾದ ಶ್ರೀಹರಿಯ ವಿಶ್ವಾದಿರೂಪಗಳು, ಅಧ್ಯಾತ್ಮದಲ್ಲಿ ಪ್ರತಿಜೀವ ಶರೀರದಲ್ಲಿ ಸ್ಥಿತವಾಗಿರುವ ಸ್ಥಾನ ವಿಶೇಷಗಳನ್ನೂ ನಿರ್ಣಯಿಸಿ ನಿರೂಪಿಸಲಾಗಿದೆ. **ಜಾಗ್ರದವಸ್ಥಾ ಪ್ರವರ್ತಕ 'ವಿಶ್ವ'ನು ದಕ್ಷಿಣಾಕ್ಷಿಯಲ್ಲಿಯೂ (ಬಲಗಣ್ಣಿನಲ್ಲಿಯೂ); ಸ್ವಪ್ನ ಪ್ರವರ್ತಕ 'ತೈಜಸ'ನು ಕಂಠಪ್ರದೇಶದಲ್ಲಿಯೂ, ನಿದ್ರಾವಸ್ಥಾ ನಿಯಾಮಕ 'ಪ್ರಾಜ್ಞ'ನು ಹೃದಯದಲ್ಲಿಯೂ ಇರುವನು.** ಹೀಗೆ ಭಿನ್ನ ರೂಪಗಳಿಂದ ಭಿನ್ನ ಕಾರ್ಯಗಳಿಗೆ ಕಾರಣನಾಗಿ ಭಿನ್ನ ಧರ್ಮಗಳುಳ್ಳವನೆಂದು ವ್ಯವಹರಿಸಿ-ಕೊಳ್ಳಲ್ಪಟ್ಟರೂ, ಈ ಎಲ್ಲ ಶ್ರೀಹರಿಯ ರೂಪಗಳು ಪರಸ್ಪರ ಅತ್ಯಂತ ಅಭಿನ್ನಗಳಾಗಿವೆ. ಪರಮಾತ್ಮನ ಮೂಲ ರೂಪಕ್ಕೂ, ನಾನಾ ಅವತಾರ

ರೂಪಗಳಿಗೂ, ಕಾರ್ಯಕಾರಣ ಸಮೂಹಗಳಲ್ಲಿ ನಿಯಾಮಕತ್ವೇನ ಸ್ಥಿತವಾದ ಆತನ ಅನಂತರೂಪಗಳಿಗೂ, ಹೀಗೆಯೇ ಅತ್ಯಂತ ಅಭೇದವನ್ನು ತಿಳಿಯಬೇಕು. ಶ್ರೀಹರಿಯು ಸ್ವಗತ ಭೇದರಹಿತನೆಂದೂ, ನಿರ್ದುಷ್ಟಗುಣಸ್ವರೂಪನಾದ ಮಹಾಮಹಿಮನೆಂದೂ ದೃಢವಾಗಿ ತಿಳಿಯಬೇಕು. ಶ್ರೀಹರಿಯ ಅನಂತ-ರೂಪಗಳೆಲ್ಲವೂ (ಪ್ರತಿಯೊಂದು ರೂಪವೂ) ಅನಾದಿ ಮತ್ತು ನಿತ್ಯ ; ವಿಕಾರ-ರಹಿತ ಅಪ್ರಾಕೃತ-ರೂಪಗಳು. '**ಯದಾಪಶ್ಯಃ ಪಶ್ಯತೇ ರುಗ್ಮವರ್ಣಂ...**' ಇತ್ಯಾದಿ ಶ್ರುತಿಗಳು ಹೇಳುವಂತೆ, ಜ್ಞಾನಿಗಳಿಗೆ ದರ್ಶನ ಯೋಗ್ಯವಾದವುಗಳು; ಕರಚರಣಾದಿ ಅವಯವಗಳುಳ್ಳ ಸೌಂದರ್ಯಸಾರದ ನಾನಾ ದಿವ್ಯ ವರ್ಣಗಳಿಂದ ಶೋಭಿಸುವ ಪರಮ ಪವಿತ್ರ ರೂಪಗಳು; ಇತ್ಯಾದಿ ಶ್ರುತಿಗಳು ಹೇಳುವಂತೆ, 'ಅಭಿನ್ನಗಳಾದರೂ ಬಹು ಪ್ರಕಾರವಾಗಿ ದೃಶ್ಯಮಾನಗಳಾದ (ಕಾಣಲ್ಪಡುವ) ಜ್ಞಾನಾನಂದಾತ್ಮಕವಾದ ಅನಂತ ಅನಾದಿನಿತ್ಯರೂಪಗಳುಳ್ಳ ಸ್ವಹೃದಯದಲ್ಲಿರುವ ಈ ಪರಮಾತ್ಮನ ರೂಪವನ್ನು ಯಾವ ಜ್ಞಾನಿಗಳು ಕಾಣುವರೋ ಅವರೇ ಶಾಶ್ವತ ಸುಖರೂಪದ ಮುಕ್ತಿಯನ್ನು ಹೊಂದುವರು - ಅನ್ಯರಲ್ಲ'ವೆಂಬ ನಿರವಕಾಶ ಶ್ರುತಿ ಪ್ರಮಾಣಗಳನ್ನು ತೋರಿಸಿ, ಶ್ರೀಹರಿಯು ಈ ಪರಿಯ ಮಹಾಮಹಿಮನಾದ ಸರ್ವೋತ್ತಮನೆಂದೂ ಈ ಪಾದದಲ್ಲಿ ನಿರ್ಣಯಿಸಲಾಗಿದೆ. ಪರಮಾತ್ಮನು ಈ ವಿಧ ಅದ್ಭುತ ಮಹಿಮೆಯುಳ್ಳವನೆಂಬ ಜ್ಞಾನವು ದೃಢವಾದರೆ, ಯಾವ ಯೋಗ್ಯ ಜೀವನಿಗೆ ಶ್ರೀಹರಿಭಕ್ತಿಯ ಉದ್ರೇಕವಾಗುವುದಿಲ್ಲ? ಆಗಿಯೇ ತೀರುತ್ತದೆ. ಭಕ್ತ್ಯರ್ಥವಾಗಿ ಭಗವನ್ಮಹಿಮೆಗಳನ್ನು ನಿರ್ಣಯಿಸಿ ನಿರೂಪಿಸುವುದರಿಂದ ಈ ಪಾದವು **ಭಕ್ತಿಪಾದವೆಂದೇ ಕರೆಯಲ್ಪಟ್ಟಿದೆ.**

ಅಲ್ಪನೂ ಸ್ವರೂಪದಿಂದ ಅಸ್ವತಂತ್ರನೂ ಆದ ಜೀವನು, ಸರ್ವಜ್ಞನೂ ಸರ್ವಶಕ್ತನೂ ಸ್ವತಂತ್ರನೂ ಆದ ಪರಮಾತ್ಮನಿಂದ ಅಭಿನ್ನನೆಂದು ತಿಳಿಯುವುದು ಅನ್ಯಥಾ ಜ್ಞಾನವು; ಜೀವೇಶ್ವರರ ಭೇದಜ್ಞಾನವೇ ಯಥಾರ್ಥ ಜ್ಞಾನವು. ತಾನು ಶ್ರೀಹರಿಯಿಂದ ಭಿನ್ನನೆಂಬ ಜ್ಞಾನವಿಲ್ಲದೇ ಭಗವನ್ಮಹಿಮೆಗಳ ಜ್ಞಾನವನ್ನು, ಜೀವನು ಎಂದಿಗೂ ಹೊಂದಲಾರನು. ಒಂದು ವಿವಕ್ಷೆಯಿಂದ ಭೇದಜ್ಞಾನವೇ ಭಗನ್ಮಹಿಮಾಜ್ಞಾನವೆಂದರೂ ಸಲ್ಲುವುದು. ಭೇದಜ್ಞಾನದ ದಾರ್ಢ್ಯರ್ಥ-ವಾಗಿಯೇ, **ಜೀವರು ಪರಮಾತ್ಮನ ಪ್ರತಿಬಿಂಬರೆಂಬ ಪ್ರಮೇಯವನ್ನು**

**ನಿರ್ಣಯಿಸಿ**, ನಿರೂಪಿಸಿ ನಾನಾ ಉಪಾಧಿಗಳಲ್ಲಿ ತೋರುವ ಸೂರ್ಯನ ಪ್ರತಿಬಿಂಬಗಳಂತೆ, ಬಿಂಬನಾದ ಶ್ರೀಹರಿಯಿಂದ ಜೀವರು ಭಿನ್ನರೂ, ಅಧೀನರೂ, ಸದೃಶರೂ ಆಗಿರುವರೆಂದು ಸ್ಥಾಪಿಸಲಾಗಿದೆ. ಈ ಪ್ರಮೇಯವನ್ನು ರತ್ನ ೩ರಲ್ಲಿ ಸವಿಸ್ತರವಾಗಿ ವಿವೇಚಿಸಲಾಗಿದೆ. ಜೀವೇಶ್ವರರ ಭೇದವನ್ನು ತಿಳಿಯುವುದು ಎಷ್ಟು ಮುಖ್ಯವೂ ಅವಶ್ಯಕವೂ ಆದುದೋ ಅಷ್ಟೇ ಶ್ರೀಹರಿಸರ್ವೋತ್ತಮತ್ವ ಸಾಧಕವಾದ, ಚತುರ್ಮುಖನ ಪರ್ಯಂತರಾದ ಮುಕ್ತಿಯೋಗ್ಯ ಜೀವರ ತಾರತಮ್ಯವನ್ನೂ (ಅವರ ಹರಿಭಕ್ತಿ ತಾರತಮ್ಯವನ್ನೂ) ತಿಳಿಯಬೇಕಾದುದು ಮುಖ್ಯವೂ ಅವಶ್ಯಕವೂ ಆದುದು. ಜೀವರಿಗೆ, ಅವರ ಭಕ್ತಿ ತಾರತಮ್ಯಾನುಸಾರವಾಗಿ, ಶ್ರೀಹರಿ ಪ್ರಸನ್ನತೆಯೂ, ಅದರಿಂದ ಲಭ್ಯವಾಗುವ ಫಲಗಳೂ ದೊರೆಯುತ್ತವೆ.

ಜಗತ್ತಿನ ಸೃಷ್ಟಿ ಸಂಹಾರ ಕರ್ತೃತ್ವಗಳಿಗಿಂತ ಜಗದ್ರಕ್ಷಕತ್ವ ಮಹಿಮೆಯು, ಭಕ್ತಿ ದಾರ್ಢ್ಯವನ್ನು ದೊರಕಿಸುವುದರಲ್ಲಿ ಹೆಚ್ಚು ಸಮರ್ಥವಾಗಿರುತ್ತದೆ. ಉಚ್ಚನೀಚಗಳಾದ ಬಹುವಿಧ ಕರ್ಮಗಳನ್ನು ಅಸಂಖ್ಯ ಜೀವರಿಂದ ಅವರವರ ಯೋಗ್ಯತಾನುಸಾರವಾಗಿ, ತಾನು ಮಾಡಿ ಮಾಡಿಸುತ್ತ , ಸರ್ವವಿಧದಿಂದ ಅವರನ್ನು ಪ್ರತಿಕ್ಷಣದಲ್ಲಿ ರಕ್ಷಿಸುವನೆಂಬ ಶ್ರೀಹರಿ ಮಹಿಮೆಯು, ಅನನ್ಯಸಾಧ್ಯ ಶ್ರೇಷ್ಠಭಕ್ತಿಯನ್ನು ಉತ್ಪಾದಿಸುತ್ತದೆ. ಹೀಗೆ ಜಗತ್ಪಾಲಕನಾದ ಶ್ರೀಹರಿಯು-ಅವ್ಯಕ್ತನು ಅವ್ಯಕ್ತನಾದರೂ ನಿರಾಕಾರನಲ್ಲ-ಸಾಕಾರನು. ರೂಪವುಳ್ಳ ವಸ್ತುವನ್ನು ಕಾಣಲು ಯತ್ನವೇ ಸಾಕು; ಆದ್ದರಿಂದ ಪುರುಷ ಪ್ರಯತ್ನದಿಂದ ಶ್ರೀಹರಿಯನ್ನು ಕಾಣಬಹುದೆಂಬ ಆಶೆಗೆ ಅವಕಾಶವಿಲ್ಲ. ಶ್ರೀಹರಿಯು ರೂಪವುಳ್ಳವನಾದರೂ ಪ್ರಾಕೃತ ರೂಪಿಯಲ್ಲ. ಅಪ್ರಾಕೃತ ರೂಪನಾದರೂ ಸ್ವಪ್ರಸಾದವಿಲ್ಲದೇ (ಈ ಭಕ್ತನಿಗೆ ತನ್ನ ರೂಪವನ್ನು ತೋರಿಸಬೇಕೆಂದು ಇಚ್ಛಿಸದೇ) ವ್ಯಕ್ತನಾಗುವನಲ್ಲ. ಭೂ-ಜಲ-ತೇಜಸ್ಸು ಮೊದಲಾದವು ಸಹ ಸೂಕ್ಷ್ಮರೂಪದಿಂದ ಅವ್ಯಕ್ತ-ವಾಗಿದ್ದರೂ, ಸ್ಥೂಲರೂಪದಿಂದ ಪ್ರತ್ಯಕ್ಷ ಗೋಚರವಾಗುವಂತೆ, ಶ್ರೀಹರಿಯು ಮೂಲರೂಪದಿಂದ ಅವ್ಯಕ್ತನಾದರೂ, ಅವತಾರರೂಪಗಳಿಂದ ಎಲ್ಲರಿಗೂ ವ್ಯಕ್ತನಾಗಿ ತೋರುವುದರಿಂದ ಆತನ ಅವ್ಯಕ್ತರೂಪವನ್ನು ಪ್ರತ್ಯಕ್ಷೀಕರಿಸಿಕೊಳ್ಳಲು, ಭಕ್ತಿಯನ್ನೇಕೆ ಸಂಪಾದಿಸಿಕೊಳ್ಳಬೇಕೆಂಬ ಪೂರ್ವಪಕ್ಷವು (ಸಂಶಯವು),

ದುಸ್ತರ್ಕ ಮೂಲಕವಾದುದು. ಏಕೆಂದರೆ, ಪರಮಾತ್ಮನಲ್ಲಿ ಸ್ಥೂಲಸೂಕ್ಷ್ಮಗಳೆಂಬ ವಿಶೇಷವೇ ಇಲ್ಲ - ಮೂಲ ರೂಪಗಳಿಗೂ ಅವತಾರ ರೂಪಗಳಿಗೂ ಅತ್ಯಂತ ಅಭೇದವೇ ಸರಿ. ಅವತಾರ ರೂಪಗಳನ್ನು ಶ್ರೀಹರಿಯು ಸ್ವೇಚ್ಛೆಯಿಂದಲೇ ಜಗತ್ತಿಗೆ ಕಾಣಗೊಡುತ್ತಾನೆ. ಮುಕ್ತಿಯೋಗ್ಯರಲ್ಲದ ಜೀವರು, ಈ ರೂಪಗಳನ್ನು ಪರಮಾತ್ಮನೆಂಬ ಜ್ಞಾನಯುಕ್ತರಾಗಿ ಕಾಣುವುದಿಲ್ಲ[15] - ಮುಕ್ತಿಯೋಗ್ಯರು ಹಾಗೆ ತಿಳಿದು ಕಂಡರೂ, ಅದರಿಂದ ಮೋಕ್ಷವಿಲ್ಲ; ಸ್ವಬಿಂಬರೂಪದ ದರ್ಶನ-ದಿಂದ ಮಾತ್ರ ಮೋಕ್ಷವು ಲಭ್ಯ . ಅವ್ಯಕ್ತನಾಗಿ ಸ್ವಹೃದಯದಲ್ಲಿ ವಾಸವಾಗಿರುವ ಶ್ರೀಹರಿ-ದರ್ಶನವನ್ನು ಹೊಂದಲೇಬೇಕು. ಅದಕ್ಕಾಗಿ ಭಕ್ತಿಯು ಅವಶ್ಯಕ. ಈ ಪ್ರಮೇಯಗಳೂ, ಇಲ್ಲಿ ಸಪ್ರಮಾಣವಾಗಿ ಸಯುಕ್ತಿಕವಾಗಿ ನಿರ್ಣಯಿಸಲ್ಪಟ್ಟಿವೆ.

ಪರಮಾತ್ಮನು ಜ್ಞಾನಾನಂದಾದಿ ಅನಂತ ಕಲ್ಯಾಣ ಗುಣಪೂರ್ಣನೆಂದೂ, ಜಗತ್ಸೃಷ್ಟ್ಯಾದಿ ಸರ್ವಕರ್ತನೆಂದೂ ಈ ಹಿಂದೆ ಸಾಧಿಸಲಾಗಿದೆಯಷ್ಟೆ. ಪರಮಾತ್ಮನ ಎಲ್ಲ ಗುಣಕ್ರಿಯೆಗಳು ಆತನಿಂದ ಅತ್ಯಂತ ಅಭಿನ್ನವೆಂದೇ ತಿಳಿಯಬೇಕು - ಎಂದರೆ ಶ್ರೀಹರಿಯು ಗುಣಕ್ರಿಯಾದಿ ಸ್ವರೂಪನೆಂದೇ ತಿಳಿಯಬೇಕು. ಈ ಮಹಾಪ್ರಮೇಯವೂ ಸಾಕಷ್ಟು ವಿಸ್ತಾರವಾಗಿ ವಿವೇಚಿಸಲ್ಪಟ್ಟು, ಈ ಹಿಂದೆ ಸಾಧಿಸಲ್ಪಟ್ಟಿದೆ. ಈ ಮಹಾ ಪ್ರಮೇಯದ ದಾರ್ಢ್ಯತೆಗೆ, ತಾರ್ಕಿಕಾದಿ ಅನ್ಯಮತ ಪ್ರಕ್ರಿಯೆಗಳಿಂದ ಏರ್ಪಡುವ ಸಂಶಯರೂಪದ ಪೂರ್ವಪಕ್ಷದ ನಿರಾಕರಣೆಯು ಅವಶ್ಯಕ. ಪೂರ್ವಪಕ್ಷದ ಯುಕ್ತಿಯು ಹೀಗಿದೆ :- ಜ್ಞಾನಾ-ನಂದಾದಿಗುಣಗಳು ಮತ್ತು ಸೃಷ್ಟ್ಯಾದಿ ಕ್ರಿಯೆಗಳು ಬ್ರಹ್ಮನಿಂದ ಭಿನ್ನವೋ-ಅಭಿನ್ನವೋ? ಅವು ಬ್ರಹ್ಮನಿಂದ ಭಿನ್ನಗಳೆಂದರೆ, ತಾರ್ಕಿಕರು ಹೇಳುವ

---

15. 'ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಮ್ । (ಗೀತಾ) ಅಜ್ಞಾನಿಗಳು, ನಶ್ವರ ಪ್ರಾಕೃತ ಮಾನುಷ್ಯದೇಹವನ್ನು ಆಶ್ರಯಿಸಿರುವನೆಂದು ನನ್ನನ್ನು ಕೀಳಾಗಿ ತಿಳಿಯುತ್ತಾರೆ. ಎಂದರೆ, ಜ್ಞಾನಾನಂದಾತ್ಮಕವೇ ಆದ ಶ್ರೀಹರಿಯ ಅವತಾರ ರೂಪಗಳನ್ನುಕಂಡು, ಅಜ್ಞಾನಿಗಳು, ರಕ್ತ ಮಾಂಸಾದಿಗಳಿಂದ ನಿರ್ಮಿತವಾದ ದೇಹವೆಂದು ಭ್ರಮಿಸುತ್ತಾರೆ. ಈ ವಿಧ ಮೋಹವನ್ನುಂಟು ಮಾಡಲಿಕ್ಕಾಗಿಯೇ ಪ್ರಾಕೃತ ದೇಹ ಸಾದೃಶ್ಯವುಳ್ಳವನಾಗಿ ಪ್ರಕಟನಾಗುತ್ತಾನೆ.

ನಿತ್ಯಸಂಬಂಧರೂಪ ಸಮವಾಯವನ್ನು ತತ್ವವಾದಿಗಳು ಅಂಗೀಕರಿಸುವುದಿಲ್ಲ-ವಾದ್ದರಿಂದ, ಆ ಗುಣಕ್ರಿಯಾದಿಗಳು ಬ್ರಹ್ಮನಲ್ಲಿಲ್ಲವೆಂದಾಗಲಿ, ಅನಿತ್ಯ-ಗಳೆಂದಾಗಲಿ ಪ್ರಾಪ್ತವಾಗುತ್ತದೆ. ಬ್ರಹ್ಮನಿಂದ ಅಭಿನ್ನಗಳೆಂದರೆ, ಬ್ರಹ್ಮನು ಜ್ಞಾನವುಳ್ಳವನು - ಆನಂದವುಳ್ಳವನು - ಭೋಕ್ತೃತ್ವಾದಿ ಕ್ರಿಯೆಗಳುಳ್ಳವನು, ಇತ್ಯಾದಿ ನಿರೂಪಣೆಯು ಅಯುಕ್ತವಾಗುತ್ತದೆ. ಏವಂ ಚ ಪರಮಾತ್ಮನು ನಿತ್ಯ-ಗುಣಪೂರ್ಣನಲ್ಲವೆಂದು ತಿಳಿಯಬೇಕಾಗುವುದು. ಈ ವಿಧ ಸಂಶಯದ ನಿರಾಕರಣ ಪ್ರಕಾರವು ಹೇಗೆಂದರೆ :- ಪರಮಾತ್ಮನ ಸ್ವರೂಪಕ್ಕೂ ಆತನ ಗುಣ ಕ್ರಿಯಾದಿಗಳಿಗೂ ಅಭೇದವೇ ಸರಿ. ಏಕೆಂದರೆ, ಪರಮಾತ್ಮನು ಆನಂದನು-ಆನಂದವುಳ್ಳವನು, ಇತ್ಯಾದಿ, ಶ್ರುತಿಗಳಲ್ಲಿ ಕಾಣುವ ಉಭಯ ಪ್ರಕಾರದ ವ್ಯವಹರಣೆಯು, ವಿಶೇಷವೆಂಬ ಪ್ರತಿವಸ್ತುವಿನ ಸ್ವಭಾವಸಿದ್ಧ ಧರ್ಮದ ಬಲದಿಂದ ಉಪಪನ್ನವಾಗುತ್ತದೆ. '**ಏಕಮೇವಾ ದ್ವಿತೀಯಂ ಬ್ರಹ್ಮ**'(ಛಾಂದೋಗ್ಯ) ಮತ್ತು '**ನೇಹ ನಾನಾಸ್ತಿ ಕಿಂಚನ**' (ಕಠ) ಇತ್ಯಾದಿ ಶ್ರುತಿವಾಕ್ಯಗಳು, ಬ್ರಹ್ಮಸ್ವರೂಪಕ್ಕೂ ಬ್ರಹ್ಮನ ಗುಣಕ್ರಿಯಾದಿ ಧರ್ಮಗಳಿಗೂ, ಅಭೇದವನ್ನು ಹೇಳಿ, ಭೇದವನ್ನಾಗಲಿ ಭೇದಾಭೇದವನ್ನಾಗಲಿ ನಿಷೇಧಿಸುತ್ತವೆ. ಗುಣ-ಗುಣಿಗಳಿಗೆ (ಧರ್ಮ-ಧರ್ಮಿಗಳಿಗೆ) ಅಭೇದವಿರುವಲ್ಲಿ ಸಹ, ಭೇದವಿರುವಂತೆ ವ್ಯವಹರಿಸಲು ಅವಕಾಶಕೊಡುವ ವಸ್ತು ಸ್ವಭಾವವು ವಿಶೇಷವೆಂದು ಕರೆಯಲ್ಪಡುತ್ತದೆ. ತಾರ್ಕಿಕರ ಸಮವಾಯಕ್ಕೂ ಸಿದ್ಧಾಂತಿಗಳ (ತತ್ವವಾದಿಗಳ) ವಿಶೇಷಕ್ಕೂ ಮಹದಂತರವಿದೆ. ಈ ಪ್ರಕ್ರಿಯೆಯನ್ನು ಪ್ರಾಚೀನ ಪಂಡಿತರು ತಮ್ಮ ಗ್ರಂಥಗಳಲ್ಲಿ ವಿಸ್ತಾರವಾಗಿ ವಿವೇಚಿಸಿದ್ದಾರೆ. '**ಆನಂದಂ ಬ್ರಹ್ಮೇತಿ ವ್ಯಜಾನಾತ್**' (ಭೃಗುವಲ್ಲೀ) ಶೃತಿಯು, ಆನಂದವೇ ಬ್ರಹ್ಮನೆಂದು ತಿಳಿಯಬೇಕೆಂದೂ, '**ಆನಂದಂಬ್ರಹ್ಮಣೋ ವಿದ್ವಾನ್**' (ಬ್ರಹ್ಮವಲ್ಲೀ) ಶೃತಿಯು ಬ್ರಹ್ಮನ ಆನಂದವನ್ನು ತಿಳಿದವನು, ಎಂದು ಹೇಳುತ್ತ , ಆನಂದವನ್ನು ಬ್ರಹ್ಮನ ಧರ್ಮವನ್ನಾಗಿಯೂ ಹೇಳುತ್ತದೆ. ಈ ಉಭಯ ವಿಧ ವ್ಯವಹಾರವು ವಿಶೇಷ ಬಲದಿಂದ ಸಾಧ್ಯವೆಂದು ಸಾಧಿಸುವ ಈ ಶಾಸ್ತ್ರಪ್ರಕ್ರಿಯೆಯನ್ನು , ಗುರುಮುಖ-ದಿಂದ ಶಾಸ್ತ್ರಾಭ್ಯಾಸ ಕ್ರಮದಲ್ಲಿ ಅರಿಯಬೇಕು. 'ಶ್ರುತಿತತ್ವ ಪ್ರಕಾಶಿಕಾ' ಎಂಬ ತಮ್ಮ ಗ್ರಂಥದಲ್ಲಿ ಶ್ರೀ ವಾದಿರಾಜಸ್ವಾಮಿಗಳು 'ವಿಶೇಷ'ದ ಸ್ಥಾನವನ್ನು ಬಹು

ಯುಕ್ತಿಗಳಿಂದ ನಿರ್ದಿಷ್ಟಗೊಳಿಸಿದ್ದಾರೆ.[16] ಪ್ರಕೃತ, ಸೂತ್ರಕಾರರಾದ ಶ್ರೀ ಬಾದರಾಯಣರು, ಉಕ್ತ ನಿರ್ಣಯ ಸಮರ್ಥನೆಗಾಗಿ ಉದಾಹರಿಸುವ ದೃಷ್ಟಾಂತಗಳನ್ನು ಗಮನಿಸಿದರೆ, ಪ್ರಮೇಯವನ್ನು ಸುಲಭವಾಗಿ ಗ್ರಹಿಸಬಹುದು. ಅವು ಯಾವುವೆಂದರೆ :- ಕುಂಡಲವುಳ್ಳ (ಸುರುಳಿ ಸುತ್ತಿಕೊಂಡಿರುವ) ಸರ್ಪವನ್ನು 'ಕುಂಡಲೀ' ಎಂದು ವ್ಯವಹರಿಸುವಂತೆ ಸೂರ್ಯನು ಪ್ರಕಾಶರೂಪನೂ, ಪ್ರಕಾಶಾಶ್ರಯನೂ ಆಗಿರುವಂತೆ; ಮತ್ತು ಏಕಪ್ರಕಾರದ ಕಾಲವು (ಪೂರ್ವಕಾಲ) ಎಂಬಲ್ಲಿನ 'ಪೂರ್ವ'ಪದದಿಂದ ವಿಶೇಷವ್ಯವಹಾರಕ್ಕೆ ಒಳಪಡುವಂತೆ; ಈ ಮೂರು ದೃಷ್ಟಾಂತಗಳು, ಕ್ರಮದಿಂದ ಬ್ರಹ್ಮನ ಕರಚರಣಾದಿ ಅವಯವಗಳಿಗೂ ಬ್ರಹ್ಮಸ್ವರೂಪಕ್ಕೂ; ಬ್ರಹ್ಮನ ಆನಂದಾದಿ ಗುಣಗಳಿಗೂ ಬ್ರಹ್ಮಸ್ವರೂಪಕ್ಕೂ; ಮತ್ತು ಬ್ರಹ್ಮನ ಸೃಷ್ಟ್ಯಾದಿ ಕ್ರಿಯೆಗಳಿಗೂ ಬ್ರಹ್ಮಸ್ವರೂಪಕ್ಕೂ ಅಭೇದವು ಅನುಪಪನ್ನವಲ್ಲೆಂದು ಸಾಧಿಸುತ್ತವೆ. ಇದು ಬ್ರಹ್ಮಕೃತ ಸೃಷ್ಟಿ - ಇದು ಲಯ - ಇದು ಸರ್ವಜ್ಞತ್ವ - ಇದು ಸ್ವಾತಂತ್ರ್ಯ ಇತ್ಯಾದಿ ವ್ಯವಹಾರಕ್ಕೆ ಒಳಪಡುವುದು 'ವಿಶೇಷ'ವೆಂಬ ವಿಚಿತ್ರ ಸ್ವರೂಪ ಸಾಮರ್ಥ್ಯದಿಂದಲೇ ಎಂಬುದನ್ನು ಒಪ್ಪಲೇಬೇಕಾಗುತ್ತದೆ. ಭೇದ - ಅಭೇದಗಳೆರಡೂ ಒಂದು ವಸ್ತುವಿನಲ್ಲಿರುತ್ತದೆಂಬುದು ವಿರುದ್ಧವಾಗುತ್ತದೆ. ಎರಡೂ ಒಂದು ಪದಾರ್ಥ-ದಲ್ಲಿರುತ್ತೆಂಬುದು ಪ್ರಮಾಣ ಸಿದ್ಧವಾದರೆ, ಆ ಪದಾರ್ಥದ ಸ್ವಭಾವದಲ್ಲಿ ಯಾವುದೋ ಒಂದು ಅತಿಶಯವಿರಬೇಕು. ಇದನ್ನೇ 'ವಿಶೇಷ'ವೆಂದು ಕರೆಯುವರು. ಸ್ವರೂಪ ಸಿದ್ಧಗುಣಗಳಿಗೂ (ಧರ್ಮಗಳಿಗೂ) ಸ್ವರೂಪಕ್ಕೂ ಅಭೇದವು ಪ್ರಮಾಣ ಪ್ರಮಿತವಾದಲ್ಲಿ, ವಿಶೇಷವು ಭೇದ ಪ್ರತಿನಿಧಿಯಾಗಿ ನಿಂತು ಭೇದ ವ್ಯವಹಾರಕ್ಕೆ ಅವಕಾಶವನ್ನುಂಟು ಮಾಡುತ್ತದೆ. ವಸ್ತುವಿನಲ್ಲಿ ಭೇದಾಭೇದ (ಭೇದ ಮತ್ತು ಅಭೇದ ಎರಡೂ ಅಲ್ಲದ್ದು) ವೆಂಬುದು ಇರುವುದೆಂದು ಹೇಳಿದರೆ, ಆ ಭೇದಾಭೇದವು ವಸ್ತುವಿನಿಂದ ಭಿನ್ನವೆ? ಅಭಿನ್ನವೆ? ಇತ್ಯಾದಿ ಸಂಶಯಗಳನ್ನು ಉತ್ತರಿಸುತ್ತ ಹೋದರೆ ಅನಂತ

16. 'ಅತಸ್ತತ್ಪರಾರ್ಥಾನಾಂ ಸ್ವಭಾವಾಖ್ಯಾಪರಾಭಿದಃ । ಚಿತ್ರಶಕ್ತಿ ವಿಶೇಷಾಖ್ಯೋ ವಿಶೇಷಸ್ಯಾನ್ನಚಾಪರಃ ॥ (ಶ್ರುತಿತತ್ತ್ವ ಪ್ರಕಾಶಿಕಾ) ಆದ್ದರಿಂದ (ಹೀಗೆ ಪೂರ್ವೋಕ್ತ ಯುಕ್ತಿಸಿದ್ಧವಾಗುವಂತೆ) ಎಲ್ಲ ವಸ್ತುಗಳಲ್ಲಿ ಆ ವಸ್ತುಗಳ ಸ್ವಭಾವವಾದ ವಿಶೇಷವೆಂಬ ಹೆಸರುಳ್ಳ ವಿಚಿತ್ರ ಶಕ್ತಿಯನ್ನು ಒಪ್ಪಲೇಬೇಕು. ಅನ್ಯ ಮಾರ್ಗವಿಲ್ಲ.

ಭೇದಾಭೇದಗಳನ್ನು ಅಂಗೀಕರಿಸಬೇಕಾಗಿ ಬಂದು ವಸ್ತುಸಿದ್ಧಿಯೇ ಆಗದಂತಾಗುವುದು. ನ್ಯಾಯವೈಶೇಷಿಕ ಮತಗಳಂತೆ, ಅವಯವ ಅವಯವಿ, ಜಾತಿ ಮತ್ತು ವ್ಯಕ್ತಿ , ಗುಣ ಮತ್ತು ಗುಣಿ, ಕ್ರಿಯೆ ಮತ್ತು ಕ್ರಿಯೆಯುಳ್ಳ ವಸ್ತು , ಇವುಗಳಿಗಿರುವ ಸಂಬಂಧವು ಸಮವಾಯವು. ಈ ಸಂಬಂಧವುಳ್ಳ ಎರಡು ಪದಾರ್ಥಗಳಲ್ಲಿ ಒಂದು ಮತ್ತೊಂದನ್ನು ಯಾವಾಗಲೂ ಆಶ್ರಯಿಸಿರುತ್ತದೆಂದು ಈ ಮತಗಳ ನಿರೂಪಣೆಯು; ಸಮವಾಯವು ಅನೇಕ ಎಂದರೆ ಕಲ್ಪನಾಗೌರವವೆಂಬ ದೋಷಕ್ಕೆ ಎಡೆಯಾಗುತ್ತದೆಂದು ತಿಳಿದು, ಸಮವಾಯವೆಂಬುದು ಒಂದೇ ಎಂದು ಹೇಳುತ್ತಾರೆ. ಆದರೆ ಅನಂತ (ಅಸಂಖ್ಯ) ವಸ್ತುಗಳಲ್ಲಿ, ಪ್ರತಿಯೊಂದರಲ್ಲಿಯೂ ಇರುವ ವಿಶೇಷವು, ಬೇರೆ ಬೇರೆಯಾದುದೇ; ಆದರೂ ವಸ್ತುವಿನಿಂದ ಅತ್ಯಂತ ಅಭಿನ್ನವೇ ಎಂದು ಹೇಳುವ ಸಿದ್ಧಾಂತಕ್ಕೆ, ಉಕ್ತದೋಷಗಳ ಭಯವೇ ಇಲ್ಲ. ಇತ್ಯಾದಿ ಬಹು ಸೂಕ್ಷ್ಮ ವಿಚಾರಗಳಿಂದ ಯುಕ್ತವಾದ ಈ ಪ್ರಕ್ರಿಯೆಯನ್ನು ಗಾಢವಾದ ಶಾಸ್ತ್ರಾಭ್ಯಾಸ-ದಿಂದಲೇ ದೊರಕಿಸಿಕೊಂಡು, ಪರಮಾತ್ಮನಿಗೂ ಆತನ ಗುಣಕ್ರಿಯೆಗಳಿಗೂ ಅತ್ಯಂತ ಅಭೇದವನ್ನು ನಿಸ್ಸಂಶಯವಾಗಿ ತಿಳಿದು ಶ್ರೀಹರಿಯು ನಿತ್ಯಾನಂತ ಗುಣಪೂರ್ಣನೆಂಬ ದಾರ್ಢ್ಯವನ್ನು ಹೊಂದಬೇಕು.

**ಭಗವಂತನ ಗುಣಕ್ರಿಯಾದಿಗಳೆಲ್ಲವೂ ಲೋಕ ವಿಲಕ್ಷಣವಾದುವುಗಳು.** ಭಗವತ್ಸ್ವರೂಪಗಳೇ ಆಗಿರುವ ಈ ಗುಣಕ್ರಿಯೆಗಳು, ಒಂದೊಂದೂ ಪೂರ್ಣ ಮತ್ತು ಅನಂತ (ಅಪರಿಮಿತ.) ಇವು ಸಮಸ್ತ ಚೇತನರ ಜ್ಞಾನಾದಿಗಳಿಗೆ ಬಿಂಬಭೂತವಾಗಿವೆ. ಪರಮಾತ್ಮನ ಜ್ಞಾನಾದಿಗಳು ಚೇತನರ ಜ್ಞಾನಾದಿಗಳಿಗೆ ಬಿಂಬಗಳೆಂದರೆ, ಭಗವದಿತರ ಸರ್ವಚೇತನವರ್ಗದ ಜ್ಞಾನಾದಿಗಳು ಪರಮಾತ್ಮನ ಜ್ಞಾನಾದಿಗಳ ಅಧೀನವೆಂದೂ, ಕಿಂಚಿತ್ ಸಾದೃಶ್ಯ ಮಾತ್ರವುಳ್ಳವುಗಳೆಂದೂ, ಮತ್ತು ಭಗವಂತನ ಜ್ಞಾನಾದಿಗಳು (ಗುಣಕ್ರಿಯಾದಿಗಳೆಲ್ಲವೂ), ಸರ್ವಲೋಕ ವಿಲಕ್ಷಣಗಳೆಂದೂ ಅರ್ಥ.

ಇಡೀ ಭೂಮಂಡಲವನ್ನಾಳುವ ಪ್ರಭುವೂ, ತಾರುಣ್ಯಾದಿ ಭೋಗಶಕ್ತಿ-ಯುತನೂ ಆದ ಒಬ್ಬ ಚಕ್ರವರ್ತಿಯ ಆನಂದವನ್ನು ಒಂದು ಅಳತೆ-ಯನ್ನಾಗಿಟ್ಟುಕೊಂಡು ಮನುಷ್ಯೋತ್ತಮರೇ ಮೊದಲಾದ ಮುಕ್ತ ಜೀವರ

ಆನಂದಗಳನ್ನೂ, ಪರಮಾತ್ಮನ ಆನಂದವನ್ನು ತೈತ್ತರೀಯೋಪನಿಷತ್ತು ನಿರೂಪಿಸುತ್ತದೆ. ಇದರಿಂದ, ಲೌಕಿಕಾನಂದವನ್ನೇ ಅನಂತಮಡಿಯಾಗಿ ಉಳ್ಳವನು ಶ್ರೀಹರಿ, ಎಂದು ಪ್ರಾಪ್ತವಾಗುವ ಸಂಶಯವನ್ನು ಅವಶ್ಯಕವಾಗಿ ಪರಿಹರಿಸಿ-ಕೊಳ್ಳಬೇಕು. ಲೌಕಿಕಾನಂದದ ಅನುಭವ ಮಾತ್ರವುಳ್ಳ ಸಂಸಾರಿ ಜೀವರು, ಮೋಕ್ಷದಲ್ಲಿ ದೊರೆಯುವ ಮಹಾನಂದವನ್ನು ಸುಲಭವಾಗಿ ಗ್ರಹಿಸಲು ಅನುಕೂಲವಾಗಲೆಂಬ ಉದ್ದೇಶದಿಂದ, ತೈತ್ತರೀಯ ಶ್ರುತಿಯ ನಿರೂಪಣೆಯಿದೆ. ಹೀಗೆಂದು ಈ ಪಾದದಲ್ಲಿ ಸ್ಪಷ್ಟವಾಗಿ ನಿರ್ಣಯಿಸಲಾಗಿದೆ. ಜೀವರಿಗೆ ಮುಕ್ತಿಯಲ್ಲಿ ದೊರೆಯುವ ಆನಂದವೂ ಲೋಕ ವಿಲಕ್ಷಣವಾದುದೇ, ಅದು ಆಯಾ ಜೀವರ ಭಕ್ತ್ಯಾದಿ ಗುಣಾನುಸಾರವಾಗಿರುವುದೆಂದು ನಿರ್ಣಯಿಸಿ, ಮೋಕ್ಷದಲ್ಲಿರುವ ವೈವಿಧ್ಯವನ್ನು (ತಾರತಮ್ಯವನ್ನು ಸಮರ್ಥಿಸಲಾಗಿದೆ), ಮುಕ್ತ ಜೀವರ ಭಕ್ತ್ಯಾದಿಗುಣ ವೈಚಿತ್ರ್ಯದಿಂದಲೂ, ಮೌಕ್ತಿಕಾನಂದ ವೈಚಿತ್ರ್ಯವು (ವೈವಿಧ್ಯವು) ಉಪಪನ್ನವಾಗುತ್ತದೆ. ಜಲ, ದರ್ಪಣಾದಿಗಳಲ್ಲಿ ಕಾಣುವ ಸೂರ್ಯಪ್ರತಿಬಿಂಬಗಳಿಗೂ, ಸೂರ್ಯಕಾಂತ ಶಿಲೆಯಲ್ಲಿ ದಾಹ-ಶಕ್ತಿಯುತವಾಗಿ ತೋರುವ ಸೂರ್ಯ ಪ್ರತಿಬಿಂಬಕ್ಕೂ, ಸ್ಥಾನ ವಿಶೇಷದಿಂದ ವೈಚಿತ್ರ್ಯವು ಕಂಡುಬರುವಂತೆ, ಪ್ರತಿಬಿಂಬರಾದ ಜೀವರ ಭಿನ್ನಸ್ವರೂಪ ಯೋಗ್ಯತೆಗಳೇ ಅವರ ಆನಂದಾದಿ ವೈಚಿತ್ರ್ಯಕ್ಕೆ ಕಾರಣವೆಂದು ಸದೃಷ್ಟಾಂತ-ವಾಗಿ ನಿರೂಪಿಸಿರುವ ನಿರ್ಣಯವು ವಿವೇಕಿಗಳಿಗೆ ಪರಮಗ್ರಾಹ್ಯವಾಗಿದೆ.

ಪರಮಾತ್ಮನು ಅವ್ಯಕ್ತನಾದರೂ, ಪ್ರಸನ್ನನಾಗಿ ಭಕ್ತನಿಗೆ ದರ್ಶನ ಕೊಡುವನೆಂದು ಹೇಳಲಾಗುತ್ತದೆ. ಧ್ಯಾನಕಾಲದಲ್ಲಿಭಕ್ತನ ಮನಸ್ಸಿನಲ್ಲಿ ತೋರುವನೆಂದು ಹೇಳಲ್ಪಡುವುದರಿಂದ, ಶ್ರೀಹರಿಯು ಅವ್ಯಕ್ತನೆಂಬುದಕ್ಕೆ ಯಾವ ಯುಕ್ತಿ ವಿರೋಧವೂ ಇಲ್ಲ. ಅವ್ಯಕ್ತನು ಮನಸ್ಸಿನಲ್ಲಿ ಕಾಣಲ್ಪಡುವ-ನೆಂಬುದನ್ನು ಸರಿಯಾಗಿ ಗ್ರಹಿಸಬೇಕು. ಧ್ಯಾನಾವಸ್ಥೆಯಲ್ಲಿ ಬಾಹ್ಯಾಂತಃ ಕರಣದಲ್ಲಿ(ಮನಸ್ಸಿನಲ್ಲಿ) ತೋರುವ ಭಗವಂತನ ರೂಪವು ಮನೋಮಯ ಮೂರ್ತಿ ಮಾತ್ರ - ವಾಸನೋಪಾದಾನಕವಾದ ಪ್ರತಿಮೆಯು; ಅದರೊಳಗಿದ್ದು, ಪ್ರಸನ್ನನಾದೊಡನೆ ತನ್ನ ದಿವ್ಯ (ಅಪ್ರಾಕೃತ) ರೂಪವನ್ನು ಸಂದರ್ಶಿಸುತ್ತಾನೆ;

ಮನಸ್ಸಿಗೆ ಅದನ್ನು ನೋಡುವ ಸಾಮರ್ಥ್ಯವನ್ನು ಕರುಣಿಸುತ್ತಾನೆ - ದಿವ್ಯದೃಷ್ಟಿ ದಾನವೆಂಬುದು ಇದೆ.

ಸರ್ವ ದೇಶ, ಸರ್ವಕಾಲದಲ್ಲಿ, ವಿಶ್ವದ ಸೃಷ್ಟಿ, ಸ್ಥಿತಿ, ಲಯಾದಿಕರ್ತನು ಶ್ರೀಹರಿಯೇ - ಅನ್ಯರಾರೂ ಅಲ್ಲ. ಮಹಾಮಹಿಮನಾದ ಈ ಭಗವಂತನೇ, ಸಕಲ ಜೀವರಿಗೆ ಸಕಲ ಕರ್ಮಗಳ ಫಲದಾತನು. ಕರ್ಮವು ಜಡ - ಅದಕ್ಕೆ ಫಲದಾನ ಶಕ್ತಿಯನ್ನು ಚಿಂತಿಸುವುದು ಯುಕ್ತಿವಿರುದ್ಧವು. ಪರಮಾತ್ಮನು ಕರ್ಮಫಲದಾತನು ಮಾತ್ರವಲ್ಲ-ಕರ್ಮವನ್ನು ಮಾಡಿಸುವವನೂ ಆತನೇ. ಕರ್ಮವೇ ಫಲಪ್ರಾಪ್ತಿಗೆ ಕಾರಣವು; ಕರ್ಮವನ್ನು ಮಾಡಿಸುವುದರಿಂದ ಶ್ರೀಹರಿಯು ಫಲದಾತನು; ಹೀಗೆ ಹೇಳುವುದು ಔಪಚಾರಿಕವಲ್ಲ. ಪರಮಾತ್ಮ ಮತ್ತು ಕರ್ಮ, ಉಭಯವೂ ಫಲಕಾರಣಗಳೇ ಆದರೂ, (ಕರ್ಮಪ್ರೇರಕ ಪರಮಾತ್ಮನನ್ನು ಕರ್ತೃತ್ವ ದೃಷ್ಟಿಯಿಂದಲೂ ಕರ್ಮವನ್ನು ಕರಣತ್ವ ದೃಷ್ಟಿಯಿಂದಲೂ ಫಲಕ್ಕೆ ಉಭಯ ಕಾರಣತ್ವವನ್ನು ತಿಳಿದರೂ) ಫಲವಿಷಯದಲ್ಲಿ, ಪರಮಾತ್ಮನೊಂದಿಗೆ, ಪರಮಾತ್ಮನಂತೆ, ಕರ್ಮವು ಸಮಾನ ಕಾರಣವಲ್ಲ; ಕರ್ಮವೂ ಕರ್ಮಾಭಿಮಾನಿ ದೇವತೆಗಳೂ ಸ್ವತಂತ್ರನಾದ ಶ್ರೀಹರಿಯ ಅಧೀನರು.

ಹೀಗೆ, ಸೃಷ್ಟ್ಯಾದ್ಯಷ್ಟಕರ್ತನೂ, ಜ್ಞಾನಾನಂದಾದಿ ಅನಂತ ಕಲ್ಯಾಣಗುಣ ಸ್ವರೂಪನೂ ಆದ ಶ್ರೀಹರಿಯು ಸಕಲ ಜೀವರ ಜಾಗ್ರದಾದಿ ಸರ್ವಾವಸ್ಥಾ-ಪ್ರೇರಕನೆಂದೂ, ಸರ್ವರ ಸರ್ವ ಕರ್ಮಗಳಿಗೆ, ಕಾಲಕಾಲಕ್ಕೆ ಯೋಗ್ಯಫಲಗಳನ್ನು ಕೊಡುವ ಸ್ವತಂತ್ರಪ್ರಭುವೆಂದೂ ಅವ್ಯಕ್ತನಾದರೂ ಸ್ವಪ್ರಸಾದದಿಂದ (ಅಪರೋಕ್ಷದಲ್ಲಿ) ಸಾಕ್ಷಾದ್ದರ್ಶನವಿತ್ತು, ನಂತರ ಸ್ವಸ್ವರೂಪಗಳ ಆವಿರ್ಭಾವದಿಂದ ಸ್ವಸ್ವಪೂರ್ಣ ಮಹಾನಂದಾನುಭವ ರೂಪದ ಮೋಕ್ಷಾಖ್ಯ ಮಹದೈಶ್ವರ್ಯವನ್ನು ಜೀವರಿಗೆ ಕರುಣಿಸುವ ಮಹಾಮಹಿಮನಾದ ಸರ್ವೋತ್ತಮನೆಂದೂ ಸಾಧಿಸಲಾದ ಈ ಪ್ರಮೇಯಗಳ ದೃಢಜ್ಞಾನದಿಂದ ಅಚಲವಾದ ಭಕ್ತಿಯ ಉದಯವಾಗುವು-ದೆಂಬಲ್ಲಿ ಯಾವ ಸಂಶಯಕ್ಕೂ ಎಡೆಯಿಲ್ಲ. ಈ ದೃಢಭಕ್ತಿಯೇ ಅಪರೋಕ್ಷ ದರ್ಶನಕ್ಕೆ ಸಾಕ್ಷಾತ್ಸಾಧನವು. ಭಗವಂತನ ಸಾಕ್ಷಾದ್ದರ್ಶನದಿಂದ ಸ್ವಯೋಗ್ಯವಾದ

ಪರಿಪಕ್ವಪೂರ್ಣ ಭಕ್ತಿಯ ಉದಯವಾಗುತ್ತದೆ. ಈ ಭಕ್ತಿಯ ಲಕ್ಷಣಗಳನ್ನು ತಿಳಿದರೆ, ಯತ್ನಪೂರ್ವಕ ಅಂಥ ಭಕ್ತಿಯನ್ನು ದೊರಕಿಸಿಕೊಳ್ಳಲು ಅನುವಾಗುತ್ತದೆ. ಶ್ರೀ ಹರಿಯ ಮಾಹಾತ್ಮ್ಯ ಜ್ಞಾನಪೂರ್ವಕವಾದ ಸುದೃಢ ಸ್ನೇಹವೇ ಭಕ್ತಿಯು. ಜ್ಞಾನವು ಭಕ್ತಿಯ ಮುಖ್ಯಾಂಗವು. ಜ್ಞಾನವಿಲ್ಲದ ಭಕ್ತಿಭಾವವು ಮೂಢ-ಭಕ್ತಿಯೆನಿಸುತ್ತದೆ. ಅದರಿಂದ ಮೋಕ್ಷರೂಪದ ಮಹಾ ಫಲವಿಲ್ಲ; ಮೂಢ-ಭಕ್ತಿಯು ಸ್ಥಿರವಾಗಿರುವುದೂ ಇಲ್ಲ - ಮನೋದ್ವೇಗವು (emotion) ಉಪಶಾಂತವಾಗಲು ಭಕ್ತಿಭಾವವೂ ನಷ್ಟವಾಗುತ್ತದೆ. ಆದರೆ ಜ್ಞಾನಯುಕ್ತ ಪ್ರೇಮವು, ಪ್ರವಾಹರೂಪದಿಂದ ನಿರಂತರವಾಗಿರುತ್ತದೆ. ಸಹಸ್ರಾರು ವಿಘ್ನಗಳು ಬಂದರೂ ಆ ಪ್ರವಾಹಕ್ಕೆ ವಿಚ್ಛಿತ್ತಿ ಬರುವುದಿಲ್ಲ - ಪತ್ನೀ ಪುತ್ರಾದಿ ಆತ್ಮೀಯ ವಸ್ತುಗಳಲ್ಲಿಯೂ, ತನ್ನಲ್ಲಿಯೂ ಇರುವ ಪ್ರೇಮಕ್ಕಿಂತ ಅತ್ಯಂತ ಅಧಿಕವಾಗಿರುತ್ತದೆ.[17] ಪರಮಾತ್ಮನು ನಿರವಧಿಕ (ಅವಧಿರಹಿತ-ಅಪಾರ) ಅನಂತ ಕಲ್ಯಾಣ ಗುಣಗಳಿಂದ ಪೂರ್ಣನಾದ ಸರ್ವೋತ್ತಮನೆಂಬ ಜ್ಞಾನ ಸಹಿತವಾಗಿಯೇ ಇರುತ್ತದೆ. ಈ ವಿಧ ನಿರಂತರ ಪ್ರೇಮ ಪ್ರವಾಹಕ್ಕೆ ವಿಚ್ಛಿತ್ತಿಯನ್ನುಂಟುಮಾಡುವ ವಿಘ್ನಗಳು ಬಹು ವಿಧವಾಗಿರುತ್ತವೆ ಮತ್ತು ಸರ್ವರ ಅನುಭವ ಸಿದ್ಧವೂ ಆಗಿವೆ. ಆದ್ದರಿಂದ, ವಿಘ್ನವಿಹತರಾಗದೇ ಸಾಂಸಾರಿಕ ಸುಖದುಃಖಗಳಲ್ಲಿ ಸಮಭಾವನೆಯನ್ನು ಹೊಂದಿ, ಮನಸ್ಸು ಶ್ರೀಹರಿಯಲ್ಲಿ ಭಕ್ತಿಯುತವಾಗಿ ನಿಲ್ಲುವಂತೆ ಯತ್ನಿಸಬೇಕು. ಪ್ರೇಮ ಪ್ರವಾಹವು ತೈಲಧಾರೆಯಂತೆ ನಿರಂತರವಾಗಿರಲು ಸರ್ವ ಪ್ರಕಾರದಿಂದ ಯತ್ನಿಸಬೇಕು. ತಾಳಮೇಳಗಳೊಂದಿಗೆ ಕುಣಿಯುವ ನರ್ತಕನೊಬ್ಬನು, ತನ್ನ ತಲೆಯ ಮೇಲಿನ ಜಲಪೂರ್ಣಪಾತ್ರೆಯನ್ನು ರಕ್ಷಿಸಿಕೊಳ್ಳಲು, ತನ್ನ ಮನಸ್ಸಿನ ಏಕದೇಶವನ್ನು, ಆ ಪಾತ್ರೆಯಲ್ಲಿಟ್ಟು ಯತ್ನಿಸುವಂತೆ, ದೇಹೇಂದ್ರಿಯಗಳಿಂದ ನಾನಾ ವ್ಯಾಪಾರಗಳಲ್ಲಿ ತೊಡಗುವ ಮನಸ್ಸು ಪರಮಾತ್ಮನನ್ನು ಬಿಟ್ಟಗಲದಂತೆ, ಅದರ ಒಂದು ಭಾಗವನ್ನು ಶ್ರೀಹರಿಯಲ್ಲಿ ಸ್ಥಾಪಿಸಬೇಕು. ಈ ಎಲ್ಲ ಪ್ರಮೇಯಗಳ ಸಂಗ್ರಹವನ್ನು ಪ್ರಾಚೀನರು ಅಲ್ಪ ಶಬ್ದಗಳಿಂದ ಸುಂದರವಾಗಿ ಹೀಗೆ

---

17. ತನಗಿಂತ ಪ್ರಿಯವಾದ ಅನ್ಯವಸ್ತುವಿಲ್ಲ, ಸಕಲ ಆತ್ಮೀಯ ವಸ್ತುಗಳಿಗಿಂತ ತನಗೆ ತಾನೇ ಅತಿಪ್ರಿಯನು.

ನಿರೂಪಿಸಿರುವವರು :- **'ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಃ । ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನಚಾನ್ಯಥಾ ॥'** - ಜ್ಞಾನಪೂರ್ವಕವಾದ ಸರ್ವತೋಧಿಕವಾದ ಸ್ನೇಹವನ್ನು ಪರಮಾತ್ಮನಲ್ಲಿ ಹೊಂದಿ, ಭಗವದುಪಾಸನೆಯಲ್ಲಿ ತೊಡಗಬೇಕು. ಉಪಾಸನೆಯ ಸಿದ್ಧಿಯಿಂದ ಮನಸ್ಸು ಸಮಾಧಿಯಲ್ಲಿ ನಿಂತಾಗ ಶ್ರೀಹರಿ ದರ್ಶನ ಲಾಭಕ್ಕೆ ಅವಕಾಶವಾಗುತ್ತದೆ. ಉಪಾಸನಾವಿಷಯಕ ನಿರ್ಣಯಗಳನ್ನು ಮುಂದಿನ ಪರಿಚ್ಛೇದದಲ್ಲಿ ಕಾಣುತ್ತೀರಿ.

## ಪರಿಚ್ಛೇದ - ೩

## ಉಪಾಸನೆ

ವೈರಾಗ್ಯ , ಭಕ್ತಿ , ಉಪಾಸನೆ ಮತ್ತು (ಅಪರೋಕ್ಷ) ಜ್ಞಾನ ಅಥವಾ ಸಾಕ್ಷಾತ್ಕಾರಗಳು ಪ್ರಧಾನ ಮುಕ್ತಿ ಸಾಧನಗಳು. ಈ ನಾಲ್ಕು, ಪ್ರತ್ಯೇಕವಾದ ಸಮಾನ ಸಾಧನಗಳಲ್ಲ. ಪ್ರಾಪಂಚಿಕ ಸುಖದ ಅಸಾರಾನಿತ್ಯ ಜ್ಞಾನದಿಂದ ವೈರಾಗ್ಯವೂ, ಅದರಿಂದ ದೃಢವಾಗುವ ಭಕ್ತಿಯೂ, ಭಕ್ತಿಯಿಂದ ಉಪಾಸನೆಯೂ, ಉಪಾಸನೆಯಿಂದ ಬ್ರಹ್ಮದರ್ಶನವೂ ದೊರೆಯುವುದರಿಂದ ಒಂದಕ್ಕೊಂದು ಸಾಧನರೂಪವೂ, ಪರಂಪರೆಯಿಂದ ಎಲ್ಲವೂ, ಮುಕ್ತಿ ಸಾಧನಗಳಾಗಿವೆ. ಉಪಾಸನೆಯು ಈ ಪರಿಚ್ಛೇದದಲ್ಲಿ ಪ್ರಸಕ್ತವಾಗುವ ಮುಖ್ಯ ವಿಷಯ. ಆನುಷಂಗಿಕವಾಗಿ ಇತರ ಪ್ರಮೇಯಗಳೂ ಪ್ರಸಕ್ತವಾಗುತ್ತವೆ.

**ಉಪಾಸನೆಯೆಂದರೆ, ಮುಖ್ಯಾರ್ಥದಲ್ಲಿ, ನಿರಂತರ ಭಗವಚ್ಚಿಂತನೆಯೆಂದರ್ಥ.** ಉಪಾಸನೆಯು ಭಗವತ್ಸೇವಾ ರೂಪವಾದುದು. ಇದು ಕಾಯಿಕ, ವಾಚಿಕ, ಮಾನಸಿಕ ಭೇದದಿಂದ ತ್ರಿವಿಧವಾದ ಕರ್ಮಸಹಿತ ಭಗವಚ್ಚಿಂತನೆಯೂ ಆದುದು. ತ್ರಿವಿಧ ಕರ್ಮಗಳ ಪ್ರಾಚುರ್ಯ ಅಪ್ರಾಚುರ್ಯ ವಿವಕ್ಷೆಯಿಂದ ಮತ್ತು ಅಧಿಕಾರಿ ಭೇದದಿಂದ ಉಪಾಸನೆಯನ್ನೇ ನಾನಾ ವಿಧವೆಂದೂ ತಿಳಿಯಲುಬರುತ್ತದೆ.

**ಭಗವದುಪಾಸನೆಯು ಸಾಮಾನ್ಯವಾಗಿ, ಸ್ಮರಣೋಪಾಸನೆ ಮತ್ತು ಧ್ಯಾನೋಪಾಸನೆಯೆಂದು ಎರಡು ವಿಧ.[18] ಸ್ಮರಣ ರೂಪದ ಉಪಾಸನೆಯು ಸರ್ವದಾ ಸರ್ವಾವಸ್ಥೆಗಳಲ್ಲಿ ಯೋಗ್ಯವು.** ಆದರೆ ಧ್ಯಾನರೂಪದ ಉಪಾಸನೆಗೆ ಆಸನಾದಿ ನಿಯಮಗಳನ್ನು ಪಾಲಿಸಬೇಕಾದುದು ಅತ್ಯವಶ್ಯಕ-ಇಲ್ಲದಿದ್ದರೆ ಉಪಾಸನೆಯು ಫಲಕಾರಿಯಾಗುವುದಿಲ್ಲ. ಅವಚ್ಛಿನ್ನ ಸ್ಮರಣೆಯೇ ಧ್ಯಾನ-ವೆನಿಸುವುದರಿಂದ, ಮನಸ್ಸು ಚಲಿಸದಂತೆ ಏಕತ್ರ ನಿಲ್ಲಲು ದೇಹವು ಚಲಿಸದಂತೆ ಸ್ಥಿರವಾಗಿರಬೇಕು. ಯೋಗ್ಯವಾದ ಆಸನದಲ್ಲಿ ಕುಳಿತರೆ ಮಾತ್ರ ದೇಹವನ್ನು ಸ್ಥಿರವಾಗಿಡಬಹುದು ಮತ್ತು ಮನಸ್ಸಿನ ಚಾಂಚಲ್ಯವನ್ನು ತಡೆಗಟ್ಟಬಹುದು. (ಓಡುತ್ತ ಅಥವಾ ತಿರುಗಾಡುತ್ತ) ಸಂಚರಿಸುತ್ತ ಧ್ಯಾನಿಸುವುದು ಸಾಧ್ಯವಿಲ್ಲ. ಆಸನಗಳು ಬಹು ಪ್ರಕಾರವಾಗಿವೆ. ಪದ್ಮ-ವೀರ-ಭದ್ರ-ವಜ್ರ ಇತ್ಯಾದಿ. ಅವುಗಳಲ್ಲಿ ಯಾರಿಗೆ ಯಾವ ಆಸನದಲ್ಲಿ ಕೂಡುವುದರಿಂದ ಸುಖ-ವೆನಿಸುವುದೋ, ಎಂದರೆ ಮನಸ್ಸು ದೇಹದ ಅವಯವಗಳತ್ತ (ವಿವಿಧ ಅಂಗಗಳ ಕಡೆಗೆ) ಹರಿಯದೇ ದೇಹವನ್ನು ಮರೆತು, ಮನಮೆಚ್ಚಿನ ವಿಷಯದಲ್ಲಿ ಅಚಲವಾಗಿ ನಿಲ್ಲಲು ಅವಕಾಶವಾಗುವುದೋ - ಆ ಆಸನದಲ್ಲಿ ಕೂತು, ಇದಕ್ಕನುಕೂಲವಾಗುವ ಇತರ ನಿಯಮಗಳನ್ನೂ ಪಾಲಿಸಬೇಕು. ಒಟ್ಟಿನಲ್ಲಿ ಆಸನಾದಿ ನಿಯಮಗಳ ಪಾಲನೆಯಿಂದ ಮನಸ್ಸು ಏಕತ್ರ (ಏಕಾಗ್ರವಾಗಿ) ನಿಲ್ಲುವಂತಾಗಬೇಕು. ಯಮ, ನಿಯಮ, ಪ್ರಾಣಾಯಾಮ, ಪ್ರತ್ಯಾಹಾರ (ಇಂದ್ರಿಯಗಳನ್ನು ವಿಷಯಗಳಿಂದ ಹಿಂದೆ ಸೆಳೆದುಕೊಳ್ಳುವುದು), ಆಸನಾದಿ ನಿಯಮಗಳ ವಿವರಗಳನ್ನು, ಅಷ್ಟಾಂಗಯೋಗ[19] ಪ್ರತಿಪಾದಕ ಗ್ರಂಥಗಳನ್ನು ಗುರುಮುಖದಿಂದ ಅಭ್ಯಸಿಸಿ, ತಿಳಿಯಬೇಕು.

ಆಸನಾದಿ ನಿಯಮಗಳ ಪಾಲನೆಯಿಂದ ದೊರೆಯುವ ಮನಸ್ಸಿನ ಪರಿಸ್ಥಿತಿ ವಿಶೇಷಗಳು, ಧಾರಣ-ಧ್ಯಾನ-ಸಮಾಧಿಗಳೆಂದು ಸಾಮಾನ್ಯವಾಗಿ ಮೂರು

---

18. 'ಸ್ಮರಣೋಪಾಸನಂ ಚೈವ ಧ್ಯಾನಾತ್ಮಕಮಿತಿದ್ವಿಧಾ ।
ಸ್ಮರಣಂ ಸರ್ವದಾ ಯೋಗ್ಯಂ ಧ್ಯಾನೋಪಾಸನಮಾಸನೇ । - (ನಾರಾಯಣ ತಂತ್ರ)

19. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿಗಳು, ಯೋಗದ ಅಂಗಗಳು. ಯೋಗವೆಂದರೆ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವ ಉಪಾಯ.

ವಿಧ. ಮನಸ್ಸು ಏಕತ್ರ ನಿಲ್ಲದೇ ಪುನಃ ಪುನಃ ಅನ್ಯವಿಷಯಗಳ ಕಡೆ ಹರಿಯುವುದು 'ಧಾರಣ'ವು, ಎಂದರೆ ಧ್ಯಾನ ವಿಷಯವನ್ನು (ಭಗವಂತನನ್ನು ಬಿಟ್ಟು ಅನ್ಯವಸ್ತುಗಳಲ್ಲಿ ಪ್ರವಹಿಸುವುದು – ಮನಸ್ಸಿನ ಧಾರೆಗೆ ಮಧ್ಯೆ ಮಧ್ಯೆ ವಿಚ್ಛಿತ್ತಿ ಬರುವುದು. 'ಧ್ಯಾನ'ವೆಂದರೆ, ತೈಲಧಾರೆಯಂತೆ, ಮಧ್ಯೆ ಖಂಡಿತವಾಗದೆ (ವಿಚ್ಛೇದವಿಲ್ಲದೆ) ಮನಸ್ಸು ಧ್ಯಾನಿಸದ ವಸ್ತುವಿನಲ್ಲಿ, ಪ್ರವಹಿಸುತ್ತಿರುವುದು – ಇದು ವಿಶೇಷ ಪ್ರಯತ್ನದಿಂದ ಸಾಧ್ಯವಾಗುತ್ತದೆ. '**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ । ತತಸ್ತತೋನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥**' (ಗೀತಾ) – 'ಸ್ವಾಭಾವಿಕವಾಗಿಯೇ ಚಂಚಲವಾದ ಮನಸ್ಸು, ಭಗವಂತನನ್ನು ಬಿಟ್ಟು, ಹೇಗೆ ಹೇಗೆ ಅನ್ಯತ್ರ ಹೋಗುತ್ತದೆಯೋ ಹಾಗೆ ಹಾಗೆ (ಆಗಾಗ ಪುನಃ ಪುನಃ ಅದನ್ನು ಹಿಂದೆಳೆದು ತಂದು ಭಗವಂತನ ವಶವನ್ನೇ ಹೊಂದಿಸಬೇಕು' ಎಂದು ಮನಸ್ಸನ್ನು ಪರಮಾತ್ಮನಲ್ಲಿಯೇ ನಿಲ್ಲಿಸಲು ಮಾಡಬೇಕಾದ ಯತ್ನ ಪ್ರಕಾರವು ನಿರೂಪಿಸಲ್ಪಟ್ಟಿದೆ. ಹೀಗೆ ಅಭ್ಯಾಸ ಬಲದಿಂದ ಧ್ಯಾನಾವಸ್ಥೆಯಲ್ಲಿ ಶಕ್ಯವಿದ್ದಷ್ಟು ದೀರ್ಘಕಾಲ[20] ಮನಸ್ಸನ್ನು ನಿಲ್ಲಿಸಲು ಸಾಧ್ಯವಾಗುತ್ತದೆ. ಈ ವಿಧ ಅಭ್ಯಾಸ ರೂಪದ ಯತ್ನದಿಂದ, ಮತ್ತೊಂದು ಮುಖ್ಯಫಲವೂ ಉಂಟು. ಈ ಅಭ್ಯಾಸ ರೂಪ ಯತ್ನವನ್ನು ಮುಂದುವರಿಸುತ್ತಾ ಹೋದಂತೆ, ಮನಸ್ಸನ್ನು ನಿಗ್ರಹಿಸಿ ಏಕತ್ರ ನಿಲ್ಲಿಸಲು ಯತ್ನದ ಅವಶ್ಯಕತೆಯೂ ಕಡಿಮೆಯಾಗುತ್ತ ಬರುತ್ತದೆ. ಕೆಲವು ಕಾಲದ ನಂತರ ಪ್ರಯತ್ನವಿಲ್ಲದೇ (ಅಪ್ರಯತ್ನವಾಗಿ) ಮನಸ್ಸು ಧ್ಯಾನಾವಸ್ಥೆಯಲ್ಲಿ ನಿಲ್ಲುತ್ತದೆ. ಈ ಅವಸ್ಥೆಯು (ಅಪ್ರಯತ್ನವಾಗಿ) ಮನಸ್ಸು ಏಕತ್ರ ನಿಂತು ಅನ್ಯತ್ರ ಚಲಿಸದಿರುವುದು 'ಸಮಾಧಿ'[21] ಎಂದು ಕರೆಯಲ್ಪಡುತ್ತದೆ.

---

20. ಈ ಕಾಲವು ಜೀವರ ಯೋಗ್ಯತಾನುಸಾರ ಕ್ಷಣ-ಘಳಿಗೆ-ಮುಹೂರ್ತ-ದಿನ ಬಹು-ದಿನಗಳ ಪರ್ಯಂತವಾಗಿರುತ್ತದೆ.

21. 'ಅಸಂಪ್ರಜ್ಞಾತ ಸಮಾಧಿ' ಎಂಬುದು ಸಮಾಧ್ಯವಸ್ಥೆಯ ವಿಶೇಷವು ಗಾಢವಾದ ಸಮಾಧಿಯು – ಭೇರಿ ತಾಡನಾದಿಗಳಿಂದಲೂ, ಸಿಡಿಲು ಮೊದಲಾದ ಶಬ್ದಗಳಿಂದ ಸಹ ಮನಸ್ಸು ಅನ್ಯವಸ್ತುಗಳನ್ನು ಗ್ರಹಿಸದಿರುವುದು.

ಭಗವಚ್ಚಿಂತನೆಯು ನಿರಾಕಾರದ ಚಿಂತನೆಯಲ್ಲ. ವಸ್ತುಗಳೆಲ್ಲವೂ ಸಾಕಾರವಾದವುಗಳೇ-ಆಕಾರವಿಲ್ಲದುದು ಶೂನ್ಯವೊಂದೇ[22] ಪರಮಾತ್ಮನು ನಿರಾಕಾರನೆಂದು ಹೇಳುವ ಆಗಮವಾಕ್ಯಗಳಿಗೆ, ವಿಕಾರಹೊಂದುವ ಪ್ರಾಕೃತಾ-ಕಾರರಹಿತನೆಂದೇ ಅರ್ಥ. ಭಗವಂತನು ಕರಚರಣಾದಿ ಅವಯವಗಳುಳ್ಳ

---

22. ಕರಚರಣಾದ್ಯವಯವರಹಿತನೆಂಬ ಉಪಾಸನೆಯಿಂದ ಪ್ರಾಪ್ತವಾಗುವ ಫಲವು ತಮೋರೂಪವಾದುದು ಎಂದರೆ ನಿರ್ಗುಣೋಪಾಸನೆಯ ಫಲವು ತಮಸ್ಸೆಂಬಲ್ಲಿ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರ ವಿಚಾರಸರಣಿಯನ್ನು ಶ್ರೀಸುಮಧ್ವವಿಜಯ-ದಲ್ಲಿ ನಿರೂಪಿಸಲಾಗಿದೆ-ಅದು ಮನಮುಟ್ಟುವಂತೆ ಯುಕ್ತಿಯುಕ್ತವಾಗಿದೆ.

ವಿತತಃ ಸುಖಸಚ್ಚಿದದ್ವಯಾತ್ಮಾ ಸಮುಪಾಸ್ಯೋ ವಿಹಿತೋಹಿ ತತ್ತ್ವವಿದ್ಭಿಃ । ಸ ಚ ನಾವಯವೀ ನಿರೂಪ್ಯತೇ ಚೇತ್ ದ್ಯುತಿಮಾತ್ರಂ ಚ ನಹೀತ್ಯದೋ ರಹಸ್ಯಮ್ ॥ ಯದಿ ಚೇದೃಗುಪಾಸ್ಯತೇಽಸ್ಯರೂಪಂ ತಿಮರತ್ವೇನ ವಿಭಾತಿ ಪಾರಿಶೇಷ್ಯಾತ್ । ಫಲಮಪ್ಯಥ ಮುಕ್ತಿರೀದೃಶೀಸ್ಯಾದಿತಿನೋ ನೈವ ಧಿನೋತ್ಯುಪಾಸ್ತಿರೇಷಾ ॥ ಇವುಗಳ ಅರ್ಥ - ತತ್ತ್ವವಿದ್ಭಿಃ - ಭಗವತ್ತತ್ತ್ವ ನಿರ್ಣಯ ಜ್ಞಾನವುಳ್ಳವರಿಂದ, ವಿತತಃ - ವ್ಯಾಪ್ತನೂ, ಸುಖಸಚ್ಚಿತ್ - ದೋಷವಿಲ್ಲದ ಸುಖಜ್ಞಾನವುಳ್ಳವನೂ, ಅದ್ವಯಾತ್ಮಾ ಸಮಾಧಿಕರಹಿತ ಸ್ವರೂಪವುಳ್ಳವನೂ (ಸರ್ವೋತ್ತಮನೂ) ಆದಶ್ರೀಹರಿಯು, ಸಮುಪಾಸ್ಯಃ ವಿಹಿತೋಹಿ - ಉಪಾಸನಾ ವಿಷಯನೆಂದು ವಿಹಿತನಾಗಿದ್ದಾನಷ್ಟೆ. ಸಃ ಹೀಗೆ ಉಪಾಸಿಸಲ್ಪಡಬೇಕಾದ ಭಗವಂತನು, ಅವಯವೀ ನ ನಿರೂಪ್ಯತೇ ಚೇತ್ - ಜ್ಞಾನಾನಂದಾತ್ಮಕ ಕರಚರಣಾದಿ ಸುಂದರ ಅವಯವಗಳುಳ್ಳವನೆಂದು ಹೇಳಲ್ಪಡದಿದ್ದರೆ, ದ್ಯುತಿಮಾತ್ರಂ ಚ ನಹಿ - ಕೇವಲ ಪ್ರಕಾಶರೂಪನೂ ಅಲ್ಲವೆಂದು ಪ್ರಾಪ್ತವಾಗುತ್ತದೆ; ಇತ್ಯದಃ ರಹಸ್ಯಂ ಹೀಗೆಂಬುದೇ ಶಾಸ್ತ್ರಫಲಿತಾರ್ಥವಾಗಲಿ.

ಅಸ್ಯ-ಬ್ರಹ್ಮನ, ರೂಪಂ-ರೂಪವು, ಈದೃಕ್ ಯದಿ ಉಪಾಸ್ಯತೇ ಚೇತ್ ಪ್ರಕಾಶರೂಪವೂ ಅಲ್ಲವೆಂದು (ಪ್ರಕಾಶರಹಿತವೆಂದು) ಹೀಗೆ ಧ್ಯಾನಿಸಿದರೆ, ಪಾರಿಶೇಷ್ಯಾತ್ - ಪರಿಶೇಷದಿಂದ, ತಿಮಿರತ್ವೇನ ವಿಭಾತಿ (ಪ್ರಕಾಶವಿಲ್ಲದ್ದು - ಉಳಿಯುವ) ಅಂಧಕಾರವೇ ಎಂದು ಪ್ರತಿಭಾತವಾಗುತ್ತದೆ (ತಿಳಿಯಬೇಕಾಗುತ್ತದೆ); ಅಥ ಈ ವಿಧ ಉಪಾಸನೆಯ ನಂತರ, ಫಲಂ - ಉಪಾಸನಾಸಾಧ್ಯಫಲವೂ (ಮುಕ್ತಿಯೂ) ಈದೃಶೀ ಮುಕ್ತಿಃ ಸ್ಯಾತ್ - ಅಂಧಕಾರರೂಪವೇ ಆಗಬೇಕಾಗುವುದು; ಇತಿ ಏಷಾ ಉಪಾಸ್ತಿಃ - ಆದ್ದರಿಂದ ಈ ನಿರ್ಗುಣೋಪಾಸನೆಯು, ನಃ ನೈವ ಧಿನೋತಿ ನಮ್ಮ ಮನಸ್ಸಿಗೆ ಹಿಡಿಯುವುದಿಲ್ಲ - ಹರ್ಷವನ್ನುಂಟು ಮಾಡುವುದಿಲ್ಲ. ಇದರಂತೆ ಜ್ಞಾನಾನಂದಾತ್ಮಕವಲ್ಲದ್ದೆಂದರೆ ತದ್ವಿರುದ್ಧ ದುಃಖಾಜ್ಞಾನಾದಿ ಸ್ವರೂಪದ್ದೆಂದೂ ಪ್ರಾಪ್ತವಾಗುವುದಿಲ್ಲವೇ?

ಅಪ್ರಾಕೃತಗಳಾದ ಅನಂತರೂಪಗಳುಳ್ಳವನು. ಜ್ಞಾನಾನಂದಾದಿ ಗುಣಗಳೇ ಸ್ವರೂಪವಾಗುಳ್ಳವನಾದ್ದರಿಂದ ಸಚ್ಚಿದಾನಂದ ರೂಪನೆಂದೂ ವರ್ಣಿಸಲ್ಪಡುತ್ತಾನೆ. ಆತನ ಅನಂತರೂಪಗಳೂ, (ಪ್ರತಿಯೊಂದೂ) ಪರಮ ಸುಂದರವಾದವುಗಳು - ಶ್ರೀಹರಿಯು ಸೌಂದರ್ಯ ಸಾರೈಕರಸನು. ಆ ಸೌಂದರ್ಯವನ್ನು ಕಿಂಚಿತ್ತಾದರೂ ಹೋಲುವ ಸೌಂದರ್ಯವು, ಎಲ್ಲಿಯೂ ಯಾವ ಕಾಲದಲ್ಲಿಯೂ ಇಲ್ಲವೇ ಇಲ್ಲ. ಪ್ರತಿಬಿಂಬರಾದ ಬ್ರಹ್ಮಾದಿಗಳಿಗೆ ಸಹ ಯಾರಿಗೂ ಈ ಸೌಂದರ್ಯವಿಲ್ಲ. ಹೀಗೆ ಪರಮಸುಂದರನಾದ ಶ್ರೀಹರಿಯ ರೂಪವನ್ನು ಧ್ಯಾನಿಸಿ, ಮನಸ್ಸಿನಲ್ಲಿ ಯಥಾಶಕ್ತಿ ದೀರ್ಘಕಾಲ ನಿಲ್ಲಿಸಿಕೊಳ್ಳಬೇಕು.[23]

**ಜೀವಾಂತರ್ಯಾಮಿಯಾದ ಬಿಂಬರೂಪೀ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವುದೇ ಉಪಾಸನೆಯ ಮುಖ್ಯೋದ್ದೇಶವು**, ಬಿಂಬಾಪರೋಕ್ಷವಿಲ್ಲದೇ ಮೋಕ್ಷವಿಲ್ಲ. ಜೀವನು ಅಣುಸ್ವರೂಪನು. ಜೀವಾಂತರ್ಯಾಮಿಯಾದ ಅಣಿಷ್ಠರೂಪದ (ಬಿಂಬದ) ಉಪಾಸನೆಯು ಬಹು ಕಷ್ಟಸಾಧ್ಯ. ದೇಹಿಗಳ ಹೃದಯಾಕಾಶದಷ್ಟು (ಪ್ರಾದೇಶ)ಪರಿಮಾಣದಿಂದ (ಪ್ರಾದೇಶ : ಹೆಬ್ಬೆಟ್ಟಿಗೂ ತೋರಬೆರಳಿಗೂ ಇರುವ ಅಂತರ-ಒಂದು ಚೋಟು) ಮೊದಲು ಮಾಡಿ ಅಣುಪರಿಯಂತದ ರೂಪುಗಳು ಸೂಕ್ಷ್ಮರೂಪಗಳೆನಿಸುತ್ತವೆ. ಪ್ರಾದೇಶದಿಂದ ಮುಂದೆ ಹದಿನಾಲ್ಕು ಲೋಕ ಪರ್ಯಂತ ವಿಸ್ತಾರವುಳ್ಳ ರೂಪಗಳು ಸ್ಥೂಲಗಳೆನಿಸುತ್ತವೆ. (ಸ್ಥೂಲ-ವಿಸ್ತಾರವಾದ ದೊಡ್ಡದಾದ; .... ಎಂಬರ್ಥವಲ್ಲ). **ಸ್ಥೂಲರೂಪಗಳ ಚಿಂತನೆಯು ಸುಲಭ**-ಸೂಕ್ಷ್ಮ ರೂಪಗಳ ಚಿಂತನೆಯು ಬಹು ಕಠಿಣ ಸ್ಥೂಲರೂಪದ ಉಪಾಸನೆಯಿಂದ, ಮನಸ್ಸು ಬಹಿರ್ವಸ್ತುಗಳಲ್ಲಿ ಸಂಚರಿಸದೆ, ಭಗವದ್ರೂಪವನ್ನೇ ವಿಷಯೀಕರಿಸುತ್ತ , ಶುದ್ಧವಾಗುತ್ತದೆ.

23. ಸಂಚಿಂತಯೇದ್ಭಗವತಶ್ಚರಣಾರವಿಂದಮ್ ।
ವಜ್ರಾಂಕುಶ ಧ್ವಜ ಸರೋರುಹ ಲಾಂಛನಾಢ್ಯಮ್ ।
ಉತ್ತುಂಗ ರಕ್ತವಿಲಸನ್ನಖ ಚಕ್ರವಾಲ ।
ಜ್ಯೋತ್ಸ್ನಾಭಿರಾಹತ ಮಹದ್ಧೃದಯಾಂಧಕಾರಮ್ ॥ (ಭಾಗವತ)
ಇತ್ಯಾದಿ ಶ್ಲೋಕ ಭಾಗಗಳಲ್ಲಿ ಕಪಿಲಪರಮಾತ್ಮನು ತನ್ನ ತಾಯಿ ದೇವಹೂತಿಗೆ ಭಗವದ್ಧ್ಯಾನ ಕ್ರಮವನ್ನು ಉಪದೇಶಿಸಿರುವುದನ್ನು ಗಮನಿಸಬಹುದು.

ಸ್ಥೂಲರೂಪವನ್ನು ಧಾರಣಾದಿಗಳಿಂದ ಮನಸಿನಲ್ಲಿ ನಿಲ್ಲಿಸುವುದು ಸಾಧಿಸಿದರೆ ಸೂಕ್ಷ್ಮರೂಪೋಪಾಸನೆಗೆ ಅಧಿಕಾರಿಯು ಅರ್ಹನಾಗುತ್ತಾನೆ. ನೀರು ಸ್ವಾಭಾವಿಕವಾಗಿ ಹರಿದು ತಗ್ಗಿನಲ್ಲಿ ನಿಲ್ಲುವಂತೆ, ಪ್ರತಿಯೊಬ್ಬ ಸಾಧಕನೂ ತನ್ನ ಮನಮೆಚ್ಚಿ ಹಿಡಿಯುವ, ರಾಮಕೃಷ್ಣಾದಿ ಯಾವುದೊಂದು ಸುಂದರ ಭಗವದ್ರೂಪವನ್ನು ಚಿಂತಿಸಬೇಕು – ಅದನ್ನು ಧ್ಯಾನದಿಂದ ವಶಮಾಡಿಕೊಳ್ಳಬೇಕು. ಆಭರಣ ಆಯುಧಾದಿಗಳಿಂದ ಯುಕ್ತವಾದ ಭಗವದ್ರೂಪದ ಸರ್ವಾಂಗಗಳನ್ನು ಏಕದಾ ಧ್ಯಾನವಶಮಾಡಿಕೊಳ್ಳುವುದು ಸಾಧ್ಯವಲ್ಲ. ಪಾದಾದಿ ಒಂದೊಂದೇ ಅವಯವಗಳನ್ನು ಚಿಂತಿಸಿ ಧ್ಯಾನಾವಸ್ಥೆಯಲ್ಲಿ ನಿಲ್ಲಿಸಿಕೊಂಡು, ಕ್ರಮೇಣ ಶಿರಃಪರ್ಯಂತವಾದ ಪೂರ್ಣರೂಪವನ್ನು ಏಕಕಾಲದಲ್ಲಿ ಧ್ಯಾನಿಸುವ ಪಕ್ವ ಮನಃಸ್ಥಿತಿಯನ್ನು ಸಾಧಿಸಿಕೊಳ್ಳಬೇಕು.[24]

ಹೀಗೆ ಸಮಾಧಿಯಲ್ಲಿ ನಿಲ್ಲುವ ರೂಪವು, ಮನೋಮಯವಾದ ಪ್ರತಿಮೆ ಮಾತ್ರ – ವಾಸನಾತ್ಮಕ ಮನಸ್ಸೇ ಉಪಾದಾನ ಕಾರಣವಾಗುಳ್ಳ ಪ್ರತೀಕವು ಆದೇ

---

24. ಏಕೈಕಶೋಽಂಗಾನಿ ಧಿಯಾನುಭಾವಯೇತ್ ।
ಪಾದಾದಿ ಯಾವದ್ಧಸಿತಂ ಗದಾಭೃತಃ ।।
ಜಿತಂ ಜಿತಂ ಸ್ಥಾನಮಪೋಹ್ಯ ಧಾರಯೇತ್ ।
ಪರಂ ಪರಂ ಶುದ್ಧ್ಯತಿ ಧೀರ್ಯಥಾ ಯಥಾ।। (ಭಾಗವತ)

ಪಾದದಿಂದ ಆರಂಭಿಸಿ ಮುಖಪರ್ಯಂತವಾದ ಶ್ರೀಹರಿಮೂರ್ತಿಯ ಒಂದೊಂದು ಅಂಗವನ್ನು ಪ್ರತ್ಯೇಕವಾಗಿ ಮನಸ್ಸಿನಿಂದ ಚಿಂತಿಸುತ್ತ ಹೋಗಬೇಕು; ಸ್ವಾಧೀನವಾದ (ಜಯಿಸಿದ, ಎಂದರೆ ಧ್ಯಾನಾವಸ್ಥೆಯಲ್ಲಿ ಮನಸ್ಸು ಹಿಡಿದು ನಿಲ್ಲಿಸುವ) ಅಂಗವನ್ನು ಬಿಟ್ಟು ಅದರ ಮೇಲಿನ ಅಂಗವನ್ನು, ಮನೋಮಯವಾದ (ಮನಸ್ಸಿನಲ್ಲಿ ಚಿಂತಿಸುವ) ಭಗವನ್ಮೂರ್ತಿಗೆ ಜೋಡಿಸಿ, ಚಿಂತಿಸಬೇಕು. (ಪಾದವನ್ನು ಬಿಟ್ಟು ಜಂಘೆಯನ್ನು ಚಿಂತಿಸಬೇಕು; ನಂತರ ಅದರ ಮೇಲಿನ ಅಂಗವನ್ನು ಚಿಂತಿಸಬೇಕು; ಹೀಗೆ ಮುಖದವರೆಗೂ ಸಾಧಿಸಬೇಕು. ವಶವಾದ ಅಂಗವನ್ನು ಬಿಡಬೇಕೆಂದರೆ, ಮುಂದಿನ ಹೊಸದಾಗಿ ಜೋಡಿಸಿದ ಅಂಗವನ್ನು ಅಧಿಕವಾಗಿ ಚಿಂತಿಸುತ್ತ, ವಶವಾದ ಅಂಗವನ್ನು ಬಿಡದಂತೆ ಎರಡನ್ನೂ ಚಿಂತಿಸಬೇಕೆಂದರ್ಥ). ಈ ಕ್ರಮದಿಂದ ಪೂರ್ಣರೂಪವನ್ನು ಮನಸ್ಸಿನ ವಶಮಾಡಿಕೊಳ್ಳಬೇಕು. ಹೀಗೆ ಒಂದೊಂದು ಅಂಗವನ್ನು ಚಿಂತಿಸುವುದರಿಂದ, ಕ್ರಮವಾಗಿ ಮನಸ್ಸು ಶುದ್ಧ ವಾಗುತ್ತ ಸಾಗುತ್ತದೆ.

ಭಗವಂತನಲ್ಲ; ಅದರಲ್ಲಿ ಸಚ್ಚಿದಾನಂದ ಸ್ವರೂಪನಾದ ಶ್ರೀಹರಿಯು ಇರುವನೆಂದು ತಿಳಿಯಬೇಕು. ಸಮಾಧ್ಯವಸ್ಥೆಯು ಪಕ್ವಗೊಂಡಾಗ, ನಿಯತ ಗುರೂಪದೇಶದಿಂದ[25] ಸ್ವಬಿಂಬರೂಪವನ್ನು ಸಮಾಧಿಯಲ್ಲಿ ಸ್ಥಿರವಾಗಿ ನಿಲ್ಲಿಸಿಕೊಂಡಿರಲು, ಭಕ್ತನಮೇಲೆ ಪ್ರಸನ್ನನಾದ ಶ್ರೀಹರಿಯು ಆ ಪ್ರತೀಕದೊಳಗಿರುವ ತನ್ನ ಅಪ್ರಾಕೃತವಾದ ದಿವ್ಯರೂಪದ ಸಂದರ್ಶನ ಭಾಗ್ಯವನ್ನು ಕರುಣಿಸುತ್ತಾನೆ.[26]

ಭಗವದ್ರೂಪವನ್ನು ಸಮಾಧಿಯಲ್ಲಿ ಸ್ಥಾಪಿಸಿ, ಅದರಿಂದ ಆನಂದಿಸುವ ಯೋಗ್ಯತೆಯನ್ನು ಪಡೆಯುವುದೇ ಭಕ್ತನ ಸಾಧನ ಪಕ್ವತೆಯ ದ್ಯೋತಕವು. ಆಗ ಮಾತ್ರ ನಿಯತಗುರುವಿನ ಲಾಭವಾಗುತ್ತದೆ. ಆ ಗುರೂಪದೇಶದ ನಂತರ, ಆವರೆಗೆ ತಾನೂ ಇಚ್ಛಿಸಿ ಧ್ಯಾನಿಸುತ್ತಿದ್ದ ಭಗವದ್ರೂಪವನ್ನು ಮನಸ್ಸಿನಿಂದ ತೆಗೆದುಹಾಕಿ ಗುರೂಪದಿಷ್ಟ ಸ್ವಬಿಂಬ ರೂಪವನ್ನು ಸಮಾಧಿಯಲ್ಲಿ ಸ್ಥಾಪಿಸಿ-ಕೊಳ್ಳಲು ಭಕ್ತನು, ಅನಾಯಾಸದಿಂದ ಶಕ್ತನಾಗುತ್ತಾನೆ. ಶ್ರೇಷ್ಠ ಭಕ್ತಿಯುಕ್ತವಾದ[27]

---

25. ಪ್ರತಿಯೊಬ್ಬಜೀವನಿಗೂ ಸ್ವಬಿಂಬವನ್ನು (ತನ್ನ ಸ್ವರೂಪದಲ್ಲಿರುವ ಶ್ರೀಹರಿಯ ರೂಪವನ್ನು) ಉಪದೇಶಿಸಿ, ತನ್ಮೂಲಕ ಅಪರೋಕ್ಷ ಜ್ಞಾನವನ್ನು ಅನುಗ್ರಹಿಸುವ ನಿರ್ದಿಷ್ಟ ಗುರುವಿರುತ್ತಾನೆ. ಈತನನ್ನು ಸ್ವರೂಪೋದ್ಧಾರಕ ಗುರು ಅಥವಾ ನಿಯತಗುರು, ಎನ್ನುತ್ತಾರೆ. ಸಾಧನ ಪರಿಪಕ್ವದೆಶೆಯಲ್ಲಿ ಈ ಗುರು ಶಿಷ್ಯರ ಮೇಳನವಾಗಿ ಶ್ರೀಹರೀಚ್ಛೆಯಿಂದ ಉಪದೇಶವು ದೊರೆಯುತ್ತದೆ.
26. ಸಮಾಧಿಯಲ್ಲಿ ಶ್ರೀಹರಿಯನ್ನು ಸಾಕ್ಷಾತ್ತಾಗಿ ನೋಡುವ ಸಾಮರ್ಥ್ಯವನ್ನು, ಶುದ್ಧಾಂತಃಕರಣನಾದಭಕ್ತನ ಮನೋ ಇಂದ್ರಿಯಕ್ಕೆ, ಶ್ರೀಹರಿಯೇ (ಮುಖ್ಯ-ಪ್ರಾಣನನ್ನು ಅಲ್ಲಿ ವಿಶೇಷಾವೇಶಗೊಳಿಸುವುದರ ಮೂಲಕ) ಕರುಣಿಸುತ್ತಾನೆ. ಇದನ್ನು 'ದಿವ್ಯದೃಷ್ಟಿ' ಎನ್ನುವರು.
27. ಕಪಿಲ ಪರಮಾತ್ಮನು ಭಗವದ್ಧ್ಯಾನವನ್ನು ದೇವಹೂತೀ ದೇವಿಗೆ ಉಪದೇಶಿಸಿ, ಉಪಸಂಹಾರದಲ್ಲಿಭಕ್ತಿಯುತ ಧ್ಯಾನದ ಮಹಾಫಲವನ್ನು ಹೀಗೆ ನಿರೂಪಿಸಿರುವನು-

ಏವಂ ಹರೌ ಭಗವತಿ ಪ್ರತಿಲಬ್ಧ ಭಾವೋ ।
ಭಕ್ತ್ಯಾದ್ರವದ್ಧೃದಯ ಉತ್ಪುಲಕ ಪ್ರಮೋದಃ ॥
ಔತ್ಕಂಠ್ಯ ಬಾಷ್ಪಕಲಯಾ ಮುಹುರರ್ದ್ಯಮಾನಃ ।
ತಚ್ಚಾಪಿ ಚಿತ್ತಬಡಿಶಂ ಶನಕೈರ್ವಿಯುಂಕ್ತೇ ॥ (ಭಾಗವತ)

ಭಗವದ್ರೂಪದ ಧ್ಯಾನವೇ ಸಾಕ್ಷಾತ್ಕಾರಕ್ಕೆ ಕಾರಣವಾಗುವುದಲ್ಲದೇ, ಕೇವಲ ಏಕಾಗ್ರತೆಯಿಂದ ರೂಪವನ್ನು ಧ್ಯಾನಿಸುವುದಲ್ಲ. ಭಕ್ತಿಯುತ ಧ್ಯಾನವು ಶ್ರೀಹರಿ ಪ್ರಸನ್ನತೆಗೆ ಕಾರಣವಾಗುತ್ತದೆ. ಆದರಿಂದ, ಸ್ವಸ್ವರೂಪವನ್ನು-ಸ್ವಬಿಂಬನಾದ ಭಗವಂತನನ್ನು ಮರೆಮಾಡಿರುವ ದುಷ್ಟ ಪ್ರಕೃತಿಗಳ ಪ್ರತಿ-ಬಂಧಕ ಶಕ್ತಿಯು ಕುಂದಿ (ಕಾರ್ಯಸಾಮರ್ಥ್ಯವನ್ನು ಕಳೆದುಕೊಂಡು) ದರ್ಶನಕ್ಕೆ ಅವಕಾಶವಾಗುತ್ತದೆ.[28]

ಭಗವದುಪಾಸನೆಯನ್ನು (ಸ್ಮರಣೋಪಾಸನೆ ಮತ್ತು ಧ್ಯಾನೋಪಾಸನೆ ಎಂದು ಮಾತ್ರವಲ್ಲ) ಪ್ರಕಾರಾಂತರದಿಂದ ಸಹ, ದ್ವಿವಿಧವೆಂದು ಹೇಳಲಾಗುತ್ತದೆ. '**ಸೋಪಾಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸ ಸ್ವರೂಪಿಣೀ । ಧ್ಯಾನ ರೂಪಾ ಪರಾಚೈವ ತದಂಗಂ ಧಾರಣಾಧಿಕಮ್ ।।**' (ಅನುವ್ಯಾಖ್ಯಾನ), ಎಂದರೆ, ಶಾಸ್ತ್ರಾಭ್ಯಾಸ ಸ್ವರೂಪವಾದುದು ಒಂದು ಮತ್ತೊಂದು ಧ್ಯಾನ ರೂಪವಾದುದು; ಧಾರಣಾದಿಗಳು (ಆಸನ, ಪ್ರತ್ಯಾಹಾರ ಪ್ರಾಣಾಯಾಮಾದಿಗಳು) ಧ್ಯಾನಾಂಗಗಳು - ಪ್ರತ್ಯೇಕ ಸ್ವತಂತ್ರ ಉಪಾಸನೆಗಳಲ್ಲ. ಶಾಸ್ತ್ರಾಭ್ಯಾಸರೂಪ ಉಪಾಸನೆಯು ಹಾಗಲ್ಲ - ಬ್ರಹ್ಮ ಸಾಕ್ಷಾತ್ಕಾರಕ್ಕೆ ಸಾಕ್ಷಾತ್ಕಾರಣವಾಗಬಲ್ಲದು - ಧ್ಯಾನಾಂಗವೂ ಆಗಬಲ್ಲದು. ಶಾಸ್ತ್ರಾಭ್ಯಾಸವು ಭಗವದಿತರ ವಿಷಯಕ ಮನೋವ್ಯಾಪಾರಗಳನ್ನು ತಡೆದು, ನಿರಂತರ ಭಗವದ್ವಿಷಯದಲ್ಲಿಯೇ ಮನಸ್ಸನ್ನು ತೊಡಗಿಸುತ್ತದೆ. ಶಾಸ್ತ್ರಗಳಲ್ಲಿ ಭಗವಂತನ ನಾನಾ ದಿವ್ಯ ರೂಪಗಳ

---

ಇದರ ಅರ್ಥ :- ಏವಂ - ಈ ಹಿಂದೆ ಹೇಳಿದಂತೆ, ಭಗವತಿ ಹರೌ ಷಡ್ಗುಣೈಶ್ವರ್ಯ ಪೂರ್ಣನಾದ ಶ್ರೀಹರಿಯಲ್ಲಿ, ಪ್ರತಿಲಬ್ಧಭಾವಃ - ಹೊಂದಲ್ಪಟ್ಟ ಸ್ಥಿರ ಮನಸ್ಸುಳ್ಳವ-ನಾಗಿ, ಭಕ್ತ್ಯಾ - ಭಕ್ತಿಯಿಂದ, ದ್ರವದ್ಧೃದಯಃ - ಕರಗಿದ ಹೃದಯವುಳ್ಳವನೂ, ಉತ್ಪುಲಕ ಪ್ರಮೋದಃ - ರೋಮಾಂಚನಯುಕ್ತ ಆನಂದವುಳ್ಳವನೂಔತ್ಕಂಠ್ಯ ಬಾಷ್ಪಕಲಯಾ - ಬಿಗಿದ ಕಂಠ ಸಹಿತ ಅಶ್ರುಧಾರೆಯಿಂದಲೂ, ಮುಹುಃ - ಮತ್ತೆ ಮತ್ತೆ, ಅರ್ದ್ಯಮಾನಃ - ಕಳವಳವುಳ್ಳನೂ ಆದ (ಮನೋದ್ವೇಗವುಳ್ಳ) ಭಕ್ತನು, ತಚ್ಚಿತ್ತ ಬಡಿಶಂ ಅಪಿ - ಉದ್ದಿಷ್ಟಧ್ಯಾನ ಲಕ್ಷ್ಯವನ್ನು (ಗುರಿಯನ್ನು), ಶನಕೈಃ - ಸಾವಧಾನದಿಂದ, ವಿಯುಂಕ್ತೇ - ಉತ್ತಮವಾಗಿ (ಚೆನ್ನಾಗಿ) ಹೊಂದುತ್ತಾನೆ. (ಅಪ್ರಯತ್ನದಿಂದ ಸಮಾಧಿಯಲ್ಲಿ ನಿಲ್ಲುತ್ತಾನೆಃ)

28. ರತ್ನ 3 ಪುಟ 295 ನೋಡಬೇಕು.

ವರ್ಣನೆಗಳೂ ಹೇರಳವಾಗಿವೆ. ಆದ್ದರಿಂದ ನಿರಂತರ ಶಾಸ್ತ್ರಾಭ್ಯಾಸವು, ಬ್ರಹ್ಮದರ್ಶನಕ್ಕೆ ಸಾಧನವಾದ ಸ್ವತಂತ್ರ ಉಪಾಸನೆಯೇ ಆಗುತ್ತದೆ. ಶಾಸ್ತ್ರಾಭ್ಯಾಸ - ಧ್ಯಾನಗಳೆಂಬ ಉಭಯರೂಪದ ಉಪಾಸನೆಗಳನ್ನೂ ಇತರ ಉಪಯುಕ್ತ ಪ್ರಮೇಯಗಳೊಂದಿಗೆ ಈ ೩ನೇ ಪಾದದಲ್ಲಿ, ವಿಸ್ತಾರವಾದ ವಿಮರ್ಶೆಯಿಂದ ನಿರ್ಣಯಿಸಿ ನಿರೂಪಿಸಲಾಗಿದೆ. ಈ ಮುಂದೆ ಮುಖ್ಯ ನಿರ್ಣಯಗಳನ್ನು ಸಂಗ್ರಹವಾಗಿ ನಿರೂಪಿಸಿದರೂ, ಆಳವಾದ ಶಾಸ್ತ್ರಾಭ್ಯಾಸದಿಂದಲೇ ತದ್ವಿಷಯಕ ಸಕಲ ಸಂಶಯಗಳ ಪರಿಹಾರವಾಗಬಲ್ಲದೆಂಬುದನ್ನು ಮರೆಯಲಾಗದು.

ಉಪಾಸನೆಯು ಭಕ್ತಿಪೂರ್ವಕವಾಗಿರಬೇಕಾದುದು ಅತ್ಯವಶ್ಯಕವೆಂದು ಹೇಳಲಾಯಿತಷ್ಟೆ. ಈ ಹಿಂದೆ ೨ನೇ ಪರಿಚ್ಛೇದದಲ್ಲಿ, ಭಗವಂತನ ಮಾಹಾತ್ಮ್ಯ ಜ್ಞಾನಪೂರ್ವಕವಾದ ಸುದೃಢ ಸ್ನೇಹವೇ ಭಕ್ತಿಯೆಂದೂ ಸಾಧಿಸಲಾಗಿದೆ. ಭಗವಂತನ ಮಹಿಮೆಗಳೆಂದರೆ ಆತನ ಕಲ್ಯಾಣ ಗುಣಗಳೇ. ಭಗವದ್ಗುಣ-ಗಳಾದರೋ ಅನಂತವೆಂದು - ರತ್ನ ೩ (ಆಗಮಸಾರದಲ್ಲಿ) ಸವಿಸ್ತಾರವಾಗಿ ಪ್ರತಿಪಾದಿಸಿದೆ. ಭಗವದ್ಗುಣಗಳನ್ನೇ ಪ್ರತಿಪಾದಿಸುವ ಮಹಾ ತಾತ್ಪರ್ಯವುಳ್ಳವು (ಪರಮ ಮುಖ್ಯಪ್ರವೃತ್ತಿಯುಳ್ಳವು) ವೇದಾದಿ ಸಕಲ ಸದಾಗಮಗಳು. ವೇದಾದಿ ಸಚ್ಛಾಸ್ತ್ರಗಳ ಶ್ರವಣ ಮನನದಿಂದ ಲಭಿಸಿದ ನಿಶ್ಚಿತ ಗುಣಜ್ಞಾನಸಹಿತ ಭಗವದ್ಧ್ಯಾನವೇ ಉಪಾಸನೆಯು. ಉಪಾಸನೆಯು ಗುಣೋಪಸಂಹಾರ ರೂಪದ ಧ್ಯಾನವು - ಕೇವಲ ರೂಪ (ಆಕಾರ) ಚಿಂತನೆಯಲ್ಲ. ಮುಮುಕ್ಷು ಜೀವನು ಸಕಲ ವೇದಾರ್ಥ[29] ಪರಿಜ್ಞಾನವುಳ್ಳವನಾಗಿಯೇ ಪರಮಾತ್ಮನನ್ನು

29. ಶ್ರೀಹರಿಯು ಅನಂತಗುಣಗಳುಳ್ಳವನು. ಗುಣಪ್ರತಿಪಾದಕ ವೇದಗಳೂ ಅನಂತವಾಗಿರಬೇಕೆಂಬುದು ಸಾಮಾನ್ಯ ಯುಕ್ತಿಸಿದ್ಧವೆನ್ನಬಹುದು. 'ಅನಂತಾ ವೈ ವೇದಾಃ' - ವೇದಗಳು ಅನಂತವೆಂದು ಶ್ರುತಿಯೇ ಹೇಳುತ್ತದೆ. ಅನಂತ ವೇದಗಳಿಂದ ಹೇಳಲಾಗದ (ಅನುಕ್ತವಾದ) ಅನಂತ ಮಹಿಮೆಗಳುಳ್ಳವನು ಶ್ರೀಹರಿಯೆಂದೂ ವೇದಗಳು ಹೇಳುತ್ತವೆ. ಹೀಗಿದ್ದರೂ ಉಪಲಬ್ಧವಿರುವ ವೇದಗಳು ಗಣನೆಗೆ ಒಳಪಡುವಷ್ಟು ಮಾತ್ರ ಇವೆ. ಋಕ್, ಯಜು, ಸಾಮ, ಅಥರ್ವಗಳೆಂಬ ಪ್ರಸಿದ್ಧ ನಾಲ್ಕು ವೇದಗಳೇ ಅವು. ಕಾಲಗತಿಯನ್ನೂ, ಸಾಧನೆಯಲ್ಲಿ ತೊಡಗಲಿರುವ ಬಹು ಜೀವ ಯೋಗ್ಯತೆಗಳನ್ನೂ ಪರಿಗಣಿಸಿ, ಸರ್ವಜ್ಞನಾದ ವ್ಯಾಸಾದಿರೂಪೀ ಶ್ರೀಹರಿಯು, ಅಷ್ಟು ಭಾಗದ ವೇದವನ್ನು ಮಾತ್ರ ಪ್ರಕಟಗೊಳಿಸುತ್ತಾನೆ. ನಾಲ್ಕೂ

ಉಪಾಸಿಸಬೇಕೋ ಅಥವಾ ಸ್ವಸ್ವಶಾಖಾ (ವೇದ) ಪ್ರತಿಪಾದ್ಯ ಗುಣಜ್ಞಾನ ಮಾತ್ರ ಸಂಪಾದಿಸಿಕೊಂಡು ಉಪಾಸಿಸಬಹುದೋ, ಎಂಬ ಸಂಶಯವು ಪ್ರಥಮತಃ ಉದಯಿಸುತ್ತದೆ. ಮತ್ತು ಪ್ರತಿಶಾಖೆಗಳಲ್ಲಿ ಹೇಳಲ್ಪಡುವ ಅರ್ಥಗಳು ಪ್ರತ್ಯೇಕ-ವಾದ್ದರಿಂದಲೂ, ಅನಂತ ವೇದೋಕ್ತ ಅನಂತಗುಣಗಳನ್ನು ರಮಾ ಬ್ರಹ್ಮಾದಿಗಳು ಸಹ ಪೂರ್ಣವಾಗಿ ತಿಳಿಯರೆಂದು ವೇದಗಳೇ ಹೇಳುವುದರಿಂದಲೂ, ಸ್ವಸ್ವಶಾಖೋಕ್ತ ಅರ್ಥ ವಿಶೇಷಗಳನ್ನು ತಿಳಿದರೆ ಸಾಕೆಂದೂ ತೋರುತ್ತದೆ. ಈ ವಿಷಯದಲ್ಲಿ, '**ತಸ್ಮಾದೇನಂ ಸರ್ವವೇದಾನಧೀತ್ಯ ವಿಚಾರ್ಯ ಚ ಜ್ಞಾತು ಮಿಚ್ಛೇನ್ಮುಮುಕ್ಷುಃ**' ಎಂಬ ಶ್ರುತಿಪ್ರಮಾಣದಂತೆ ಎಲ್ಲ ವೇದಗಳನ್ನು ಅಧ್ಯಯನ ಮಾಡಿ, ವಿಚಾರದಿಂದ ಸ್ವಯೋಗ್ಯ ಅರ್ಥವಿಶೇಷಗಳನ್ನು ಗ್ರಹಿಸಿ, ಉಪಾಸಿಸ-ಬೇಕೆಂದು ನಿರ್ಣಯಿಸಲಾಗಿದೆ. ಈ ನಿರ್ಣಯದ ಭಾವವನ್ನು ಸುಸ್ಪಷ್ಟವಾಗಿ ಗ್ರಹಿಸಬೇಕಾದುದು ಅವಶ್ಯಕ. ಅನಂತ ಭಗವನ್ಮಹಿಮೆಗಳಲ್ಲಿ, ಜೀವಸಮೂಹದಲ್ಲಿ ಅನ್ಯರಾರೂ ತಿಳಿಯದ, ವೇದೋಕ್ತ ತದನುಕ್ತ ಅಸಂಖ್ಯ ಮಹಿಮೆಗಳನ್ನು ಚತುರ್ಮುಖಬ್ರಹ್ಮದೇವನು ತಿಳಿಯುತ್ತಾನೆ. ಬ್ರಹ್ಮನಿಗಿಂತ ಅಧಿಕ ಗುಣಗಳನ್ನು

---

ವೇದಗಳ ಅಧ್ಯಾಯನಾದಿಗಳನ್ನು ಮಾಡಲಾರದವರ ಉಪಯೋಗಕ್ಕಾಗಿ ಶಾಖೋಪಶಾಖೆಗಳೂ ಏರ್ಪಟ್ಟಿವೆ.

ವೇದಾದಿಗಳಲ್ಲಿ ಯಾವ ವಿರೋಧವೂ ಇಲ್ಲವೆಂದು, 'ನ ವಿರೋಧಃ ಕುತಶ್ಚಿತ್ ವೇದೇಷು ಸರ್ವೇಷು ತಥೇತಿಹಾಸೇತಿ' ಎಂದು (ಪೈಂಗಿ) ಶ್ರುತಿಯು ಹೇಳುವುದ-ರಿಂದಲೂ, ಅದೇ ಶ್ರುತಿಯು 'ಸರ್ವೇ ವೇದಾಯುಕ್ತಯಃ ಸುಪ್ರಮಾಣಾ ಬ್ರಾಹ್ಮಂ ಜ್ಞಾನಂ ಪರಮಂ ತ್ವೇಕಮೇವ' - ಸರ್ವಶಾಖಾದ್ಯುಪಾದ್ಯ ಜ್ಞಾನಕ್ಕೆ ಏಕವಿಧತ್ವವನ್ನು ಹೇಳುವುದರಿಂದಲೂ, 'ಓಂ ಗತಿ ಸಾಮಾನ್ಯಾತ್ ಓಂ' ಎಂಬ ಸೂತ್ರದಲ್ಲಿ ನಿರ್ಣಯಿಸಿರುವಂತೆ, ಉಪಲಬ್ಧ ಸರ್ವ ವೇದಗಳ ಜ್ಞಾನವನ್ನು ಸಂಪಾದಿಸಿದರೆ ಅನಂತ ವೇದಾರ್ಥಗಳನ್ನು ತಿಳಿದಂತೆಯೇ ಸರಿ. ಹೀಗೆಂದರೆ, ಯಾವುದೊಂದು ಶಾಖೆಯ ಜ್ಞಾನವನ್ನು ಸಂಪಾದಿಸಿದರೂ, ಅನಂತ ವೇದಾರ್ಥಗಳನ್ನು ತಿಳಿದಂತೆಯೇ ಎಂದು ಪ್ರಾಪ್ತವಾಗುತ್ತದೆಂಬ ಸಂಶಯವು ಯುಕ್ತವಲ್ಲ. ಪ್ರಸಿದ್ಧ ನಾನಾ ಶಾಖೆಗಳ ಜ್ಞಾನಕ್ಕೆ ಏಕವಿಧತ್ವ ಇದ್ದರೂ, ಹರಿಗುಣ ವಿಶೇಷಗಳನ್ನು ಪ್ರತಿಪಾದಿಸುತ್ತವೆಂಬ ವೈಲಕ್ಷಣ್ಯವೂ ಇದೆ. ವಿವಿಧ ಉಪಾಸನಾಧಿಕಾರಿಗಳಿಂದ ಉಪಾಸ್ಯವಾದ ಗುಣ ವಿಶೇಷಗಳೆಲ್ಲವನ್ನು ನಾನಾಶಾಖಾಯುಕ್ತ ಋಗಾದಿ ವೇದಗಳು ಒಳಗೊಂಡಿವೆ. ಹೀಗೆಂಬುದು ವೇದಪ್ರಕಾಶಕ ಶ್ರೀಬಾದರಾಯಣರ ಅಚಿಂತ್ಯ ಜ್ಞಾನಶಕ್ತಿಯಿಂದ ಉಪಪನ್ನವಾಗುತ್ತದೆ.

ರಮಾದೇವಿಯು ತಿಳಿಯುತ್ತಾಳೆ. ಆದರೂ ಆಕೆಯು ಉಪಾಸನಾಧಿಕಾರಿಗಳ ವರ್ಗಕ್ಕೆ ಸೇರಿದವಳಲ್ಲ. ನಿರಂತರ ಭಗವದುಪಾಸನೆಯಲ್ಲಿರುತ್ತಾಳಾದರೂ ಆಕೆಗೆ ಉಪಾಸನೆಯಿಂದ ಪ್ರಾಪ್ಯವಾದ ಫಲವಾವುದೂ ಇಲ್ಲ. ಅನಾದಿ ಕಾಲದಿಂದ ಶ್ರೀಹರಿಯ ಪೂರ್ಣಾನುಗ್ರಹದಿಂದ ಪೂರ್ಣಕಾಮಳಾಗಿದ್ದಾಳೆ. ಬ್ರಹ್ಮನಂತೆ ಇತರ ದೇವತೆಗಳಾರೂ ಭಗವದ್ಗುಣಗಳನ್ನು ತಿಳಿಯರು – ಕಡಿಮೆ ಗುಣಗಳನ್ನು ಮಾತ್ರ ಉಪಸಂಹರಿಸಿ ಧ್ಯಾನಿಸಬಲ್ಲರು. ಸಾಮಾನ್ಯ ದೇವತೆಗಳಿಗಿಂತ ರುದ್ರಾದಿತತ್ವಾಭಿಮಾನಿ ದೇವತೆಗಳು ಅತಿಶಯವಾದ ಭಗವದ್ಗುಣಗಳನ್ನು ತಿಳಿಯುತ್ತಾರೆ. ಮನುಷ್ಯಾದಿ ಅಧಮವರ್ಗಗಳ ಮುಕ್ತಿಯೋಗ್ಯರು ಕೆಲವೇ ಭಗವದ್ಗುಣಗಳನ್ನು ಚಿಂತಿಸಬಲ್ಲರು. ವೇದಗಳ ಶಾಖೋಪಶಾಖೆಗಳಲ್ಲಿ ಯಾವುದೊಂದರಲ್ಲಿ ಪ್ರತಿಪಾದಿಸಲ್ಪಡುವ ಮಹಿಮೆಗಳನ್ನು ಸಹ ಪೂರ್ಣವಾಗಿ ತಿಳಿಯಲಾರರು. ಜೀವಸ್ವರೂಪಯೋಗ್ಯತೆಗಳೇ ಭಿನ್ನಭಿನ್ನವಾಗಿವೆ. ಪ್ರತಿಯೊಬ್ಬ ಜೀವನಿಗೂ ಧ್ಯಾನಕಾಲದಲ್ಲಿ ತನ್ನ ಯೋಗ್ಯತೆಗೆ ತಕ್ಕಷ್ಟೇ (ಗೊತ್ತಾದ–ನೇಮಿತ) ಗುಣಗಳು ಮಾತ್ರ ಗೋಚರಿಸುತ್ತವೆ – ತಾನು ಚಿಂತಿಸಬಹುದಾದ ಎಲ್ಲ ಗುಣಗಳೂ ಅಲ್ಲ. ಹೀಗಿದ್ದರೂ ಶ್ರವಣ ಮನನಗಳಿಂದ ಮನಸಾ ಗ್ರಹಿಸಿದ ಎಲ್ಲ ಗುಣಗಳ ಜ್ಞಾನಯುಕ್ತನಾಗಿಯೇ ಧ್ಯಾನದಲ್ಲಿ ತೊಡಗಬೇಕು. ಬಹು ಗುಣಗಳನ್ನು ಚಿಂತಿಸಿದರೂ ಯೋಗ್ಯತೆಯಿದ್ದಷ್ಟು ಗುಣಗಳು ಮಾತ್ರ ಏಕದಾ ಸ್ಪಷ್ಟವಾಗಿ ಧ್ಯಾನದಲ್ಲಿ ಗೋಚರಿಸುತ್ತವೆ. ಈ ಗುಣಪ್ರತೀತಿಗೆ ಸ್ವಯೋಗ್ಯತೆಯೇ ಕಾರಣವು. ಬ್ರಹ್ಮದೇವನಿಗೆ ಉಪಾಸಿತ ಸರ್ವಗುಣಗಳು ಪ್ರತೀತವಾಗುತ್ತವೆ. **'ಯಸ್ಯ ಯಾವದ್ಗುಣಾಃ ಸ್ಪಷ್ಟಂ ಪ್ರತಿಭಾಸಯಂತ್ಯುಪಾಸನೇ । ಯುಗಪತ್ ಸ್ವಭುಜೌ ಯದ್ವತ್ ಧ್ಯಾಯೇತ್ತಾವತ ಏವ ಸಃ ॥ ಯುಗಪದ್ಬ್ರಹ್ಮಣಃ ಸರ್ವೇ ಭಾಸಂತೇ ಹಿ ಗುಣಾ ಹರೇಃ । ತದನ್ಯೇಷಾಂ ಯಥಾ ಯೋಗ್ಯಂ ಸ್ವಮಹಾತ್ಮ್ಯಾನುಸಾರತಃ ॥'** ಎಂಬ ಶ್ರುತಿಯು, ಧ್ಯಾನಕಾಲದಲ್ಲಿ ಏಕದಾ ಎಷ್ಟು ಗುಣಗಳು ಪ್ರತೀತವಾಗುವುವೋ ಅಷ್ಟನ್ನು ಮಾತ್ರ ಧ್ಯಾನಿಸಬೇಕೆಂದೂ, ಗುಣಪ್ರತೀತಿಯು ಜೀವಯೋಗ್ಯಾತಾನುಗುಣವಾಗಿರುವುದೆಂದೂ, (ಬ್ರಹ್ಮ ದೇವನಿಗೆ ಸರ್ವಗುಣಗಳೂ, ಅನ್ಯರಿಗೆ ಯಥಾಯೋಗ್ಯವಾಗಿಯೂ ಗುಣಪ್ರತೀತಿಯಾಗುವುದೆಂದೂ) ಹೇಳುತ್ತದೆ. ಆದ್ದರಿಂದ ಶ್ರವಣ ಮನನಗಳಿಂದ

ಸಕಲ ವೇದಗಳನ್ನು ಏಕೆ ತಿಳಿಯಬೇಕೆಂಬ ಸಂಶಯವು ಪರಿಹಾರವಾಗದೇ ಉಳಿಯುತ್ತದೆ. ದೇವಾನ್ಯ ಜೀವರು (ಸಕಲ ಮುಕ್ತಿಯೋಗ್ಯರು) ಸರ್ವಗುಣ ಅಥವಾ ಬಹುಗುಣ ಪ್ರತೀತಿಯುಕ್ತ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲು ಅನಧಿಕಾರಿಗಳಾದರೂ, ಬಹುಗುಣ ಜ್ಞಾನಕ್ಕೆ ಅರ್ಹರಾಗಿರುವರು. ಸಾಕ್ಷಾತ್ಕಾರದಲ್ಲಿ ಪ್ರತೀತವಾಗದ ಗುಣಜ್ಞಾನಕ್ಕೂ ಪ್ರಯೋಜನವುಂಟು. ಆ ಗುಣಜ್ಞಾನವು, ಸ್ವಯೋಗ್ಯತಾನುಗುಣವಾದ ಅಪರೋಕ್ಷಕ್ಕೆ ಅವಶ್ಯಕವಾದ ಭಗವದ್ಗುಣಗಳು ಏಕದಾ ಸ್ಪಷ್ಟವಾಗಿ ಗೋಚರಿಸಲು ಸಹಾಯಕವಾಗುತ್ತದೆ. ಅಪರೋಕ್ಷ-ವಾಗುವವರೆಗೆ ಯಾರಿಗೂ ಸ್ವಯೋಗ್ಯತೆಯ ಜ್ಞಾನವಿರುವುದಿಲ್ಲ - ಎಷ್ಟು ಮತ್ತು ಯಾವ ಗುಣಗಳ ಪ್ರತೀತಿ ಸಹಿತವಾದ ಸಾಕ್ಷಾತ್ಕಾರಕ್ಕೆ ತಾನು ಅರ್ಹನೆಂಬುದು ತಿಳಿದಿರುವುದಿಲ್ಲ. ಆದ್ದರಿಂದ (ಉಪಲಬ್ಧವಿರುವ) ಸರ್ವ ವೇದೋಕ್ತ ಗುಣಗಳ ಜ್ಞಾನವನ್ನು ಯಥಾಶಕ್ತಿ ದೊರಕಿಸಿಕೊಳ್ಳಲು ಸರ್ವರೂ ಯತ್ನಿಸಬೇಕೆಂಬ ನಿರ್ಣಯವು ಸಾಧುವೇ ಸರಿ. ಉಪಾಸನಾಧಿಕಾರ ಬೇರೆ (ಗುಣ) ಜ್ಞಾನಾಧಿಕಾರ ಬೇರೆ : ಎಂಬ ವಿವೇಕವನ್ನು ಸ್ಪಷ್ಟವಾಗಿ ಗ್ರಹಿಸಬೇಕು. ಸರ್ವಗುಣ ಪ್ರತ್ಯಯ (ಪ್ರತೀತಿ) ಸಹಿತ ಸಾಕ್ಷಾತ್ಕಾರಕ್ಕೆ ಋಜುಗಣದ ಜೀವರೇ ಅರ್ಹರು. ಇತರ ಮುಕ್ತಿಯೋಗ್ಯರಲ್ಲಿ ಏಕ ಗುಣೋಪಾಸಕರೂ ಇರುವರು. ಇವರು 'ಆತ್ಮಾಸ್ವಾಮೀ' ಎಂಬ ಒಂದೇ ಗುಣ ಪ್ರತ್ಯಯ ಸಹಿತ ಸಾಕ್ಷಾತ್ಕಾರವನ್ನು ಹೊಂದುತ್ತಾರೆ. ಏಕಗುಣೋಪಾಸಕರೇ ಮೊದಲಾದ ಎಲ್ಲ ಮುಕ್ತಿಯೋಗ್ಯರೂ ಮನುಷ್ಯ ದೇಹವನ್ನು ಹೊಂದಿಯೇ ಸಾಧನ ಮಾಡಿಕೊಳ್ಳಬೇಕಾದುದರಿಂದ, ಸರ್ವರೂ, ಸತ್-ಚಿತ್-ಆನಂದ-ಆತ್ಮಾ ಎಂಬ ನಾಲ್ಕು ಗುಣಗಳನ್ನು ಭಗವಂತನಲ್ಲಿ ಉಪಸಂಹಾರ ಮಾಡಿ, ಧ್ಯಾನಿಸಬೇಕೆಂದು, **'ಓಂ ಆನಂದಾದಯಃ ಪ್ರಧಾನಸ್ಯ ಓಂ'** ಎಂಬ ಸೂತ್ರದಲ್ಲಿ ನಿರ್ಣಯಿಸಲಾಗಿದೆ. ಈ ಚತುರ್ಗುಣೋಪಾಸನೆಯಲ್ಲಿ ಮನುಷ್ಯೋತ್ತಮ ಜೀವರು ಅಧಿಕಾರಿಗಳೆಂದು ಸಹ ನಿರ್ಣಯಿಸಲಾಗಿದೆ. ಈ ನಾಲ್ಕು ಗುಣಗಳನ್ನಾದರೂ ಒಂದೊಂದೂ ಪರಿಪೂರ್ಣವೂ ಮತ್ತು ವಿಲಕ್ಷಣವೂ ಆದುದೆಂದು ಚಿಂತಿಸಬೇಕು. ನಾನಾ ವೇದ ಶಾಖೆಗಳಲ್ಲಿ ಬಹು ಪ್ರಕಾರದ

ವಿದ್ಯೆಗಳು[30] ಪ್ರತಿಪಾದಿಸಲ್ಪಡುತ್ತವೆ. ಬಹು ಪ್ರಕಾರದ ಈ ವಿದ್ಯೆಗಳಲ್ಲಿ ಪ್ರತಿಪಾದಿಸಲಾಗುವ ಭಗವದ್ಗುಣಗಳ ಜ್ಞಾನವು, ಸ್ವಯೋಗ್ಯ ಗುಣಪ್ರತ್ಯಯ ಸಹಿತ ಸಾಕ್ಷಾತ್ಕಾರಕ್ಕೂ, ಈ ಗುಣಗಳ ಪೂರ್ಣತ್ವ ಲೋಕವಿಲಕ್ಷಣತ್ವಗಳ ಭಾವನೆಗೂ ಸಹಾಯವಾಗುವುದೆಂಬುದನ್ನು ಯುಕ್ತಿಯಿಂದಲೂ ಗ್ರಹಿಸಬಹುದು. ಆದ್ದರಿಂದ ಯಥಾಶಕ್ತಿ ಸರ್ವವೇದಾರ್ಥ ಜ್ಞಾನಕ್ಕಾಗಿ ಯತ್ನಿಸಬೇಕು.[31]

ಮುಕ್ತಿಯಲ್ಲಿ ಎಲ್ಲ ಜೀವರಿಗೆ ಸಮಾನವಾದ ಆನಂದವು ಲಭಿಸುವುದಿಲ್ಲ. ಮುಕ್ತರ ಆನಂದವು ತಾರತಮ್ಯ ಯುಕ್ತವಾದುದೆಂಬುದು ಶ್ರುತಿಸಿದ್ಧ[32] ವಾದ್ದರಿಂದ ಉಪಾಸನಾ ತಾರತಮ್ಯವೂ ಯುಕ್ತವಾಗುತ್ತದೆ. ಉಪಾಸನಾ ಲಭ್ಯ ಅಪರೋಕ್ಷದಲ್ಲಿ ಸಹ ತಾರತಮ್ಯವುಂಟು.[33] ಉಪಾಸನಾನುಸಾರವಾಗಿಯೇ ಫಲವೂ ಲಭಿಸುತ್ತದೆ. ಆನಂದಾದಿ ಚತುರ್ಗುಣಗಳಿಂದ ಆರಂಭವಾಗುವ ಧ್ಯಾನದಲ್ಲಿ, ಯೋಗ್ಯತಾನುಗುಣವಾದ ಗುಣಗಳು ಮಾತ್ರ ಏಕದಾ ಪ್ರತೀತವಾಗುತ್ತವೆ. ಈ ನಾಲ್ಕು ಗುಣಗಳಲ್ಲಿಒಂದಾದ 'ಆತ್ಮ' ಗುಣವು ಬಹು ಪ್ರಧಾನವಾದುದು. ಯಾವ ಮೋಕ್ಷಾಧಿಕಾರಿಯೂ, 'ಆತ್ಮ' ಗುಣೋಪಾಸನೆಯನ್ನು ಬಿಡುವಂತಿಲ್ಲ. ಆತ್ಮತ್ವ ಗುಣವು ಉಪಾಸಕನ ಯೋಗ್ಯತಾನುಸಾರ, ಆನಂದಾದಿ ಚತುರ್ಗುಣಗಳ, ದೇವತೋಪಾಸ್ಯ (ಪ್ರಿಯಶಿರಸ್ತ್ವಾದಿ)

---

30. ಒಂದೊಂದು ವಿದ್ಯೆಯೂ ಗುಣಜ್ಞಾನ ಸಹಿತವಾದ ಭಗವದುಪಾಸನೆಯನ್ನು ನಿರೂಪಿಸುತ್ತದೆ. ವೇದಪ್ರಣಿಹಿತ ವಿದ್ಯೆಗಳು ಬಹುವಾಗಿವೆ. ಆ ವಿದ್ಯೆಗಳಿಗೆ ಅಧಿಕಾರಿಗಳಾದ (ಉಪಾಸಿಸಿ ಫಲವನ್ನು ಹೊಂದುವ) ಜೀವ ಸಮೂಹಗಳೂ ಪ್ರತ್ಯೇಕವಾಗಿವೆ.

31. ಬಹು ಜನ್ಮಗಳಲ್ಲಿ ಇದು ಸಾಧಿಸುತ್ತದೆ, ಪ್ರತಿ ಜನ್ಮದ ಸಂಸ್ಕಾರವು ಜೀವನೊಂದಿಗೆ ಜನ್ಮಾಂತರಗಳಿಗೂ ಬರುತ್ತದೆ. ಆದ್ದರಿಂದ ಎಲ್ಲ ವೇದಗಳನ್ನು ಒಂದು ಜನ್ಮದಲ್ಲಿ ಪೂರ್ತಿಗೊಳಿಸುವುದು ಹೇಗೆ ಸಾಧ್ಯವೆಂಬ ಭಯಕ್ಕೆಡೆಯಿಲ್ಲ.

32. ಈ ಪ್ರಮೇಯ ವಿವರಗಳನ್ನು ರತ್ನ 5ರಲ್ಲಿ ಕಾಣುತ್ತೀರಿ.

33. ಧ್ಯಾನಕಾಲದಲ್ಲಿ ಎಷ್ಟು ಗುಣಗಳು ಏಕದಾ ಗೋಚರಿಸುವುವೋ ಅವುಗಳನ್ನು ಧ್ಯಾನಿಸುವುದು ಗುಣೋಪಸಂಹಾರ ಧ್ಯಾನವು. ಗುಣಜ್ಞಾನ ಸಹಿತ ಧ್ಯಾನಕ್ಕೂ, ಗುಣೋಪಸಂಹಾರರೂಪ ಧ್ಯಾನಕ್ಕೂ ಇರುವ ಅಂತರವನ್ನು ಗಮನದಲ್ಲಿಟ್ಟುಕೊಂಡಿರಬೇಕು.

ಬಹುಗುಣಗಳ, ಚತುರ್ಮುಖೋಪಾಸ್ಯ ಸರ್ವಗುಣಗಳ ಪ್ರತಿಪಾದಕವೂ ಆಗಿದೆ. **'ಆತ್ಮೇತ್ಯೇವೋಪಾಸೀತ'** ಎಂಬ ಶೃತಿಯು, ಒಂದೇ ಗುಣವನ್ನು ಉಪಾಸಿಸಬೇಕೆಂದು ಹೇಳುವುದಿಲ್ಲ. - ಆತ್ಮಗುಣವನ್ನು ಯಾರೂ ಬಿಡ-ತಕ್ಕದ್ದಲ್ಲವೆಂದು ಹೇಳುತ್ತದೆ. ಅಲ್ಲಿರುವ 'ಏವ' ಕಾರವು ಇದನ್ನೇ ಸೂಚಿಸುತ್ತದೆ.

ಉಪಾಸನೆಯ ಫಲವೇ ಅಪರೋಕ್ಷ ಮತ್ತು ಅಪವರ್ಗಗಳು (ಸಾಕ್ಷಾತ್ಕಾರ ಮತ್ತು ಮೋಕ್ಷಗಳು). ಈ ಉಭಯಾತ್ಮಕ ಫಲವೂ ಅಲೌಕಿಕವಾದುದು - ಎಂದರೆ ಸಂಸಾರಾವಸ್ಥೆಯಲ್ಲಿರುವ ಯಾರಿಂದ ಎಂದೂ ಅನುಭವಿಸಲ್ಪಡದ, ಆತ ಏವ, ಅವರ ಕಲ್ಪನೆಗೆ ಮೀರಿದ ಸ್ಥಿತಿಗಳು. ಇಂದ್ರಿಯ ಜನ್ಯ ಆನಂದವನ್ನು ಮಾತ್ರ ಅರಿತಿರುವ ಸಾಧಕನಾದ ಭಗವದುಪಾಸಕನು, ಪರಮಾತ್ಮನು ತದ್ವಿಧ ಆನಂದದಿಂದ ಪೂರ್ಣನೆಂದು ಭಾವಿಸಿ, (ಜನ್ಯಾನಂದದ ಆಧಿಕ್ಯವನ್ನು ಮಾತ್ರ ಚಿಂತಿಸಿದರೆ, ಲೋಕವಿಲಕ್ಷಣವಾದ ಮೋಕ್ಷಾನಂದವನ್ನು , ಆ ಉಪಾಸನಾಫಲ-ರೂಪವಾಗಿ ಹೊಂದಲಾರನು. **'ಆನಂದೋ ನೇದೃಶಾನಂದಃ'** ಇತ್ಯಾದಿ ಶ್ರುತಿಗಳು ಹೇಳುವಂತೆ, ಭಗವಂತನು ಪೂರ್ಣಾನಂದನಾದರೂ, (ಆನಂದಸ್ವರೂಪನೇ ಆದರೂ), ಲೋಕವಿಲಕ್ಷಣವಾದ ಆನಂದವುಳ್ಳವನೆಂದೇ ಧ್ಯಾನಿಸಬೇಕು. ಇದರಂತೆ ಜ್ಞಾನಾದಿ ಇತರ ಗುಣಗಳೂ ವಿಲಕ್ಷಣಗಳೆಂದೇ ಚಿಂತಿಸಬೇಕು.

ಉಪಾಸನಾನುಸಾರವಾದ ಫಲವುಳ್ಳದುದು ಮೋಕ್ಷವು. ಬ್ರಹ್ಮ-ವಾಣಿಯರಿಬ್ಬರೂ, ಪರಮಾತ್ಮನನ್ನು ಸರ್ವಗುಣೋಪಸಂಹಾರದಿಂದ ಧ್ಯಾನಿಸಿ, ಸರ್ವಗುಣ ಪ್ರತ್ಯಯಯುಕ್ತ ಸಾಕ್ಷಾತ್ಕಾರವನ್ನು ಪಡೆದವರು. ಹೀಗಿದ್ದರೂ ಮುಕ್ತಿಯಲ್ಲಿ, ವಾಣಿಯ ಆನಂದವು ಶತಗುಣದಿಂದ ಕಡಿಮೆ (ಬ್ರಹ್ಮನ ಆನಂದಕ್ಕಿಂತ) ಯೆಂದು ಹೇಳಲಾಗುವುದರಿಂದ ಉಪಾಸನಾನುಸಾರ ಫಲವೆಂಬಲ್ಲಿ ಸಹಜವಾಗಿ ಸಂಶಯವುಂಟಾಗುತ್ತದೆ. ಆದರೆ ಈ ಸಂಶಯಕ್ಕೆ ಆಧಾರವಿಲ್ಲ - **ಅವರಿಬ್ಬರ ಉಪಾಸನೆಯಲ್ಲಿ ಸಾಮ್ಯವಿಲ್ಲ - ವಿಶೇಷವಿದೆ.** ಭಗವಂತನ ಗುಣಕ್ರಿಯಾದಿಗಳನ್ನು ಚಿಂತಿಸುವುದರಲ್ಲಿ ವಾಣಿಯು ಕ್ರಿಯಾ ಸಾಮಾನ್ಯವನ್ನೂ ಬ್ರಹ್ಮನು ಕ್ರಿಯಾವಿಶೇಷಗಳನ್ನೂ ಉಪಸಂಹಾರ ಮಾಡುವರೆಂಬ, ವೈಲಕ್ಷಣ್ಯವಿದೆ. ಶ್ರೀ ಹರಿಯ ರೂಪ-ಗುಣ-ಕ್ರಿಯಾದಿಗಳು

ನಿತ್ಯ ಮತ್ತು (ಆತನ ಸ್ವರೂಪದಿಂದ) ಅಭಿನ್ನ. ಉದಾಹರಣೆ :- ವಾಮನ ಅವತಾರದಿಂದ ಪ್ರಕಟಗೊಳಿಸಿದ ತ್ರಿವಿಕ್ರಮ ರೂಪವೂ ಅದರಿಂದಾದ ಕ್ರಿಯೆಗಳೂ ನಿತ್ಯವಾದವುಗಳು. ತ್ರಿವಿಕ್ರಮ ರೂಪದಿಂದಾದ ಪಾದಕ್ರಮಣ ರೂಪ ಕ್ರಿಯೆಯ (ಪಾದವನ್ನು ಬೆಳೆಸಿ, ಲೋಕಗಳನ್ನು ಆಕ್ರಮಿಸಿದುದು) ವಾಮನ ರೂಪದ ಸಾಮಾನ್ಯ ನಿತ್ಯಕ್ರಿಯೆಗಳಲ್ಲಿ ಅಂತರ್ಭಾವಗೊಳ್ಳುತ್ತದೆ. ಬ್ರಹ್ಮದೇವನು ತ್ರಿವಿಕ್ರಮ ರೂಪದಿಂದ ಭೂಮ್ಯಂತರಿಕ್ಷಗಳನ್ನು ಅಳೆದುಕೊಂಡ ಕ್ರಿಯಾ ವಿಶೇಷವನ್ನೂ ಉಪಸಂಹಾರ ಮಾಡುತ್ತಾನೆ - ವಾಣಿಯು ನಿತ್ಯಕ್ರಿಯಾ ಸಾಮಾನ್ಯವನ್ನು ಮಾತ್ರ ಧ್ಯಾನಿಸುತ್ತಾಳೆ. ಕಾಲವಿಶೇಷಗಳಲ್ಲಿ ಮಾತ್ರ ಪ್ರಕಟಮಾಡಲ್ಪಡುವ ಕ್ರಿಯಾವಿಶೇಷಗಳೂ ನಿತ್ಯವೇ. ಕ್ರಿಯಾ ವಿಶೇಷೋಪ-ಸಂಹಾರಪೂರ್ವಕ ಧ್ಯಾನವು ಚತುರ್ಮುಖನಿಂದ ಮಾತ್ರ ಸಾಧ್ಯವಾದುದು. ಹೀಗೆ ಸರ್ವ ಗುಣೋಪಸಂಹಾರದಿಂದ ಧ್ಯಾನಿಸುವ ಉತ್ತಮಾಧಿಕಾರಿಗಳ ಉಪಾಸನೆಯಲ್ಲಿ ಸಹ, ಸೂಕ್ಷ್ಮ ವೈಲಕ್ಷಣ್ಯವಿರುವಾಗ, ಸರ್ವಮುಮುಕ್ಷು ಸಾಮಾನ್ಯ ಆತ್ಮಗುಣೋಪಾಸನೆಯಿಂದ, ಅವರವರ ಯೋಗ್ಯತಾನುಗುಣವಾದ ಭಗವದ್ಗುಣಗಳ ಪ್ರತ್ಯಯವುಂಟಾಗುವುದೆಂದು ಅಂಗೀಕರಿಸುವುದು ಅಯುಕ್ತ-ವೆನಿಸುವುದಿಲ್ಲ. ಆದ್ದರಿಂದ ಆತ್ಮತ್ವ ಗುಣವು ಸರ್ವೋಪಾಸ್ಯವೇ ಸರಿ. ಕೆಲವು ವಿಶಿಷ್ಟ ಗುಣಗಳು, ಸಂಭೃತಿ-ದ್ಯುವ್ಯಾಪ್ತಿ ಎಂದರೆ ಸರ್ವರಕ್ಷಕ-ವಿಲಕ್ಷಣ ಪ್ರಕಾಶವುಳ್ಳವ, ಮತ್ತು '**ಅಗ್ನೇತ್ವಚಂ ಯಾತುಧಾನಸ್ಯ ಭಿಂದಿ**' ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಡುವ, ಭಿಂದಿ - ಛಿಂದಿ (ಸೀಳು - ಕತ್ತರಿಸು) ಇತ್ಯಾದಿ ಭಗವಂತನ ಗುಣಕ್ರಿಯೆಗಳು ಸರ್ವರಿಂದ ಉಪಾಸ್ಯಗಳಲ್ಲ - ದೇವಾದಿ ಉತ್ತಮಾಧಿಕಾರಿಗಳಿಗೆ ಸಹ ಕಾಲವಿಶೇಷಗಳಲ್ಲಿ, ವಿಶಿಷ್ಟ ಫಲಪ್ರಾಪ್ತ್ಯರ್ಥವಾಗಿ ಉಪಾಸ್ಯಗಳೆಂದು ನಿರೂಪಿತವಾಗಿವೆ.

ಭಗವದುಪಾಸನೆಗೆ ಮೋಕ್ಷಕ್ಕಿಂತ ಉತ್ತಮಫಲವಿಲ್ಲ. ಮೋಕ್ಷಕ್ಕಿಂತ ಉತ್ತಮವಾದ ಬೇರಾವ ಫಲವೂ ಇಲ್ಲವೇ ಇಲ್ಲ. ಹೀಗಿದ್ದರೂ, ಆ ಫಲ ಪ್ರಾಪ್ತಿನಂತರವೂ ಮುಕ್ತರು ನಿರಂತರ ಭಗವಂತನನ್ನು ಉಪಾಸಿಸುತ್ತಾರೆ. ಮುಕ್ತರ ಉಪಾಸನೆಗೆ ಬೇರಾವ ಫಲವೂ ಇಲ್ಲ. ಹೀಗೆಂಬುದರಿಂದ ಮುಕ್ತರ ಉಪಾಸನೆಯು ವ್ಯರ್ಥವೆಂದು ತಿಳಿಯಕೂಡದು. ಉಪಾಸನೆಯು ಆನಂದ

ಸ್ವರೂಪರಾದ ಮುಕ್ತರ ಸ್ವಭಾವವೇ ಆಗಿದೆ. ಮುಕ್ತೋಪಾಸನೆಯು ಸಾಧನ ರೂಪವಲ್ಲ - ಸಾಧ್ಯರೂಪವೇ. ಇದು ಯುಕ್ತಿ ಯುಕ್ತವೂ ಆಗಿದೆ. ನಿರಂತರವಾದ ಉಪಾಸನೆಯ ಫಲವಾಗಿ ದೊರೆತಿರುವ ಮುಕ್ತಿಯಲ್ಲಿ, ಪೂರ್ವಾಭ್ಯಾಸ ಬಲದಿಂದ ಉಪಾಸನೆಯಲ್ಲಿ ತೊಡಗುವರೆಂಬುದು ಯುಕ್ತಿವಿರೋಧವಲ್ಲ - ಉಪಪನ್ನವೇ ಆಗಿದೆ. ಇದರಂತೆಯೇ ಅರ್ಚನಾದಿ ಕರ್ಮಗಳೂ ಎಂದು ತಿಳಿಯಬಾರದು. ಏಕೆಂದರೆ ಮಾನಸಿಕ-ವಾಚಿಕರೂಪದ ಉಪಾಸನೆಗೆ ಪೂರ್ವಾಭ್ಯಾಸದ ನೈರಂತರ್ಯ (ಸಂತತವಾಗಿ ಆಚರಿಸುವುದೆಂಬ) ಬಲವಿದ್ದಂತೆ, ಕಾಯಿಕ ಕರ್ಮಗಳಿಗೆ ನಿರಂತರಾಚರಣಪ್ರಾಪ್ತ ಸಂಸ್ಕಾರವೆಂಬ ಪ್ರಬಲ ಕಾರಣವಿಲ್ಲ. ಆದ್ದರಿಂದ ಮುಕ್ತರು, ಅರ್ಚನಾದಿ ಪೂಜಾರೂಪದ ಕರ್ಮಗಳನ್ನು (ಸಂಸಾರಾವಸ್ಥೆಯಲ್ಲಿದ್ದಾಗ ಕಾಲಕಾಲಕ್ಕೆ ಆಚರಿಸುತ್ತಿದ್ದ ವಿಧಿನಿಷೇಧರೂಪದ ಕರ್ಮಗಳನ್ನು) ಮುಕ್ತಿಯಲ್ಲಿಯೂ ಆಚರಿಸುತ್ತಾರೆಂಬ ನಿಯಮವಿಲ್ಲ - ಸ್ವೇಚ್ಛೆಯಿಂದ ಆಚರಿಸುತ್ತಾರೆ ಅಥವಾ ಬಿಡುತ್ತಾರೆ. ಮುಕ್ತರು ವಿಧಿನಿಷೇಧಗಳಿಂದ ಬದ್ಧರಲ್ಲ. ಆದರೂ ಸದಾ ಅವರು ಶ್ರೀಹರಿಯ ಅಧೀನರೇ, ಶ್ರೀ ಹರೀಚ್ಛೆಗೆ ಅನುಸಾರವಾದ ಇಚ್ಛೆಗಳೇ ಮುಕ್ತರಿಗೆ ಉಂಟಾಗುತ್ತವೆ.

ಜ್ಞಾನ ಯೋಗ್ಯರಿಗೆ ಮಾತ್ರ ಶ್ರವಣಾದಿಗಳಿಂದ ಯಥಾರ್ಥಜ್ಞಾನ ಲಾಭವೆಂದೂ, ಈ ಅಧಿಕಾರಿಗಳಿಗೆ ಮಾತ್ರ ಅಪರೋಕ್ಷವೆಂದೂ, ಅಪರೋಕ್ಷ ಸಾಧ್ಯಭಗವತ್ಪ್ರಸಾದದಿಂದಲೇ ಮೋಕ್ಷವೆಂದೂ, ಮುಕ್ತರ ಆನಂದವು ತಾರತಮ್ಯಯುಕ್ತವಾದುದೆಂದೂ ಹೇಳಿದ್ದರಿಂದ, ಅಧಿಕಾರಿನಿಯಮಕ್ಕೆ ಪ್ರಾಮುಖ್ಯತೆಯನ್ನು ಹೇಳಿದಂತಾಯಿತು. ಲೋಕದಲ್ಲಿ ಯತ್ನಾನುಗುಣ-ವಾದ ಫಲವು ಕಂಡುಬರುತ್ತದೆ - ಅಧಿಕಾರಿ ನಿಯಮಾನುಸಾರವಲ್ಲ. ಉಪಾಸನೆಯೂ ಯತ್ನರೂಪವಾದ ಕ್ರಿಯೆಯು. ಯಾರೊಬ್ಬನು ಅತಿ ಪ್ರಯತ್ನಶೀಲನಾಗಿ ಉಪಾಸನಾ ಯೋಗ್ಯತೆಯನ್ನು ಅಭಿವೃದ್ಧಿಪಡಿಸಿಕೊಂಡು, ತದನುಗುಣವಾದ ಅಧಿಕ ಮೌಕ್ತಿಕಾನಂದವನ್ನು ಹೊಂದಬಹುದಲ್ಲವೇ? ಎಂಬ ಸಂಶಯವು ತೋರಬಹುದು. ಆದರೆ ಅದು ಯುಕ್ತವಲ್ಲ. ಯದ್ಯಪಿ ಮುಕ್ತಿಯಲ್ಲಿ ದೊರೆಯುವ ಆನಂದವು ಯತ್ನಾನುಗುಣವೇ ಸರಿ. ಆದರೆ ಪ್ರಯತ್ನವೂ ಅಧಿಕಾರಿನಿಯಮವನ್ನು ಅನುಸರಿಸುತ್ತದೆ.

ಯೋಗ್ಯತೆಯನ್ನು ಅತಿ ಕ್ರಮಿಸಿದ ಯತ್ನವು ಯಾರಿಂದಲೂ ನಡೆಯುವುದಿಲ್ಲ. ಇಷ್ಟು ಮಾತ್ರವಲ್ಲ; ಲೌಕಿಕಾಧಿಕಾರವನ್ನು ಮೀರಿದ ಯತ್ನವು ಲೋಕದಲ್ಲಿ ಸಹ ದುಷ್ಟವೆಂದೇ ಭಾವಿಸಲ್ಪಡುವಂತೆ, ಭಗವದುಪಾಸನೆಯೂ ಅಧಿಕಾರಿ ನಿಯಮಬದ್ಧವೇ ಆಗಿದ್ದು, ಯೋಗ್ಯತೆಯನ್ನು ಮೀರಿದ ಉಪಾಸನೆಯು ವಿನಾಶಕ್ಕೆ ಕಾರಣವಾಗುತ್ತದೆ. '**ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ**' ಎಂಬ ನಿರ್ಣಯವಿದೆ.

ಉಪಾಸನಾಧಿಕಾರಿಗಳಲ್ಲಿ ಮುಖ್ಯ ಪ್ರಾಣದೇವನು ಉತ್ತಮನು. ವಾಯುದೇವನೇ ಮುಖ್ಯ ಪ್ರಾಣನು. ಬ್ರಹ್ಮವಾಯುಗಳು ಸಮರು. ಉಭಯರೂ ಜೀವೋತ್ತಮರು. ಮುಖ್ಯಪ್ರಾಣನಿಗೂ ಸ್ವಾಮಿಯಾದ ಶ್ರೀ ವಿಷ್ಣುವೇ ಸರ್ವೋತ್ತಮನು. ನಿತ್ಯಮುಕ್ತಳಾದ ರಮಾದೇವಿಯು ಜೀವೋತ್ತಮನಾದ ಮುಖ್ಯಪ್ರಾಣನಿಗಿಂತ ಉತ್ತಮಳು. ಹೀಗೆಂಬ ಜ್ಞಾನವು ಮುಮುಕ್ಷುಗಳಿಗೆ ಅತ್ಯವಶ್ಯಕವು. ಮುಖ್ಯಪ್ರಾಣನ ಮಹಿಮೆಗಳನ್ನು ಗರುಡ ಶೇಷಾದಿಗಳು ಸಹ ಪೂರ್ಣವಾಗಿ ವರ್ಣಿಸಲಾರರು – ಈತನ ಮಹಿಮೆಯು ಅಷ್ಟು ಅಪಾರವಾದುದು. ಜೀವಶ್ರೇಷ್ಠನಾದ ಮುಖ್ಯಪ್ರಾಣನ ಮಹಿಮೆಯೇ ಹೀಗಿರಲು, ಆತನನ್ನೂ ಆಳುವ ಈಶರಾದ ರಮಾ ನಾರಾಯಣರ ಮಹಿಮೆಗಳು ಅತ್ಯದ್ಭುತವೂ ವರ್ಣಿಸಲಾಗದಷ್ಟು ಅನಂತವೂ ಆಗಿರುವುದೆಂದು ಹೇಳಲೇನು? ಮುಖ್ಯಪ್ರಾಣನ ಮಹಿಮೆಗಳನ್ನು ಪ್ರಸಂಗೋಚಿತವಾಗಿ ಹಿಂದಿನ ರತ್ನಗಳಲ್ಲಿ, ಅಲ್ಲಲ್ಲಿ, ವರ್ಣಿಸಲಾಗಿದೆ. ಉಪಾಸನಾಧಿಕಾರಿಗಳಲ್ಲಿ ಶ್ರೇಷ್ಠನೆಂದು ನಿರ್ಣಯಿಸಲಾಗಿರುವ ಈ ಪ್ರಸಂಗದಲ್ಲಿ, ಆತನ ಮಹಿಮೆಗಳಲ್ಲಿ ಪ್ರಧಾನವಾದವುಗಳನ್ನು ಸಂಕ್ಷೇಪವಾಗಿ ಸಂಗ್ರಹಿಸುವುದು ಅಪ್ರಾಸಂಗಿಕವಲ್ಲ.

ಶ್ರೀ ವಾಯುದೇವರೇ ಮುಖ್ಯಪ್ರಾಣರು. ಇವರು ರಮಾನಾರಾಯಣರ ನಂತರ ಸಕಲವೇದ ಮುಖ್ಯ ಪ್ರತಿಪಾದ್ಯರಾಗಿದ್ದಾರೆ – ಬ್ರಹ್ಮಾಂಡದಲ್ಲಿ ಅಣುರೇಣುತೃಣಗಳಲ್ಲಿ ಸಹ ವ್ಯಾಪ್ತಿಯುಳ್ಳವರು. **ಅವರ ಜ್ಞಾನವು ಅನಾದಿಕಾಲದಿಂದ ಜಗದ್ವಿಷಯದಲ್ಲಿ ಪೂರ್ಣವಾದುದು.** ಆಲೋಚನಮಾತ್ರದಿಂದ

(ಅನಾಯಾಸವಾಗಿ) ಜಗದ್ವಸ್ತುಗಳೆಲ್ಲವನ್ನೂ (ಚೇತನಾಚೇತನ ಸರ್ವವನ್ನೂ), ಅಶೇಷ ವಿಶೇಷಗಳೊಂದಿಗೆ, ಅಂಗೈಲಿರುವ ವಸ್ತುವಿನಂತೆ ಸ್ಪಷ್ಟವಾಗಿ ತಿಳಿಯುತ್ತಾರೆ. ಅವರಲ್ಲಿ ಅಜ್ಞಾನ-ಮಿಥ್ಯಾಜ್ಞಾನಗಳ ಲೇಶವೂ ಇಲ್ಲ. ತನ್ನಿಮಿತ್ತಗಳಾದ ಭಯ ದುಃಖಾದಿಗಳೂ ಇಲ್ಲ. ಈಶಾಧೀನರಾದ ಸಕಲ ಜೀವಕೋಟಿಯಲ್ಲಿ (ಜೀವವರ್ಗದಲ್ಲಿಯೇ) ಶ್ರೀಹರಿಗೆ ಅತಿ ಪ್ರಿಯರು-ದಾಸಶ್ರೇಷ್ಠರು. ದುಃಖಸ್ಪೃಷ್ಟರಾದ ಜೀವಕೋಟಿ ಪ್ರವಿಷ್ಟರೆಂಬುದನ್ನು ಸಾರ್ಥಕಗೊಳಿಸಲಿಕ್ಕಾಗಿ, ಬ್ರಹ್ಮಪದವಿಗೆ ಬಂದಾಗ ಸಹ, ತಮ್ಮ - ದೀರ್ಘ-ಕಾಲಾವಧಿಯ 'ಪರ' ನಾಮಕ ಇಡೀ ಆಯುಷ್ಯದಲ್ಲಿ, ಕೆಲವು ಕ್ಷಣಗಳ ಕಾಲಮಾತ್ರ ಭಯ ದುಃಖಗಳನ್ನು ಹೊಂದಿದವರಂತೆ, ಬಾಹ್ಯಾಂತಃಕರಣದಲ್ಲಿ ಉಂಟಾಗುವ ವಿಕಾರವನ್ನು ನಿಮಿತ್ತಮಾಡಿಕೊಂಡು, ಶ್ರೀಹರಿಪ್ರೀತ್ಯರ್ಥವಾಗಿ, ತಮ್ಮ ಜೀವತ್ವವನ್ನು ಪ್ರದರ್ಶಿಸುತ್ತಾರೆ. ಸಕಲ ತತ್ವಾಭಿಮಾನಿ ದೇವತೆಗಳ ಅಂತಃಪ್ರೇರಕ ಪ್ರಭುಗಳಾಗಿದ್ದಾರೆ. ರಮಾನಾರಾಯಣರು, ಜಗತ್ಸಂಬಂಧವಾದ ಸೃಷ್ಟ್ಯಾದ್ಯಷ್ಟ ಕರ್ತೃತ್ವಗಳನ್ನು ವಾಯು ದೇವರ ದ್ವಾರವೇ ನಿರ್ವಹಿಸಿಸುತ್ತಾರೆ. **'ಯಾನಿಯಾನೀಹ ಕರ್ಮಾಣಿ ಜಗತಿ ಸ್ಯೂರಮಾಪತೇಃ । ಪ್ರಾಯಃ ಪ್ರಾಣಾಧಿಪೇತಾನಿ ಸಮಸ್ತಾನಿ ನ ಸಂಶಯಃ ॥'** (ಸ.ರ.ಮಾ, ಶ್ಲೋಕ ೧೬೮), ಜಗದ್ವಿಷಯದಲ್ಲಿ ಸ್ವತಂತ್ರ ಸರ್ವಕರ್ತ ನಾರಾಯಣನು ನಿರ್ವಹಿಸುವ ಎಲ್ಲ ಕರ್ಮಗಳನ್ನು ಪ್ರಾಣನಾಯಕನು ಆತನೊಬ್ಬನ ಅಧೀನನಾಗಿ ತಾನೂ ನಿರ್ವಹಿಸುತ್ತಾನೆಂದು ಹೇಳಲಾಗಿದೆ. ಜೀವರ ಸರ್ವಾವಸ್ಥೆಗಳ ಪ್ರೇರಕತ್ವವೂ ಮುಖ್ಯ ಪ್ರಾಣರಿಗುಂಟು. ಇವರು ಎಲ್ಲ ಜೀವರಂತೆ ಅಣು ಸ್ವರೂಪರಾದರೂ ಶ್ರೀಹರಿಯ ಅನುಗ್ರಹದಿಂದ ಅನಂತಾಂಶಗಳಿಂದ ವಿವಿಧ ಕಾರ್ಯ ನಿರ್ವಾಹಕ ಅನಂತರೂಪಗಳಿಂದ ವಿಶ್ವವನ್ನು ವ್ಯಾಪಿಸಿರುವರು. ಇವರು ಮಾಡದಿರುವ ಯಾವ ಕ್ರಿಯೆಯೂ ಚೇತನಾಚೇತನ ಜಗತ್ತಿನಿಂದ ನಡೆಯದು. ಇವರಿಲ್ಲದ ಪ್ರಾಣಿ ದೇಹವು ಮೃತಶರೀರವೆನಿಸುವುದು. ಜೀವರು ಇವರನ್ನುಳಿದು, ಉಸಿರಾಡಲು ಸಹ ಅಸಮರ್ಥರು. ಇವರೇ ಸಕಲ ಜಗಚ್ಚೇಷ್ಟಕರು. ಸ್ವಸಮರಾದ

ಬ್ರಹ್ಮದೇವರಲ್ಲಿ ಸಹ ಶ್ವಾಸೋಚ್ಛ್ವಾಸಗಳನ್ನು ನಡೆಸುವವರು[34] ಇವರೇ ಸರ್ವಜೀವರಿಗೆ ಗತಿಪ್ರದರು. ಇವರ ಅನುಗ್ರಹ ವಿಲ್ಲದೇ ಯಾವ ಸುಜೀವನೂ ಮೋಕ್ಷವನ್ನು ಹೊಂದಲಾರನು. ಮೋಕ್ಷಕ್ಕೆ ಮುಖ್ಯ ಸಾಧನವಾದ ಅಪರೋಕ್ಷ-ವನ್ನು ಪಡೆಯಲಾರನು. ಇತ್ಯಾದಿ ಇವರ ಮಹಿಮೆಗಳನ್ನುಅಲ್ಪವಾಗಿ (ಏಕದೇಶ ಮಾತ್ರವನ್ನು) ವರ್ಣಿಸಲು ಸಹ ಬೃಹದ್ಗ್ರಂಥಗಳನ್ನೇ ರಚಿಸ-ಬೇಕಾಗುವುದು; ಪೂರ್ಣವಾಗಿ ವರ್ಣಿಸುವುದಂತೂ ಸಹಸ್ರವದನನಾದ ಆದಿಶೇಷನಿಗೂ ಅಶಕ್ಯವು. ಈ ವಿಧ ಮಹಾಮಹಿಮರಾದ ಶ್ರೀವಾಯುದೇವರು ಉಪಾಸನಾಧಿಕಾರಿಗಳಲ್ಲಿ ಶ್ರೇಷ್ಠರೆಂಬ ನಿರ್ಣಯವು ಅತ್ಯಂತ ಸಾಧುವೇ ಸರಿ.

ಮುಖ್ಯಪ್ರಾಣನು ಉಪಾಸನಾಧಿಕಾರಿಗಳಲ್ಲಿ ಶ್ರೇಷ್ಠನೆಂದರೆ, ಉಪಾಸನೆ-ಯಿಂದ, ಅಪರೋಕ್ಷ - ಮೋಕ್ಷಗಳನ್ನು ಹೊಂದುವವರ ಮಧ್ಯೆ , ಶ್ರೇಷ್ಠನೆಂದರ್ಥ. ಮುಖ್ಯಪ್ರಾಣನಿಗಿಂತ ಕೋಟಿಮಡಿ ಅಧಿಕ ಭಗವದ್ಗುಣಗಳನ್ನು ಧ್ಯಾನಿಸಿ ಉಪಾಸಿಸುವ ಶ್ರೀಮಹಾಲಕ್ಷ್ಮೀದೇವಿಯು ಭಗವದುಪಾಸಕರಲ್ಲಿ ಉತ್ತಮೋತ್ತಮಳು. ಆದರೆ ಆಕೆಯ ಉಪಾಸನೆಯು ಫಲರೂಪವಾದುದೇ. ಅಪ್ರಾಪ್ತ ಫಲಗಳಿಗೆ ಕಾರಣವಾಗುವ ಸಾಧನರೂಪವಾದುದಲ್ಲ. ಶ್ರೀಹರಿಗೆ ಅತಿ ಪ್ರಿಯಳಾದ ಆಕೆಯು ನಿತ್ಯಮುಕ್ತಳು - ಉಪಾಸನೆಯಿಂದ ಯಾವುದೊಂದು ಕಾಲದಲ್ಲಿ ಮುಕ್ತಿಯನ್ನು ಹೊಂದಿದವಲ್ಲವೇ ಅಲ್ಲ. ನಿತ್ಯೋಪಾಸನೆಯುಳ್ಳವಳು - ಪ್ರಿಯತಮಳಾದ ಶ್ರೀವಿಷ್ಣುಭಾರ್ಯಳು - ಜಗನ್ಮಾತೆಯು ಹರಿಯೊಂದಿಗೆ ಸದಾ ಕ್ರೀಡಿಸುವ ಅವಿಯೋಗಿನಿಯು ರಮಾರಹಿತ ನಾರಾಯಣನನ್ನು ಯಾರೂ ಎಂದೂ ಕಾಣರು.

ಉಪಾಸನೆಯೆಂದರೆ ಧ್ಯಾನಮಾತ್ರವೆಂದು ತಿಳಿಯಬಾರದು. ಶ್ರವಣ ಮನನಗಳು, ಧ್ಯಾನಕ್ಕೆ ಅತ್ಯವಶ್ಯಕವಾದ ತತ್ವಜ್ಞಾನ ನಿಶ್ಚಯವನ್ನು ದೊರಕಿಸುವ,

34. ಬ್ರಹ್ಮ-ವಾಯುಗಳು ಉಭಯರೂ ಪರಸ್ಪರ ರಕ್ಷಕರು ವಾಯುದೇವರ ವ್ಯಾಪಾರ-ವಿಲ್ಲದೇ ಬ್ರಹ್ಮನು ಉಸಿರಾಡಲಾರನು; ಆತನ ಸನ್ನಿಧಾನವಿಲ್ಲದ ಬ್ರಹ್ಮದೇಹವು ಶವದಂತೆ ಬೀಳಬೇಕಾಗುವುದು; ಅನ್ನಾಭಿಮಾನಿಯಾದ ಬ್ರಹ್ಮನ ಸನ್ನಿಧಾನವಿಲ್ಲದ ವಾಯುದೇವನ ದಿವ್ಯ ದೇಹವೂ ಸಹ ಕೃಶವಾಗಿ ನಾಶವಾಗುತ್ತದೆ. ಈ ಪ್ರಮೇಯವು ಬೃಹದಾರಣ್ಯಾದಿ ಉಪನಿಷತ್ತುಗಳಿಂದ ಸಿದ್ಧವಾಗುತ್ತವೆ.

ಸಾಧನಗಳಾದರೂ, ಉಪಾಸನೆಯೇ ಶ್ರವಣಮನನ ಧ್ಯಾನಾತ್ಮಕವಾದುದು. ಈ ಮೂರೂ ಕೂಡಿಕೊಂಡೇ (ಸಮಸ್ತೋಪಾಸನೆಯೇ) ಫಲಕಾರಿಯು. ಈ ಹಿಂದೆ ನಿರೂಪಿಸಿದಂತೆ, ಪ್ರಸನ್ನ ಚಿತ್ತರಾದ ಗುರುಗಳು ಉಪದೇಶಿಸುವ ಭಗವನ್ಮಹಿಮೆಗಳನ್ನು ಕೇಳಿ ತಿಳಿದುಕೊಳ್ಳುವುದು, ಶ್ರವಣವು. ಶ್ರವಣರೂಪದ ಶಿಷ್ಯಪ್ರಯತ್ನ ಮತ್ತು ಗುರುಪ್ರಸಾದ, ಇವೆರಡರಲ್ಲಿ ಗುರು ಪ್ರಸಾದವೇ ಫಲಪ್ರಾಪ್ತಿಗೆ ಬಲಿಷ್ಠ ಕಾರಣವು. '**ಗುರುಪ್ರಸಾದೋ ಬಲವಾನ್ ನ ತಸ್ಮಾದ್ಬಲವತ್ತರಮ್ । ತಥಾಪಿ ಶ್ರವಣಾದಿಶ್ಚ ಕರ್ತವ್ಯೋ ಮೋಕ್ಷಸಿದ್ಧಯೇ ॥**' ಎಂಬ ಪ್ರಮಾಣವಾಕ್ಯವು ಈ ಪ್ರಮೇಯವನ್ನು ಸಾಧಿಸುತ್ತದೆ. ಗುರು ಪ್ರಸನ್ನತೆಯು ತತ್ವನಿಶ್ಚಯಕ್ಕೆ ಪ್ರಧಾನಕಾರಣವಾದ್ದರಿಂದ ಯೋಗ್ಯ ಗುರುಗಳನ್ನೇ ಹೊಂದಿ, ಶುಶ್ರೂಷಾದಿಗಳಿಂದ ಅವರನ್ನು ಹೆಚ್ಚು ಪ್ರಸನ್ನೀಕರಿಸಿಕೊಂಡು, ಶ್ರವಣಾದಿಗಳನ್ನು ಮಾಡಬೇಕು. ವಿಧ್ಯುಕ್ತ ಕ್ರಮದಿಂದ ಒಬ್ಬ ಗುರುಗಳನ್ನು ಹೊಂದಿ ಅವರಲ್ಲಿ ಶಾಸ್ತ್ರಾಭ್ಯಾಸವನ್ನು ನಡೆಸಿರುವಾಗ, ಅವರನ್ನು ಬಿಟ್ಟು ಅನ್ಯಗುರುಗಳನ್ನು ಹೊಂದುವುದು ನಿಷೇಧಿಸಲ್ಪಟ್ಟಿದೆ. ಆದರೆ ಆ ಗುರುಗಳಿಗಿಂತ ವಿಶೇಷಾನುಗ್ರಹಮಾಡುವ ಉತ್ತಮ ಗುರುಗಳು ದೊರೆತರೆ, ಹಿಂದಿನ ಗುರುಗಳನ್ನು ತ್ಯಜಿಸಿ ಅವರನ್ನು ಹೊಂದಬಹುದು. ಹಿಂದಿನ ಗುರುಗಳಷ್ಟೇ ವಿದ್ಯಾವಂತರಾದ ಮತ್ತು ಉಪದೇಶ ಸಾಮರ್ಥ್ಯವುಳ್ಳ (ತತ್ಸಮರಾದ) ಅನ್ಯಗುರುಗಳು, ತನ್ನಲ್ಲಿ ಹೆಚ್ಚು ಪ್ರಸನ್ನ ಚಿತ್ತರೆಂದು ತಿಳಿದಾಗ, ಹಿಂದಿನ ಗುರುಗಳ ಅನುಮತಿಯಿಂದ, ಅವರನ್ನು ಹೊಂದಬಹುದು – ಅಧಮರಾದವರನ್ನು ಹೊಂದಲೇಬಾರದು.

'**ಕರ್ಮಣೈವ ಹಿ ಸಂಸಿದ್ಧಿಂ ಆಸ್ಥಿತಾ ಜನಕಾದಯಃ**' (ಗೀತಾ) ಇತ್ಯಾದಿ ಪ್ರಮಾಣಗಳಿಂದ ಕರ್ಮಕ್ಕೆ ಸಹ ಮೋಕ್ಷಸಾಧಕತ್ವ ಸಿದ್ಧವಾಗುತ್ತಿರಲು, ಶ್ರವಣಾದಿಜನ್ಯ ಜ್ಞಾನಯುಕ್ತ ಉಪಾಸನೆಯಿಂದಲೇ ಮೋಕ್ಷವೆಂಬ ನಿಯಮ-ವಿಲ್ಲೆಂದು ಶಂಕಿಸಬಾರದು. '**ನಾನ್ಯಃ ಪಂಥಾ ಅಯನಾಯ ವಿದ್ಯತೇ**' ಇತ್ಯಾದಿ ಶ್ರುತಿಗಳು ಹೇಳುವಂತೆ, ಜ್ಞಾನದಿಂದಲೇ ಮೋಕ್ಷವೆಂದು, '**ಓಂ ವಿದ್ಯೈವ ತು ನಿರ್ಧಾರಣಾತ್ ಓಂ**' ಎಂಬ ಸೂತ್ರವು ನಿರ್ಣಯಿಸುತ್ತದೆ. ಜ್ಞಾನವೆಂದರೆ, ಶಾಸ್ತ್ರಜ್ಞಾನ (ಪರೋಕ್ಷಜ್ಞಾನ) ಮಾತ್ರವಲ್ಲ – ತಲ್ಲಭ್ಯ ಅಪರೋಕ್ಷ ಜ್ಞಾನವೇ.

ಜ್ಞಾನ (ಪರೋಕ್ಷಜ್ಞಾನ) ಸಹಕೃತ ಕರ್ಮ ಪ್ರಾಚುರ್ಯವುಳ್ಳ ಕಾರಣದಿಂದ 'ಕರ್ಮಯೋಗಿ'ಗಳೆಂದು[35] ಕರೆಯಲ್ಪಡುವ ಕೆಲವು ಅಧಿಕಾರಿಗಳು, ಕರ್ಮಯೋಗದಿಂದಅಪರೋಕ್ಷವನ್ನು ಹೊಂದುತ್ತಾರೆ. ಜ್ಞಾನರಹಿತ ಕರ್ಮ-ಮಾತ್ರದಿಂದಲ್ಲ, ಕರ್ಮಮಾತ್ರದಿಂದ ಮೋಕ್ಷವನ್ನು ಹೊಂದಬಹುದೆಂಬುದು **'ಕರ್ಮಣೈವ ಹಿ ಸಂಸಿದ್ಧಿಂ'** ಇತ್ಯಾದಿ ವಾಕ್ಯಗಳ ತಾತ್ಪರ್ಯವಲ್ಲ. **'ಯಮೇವೈಷ ವೃಣುತೇ ತೇನ ಲಭ್ಯಃ'** ಎಂಬ ನಿರವಕಾಶ ಶ್ರುತಿ ಪ್ರಮಾಣದಿಂದ ಶ್ರೀಹರಿ ಪ್ರಸಾದವೇ ಅಪರೋಕ್ಷಕ್ಕೂ-ಮೋಕ್ಷಕ್ಕೂ ಮುಖ್ಯಸಾಧನವೆಂದು ತಿಳಿಯುತ್ತದೆ. ಜ್ಞಾನಿಯೇ ಶ್ರೀಹರಿಗೆ ಅತಿಪ್ರಿಯನೆಂದು, **'ಜ್ಞಾನೀ ಮೇ ಪ್ರಿಯತಮಃ'** (ಗೀತಾ) ಇತ್ಯಾದಿ ಅಸಂಖ್ಯ ಆಗಮ ವಾಕ್ಯ ಪ್ರಮಾಣಗಳಿಂದ ಕಂಡು ಬರುತ್ತದೆ. ಆದ್ದರಿಂದ ಜ್ಞಾನದಿಂದಲೇ ಮೋಕ್ಷವೆಂಬ ನಿರ್ಣಯವೇ ಸಾಧು.

ಜ್ಞಾನವೆಂದರೆ ಮುಖ್ಯಾರ್ಥದಲ್ಲಿ ಅಪರೋಕ್ಷ ದರ್ಶನವೆಂದು ಹೇಳಲಾಯಿತಷ್ಟೆ. ಅಪರೋಕ್ಷವು ಅಧಿಕಾರಿಗಳ ಯೋಗ್ಯತಾ ಭೇದದಿಂದ ಬಹು ಪ್ರಕಾರವಾಗಿರುವುದು. **'ಯಥಾ ಯೋಗ್ಯಮೇವೈಷ ಆತ್ಮಾನಂ ದರ್ಶಯತಿ'** ಎಂಬ ಶ್ರುತಿಯು, ಅಧಿಕಾರಿಯು, ಪರಮಾತ್ಮನನ್ನು ಯೋಗ್ಯತಾನುಸಾರ ನೋಡುತ್ತಾನೆಂದು ಹೇಳುತ್ತದೆ. ಜ್ಞಾನ - ಮಹಾಜ್ಞಾನ - ತಪ - ಯೋಗ - ಪಾದಯೋಗಗಳೆಂಬುವು ಅಪರೋಕ್ಷ ಪ್ರಕಾರಗಳು - ಅಪರೋಕ್ಷದಲ್ಲಿ ಭಗವದ್ದರ್ಶನವಾಗುವ ಕಾಲಾವಧಿಯನ್ನು ಆಧರಿಸಿದ ವಿಭಾಗಗಳು. ಮುಹೂರ್ತ (ಎರಡು ಘಳಿಗೆ) ಕಾಲ ಭಗವದ್ದರ್ಶನವಾಗುವ ಅಧಿಕಾರಿಯ ಅಪರೋಕ್ಷವು 'ಜ್ಞಾನ'ವೆಂದು ಕರೆಯಲ್ಪಡುತ್ತದೆ. ಅದಕ್ಕಿಂತ ಅಧಿಕವಾದ ಕಾಲದವರೆಗೆ ದರ್ಶನವನ್ನು ಪಡೆಯುತ್ತಿರುವ ಅಧಿಕಾರಿಯ ಅಪರೋಕ್ಷವು, 'ಮಹಾಜ್ಞಾನ'ವೆನಿಸುತ್ತದೆ. ಹೀಗೆಯೇ, ಆರು ಮಾತ್ರೆಗಳ[36] ಕಾಲಾವಧಿಗೆ ಕಡಿಮೆಯಿಲ್ಲದಂತೆ ದರ್ಶನವಾಗುವ ಅಪರೋಕ್ಷವು 'ತಪ'ವೆಂದೂ, ಒಂದು ಮಾತ್ರೆಗೆ ಕಡಿಮೆಯಲ್ಲದ ದರ್ಶನ ಕಾಲವುಳ್ಳದ್ದು 'ಯೋಗ'ವೆಂದೂ ಕಾಲು

35. ಜ್ಞಾನಯೋಗಿಗಳೆಂಬುವರು ಕರ್ಮರಹಿತರಲ್ಲ - ಪ್ರಚುರ ಜ್ಞಾನವುಳ್ಳವರು. ವಿವಿಧಯೋಗ ಸ್ವರೂಪಗಳ ವಿವರವನ್ನು ರತ್ನ 5ರಲ್ಲಿ ಕಾಣುತ್ತೀರಿ.

36. ಮಾತ್ರೆ-ಹ್ರಸ್ವಾಕ್ಷರ ಉಚ್ಚಾರಣ ಕಾಲ.

(೧/೪) ಮಾತ್ರೆಯಷ್ಟು ಕಾಲಕ್ಕಿಂತ ಕಡಿಮೆ ಇಲ್ಲದ ದರ್ಶನವುಳ್ಳ ಅಪರೋಕ್ಷವು 'ಪಾದಯೋಗ'ವೆಂದೂ, ಕರೆಯಲ್ಪಡುತ್ತವೆ, ಈ ಜ್ಞಾನಗಳಿಂದ, ಕ್ರಮವಾಗಿ, ಸತ್ಯಲೋಕ (ಜ್ಞಾನ), ವೈಕುಂಠ (ಮಹಾಜ್ಞಾನ), ತಪೋಲೋಕ (ತಪ), ಜನಲೋಕ (ಯೋಗ), ಮತ್ತು ಮಹರ್ಲೋಕ (ಪಾದಯೋಗ) ಗಳು ಪ್ರಾಪ್ತವಾಗುತ್ತವೆಂದು ಹೇಳಲಾಗಿದೆ. ಬ್ರಹ್ಮ ಸಾಕ್ಷಾತ್ಕಾರವು (ಅಪರೋಕ್ಷ-ದರ್ಶನವು) ಪ್ರಕಾರಾಂತರದಿಂದ ನಾಲ್ಕು ವಿಧವೆಂದೂ ನಿರೂಪಿಸಲಾಗಿದೆ. **'ಅಂತರ್ದೃಷ್ಟಯೋ ಬಹಿರ್ದೃಷ್ಟಯೋ ಅವತಾರ ದೃಷ್ಟಯಃ ಸರ್ವ ದೃಷ್ಟಯಃ'** ಎಂಬ (ಕಮಠ) ಶ್ರುತಿಯು, ಅಪರೋಕ್ಷಜ್ಞಾನಿಗಳನ್ನು, ಸ್ವಹೃದಯದಲ್ಲಿ - ಹೊರಗೆ (ಅಗ್ನ್ಯಾದಿಗಳಲ್ಲಿ) (ರಾಮಕೃಷ್ಣಾದಿ) ಅವತಾರಗಳಲ್ಲಿ - ಮತ್ತು ಸರ್ವತ್ರ, ಕಾಣುವರೆಂಬ ವಿವಕ್ಷೆಯಿಂದ, ನಾಲ್ಕು ಪ್ರಕಾರವಾಗಿರುವರೆಂದು ಹೇಳುತ್ತದೆ. ಹೀಗೆ ಅಪರೋಕ್ಷವು ಬಹು ವಿಧವಾಗಿದ್ದರೂ, **'ಸಾಮಾನ್ಯ ದರ್ಶನಾಲ್ಲೋಕಾಃ ಮುಕ್ತಿರ್ಯೋಗ್ಯಾತ್ಮ ದರ್ಶನಾತ್'** ಎಂಬ ಶ್ರುತಿಯು, ಯಾವುದಾದರೊಂದು **ಭಗವದ್ರೂಪ ದರ್ಶನದಿಂದ ಮೋಕ್ಷವು ದೊರೆಯುವುದಿಲ್ಲ; ಸ್ವಬಿಂಬ ದರ್ಶನದಿಂದಲೇ; ಎಂದು ಸಾರುತ್ತದೆ.** ಆದ್ದರಿಂದ (ಅಪರೋಕ್ಷ ಪ್ರಾಪಕ) ಧ್ಯಾನವು ಸ್ವಬಿಂಬದ ಉಪಾಸನಾರೂಪವಾದುದೇ ಆಗಿರಬೇಕು. ಭಗವಂತನ ಎಲ್ಲ ರೂಪಗಳಿಗೂ ಮುಕ್ತಿದಾತೃತ್ವ ಗುಣವು ಸಮಾನವೇ, ಆದರೂ, **'ಸಮೋಽಪಿ ಭಗವಾನ್ ಸ್ವಬಿಂಬದರ್ಶನ ಏವೈನಂ ಮೋಚಯತಿ'** ಇತ್ಯಾದಿ ಶ್ರುತಿಗಳು, ಬಿಂಬೋಪಾಸನೆಯಿಂದ ಲಭಿಸುವ ಬಿಂಬಾಪರೋಕ್ಷದಿಂದಲೇ ಮೋಕ್ಷವೆಂದು ಹೇಳುತ್ತವೆ. ಆದ್ದರಿಂದ ನಿಯತ-ಗುರೂಪದಿಷ್ಟ ಸ್ವಬಿಂಬ (ಸ್ವಾಂತರ್ಯಾಮಿ ಶ್ರೀಹರಿರೂಪವನ್ನೇ) ಉಪಾಸಿಸ-ಬೇಕು. **ಉಪಾಸನೆಯು ಭಕ್ತಿಯುಕ್ತವಾಗಿದ್ದರೆ ಮಾತ್ರ ದರ್ಶನಲಾಭವಾಗುವುದು.** ಕೇವಲ ಭಕ್ತಿ ಸಾಮರ್ಥ್ಯದಿಂದ ದರ್ಶನವು ದೊರೆಯುವುದೆಂದೂ ತಿಳಿಯ-ಕೂಡದು. ಭಕ್ತಿ ಲಭ್ಯವಾದ ಶ್ರೀಹರಿ ಪ್ರಸಾದದಿಂದ ಮಾತ್ರ ಲಭಿಸುತ್ತದೆಂಬ ಮುಖ್ಯಾಂಶವನ್ನು ಸರ್ವದಾ ಗಮನದಲ್ಲಿಟ್ಟಿರಬೇಕು.

ದೇವತೆಗಳು ಸಹ ನಾನಾ ಅಂಶಗಳಿಂದ ಮನುಷ್ಯದೇಹದಲ್ಲಿ ಜನ್ಮವೆತ್ತಿ ಮೋಕ್ಷಸಾಧನೆಗಳನ್ನು ಮಾಡಿಕೊಳ್ಳುತ್ತಾರೆ. ಇಂದ್ರಾರ್ಜುನರಲ್ಲಿ ಇಂದ್ರನು

ಅಂಶಿ, ಅರ್ಜುನನು ಅಂಶ. ಅಂಶಿಜೀವನ ಕರ್ಮಾನುಸಾರ ಆತನ ಅಂಶಗಳು ಬೇರೆಬೇರೆ ದೇಹಗಳನ್ನು ಹೊಂದುತ್ತವೆ. ಕರ್ಮವು ಮುಗಿದ ನಂತರ ಅಂಶಗಳು ಅಂಶಿಯಲ್ಲಿ ಐಕ್ಯ ಹೊಂದುತ್ತವೆ.[37] ಅಂಶಾಂಶಿಗಳಿಗೆ ಅಭೇದವೇ ಸರಿ. ಅಂಶದ ಸುಖಜ್ಞಾನಾದಿಗಳು ಅಂಶಿಗಿರುತ್ತವೆಯಾದರೂ, ಅಂಶಿಯ (ಇಂದ್ರನ) ಸುಖಜ್ಞಾನಾದಿಗಳು ಅಂಶಗೆ (ಅರ್ಜುನನಿಗೆ) ಇರುವುದಿಲ್ಲವೆಂಬ ವೈಲಕ್ಷಣ್ಯವನ್ನು ಗಮನಿಸಬೇಕು. ಅಂಶಾಂಶಿಗಳ ಸಂಬಂಧವು ಹೀಗಿರುವ ಪ್ರಯುಕ್ತ ಅಂಶನ ಉಪಾಸನಾದಿಗಳ ಜ್ಞಾನಾದಿಫಲಗಳು ಅಂಶಿಗೇ ಎಂಬುದು ಯುಕ್ತವಾಗುತ್ತದೆ.

ಬ್ರಹ್ಮಾದಿ ದೇವತೆಗಳು ಸಾಂಶರು - ಅಣು ಸ್ವರೂಪರೇ ಆದರೂ ಶ್ರೀ ಹರಿಯ ವಿಶೇಷಾನುಗ್ರಹ ಬಲದಿಂದ ನಾನಾ ಅಂಶಗಳಿಂದ ವ್ಯವಹರಿಸುವ ಸಾಮರ್ಥ್ಯವುಳ್ಳವರು.[38] ಮುಕ್ತಿಯೋಗ್ಯರಾದ ಇತರ ಜೀವರು, ಭಗವತ್ಪರಿವಾರದವರೆಂಬ ಭಾವನೆಯಿಂದ ಈ ಬ್ರಹ್ಮಾದಿಗಳನ್ನು ಯಥಾ-ಯೋಗ್ಯವಾಗಿ ಉಪಾಸಿಸಬೇಕು. ಭಗವದಪರೋಕ್ಷಕ್ಕೆ ಸಕಲ ಸ್ವೋತ್ತಮರ ಅನುಗ್ರಹವೂ ಅವಶ್ಯಕ. ಈ ದೇವತೆಗಳ ಉಪಾಸನೆಯು ಅಂಗ-ದೇವತೋಪಾಸನೆಯೆಂದೂ ಕರೆಯಲ್ಪಡುತ್ತದೆ. ಬ್ರಹ್ಮಾದಿಗಳು ತಮ್ಮ ಉತ್ಪತ್ತಿಸ್ಥಾನಗಳಾದ ಮುಖಾದಿ ಶ್ರೀಹರಿಯ ಅಂಗಗಳನ್ನು ಆಶ್ರಯಿಸಿ-ಕೊಂಡಿರುತ್ತಾರೆ. ದೇವತಾಶ್ರಿತ ಅಂಗಗಳುಳ್ಳವನು ಶ್ರೀಹರಿಯು, ಎಂದು ಮುಂತಾಗಿ ಉಪಾಸಿಸುವುದು (ಬ್ರಾಹ್ಮಣೋಸ್ಯ ಮುಖಮಾಸೀತ್-ಚಕ್ಷೋಃ

37. ಅಂಶಿನಸ್ತು ಪೃಥಗ್ಜಾತಾ ಅಂಶಾಸ್ತಸ್ಯೈವ ಕರ್ಮಣಾ ।
ಪುನರೈಕ್ಯಂ ಪ್ರಪದ್ಯಂತೇ ನಾತ್ರಕಾರ್ಯಾ ವಿಚಾರಣಾ ।। (ಪರಮಸಂಹಿತೆ)

38. ನಿಸ್ಸೀಮಾಷ್ಟ ಮಹಾಸಿದ್ಧಿ ಸಂಪೂರ್ಣಾಃ ಸರ್ವದೈವತು । ಅತಃ ಪೂರ್ಣಗುಣಾಃ ಸರ್ವೇನಿಸ್ಸೀಮಾನಂದ ಭೋಜನಾಃ । ಈಶ್ವರಾಚಿಂತ್ಯ ಶಕ್ತ್ಯೈವ ವಿಭಕ್ತಾಂಶೈರನಂತಕೈಃ । ಪ್ರೇರಕಾಃ ಸರ್ವಜೀವಾನಾಂ ಸ್ವೋತ್ತಮೈಃ ಪ್ರೇರಿತಾಃ ಸದಾ ।।(ಸ.ರ.ಮಾ) ಅಲ್ಪಾಧಿಕಾರಿಗಳ ಕಲ್ಪನೆಗೆ ಮೀರಿದ ಅಪರಿಮಿತ ಅಣಿಮಾದಿ ಅಷ್ಟ ಸಿದ್ಧಿಗಳಿಂದ ತತ್ವಾಭಿಮಾನಿ ದೇವತೆಗಳು ಸದಾ ಪೂರ್ಣರಾಗಿರುವರು. ಇದರಿಂದ, ಇವರೆಲ್ಲರೂ ಗುಣಪೂರ್ಣರೆಂದೂ ಅಪರಿಮಿತ ಆನಂದಭೋಗವುಳ್ಳವರೆಂದೂ ಹೇಳಲ್ಪಡುತ್ತಾರೆ. ಶ್ರೀಹರಿಯ ಅಚಿಂತ್ಯ ಶಕ್ತಿಯಿಂದ ಈ ದೇವತೆಗಳು ಅನಂತಾಂಶಗಳಿಂದ ವಿಭಕ್ತರಾಗಿ, ಸ್ವೋತ್ತಮರ ಪ್ರೇರಣಾನುಸಾರ, ಸರ್ವ ಜೀವರ ದೇಹಗಳಲ್ಲಿದ್ದು ಪ್ರೇರಕರಾಗಿರುವರು.

ಸೂರ್ಯೋ ಅಜಾಯತ) ಇತ್ಯಾದಿ ಶ್ರುತ್ಯುಕ್ತ ಗುಣಗಳ ಧ್ಯಾನವು ದೇವಾಧಿಕಾರಿಕವು - ಸರ್ವರಿಂದ ಉಪಾಸ್ಯವಲ್ಲ. ಸಾಯುಜ್ಯ ಮುಕ್ತಿಗೆ ಅರ್ಹರಾದ ದೇವತೆಗಳು ಮಾತ್ರ ಅಂಗದೇವತೋಪಾಸನೆಯಲ್ಲಿ ಅಧಿಕಾರಿಗಳು. ಶ್ರೀಹರಿಯ ಅಂಗಗಳಿಂದ ಸೃಷ್ಟರಾಗಿ ಆಯಾ ಅಂಗಗಳನ್ನು ಆಶ್ರಯಿಸಿರುವ ದೇವತಾಯುಕ್ತ ಅಂಗಗಳುಳ್ಳವನೆಂದು ಉಪಾಸಿಸಬೇಕು - ಈ ಉಪಾಸನೆಯಲ್ಲಿ ಅನ್ಯರಿಗೆ ಅಧಿಕಾರವಿಲ್ಲ. ಇತರ ಅಧಿಕಾರಿಗಳೆಲ್ಲರೂ, ಶ್ರೀಹರಿಯ ಆನಂದಾದಿ ಗುಣಗಳಂತೆ (ಸತ್-ಚಿತ್-ಆನಂದ-ಆತ್ಮಾ ಎಂಬ ಚತುರ್ಗುಣಗಳೊಂದಿಗೆ) 'ಭೂಮ' ಗುಣ (ಪೂರ್ಣತ್ವ) ವಿಶಿಷ್ಟಗಳೆಂದೇ ಸರ್ವರೂ ಚಿಂತಿಸಬೇಕು. ಭೂಮಗುಣ ಪ್ರತೀತಿಯೂ ಸಹ ಅವರವರ ಯೋಗ್ಯತಾನುಗುಣವಾಗಿಯೇ ಆಗುತ್ತದೆ. ಸ್ವಬಿಂಬಾನ್ಯ ರೂಪಗಳ ಉಪಾಸನೆಯು ವ್ಯರ್ಥವೆಂದಾಗಲಿ, ನಿಷೇಧಿಸಲ್ಪಟ್ಟಿದೆ ಎಂದಾಗಲಿ ತಿಳಿಯಕೂಡದು. ನೃಸಿಂಹಾದಿ ರೂಪಗಳ ಉಪಾಸನೆಯು, ವಿಶಿಷ್ಟಮುಕ್ತಿಗೆ ಪ್ರತಿಬಂಧಕಗಳಾದ ದುರಿತಗಳನ್ನು (ಪಾಪಗಳನ್ನು) ನಿವಾರಿಸುವುದರಲ್ಲಿ ಸಮರ್ಥವಾದುದು. ಧರ್ಮೈಕ ಸಾಧನವಾದ ದ್ರವ್ಯಾದಿಗಳನ್ನು ಪಡೆಯಲು (ಐಶ್ವರ್ಯಪ್ರಾಪ್ತಿಗಾಗಿ) ಶ್ರೀಕರಾದಿ ರೂಪಗಳ ಉಪಾಸನೆಯನ್ನೂ ಮಾಡಬಹುದು.

ಹೀಗೆ, ವಿರಕ್ತನಾದ ಅಧಿಕಾರಿಯು, ಭಗವನ್ಮಹಿಮೆಗಳ ಜ್ಞಾನದಿಂದ ಅಭಿವೃದ್ಧವಾದ ಭಕ್ತಿಯುಳ್ಳವನಾಗಿ, ಸಕಲವೇದಾರ್ಥ ಪರಿಜ್ಞಾನವನ್ನು ಹೊಂದಿ, ಗುರುಪ್ರಸಾದದಿಂದ ಪ್ರಾಪ್ತವಾದ ಶ್ರವಣಾದಿ ಸಹಕೃತ ಬಿಂಬೋಪಾಸನೆಯಲ್ಲಿ ತೊಡಗಿದರೆ, ಭಗವದಪರೋಕ್ಷವು (ಬ್ರಹ್ಮದರ್ಶನವು) ನಿಸ್ಸಂಶಯವಾಗಿ ಲಭ್ಯವಾಗುವುದೆಂದು ಸಿದ್ಧವಾಗುತ್ತದೆ. ಶ್ರೀಹರಿ ಪ್ರಸಾದದಿಂದ ಸ್ವಬಿಂಬ ಭಗವನ್ಮೂರ್ತಿಯ ದರ್ಶನಭಾಗ್ಯವನ್ನು ಪಡೆದವನೇ ಅಪರೋಕ್ಷ ಜ್ಞಾನಿಯು - ಬ್ರಹ್ಮಜ್ಞಾನಿಯು. ಈ ಜ್ಞಾನದ ಮಹಿಮೆಯನ್ನು ಮುಂದಿನ ಪರಿಚ್ಛೇದದಲ್ಲಿ ವಿವರಿಸಲಾಗುತ್ತದೆ.

## ಪರಿಚ್ಛೇದ - ೪

## ಜ್ಞಾನ

ಜ್ಞಾನವೆಂದರೆ ಬ್ರಹ್ಮಜ್ಞಾನವೇ, ಇತರ ವಸ್ತು ವಿಷಯಕ ಅರಿವನ್ನು (ತಿಳಿವಳಿಕೆಯನ್ನು) ಜ್ಞಾನವೆಂದು ಕರೆಯುವುದು, ಜ್ಞಾನಶಬ್ದದ ಗೌಣ ಪ್ರಯೋಗದಿಂದ ಮಾತ್ರ. **ಬ್ರಹ್ಮಜ್ಞಾನವೆಂದರೆ, ಬಿಂಬೋಪಾಸನೆಯಿಂದ ಪ್ರಸನ್ನನಾದ ಬಿಂಬರೂಪೀ ಶ್ರೀಹರಿಯ ದಿವ್ಯ ಅಪ್ರಾಕೃತ ರೂಪದ ಸಂದರ್ಶನವನ್ನು ಪಡೆಯುವುದು.** ಬ್ರಹ್ಮದರ್ಶನವನ್ನು ಹೊಂದಿದ ಭಕ್ತನು ಬ್ರಹ್ಮ ಜ್ಞಾನಿಯು. ಜ್ಞಾನಿಯ ಲಕ್ಷಣಗಳನ್ನು ತಿಳಿದರೆ ಜ್ಞಾನದ ಮಹಿಮೆಯನ್ನು ತಿಳಿದಂತೆಯೇ ಸರಿ. ಜ್ಞಾನಿಯು ಜ್ಞಾನದ ಪ್ರಭಾವದಿಂದ ಅಪೇಕ್ಷಿತ ಸರ್ವ ಪುರುಷಾರ್ಥಗಳನ್ನು ಅನಾಯಾಸವಾಗಿ ಪಡೆಯುತ್ತಾನೆ.[39] ಅಧಿಕಾರಿಯು ಬ್ರಹ್ಮಜ್ಞಾನವನ್ನು ಹೊಂದುವುದು ಮನುಷ್ಯ ದೇಹದಲ್ಲಿಯೇ. ಬ್ರಹ್ಮದರ್ಶನವಾದೊಡನೆ ಮುಕ್ತನಾಗುವುದಿಲ್ಲ. ಹಾಗಾಗುವುದಾದರೆ, ಆ ತಕ್ಷಣವೇ ದೇಹವನ್ನು ಬಿಡಬೇಕು, ಎಂದರೆ ಮೃತನಾಗಬೇಕು. ಹಾಗೆಂದೂ ಆಗುವುದಿಲ್ಲ. ಬ್ರಹ್ಮದರ್ಶನವಾಗುವ ಕಾಲದಲ್ಲಿ, ಆ ಜೀವನ ಯಾವ ಕರ್ಮವು ಫಲಕೊಡಲಿಕ್ಕೆ ಆರಂಭವಾಗಿರುವುದೋ, ಅದರ (ಪ್ರಾರಬ್ಧಕರ್ಮದ) ಪೂರ್ಣಫಲವನ್ನು ಅನುಭವಿಸಿದನಂತರ, ಮುಕ್ತನಾಗುತ್ತಾನೆ. ಪ್ರಾರಬ್ಧವನ್ನು ಬಿಟ್ಟು, ಉಳಿದ ಇತರ ಪಾಪರಾಶಿಗಳೆಲ್ಲವೂ ಜ್ಞಾನಾಗ್ನಿಯಿಂದ (ಬ್ರಹ್ಮದರ್ಶನ ಪ್ರಭಾವದಿಂದ) ದಗ್ಧವಾಗಿ ಹೋಗುತ್ತವೆ. ಆ ಮುಂದೆ, ಪ್ರಾರಬ್ಧಕರ್ಮದ ಭೋಗವು

---

39. ಜ್ಞಾನಿಯ ಮಹಿಮೆಯನ್ನು ಶ್ರುತಿಯು ಹೀಗೆ ನಿರೂಪಿಸುತ್ತದೆ; - 'ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧ ಸತ್ವಃ ಕಾಮಯತೇ ಯಾಂಶ್ಚ ಕಾಮಾನ್ ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾನ್ । ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ಭೂತಿ ಕಾಮಃ' (ಮುಂಡಕ) ಪರಿಶುದ್ಧಾಂತಃಕರಣನಾದ ಬ್ರಹ್ಮಜ್ಞಾನಿಯು ಯಾವ ಯಾವ ಲೋಕವನ್ನು ಮನಸ್ಸಿನಿಂದ ಇಚ್ಛಿಸುವನೋ, ಯಾವ ಯಾವ ಸುಖಭೋಗಗಳನ್ನು ಅಪೇಕ್ಷಿಸುವನೋ, ಆಯಾ ಲೋಕಗಳನ್ನು, ಸುಖಭೋಗಗಳನ್ನು ಹೊಂದುತ್ತಾನೆ; ಆದ್ದರಿಂದ ಐಶ್ವರ್ಯಾದಿಶ್ರೇಯಃ ಕಾಮಿಯು ಬ್ರಹ್ಮಜ್ಞಾನಿಯನ್ನು ಸೇವಿಸಿ ಪ್ರಸನ್ನೀಕರಿಸಿಕೊಳ್ಳಬೇಕು.

ಮುಗಿಯುವವರೆಗೆ, ಆತನು ಮಾಡುವ ಯಾವ ಕರ್ಮಗಳೂ ಲೇಪಿಸುವುದಿಲ್ಲ - ಎಂದರೆ ಜನ್ಮಾಂತರ ಪ್ರಾಪಕವಾದ ಅಥವಾ ಸುಖದುಃಖಗಳಿಗೆ ಕಾರಣವಾಗುವ ಅದೃಷ್ಟವನ್ನುತ್ಪಾದಿಸುವುದಿಲ್ಲ. ಪ್ರಾರಬ್ಧ ಕರ್ಮಭೋಗವು ಮುಗಿದನಂತರ ಮುಕ್ತನಾಗುತ್ತಾನೆಂದರೆ, ಸ್ವಸ್ವರೂಪ ಮಾತ್ರ ದೇಹವುಳ್ಳವನಾಗಿ, ಸ್ವಯೋಗ್ಯ ವೈಕುಂಠಾದಿ ಮುಕ್ತಸ್ಥಾನವನ್ನು ಹೊಂದುತ್ತಾನೆಂದಲ್ಲ - ಆದರೆ ಪುನಃ ಸಂಸಾರಕ್ಕೆ ಹಿಂತಿರುವುಗುವುದಿಲ್ಲ-ವೆಂದರ್ಥ. ಮಹಾ ಪ್ರಳಯಕಾಲದವರೆಗೆ, ತನಗೆ ಉಚಿತವಾದ ಜನಲೋಕ ಅಥವಾ ಅದರ ಮೇಲಿನ ಲೋಕಗಳಲ್ಲಿ ತೇಜೋವಿಶಿಷ್ಟ ದೇಹಯುಕ್ತನಾಗಿ ಸುಖದಿಂದ ವಾಸಿಸುವನು. ಪ್ರಾರಬ್ಧಕರ್ಮಭೋಗದ ಅವಸ್ಥೆಯಲ್ಲಿರುವ ಜ್ಞಾನಿಯು 'ಜೀವನ್ಮುಕ್ತ'ನೆಂದು ಕರೆಯಲ್ಪಡುತ್ತಾನೆ. ಪ್ರಾರಬ್ಧಕರ್ಮವು ಅಧಿಕಾರಿಯ ಯೋಗ್ಯತೆಯನ್ನನುಸರಿಸಿ ಆ ದೇಹ (ಬ್ರಹ್ಮದರ್ಶನವನ್ನು ಪಡೆದ ದೇಹ) ಪಾತಪರ್ಯಂತವನ್ನಾರಂಭಿಸಿ, ಹಲವಾರು ಜನ್ಮಗಳನ್ನೆತ್ತುವವರೆಗಿನ ಫಲವುಳ್ಳದ್ದಾಗಿರಬಹುದು. ಆದ್ದರಿಂದ ಜೀವನ್ಮುಕ್ತನೂ ಜನ್ಮಾಂತರಗಳನ್ನು ಹೊಂದಬಹುದು. ಪ್ರಾರಬ್ಧವು ಪ್ರಚುರ - ದುಃಖ - ಸಮದುಃಖ ಸುಖ - ಅಥವಾ ಪ್ರಚುರ ಸುಖ, ಪ್ರಾಪಕವಾಗಿರಬಹುದು. ಋಜುಗುಣದ (ಬ್ರಹ್ಮ-ವಾಯು ಮೊದಲಾದ) ಜೀವರಿಗೆ ಪ್ರಾರಬ್ಧವು ಕೇವಲ ಸುಖರೂಪ ಫಲವುಳ್ಳದ್ದೆಂದು ಹೇಳಲಾಗಿದೆ. ಅನ್ಯರಿಗೆ ತಾರತಮ್ಯಾನುಗುಣವಾಗಿ ಸುಖ-ದುಃಖ ಮಿಶ್ರರೂಪವಾಗಿರುತ್ತದೆ. ಜೀವನ್ಮುಕ್ತರು ಪ್ರಾರಬ್ಧಕರ್ಮಫಲ-ರೂಪವಾದ ಸುಖ ದುಃಖಗಳನ್ನು, ಹಿಗ್ಗುಕುಗ್ಗುಗಳಿಗೆ ಒಳಗಾಗದೆ ಸಮಚಿತ್ತರಾಗಿ ಅನುಭವಿಸುತ್ತ, ಶ್ರೀಹರಿಸ್ಮರಣೆಯಿಂದ ಹರ್ಷಚಿತ್ತರಾಗಿಯೇ ಇರುತ್ತಾರೆ. ಸುಖವೇ ಇರಲಿ - ದುಃಖವು ಎಂದಿಗೂ ಬೇಡ, ಎಂದು ಜ್ಞಾನಿಗಳು ಎಂದೂ ಬಯಸುವುದಿಲ್ಲ. ಶ್ರೀಹರಿಕೊಟ್ಟಿದ್ದನ್ನು ನಿರ್ಲಿಪ್ತರಾಗಿ, ಸಂತೋಷದಿಂದ ಭೋಗಿಸುತ್ತಾರೆ. ಒಂದು ವೇಳೆ ಪ್ರಾರಬ್ಧವಶರಾಗಿ ಸ್ವರ್ಗಾದಿ ಸುಖವಿಶೇಷಗಳನ್ನು ಇಚ್ಛಿಸಿದರೆ, ಆ ಎಲ್ಲವನ್ನೂ ಅನಾಯಾಸವಾಗಿಹೊಂದುತ್ತಾರೆ; ಅನಾಯಾಸದಿಂದ ಹೊಂದುವರೆಂಬ ಭಾವವನ್ನು ಬೆದಕಿದರೆ ಸೂಕ್ಷ್ಮರಹಸ್ಯ ಪ್ರಮೇಯಗಳನ್ನು ತಿಳಿಯಬಹುದು. ಜ್ಞಾನಿಯು ಸ್ವರ್ಗವನ್ನಪೇಕ್ಷಿಸಿದರೆ, ಸ್ವರ್ಗಪ್ರಾಪಕ

ಯಾಗಾದಿಕರ್ಮಗಳನ್ನು ಮಾಡುವುದು ಅವಶ್ಯಕವೋ ಅಥವಾ ಇಚ್ಛಾಮಾತ್ರದಿಂದ ಹೊಂದುವನೋ, ಎಂಬ ಪ್ರಶ್ನೆಯನ್ನು ವಿವೇಚಿಸುವಾ. ಕರ್ಮಕ್ಕೆ ಜ್ಞಾನವು ಅಂಗಭೂತವಾದುದೆಂದೂ, ಸ್ವರ್ಗಾದಿ ಪ್ರಾಪ್ತಿಗೆ ಜ್ಞಾನಿಯು ಆಚರಿಸುವ (ಯಾಗಾದಿ) ಕರ್ಮವೇ ಪ್ರಧಾನಕಾರಣವೆಂದೂ, ಜ್ಞಾನವು ಸಹಕಾರಿ ಕಾರಣವಾಗಿದ್ದು ತತ್ಕಾಲದಲ್ಲಿ ನಿಯಮೇನ (ತಪ್ಪದೇ) ಫಲಸಿದ್ಧಿಯನ್ನು ದೊರಕಿಸುವುದೆಂದೂ ಜೈಮಿನ್ಯಾಚಾರ್ಯರೇ ಮೊದಲಾದವರು ತಿಳಿಯುತ್ತಾರೆ. ಇದಕ್ಕೆ ವಿರುದ್ಧವೆಂಬಂತೆ, ಶ್ರೀಬಾದರಾಯಣರು, ಸ್ವರ್ಗಾದಿಗಳು ಜ್ಞಾನಿಗೆ ಜ್ಞಾನಪ್ರಭಾವದಿಂದಲೇ ದೊರೆಯುವುವೆಂದೂ, ಎಂದರೆ ಫಲಸಿದ್ಧಿಗೆ ಜ್ಞಾನವೇ ಪ್ರಧಾನಕಾರಣವೆಂದೂ ಕರ್ಮವು ಅಪ್ರಧಾನ ಕಾರಣ (ನಿಮಿತ್ತ ಮಾತ್ರವೆಂದೂ, ತಿಳಿಯುವರೆಂದು ಹೇಳಲಾಗುತ್ತದೆ. ವಸ್ತುತಃ ಈ ಉಭಯಾಭಿಪ್ರಾಯಗಳಲ್ಲಿ ವಿರೋಧವಿಲ್ಲ. ಜೈಮಿನಿಗಳ ಅಭಿಪ್ರಾಯವು ದೇವಾನ್ಯ ಅಧಮಾಧಿಕಾರಿಗಳ ವಿವಕ್ಷೆಯಿಂದ ಸಾಧುವಾದುದು. ಶ್ರೀಬಾದರಾಯಣರು, ಉತ್ತಮಾಧಿಕಾರಿಗಳಾದ ದೇವಾದಿಗಳ ವಿವಕ್ಷೆಯಿಂದ, ನಿರ್ಣಯವನ್ನು ಹೇಳಿರುವರು. ಶಿಷ್ಯರಾದ ಜೈಮಿನಿಗಳಿಗೆ ಗುರುಗಳಾದ ವ್ಯಾಸರಲ್ಲಿ ವಿರೋಧಾಭಿಪ್ರಾಯವೇ? ಎಂದಿಗೂ ಇಲ್ಲ. ಆಕಾಶದಂತೆ ವ್ಯಾಪ್ತವಾದುದು ಶ್ರೀ ವೇದವ್ಯಾಸರ ಜ್ಞಾನ. ಜೈಮಿನಿಗಳ ಜ್ಞಾನ ಅದರ ಏಕದೇಶ ಮಾತ್ರ .

ಏವಂ ಚ ಪ್ರತಿಬಂಧಕ ಪ್ರಾರಬ್ಧಕರ್ಮವಿಲ್ಲದಿದ್ದರೆ, ಜ್ಞಾನದಿಂದ ಸಕಲ ಪುರುಷಾರ್ಥಗಳು ಸಿದ್ಧಿಸುವುವೆಂಬುದೇ ನಿರ್ಣಯವು. ಪ್ರತಿಬಂಧಕ ಪ್ರಾರಬ್ಧವಿದ್ದರೆ ಜ್ಞಾನಿಕೃತ ಕರ್ಮವೂ ನಿಷ್ಫಲವಾಗಬಹುದು ಅಥವಾ ಅಲ್ಪಫಲಕವಾಗಬಹುದು. ಪ್ರಾರಬ್ಧವು ನಿಃಶೇಷವಾಗಿ ತೊಲಗಿದನಂತರ, ಮೋಕ್ಷದಲ್ಲಿ ಜ್ಞಾನಿಗೆ ಇಚ್ಛಾಮಾತ್ರದಿಂದಲೇ (ಯಾವ ಪ್ರಯತ್ನವೂ ಇಲ್ಲದೆ) ಸಕಲ ಸಂಕಲ್ಪಗಳೂ ಸಿದ್ಧಿಸುವುವು. ಜೀವನ್ಮುಕ್ತಾವಸ್ಥೆಯಲ್ಲಿ ತಾರ-ತಮ್ಯಾನುಗುಣವಾಗಿ ಅಲ್ಪಯತ್ನದ ಅವಶ್ಯಕತೆಯಿರುತ್ತದೆ. ಬ್ರಹ್ಮಾದಿ ಉತ್ತಮಾಧಿಕಾರಿಗಳು ಸುಖಪ್ರಾರಬ್ಧಭೋಗಕಾಲದಲ್ಲಿದ್ದಾಗ್ಯೂ (ಲಿಂಗಭಂಗ-ವಾಗದೇ ಇದ್ದರೂ), ಮುಕ್ತ ಪ್ರಾಯರೇ ಆಗಿರುವರು.

ಜೀವನ್ಮುಕ್ತನು ಪ್ರಾರಬ್ಧಕರ್ಮ ಭೋಗದಲ್ಲಿರುವಾಗ ಮಾಡುವ ಕರ್ಮಗಳು ವ್ಯರ್ಥವಲ್ಲ. ಯದ್ಯಪಿ, ವಿಧಿನಿಷೇಧಗಳನ್ನು ಪಾಲಿಸುವ ಅವಶ್ಯಕತೆಯಿಲ್ಲದಿದ್ದರೂ - ಅವುಗಳ ಲೇಪವಿಲ್ಲದಿದ್ದರೂ - ಜ್ಞಾನಿಯು ಕರ್ಮಗಳನ್ನು ಮಾಡುತ್ತಲೇ ಇರುವನು. ಪ್ರಾಕೃತ ದೇಹದಲ್ಲಿರುವ ಯಾರೂ ಎಂದೂ ಕರ್ಮಮಾಡದ ಸ್ಥಿತಿಯಲ್ಲಿರಲಾರರು. ಕಾಯಿಕ, ವಾಚಿಕ ಅಥವಾ ಮಾನಸಿಕವಾದ ಯಾವುದೊಂದು ಕರ್ಮವನ್ನು ಆಚರಿಸುತ್ತಲೇ ಇರುವನು. ಈ, **'ನ ಹಿ ದೇಹಭೃತಾಶಕ್ಯಂ ತ್ಯಕ್ತುಂ ಕರ್ಮಣ್ಯಶೇಷತಃ'** (ಗೀತಾ) ದೇಹಧಾರಿ-ಯಿಂದ ಕರ್ಮಗಳನ್ನು ಸಂಪೂರ್ಣವಾಗಿ ತ್ಯಜಿಸಲು ಶಕ್ಯವಾಗುವುದೇ ಇಲ್ಲವೆಂಬ ನಿಯಮಕ್ಕೆ ಜೀವನ್ಮುಕ್ತನೂ ಒಳಪಟ್ಟವನೇ. ಹೀಗಿರುವುದರಿಂದ ಜ್ಞಾನಿಯ ಕರ್ಮಗಳು ನಿಷ್ಫಲವೆಂದು ಪ್ರಾಪ್ತವಾಗುವ ಸಂಶಯದ ಪರಿಹಾರವಾಗಲೇ-ಬೇಕು. ಆತನ ಕರ್ಮಗಳು, ಜ್ಞಾನಿಗೆ ದೇಹಾಂತರ ಪ್ರಾಪಕವಾಗುವುದಿಲ್ಲವೆಂಬ ಮತ್ತು ಸುಖದುಃಖಗಳಿಗೆ ಕಾರಣವಾಗುವುದಿಲ್ಲವೆಂಬ ದೃಷ್ಟಿಯಿಂದ, ವ್ಯರ್ಥಗಳೇ ಸರಿ. ಆದರೆ ನಿಜಕ್ಕೂ ಅವು ಮಹತ್ತರವಾದ ಫಲವುಳ್ಳವುಗಳೇ. ಜ್ಞಾನಿಕೃತಕರ್ಮವು ವೀರ್ಯವತ್ತರವೆಂದು, (ಮಹತ್ಫಲವುಳ್ಳದ್ದೆಂದು)ಶ್ರುತಿಯೂ ಹೇಳುತ್ತದೆ.[40] ಜ್ಞಾನಿಗೆ ದೊರೆಯುವುವೆಂಬ ಆ ಮಹಾಫಲಗಳು ಮೂರು ವಿಧವಾಗಿರುತ್ತವೆ. ಅವು ಯಾವುವೆಂದರೆ (೧) ಜ್ಞಾನಿಕೃತ ಸತ್ಕರ್ಮಾನುಷ್ಠಾನವು ಲೋಕ ಶಿಕ್ಷಾರೂಪದ ಶ್ರೀಹರಿಸೇವೆಯಾಗುತ್ತದೆ. (೨) ಮುಕ್ತಿಯಲ್ಲಿ ತನಗೆ ದೊರೆಯುವ ಆನಂದದ ಉನ್ನಾಹಕ್ಕೆ (ಅತಿಶಯಕ್ಕೆ) ಜ್ಞಾನೋತ್ತರ ಸತ್ಕರ್ಮಗಳು ಕಾರಣವಾಗುತ್ತವೆ. (೩) ಫಲ ಕೊಡಲು ಉಪಕ್ರಮಿಸಿರುವ ಪ್ರಾರಬ್ಧ ಕರ್ಮದ ಭಾಗಕ್ಕೆ (ಕರ್ಮದ ಎಸಳಿಗೆ) ಉಪಮರ್ದಕ್ಕೆ ಕಾರಣವಾಗುತ್ತವೆ. ಜ್ಞಾನಿಯ ಸತ್ಕರ್ಮಾನುಷ್ಠಾನವು, ಸ್ವಲ್ಪ ಭಾಗ ಅನುಭವಿಸಲ್ಪಟ್ಟ ಪ್ರಾರಬ್ಧ ಕರ್ಮಕ್ಕೆ ಉಪಮರ್ದ ಕಾರಣವಾಗುತ್ತದೆ. ಉಪಭೋಗಿಸಬೇಕಾಗಿ ಉಳಿದಿರುವ ಪ್ರಾರಬ್ಧ ಕರ್ಮಕ್ಕಲ್ಲ. ಉಪಮರ್ದವೆಂದರೆ, ಉಪಭೋಗಿಸುತ್ತಿರುವ ಫಲದಲ್ಲಿ ಅವಶಿಷ್ಟ ಭಾಗದಲ್ಲಿ ಕೆಲವಕ್ಕೆ ಹ್ರಾಸ-ಫಲದ ತೀವ್ರತೆ, ತೀಕ್ಷ್ಣತೆಯ ಪ್ರಮಾಣದಲ್ಲಿ

---

40. 'ಯದೇವ ವಿದ್ಯಯಾ ಕರೋತಿಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ' (ಛಾಂದೋಗ್ಯ)

ಕಡಿಮೆಯಾಗುವುದು. ಸ್ವಪ್ನಾದಿ ಅವಸ್ಥಾಂತರದಲ್ಲಿ ಅನುಭವಿಸುವಿಕೆ, ಇತ್ಯಾದಿ. ಬ್ರಹ್ಮದರ್ಶನಹೊಂದಿದ ಜ್ಞಾನಿಯ ಸತ್ಕರ್ಮಗಳಿಗೆ, ಹೀಗೆ ಪ್ರಯೋಜನ ವಿಶೇಷಗಳಿರುತ್ತವೆ. ಜ್ಞಾನಿಗೆ ಮೋಕ್ಷವು ಯಾವ ಕಾರಣದಿಂದಲೂ ತಪ್ಪುವುದಿಲ್ಲ. **'ಯೇಷಾಂ ಜ್ಞಾನಂ ಸಮುತ್ಪನ್ನಂ ತೇಷಾಂ ಮೋಕ್ಷೋ ವಿನಿಶ್ಚಯಃ'** ಇತ್ಯಾದಿ ಪ್ರಮಾಣಗಳು ಹೀಗೆಂದು ಘೋಷಿಸುತ್ತವೆ. ಹೀಗೆಂದ ಮಾತ್ರಕ್ಕೆ ಜ್ಞಾನಿಯು ಏನನ್ನಾದರೂ ಮಾಡಬಹುದು ಅಥವಾ ಬಿಡಬಹುದು (ಕಾಮಚಾರಿ-ಯಾಗಿರಬಹುದು) ಎಂದಲ್ಲ. ನಿಷಿದ್ಧ ಕರ್ಮಾಚರಣೆಯಿಂದ ಜ್ಞಾನಿಗೆ ಅಶುಚಿತ್ವ, ಮೋಕ್ಷ ಪ್ರತಿಬಂಧಕತ್ವ ಮತ್ತು ಕ್ಲಿಪ್ತವಾದ ಮೋಕ್ಷಾನಂದ ಹ್ರಾಸಗಳೆಂಬ ದುಷ್ಟ ಫಲಗಳಿಲ್ಲವೆಂದು ಹೇಳುವ ಪ್ರಮಾಣವಾಕ್ಯಗಳಿಗೆ ಉತ್ತಮಾಧಿಕಾರಿಗಳಾದ ದೇವತೆಗಳೇ ವಿಷಯರು. ಅವರಿಗೆ ಕಾಮಚಾರಿತ್ವದಿಂದ ಯಾವ ಹಾನಿಯೂ ಇಲ್ಲ. ದೇವಶ್ರೇಷ್ಠನಾದ ಚತುರ್ಮುಖನಿಗೆ ವಿಕರ್ಮಗಳಿಲ್ಲ.ಅವು ಆತನಿಂದ ಎಂದೂ ಸಂಭವಿಸುವುದೇ ಇಲ್ಲ. ಕೆಳಗಿನ ಇತರ ದೇವತೆಗಳಿಗೆ ವಿಕರ್ಮಗಳ ಘಟನೆಯು ಅತ್ಯಲ್ಪ. ಇವರು, ಪ್ರಬಲ ಪ್ರಾರಬ್ಧ ನಿಮಿತ್ತವಾಗಿ ಸ್ವೋತ್ತಮ ದ್ರೋಹಾದಿ ವಿಕರ್ಮಗಳನ್ನು ಆಚರಿಸಿದರೆ, ಹಿಂದೆ ಸಾಧಿಸಿದ ಆನಂದಾತಿಶಯಕ್ಕೆ ಮಾತ್ರ ಹ್ರಾಸವುಂಟಾಗುತ್ತದೆ - ಕ್ಲಿಪ್ತವಾದ ಆನಂದ-ಆನಂದಾತಿಶಯಗಳಿಗೆ ಹಾನಿಯಿಲ್ಲ. ಮನುಷ್ಯಾದಿ ಅಲ್ಪಾಧಿಕಾರಿಗಳಿಗೆ ಕ್ಲಿಪ್ತವಾದ ಮೋಕ್ಷಾನಂದಕ್ಕೂ ವಿಕರ್ಮದಿಂದ ಹ್ರಾಸವುಂಟು. ಆನಂದದ ಅಭಿವ್ಯಕ್ತಿಯು ಪೂರ್ಣವಾಗಿ ಆಗದಿರುವುದೇ ಹ್ರಾಸವು. ಹೀಗೆ, ಜ್ಞಾನೋತ್ತರಕಾಲದ ವಿಕರ್ಮಗಳಿಗೆ, ಪುನಃ ಸಂಸಾರದಲ್ಲಿ ಹಾಕುವುದೆಂಬ ದುಷ್ಟ ಫಲವಿಲ್ಲದಿದ್ದರೂ, ಒಂದು ಪ್ರಕಾರದ (ಯೋಗ್ಯತಾನುಗುಣವಾದ) ಲೇಪವುಂಟೆಂದು ನಿರ್ಣಯಿಸಲಾಗಿರುವುದರಿಂದ, ಜ್ಞಾನಿಯೂ ಸಹ (ಜೀವನ್ಮುಕ್ತಾವಸ್ಥೆಯಲ್ಲಿ-ಪ್ರಾರಬ್ಧ ಕರ್ಮಭೋಗಕಾಲದಲ್ಲಿ) ವಿಧಿ ನಿಷೇಧಗಳನ್ನು ಪಾಲಿಸಬೇಕೆಂದು ಪ್ರಾಪ್ತವಾಗುತ್ತದೆ. ವರ್ಣಾಶ್ರಮ ಧರ್ಮಗಳನ್ನು ಆಚರಿಸುತ್ತ, ನಿಷಿದ್ಧ ಕರ್ಮವನ್ನು ಬಹು ಎಚ್ಚರಿಕೆಯಿಂದ ಪರಿತ್ಯಜಿಸಬೇಕಾದುದು, ಬ್ರಹ್ಮ ಸಾಕ್ಷಾತ್ಕಾರವನ್ನು ಹೊಂದಿದವನ (ಜ್ಞಾನಿಯ)

ಕರ್ತವ್ಯವೆಂದು ಆಗಮಗಳು ಸ್ಪಷ್ಟವಾಗಿ ನಿರೂಪಿಸುತ್ತವೆ.[41] ಜ್ಞಾನಿಕರ್ಮಗಳು ಸುಖದುಃಖ ಪ್ರಾಪಕ ಅದೃಷ್ಟವನ್ನು ಉತ್ಪಾದನೆ ಮಾಡುವುದಿಲ್ಲ ಮತ್ತು ದೇಹಾಂತರ ಪ್ರಾಪ್ತಿಗೆ ಕಾರಣವೂ ಆಗುವುದಿಲ್ಲವಾದ್ದರಿಂದ, ಅವರು ಕರ್ಮ-ಬದ್ಧರಲ್ಲವೆಂದು ಹೇಳಲಾಗುತ್ತದೆ. ಕರ್ಮಬದ್ಧರಲ್ಲವೆಂಬುದನ್ನೇ ಅವರ ಕಾಮಚಾರಿತ್ವವೆಂದೂ ಕರೆಯುವರು. ಮುಖ್ಯಾರ್ಥದಲ್ಲಿ ಮುಕ್ತರೇ ಕಾಮಚಾರಿಗಳು - ವಿಧಿಬಂಧರಹಿತರು. ಜೀವನ್ಮುಕ್ತರು ಯೋಗ್ಯತಾ ತಾರ-ತಮ್ಯವನ್ನನುಸರಿಸಿ ಕಾಮಚಾರಿಗಳು. ಜ್ಞಾನಿಗಳು ಕಾಮಚಾರಿಗಳೆಂದರೆ, ವಿಧ್ಯುಕ್ತಕರ್ಮಗಳಲ್ಲಿ ಸ್ವೇಚ್ಛಾನುಸಾರ ಕೆಲವನ್ನು ಮಾಡಬಹುದು. ಕೆಲವನ್ನು ಬಿಡಬಹುದು; ನಿಷಿದ್ಧ ಕರ್ಮಗಳನ್ನು ಸರ್ವಥಾ ಆಚರಿಸಕೂಡದು. ಇದರಲ್ಲಿ ಸಹ ಬಹುಪರಿಯ ವಿಶೇಷಗಳಿವೆ. ವಿಧಿ ನಿಯತರು, ಅನಿಯತರು ಮತ್ತು ಸ್ವೇಚ್ಛಾನಿಯತರೆಂದು ಜ್ಞಾನಿಗಳು ತ್ರಿವಿಧರಾಗಿರುವರು. ಮನುಷ್ಯರು ವಿಧಿನಿಯತರು (ತಪ್ಪದೇ ವಿಧಿಗಳನ್ನು ಪಾಲಿಸತಕ್ಕವರು); ದೇವತೆಗಳು

---

41. 'ಅತೀತಾನಾಗತಜ್ಞಾನೀ ತ್ರೈಲೋಕ್ಯೋದ್ಧರಣಕ್ಷಮಃ । ಏತಾದೃಶೋಽಪಿ ನಾಚಾರಂ ಶ್ರೌತಂ ಸ್ಮಾರ್ತಂ ಪರಿತ್ಯಜೇತ್ ॥' (ಹರಿವಂಶ) - ಮೂರು ಲೋಕಗಳನ್ನು ರಕ್ಷಿಸುವ ಸಾಮರ್ಥ್ಯವುಳ್ಳ ತ್ರಿಕಾಲಜ್ಞಾನಿಯೂ ಸಹ (ಇಂದ್ರಾದಿಗಳು ಸಹ) ಶ್ರುತಿ ಸ್ಮೃತಿಗಳಲ್ಲಿ ವಿಧಿಸಲಾದ ಆಚರಣೆಯನ್ನು ತ್ಯಜಿಸಕೂಡದು.

ಪಶ್ಯನ್ನಪೀಮಮಾತ್ಮಾನಂ ಕುರ್ಯಾತ್ಕರ್ಮ ವಿಚಾರಯನ್ । ಯದಾತ್ಮನಃ ಸುನಿಯತಂ ಆನಂದೋತ್ಕರ್ಷಮಾಪ್ನುಯಾತ್ ॥ (ಕೌಷಾರವಶ್ರುತಿ) - ಬ್ರಹ್ಮದರ್ಶನ ಹೊಂದಿದ ಜ್ಞಾನಿಯೂ ವಿಚಾರಮಾಡಿ, ಸ್ವಧರ್ಮಗಳನ್ನಾಚರಿಸಬೇಕು. ಅದರಿಂದ ನಿಯತವಾದುದಕ್ಕಿಂತ ಅತಿಶಯವಾದ ಆನಂದವನ್ನು ಮುಕ್ತಿಯಲ್ಲಿ ಪಡೆಯುತ್ತಾನೆ. (ವಿಕರ್ಮ ಪರಿತ್ಯಾಗ ಮಾತ್ರ ಸಾಕಾಗದೆಂದು ಸೂಚಿತವಾಗಿದೆ).

'ಜ್ಞಾನಾನ್ಮೋಕ್ಷೋ ಭವತ್ಯೇವ ಸರ್ವಕಾರ್ಯ ಕೃತೋಽಪಿ ತು । ಆನಂದೋಹ್ರಸತೇಽಕಾರ್ಯಾತ್ ಶುಭಂ ಕೃತ್ವಾ ಚ ವರ್ಧತೇ ॥ (ಬ್ರಹ್ಮಾಂಡ ಪುರಾಣ - ಯಾವ ಕರ್ಮ ಮಾಡಿದರೂ ಜ್ಞಾನದಿಂದ ಮೋಕ್ಷವು ಲಭ್ಯವೇ ಸರಿ (ತಪ್ಪುವುದಿಲ್ಲ); ಆದರೆ ಅಕಾರ್ಯದಿಂದ (ನಿಷಿದ್ಧ ಕರ್ಮಾಚರಣೆಯಿಂದ) ಮೋಕ್ಷದಲ್ಲಿ ಆನಂದ ಹ್ರಾಸವೂ. ಶುಭಕರ್ಮದಿಂದ ಆನಂದ ವೃದ್ಧಿಯೂ ದೊರೆಯುತ್ತದೆ. (ಇಲ್ಲಿ ಉಕ್ತವಾದ ಹ್ರಾಸ-ವೃದ್ಧಿಗಳನ್ನು, ಈ ಹಿಂದೆ ವಿವರಿಸಿರುವಂತೆ ಅಧಿಕಾರಿ ತಾರತಮ್ಯವನ್ನು ಗಮನಿಸಿ ಅರ್ಥಮಾಡಿಕೊಳ್ಳಬೇಕು.)

ಅನಿಯತರು ವಿಧಿಗಳನ್ನು ನಡೆಸಬಹುದು ಅಥವಾ ಬಿಡಬಹುದು); ಬ್ರಹ್ಮ-ದೇವನು ಮಾತ್ರ ಸ್ವೇಚ್ಛಾನಿಯತನು (ತನ್ನ ಇಚ್ಛೆ ಬಂಧಂತೆ ವರ್ತಿಸಬಹುದು). ಬ್ರಹ್ಮದೇವನಿಗೆ ಎಂದೂ ಅಸದಿಚ್ಛೆಯೇ ಉಂಟಾಗುವುದಿಲ್ಲ; ಆತನ ದೇಹೇಂದ್ರಿಯಗಳು ಎಂದೂ ಅಸನ್ಮಾರ್ಗವನ್ನು ಹಿಡಿಯವು.[42] **'ವಿಧಿ ನಿಯತಾ ಮನುಷ್ಯಾ ಅನಿಯತಾ ಹಿ ದೇವಾಃ ಬ್ರಹ್ಮೈವ ಸ್ವೇಚ್ಛಾನಿಯತಃ'** ಎಂಬ ಶ್ರುತಿಯು ಈ ಪ್ರಮೇಯವನ್ನು ನಿರೂಪಿಸುತ್ತದೆ.

ಅಪರೋಕ್ಷ ದರ್ಶನವು ಯತ್ನ ಸಾಧ್ಯವಲ್ಲ. ಶ್ರವಣ, ಮನನ, ಧ್ಯಾನಾದಿ-ಗಳನ್ನು ಆಚರಿಸುವಶಕ್ತಿಯು ಸರ್ವಚೇತನರಿಗೂ ಇದೆ ಮತ್ತು ಜ್ಞಾನ ಲಭ್ಯವಾದ ಮೋಕ್ಷಾನಂದವನ್ನು ಹೊಂದುವ ಆಶೆಯೂ ಇದೆ. ಆದರೆ ಯತ್ನಿಸಿದವರೆಲ್ಲರಿಗೂ ಬ್ರಹ್ಮದರ್ಶನವು ದೊರೆಯುವುದಿಲ್ಲ ಮತ್ತು ಅನಧಿಕಾರಿಗಳು ಅದಕ್ಕಾಗಿ ಮಾಡಬೇಕಾದ ವಿಧ್ಯುಕ್ತ ಯತ್ನಗಳನ್ನೂ ಮಾಡುವುದಿಲ್ಲ. ಜ್ಞಾನ, ಭಕ್ತಿ,

---

42. ಚತುರ್ಮುಖ ಬ್ರಹ್ಮದೇವರ ಜ್ಞಾನವು ಸದಾ ಸತ್ಯವನ್ನೇ ಗ್ರಹಿಸುತ್ತದೆ; ಅವರ ಉಕ್ತಿಯು ಎಂದೂ ಅಸತ್ಯವಾಗುವುದಿಲ್ಲ. ಬ್ರಹ್ಮದೇವರೇ ಇದನ್ನು ನಾರದನಿಗೆ (ತಮ್ಮ ಪ್ರೀತಿಯ ಮಗನಿಗೆ) ಹೇಳುತ್ತಾರೆ :-

ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ ।
ನ ಕರ್ಹಿಚಿನ್ಮೇ ಮನಸೋ ಮೃಷಾಗತಿಃ ।
ನ ಮೇ ಹೃಷೀಕಾಣಿ ಪತಂತ್ಯಸತ್ಪಥೇ
ಯನ್ಮೇ ಹೃದೌತ್ಕಂಠ್ಯವತಾ ಧೃತೋ ಹರಿಃ ।। (ಭಾಗವತ)

ಇದರ ಅರ್ಥ :- ಅಂಗ - ಹೇ! ಪ್ರಿಯ ನಾರದ, ಮೇ - ನನ್ನ, ಔತ್ಕಂಠ್ಯವತಾಹೃದಾ - ತೀವ್ರ ಭಕ್ತಿಯುತ ಮನಸ್ಸಿನಿಂದ, ಯತ್ - ಯಾವ ಕಾರಣದಿಂದ, ಹರಿಃ - ಶ್ರೀಹರಿಯು, ಧೃತಃ - ಧರಿಸಲ್ಪಟ್ಟಿರುವನೋ, (ಆ ಕಾರಣದಿಂದ), ಮೇ- ನನ್ನ, ಭಾರತೀ - ವಾಣಿಯು, ನ ಮೃಷೋಪಲಕ್ಷ್ಯತೇ - ಅಸತ್ಯ ಅಥವಾ ವ್ಯರ್ಥ-ವಾಗುವುದಿಲ್ಲ; ಕರ್ಹಿಚಿತ್ - ಯಾವ ಕಾರಣದಿಂದಲೂ, ಮೇ ಮನಸಃ ಗತಿಃ - ನನ್ನ ಮನಸ್ಸಿನ ಗತಿಯು, ನ ಮೃಷಾ-ವ್ಯರ್ಥವಲ್ಲ (ನನ್ನ ಮನಸ್ಸು ಸದಾ ಯಥಾರ್ಥವನ್ನೇ ಗ್ರಹಿಸುತ್ತದೆ, ಗತಿ-ಮನಸ್ಸಿನಿಂದಾಗುವ ಜ್ಞಾನ), ಮೇ ಹೃಷೀಕಾಣಿ -ನನ್ನ ಇಂದ್ರಿಯಗಳು, ಅಸತ್ಪಥೇ-ಅಸನ್ಮಾರ್ಗದಲ್ಲಿ ಶ್ರೀಹರಿ ಸಂಕಲ್ಪಕ್ಕೆ ವಿರೋಧ-ವಾಗಿ) ನ ಪತಂತಿ ನಿಷಿದ್ಧ ವಿಚಾರಗಳಲ್ಲಿ ಪ್ರವೇಶಿಸುವುದಿಲ್ಲ.

ವೈರಾಗ್ಯಾದಿ ಸ್ವರೂಪರೇ ಆದ ಮುಕ್ತಿಯೋಗ್ಯ ಜೀವರು ಮಾತ್ರ ಯತ್ನಿಸುತ್ತಾರೆ ಮತ್ತು ಫಲವನ್ನೂ ಹೊಂದುತ್ತಾರೆ. ಭಕ್ತ್ಯಾದಿ ಗುಣಗಳು ಸ್ವರೂಪದಲ್ಲಿಲ್ಲದವರಿಗೆ ಯಾವ ಪ್ರಯತ್ನದಿಂದಲೂ ಜ್ಞಾನ ದೊರೆಯುವುದಿಲ್ಲ. ದೇವಾಸುರಮಿಶ್ರರೆಂಬ ತ್ರಿವಿಧ ಜೀವರ ಸ್ವರೂಪಗಳು ಎಂದೂ ಯಾವ ಕಾರಣದಿಂದಲೂ ವ್ಯತ್ಯಾಸ ಹೊಂದುವುದಿಲ್ಲ. ದೇವಸ್ವಭಾವದ ಜೀವರೇ ಜ್ಞಾನಾಧಿಕಾರಿಗಳು.[43] ಜ್ಞಾನಾಧಿಕಾರಿಗಳಲ್ಲಿ ತಾರತಮ್ಯವಿದೆ. ಎಲ್ಲರೂ ಸಮಾನಾಧಿಕಾರಿಗಳಲ್ಲ. ಮನುಷ್ಯೋತ್ತಮರು, ಋಷಿಗಳು ಮತ್ತು ದೇವತೆಗಳು ಉತ್ತರೋತ್ತರ ಉತ್ತಮಾಧಿಕಾರಿಗಳು. ಸ್ವರೂಪದಲ್ಲಿಯೇ ಜ್ಞಾನಾಧಿಕಾರಿಗಳು ತರತಮ ಭಾವವುಳ್ಳವರಾದ್ದರಿಂದ ಶಾಸ್ತ್ರೋಕ್ತ ವಿಧಿನಿಷೇಧಗಳ ಆಚರಣೆಯಲ್ಲಿ ಸಹ ಬಹುಪ್ರಕಾರಗಳು ಏರ್ಪಡುತ್ತವೆ. ಇವುಗಳನ್ನು, ಭಕ್ತಿ-ಜ್ಞಾನ-ಕರ್ಮಗಳ ಪ್ರಾಚುರ್ಯ ಮತ್ತು ಅಪ್ರಾಚುರ್ಯ ದೃಷ್ಟಿಯಿಂದ ಮೂರು ದೊಡ್ಡ ವಿಭಾಗಗಳಲ್ಲಿ ಅಡಕ ಮಾಡಬಹುದು. ಈ ವಿಭಾಗದಂತೆ ಜ್ಞಾನಿಗಳೂ ಸಹ ಭಕ್ತಿಯೋಗಿಗಳು. ಜ್ಞಾನಯೋಗಿಗಳು - ಕರ್ಮಯೋಗಿಗಳೆಂಬ ಮೂರರ-ಲ್ಲೊಂದು ವರ್ಗಕ್ಕೆ ಸೇರುತ್ತಾರೆ. ವಿಹಿತಾಚರಣೆಯು ಗುಣವು; ನಿಷಿದ್ಧಾಚರಣೆಯು ದೋಷ. ಹೀಗೆಂಬ ಗುಣದೋಷ ದೃಷ್ಟಿಯೇ ಒಂದು ವಿವಕ್ಷೆಯಿಂದ ದೋಷವೆನಿಸುವುದು. ಈ ವಿಧ ಭೇದದೃಷ್ಟಿಯನ್ನು ಬಿಡುವುದೇ ನಿಜವಾದ ಗುಣವು.[44] ಹೀಗೆಂಬುದರ ತಾತ್ಪರ್ಯವನ್ನು ಸರಿಯಾಗಿ ಗ್ರಹಿಸಬೇಕು. ವಿಧಿನಿಷೇಧರೂಪದ ಕರ್ಮಗಳನ್ನು ಗುಣದೋಷಗಳೆಂದು ವೇದಗಳು ಹೇಳುತ್ತವೆ. ಗುಣದೋಷಭೇದ ದೃಷ್ಟಿಯನ್ನೇ ತ್ಯಜಿಸಬೇಕೆಂಬುದಕ್ಕೆ, ಸಕಲವಿಧಿ ನಿಷೇಧಗಳನ್ನು ಬಿಡುವುದೆಂಬರ್ಥವನ್ನು ತಿಳಿದರೆ, ವೇದಗಳನ್ನು ಪುರುಷಾರ್ಥ ಸಾಧಕಗಳೆಂದುಹೇಳುವುದು ಅರ್ಥವಿಲ್ಲದ ಮಾತಾಗುತ್ತದೆ ಮತ್ತು ಉಚಿತವಲ್ಲ. ವಿಧಿನಿಷೇಧಗಳನ್ನು ಕೇವಲ ಶಾಸ್ತ್ರವಚನಗಳಿಂದಲ್ಲ; ಪರಂತು, ಶ್ರೀಹರಿಗೆ

43. ಜೀವತ್ರೈವಿಧ್ಯ ವಿಮರ್ಶೆ ಮತ್ತು ಪ್ರಮಾಣಗಳ ಬಗ್ಗೆ ರತ್ನ 3ರ 279-280 ಪುಟಗಳನ್ನು ಇಲ್ಲಿ ಓದಿಕೊಳ್ಳಬಹುದು.

44. 'ಗುಣದೋಷದೃಶಿರ್ದೋಷೋ ಗುಣಸ್ತೂಭಯ ವರ್ಜನಂ' ಎಂಬ ಭಾಗವತ ವಾಕ್ಯವು ಈ ಸೂಕ್ಷ್ಮ ಪ್ರಮೇಯವನ್ನು ಪ್ರತಿಪಾದಿಸುತ್ತದೆ.

ಪ್ರಿಯವಾದುದು ವಿಧಿ. ಅಪ್ರಿಯವಾದುದು ನಿಷಿದ್ಧವೆಂದು, ಪ್ರಿಯಾಪ್ರಿಯ-ರೂಪ ಮುಖ್ಯ ಹೇತುವಿನಿಂದ ನಿರ್ಧರಿಸಿಕೊಳ್ಳಬೇಕು.[45] ಹೀಗೆ ಗುಣ-ದೋಷಗಳನ್ನು ನಿರ್ಣಯಿಸಿಕೊಂಡು, ಕೇವಲ ವಾಕ್ಯದಿಂದ (ವಿಧಿ ನಿಷೇಧರೂಪದ) ಗುಣದೋಷವೆಂಬ ಭೇದ ದೃಷ್ಟಿಯನ್ನು ಹೊಂದದೇ ಪ್ರವೃತ್ತಿಸುವವರು ಮಹಾ ಗುಣಶಾಲಿಗಳಾದ ಭಕ್ತಿಯೋಗಿಗಳು. ಇವರು, ಪರಮಾತ್ಮನಿಂದ 'ಇದು ನನಗೆ ಪ್ರಿಯ. ಆದ್ದರಿಂದ ಇದನ್ನು ಮಾಡು; ಇದು ನನಗೆ ಅಪ್ರಿಯ. ಆದ್ದರಿಂದ ಇದನ್ನು ಬಿಡು' ಎಂದು ವಿಹಿತವಾದ ಸ್ವಸ್ವಕರ್ಮಗಳಲ್ಲಿ ನಿಷ್ಠರಾಗಿರುವರು. ಈ ನಿಷ್ಠೆಯೇ ಗುಣವು. ಬ್ರಹ್ಮಹತ್ಯಾ-ರೂಪದ ವೃತ್ತಾಸುರನ ವಧೆಯು ಇಂದ್ರನಿಗೆ ಗುಣವೇ ಸರಿ. ಅದು ಶ್ರೀಹರಿಗೆ ಪ್ರಿಯವಾದುದರಿಂದ. **ದೇವತೆಗಳೇ ಭಕ್ತಿ ಯೋಗಿಗಳು; ಸನಕಾದಿಗಳು ಜ್ಞಾನಯೋಗಿಗಳು; ಮನುಷ್ಯರು ಕರ್ಮಯೋಗಿಗಳು.** ಇವರು ಗುಣ-ದೋಷಗಳನ್ನು (ವಿಧಿ ನಿಷೇಧಗಳನ್ನು) ನಿರೂಪಿಸುವ ವೇದಾರ್ಥಗಳನ್ನು ತಿಳಿಯುವ ಕ್ರಮದಲ್ಲಿಯೇ ಅವರು ಅವುಗಳನ್ನಾಚರಿಸುವ ಪ್ರಕಾರ ಭೇದ-ಗಳನ್ನೂ ತಿಳಿಯಬಹುದು. ಮುಕ್ತಿಯೋಗ್ಯ ಜೀವರಿಗೆ ಧ್ಯಾನದಲ್ಲಿ ಭಗವದ್ಗುಣಗಳು ಪ್ರತೀತವಾಗುವುವಷ್ಟೆ. ಈ ಗುಣ ಜ್ಞಾನಾನುಸಾರವಾಗಿ ವೇದಾರ್ಥಗಳನ್ನು ನಯನಮಾಡುವವರು (ನಿರ್ಣಯಿಸಿ ತಿಳಿಯುವವರು) ಭಕ್ತಿಯೋಗಿಗಳು–ಇವರು ದೇವತೆಗಳೇ; ಶಿಕ್ಷಾದಿ ವೇದಾಂಗಗಳಿಗೆ ಅನುಸಾರವಾಗಿ ವೇದಾರ್ಥಗಳನ್ನು ತಿಳಿದು ಅದರಿಂದ ಭಗವದ್ಗುಣ ಜ್ಞಾನವನ್ನು ಹೊಂದಿ ಧ್ಯಾನಿಸುವವರು ಜ್ಞಾನ ಯೋಗಿಗಳು; ವೇದೋಕ್ತ ಕರ್ಮಗಳನ್ನರಿತು ಅವುಗಳನ್ನಾಚರಿಸಿ ತದನುಸಾರವಾದ (ಕರ್ಮಾನುಷ್ಠಾನದಿಂದ ದೊರೆತ)

---

45. ಗುಣದೋಷಭಿದಾ ದೃಷ್ಟಿಮಂತರೇಣ ವಚಸ್ತವ । ನಿಃಶ್ರೇಯಸಂ ಕಥಂ ನು ಸ್ಯಾತ್ ನಿಷೇಧ ವಿಧಿ ಲಕ್ಷಣಮ್ ॥' ಎಂದು, ವೇದೋಕ್ತವಿಧಿ ನಿಷೇಧಗಳು. ಅವುಗಳಲ್ಲಿ ಗುಣದೋಷ ರೂಪಭೇದವಿದೆಯೆಂದು ತಿಳಿಯದಿದ್ದರೆ, ಪುರುಷಾರ್ಥ ಸಾಧಕಗಳು ಹೇಗಾದಾವು? ಎಂದು ಭಾಗವತದಲ್ಲಿ ಉದ್ಧವನು ಕೃಷ್ಣನನ್ನು ಪ್ರಶ್ನಿಸಿದ್ದಾನೆ. ಅದನ್ನು ಉತ್ತರಿಸುತ್ತ, ಶ್ರೀಕೃಷ್ಣನು, 'ದೋಷೋಽಪಿ ಗುಣ ಏವಸ್ಯಾದ್ಭಗವತ್ಪ್ರೀತಿತೋ ಗುಣಃ॥ ದೋಷಸ್ತು ತದ್ವೈಪರೀತ್ಯಾ ದಿತಿ ದೃಷ್ಟ್ವಾ ಭವೇದ್ಗುಣಃ ॥ ಎಂಬುದಾಗಿ ಹೇಳಿ, ಭಗವಂತನ ಪ್ರೀತಿ–ಅಪ್ರೀತಿಗಳೇ ಗುಣದೋಷಗಳನ್ನು ನಿರ್ಣಯಿಸುವ ಲಕ್ಷಣಗಳೆಂಬ ನಿರ್ಣಯವನ್ನು ಹೇಳಿದ್ದಾನೆ.

ಗುಣಜ್ಞಾನವನ್ನು ಸಂಪಾದಿಸಿ, ಆ ಗುಣಗಳನ್ನು ಚಿಂತಿಸುವವರು ಕರ್ಮ-ಯೋಗಿಗಳು. ಭಕ್ತಿ-ಜ್ಞಾನ-ಕರ್ಮಗಳು ತ್ರಿವಿಧ ಯೋಗಿಗಳಿಗೂ ಉಂಟು. ಆದರೆ ಭಕ್ತಿಯೋಗಿಗಳಿಗೆ ಭಕ್ತಿಗಿಂತ ಜ್ಞಾನಕರ್ಮಗಳು ಕಡಿಮೆ. ಹೀಗಿದ್ದರೂ ಇವರ ಜ್ಞಾನಕರ್ಮಗಳು ಜ್ಞಾನ ಕರ್ಮಯೋಗಿಗಳ ಜ್ಞಾನಕರ್ಮಗಳಿಗಿಂತ ಅಧಿಕವೇ. ಜ್ಞಾನ ಯೋಗಿಗಳಿಗೆ ಭಕ್ತಿ ಕರ್ಮಗಳಿಗಿಂತ ಜ್ಞಾನವೇ ಅಧಿಕ. ಹೀಗೆಯೇ ಕರ್ಮ ಯೋಗಿಗಳಿಗೂ ಕರ್ಮಾಧಿಕ್ಯವನ್ನು ತಿಳಿಯಬೇಕು. ಈ ಪ್ರಮೇಯಗಳು ಭಾಗವತ ತಾತ್ಪರ್ಯದಲ್ಲಿ ಶ್ರೀಮದಾನಂದ ತೀರ್ಥ ಭಗವತ್ಪಾದರಿಂದ ಉದಾಹರಿಸಲಾಗಿರುವ ಪ್ರಮಾಣಗಳಲ್ಲಿ ಸುಸ್ಪಷ್ಟವಾಗಿ ನಿರೂಪಿಸಲ್ಪಟ್ಟಿವೆ.[46]

---

46. ಭಗವದ್ಗುಣಾನುಸಾರೇಣ ವೇದಾರ್ಥೋ ನೀಯತೇ ಹಿ ಯೈಃ ।
ಭಕ್ತಿಯೋಗಾಸ್ತು ತೇ ಪ್ರೋಕ್ತಾಃ ತಾದೃಶಾಹಿ ಸುರಾಃ ಸದಾ ॥
ಅಂಗಾನುಸಾರಿ ವೇದಾರ್ಥಂ ಜ್ಞಾತ್ವಾ ತದನುಸಾರತಃ ।
ಭಗವದ್ಗುಣಾ ಯೈರ್ನೀಯಂತೇ ತೇ ಪ್ರೋಕ್ತಾ ಜ್ಞಾನಯೋಗಿನಃ ॥
ಕರ್ಮಾಣಿ ಶಾಸ್ತ್ರತೋ ಜ್ಞಾತ್ವಾ ತತ್ರಾಧಾನ್ಯಾನುಸಾರತಃ ।
ವಿಜ್ಞಾತಾ ಯೈರ್ಗುಣಾ ವಿಷ್ಣೋರ್ಜ್ಞೇಯಾಸ್ತೇ ಕರ್ಮಯೋಗಿನಃ ॥
ಭಕ್ತಿರ್ಜ್ಞಾನಂ ಚ ಕಿಂಚಿಸ್ತು ದಶ್ಯಾತ್ತೇಷ್ವಪಿ ಜಾಯತೇ ।
ತಥಾ ಪಿ ಕರ್ಮಯೋಗಾಸ್ತೇ ಕರ್ಮಪೂರ್ವಶ್ಚ ಕಾರಣಾತ್ ॥
ಭಗವದ್ಗುಣಾನುರಾಗಿತ್ವಂ ಅಧಿಕಂ ಭಕ್ತಿಯೋಗಿನಾಮ್ ।
ತಸ್ಮಾತ್ತೇಭ್ಯಧಿಕಾಹ್ಯೇಷು ದೇವಾ ಏವ ವಿಶೇಷತಃ ॥
ಜ್ಞಾನಾಧಿಕ್ಯಂ ತು ದೇವಾನಾಂ ಭಕ್ತ್ಯಾಧಿಕ್ಯಂ ತಥೈವ ಚ ।
ವಿರಾಗೋಭ್ಯಧಿಕಸ್ತೇಷಾಂ ಸದೈವ ಸನಕಾದಿನಾಮ್ ॥
ಜ್ಞಾನಾಧಿಕ್ಯಾನ್ಮನುಷ್ಯೇಭ್ಯೋ ಮನ್ಯಂತೇ ಜ್ಞಾನಯೋಗಿನಃ ।
ನನು ಜ್ಞಾನಾಧಿಕಾಸ್ತೇವೈ ದೇವೇಭ್ಯಸ್ತು ಕಥಂಚನನ ॥
ದೇವಾನಾಮಪಿ ಕರ್ಮಿತ್ವಂ ವಿದ್ಯತೇ ಯದ್ಯಪಿ ಸ್ಫುಟಮ್ ।
ತಥಾಪಿ ಪ್ರತ್ಯವಾಯಿತ್ವಾನ್ಮನುಷ್ಯಾಃ ಕರ್ಮಯೋಗಿನಃ ॥
ತ್ರಿಯೋಗಾಭ್ಯಧಿಕೋ ಬ್ರಹ್ಮಾ ಸರ್ವೇಭ್ಯಃ ಪರಮೋವಿಭುಃ ॥
ಮಹಾಯೋಗೇಶ್ವರೇಶೇಶಸ್ತಸ್ಮಾದ್ಬ್ರಹ್ಮಾ ಚತುರ್ಮುಖಃ ॥ ಇತ್ಯಾದಿ.

ಬ್ರಹ್ಮಸಾಕ್ಷಾತ್ಕಾರಕ್ಕೆ ಅರ್ಹರಾದ ಅಧಿಕಾರಿಗಳು, ಹೀಗೆ ವಿವಿಧ ಸ್ವರೂಪಯೋಗ್ಯತೆಯುಳ್ಳವರಾದ್ದರಿಂದ, ಸ್ವಯೋಗ್ಯತೆಗೆ ಮೀರಿದ ದೇವಾದಿ ಪದಗಳನ್ನು ಹೊಂದುವ ಯತ್ನವನ್ನು - ಅಷ್ಟೇಕೆ! ಇಚ್ಛೆಯನ್ನು ಸಹ ಸರ್ವಥಾ ಹೊಂದಕೂಡದೆಂದು ಎಚ್ಚರಿಸಲಾಗಿದೆ. '**ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ ।**' ಇತ್ಯಾದಿ ಪ್ರಮಾಣಗಳು ಅಯೋಗ್ಯಾಪೇಕ್ಷೆಯು ಅಧಃಪತನಕ್ಕೆ ಕಾರಣವೆಂದು ಹೇಳುತ್ತವೆ. ಸ್ವಯೋಗ್ಯತೆಯ ಅರಿವು ದೊರೆಯುವವರೆಗೆ (ಅಪರೋಕ್ಷ ಜ್ಞಾನವಾಗುವವರೆಗೆ) ದೇವ ಋಷಿ ಗಂಧರ್ವಾದಿ ಪದಗಳನ್ನು ಇಚ್ಛಿಸದೇ[47] ಸದಾ ಶುಭವನ್ನು ಕೋರುತ್ತ (ಶುಭಂ ದೇಹಿ-ದೇಹೀತಿ ಸ್ವಯೋಗ್ಯ ಉತ್ತಮಗತಿಯನ್ನು ಕರುಣಿಸೆಂದು ಶ್ರೀಹರಿಯನ್ನು ಯಾಚಿಸುತ್ತ ಎಚ್ಚರಿಕೆಯಿಂದ ಸಾಧನ ಮಾರ್ಗದಲ್ಲಿ ಮುಂದರಿಯಬೇಕು.[48] ಬ್ರಹ್ಮಾದಿ ಪದಗಳನ್ನು (ಅಧಿಕಾರ

---

ಇವುಗಳ ಭಾವಾರ್ಥ :-

ಮೊದಲಿನ ಮೂರು ಶ್ಲೋಕಗಳು ಯೋಗಿಗಳು (ಪರಬ್ರಹ್ಮ ಪ್ರಾಪ್ತಿಗಾಗಿ ದುಡಿಯುವವರು - ಮೋಕ್ಷಾಪೇಕ್ಷಿಗಳು), ತ್ರಿವಿಧರೆಂದು ಹೇಳಿ, ಅವರ ಲಕ್ಷಣಗಳನ್ನು ಹೇಳುತ್ತವೆ. (ಈ ಮೇಲೆ ವಿವರಿಸಿದಂತೆ ಇದೆ) ಭಕ್ತಿ ಯೋಗಿಗಳಿಗೆ ಭಗವದ್ಗುಣಗಳಲ್ಲಿ ಅತ್ಯಧಿಕವಾದ ಪ್ರೀತಿಯು ಇರುತ್ತದೆ. ಯೋಗಿಗಳಲ್ಲಿ ಭಕ್ತಿ-ಯೋಗಿಗಳಾದ ದೇವತೆಗಳೇ ಶ್ರೇಷ್ಠರು. ದೇವತೆಗಳಿಗೆ ಜ್ಞಾನ ಭಕ್ತಿಗಳಲ್ಲಿ ಸಹ ಆಧಿಕ್ಯವುಂಟು. ವೈರಾಗ್ಯದಲ್ಲಿ ಸಹ ಅವರು ಎಲ್ಲರಿಗಿಂತ ಅಧಿಕರು. ಸನಕಾದಿ ಜ್ಞಾನ ಯೋಗಿಗಳಿಗೆ ಮನುಷ್ಯರಿಗಿಂತ ಜ್ಞಾನ ಪ್ರಮಾಣವು ಅಧಿಕವೇ ಹೊರತು, ದೇವತೆಗಳಿಗಿಂತ ಜ್ಞಾನವು ಅಧಿಕವೆಂದಲ್ಲವೇ ಅಲ್ಲ. ದೇವತೆಗಳಲ್ಲಿ ಕರ್ಮತ್ವವೂ (ಯಜ್ಞಾದಿ ಕರ್ಮಾಚರಣೆಯೂ) ಕಂಡಿದೆ. ಕರ್ಮಯೋಗಿಗಳಾದ ಮನುಷ್ಯರಿಗೆ ಕರ್ಮವನ್ನು ಬಿಟ್ಟರೆ ಪ್ರತ್ಯವಾಯುವಿದೆ. ದೇವತೆಗಳಿಗೆ ಹಾಗಿಲ್ಲ. ಈ ಮೂರು ಪಂಗಡದ ಯೋಗಿಗಳಿಗಿಂತಲೂ ಬ್ರಹ್ಮನು ಅಧಿಕನು. ಯೋಗೇಶ್ವರರಿಗೂ ಸ್ವಾಮಿ-ಯಾಗಿ ಮಹಾ ಸಾಮರ್ಥ್ಯವುಳ್ಳ ಚತುರ್ಮುಖನೇ ಜೀವೋತ್ತಮನು.

47. ಸ್ವಬಿಂಬನಾದ ಶ್ರೀಹರಿಯ ಸಾಕ್ಷಾತ್ಕಾರದೊಂದಿಗೆ ಸ್ವಸ್ವರೂಪ ಜ್ಞಾನವೂ ಲಭಿಸುತ್ತದೆ. ಆದರೂ ಸ್ವಗುಣಾಚ್ಛಾದಿಕಾ ಮತ್ತು ಪರಮಾಚ್ಛಾದಿಕಾಗಳು ತೊಲಗಿದಮೇಲೆ ಸ್ವಸ್ವರೂಪವು ಅತಿ ಸ್ಪಷ್ಟವಾಗಿ ತೋರುತ್ತದೆ.

48. ಈ ಕಾರಣದಿಂದಲೇ ಮನುಷ್ಯೋತ್ತಮರೇ ಮೊದಲಾದ ಎಲ್ಲ ಮುಕ್ತಿ ಯೋಗ್ಯರಿಗೆ ಸತ್-ಚಿತ್-ಆನಂದ-ಆತ್ಮ ಎಂಬ ನಾಲ್ಕು ಗುಣಗಳು ಮಾತ್ರ ಉಪಾಸ್ಯಗಳೆಂದು ನಿಶ್ಚಯಿಸಲಾಗಿದೆ. ಸರ್ವ ವೇದಾರ್ಥ ನಿರ್ಣಯಜ್ಞಾನವುಳ್ಳವನಾಗಿ, ಈ ನಾಲ್ಕು

ಸ್ಥಾನಗಳನ್ನು) ಕೋರಿ, ತಪ ಆದಿ ಅತಿ-ಪ್ರಯತ್ನಗಳನ್ನು ಮಾಡಿದ ಹಿರಣ್ಯಕಶಿಪು ಮೊದಲಾದವರು ಅಧಃಪತನವನ್ನು ಹೊಂದಿದ ಚರಿತ್ರೆಗಳನ್ನು ಭಾಗವತಾದಿ ಆಗಮಗಳು ನಿದರ್ಶನರೂಪದಿಂದ ನಿರೂಪಿಸುತ್ತವೆ. ಇಲ್ಲಿ ಬ್ರಹ್ಮನಿಂದ ಹಿರಣ್ಯಕಶಿಪು ವರವನ್ನು ಪಡೆದನಲ್ಲದೇ ಆ ಪದವಿಗಾಗಿ ಯತ್ನಿಸಲಿಲ್ಲವೆಂಬ ಸಂಶಯಕ್ಕೆ ಕಾರಣವಿಲ್ಲ.[49] ಬ್ರಹ್ಮ-ರುದ್ರಾದಿಗಳನ್ನು ಪ್ರಸನ್ನೀಕರಿಸಿಕೊಂಡು ಅವರಿಂದ ವರಪಡೆದು, ಅದೇ ವರಬಲದಿಂದ ಅವರ ಸ್ಥಾನವಿಶೇಷಗಳನ್ನು ಆಕ್ರಮಿಸಬೇಕೆಂಬುದೇ ಅಸುರರ ಗುರಿಯು. ವೃಕಾಸುರನ ಚರಿತ್ರೆ ಮೊದಲಾದವು ಇದನ್ನೇ ಸೂಚಿಸುತ್ತವೆ.

ಮೋಕ್ಷ ಸಾಧನೆಯಲ್ಲಿ ಅಧಿಕಾರವುಳ್ಳ ಮುಕ್ತಿಯೋಗ್ಯ ಜೀವರನ್ನೂ, ಜ್ಞಾನಿಗಳನ್ನೂ (ಜೀವನ್ಮುಕ್ತರನ್ನೂ) ಧರ್ಮಜ್ಞಾನಾದಿಗಳಲ್ಲಿ (ಭಗವಂತನ ಪೂಜಾದಿ ಸತ್ಕರ್ಮಗಳಲ್ಲಿ ಮತ್ತು ಶ್ರವಣ ಮನನಾದಿ ಜ್ಞಾನ ಕಾರ್ಯಗಳಲ್ಲಿ) ಪ್ರೇರಿಸುವರು ವಿರಿಂಚಾದಿ ತತ್ತ್ವಾಭಿಮಾನಿ ದೇವತೆಗಳು. ಇವರು ಈ ಪ್ರೇರಕ ಕರ್ಮವನ್ನು ಶ್ರೀಹರಿಪೂಜೆಯೆಂದು ಶ್ರೀಹರಿ ಪ್ರೀತ್ಯರ್ಥವಾಗಿ ಆಚರಿಸುವುದರಿಂದ, ಇವರ ಪ್ರೇರಣಾನುಸಾರ ಪ್ರಜೆಗಳಿಂದ ಆಚರಿಸಲ್ಪಡುವ ಸಕಲ ಕರ್ಮಗಳ ಶುಭ ಫಲದಲ್ಲಿ ಈ ದೇವತೆಗಳು ಬಹು ದೊಡ್ಡ ಭಾಗಕ್ಕೆ ಅರ್ಹರಾಗುತ್ತಾರೆ. ಆ ಸತ್ಕರ್ಮಗಳನ್ನು ದೇವತೆಗಳ ಪ್ರೇರಣಾನುಸಾರ

---

ಗುಣಗಳ ಉಪಸಂಹಾರದಿಂದ (ಏಕಕಾಲದಲ್ಲಿ ಚಿಂತಿಸಿ) ಧ್ಯಾನಿಸಿದರೆ, ಸ್ವಯೋಗ್ಯತಾನುಗುಣವಾದಷ್ಟು ಗುಣಗಳ ಪ್ರತೀತಿಯು ಲಭಿಸುತ್ತದೆ. ಆತ್ಮಗುಣದಲ್ಲಿ ಸರ್ವಗುಣಗಳ ಅಂತರ್ಭಾವವೂ ಇದೆ. ಆದ್ದರಿಂದಲೇ ಆತ್ಮಗುಣೋಪಾಸನೆಯು ಬ್ರಹ್ಮಪರ್ಯಂತ ಸರ್ವರಿಗೂ ವಿಧಿಸಲ್ಪಟ್ಟಿದೆ.

49. ಅಧ್ಯಾಸ್ತೇ ಸರ್ವಧಿಷ್ಣೇಭ್ಯಃ ಪರಮೇಷ್ಠೀ ನಿಜಾಸನಮ್ । ತದಹಂ ವರ್ಧಮಾನೇನ ತಪೋಯಜ್ಞ ಸಮಾಧಿನಾ । ಕಾಲಾತ್ಮನೋಶ್ಚ ನಿತ್ಯತ್ವಾತ್ ಸಾಧಯಿಷ್ಯೇ ತಥಾತ್ಮನಃ ॥ (ಭಾಗವತ)

ರುದ್ರಾದಿ ಸರ್ವ ಪದಗಳಿಗಿಂತ ಉತ್ತಮವಾದ ಪದದಲ್ಲಿ (ಸತ್ಯಲೋಕಾಧಿಪತ್ಯದಲ್ಲಿ) ಬ್ರಹ್ಮದೇವನು ಸ್ಥಿರವಾಗಿ ಕುಳಿತಿರುವನು; ನಾನು, ತಪಸ್ಸು - ಯಜ್ಞ - ಸಮಾಧಿಗಳಿಂದ ನನಗೋಸ್ಕರ ಆ ಪದವನ್ನು ಸಾಧಿಸುತ್ತೇನೆ; ಕಾಲ ಅನಂತವಾದುದು, ನಾನು ಅವಿನಾಶಿಯು (ಜೀವನು ನಿತ್ಯ); ಆದ್ದರಿಂದ ಯತ್ನಿಸುತ್ತೇನೆಂದು, ಯತ್ನದ ಮೂಲೋದ್ದೇಶವು ನಿರೂಪಿಸಲಾಗಿರುವುದನ್ನು ಗಮನಿಸಬೇಕು.

ಆಚರಿಸಿದ ಅಲ್ಪಾಧಿಕಾರಿಗಳಿಗೆ ಸಹ ಅಲ್ಪ ಭಾಗದ ಫಲವು ದೊರೆಯುತ್ತದೆ. ಹೀಗೆಂದು ಶ್ರೀಬಾದರಾಯಣರ ನಿರ್ಣಯವು. ಈ ವಿಷಯದಲ್ಲಿ ಆತ್ರೇಯ ಔಡುಲೋಮಿಗಳ ಅಭಿಪ್ರಾಯಗಳು ಶ್ರೀ ವೇದವ್ಯಾಸರ, ಪೂರ್ವೋಕ್ತಫಲ ವಿಭಾಗದ ನಿರ್ಣಯವನ್ನು ವಿರೋಧಿಸುವುವೆಂದು ತಿಳಿಯಬಾರದು. ಆತ್ರೇಯರು ಧರ್ಮಜ್ಞಾನಗಳ ಫಲವು ಪ್ರೇರಕರಾದ ದೇವತೆಗಳಿಗೆಂದೂ, ಔಡುಲೋಮಿಗಳು, ಅವುಗಳನ್ನಾಚರಿಸುವ ಪ್ರಜೆಗಳಿಗೆ, ಯಜ್ಞಪುಣ್ಯದಲ್ಲಿ ಋತ್ವಿಕ್‌ಗಳಿಗೆ ದೊರೆಯುವಂತೆ,ಅಲ್ಪಭಾಗವೆಂದೂ ತಿಳಿಯುತ್ತಾರೆ. ಅವರ ಅಭಿಪ್ರಾಯಗಳು (ವಿವಕ್ಷಾಭೇದದಿಂದ) ಶ್ರೀವೇದವ್ಯಾಸರ ನಿರ್ಣಯದ ಏಕದೇಶವನ್ನು ಮಾತ್ರ ಹೇಳುತ್ತವೆ. ಬ್ರಹ್ಮಾದಿದೇವತೆಗಳು ತಾರತಮ್ಯಾನುಸಾರ ಜ್ಞಾನಾದಿಶುಭ ಕರ್ಮಗಳ ಫಲವನ್ನು ಹೊಂದುವಂತೆ, ಅಶುಭಪ್ರೇರಕರಾದ ಕಲ್ಯಾದಿ ಅಸುರರು ಮಿಥ್ಯಾಜ್ಞಾನಾದಿ (ತತ್ಕಾರಣವಾಗಿ ಉಳ್ಳ ಅಶುಭ ಕರ್ಮಗಳ) ದುಷ್ಟಫಲದ ಬಹುಭಾಗವನ್ನೂ ಹೊಂದುತ್ತಾರೆ. ಪಾಪಪ್ರವರ್ತಕರಾದರೂ (ಅಭಿಮಾನಿ ದೈತ್ಯರ ದ್ವಾರಾ ಪ್ರೇರಿಸುವ) ದೇವತೆಗಳು ಅಶುಭ ಕರ್ಮಗಳ ಫಲದಲ್ಲಿ ಭಾಗಿಗಳಾಗುವುದಿಲ್ಲ.[50]

ಸ್ವವಿಹಿತ ಕರ್ಮಗಳನ್ನು ಆಚರಿಸುವುದರಿಂದ ಸರ್ವರೂ ಸ್ವಯೋಗ್ಯ ಗತಿಗಳನ್ನು ಹೊಂದುತ್ತಾರೆ. ಆದರೂ ವರ್ಣಗಳಲ್ಲಿ ಬ್ರಾಹ್ಮಣ ವರ್ಣದಂತೆ,

50. ಶುಭಾಶುಭಫಲಂ ದೇವಾ ಅಸುರಾಶ್ಚ ಸಮಾಪ್ನುಯುಃ ।
ಕ್ರಮೇಣೈವ ಯಥಾಶಕ್ತಿ ಯಥಾ ಯೇ ಯೇ ಪ್ರಯೋಜಕಾಃ ।
ಪ್ರೇರಕಾ ಅಪಿ ಪಾಪಾನಾಂ ನ ದೇವಾಃ ಪಾಪಮಾಪ್ನುಯುಃ ।
ಇತಿ ಪ್ರಕಾಶಿಕಾಯಾಂ ಹಿ ಪ್ರೋವಾಚ ಹರಿರಂಜಸಾ ।। (ಅನು ವ್ಯಾಖ್ಯಾನ)

ಇವುಗಳ ಭಾವಾರ್ಥ :-

ಯಾರು ಯಾರು ತಮ್ಮ ಸ್ವಭಾವ ಶಕ್ತಿಗಳನ್ನು ಅನುಸರಿಸಿ (ಯಥಾಶಕ್ತಿ) ಪುಣ್ಯ ಪಾಪಗಳಿಗೆ ಪ್ರಯೋಜಕರೋ (ಸಹಾಯಕರೋ) ಅವೇ ಕ್ರಮದಿಂದ, ದೇವತೆಗಳು ಮತ್ತು ಅಸುರರು ಶುಭಾಶುಭ ಫಲಗಳನ್ನು ಹೊಂದುತ್ತಾರೆ; ದೇವತೆಗಳು ಅಶುಭ ಕರ್ಮಗಳಿಗೆ ಪ್ರೇರಕರಾದರೂ, ಅಶುಭ ಫಲವನ್ನು ಹೊಂದುವುದಿಲ್ಲ; ಹೀಗೆ ಪ್ರಕಾಶ ಸಂಹಿತೆಯಲ್ಲಿ ಶ್ರೀಹರಿಯೇ (ಶ್ರೀ ವೇದವ್ಯಾಸರೇ) ಸ್ಪಷ್ಟವಾಗಿ ನಿರ್ಣಯಿಸಿದ್ದಾರೆ. ರತ್ನ 3 – ಪರಿಚ್ಛೇದ 2ನ್ನು ಇಲ್ಲಿ ಓದಿಕೊಳ್ಳಬಹುದು.

ಆಶ್ರಮಗಳಲ್ಲಿ ಯತ್ಯಾಶ್ರಮವು ಶ್ರೇಷ್ಠವಾದುದು. ಅತಿಶಯವಾಗಿ ಜ್ಞಾನ ಸಾಧನೆಗೆ ಅವಕಾಶವಿರುತ್ತೆಂಬ ಕಾರಣದಿಂದ ಯತ್ಯಾಶ್ರಮದ ಶ್ರೇಷ್ಠತೆಯು ಅದರಿಂದ ಮಾತ್ರ ಮೋಕ್ಷಪ್ರಾಪ್ತಿಯೆಂಬ ಕಾರಣದಿಂದಲ್ಲ. 'ಕುಟುಂಬೀ ಶುಚೌದೇಶೇ ಸ್ವಾಧ್ಯಾಯಮಧೀಯಾನೋಧಾರ್ಮಿಕಾನ್ ವಿದಧತ್. ನ ಚ ಪುನರಾವರ್ತತೇ' ಎಂಬ (ಛಾಂದೋಗ್ಯ)ಶ್ರುತಿಯು, ಗೃಹಸ್ಥನು ಶುದ್ಧ ಸ್ಥಳದಲ್ಲಿ ಕೂತು ವೇದಾಧ್ಯಯನಾದಿಗಳನ್ನು ಮಾಡಿ ಧರ್ಮಗಳನ್ನಾಚರಿಸಿ ಮುಕ್ತನಾಗುತ್ತಾನೆ. ತಿರುಗಿ ಸಂಸಾರಕ್ಕೆ ಬರುವುದಿಲ್ಲವೆಂದು ಹೇಳುತ್ತದೆ. ಇದರಿಂದ ಗೃಹಸ್ಥರಿಗೆ ಮಾತ್ರ ಮುಕ್ತಿಯೆಂದು ತಿಳಿಯಕೂಡದು. ಈ ಶ್ರುತಿಯು, ಗೃಹಸ್ಥ ಧರ್ಮಗಳನ್ನು ಸಂಪೂರ್ಣವಾಗಿ ಆಚರಿಸುವುದರಲ್ಲಿ ಶಕ್ತರಾದ ದೇವತೆಗಳ ವಿಷಯವನ್ನು ಹೇಳುತ್ತದೆ. ಆದ್ದರಿಂದ, ಯತ್ಯಾಶ್ರಮದ ಶ್ರೇಷ್ಠತೆಗೆ ಇದರಿಂದ ವಿರೋಧವಿಲ್ಲ. ಸಕಲಾಶ್ರಮ ಧರ್ಮಗಳನ್ನು ಪಾಲಿಸುವುದರಲ್ಲಿ ಉತ್ತಮಾಧಿಕಾರಿಗಳಾದ ದೇವತೆಗಳೇ ಸಮರ್ಥರು.[51]

ಬ್ರಹ್ಮದರ್ಶನವು, ನಿಯತ ಗುರೂಪದೇಶದಿಂದ ಪ್ರಾಪ್ತವಾದ ಬಿಂಬೋಪಾಸನೆಯಿಂದ ಮಾತ್ರ ಲಭ್ಯವೆಂದು ಈಹಿಂದೆ ನಿರೂಪಿತ-ವಾಗಿರುವುದಷ್ಟೆ. ಈ ಗುರೂಪದೇಶವು ಅತ್ಯಂತ ರಹಸ್ಯವಾದುದು. ಗುರುವೂ ರಹಸ್ಯವಾಗಿ ಉಪದೇಶಿಸುತ್ತಾನೆ. ಶಿಷ್ಯನೂ ಗುರೂಕ್ತ ರಹಸ್ಯವನ್ನು ಯಾರೊಡನೆಯೂ ಪ್ರಸ್ತಾಪಿಸುವುದಿಲ್ಲ. ಪ್ರಸ್ತಾಪಿಸಕೂಡದು. ಸಂಸಾರವನ್ನು ತೊಲಗಿಸಿ, ಪುನರಾವೃತ್ತಿ ರಹಿತವಾದ ನಿತ್ಯಾನಂದ ಸ್ಥಿತಿಯನ್ನು ಹೊಂದಿಸುವ (ಆತ್ಮೋದ್ಧಾರಕ) ಉಪದೇಶ ಅತಿ ರಹಸ್ಯವಾಗಿರಬೇಕಾದುದು ಅವಶ್ಯಕ. ಇಷ್ಟು ಮಾತ್ರವಲ್ಲ, ಅಪರೋಕ್ಷಜ್ಞಾನಕ್ಕೆ ಕಾರಣವಾದ ಪರೋಕ್ಷಜ್ಞಾನದ

---

51 'ಕೃತ್ಸ್ನಾಹ್ಯೇತೇ ಗೃಹಿಣೋ ದೇವಾಃ ಕೃತ್ಸ್ನಾಹ್ಯೇತೇ ಯತಯಃ । ನ ಚೈತೇ ಗೃಹಾನ್ವಿಸೃಜಂತ್ಯರಾಗಾ ಅದ್ವೇಷ್ಟಾ ಅಭೋಗಾಃ ಸರ್ವಭೋಗಾಃ ಸರ್ವಜ್ಞಾಃ ಸರ್ವಕರ್ತಾರಃ' । ಈ ಪೌತ್ರಾಯಣ ಶ್ರುತಿಯು, 'ಈ ದೇವತೆಗಳೇ ಪೂರ್ಣಗೃಹಸ್ಥರು -ಇವರೇ ಪೂರ್ಣಯತಿಗಳು-ಇವರು ಪತ್ನಿ ಗೃಹಗಳನ್ನು ತ್ಯಜಿಸುವುದಿಲ್ಲ, ಆದರೂ ರಾಗರಹಿತರು - ದ್ವೇಷರಹಿತರೂ ಆಗಿರುವರು; ಸರ್ವಭೋಗಿಗಳಾದರೂ ಭೋಗ-ರಹಿತರು - ಸರ್ವ ಕರ್ಮಕರ್ತರು - ಸರ್ವಜ್ಞರು (ಯಥಾಯೋಗ್ಯ ಪೂರ್ಣಜ್ಞಾನ-ವುಳ್ಳವರು)' ಎಂದು ದೇವತೆಗಳ ಮಹಿಮೆಯನ್ನು ಹೇಳುತ್ತದೆ.

ಉಪದೇಶವೂ (ಶಾಸ್ತ್ರ ಪ್ರತಿಪಾದ್ಯ ರಹಸ್ಯ ಪ್ರಮೇಯಗಳ ಉಪದೇಶವೂ) ಗುರು ಶಿಷ್ಯರಲ್ಲಿ ರಹಸ್ಯವಾಗಿಯೇ ನಡೆಯತಕ್ಕದ್ದು. ಬಹಿರಂಗವಾಗಿ ಸಭಾದಿ-ಗಳಲ್ಲಿ ಬ್ರಹ್ಮವಿದ್ಯೆಯನ್ನು (ಉಪಾಸನೆಗೆ ಬೇಕಾದ ವಿಷ್ಣು ಮಹಿಮೆಗಳನ್ನು) ಪ್ರಚಾರ ಮಾಡಕೂಡದು. ಹಾಗೆ ಮಾಡಿದರೆ ಪಾತ್ರಾಪಾತ್ರ ವಿವೇಚನೆಗೆ ಅವಕಾಶವಿಲ್ಲದೇ, ಆ ವಿದ್ಯೆಯು ಅಯೋಗ್ಯರಲ್ಲಿ ಸೇರುವ ಸಂಭವ-ವುಂಟಾಗುತ್ತದೆ. ಅಪಾತ್ರರಲ್ಲಿ ಸೇರುವ ಬ್ರಹ್ಮವಿದ್ಯೆಯು ಹೇಳುವವನಿಗೂ ಸಜ್ಜನ ಲೋಕಕ್ಕೂ ಅನರ್ಥಕಾರಿಯಾಗುತ್ತದೆ. ಆದರೆ ರಹಸ್ಯದಲ್ಲಿ ಸತ್ಪಾತ್ರನಿಗೆ ಮಾಡುವ ವಿದ್ಯಾದಾನದಿಂದ ಗುರುವಿಗೂ ಮಹಾಫಲವುಂಟು. ಶಿಷ್ಯನಿಗೂ ಶ್ರೇಯಸ್ಸು.

ಶ್ರವಣಾದಿ ಸಾಧನಗಳು ಪೂರ್ತಿಗೊಳ್ಳಬಹುದು. ಗುರೂಪದೇಶವೂ ರಹಸ್ಯದಲ್ಲಿ ದೊರೆಯಬಹುದು. ಆದರೂ ಅದೇ ಜನ್ಮದಲ್ಲಿ ಬ್ರಹ್ಮಸಾಕ್ಷಾತ್ಕಾರ-ವಾಗುವುದೆಂಬ ನಿಯಮವಿಲ್ಲ. ಅಪರೋಕ್ಷ ಪ್ರತಿಬಂಧಕ ಪೂರ್ವಕರ್ಮವಿದ್ದರೆ, ಜನ್ಮಾಂತರದಲ್ಲಿ ಮಾತ್ರ ಸಾಕ್ಷಾತ್ಕಾರವು ದೊರೆಯುತ್ತದೆ. ಇದರಂತೆ, ಬ್ರಹ್ಮಸಾಕ್ಷಾತ್ಕಾರವಾದ ದೇಹವು ಬಿದ್ದು ಹೋದೊಡನೆಯೇ ಮುಕ್ತ-ನಾಗುವನೆಂಬ ನಿಯಮವೂ ಇಲ್ಲ. ಮೋಕ್ಷ ಪ್ರತಿಬಂಧಕ ಪ್ರಬಲ ಪ್ರಾರಬ್ಧ ಕರ್ಮವಿದ್ದಲ್ಲಿ ಅದರ ಭೋಗಾನಂತರವೇ ಮುಕ್ತನಾಗುವನು.

ಜ್ಞಾನದ ಮಹಿಮೆಯು ಹೀಗೆ ಅದ್ಭುತವಾದುದೆಂಬ ಕಾರಣದಿಂದಲೇ, 'ಜ್ಞಾನೇನೈವ ಅಮೃತೀ ಭವತಿ', 'ವಿದ್ಯಯಾ ಅಮೃತಮಶ್ನುತೇ' ಇತ್ಯಾದಿ ಶ್ರುತಿಗಳು ಜ್ಞಾನವನ್ನು ಪ್ರಶಂಸಿಸುತ್ತವೆ. ಮುಂದಿನ ರತ್ನ ೫ರಲ್ಲಿ ಜ್ಞಾನ ಪ್ರಾಪ್ಯ ಫಲಗಳನ್ನು ಸಂಗ್ರಹವಾಗಿ ನಿರೂಪಿಸಲಾಗುತ್ತದೆ.

ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತುಮೇ ಜನ್ಮಜನ್ಮನಿ
॥ ಶ್ರೀಕೃಷ್ಣಾರ್ಪಣಮಸ್ತು ॥
ಓಂ ತತ್ಸತ್

# ಮುಕ್ತಿ
## (ಬ್ರಹ್ಮಜ್ಞಾನ ಫಲ)
## (ರತ್ನ - ೫)

## ಪರಿಚ್ಛೇದ ೧

## ಕರ್ಮ ಕ್ಷಯ

ವೈರಾಗ್ಯ , ಭಕ್ತಿ , ಉಪಾಸನೆ ಮತ್ತು ಜ್ಞಾನಗಳು ಮೋಕ್ಷ ಸಾಧನಗಳೆಂದು ರತ್ನ ೪ ರಲ್ಲಿ ಹೇಳಲಾಯಿತಷ್ಟೆ. ಇವು ಒಂದೊಂದೂ, ಮುಕ್ತಿ ಸಾಧನಗಳಾದರೂ, ಪರಸ್ಪರ ಒಂದಕ್ಕೊಂದು ಸಾಧನರೂಪಗಳೂ ಆಗಿವೆ. ವೈರಾಗ್ಯದಿಂದ ಭಕ್ತಿದಾರ್ಢ್ಯವೂ, ದೃಢಭಕ್ತಿಯಿಂದ ಉಪಾಸನೆಯೂ, ಆದರಿಂದ ಬ್ರಹ್ಮ-ಸಾಕ್ಷಾತ್ಕಾರವೂ ದೊರೆಯುತ್ತದೆ. ಬ್ರಹ್ಮದರ್ಶನ ಪಡೆದವನೇ ಬ್ರಹ್ಮಜ್ಞಾನಿಯು – ಆತನಿಗೆ ಮೋಕ್ಷವು ತಪ್ಪದೇ ದೊರೆಯುತ್ತದೆ. ಬ್ರಹ್ಮದರ್ಶನ ಮಹಿಮೆಯನ್ನು ಈ ಹಿಂದೆ ಸಾಕಷ್ಟು ವಿಸ್ತರಿಸಲಾಗಿದೆ. ಬ್ರಹ್ಮಜ್ಞಾನ ಲಭ್ಯ ಫಲಸ್ವರೂಪವನ್ನು ವಿವೇಚಿಸಿ ನಿರೂಪಿಸಲು ಈ ರತ್ನವು ಪ್ರವೃತ್ತವಾಗಿದೆ.

ಬ್ರಹ್ಮದರ್ಶನವನ್ನು ಪಡೆದ ಜೀವನು, ಪ್ರಾರಬ್ಧ ಕರ್ಮವನ್ನು ಭೋಗಿಸಿದ ನಂತರ ಪುನಃ ನಶ್ವರ ಭೌತಿಕ ದೇಹಗಳಲ್ಲಿ ಬರದೇ ಇರುವ ಸ್ಥಿತಿಯನ್ನು ಹೊಂದಿ, ಪ್ರಳಯಕಾಲದಲ್ಲಿ ಚತುರ್ಮುಖನೊಂದಿಗೆ ಲಿಂಗಭಂಗವನ್ನು ಹೊಂದಿ, ಭಗವಂತನ ಉದರವನ್ನು ಪ್ರವೇಶಿಸಿ, ಧ್ಯಾನಾವಸ್ಥೆಯಲ್ಲಿ ಸ್ವರೂಪಾನಂದವನ್ನು ಭೋಗಿಸುವನೆಂದು, ಈ ಹಿಂದೆ ಸಂಗ್ರಹವಾಗಿ ನಿರೂಪಿಸಲಾದ ಪ್ರಮೇಯಗಳ ವಿಮರ್ಶಾತ್ಮಕ ವಿಸ್ತಾರವೇ ಈ ಗ್ರಂಥದ ವಿಷಯ. ಬ್ರಹ್ಮಜ್ಞಾನದ ಫಲವು, ಕರ್ಮಕ್ಷಯ – ಉತ್ಕ್ರಾಂತಿ – ಮಾರ್ಗ ಮತ್ತು ಭೋಗಗಳೆಂದು ನಾಲ್ಕು ಪ್ರಕಾರವಾದುದು. ಬ್ರಹ್ಮಸಾಕ್ಷಾತ್ಕಾರವಾಗುವ ಕಾಲದಲ್ಲಿ ಫಲ ಕೊಡುವುದಕ್ಕೆ ಆರಂಭವಾದ (ಪ್ರಾರಬ್ಧ) ಕರ್ಮವನ್ನು ತಿಳಿದು, ಆ ಹಿಂದಿನ ಅಸಂಖ್ಯ ಜನ್ಮಗಳಲ್ಲಿ ಸಂಚಿತವಾದ (ಕೂಡಿಬಿದ್ದ) ಕರ್ಮರಾಶಿಯು,

ಬ್ರಹ್ಮದರ್ಶನದಿಂದ, ಹತ್ತಿಯ ರಾಶಿಯು ಅಗ್ನಿ ಕಣ ಪ್ರವೇಶದಿಂದಲೋ ಎಂಬಂತೆ, ಪೂರ್ಣವಾಗಿ ಸುಟ್ಟು ಹೋಗುತ್ತದೆ. ಪ್ರಾರಬ್ಧ ಕರ್ಮವನ್ನು ಭೋಗಿಸುವ ಕಾಲದಲ್ಲಿ ಜ್ಞಾನಿಯು ಆಚರಿಸುವ (ಮುಂದಿನ ಆಗಾಮಿ) ಕರ್ಮಗಳು ಲೇಪಿಸುವುದಿಲ್ಲ - ಎಂದರೆ ಸುಖದುಃಖಗಳಿಗೂ ಜನ್ಮಾಂತರಗಳಿಗೂ ಕಾರಣವಾಗುವುದಿಲ್ಲ. ಈ ರೂಪದ ಕರ್ಮಕ್ಷಯವು ಬ್ರಹ್ಮದರ್ಶನದ **ಮೊದಲಿನ ಫಲವು**. ಪ್ರಾರಬ್ಧ ಕರ್ಮವು ಅಲ್ಪವಾಗಿದ್ದರೆ, ಬ್ರಹ್ಮದರ್ಶನವನ್ನು ಯಾವ ದೇಹದಲ್ಲಿರುವಾಗ ಪಡೆದನೋ ಆ ದೇಹವು ಬಿದ್ದು ಹೋದನಂತರವೇ ಮುಕ್ತನಾಗುತ್ತನೆ - ಸಂಸಾರಕ್ಕೆ ತಿರಿಗಿ ಬರುವುದಿಲ್ಲ. ಪ್ರಾರಬ್ಧ ಕರ್ಮವು ಮಹತ್ತಾದುದಾಗಿದ್ದರೆ, ದೀರ್ಘಕಾಲದ ನಂತರ, ಅದರ ಫಲವಾಗಿ ದೇಹಾಂತರ-ಗಳನ್ನು ಹೊಂದುವುದಿದ್ದರೆ ಅದನ್ನು ಹೊಂದಿ ಪ್ರಾರಬ್ಧ ಕರ್ಮಭೋಗವನ್ನು ಪೂರ್ಣಗೊಳಿಸಿ, ನಂತರ ಮುಕ್ತನಾಗುತ್ತಾನೆ. ಜ್ಞಾನಿಯು ಬಿಟ್ಟುಹೋಗುವ ಕೊನೆಯ (ಅಂತ್ಯದ) ದೇಹವನ್ನು 'ಚರಮ ದೇಹ'ವೆನ್ನುವರು. ಜ್ಞಾನಿಯು ಚರಮ ದೇಹವನ್ನು ಬಿಡುವ ಪರಿಯು (ಜ್ಞಾನಿ ಮರಣವು) ಅಜ್ಞಾನಿ ಮರಣದಿಂದ ವಿಲಕ್ಷಣವಾದುದು. **ಜ್ಞಾನಿಯು ಬ್ರಹ್ಮರಂಧ್ರವನ್ನು ಭೇದಿಸಿ-ಕೊಂಡು ಚರಮದೇಹದಿಂದ ಹೊರಹೊರಡುತ್ತಾನೆ.** ಇದನ್ನು (ಉತ್ಕ್ರಮಣವನ್ನು) ಉತ್ಕ್ರಾಂತಿಯೆಂದು ಕರೆಯಲಾಗುತ್ತದೆ. ಈ ವಿಧದ ಜ್ಞಾನಿಯ ವಿಶಿಷ್ಟ ದೇಹೋತ್ಕ್ರಮಣವು, ಬ್ರಹ್ಮದರ್ಶನದ **ಎರಡನೆಯ ಫಲವು**. ಚರಮದೇಹವನ್ನು ಬಿಟ್ಟು ಹೊರಟ ಜ್ಞಾನಿಜೀವನು, ಮುಂದೆ ಪ್ರಯಾಣ ಮಾಡುವ ಮಾರ್ಗವು, ಕರ್ಮಿಗಳ (ತಿರಿಗಿ ಬೇರೊಂದು ದೇಹಕ್ಕೆ ಬರಲಿರುವ ಜೀವರ) ಮಾರ್ಗದಿಂದ ಭಿನ್ನವಾದುದು. ಜ್ಞಾನಿಗಳ ಮತ್ತು ಕರ್ಮಿಗಳ ಮಾರ್ಗಗಳು, ಮಾರ್ಗದಲ್ಲಿ ದೊರೆಯುವ ಭಿನ್ನ ದೇವತಾಧಿಷ್ಠಿತ ಭಿನ್ನಲೋಕಗಳ ವಿವಕ್ಷೆಯಿಂದ, ಭಿನ್ನನಾಮಗಳಿಂದ ಕರೆಯಲ್ಪಡುತ್ತವೆ. ದೇವಯಾನ-ಪಿತೃಯಾನ; ಅರ್ಚಿರಾದಿ ಮಾರ್ಗ-ಧೂಮಾದಿ ಮಾರ್ಗ, ಇತ್ಯಾದಿ ವಿವಿಧ ನಾಮಗಳುಳ್ಳವು. ಬ್ರಹ್ಮ-ಜ್ಞಾನಿಯು ಅರ್ಚಿರಾದಿ ಮಾರ್ಗದಿಂದ ಪ್ರಯಾಣ ಮಾಡುತ್ತಾನೆ. ಅಜ್ಞಾನಿಗಳ ಮಾರ್ಗ ವಿಲಕ್ಷಣವಾದ ಮಾರ್ಗವು. ಬ್ರಹ್ಮಜ್ಞಾನಿಗೆ ದೊರೆಯುವುದೂ ಬ್ರಹ್ಮದರ್ಶನದ ಫಲವೇ-ಇದು **ಮೂರನೇ ಫಲವು**. ಸ್ವಯೋಗ್ಯ

ಪೂರ್ಣಾನಂದವನ್ನು ಅನುಭವಿಸುವ ನಿತ್ಯ ಸ್ಥಿತಿ ಮತ್ತು ಅಲ್ಲಿ ಮುಕ್ತರು ಕಾಲವಿಶೇಷಗಳಲ್ಲಿ ಅನುಭವಿಸುವ ನಾನಾ ಭೋಗಗಳು ಮತ್ತು ಕ್ರೀಡೆಗಳು; ಹಾಗೂ ಮುಕ್ತರ ತಾರತಮ್ಯ ಮತ್ತು ಅಧಿಕಾರಾನುಸಾರವಾಗಿ ದೊರೆಯುವ ಸಾಲೋಕ್ಯ - ಸಾಮೀಪ್ಯ - ಸಾರೂಪ್ಯ - ಸಾಯುಜ್ಯಗಳೆಂಬ ವಿವಿಧ ಪ್ರಕಾರದ ಮುಕ್ತ ಸ್ಥಿತಿಗಳೂ ಸಹ ಬ್ರಹ್ಮಜ್ಞಾನದ ಫಲಗಳೇ ಆಗಿವೆ - ಇದು **ನಾಲ್ಕನೆಯ ಫಲವು**. ಹೀಗಿರುವ ಕರ್ಮಕ್ಷಯಾದಿ ನಾಲ್ಕು ಪ್ರಕಾರದ ಫಲಗಳು ಪ್ರತಿಯೊಬ್ಬ ಜ್ಞಾನಿ ಜೀವನಿಗೂ ಬ್ರಹ್ಮಜ್ಞಾನದಿಂದಲೇ ಲಭಿಸುತ್ತವೆ.

ಬ್ರಹ್ಮಜ್ಞಾನಿಯ ಪ್ರಾರಬ್ಧ ಕರ್ಮಭೋಗಕಾಲದ ಸ್ಥಿತಿಯನ್ನು 'ಜೀವನ್ಮುಕ್ತಿ' ಯೆಂದೂ ಕರೆಯಲಾಗುತ್ತದೆ. ಭೌತಿಕ ದೇಹದಲ್ಲಿದ್ದರೂ - ಅಜ್ಞಾನಿಗಳ ದೇಹದಂತಿರುವ ದೇಹದಲ್ಲಿದ್ದರೂ, ಕರ್ಮಲೇಪ ರಹಿತನಾಗಿ, ಹರ್ಷಶೋಕಾದಿ ದ್ವಂದ್ವಗಳನ್ನು ಅಭಿಮಾನ ತ್ಯಾಗದಿಂದ ಅತಿಕ್ರಮಿಸಿ, ಜ್ಞಾನಿಯು, ನಿರಂತರ ಭಗವಚ್ಚಿಂತನೆಯಿಂದ ಆನಂದಿಸುವ ಮುಕ್ತ ಸದೃಶ ಸ್ಥಿತಿಯಲ್ಲಿರುತ್ತಾನೆ. ಹೀಗಿದ್ದರೂ ಜ್ಞಾನಿಯು ವಿಧಿನಿಷೇಧಗಳನ್ನು ಪಾಲಿಸುತ್ತಾನೆ; ಶ್ರವಣ ಮನನಗಳಲ್ಲಿಯೂ ಆಸಕ್ತನಾಗಿರುತ್ತಾನೆ. ಆಸನಾದಿಯೋಗ ನಿಯಮಗಳುಳ್ಳ ಧ್ಯಾನದಲ್ಲಿಯೂ ತೊಡಗುತ್ತಾನೆ; ಪರಮಾತ್ಮನ ಸರ್ವೋತ್ತಮತ್ವಾದಿ ಮಹಿಮೆಗಳನ್ನು ಕ್ಷಣಕಾಲವೂ ಮರೆಯದೇ ಆತನೇ ತನ್ನ ನಿತ್ಯ ಸ್ವಾಮಿಯೆಂಬ ಅನುಸಂಧಾನವುಳ್ಳವನಾಗಿರುತ್ತಾನೆ. ಆತ್ಮತ್ವೋಪಾಸನೆಯ ಮಹತ್ವವನ್ನು ಸರ್ವದಾ ಸ್ಮರಿಸುತ್ತಿರುತ್ತಾನೆ; ತಾನು ಪೂಜಿಸುವ ಪ್ರತಿಮೆಗಳು-ಧ್ಯಾನಿಸುವ ಮನೋಮಯಮೂರ್ತಿಯು, ಭಗವಂತನನ್ನು ಒಳಗಿಟ್ಟುಕೊಂಡಿರುವ ಅಧಿಷ್ಠಾನ ಮಾತ್ರಗಳೆಂಬುದನ್ನು ಎಂದೂ ಮರೆಯುವುದಿಲ್ಲ (ಪ್ರತೀಕವೇ ಭಗವಂತನೆಂಬ ಅಜ್ಞಾನದಿಂದ ಬಹುದೂರವಿರುತ್ತಾನೆ); ಸ್ವಯೋಗ್ಯ ಗುಣೋಪಸಂಹಾರದಿಂದ ಪರಮಾತ್ಮನನ್ನು ಧ್ಯಾನಿಸುತ್ತಾನೆ - ಧ್ಯಾನಿಸುವ ಪ್ರತಿಯೊಂದು ಗುಣವೂ ಪೂರ್ಣವೆಂದೇ (ಅನಂತವೆಂದೇ) ತಿಳಿದಿರುತ್ತಾನೆ. ಅಂಗೋಪಾಸನೆಯೇ ಮೊದಲಾದ ದೇವತೋಪಾಸ್ಯ ಗುಣಗಳ ಧ್ಯಾನವು ದೇವಾನ್ಯ ಅಧಮ ಜೀವರಿಗೆ ಅಯೋಗ್ಯವೂ ಅಧಃಪತನಕ್ಕೆ ಕಾರಣವೂ ಆಗುವುದರಿಂದ, ಸ್ವಯೋಗ್ಯತೆಯನ್ನು ಮೀರಿದ ಗುಣೋಪಾಸನೆಯಲ್ಲಿ

ತೊಡಗುವುದಿಲ್ಲ. ತನಗೆ ಯೋಗ್ಯವಲ್ಲದ ದೇವಾದಿ ಪದಗಳನ್ನು (ಅಧಿಕಾರ ಸ್ಥಾನಗಳನ್ನು) ಎಂದೂ ಅಪೇಕ್ಷಿಸುವುದಿಲ್ಲ. ಮನಸ್ಸಿನ ಏಕಾಗ್ರತೆಗೆ ಸಹಾಯಕ-ವಾದ ಯೋಗ್ಯ ದೇಶಕಾಲಗಳನ್ನು ಸಾಧಿಸಿಕೊಂಡು, ದೇಹವು ಚಲಿಸದಂತೆ ಸ್ಥಿರಾಸನದಲ್ಲಿ ಕೂತು ಭಗವಂತನನ್ನು ಧ್ಯಾನಿಸಿ ಆನಂದಿಸುತ್ತಾನೆ. ಹೀಗೆ ಭಗವದುಪಾಸನಾದಿಗಳನ್ನು, ಚರಮದೇಹವನ್ನು ಬಿಡುವವರೆಗೆ ತಪ್ಪದೇ ಆಚರಿಸುತ್ತಾನೆ. ಬ್ರಹ್ಮಜ್ಞಾನಿಯ ಈ ವಿಧ ನಡವಳಿಕೆಯೂ ಬ್ರಹ್ಮಸಾಕ್ಷಾತ್ಕಾರದ ಫಲರೂಪವಾದುದೇ. ಆತನ ಉಪಾಸನಾದಿಗಳಿಗೆ, ಮುಕ್ತರ ಉಪಾಸನಾದಿ-ಗಳಂತೆ, ಅನ್ಯಫಲವಿಲ್ಲ-ಅವು (ಬ್ರಹ್ಮಜ್ಞಾನಿಯ ಆಚರಣೆಗಳು) ಲೋಕ-ಶಿಕ್ಷಾರ್ಥವಾದುವು - ಸಾಧಕ ಜೀವರಿಗೆ ಮಾರ್ಗದರ್ಶನ ಮಾಡಿ ತನ್ಮೂಲಕ ಭಗವತ್ಪ್ರೀತಿಕರವಾಗುತ್ತವೆ.[1]

ಪ್ರಾರಬ್ಧ ಭೋಗಕಾಲದಲ್ಲಿ ಜ್ಞಾನಿಯ ನಡವಳಿಕೆಯು ಹೀಗಿರುತ್ತಿರಲು, ಆತನ ಅನ್ಯಕರ್ಮಕ್ಷಯ ಪ್ರಕಾರವನ್ನೂ ತದ್ವಿಷಯಕ ವಿವರಗಳನ್ನೂ, ತತ್ಸಂಬಂಧ ನಿರ್ಣಯಗಳನ್ನೂ ತಿಳಿಯಬೇಕಾದುದು ಅವಶ್ಯಕವಲ್ಲವೇ? ತಥಾಹಿ :-

ಮನೋವಚನ ಕಾಯಕೃತಜೀವಕರ್ಮಗಳು, ಸಂಚಿತ-ಪ್ರಾರಬ್ಧ-ಆಗಾಮಿಗಳೆಂದು ಮೂರುವಿಧ. ಈ ಮೂರು, ಪುನಃ ಪಾಪ-ಪುಣ್ಯಗಳೆಂಬ ದ್ವಿವಿಧತ್ವವುಳ್ಳವು. ಪ್ರತಿಜೀವನು ಮಾಡುವ ಕರ್ಮಗಳು ತಂತಮ್ಮ ಸಂಸ್ಕಾರ-ಗಳನ್ನು ಆತನ ಮನಸ್ಸಿನ ಮೇಲೆ ಮೂಡಿಸುತ್ತವೆ. ಸಂಸ್ಕಾರ ಸಹಿತವಾದ ಮನಸ್ಸು, ಜೀವನನ್ನು ಜನ್ಮಾಂತರಗಳಲ್ಲಿ ಸಹ ಹಿಂಬಾಲಿಸುತ್ತದೆ. ಪೂರ್ವ ಸಂಸ್ಕಾರಗಳು ಜೀವನ ಮುಂದಿನ ಕರ್ಮಗಳ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತವೆ. ಪ್ರಬಲ ಸಂಸ್ಕಾರಗಳ ಫಲವಾಗಿ ಜೀವನು ತನ್ನ ಇಚ್ಛೆಗೆ ವಿರುದ್ಧವಾದ

1. ಬ್ರಹ್ಮಸೂತ್ರಗಳ 4ನೇ ಅಧ್ಯಾಯದ ಕರ್ಮಕ್ಷಯವೆಂಬ 1ನೇ ಪಾದದಲ್ಲಿ ಭಗವದುಪಾಸನೆಗೆ ಸಂಬಂಧಿಸಿದ ಹಲವು ಪ್ರಧಾನ ನಿರ್ಣಯಗಳು ಹೇಳಲ್ಪಟ್ಟಿವೆ. ಇದರಿಂದ, ಬ್ರಹ್ಮಜ್ಞಾನಿಯ ಉಪಾಸನಾದಿಗಳಿಗೆ ಫಲಾಂತರಂಗತ್ವವು ಸೂಚಿತವೆಂದೂ ತಿಳಿಯಬೇಕು. ಜ್ಞಾನಿಗಳು, ಜ್ಞಾನಫಲವಾಗಿ, ಈ ನಿರ್ಣಯಾನುಸಾರ ನಡವಳಿಕೆ-ಯುಳ್ಳವರಾಗುತ್ತಾರೆ.

ಕರ್ಮಗಳಲ್ಲಿ ಸಹ ತೊಡಗುವುದುಂಟು. ಜೀವಕೃತ ಕರ್ಮಗಳು ಹೀಗೆ ಮನಸ್ಸಿನ ಮೇಲೆ ಸಂಸ್ಕಾರಗಳನ್ನು (impression) ಉಂಟು ಮಾಡುವುದರೊಂದಿಗೆ, ಕಾಲಾಂತರದಲ್ಲಿ ಸುಖದುಃಖ ಪ್ರಾಪಕ ಅದೃಷ್ಟವನ್ನೂ (ಶಕ್ತಿ ವಿಶೇಷವನ್ನೂ) ಉತ್ಪಾದಿಸುತ್ತವೆ. ಕರ್ಮಗಳು, ತತ್ಕಾಲದಲ್ಲಿ ಅಥವಾ ಕಾಲಾಂತರದಲ್ಲಿ ಸುಖಾದಿ ಜನಕ ಫಲಗಳಿಗೆ ಕಾರಣವಾಗುವುವೆಂಬುದು ಅನುಭವಸಿದ್ಧ. ಸುಖಪ್ರಾಪ್ತಿಗಾಗಿಯೇ ಎಲ್ಲರ ಎಲ್ಲ ವಿಧ ಕರ್ಮಗಳೂ, ಎಂಬುದೂ ಸಿದ್ಧ. ಈ ಉದ್ದೇಶದ ವಿರುದ್ಧವಾಗಿ ದುಃಖವೇ ದೊರೆಯುವುದುಂಟು. ಉದಾಸೀನ ಕರ್ಮಗಳೆಂಬ (ಕ್ರೀಡಾದಿ ಉದ್ದೇಶ ರಹಿತ) ಮಧ್ಯಮವರ್ಗದ ಕರ್ಮಗಳು ಕಾಲಾಂತರ ಫಲೋತ್ಪಾದಕಗಳಾಗುವುದಿಲ್ಲ. ಸತ್ಕರ್ಮಗಳಿಂದ ಕಾಲಾಂತರದಲ್ಲಿ ಸುಖಪ್ರಾಪಕ ಅದೃಷ್ಟವೂ ದುಷ್ಕರ್ಮಗಳಿಂದ ದುಃಖಪ್ರಾಪಕ ಅದೃಷ್ಟವೂ ಹುಟ್ಟುತ್ತವೆ. ಇವುಗಳೇ ಪುಣ್ಯ-ಪಾಪಗಳೆಂದು ಕರೆಯಲ್ಪಡುತ್ತವೆ. ಈ ವಿಧ ಅದೃಷ್ಟಗಳ ಉತ್ಪತ್ತಿಗೆ ಕಾರಣವಾದ ಸತ್ಕರ್ಮ - ದುಷ್ಕರ್ಮಗಳನ್ನೇ (ಶುಭಾಶುಭಕರ್ಮಗಳನ್ನೇ) ಪುಣ್ಯ-ಪಾಪಗಳೆಂದೂ ವ್ಯವಹರಿಸಲಾಗುತ್ತದೆ. ಶಾಸ್ತ್ರವಿಧಿಗಳನ್ನು ಪಾಲಿಸುವುದೂ, ನಿಷಿದ್ಧಗಳನ್ನು ಪರಿತ್ಯಜಿಸುವುದೂ, ಸತ್ಕರ್ಮವೆನಿಸುತ್ತದೆ. ಹೀಗೆಯೇ ವಿಧಿಗಳನ್ನು ಪರಿತ್ಯಜಿಸುವುದೂ ನಿಷಿದ್ಧಗಳನ್ನು ಆಚರಿಸುವುದೂ ದುಷ್ಕರ್ಮವೆನಿಸುತ್ತದೆ. ವಿಧಿ ನಿಷೇಧಗಳನ್ನು ನಿರೂಪಿಸುವ ಶಾಸ್ತ್ರಗಳಿಂದ ಮಾತ್ರ, ಪುಣ್ಯ-ಪಾಪಕರ್ಮಗಳನ್ನು ವಿವೇಚಿಸಿ ತಿಳಿಯಬೇಕಲ್ಲವೇ ಅಲ್ಪಮತಿಗಳಾದ ಮಾನವರು ತಮ್ಮ ಯಾವ ಕರ್ಮಗಳಿಂದ ಕಾಲಾಂತರದಲ್ಲಿ (ಮತ್ತು ಜನ್ಮಾಂತರದಲ್ಲಿ) ಯಾವ ವಿಧದ ಸುಖದುಃಖಗಳು ಲಭಿಸುತ್ತವೆ ಎಂಬುದನ್ನು ತಿಳಿಯಲಾರರು.[2] ಹಿಂದಿನ ಅನೇಕ ಜನ್ಮಗಳಲ್ಲಿ ಆಚರಿಸಲಾದ ಪುಣ್ಯ ಪಾಪರೂಪ ಕರ್ಮಗಳಿಂದ ಹುಟ್ಟಿದ ಅದೃಷ್ಟ ವಿಶೇಷಗಳು, ಪ್ರತಿ ಜೀವನಿಗೆ ರಾಶಿ ರಾಶಿಯಾಗಿ ಬೆಳೆದಿರುತ್ತವೆ. ಈ ರಾಶಿಗಳ ಸಮೂಹವನ್ನು

2. ತಸ್ಮಾತ್ ಶಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯೌ ವ್ಯವಸ್ಥಿತೌ । — ಮಾಡುವ, ಬಿಡುವ ಕರ್ಮಗಳನ್ನು ವ್ಯವಸ್ಥೆಗೊಳಿಸಿಕೊಳ್ಳಲು ಶಾಸ್ತ್ರಗಳೇ ಪ್ರಮಾಣಗಳು ಎಂದೂ, 'ಜ್ಞಾತ್ವಾಶಾಸ್ತ್ರ ವಿಧಾನೋಕ್ತಂ ಕರ್ಮಕರ್ತುಮಿಹಾರ್ಹಸಿ'— ಶಾಸ್ತ್ರವಿಧಾನಗಳನ್ನು ತಿಳಿದುಕೊಂಡೇ ಕರ್ಮದಲ್ಲಿ ಪ್ರವೃತ್ತರಾಗಬೇಕು - ಸ್ವಬುದ್ಧಿಯಿಂದಲ್ಲ, ಎಂದೂ ಗೀತೆಯಲ್ಲಿ ಶ್ರೀಕೃಷ್ಣನ ಸ್ಪಷ್ಟೋಪದೇಶವಿದೆ.

'ಸಂಚಿತ' ಕರ್ಮವೆಂದು ಕರೆಯಲಾಗುತ್ತದೆ. ಸಂಚಿತ ರಾಶಿಯಲ್ಲಿರುವ ಕರ್ಮಗಳು (ಕರ್ಮಜನಿತ ಅದೃಷ್ಟವಿಶೇಷಗಳು) ಸ್ವತಂತ್ರನಾದ ಈಶ್ವರನ ಇಚ್ಛಾನುಸಾರವಾದ ಕ್ರಮದಲ್ಲಿ, ಆಯಾ ಜೀವರನ್ನು ಫಲಭೋಗಕ್ಕೆ ಹಚ್ಚುತ್ತವೆ- ಯಾವ ಕರ್ಮದ ಫಲವನ್ನು ಯಾವ ಕಾಲದಲ್ಲಿ ಜೀವನು ಭೋಗಿಸುವಂತೆ ಮಾಡಲು ಈಶ್ವರನು ಇಚ್ಛಿಸುವನೋ ಆಗ ಜೀವನು ಆ ಫಲವನ್ನು ಅನುಭವಿಸುತ್ತಾನೆ. ಹೀಗೆ ಫಲ ಕೊಡಲಿಕ್ಕೆ ಆರಂಭವಾದ, ಸಂಚಿತರಾಶಿಯೊಳಗಿನ ಪೂರ್ವಕರ್ಮವು 'ಪ್ರಾರಬ್ಧ'ಕರ್ಮವೆನಿಸುತ್ತದೆ. ಮುಂದೆ (ಭವಿಷ್ಯತ್ಕಾಲದಲ್ಲಿ) ಸಂಭವಿಸುವ ಕರ್ಮಗಳು (ಅವುಗಳ ಅದೃಷ್ಟವಿಶೇಷಗಳು) ಸಂಚಿತರಾಶಿಯನ್ನು ಸೇರುತ್ತ ಹೋಗುತ್ತವೆ. ಇವು 'ಆಗಾಮಿ' ಕರ್ಮಗಳೆನಿಸುತ್ತವೆ. ಈ ತ್ರಿವಿಧ ಕರ್ಮಗಳು (ಪುಣ್ಯ-ಪಾಪ) ಉಭಯಾತ್ಮಕವಾಗಿರುತ್ತವೆ.[3]

ಕರ್ಮಕ್ಷಯವೆಂಬ ಫಲವು ಬ್ರಹ್ಮದರ್ಶನದಿಂದ ತತ್ಕಾಲದಲ್ಲಿ ದೊರೆಯುವ ಫಲ. ಉಭಯಾತ್ಮಕ ಕರ್ಮಗಳೆಲ್ಲವೂ ಬ್ರಹ್ಮದರ್ಶನದಿಂದ ನಾಶವಾಗುವುವೋ ಹೇಗೆ, ಎಂಬುದನ್ನೂ ಆಗಾಮಿ ಕರ್ಮಗಳ ಫಲ ವಿನಿಯೋಗಗಳನ್ನೂ ವಿವರವಾಗಿ ಗ್ರಹಿಸಬೇಕಾದುದು ಅವಶ್ಯಕ. **ಮುಕ್ತಿ ಯೋಗ್ಯ ಜೀವನಿಗೆ ಅಪರೋಕ್ಷಜ್ಞಾನವು (ಬ್ರಹ್ಮದರ್ಶನವು) ಯಥಾಯೋಗ್ಯ ಜ್ಞಾನ ಪರಿಪಕ್ವತೆಯ ಸೂಚಕವು, ಅಲ್ಲಿಂದ ಮುಂದೆ ಆತನು ಕೇವಲ ಪ್ರಾರಬ್ಧ ಭೋಗದಲ್ಲಿರುವನು; ತಮೋಯೋಗ್ಯನಿಗೆ ದ್ವೇಷ ಪರಿಪಕ್ವ ಕಾಲದ ನಂತರ ಪ್ರಾರಬ್ಧಭೋಗದ ಕಾಲವು. ತನಗೆ ಹಿತಸಾಧಕವೆಂದು ತಿಳಿದರೂ, ಜ್ಞಾನಿಗಳ ಸದುಪದೇಶಗಳನ್ನು ತಿರಸ್ಕರಿಸಿ ದುಃಖಭಾಗಿಯಾಗುವುದು ದ್ವೇಷ ಪರಿಪಕ್ವ ಕಾಲವನ್ನು ಸೂಚಿಸುತ್ತದೆ.**[4] ಜ್ಞಾನ ಪರಿಪಾಕದಿಂದ (ತತ್ಸೂಚಕ ಬ್ರಹ್ಮದರ್ಶನದಿಂದ)

3. ಪುಣ್ಯಪಾಪಗಳು, ಬುದ್ಧ್ಯಾದಿ ಇಂದ್ರಿಯಗಳುಳ್ಳ ಮನುಷ್ಯ ದೇಹದಲ್ಲಿರುವಾಗ (ಸಾಧನ ದೇಹದಲ್ಲಿರುವಾಗ) ಸಂಭವಿಸುವುದಲ್ಲದೇ, ವೃಕ್ಷ-ಪಶು-ಪಕ್ಷಿ ಮೊದಲಾದ ದೇಹಗಳಿಂದಲ್ಲ.

4. 'ಯದಾ ತು ಜ್ಞಾನಿ ಸದ್ಭಾವೇ ನೈವಗೃಹ್ಣಂತಿ ತತ್ಪರಂ ।
ಅಸುರಾಣಾಂ ತಮ ಪ್ರಾಪ್ತಿಸ್ತದಾ ನಿಯಮತೋ ಭವೇತ್ ॥' (ಭಾ.ತಾ.ನಿ.)
— ಜ್ಞಾನಿಗಳಿದ್ದು, ನಾರಾಯಣನ ಸರ್ವೋತ್ತಮತ್ವವನ್ನು ಉಪದೇಶಿಸಿದರೂ, ಅಗ್ರಹಪೂರ್ವಕವಾಗಿ ಯಾವಾಗ ತಿರಸ್ಕರಿಸುವರೋ, ಆಗ ಅಸುರರಿಗೆ (ತಮೋ ಯೋಗ್ಯರಿಗೆ) ತಮಃ ಪ್ರಾಪ್ತಿಗೆ ಅವಶ್ಯಕವಾದ ಸಾಧನಪೂರ್ತಿಯು ಆಗಿ, ತಮಸ್ಸನ್ನು ಹೊಂದುವರೆಂದು ತಿಳಿಯಬೇಕು.

ಮುಕ್ತಿಯೋಗ್ಯನ ಸಂಚಿತ ಸರ್ವಪಾಪಗಳೂ ಭಸ್ಮವಾಗುತ್ತವೆ. ಹೀಗೆಯೇ ತಮೋಯೋಗ್ಯನ ದ್ವೇಷ-ಪರಿಪಾಕದಿಂದ ಸಂಚಿತ ಸರ್ವಪುಣ್ಯಗಳೂ ನಾಶಹೊಂದುತ್ತವೆ. ಪ್ರಾರಬ್ಧಕರ್ಮವನ್ನು (ಸಾಧನ ಪರಿಪೂರ್ತಿಕಾಲದಲ್ಲಿ ಆರಂಭವಾದ ಕರ್ಮಫಲವನ್ನು) ಉಭಯರೂ, ಭೋಗದಿಂದಲೇ ಕಳೆದು-ಕೊಳ್ಳಬೇಕು. ಉಭಯರ ಆಗಾಮಿ ಕರ್ಮಗಳ ವಿಷಯದಲ್ಲಿಯೂ ಮತ್ತು ಅವರು ಭೋಗಿಸುವ ಸುಖದುಃಖಗಳ ವಿಷಯದಲ್ಲಿಯೂ, ತಮೋಯೋಗ್ಯರಿಗೆ, ಮುಕ್ತಿಯೋಗ್ಯರಿಂದ ವಿರುದ್ಧವಾದ ಭಾವಗಳನ್ನೇ ತಿಳಿಯಬೇಕು.[5] ಪ್ರಾರಬ್ಧ-ಕರ್ಮವು ಪುಣ್ಯರೂಪವಾಗಿರಬಹುದು ಅಥವಾ ಪಾಪರೂಪವಾಗಿರಬಹುದು. ಬ್ರಹ್ಮಜ್ಞಾನಿಯು ಅದನ್ನು ಅನುಭವಿಸದೇ ಗತ್ಯಂತರವಿಲ್ಲ.[6] ಪ್ರಾರಬ್ಧಭೋಗವು ಅಲ್ಪಜೀವರಿಗೆ ಅಲ್ಪಕಾಲಾವಧಿಯಲ್ಲಿ ಪೂರ್ಣಗೊಳ್ಳುತ್ತದೆಂಬುದೂ, ಉತ್ತಮರಿಗೆ

---

5. 'ಅನಾರಬ್ಧ ಕಾರ್ಯೇ ಏವ ಪೂರ್ವೇ ಪುಣ್ಯಪಾಪೇ ವಿನಶ್ಯತಃ । ತಸ್ಯತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥಸಂಪತ್ಸ್ಯತೇ' (ಛಾಂದೋಗ್ಯ ಶ್ರುತಿಯು) - 'ಫಲ ಕೊಡಲು ಆರಂಭವಾಗದಿರುವ ಪೂರ್ವ ಪುಣ್ಯಪಾಪಗಳು ನಾಶವಾಗುತ್ತವೆ; ಪ್ರಾರಬ್ಧಭೋಗ ಮುಗಿಯುವುದೇ ತಡ (ಅಷ್ಟು ಕಾಲ ಮಾತ್ರ ವಿಳಂಬ), ಮುಕ್ತನಾಗುತ್ತಾನೆ' ಎಂದು ಹೇಳುತ್ತದೆ. ಈ ಶ್ರುತ್ಯರ್ಥವನ್ನು ವಿವರಿಸುವ ನಾರಾಯಣ ತಂತ್ರವಾಕ್ಯವು ಹೀಗೆ ಹೇಳುತ್ತದೆ :— 'ಯದನಾರಬ್ಧ ಪಾಪಂ ಸ್ಯಾತ್ತದ್ವಿನಶ್ಯತಿ ನಿಶ್ಚಯಾತ್ । ಪಶ್ಯತೋ ಬ್ರಹ್ಮ ನಿರ್ದ್ವಂದ್ವಂ ಹೀನಂ ಚ ಬ್ರಹ್ಮಪಶ್ಯತಃ। ದ್ವಿಷತೋವಾ ಭವೇತ್ಪುಣ್ಯ ನಾಶೋ ನಾಸ್ಯತ್ರ ಸಂಶಯಃ ॥' ಎಂದರೆ, ಸರ್ವೋತ್ತಮ-ನಾದ (ಸಮಾಧಿಕರಹಿತನಾದ) ಬ್ರಹ್ಮನನ್ನು ಕಂಡ ಜ್ಞಾನಿಯ ಅನಾರಬ್ಧ ಪಾಪ-ಕರ್ಮವೆಲ್ಲ ನಿಸ್ಸಂಶಯವಾಗಿ ನಾಶಹೊಂದುತ್ತದೆ ; ಬ್ರಹ್ಮನನ್ನು ಅಪೂರ್ಣನನ್ನಾಗಿ (ಸಮಾಧಿಕರುಳ್ಳವನೆಂದು) ತಿಳಿಯುವ ಅಥವಾ ದ್ವೇಷಿಸುವವನ ಪೂರ್ವಪುಣ್ಯವೆಲ್ಲ ನಾಶಹೊಂದುತ್ತದೆ. ಈ ವಿಷಯದಲ್ಲಿ ಸಂಶಯಕ್ಕೆಡೆಯಿಲ್ಲ.

ವಿ.ಸೂ.— ಮುಕ್ತಿಯು ಎರಡು ವಿಧ. ನಿತ್ಯಾನಂದರೂಪದ ಮೋಕ್ಷವು ದೇವಾದಿ ಮುಕ್ತಿಯೋಗ್ಯ ಜೀವರಿಗೆ ಲಭಿಸುತ್ತದೆ-ಇದು ಸನ್ಮುಕ್ತಿಯು. ಅಸುರಾದಿ ತಮೋ-ಯೋಗ್ಯ ಜೀವರಿಗೆ ಲಭಿಸುವುದು ನಿತ್ಯದುಃಖರೂಪದ ತಮಸ್ಸು. ಹೀಗಿದ್ದರೂ ಸಾಮಾನ್ಯವಾಗಿ 'ಮುಕ್ತಿ-ಮೋಕ್ಷ' ಈ ಶಬ್ದಗಳು ಸನ್ಮುಕ್ತಿಪರವಾಗಿಯೇ ಉಪಯೋಗಿಸಲ್ಪಡುತ್ತವೆ.

6. ಜ್ಞಾನಿಯು ಅನುಷ್ಠಾನಮಾಡುವ ವಿಧ್ಯುಕ್ತ ಶುಭಕರ್ಮಗಳಿಂದ ಪ್ರಾರಬ್ಧಕರ್ಮಕ್ಕೆ ಉಪಮರ್ದವುಂಟೆಂಬ ಮೊದಲಾದ ಪ್ರಮೇಯಗಳ ಬಗ್ಗೆ ರತ್ನ 4-ಪರಿಚ್ಛೇದ 4ನ್ನು ನೋಡಬಹುದು.

ದೀರ್ಘಕಾಲಾವಧಿಯಲ್ಲೆಂಬುದೂ ಸಾಮಾನ್ಯ ನಿಯಮ. ಅಲ್ಪರ ಪ್ರಾರಬ್ಧವು ದುಃಖಪ್ರಚುರವಾದ ಫಲವುಳ್ಳದ್ದು. ತಾರತಮ್ಯವನ್ನನುಸರಿಸಿ, ಮೇಲೆ ಮೇಲಿನವರ ಪ್ರಾರಬ್ಧಕರ್ಮವು ದುಃಖಪ್ರಾಪಕಾಂಶದಲ್ಲಿ ಕಡಿಮೆಯಾಗುತ್ತ ಸುಖವನ್ನೇ ಅಧಿಕವಾಗಿ ಕೊಡುವುದಾಗಿರುತ್ತದೆ. ಜೀವೋತ್ತಮನಾದ ಚತುರ್ಮುಖಬ್ರಹ್ಮನ ಪ್ರಾರಬ್ಧವು ಕೇವಲ ಸುಖಾತ್ಮಕವು. ಆತನಿಗೆ ದುಃಖಪ್ರಾರಬ್ಧವೇ ಇಲ್ಲ. ಬ್ರಹ್ಮಪದವಿಗೆ ಯೋಗ್ಯರಾದ ಋಜುಗಣದ ಜೀವರಿಗೆ, ಬ್ರಹ್ಮಪದವಿಗೆ ಬರುವ ಹಿಂದಿನ ನೂರು ಜನ್ಮಗಳಿಂದ (೧೦೦ ಬ್ರಹ್ಮಕಲ್ಪಗಳ ಹಿಂದಿನಿಂದ) ಪ್ರಾರಬ್ಧ ಫಲ ಭೋಗದ ಆರಂಭವಾಗುತ್ತದೆ. ನೂರು ಬ್ರಹ್ಮರ ದೀರ್ಘ ಕಾಲಾವಧಿಯ ಸುಖ ಪ್ರಾರಬ್ಧಭೋಗವು ಋಜುಗುಣದ ಜೀವರಿಗೆ ಮಾತ್ರ. ಕೆಳಗಿನ ರುದ್ರಾದಿಗಳಿಗೆ ೪೦-೨೦ ಕಲ್ಪಗಳ ಕಾಲ ಮಾತ್ರ. ಮನುಷ್ಯೋತ್ತಮರೇ ಮೊದಲಾದ ಅಲ್ಪಾಧಿಕಾರಿಗಳಿಗೆ ಒಂದು ಬ್ರಹ್ಮಕಲ್ಪದ ಕಾಲಾವಧಿಯಲ್ಲಿ ಎಲ್ಲ ಸಾಧನೆ ಮತ್ತು ಪ್ರಾರಬ್ಧ-ಭೋಗವೂ ಮುಗಿದುಹೋಗುತ್ತದೆ.

ಜ್ಞಾನದಿಂದ (ಬ್ರಹ್ಮದರ್ಶನದಿಂದ) ಸಂಚಿತಪಾಪಗಳೆಲ್ಲ ನಾಶಹೊಂದುತ್ತವೆ. ಜ್ಞಾನೋತ್ತರಕಾಲದಲ್ಲಿ (ಪ್ರಾರಬ್ಧಕರ್ಮವನ್ನು ಮಾತ್ರ ಭೋಗಿಸುವ ಕಾಲದಲ್ಲಿ) ಪ್ರಾಯಃ ಪಾಪಕರ್ಮಗಳು ಸಂಭವಿಸುವುದಿಲ್ಲ (ಜ್ಞಾನಿಯಿಂದ ಆಚರಿಸಲ್ಪಡು-ವುದಿಲ್ಲ). ಪ್ರಬಲ ಪ್ರಾರಬ್ಧಕರ್ಮ ನಿಮಿತ್ತವಾಗಿ, ಕೆಲವುವೇಳೆ ಜ್ಞಾನಿಗಳಿಂದ ಸಹ ಪಾಪಕರ್ಮಗಳು ಮಾಡಲ್ಪಡುತ್ತವೆ. ಆದರೆ ಅವುಗಳು ಜ್ಞಾನಿಯನ್ನು ಲೇಪಿಸುವುದಿಲ್ಲ. ಅಲ್ಪಾಧಿಕಾರಿಗಳಿಗೆ ಪಾಪಕರ್ಮಗಳಿಂದ ಮುಕ್ತಿಯಲ್ಲಿ ಆನಂದ ಹ್ರಾಸಾದಿ ಫಲವೂ ಉಂಟು-ಆದರೆ ಜ್ಞಾನಿಯು ಆ ಕಾರಣದಿಂದ ಎಂದೂ ಸಂಸಾರಕ್ಕೆ ಹಿಂತಿರುಗುವುದಿಲ್ಲ. ಈ ಪ್ರಕ್ರಿಯೆಯು, ಜ್ಞಾನ-ಮಹಿಮೆಯ ನಿರೂಪಣಾವಸರದಲ್ಲಿ (ರತ್ನ ೪-ಪರಿಚ್ಛೇದ ೪ರಲ್ಲಿ) ವಿವರಿಸಲ್ಪಟ್ಟಿದೆ. ಸಂಚಿತ ಕರ್ಮರಾಶಿಯೊಳಗಿನ ಪೂರ್ವ ಪುಣ್ಯಗಳು (ಜ್ಞಾನಿಗೆ ಬ್ರಹ್ಮದರ್ಶನವಾಗುವ ಕಾಲದ ಹಿಂದಿನ ಪುಣ್ಯಗಳು ಕಾಮ್ಯ-ಅಕಾಮ್ಯಗಳೆಂದು ಎರಡು ವಿಧ. ಫಲಾಪೇಕ್ಷೆಯಿಂದ ಆಚರಿಸಿದ ಶುಭಕರ್ಮಗಳು ಕಾಮ್ಯಗಳು-ನಿಷ್ಕಾಮದಿಂದ ಆಚರಿಸಿದವು ಅಕಾಮ್ಯಗಳು. ಜ್ಞಾನಪೂರ್ವ ಕಾಮ್ಯ ಪುಣ್ಯಗಳಿಗೆ ಸಹ

ಜ್ಞಾನದಿಂದ ನಾಶವೆಂದು ತಿಳಿಯಬೇಕು. 'ಅನಭೀಷ್ಟಂ ಅನಾರಬ್ಧಂ ಪುಣ್ಯಮಪ್ಯಸ್ಯ ನಶ್ಯತಿ । ಕಿಮು ಪಾಪಂ ಪರಬ್ರಹ್ಮ ಜ್ಞಾನಿನೋನಾತ್ರ ಸಂಶಯಃ ॥ ಎಂಬ (ಪಾದ್ಮ) ಪುರಾಣವಾಕ್ಯವು, ಅನಾರಬ್ಧ ಜ್ಞಾನಪೂರ್ವ ಅನಿಷ್ಟ ಪುಣ್ಯವೂ ಜ್ಞಾನದಿಂದ (ಪಾಪದೊಂದಿಗೆ) ನಾಶಹೊಂದುವುದೆಂದು ಹೇಳುತ್ತವೆ. **ಜ್ಞಾನಕಾಲದ ಪೂರ್ವ ಅಕಾಮ್ಯ , ಪುಣ್ಯಗಳು ಜ್ಞಾನೋದಯಕ್ಕೂ - ಬ್ರಹ್ಮಸಾಕ್ಷಾತ್ಕಾರಕ್ಕೂ ಮತ್ತು ಜ್ಞಾನದ ಪರಿಸ್ಫುಟತ್ವಗಳಿಗೂ ಕಾರಣವಾಗುತ್ತದೆ. ಇನ್ನು ಜ್ಞಾನೋತ್ತರ (ಅಪರೋಕ್ಷವಾದ ನಂತರದ) ಪುಣ್ಯ ಕರ್ಮಗಳು ಸಾಮಾನ್ಯವಾಗಿ ಅಕಾಮ್ಯಗಳೇ ಆಗಿರುತ್ತವೆ. ಅವು ಅಕ್ಷಯ ಫಲವುಳ್ಳವುಗಳು - ಮುಕ್ತಿಯಲ್ಲಿ ದೊರೆಯುವ ಆನಂದಕ್ಕೆ ಅತಿಶಯವನ್ನು ತಂದುಕೊಡುತ್ತವೆ. ಆದ್ದರಿಂದ ಜ್ಞಾನಿಯು ಶುಭಕರ್ಮಗಳನ್ನು ನಿಷ್ಕಾಮನಾಗಿ ಆಚರಿಸಲೇಬೇಕು.**

ಅನಾರಬ್ಧ (ಜ್ಞಾನಪೂರ್ವದ-ಸಂಚಿತ) ಕಾಮ್ಯಪುಣ್ಯವನ್ನು ಇಷ್ಟ-ಅನಿಷ್ಟಭೇದದಿಂದ ಎರಡು ಪ್ರಕಾರವೆಂದು ಹೇಳಲಾಗುತ್ತದೆ. ಅನಿಷ್ಟಕ್ಕೆ ಜ್ಞಾನದಿಂದ ನಾಶವೆಂದು ತಿಳಿಯಬೇಕು. ಐಶ್ವರ್ಯದಾರಾ ಪುತ್ರಾದಿಗಳ ಭೋಗಕ್ಕೆ ಕಾರಣವಾದ ಕಾಮ್ಯಪುಣ್ಯವು ಅನಿಷ್ಟ ಕಾಮ್ಯವು. ಈ ಪ್ರಕಾರದ ಪ್ರಮೇಯ ವಿವೇಚನೆಯಲ್ಲಿ ಇಷ್ಟಕಾಮ್ಯವು ಅವಶಿಷ್ಟವಾಗುತ್ತದೆ. ಇಷ್ಟಕಾಮ್ಯವೆಂಬುದು, ಸ್ವಭೋಗಕ್ಕಲ್ಲದ ಐಶ್ವರ್ಯಾದಿಗಳ ಪ್ರಾಪ್ತಿ, ನಾನಾ ಸಾಂಸಾರಿಕ ದುಃಖಗಳ ಪರಿಹಾರ ಸಾಮರ್ಥ್ಯ ಇತ್ಯಾದಿಗಳಿಗೆ ಕಾರಣವಾಗುವ ಪುಣ್ಯವು. ಜ್ಞಾನಿಯು ತನ್ನ ಇಷ್ಟಕಾಮ್ಯವನ್ನೂ ತನಗಾಗಿ ಉಪಯೋಗಿಸಿಕೊಳ್ಳುವುದಿಲ್ಲ. ಭಗವದ್ದತ್ತ ಸುಖದುಃಖಗಳನ್ನು ನಿರ್ವಿಕಾರ ಮನಸ್ಸಿನಿಂದ ಭೋಗಿಸಿ, ಭಗವಂತನ ಪ್ರೀತಿಯನ್ನು ಮಾತ್ರ ಇಚ್ಛಿಸುತ್ತಾನೆ. ಇಷ್ಟಕಾಮ್ಯ ಪುಣ್ಯವನ್ನು ತನ್ನನ್ನು ಸೇವಿಸುವ ಭಕ್ತರಿಗೆ ಸ್ವೇಚ್ಛೆಯಿಂದ ದಾನ ಮಾಡುತ್ತಾನೆ. 'ತತ್ರ ಪುತ್ರಾದಾಯಮುಪಯಂತಿ ಸುಹೃದಃ ಸಾಧು ಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ' ಎಂಬ ಶ್ರುತಿಯು, ಜ್ಞಾನಿಯ ಪುಣ್ಯಫಲವಾದ ಐಶ್ವರ್ಯವನ್ನು ಪುತ್ರರೂ, ಇತರ ಪುಣ್ಯಫಲಗಳನ್ನು ಮಿತ್ರ ಬಾಂಧವರೂ, ಪಾಪಫಲವನ್ನು ದ್ವೇಷಿಗಳೂ ತೆಗೆದುಕೊಳ್ಳುತ್ತಾರೆಂದು ಹೇಳುತ್ತದೆ. ಈ ಶೃತಿ ತಾತ್ಪರ್ಯವನ್ನು ಈ ಹಿಂದೆ ನಿರೂಪಿಸಿರುವ ವಿವರಗಳಂತೆ ವಿವೇಚಿಸಿ ತಿಳಿಯಬೇಕು.

ಪ್ರಾರಬ್ಧವನ್ನುಳಿದು ಇತರ ಅಸಂಖ್ಯ ಜನ್ಮಾರ್ಜಿತ ಕರ್ಮಗಳು ಜ್ಞಾನದಿಂದ ನಾಶವಾಗುತ್ತವೆ. ಹೀಗೆ ಜ್ಞಾನದಿಂದ ಕರ್ಮವು ನಾಶವಾಗದೇ, ಭೋಗದಿಂದಲೇ ಕರ್ಮಕ್ಷಯವಾಗಬೇಕೆಂದರೆ, ಮೋಕ್ಷವು ಪುರುಷಾರ್ಥವೇ ಆಗಲಾರದು. ಅಕ್ಷಯ ಅನಂತ ಕರ್ಮಗಳ ಫಲವನ್ನು ಅನಂತಕಾಲದಲ್ಲಿ ಭೋಗಿಸುತ್ತಲೇ ಇರಬೇಕಾಗುವುದು ಮತ್ತು ಭೋಗಕಾಲದಲ್ಲಿ ಆಚರಿಸುವ ಹೊಸ ಕರ್ಮಗಳು ಸಂಚಿತ ಕರ್ಮರಾಶಿಯನ್ನು ಅಭಿವೃದ್ಧಿಗೊಳಿಸುತ್ತಲೇ ಇರುವುವು. ವಿಹಿತ ಕರ್ಮಾಚರಣೆಯಲ್ಲಿ ನಿಷ್ಠನಾದ ಮನುಷ್ಯನೊಬ್ಬನು ಪ್ರತಿ ದಿನದಲ್ಲಿ ೧೦ ಜನ್ಮಗಳನ್ನು ಎತ್ತಿ ಮುಗಿಸಬೇಕಾಗುವಷ್ಟು ಕರ್ಮ ಸಂಚಯವನ್ನು ತಪ್ಪದೇ ಹೊಂದುವನೆಂದು, **'ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತಿ'** - ಇತ್ಯಾದಿ ಆಗಮಗಳು ಹೇಳುತ್ತವೆ. ಹೀಗಿರುವಾಗ ಕರ್ಮವು ಭೋಗದಿಂದಲೇ ಕ್ಷಯಿಸಬೇಕೆಂಬ ತತ್ತ್ವವನ್ನು ಅಂಗೀಕರಿಸಿದರೆ ಮೋಕ್ಷವಾರ್ತೆಯೇ ಲೋಪವಾಗ-ಬೇಕಾಗುವುದು. ಆದ್ದರಿಂದ ಕರ್ಮಕ್ಷಯವು ಬ್ರಹ್ಮದರ್ಶನದ ಪ್ರಧಾನ ಫಲವೆಂದು ಸಿದ್ಧವಾಗುತ್ತವೆ.

## ಪರಿಚ್ಛೇದ ೨

## ಉತ್ಕ್ರಾಂತಿ

ಪ್ರಾರಬ್ಧಕರ್ಮವನ್ನು ಭೋಗದಿಂದ ಕಳೆದು, ಬ್ರಹ್ಮಜ್ಞಾನಿಯು ಮುಕ್ತ-ನಾಗುವನೆಂದು ಹೇಳಲಾಯಿತಷ್ಟೆ. ಜ್ಞಾನಿಯು ಪ್ರಾರಬ್ಧಕರ್ಮ ಭೋಗವನ್ನು ಕೊನೆಮುಟ್ಟಿಸುವ ಆತನ ದೇಹವನ್ನು 'ಚರಮದೇಹ'ವೆನ್ನುವರು. ಜ್ಞಾನಿಯು ಚರಮದೇಹವನ್ನು ತ್ಯಜಿಸಿ ಹೊರಡುವುದಕ್ಕೂ, ಅಜ್ಞಾನಿಯ (ಬ್ರಹ್ಮದರ್ಶನ-ವಾಗದಿರುವವನ) ದೇಹತ್ಯಾಗಕ್ಕೂ ಬಹು ವೈಲಕ್ಷಣ್ಯವಿದೆ. ಜ್ಞಾನಿಮರಣದ ಈ ವೈಲಕ್ಷ್ಯಣ್ಯವೂ ಬ್ರಹ್ಮದರ್ಶನದ ಫಲರೂಪವಾದುದೇ.

ಮುಕ್ತಿಯೋಗ್ಯರಲ್ಲಿ ಉತ್ತಮರಾದ ದೇವತೆಗಳು ಸ್ವೋತ್ತಮ ಪ್ರವೇಶ-ದಿಂದ ಪರಮಾತ್ಮನನ್ನು ಹೊಂದಿ ಮುಕ್ತರಾಗುತ್ತಾರೆ. ಚರಮದೇಹದಿಂದ ಹೊಂದುವ ಉತ್ಕ್ರಮಣವೂ, (ಮುಂದಿನ ಪರಿಚ್ಛೇದದಲ್ಲಿ ವಿಸ್ತರಿಸಲಾಗುವ)

ಪ್ರಯಾಣಮಾರ್ಗವೂ ದೇವತೆಗಳಿಗೆ ಅನ್ವಯಿಸುವುದಿಲ್ಲ. ಆದರೆ, ದೇವತೆಗಳು ಅಂಶದಿಂದ ಮನುಷ್ಯದೇಹದಲ್ಲಿ ಬಂದಾಗ, ಆ ದೇಹವನ್ನು ಬಿಟ್ಟು ಹೊರಡುವಾಗ, ದೇವೇತರ ಮನುಷ್ಯಾದಿ ಜ್ಞಾನಿಗಳಂತೆ ಬ್ರಹ್ಮನಾಡಿದ್ವಾರಾ ಉತ್ಕ್ರಮಣಹೊಂದಿ, ತಮ್ಮ ಮೂಲರೂಪಗಳನ್ನು ಸೇರುತ್ತಾರೆ. ದೇವತಾದೇಹಗಳು ತೇಜಃಪ್ರಚುರವಾದವುಗಳು. ಆ ದೇವಯೋನಿಯ ಚರಮದೇಹಗಳು ಸೂಕ್ಷ್ಮತರ ತೇಜೋ ವಿಶಿಷ್ಟ ಸ್ವೋತ್ತಮರ ದೇಹಗಳನ್ನು ಪ್ರವೇಶಿಸುತ್ತವೆ. ಇದು ದೇವತೆಗಳ ಲಯಪ್ರಕಾರವು.

ಉತ್ತಮ ದೇವತೆಗಳ ಮಧ್ಯದಲ್ಲಿ, ವಾಗಭಿಮಾನಿಯಾದ ಉಮಾದೇವಿಯು, ತನ್ನ ಪತಿಯಾದ ಮನೋಭಿಮಾನಿ ರುದ್ರದೇವನಲ್ಲಿ ಲಯ ಹೊಂದುತ್ತಾಳೆ. ಇದರಂತೆ ವಾರುಣೀ ಮತ್ತು ಸೌಪರ್ಣೀದೇವಿಯರು ತಮ್ಮ ಪತಿಗಳಾದ ಶೇಷಗರುಡರಲ್ಲಿ ಲಯಹೊಂದುತ್ತಾರೆ. ರುದ್ರಶೇಷಗರುಡರು ಚತುರ್ಮುಖ ಬ್ರಹ್ಮನಲ್ಲಿ ಲಯಹೊಂದುತ್ತಾರೆ. ಚತುರ್ಮುಖನು ಪರಮಾತ್ಮನಲ್ಲಿ ಲಯ-ಹೊಂದುತ್ತಾನೆ (ಪ್ರವೇಶಿಸುತ್ತಾನೆ). ಉಮಾದಿ ಉತ್ತಮದೇವತೆಗಳನ್ನುಳಿದು ಇತರ ದೇವತೆಗಳು ಯಥಾಯೋಗ್ಯವಾಗಿ ಪಂಚಭೂತಗಳಿಗೆ ಅಭಿಮಾನಿಗಳಾದ ದೇವತೆಗಳಲ್ಲಿ ಲಯಹೊಂದುತ್ತಾರೆ. ದೇವತೆಗಳ ಲಯಪ್ರಕಾರವು ಶೇಷ-ಮಾರ್ಗ-ಗರುಡಮಾರ್ಗವೆಂದು ಎರಡು ವಿಧವೆಂದು ಹೇಳಲಾಗಿದೆ. ಏವಂಚ ಈ ಉಭಯ ಮಾರ್ಗಗಳಿಂದ ಎಲ್ಲ ದೇವತೆಗಳು ಶೇಷ-ಗರುಡರನ್ನು ಹೊಂದಿ ಅವರಿಬ್ಬರೊಂದಿಗೆ ಚತುರ್ಮುಖನನ್ನು ಪ್ರವೇಶಿಸುತ್ತಾರೆ.[7] ಮುಕ್ತರಾಗುವ

7. ಶೇಷಮಾರ್ಗ :- ಗಂಧರ್ವರು, ಸಿದ್ಧರು, ಚಾರಣರು ಕುಬೇರನಲ್ಲಿಯೂ; ಅಶ್ವಿನಿ ದೇವತೆಗಳು ಮತ್ತು ಗಂಗಾದಿ ನದ್ಯಭಿಮಾನಿಗಳು ವರುಣನಲ್ಲಿಯೂ; ವರುಣ ಕುಬೇರರು ಚಂದ್ರನಲ್ಲಿಯೂ; ಚಂದ್ರ (ಸೋಮ) ಮತ್ತು ವಿಷ್ಣುಪಾರ್ಷದರಾದ ವಿಷ್ವಕ್ಸೇನಾದಿಗಳು ಅನಿರುದ್ಧನಲ್ಲಿಯೂ; ಅನಿರುದ್ಧ ಮತ್ತು ಸನಕಾದಿಗಳು ಕಾಮನಲ್ಲಿಯೂ; ಕಾಮನು ವಾರುಣಿಯಲ್ಲಿಯೂ; ಆಕೆಯು ಶೇಷ ದೇವನಲ್ಲಿಯೂ ಪ್ರವೇಶಮಾಡುವರು-ಪ್ರವೇಶವೇ ಲಯವು.

ಗರುಡಮಾರ್ಗ :- ನಿರ್ಋತಿ, ಪಿತೃದೇವತೆಗಳು ಮತ್ತು ಚರಮದೇಹದಿಂದ ಉತ್ಕ್ರಮಣ ಹೊಂದಿದ ವರ್ಣಾಶ್ರಮಾಚಾರನಿರತ ಮನುಷ್ಯೋತ್ತಮರು ಯಮಧರ್ಮನಲ್ಲಿಯೂ; ಯಮ, ವೈವಸ್ವತಾದಿ ಮನುಗಳು ಮತ್ತು ಪ್ರಿಯವ್ರತಾದಿ

ಮುನ್ನ ತಮ್ಮ ದೇಹಗಳನ್ನು ಉತ್ಕ್ರಮದಿಂದ ಸ್ವೋತ್ತಮರಲ್ಲಿ ಲಯಗೊಳಿಸುವುದರಿಂದ, ದೇವತೆಗಳಿಗೆ, ಒಂದು ವಿವಕ್ಷೆಯಿಂದ, ಇದನ್ನೇ ಉತ್ಕ್ರಮಣವೆಂದು ತಿಳಿದರೆ ತಪ್ಪಾಗಲಾರದು. ಮಾನುಷ್ಯಮುಕ್ತಿಯೋಗ್ಯರಂತೆ ಸ್ಥೂಲಚರಮದೇಹವೆಂಬುದು ಇವರಿಗಿಲ್ಲ- ಅದರಿಂದ ಉತ್ಕ್ರಮಣವಿಲ್ಲೆಂಬುದೂ ಕೂಡುತ್ತದೆ. ಲಿಂಗದೇಹವನ್ನು ತೊರೆದು, ಚತುರ್ಮುಖನೊಂದಿಗೆ ಪ್ರಳಯಕಾಲದಲ್ಲಿ ಪರಮಾತ್ಮನ ಉದರಪ್ರವೇಶ ಮಾಡುವ ಪರ್ಯಂತ ಇರಬೇಕಾದ ಅಮುಕ್ತ ವೈಕುಂಠಾದಿ ನಿಯತಸ್ಥಾನಗಳ ಪ್ರಾಪ್ತಿಗಾಗಿ, ದೇವತೆಗಳು ಮಾನುಷಜ್ಞಾನಿಗಳಂತೆ (ಮುಂದಿನ ಪರಿಚ್ಛೇದದಲ್ಲಿ ವಿವರಿಸಲಾಗುವ) ಅರ್ಚಿರಾದಿ ಮಾರ್ಗಗಳನ್ನು ಹಿಡಿದು ಪ್ರಯಾಣ ಮಾಡಬೇಕಾದ ಅವಶ್ಯಕತೆಯೂ ಇಲ್ಲ. (ಅಂಶದಿಂದ ಮನುಷ್ಯ ದೇಹದಲ್ಲಿದ್ದು ಉತ್ಕ್ರಮಣ ಹೊಂದುವ ಸಂದರ್ಭದಲ್ಲಿ ಈ ನಿಯಮವು ಅನ್ವಯಿಸುವುದಿಲ್ಲ.[8]) **ಪ್ರಳಯಕಾಲದಲ್ಲಿ ದೇವತೆಗಳು ಸ್ವೋತ್ತಮ ಪ್ರವೇಶದ್ವಾರಾ ಚತುರ್ಮುಖವನ್ನು ಹೊಂದಿದ ನಂತರ, ಆತನು ಎಲ್ಲರೊಂದಿಗೆ, ಲಕ್ಷ್ಮಿದ್ವಾರಾ ಪರಮಾತ್ಮನ ಉದರವನ್ನು ಪ್ರವೇಶಿಸುತ್ತಾನೆ.**

ಚತುರ್ಮುಖನಿಗೆ ಲಕ್ಷ್ಮೀದೇವಿಯಲ್ಲಿ ಲಯವಿಲ್ಲ. ಹಾಗೂ ಆಕೆಗೆ ಪರಮಾತ್ಮನಲ್ಲಿಯೂ ಲಯವಿಲ್ಲ. ಇತರ ದೇವತೆಗಳಂತೆ ಲಕ್ಷ್ಮೀದೇವಿಯು ಉಪಾಸನಾದಿ ಸಾಧನಗಳಿಂದ ಮುಕ್ತಳಾದವಳಲ್ಲ-ಆಕೆಯು ನಿತ್ಯ ಮುಕ್ತಳು-

ರಾಜರು ಸ್ವಾಯಂಭುವ ಮನುವಿನಲ್ಲಿಯೂ; ಉಳಿದ ಎಲ್ಲ ದೇವತೆಗಳು ಅಗ್ನಿಯಲ್ಲಿಯೂ; ಅಗ್ನಿಯು ಸೂರ್ಯನಲ್ಲಿಯೂ; ಋಭುಗಳು (ಪೃಥ್ವ್ಯಭಿಮಾನಿ) ಧರಾದೇವಿಯಲ್ಲಿಯೂ; ಸಾಧ್ಯರು ಮತ್ತು ವಿನಾಯಕರು (ಆಕಾಶಾಭಿಮಾನಿ) ಗಣಪತಿಯಲ್ಲಿಯೂ; ಗಣಪತಿ, ಧರಾದೇವಿ ಮತ್ತು ಸೂರ್ಯ ಇವರು ಬೃಹಸ್ಪತಿ-ಯಲ್ಲಿಯೂ; ಸ್ವಾಯಂಭುವ ಮನು ಮತ್ತು ಮರುದ್ಗಣಗಳು ಇಂದ್ರನಲ್ಲಿಯೂ; ಇಂದ್ರನು ಸೌಪರ್ಣಿಯಲ್ಲಿಯೂ; ಆಕೆಯು ಗರುಡನಲ್ಲಿಯೂ ಪ್ರವೇಶಮಾಡುವರು. 'ಅಗ್ನೌ ಸರ್ವೇದೇವಾ ವಿಲೀಯಂತೇ....' ಇತ್ಯಾದಿ ಹೇಳುವ ಶ್ರುತಿಯಲ್ಲಿ, ಸರ್ವ ದೇವತೆಗಳೂ ಅಗ್ನಿಯಲ್ಲಿ ಲಯ ಹೊಂದುವರೆಂಬುದಕ್ಕೆ, ಇತರ ಭೂತಾಭಿ-ಮಾನಿಗಳಾದ ವರುಣ ಗಣಪತಿ ಮೊದಲಾದವರನ್ನು ಬಿಟ್ಟು, ಅಗ್ನಿಯಲ್ಲಿ ಲಯ-ಹೊಂದುವರೆಂದು ನಿರ್ದಿಷ್ಟರಾದ ದೇವತೆಗಳು ಮಾತ್ರವೆಂಬುದಾಗಿ ತಿಳಿಯಬೇಕು.

8. ಇದೇ ಪರಿಚ್ಛೇದದಲ್ಲಿ ಮುಂದೆ ಈ ಪ್ರಕ್ರಿಯೆಯ ವಿಸ್ತಾರವನ್ನು ಕಾಣುವಿರಿ.

ಅನಾದ್ಯನಂತಕಾಲದಲ್ಲಿ ಶ್ರೀಮಹಾವಿಷ್ಣುವಿನ ಏಕಮಾತ್ರ ಸಹಧರ್ಮಿಣಿಯು. ನಿತ್ಯತ್ವ, ಸರ್ವಗತತ್ವ (ಸರ್ವತ್ರವ್ಯಾಪ್ತಳಾಗಿರುವಿಕೆ) ಮತ್ತು ನಿತ್ಯಮುಕ್ತತ್ವ ಲಕ್ಷಣಗಳಿಂದ ಪರಮಾತ್ಮನಿಗೆ (ಶ್ರೀವಿಷ್ಣುವಿಗೆ) ಸಮಳು-ಸ್ವಾತಂತ್ರ್ಯ , ಆನಂದಾದಿ ಗುಣವಿವಕ್ಷೆಯಿಂದ ಅಸಮಳು - ನ್ಯೂನಳು. ಹೀಗೆ ಪರಮಾತ್ಮನಿಗೆ ಸಮಳೂ-ಅಸಮಳೂ ಆದ ಲಕ್ಷ್ಮೀ ದೇವಿಗೆ ಲಯವೆಂಬುದಿಲ್ಲ.[9] ತನ್ನಿಂದ ನಿಯಮ್ಯವಾದ ತ್ರಿಗುಣಾತ್ಮಕ ಪ್ರಕೃತಿಯಮೇಲೆ ಸರ್ವಾಧಿಕಾರ ನಡೆಸಿ, ಅದರಿಂದ ನಾನಾ-ಕಾರ್ಯಗಳನ್ನು ಮಾಡಿಸುವ ತನ್ನ ವ್ಯಾಪಾರವನ್ನು ಉಪರಮಗೊಳಿಸಿ, ಪ್ರಳಯಕಾಲದಲ್ಲಿ ಅತಿ ಸಾಮೀಪ್ಯ ರೂಪದಿಂದ ಪರಮಾತ್ಮನೊಂದಿಗೆ ಕ್ರೀಡಿಸುತ್ತ ಅನ್ಯವ್ಯಾಪಾರರಹಿತಳಾಗುವುದೇ ಒಂದು ದೃಷ್ಟಿಯಿಂದ ಆಕೆಯ ಲಯವು. ಆಕೆಯ ದೇಹಕ್ಕೆ ಲಯವೆಂಬುದಿಲ್ಲ. ಆಕೆಯ ದೇಹವು (ಅವತಾರಾದಿ ಅಸಂಖ್ಯ ರೂಪಗಳು ಸಹ) ಚಿದಾನಂದಾತ್ಮಕವಾದುದು- ನಿತ್ಯ ಮತ್ತು ನಿರ್ವಿಕಾರವಾದುದು.

9 ದ್ವೌ ವಾವ ಸೃತ್ಯನುಪಕ್ರಮೌ ಪ್ರಕೃತಿಶ್ಚ ಪರಮಶ್ಚ । ದ್ವಾವೇತಾ ನಿತ್ಯ ಮುಕ್ತಾ ನಿತ್ಯಾ ಚ ಸರ್ವಗತಾ ಚೈತಾ ಜ್ಞಾತ್ವಾ ವಿಮುಚ್ಯತೇ ॥ ಎಂಬ (ಬೃಹತ್) ಶ್ರುತಿಯೂ ಮತ್ತು 'ಅಥಾತಃ ಸಮಶ್ಚಾಸಮಾಶ್ಚಾಭಿಧೀಯಂತೇ । ಅಥ ಸಮಾನಿ ಬ್ರಹ್ಮಣೋ ರೂಪಾಣಿ-ಯೈರುತ್ಪತ್ತಿಃ ಸ್ಥಿತಿರ್ಲಯೋ ನಿಯತಿ ರಾಯತಿಶ್ಚೈಕಂ ಹ್ಯೇವೈತದ್ಭವತಿ । ಅಥಾ ಸಮಾ ಬ್ರಹ್ಮೇಂದ್ರೋ ರುದ್ರಃ ಪ್ರಜಾಪತಿಃ ಬೃಹಸ್ಪತಿರ್ಯೇಕೇಚ ದೇವಾಃ ಗಂಧರ್ವಾಃ ಮನುಷ್ಯಾಃ ಪಿತರೋ ಅಸುರಾಃ ಯತ್ಕಿಂಚೇದಂ ಚರಮಚರಂ ಚ । ಅಥ ಸಮಾಸಮಾ ಪ್ರಕೃತಿರ್ವಾವ ಸಮಾಸಮಾ ಏಷಾಹಿ ನಿತ್ಯಾ ಅಜರಾತದ್ವಶಾ ಚ' ಎಂಬ (ಮಾಧ್ಯಂದಿನ, ಶ್ರುತಿಯೂ ಉಕ್ತ ನಿರ್ಣಯಗಳನ್ನು ನಿರವಕಾಶವಾಗಿ ನಿರೂಪಿಸುತ್ತವೆ.

ಇವುಗಳ ಭಾವಾರ್ಥ :- ಸಂಸಾರವನ್ನು ಎಂದೂ ಹೊಂದದವರು ಇಬ್ಬರು ಮಾತ್ರ— ಪ್ರಕೃತಿ ಮತ್ತು ಪರಮಾತ್ಮ ; ಇಬ್ಬರೂ ನಿತ್ಯಮುಕ್ತರು, ಇಬ್ಬರೂ ಸರ್ವಗತರು; ಹೀಗೆ ಉಭಯರನ್ನೂ ತಿಳಿದ ಜ್ಞಾನಿಯು ಮುಕ್ತನಾಗುತ್ತಾನೆ. (ಬೃಹತ್ ಶ್ರುತಿ) ಈ ಮುಂದೆ ಪರಮಾತ್ಮನಿಗೆ ಸಮರನ್ನೂ ಅಸಮರನ್ನೂ ಹೇಳಲಾಗುತ್ತದೆ; ಪರಮಾತ್ಮನ ಸರ್ವರೂಪಗಳೂ ಪರಸ್ಪರ ಸಮವೇ - ಈ ಜಗತ್ತಿಗೆ ಉತ್ಪತ್ತಿ ಸ್ಥಿತಿ ಲಯ ನಿಯಮನಾದಿ ಗತಿಗಳೆಲ್ಲವೂ ಪರಮಾತ್ಮನ ರೂಪಗಳಿಂದಲೇ ಆಗುತ್ತವೆ. ಬ್ರಹ್ಮ, ರುದ್ರ, ಇಂದ್ರ, ಪ್ರಜಾಪತಿ, ಬೃಹಸ್ಪತಿ ಇತರ ಸಕಲ ದೇವತೆಗಳು, ಗಂಧರ್ವರು, ಪಿತೃಗಳು, ಮನುಷ್ಯರು, ಅಸುರರು ಮತ್ತು ಚರಾಚರ ಸಕಲ ವಸ್ತುಗಳೂ, ಅಸಮಗಳು. ಇನ್ನು ಸಮಾಸಮವನ್ನು ಹೇಳಲಾಗುತ್ತದೆ. ಪ್ರಕೃತಿಯೇ ಸಮಾಸಮಳು— ಈಕೆ ನಿತ್ಯಳು, ಜರಾರಹಿತಳು, (ನಿತ್ಯತರುಣಿ-ಹ್ರಾಸವಿಲ್ಲದವಳು) ಸದಾ ಪರಮಾತ್ಮಾಧೀನಳು.

ಸೀತಾ, ರುಕ್ಮಿಣಿ, ಸತ್ಯಭಾಮಾದಿ ಅವತಾರಗಳೂ ನಿತ್ಯ ನಿರ್ದುಷ್ಟ ಆಕೆಯ ಸ್ವರೂಪಗಳೇ. ಹೀಗೆ ಲಕ್ಷ್ಮೀದ್ವಾರಾ ಬ್ರಹ್ಮನೊಂದಿಗೆ ಪರಬ್ರಹ್ಮನನ್ನು ಹೊಂದಿ ಮುಕ್ತರಾಗುವ ಸಕಲದೇವತೆಗಳು, ಮುಕ್ತಿಯಲ್ಲಿ ಪರಮಾತ್ಮನ ಅಧೀನರಾಗಿ, ಯಥೇಚ್ಛ ಸುಖಗಳನ್ನು ಭೋಗಿಸುತ್ತಾ , ನಿತ್ಯಾನಂದ ಸ್ವರೂಪರಾಗಿ ಸತ್ಯಸಂಕಲ್ಪರಾಗಿರುತ್ತಾರೆ.

ಇನ್ನು , ಜ್ಞಾನಿಮರಣದ ವೈಲಕ್ಷಣ್ಯವನ್ನು (ಉತ್ಕ್ರಮಣ ವೈಶಿಷ್ಟ್ಯವನ್ನು) ಗಮನಿಸುವಾ. ಜ್ಞಾನಿಗಳು ಬಹುವಿಧ-ತಾರತಮ್ಯಯುಕ್ತರೂ ಆಗಿದ್ದಾರೆ. ಹೀಗಿದ್ದರೂ ಉತ್ಕ್ರಮಣ ವೈಶಿಷ್ಟ್ಯವೆಂಬ ಬ್ರಹ್ಮದರ್ಶನ ಫಲ ನಿರೂಪಣೆಗಾಗಿ, ಅವರನ್ನು ಪ್ರತೀಕಾಲಂಬನರು ಮತ್ತು ಅಪ್ರತಿಕಾಲಂಬನರೆಂದು ಎರಡು ಪ್ರಧಾನ ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಉತ್ತಮಾಧಿಕಾರಿಗಳಾದ ದೇವತೆಗಳು ಅಪ್ರತೀಕಾಲಂಬನರು ಈ ವಿಭಾಗದಲ್ಲಿ, ವಿಶಿಷ್ಟಯೋಗ್ಯತೆಯುಳ್ಳ ಕೆಲವು ಋಷಿಗಳೇ ಮೊದಲಾದವರೂ ಮಿತಸಂಖ್ಯೆಯಲ್ಲಿರುವರು. ಈ ಗುಂಪಿಗೆ ಸೇರದ ಇತರ ಋಷಿಗಂಧರ್ವರೇ ಮೊದಲಾದ ಮನುಷ್ಯೋತ್ತಮ ಪರ್ಯಂತರಾದ ಮುಕ್ತಿಯೋಗ್ಯ ಜೀವರು ಪ್ರತೀಕಾಲಂಬನರು. ಪರಮಾತ್ಮನ ಪ್ರತಿಮೆಗಳಾದ ಅಗ್ನಿ , ದೇಹಾದಿಗಳಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವ ಪರಮಾತ್ಮನ ರೂಪವನ್ನು ಮಾತ್ರ ಉಪಾಸಿಸಿ ಸಾಕ್ಷಾತ್ಕರಿಸಿಕೊಳ್ಳುವ ಅಧಿಕಾರಿಗಳು 'ಪ್ರತೀಕಾಲಂಬನರು'. ವ್ಯಾಪ್ತವಾದ ಶ್ರೀಹರಿರೂಪಗಳನ್ನು ಉಪಾಸಿಸಿ, ಕಾಣುವ ಸಾಮರ್ಥ್ಯವುಳ್ಳವರು, 'ಅಪ್ರತೀಕಾಲಂಬನರು'. ಉಭಯರಿಗೂ ಸ್ವಹೃದಯಸ್ಥಿತ ಬಿಂಬರೂಪೀ ಶ್ರೀಹರಿಯ ದರ್ಶನವು ಅವಶ್ಯಕ-ಬಿಂಬಾಪರೋಕ್ಷವಾಗಿರುತ್ತದೆ. ವ್ಯಾಪ್ತರೂಪಗಳ ದರ್ಶನವಿಲ್ಲದವರು ಪ್ರತೀಕಾಲಂಬನರು - ಆ ವೈಶಿಷ್ಟ್ಯ-ವುಳ್ಳವರು ಅಪ್ರತೀಕಾಲಂಬನರು. ಉಭಯರೂ ಬ್ರಹ್ಮದರ್ಶನ ಲಭ್ಯವಾದ ನಾಲ್ಕು ಪ್ರಕಾರದ ಫಲಗಳನ್ನೂ ಹೊಂದುತ್ತಾರೆ. ಆದರೆ ಫಲಪ್ರಾಪ್ತಿಯಲ್ಲಿ ವಿಲಕ್ಷಣ ವಿಶೇಷಗಳಿವೆ. ಕರ್ಮಕ್ಷಯರೂಪ ಫಲದಲ್ಲಿರುವ ವಿಶೇಷಗಳನ್ನು ಹಿಂದಿನ ಪರಿಚ್ಛೇದದಲ್ಲಿ ನಿರೂಪಿಸಲಾಗಿದೆ. ಮಾರ್ಗ ಮತ್ತು ಭೋಗಗಳನ್ನು ನಿರೂಪಿಸುವ ಮುಂದಿನ ಪರಿಚ್ಛೇದಗಳಲ್ಲಿ ಆ ಫಲಸಂಬಂಧ ವಿಶೇಷಗಳನ್ನು

ನಿರೂಪಿಸಲಾಗುತ್ತದೆ. ದೇಹೋತ್ಕ್ರಮಣ ರೂಪದ ಫಲದಲ್ಲಿರುವ ವಿಶೇಷಗಳನ್ನು ಈ ಮುಂದೆ ವಿವರಿಸಲಾಗುತ್ತದೆ.

ಬ್ರಹ್ಮದರ್ಶನದ ಫಲಗಳೆಂದು ಹೇಳಲಾದ ಕರ್ಮಕ್ಷಯಾದಿ ನಾಲ್ಕು ಫಲಗಳಿಗೆ, ಸತ್-ಚಿತ್-ಆನಂದ-ಆತ್ಮಾ ಎಂಬ ನಾಲ್ಕು ಗುಣಗಳಿಗೆ ಕಡಿಮೆ-ಯಿಲ್ಲದ ಭಗವದ್ಗುಣಗಳ ಉಪಸಂಹಾರದಿಂದ ಧ್ಯಾನಿಸಿ ಸಾಕ್ಷಾತ್ಕಾರವನ್ನು ಪಡೆಯುವವರು ಮಾತ್ರ ಅಧಿಕಾರಿಗಳು. 'ಆತ್ಮಾ' (ಸ್ವಾಮೀ) ಎಂಬ ಒಂದು ಗುಣವನ್ನು ಮಾತ್ರ ಉಪಾಸಿಸುವ ವರ್ಣಬಾಹಿರ ಮನುಷ್ಯ ಜೀವರಿಗೆ (ಏಕಗುಣೋಪಾಸಕರಿಗೆ), ಉತ್ಕ್ರಾಂತಿಯಿಲ್ಲ-ತೃಣಜೀವರೇ ಮೊದಲಾದ ಅಲ್ಪಾಧಿಕಾರಿ ಮುಕ್ತಿಯೋಗ್ಯರಿಗೆ ಉತ್ಕ್ರಾಂತಿಯಿಲ್ಲವೆಂದು ಹೇಳಲೇನಿದೆ![10]

ಚರಮದೇಹದಿಂದ ಹೊರಡುವ ಪ್ರಕಾರವು ಹೀಗೆಂದು ನಿರ್ಣಯಿಸಲಾಗಿದೆ:- **'ಓಂ ತದೋಕೋऽಗ್ರ ಜ್ವಲನಂ ತತ್ಪ್ರಕಾಶಿತ ದ್ವಾರೋ ವಿದ್ಯಾಸಾಮರ್ಥ್ಯಾತ್ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ಓಂ'** ಎಂಬ ಸೂತ್ರವು, ಈ ನಿರ್ಣಯವನ್ನು ಹೇಳುತ್ತದೆ. ಈ ಸೂತ್ರದ ತಾತ್ಪರ್ಯವೇನೆಂದರೆ :- ಜ್ಞಾನಿಯು ಚರಮ ದೇಹವನ್ನು ಬಿಡುವ- ಕಾಲದಲ್ಲಿ, ಪರಮಾತ್ಮನ ಆಶ್ರಯ ಸ್ಥಾನವಾದ ಆ ದೇಹದ ಹೃದಯಾಗ್ರ ಭಾಗದಲ್ಲಿ ಪ್ರಕಾಶವುಂಟಾಗುತ್ತದೆ. ಅದರಿಂದ ಪ್ರಕಾಶಿತ ಮಾರ್ಗವುಳ್ಳವನಾಗಿ ದೇಹದಿಂದ ಹೊರಡುತ್ತಾನೆ; ಈ

---

10. 'ತತ್ರ ವರ್ಣಾವರಾದ್ಯಾ ಯೇ ನೋತ್ಕ್ರಾಮಂತಿ ಕದಾಚನ । ಅತ್ರೈವ ತೇ ವಿಮುಚ್ಯಂತೇ ಪರಮಾತ್ಮ ಪ್ರಸಾದತಃ ॥'; 'ಏಕ ಗುಣೋಪಾಸಕಾನಾಂ ವರ್ಣಾವರಾದೀನಾಂ ನೈವಮುತ್ಕ್ರಮಣಂ' ; 'ಆತ್ಮೇತ್ಯೇವ ಪರಂದೇವಂ ಉಪಾಸ್ಯ ಹರಿಮವ್ಯಯಂ । ಕೇಚಿದತ್ರೈವಮುಚ್ಯಂತೇ ನೋತ್ಕ್ರಾಮಂತಿ ಕದಾಚನ ॥' ಎಂಬ (ಸ.ರ.ಮಾ.) ವಾಕ್ಯಗಳಲ್ಲಿ ಪ್ರಸಕ್ತ ಪ್ರಮೇಯಗಳ ನಿರೂಪಣೆಯಿದೆ.

ಇವುಗಳ ಭಾವಾರ್ಥ :— ಚರಮದೇಹದಿಂದ ಹೊರಡುವ ಜ್ಞಾನಿಗಳಲ್ಲಿ, ವರ್ಣಾವರರು, ಎಂದರೆ ಸ್ವರೂಪದಿಂದ ಬ್ರಾಹ್ಮಣಾದಿ ಚತುರ್ವರ್ಣಗಳಿಗೆ ಸೇರದ ನಾಲ್ಕು ವರ್ಣಗಳಿಂದ ಕೆಳಗಿನವರಾದ, ಕೆಲವು ಮನುಷ್ಯಜೀವರು ಮತ್ತು ಆತ್ಮಗುಣ ಮಾತ್ರೋಪಾಸಕರಾದ ಮುಕ್ತಿಯೋಗ್ಯ ಜೀವರು, ದೇಹದಲ್ಲಿ ಪ್ರಕಾಶಿತ ಮಾರ್ಗವುಳ್ಳ-ವರಾಗಿ ಬ್ರಹ್ಮನಾಡಿಯಿಂದ ಹೊರಡುವುದಿಲ್ಲ. ದೇಹವನ್ನು ಬಿಟ್ಟು ಪರಮಾತ್ಮನ ಪ್ರಸಾದದಿಂದ ಇಲ್ಲಿಯೇ (ಭೂಲೋಕದಲ್ಲಿಯೇ) ಆನಂದಿಸುತ್ತ ವಾಸಿಸುತ್ತಾರೆ.

ಪ್ರಕಾಶವನ್ನು ಕಂಡು ಅದನ್ನು ಅನುಸರಿಸಿ ಹೋಗೋಣವು, ಅಪರೋಕ್ಷ ಜ್ಞಾನ ಸಾಮರ್ಥ್ಯದಿಂದಲೂ, ತತ್ಪೂರ್ವದಲ್ಲಿ ಗುರೂಪದೇಶದಿಂದ ದೊರೆತ ಮುಂದಿನ ಮಾರ್ಗಸ್ಮರಣೆಯ ಬಲದಿಂದಲೂ ಸಾಧ್ಯವಾಗುತ್ತದೆ; ಹೃದಯಸ್ಥ ಭಗವಂತನ ಅನುಗ್ರಹಕ್ಕೆ ಪಾತ್ರನಾಗಿ ಸುಷುಮ್ನಾ ನಾಡಿಯಿಂದ ಹೊರಡುತ್ತಾನೆಂಬ ಈ ಸೂತ್ರ ನಿರ್ಣಯವನ್ನು ಸ್ಪಷ್ಟವಾಗಿ ಗ್ರಹಿಸಲು ಅವಶ್ಯಕವಾದ ವಿಷಯಗಳ ವಿವರಣೆಯು ಹೀಗಿದೆ :- ಮನುಷ್ಯ ದೇಹದಲ್ಲಿ ೭೨೦೦೦ ನಾಡಿಗಳಿವೆ. ಇವುಗಳಲ್ಲದೇ ಮೂಲಾಧಾರದಿಂದ (ಧ್ಯಾನಾಸನದಲ್ಲಿ ಕೂತಾಗ ದೇಹಕ್ಕೆ ಆಶ್ರಯವಾಗಿರುವ ನಾಭಿಯ ಕೆಳಭಾಗವನ್ನಾರಂಭಿಸಿ) ನೆತ್ತಿಯವರೆಗೆ ನೇರವಾಗಿ ಹಬ್ಬಿ ನಿಂತಿರುವ ನಾಡಿಯು, ಸುಷುಮ್ನಾ - ವಜ್ರಕಾರ್ಯಾ - ಪ್ರಕಾಶಿನೀ - ವೈದ್ಯುತಾ - ಬ್ರಹ್ಮನಾಡಿ, ಎಂಬ ಪಂಚ ಪ್ರಭೇದವುಳ್ಳದ್ದಾಗಿ, ಸುಷುಮ್ನಾ ಎಂಬ ಹೆಸರಿನಿಂದಲೇ ಕರೆಯಲ್ಪಡುತ್ತದೆ - ಮಧ್ಯದಲ್ಲಿರುವುದೇ ಬ್ರಹ್ಮನಾಡಿಯು. ಈ ಬ್ರಹ್ಮನಾಡಿಯಿಂದ ಉತ್ಕ್ರಮಣವಾಗುವುದು ಅಪ್ರತೀಕಾಲಂಬನರಿಗೆ ಮಾತ್ರ - ಅಮುಕ್ತ ವೈಕುಂಠಾದಿಗಳಿಗೆ ಹೋಗಲರ್ಹರಾದ ದೇವತೆಗಳಿಗೆ ಮಾತ್ರ. ಪ್ರತೀಕಾಲಂಬನರ ಮಧ್ಯದಲ್ಲಿ ಸತ್ಯಲೋಕ ಪ್ರಾಪ್ತಿಗೆ ಅರ್ಹರಾದವರಿಗೆ, ಸುಷುಮ್ನಾ ಪ್ರಭೇದಗಳಾದ ಪ್ರಕಾಶಿನ್ಯಾದಿ ನಾಡಿಗಳ ದ್ವಾರಾ ಉತ್ಕ್ರಮಣವು. ಸತ್ಯಲೋಕಕ್ಕಿಂತ ಕೆಳಗಿನ ಜನ ಲೋಕಾದಿ ಪ್ರಾಪ್ತಿಯೋಗ್ಯರಿಗೆ, ಸುಷುಮ್ನಾ ಪಾರ್ಶ್ವದಲ್ಲಿರುವ ಪಿಂಗಳಾನಾಡಿ ದ್ವಾರಾ ಉತ್ಕ್ರಮಣವು.[11] ಏವಂ ಚ, ಪ್ರತೀಕಾಲಂಬನ, ಅಪ್ರತೀಕಾಲಂಬನರೆಂಬ ಉಭಯವರ್ಗದ ಜ್ಞಾನಿಗಳೂ, ಚರಮದೇಹದಿಂದ ಉತ್ಕ್ರಮಣ ಹೊಂದಿ, ಅರ್ಚಿರಾದಿ ಲೋಕಗಳ ದ್ವಾರಾ, ಸ್ವಯೋಗ್ಯ ಲೋಕಗಳನ್ನು (ಸ್ಥಾನಗಳನ್ನು) ಹೊಂದುತ್ತಾರೆ.[12] ಅಲ್ಲಿ ಮಹಾ

---

11. ಶರೀರದ ಎಡಪಾರ್ಶ್ವದಲ್ಲಿ 'ಇಡಾ' ನಾಮಕ ನಾಡಿಗಳಿವೆ. ಹಾಗೆಯೇ ಬಲಪಾರ್ಶ್ವದಲ್ಲಿ 'ಪಿಂಗಳಾ' ನಾಮಕ ನಾಡಿಗಳಿವೆ. ಇವುಗಳ ಮಧ್ಯದಲ್ಲಿ ಸುಷುಮ್ನಾ ನಾಡಿಯಿದೆ. ಇಡಾ - ಪಿಂಗಳಾ - ಸುಷುಮ್ನಾ ನಾಡಿಗಳಿಂದ ಉತ್ಕ್ರಮಣ ಹೊಂದುವವರಿಗೆ ದೊರೆಯುವ ಮಾರ್ಗಗಳು ಕ್ರಮವಾಗಿ ಪಿತೃಯಾನ - ದೇವಯಾನ - ಬ್ರಹ್ಮ - ಯಾನವೆಂಬ ನಾಮಗಳಿಂದ ಕರೆಯಲ್ಪಡುತ್ತವೆ. ಇವುಗಳ ವಿವರಣೆಯು ಮುಂದಿನ ಪರಿಚ್ಛೇದದಲ್ಲಿ ಪ್ರಸಕ್ತವಾಗುತ್ತದೆ.
12. 'ಅಪ್ರತೀಕಾಲಂಬನಾಸ್ತು ಸುಷುಮ್ನಾ ಮಧ್ಯಸಂಸ್ಥಯಾ ।
ಬ್ರಹ್ಮನಾಡ್ಯಾ ವಿನಿಷ್ಕ್ರಮ್ಯ ವಿಷ್ಣೋರ್ಲೋಕಂ ತದಾಪ್ನುಯುಃ ।

ಪ್ರಳಯದವರೆಗೆ ಇದ್ದು, ಈ ಹಿಂದೆ ಹೇಳಿದಂತೆ ಸ್ವೋತ್ತಮ ಪ್ರವೇಶದ್ವಾರಾ ದೇವತೆಗಳೂ, ಯಮಧರ್ಮಾದಿಗಳ ದ್ವಾರಾ ಮನುಷ್ಯೋತ್ತಮಾದಿಗಳೂ,[13]

ತದನ್ಯೇ ಬ್ರಹ್ಮಣೋಲೋಕಂ ಸುಷುಮ್ನಾಯಾ ವಿಭೇದತಃ ॥
ತತೋಽಧಮಾಸ್ತು ಸರ್ವೇಽಪಿ ಪಿಂಗಲಾದ್ಯಾಭಿರೇವ ಹಿ ॥
ಮಹರ್ಜನ ತಪೋಲೋಕಾನ್ ಪ್ರಾಪ್ನುವಂತಿ ಸನಾತನಾನ್ ।
ಸ್ವರಂತರಿಕ್ಷಂ ಮೇರುಂ ವಾ ಸ್ವಾಧಿಕಾರಾನುಸಾರತಃ ॥
ತತ್ರಾಪಿ ತತ್ತದ್ದೇವಾದಿ ದ್ವಾರೇಣೋತ್ಕ್ರಾಂತಿರಿಷ್ಯತೇ ॥ (ಸ.ರ.ಮಾ.)

'ಅಪ್ರತೀಕಾಲಂಬನರಾದರೋ ಸುಷುಮ್ನಾ ಮಧ್ಯ ಬ್ರಹ್ಮನಾಡಿಯಿಂದ ಹೊರಟು ವಿಷ್ಣು ಲೋಕವನ್ನು (ಅಮುಕ್ತ ವೈಕುಂಠಾದಿ ಸ್ಥಾನಗಳನ್ನು) ಹೊಂದುತ್ತಾರೆ; ಪ್ರತೀಕಾಲಂಬನರಲ್ಲಿ, ಸತ್ಯಲೋಕ ಪ್ರಾಪ್ತಿಯೋಗ್ಯ ಉತ್ತಮರು ಸುಷುಮ್ನಾ ಪ್ರಭೇದಗಳಾದ ವಜ್ರಕಾಯಾದಿ ನಾಡೀದ್ವಾರಾ ಹೊರಟು ತಮ್ಮ ಸ್ಥಾನವನ್ನು ಸೇರುತ್ತಾರೆ; ಇವರಿಗಿಂತ ಅಧಮರಾದ ಮಹದಾದಿ ಲೋಕ ಪ್ರಾಪ್ತಿ ಯೋಗ್ಯರು ಪಿಂಗಲಾದಿ ನಾಡಿಗಳ ದ್ವಾರಾ ಹೊರಟು ತಮ್ಮ ಲೋಕಗಳಾದ ಮಹಃ-ಜನ-ತಪೋಲೋಕಗಳನ್ನು ಹೊಂದುತ್ತಾರೆ; ಮತ್ತೆ ಕೆಲವರು ಸ್ವರ್ಗ-ಅಂತರಿಕ್ಷ-ಮೇರುಪರ್ವತಗಳನ್ನು ಸ್ವಾಧಿಕಾರಾನುಸಾರ ಹೊಂದುತ್ತಾರೆ. ಪಿಂಗಲಾದಿ ನಾಡಿಗಳಿಂದ ಹೊರಡುವವರು, ತಮಗೆ ಲಭಿಸಬೇಕಾದ ಸೂರ್ಯ ಚಂದ್ರಾದ್ಯಭಿ-ಮನ್ಯಲೋಕಗಳಿಗೆ ಹೋಗಲಿರುವವರು, ಕಣ್ಣು, ಕಿವಿ ಮೊದಲಾದ ದ್ವಾರಗಳಿಂದ ದೇಹವನ್ನು ಬಿಡುತ್ತಾರೆ. ಜೀವನು ವಿಷ್ಣುವಿನಿಂದ ಆರೂಢನಾಗಿರುತ್ತಾನೆ. ಮುಖ್ಯ-ಪ್ರಾಣನೂ ಇಂದ್ರಿಯಾಭಿಮಾನಿ ದೇವತೆಗಳೂ ಅನುಸರಿಸುತ್ತಾರೆ. ಬೃಹ. ಅ. 6-4ನೇ ಶಾರೀರ ಬ್ರಾಹ್ಮಣವನ್ನು ಇಲ್ಲಿ ಓದಿಕೊಳ್ಳಬಹುದು.

13. 'ಅರ್ಚಿರಾದಿ ಪಥಾಹ್ಯೇವಂ ಗತಾಸ್ತೇ ಯೋಗ್ಯತಾ ಕ್ರಮಾತ್ ।
ಸಾಂತಾನಿಕೇಷು ಲೋಕೇಷು ವಸಂತಿಹ್ಯಾಲಯಂ ಶುಭಾಃ ॥
ತತೋ ಧರ್ಮಾದಿ ದೇವಾಂಸ್ತು ಸಂಪ್ರಾಪ್ಯಹ್ಯುತ್ತರೋತ್ತರಂ ।
ದೇವೇಷು ಸಂಪ್ರವಿಶ್ಯಾಥ ಬ್ರಹ್ಮಾಣಂ ಪ್ರಾಪ್ಯತೇನ ಚ ॥
ನಾರಾಯಣಂ ಲಯೇ ಯಾಂತಿ ಶರಣ್ಯಂ ಕರುಣಾರ್ಣವಂ । (ಸ.ರ.ಮಾ.)

ಈ ವಾಕ್ಯಗಳ ತಾತ್ಪರ್ಯ :— ಅರ್ಚಿರಾದಿ ಮಾರ್ಗದಿಂದ ಪ್ರಯಾಣಮಾಡಿ, ಸ್ವಯೋಗ್ಯತಾನುಸಾರವಾದ (ಸಾಂತಾನಿಕ) ಮಹಾಪ್ರಳಯದವರೆಗೆ ನಷ್ಟವಾಗದ ಲೋಕಗಳಲ್ಲಿ ಪ್ರಳಯಪರ್ಯಂತ ವಾಸಿಸುತ್ತಾರೆ. ನಂತರ ಧರ್ಮ (ಯಮ) ಮೊದಲಾದ ದೇವತೆಗಳನ್ನು ಹೊಂದಿ, ಉತ್ತರೋತ್ತರ ದೇವತೆಗಳನ್ನು ಪ್ರವೇಶಿಸಿ, ಬ್ರಹ್ಮದೇವನನ್ನು ಹೊಂದಿ, ಪ್ರಳಯಕಾಲದಲ್ಲಿ ಕರುಣಾಸಮುದ್ರನೂ ಸರ್ವ ಶರಣ್ಯನೂ ಆದ ನಾರಾಯಣನನ್ನು ಹೊಂದುತ್ತಾರೆ.

ಶೇಷ ಗರುಡ ಮಾರ್ಗಗಳಿಂದ ಬ್ರಹ್ಮದೇವನನ್ನು ಸೇರುತ್ತಾರೆ-ಎಲ್ಲರನ್ನೂ ತನ್ನೊಳಗಿಟ್ಟುಕೊಂಡು ಲಕ್ಷ್ಮೀದ್ವಾರಾ ಬ್ರಹ್ಮದೇವನು ಪರಮಾತ್ಮನ ಉದರವನ್ನು ಪ್ರವೇಶಿಸುತ್ತಾನೆ. **ಓಂ ತದೋಕೋಗ್ರಜ್ವಲನಂ ತತ್ಪ್ರಕಾಶಿತ ದ್ವಾರೋ... ಓಂ,** ಎಂಬ ಸೂತ್ರದಲ್ಲಿ ಹೇಳಿದ ನಿರ್ಣಯವು, ಯದ್ಯಪಿ, ಸಾಕ್ಷಾತ್ ಅಪ್ರತೀಕಾಲಂಬನರಿಗೆ ಅನ್ವಯಿಸುವುದಾದರೂ, ಕಿಂಚಿತ್ ಸರ್ವಾಧಿಕಾರಿ ಸಾಧಾರಣವೂ ಆಗಿದೆಯೆಂದು ಹೇಳಲಾಗುತ್ತದೆ. ಆದ್ದರಿಂದ ಮುಕ್ತಿ ಯೋಗ್ಯ ಮನುಷ್ಯಾದಿ ಸರ್ವರಿಗೂ ಚರಮದೇಹದಿಂದ ಉತ್ಕ್ರಮಣವು ಬ್ರಹ್ಮನಾಡೀ ದ್ವಾರಾ ಆಗುವುದೆಂದು ಹೇಳಬೇಕು. ಹೃದಯ ಪದ್ಮಸ್ಥಿತ ಬ್ರಹ್ಮನಾಡಿಯಿಂದ (ಹೃದಯಾಗ್ರ ಪ್ರಕಾಶದಿಂದ) ಸ್ವಲ್ಪಮೇಲೆ ಹೋಗಿ, ನಂತರ ಸಮೀಪದಲ್ಲಿರುವ ಸುಷುಮ್ನಾ ಪ್ರಭೇದ ನಾಡಿಗಳಲ್ಲಿಯೂ, ಪಿಂಗಳಾದಿ ನಾಡಿಗಳಲ್ಲಿಯೂ (ಸ್ವಯೋಗ್ಯತಾನುಸಾರ) ಪ್ರವೇಶಮಾಡಿ ದೇಹದಿಂದ ಹೊರಹೊರಡುವರೆಂದು ತಿಳಿಯಬೇಕು. ಬಹುಭಾಗ ಆ ನಾಡಿಗಳಲ್ಲಿ ಮುಂದೆ ಹೋಗುವುದರಿಂದ, ಪಿಂಗಳಾದಿ ನಾಡಿಗಳಿಂದ ಉತ್ಕ್ರಮಣವೆಂದು ಹೇಳಲ್ಪಡುತ್ತದೆ.

ಈ ಹಿಂದೆ, ಚರಮದೇಹದಿಂದ ಉತ್ಕ್ರಮಣವೂ ಅರ್ಚಿರಾದಿ ಮಾರ್ಗ-ಗಳೂ ದೇವತೆಗಳಿಗೆ ಇಲ್ಲವೆಂದು ಹೇಳಲ್ಪಟ್ಟಿತು. ಅಲ್ಲಿಂದ ಮುಂದಿನ ನಿರೂಪಣೆಯಲ್ಲಿ ಅಪ್ರತೀಕಾಲಂಬನರು ಪ್ರತೀಕಾಲಂಬನರೆಂಬ ಉಭಯ-ವರ್ಗದ ಜ್ಞಾನಿಗಳಿಗೂ, ಬ್ರಹ್ಮದರ್ಶನ ಲಭ್ಯ ಕರ್ಮಕ್ಷಯಾದಿ ನಾಲ್ಕು ಫಲಗಳೂ ಉಂಟೆಂದು ಹೇಳಿದುದು ಹೇಗೆಂಬ ಸಂಶಯವನ್ನು ಪರಿಹರಿಸಿಕೊಳ್ಳಬೇಕಷ್ಟೆ.

---

ಈ ಹಿಂದೆ ವಿವರಿಸಿರುವ ಗರುಡ-ಶೇಷಮಾರ್ಗಗಳನ್ನು ಇಲ್ಲಿ ನೋಡಿಕೊಳ್ಳಬೇಕು. ಸಾಂತಾನಿಕ ಲೋಕಗಳೆಂದರೆ, ಪ್ರಳಯದವರೆಗೆ ನಾಶವಾಗದಿರುವ ಲೋಕ-ಗಳೆಂದರ್ಥ. ದೇವಾದಿ ಪದಯೋಗ್ಯರಿಗೆ ಮಹರ್ಲೋಕದಲ್ಲಿಯೇ ಜನ್ಮವಾದರೂ, ಸಾಧನಕ್ಕಾಗಿ ಭೂಲೋಕದಲ್ಲಿ ಉತ್ಪತ್ತಿಯುಂಟು. ಅದರ ಮೇಲಿನ ಜನ ಮೊದಲಾದ ಲೋಕಗಳಲ್ಲಿರುವವರಿಗೆ, ಭೂಲೋಕದಲ್ಲಿ ಅಂಶದಿಂದ ಮಾತ್ರ ಜನನವುಂಟು— ಮಹರ್ಲೋಕದವರಂತೆ ಪೂರ್ಣಾಂಶಕ್ಕೆ (ಅಂಶಿ ಜೀವನಿಗೆ) ಜನ್ಮವಿಲ್ಲ. ಹೀಗಿರುವುದ-ರಿಂದ, ಲೋಕಸ್ವಭಾವ ನಿರೂಪಣಾಭಿಪ್ರಾಯದಿಂದ, 'ಆಜನಾನ್ನ ಜನಿರ್ಭುವಿ' ಎಂದು ಹೇಳಲಾಗುತ್ತದೆ. ಮತ್ತೆ ಕೆಲವರು ಸ್ವರ್ಗ, ಅಂತರಿಕ್ಷ, ಮೇರು ಪರ್ವತಗಳಲ್ಲಿ ನಿಂತರೂ, ಅವರಿಗೆ ಅಲ್ಲಿಂದ ಪುನರ್ಜನ್ಮವಿಲ್ಲ— ಆ ಸ್ಥಾನಸ್ವಭಾವದಿಂದ ಪುನರ್ಜನ್ಮ-ವಿಲ್ಲವೆಂದು ಅರ್ಥವಲ್ಲ.

ಈ ಸಂಶಯದ ಉದಯಕ್ಕೆ ಕೆಲವು ರಹಸ್ಯ ಪ್ರಮೇಯಗಳ ಜ್ಞಾನಾಭಾವವೇ ಕಾರಣವು. ಸ್ವರೂಪದಿಂದ ದೇವತೆಗಳಾದ ಉತ್ತಮಾಧಿಕಾರಿ ಜೀವರ ಸಹ, ದೇವತ್ವವನ್ನು ಹೊಂದುವ ಮೊದಲು (ದೇವಯೋನಿಗಳಲ್ಲಿ ದೇಹವನ್ನು ಹೊಂದುವ ಮುನ್ನ) ಮನುಷ್ಯ ಶರೀರದಲ್ಲಿದ್ದು ಸಾಧನೆಮಾಡಿಕೊಳ್ಳುತ್ತಾರೆ. '**ಮನುಷ್ಯಾಃ ಸಂತೋ ದೇವಾ ಭವಂತಿ**' ಎಂಬ ಶ್ರುತಿ ನಿಯಮವಿದೆ. ದೇವತ್ವಸಾಧನೆಯಾದನಂತರ, ಸ್ವರ್ಗಾದಿ ಮೇಲಿನ ಲೋಕಗಳಲ್ಲಿ ದೇವ-ಯೋನಿಯ ದೇಹಗಳನ್ನು ಹೊಂದುತ್ತಾರೆ - ಎಂದರೆ ಅಲ್ಲಿ ಹುಟ್ಟುತ್ತಾರೆ. ಪುಣ್ಯಬಲದಿಂದಲೂ ಮತ್ತು ಸಾಧನ ಪರಿಪೂರ್ತಿ ಹೊಂದಿದವರಿಂದಲೂ ಆ ಲೋಕಗಳು ಪ್ರಾಪ್ಯಗಳೆಂದು ತಿಳಿಯಬಾರದು. ಆ ಲೋಕಗಳು ದೇವತ್ವವನ್ನು ಹೊಂದಿದವರೆಲ್ಲರ ಲೋಕಗಳು – ಅವರು ಆ ಲೋಕಗಳ ಸಾಮಾನ್ಯಪ್ರಜೆಗಳು. ಆಯಾ ಲೋಕಾನುಸಾರ ಆಯುರ್ಮಾನಾದಿಗಳುಳ್ಳವರಾಗಿ ಅಲ್ಲಿ ಹುಟ್ಟುತ್ತಾರೆ. 'ಮನ್ವಂತರಾಯುಷಃ ಸ್ವರ್ಗ್ಯಾ ಮಹರ್ಲೋಕೇಷು ಕಾಲ್ಪಿಕಾಃ । ಆಬ್ರಹ್ಮಣೋ ಜನಾದ್ಯಾಯೇ...' ಇತ್ಯಾದಿ ಪ್ರಮಾಣಗಳು, ಸ್ವರ್ಗವಾಸಿಗಳಿಗೆ ಒಂದು ಮನ್ವಂತರ, (ಪ್ರತಿ ಮನ್ವಂತರದಲ್ಲಿ ಬೇರೆ ಬೇರೆ ಜೀವರೇ ಇಂದ್ರಾದಿ ಪದಾರೂಢರಾಗಿ ಅಧಿಕಾರಕ್ಕೆ ಬರುತ್ತಾರೆ). ಮಹರ್ಲೋಕವಾಸಿಗಳಿಗೆ ಒಂದು ದಿನ ಕಲ್ಪವೂ (೧೪ ಮನ್ವಂತರಗಳ ಕಾಲವೂ), ಅಮುಕ್ತ ವೈಕುಂಠಾದಿ ಲೋಕ-ಸತ್ಯಲೋಕ-ತಪೋಲೋಕ-ಜನಲೋಕವಾಸಿಗಳಿಗೆ, ಮಹಾ ಪ್ರಳಯ ಪರ್ಯಂತವೂ, ಆಯುಷ್ಯವೆಂದು ಹೇಳುತ್ತವೆ. ಹೀಗಿದ್ದರೂ ಜನಲೋಕ ಮತ್ತು ಮೇಲಿನ ಲೋಕದ ಪ್ರಜೆಗಳಾದ ದೇವತೆಗಳಿಗೆ ಮೂಲ ರೂಪದಿಂದ ಅಲ್ಲಿದ್ದುಕೊಂಡೇ ಅಂಶಾಂತರದಿಂದ ಭೂಲೋಕದಲ್ಲಿ ಜನನ ಮರಣ-ಗಳುಂಟಾಗುತ್ತವೆ — ಅಮುಕ್ತ ವೈಕುಂಠದಲ್ಲಿದ್ದ ಜಯವಿಜಯರು ಭೂಮಿಯಲ್ಲಿ ಶಾಪನಿಮಿತ್ತವಾಗಿ ಹುಟ್ಟಿದಂತೆ. '**ಏಕಾಂಶೇನ ತತ್ರಸ್ಥಿತಾನಾಂ ಅಂಶಾಂತರೇಣ ಜನ್ಮ ಸಂಭವತಿ ಯಥಾ ಜಯವಿಜಯಾದೀನಾಂ**' ಎಂದು ಹೇಳಲಾಗಿದೆ. ವಸ್ತುಗತಿ ಹೀಗಿರುವುದರಿಂದ, ಹಿಂದೆ ದೇವತೆಗಳಿಗೆ ಉತ್ಕ್ರಮಣವೂ ಮಾರ್ಗವೂ ಇಲ್ಲವೆಂದು ಹೇಳಿದುದನ್ನು, ದೇವತ್ವವನ್ನು ಹೊಂದಿ ಸ್ವಯೋಗ್ಯ ಲೋಕವಾಸವನ್ನು ಹೊಂದಿದವರ ವಿವಕ್ಷೆಯಿಂದ ಮಾತ್ರ ಹೇಳಿದುದೆಂದು

ಶೇಷ ಗರುಡ ಮಾರ್ಗಗಳಿಂದ ಬ್ರಹ್ಮದೇವನನ್ನು ಸೇರುತ್ತಾರೆ-ಎಲ್ಲರನ್ನೂ ತನ್ನೊಳಗಿಟ್ಟುಕೊಂಡು ಲಕ್ಷ್ಮೀದ್ವಾರಾ ಬ್ರಹ್ಮದೇವನು ಪರಮಾತ್ಮನ ಉದರವನ್ನು ಪ್ರವೇಶಿಸುತ್ತಾನೆ. **ಓಂ ತದೋಕೋಗ್ರಜ್ವಲನಂ ತತ್ಪ್ರಕಾಶಿತ ದ್ವಾರೋ... ಓಂ,** ಎಂಬ ಸೂತ್ರದಲ್ಲಿ ಹೇಳಿದ ನಿರ್ಣಯವು, ಯದ್ಯಪಿ, ಸಾಕ್ಷಾತ್ ಅಪ್ರತೀಕಾಲಂಬನರಿಗೆ ಅನ್ವಯಿಸುವುದಾದರೂ, ಕಿಂಚಿತ್ ಸರ್ವಾಧಿಕಾರಿ ಸಾಧಾರಣವೂ ಆಗಿದೆಯೆಂದು ಹೇಳಲಾಗುತ್ತದೆ. ಆದ್ದರಿಂದ ಮುಕ್ತಿ ಯೋಗ್ಯ ಮನುಷ್ಯಾದಿ ಸರ್ವರಿಗೂ ಚರಮದೇಹದಿಂದ ಉತ್ಕ್ರಮಣವು ಬ್ರಹ್ಮನಾಡೀ ದ್ವಾರಾ ಆಗುವುದೆಂದು ಹೇಳಬೇಕು. ಹೃದಯ ಪದ್ಮಸ್ಥಿತ ಬ್ರಹ್ಮನಾಡಿಯಿಂದ (ಹೃದಯಾಗ್ರ ಪ್ರಕಾಶದಿಂದ) ಸ್ವಲ್ಪಮೇಲೆ ಹೋಗಿ, ನಂತರ ಸಮೀಪದಲ್ಲಿರುವ ಸುಷುಮ್ನಾ ಪ್ರಭೇದ ನಾಡಿಗಳಲ್ಲಿಯೂ, ಪಿಂಗಳಾದಿ ನಾಡಿಗಳಲ್ಲಿಯೂ (ಸ್ವಯೋಗ್ಯತಾನುಸಾರ) ಪ್ರವೇಶಮಾಡಿ ದೇಹದಿಂದ ಹೊರಹೊರಡುವರೆಂದು ತಿಳಿಯಬೇಕು. ಬಹುಭಾಗ ಆ ನಾಡಿಗಳಲ್ಲಿ ಮುಂದೆ ಹೋಗುವುದರಿಂದ, ಪಿಂಗಳಾದಿ ನಾಡಿಗಳಿಂದ ಉತ್ಕ್ರಮಣವೆಂದು ಹೇಳಲ್ಪಡುತ್ತದೆ.

ಈ ಹಿಂದೆ, ಚರಮದೇಹದಿಂದ ಉತ್ಕ್ರಮಣವೂ ಅರ್ಚಿರಾದಿ ಮಾರ್ಗ-ಗಳೂ ದೇವತೆಗಳಿಗೆ ಇಲ್ಲವೆಂದು ಹೇಳಲ್ಪಟ್ಟಿತು. ಅಲ್ಲಿಂದ ಮುಂದಿನ ನಿರೂಪಣೆಯಲ್ಲಿ ಅಪ್ರತೀಕಾಲಂಬನರು ಪ್ರತೀಕಾಲಂಬನರೆಂಬ ಉಭಯ-ವರ್ಗದ ಜ್ಞಾನಿಗಳಿಗೂ, ಬ್ರಹ್ಮದರ್ಶನ ಲಭ್ಯ ಕರ್ಮಕ್ಷಯಾದಿ ನಾಲ್ಕು ಫಲಗಳೂ ಉಂಟೆಂದು ಹೇಳಿದುದು ಹೇಗೆಂಬ ಸಂಶಯವನ್ನು ಪರಿಹರಿಸಿಕೊಳ್ಳಬೇಕಷ್ಟೆ.

ಈ ಹಿಂದೆ ವಿವರಿಸಿರುವ ಗರುಡ-ಶೇಷಮಾರ್ಗಗಳನ್ನು ಇಲ್ಲಿ ನೋಡಿಕೊಳ್ಳಬೇಕು. ಸಾಂತಾನಿಕ ಲೋಕಗಳೆಂದರೆ, ಪ್ರಳಯದವರೆಗೆ ನಾಶವಾಗದಿರುವ ಲೋಕ-ಗಳೆಂದರ್ಥ. ದೇವಾದಿ ಪದಯೋಗ್ಯರಿಗೆ ಮಹರ್ಲೋಕದಲ್ಲಿಯೇ ಜನ್ಮವಾದರೂ, ಸಾಧನಕ್ಕಾಗಿ ಭೂಲೋಕದಲ್ಲಿ ಉತ್ಪತ್ತಿಯುಂಟು. ಅದರ ಮೇಲಿನ ಜನ ಮೊದಲಾದ ಲೋಕಗಳಲ್ಲಿರುವವರಿಗೆ, ಭೂಲೋಕದಲ್ಲಿ ಅಂಶದಿಂದ ಮಾತ್ರ ಜನನವುಂಟು— ಮಹರ್ಲೋಕದವರಂತೆ ಪೂರ್ಣಾಂಶಕ್ಕೆ (ಅಂಶಿ ಜೀವನಿಗೆ) ಜನ್ಮವಿಲ್ಲ. ಹೀಗಿರುವುದ-ರಿಂದ, ಲೋಕಸ್ವಭಾವ ನಿರೂಪಣಾಭಿಪ್ರಾಯದಿಂದ, 'ಆಜನಾನ್ನ ಜನಿರ್ಭುವಿ' ಎಂದು ಹೇಳಲಾಗುತ್ತದೆ. ಮತ್ತೆ ಕೆಲವರು ಸ್ವರ್ಗ, ಅಂತರಿಕ್ಷ, ಮೇರು ಪರ್ವತಗಳಲ್ಲಿ ನಿಂತರೂ, ಅವರಿಗೆ ಅಲ್ಲಿಂದ ಪುನರ್ಜನ್ಮವಿಲ್ಲ— ಆ ಸ್ಥಾನಸ್ವಭಾವದಿಂದ ಪುನರ್ಜನ್ಮ-ವಿಲ್ಲವೆಂದು ಅರ್ಥವಲ್ಲ.

ಈ ಸಂಶಯದ ಉದಯಕ್ಕೆ ಕೆಲವು ರಹಸ್ಯ ಪ್ರಮೇಯಗಳ ಜ್ಞಾನಾಭಾವವೇ ಕಾರಣವು. ಸ್ವರೂಪದಿಂದ ದೇವತೆಗಳಾದ ಉತ್ತಮಾಧಿಕಾರಿ ಜೀವರ ಸಹ, ದೇವತ್ವವನ್ನು ಹೊಂದುವ ಮೊದಲು (ದೇವಯೋನಿಗಳಲ್ಲಿ ದೇಹವನ್ನು ಹೊಂದುವ ಮುನ್ನ) ಮನುಷ್ಯ ಶರೀರದಲ್ಲಿದ್ದು ಸಾಧನೆಮಾಡಿಕೊಳ್ಳುತ್ತಾರೆ. **'ಮನುಷ್ಯಾಃ ಸಂತೋ ದೇವಾ ಭವಂತಿ'** ಎಂಬ ಶ್ರುತಿ ನಿಯಮವಿದೆ. ದೇವತ್ವಸಾಧನೆಯಾದನಂತರ, ಸ್ವರ್ಗಾದಿ ಮೇಲಿನ ಲೋಕಗಳಲ್ಲಿ ದೇವ-ಯೋನಿಯ ದೇಹಗಳನ್ನು ಹೊಂದುತ್ತಾರೆ - ಎಂದರೆ ಅಲ್ಲಿ ಹುಟ್ಟುತ್ತಾರೆ. ಪುಣ್ಯಬಲದಿಂದಲೂ ಮತ್ತು ಸಾಧನ ಪರಿಪೂರ್ತಿ ಹೊಂದಿದವರಿಂದಲೂ ಆ ಲೋಕಗಳು ಪ್ರಾಪ್ಯಗಳೆಂದು ತಿಳಿಯಬಾರದು. ಆ ಲೋಕಗಳು ದೇವತ್ವವನ್ನು ಹೊಂದಿದವರೆಲ್ಲರ ಲೋಕಗಳು - ಅವರು ಆ ಲೋಕಗಳ ಸಾಮಾನ್ಯಪ್ರಜೆಗಳು. ಆಯಾ ಲೋಕಾನುಸಾರ ಆಯುರ್ಮಾನಾದಿಗಳುಳ್ಳವರಾಗಿ ಅಲ್ಲಿ ಹುಟ್ಟುತ್ತಾರೆ. 'ಮನ್ವಂತರಾಯುಷಃ ಸ್ವರ್ಗ್ಯಾ ಮಹರ್ಲೋಕೇಷು ಕಾಲ್ಪಿಕಾಃ । ಆಬ್ರಹ್ಮಣೋ ಜನಾದ್ಯಾಯೇ...' ಇತ್ಯಾದಿ ಪ್ರಮಾಣಗಳು, ಸ್ವರ್ಗವಾಸಿಗಳಿಗೆ ಒಂದು ಮನ್ವಂತರ, (ಪ್ರತಿ ಮನ್ವಂತರದಲ್ಲಿ ಬೇರೆ ಬೇರೆ ಜೀವರೇ ಇಂದ್ರಾದಿ ಪದಾರೂಢರಾಗಿ ಅಧಿಕಾರಕ್ಕೆ ಬರುತ್ತಾರೆ). ಮಹರ್ಲೋಕವಾಸಿಗಳಿಗೆ ಒಂದು ದಿನ ಕಲ್ಪವೂ (೧೪ ಮನ್ವಂತರಗಳ ಕಾಲವೂ), ಅಮುಕ್ತ ವೈಕುಂಠಾದಿ ಲೋಕ-ಸತ್ಯಲೋಕ-ತಪೋಲೋಕ-ಜನಲೋಕವಾಸಿಗಳಿಗೆ, ಮಹಾ ಪ್ರಳಯ ಪರ್ಯಂತಪೂ, ಆಯುಷ್ಯವೆಂದು ಹೇಳುತ್ತವೆ. ಹೀಗಿದ್ದರೂ ಜನಲೋಕ ಮತ್ತು ಮೇಲಿನ ಲೋಕದ ಪ್ರಜೆಗಳಾದ ದೇವತೆಗಳಿಗೆ ಮೂಲ ರೂಪದಿಂದ ಅಲ್ಲಿದ್ದುಕೊಂಡೇ ಅಂಶಾಂತರದಿಂದ ಭೂಲೋಕದಲ್ಲಿ ಜನನ ಮರಣ-ಗಳುಂಟಾಗುತ್ತವೆ — ಅಮುಕ್ತ ವೈಕುಂಠದಲ್ಲಿದ್ದ ಜಯವಿಜಯರು ಭೂಮಿಯಲ್ಲಿ ಶಾಪನಿಮಿತ್ತವಾಗಿ ಹುಟ್ಟಿದಂತೆ. **'ಏಕಾಂಶೇನ ತತ್ರಸ್ಥಿತಾನಾಂ ಅಂಶಾಂತರೇಣ ಜನ್ಮ ಸಂಭವತಿ ಯಥಾ ಜಯವಿಜಯಾದೀನಾಂ'** ಎಂದು ಹೇಳಲಾಗಿದೆ. ವಸ್ತುಗತಿ ಹೀಗಿರುವುದರಿಂದ, ಹಿಂದೆ ದೇವತೆಗಳಿಗೆ ಉತ್ಕ್ರಮಣವೂ ಮಾರ್ಗವೂ ಇಲ್ಲವೆಂದು ಹೇಳಿದುದನ್ನು, ದೇವತ್ವವನ್ನು ಹೊಂದಿ ಸ್ವಯೋಗ್ಯ ಲೋಕವಾಸವನ್ನು ಹೊಂದಿದವರ ವಿವಕ್ಷೆಯಿಂದ ಮಾತ್ರ ಹೇಳಿದುದೆಂದು

ತಿಳಿಯಬೇಕು. ಈ ಹಿಂದೆ ಹೇಳಿದಂತೆ ಸ್ವೋತ್ತಮ ಪ್ರವೇಶ ರೂಪದ ದೇಹಲಯವನ್ನು ಹೊಂದುವ ಎಲ್ಲರೂ, ಮತ್ತು ಅಮುಕ್ತ ವೈಕುಂಠಾದಿ ಲೋಕಗಳನ್ನು ಅರ್ಚಿರಾದಿ ಮಾರ್ಗದಿಂದ ಬಂದು ಸೇರಿ ಅಲ್ಲಿ ವಾಸಿಸುವವರೂ ಸಹ, ಮಹಾಪ್ರಳಯಕಾಲ ಪ್ರಾಪ್ತವಾಗಲು ಶೇಷ ಗರುಡ ಮಾರ್ಗಗಳಿಂದ ಬ್ರಹ್ಮನನ್ನು ಹೊಂದುತ್ತಾರೆ. ದೇವತ್ವ ಪ್ರಾಪ್ತಿಗೆ ಅವ್ಯವಹಿತ ಪೂರ್ವದೇಹವೇ ದೇವತೆಗಳಿಗೆ ಚರಮದೇಹಸ್ಥಾನೀಯವು. ಆಗ ಅವರಿಗೆ ಬ್ರಹ್ಮನಾಡಿಯದ್ವಾರಾ ಉತ್ಕ್ರಮಣ ಮಾರ್ಗಾದಿಗಳು ಉಂಟು. ದೇವತ್ವಪ್ರಾಪ್ತಿಯ ನಂತರ ಅಂಶದಿಂದ ಅವತರಿಸಿದಾಗ ವಿನಹ, ಉತ್ಕ್ರಮಣಾದಿಗಳಿಲ್ಲವೆಂದು ತಿಳಿಯಬೇಕು. ಹೀಗೆ ದೇವತ್ವವನ್ನು ಹೊಂದಿದ ದೇವತೆಗಳು ಕರ್ಮಜದೇವತೆಗಳು ಮಾತ್ರವೆಂದು ಭ್ರಮಿಸಬಾರದು. ಒಂದಕ್ಕಿಂತ ಅಧಿಕ ಬ್ರಹ್ಮಕಲ್ಪಗಳ ಸಾಧನವುಳ್ಳ ದೇವತೆಗಳು, ದೇವತ್ವವನ್ನು ಹೊಂದುವ ಹಿಂದಿನ ಜನ್ಮದಲ್ಲಿ, ಉತ್ಕ್ರಮಣ ಮಾರ್ಗಗಳೆಂಬ ಉಭಯ ಬ್ರಹ್ಮದರ್ಶನ ಫಲಗಳನ್ನು ಹೊಂದಿ ಅರ್ಚಿರಾದಿ ಮಾರ್ಗಗಳಿಂದ ಮುಖ್ಯವಾಯುವನ್ನು ಹೊಂದಿ, ಆತನಿಂದ ಸ್ವಯೋಗ್ಯ ನಿತ್ಯಸ್ಥಾನಗಳನ್ನು ಹೊಂದುತ್ತಾರೆ. ಪ್ರಳಯಕಾಲದಲ್ಲಿ ಬ್ರಹ್ಮದೇವನದ್ವಾರಾ ಪರಮಾತ್ಮನ ಉದರ ಪ್ರವೇಶ ಮಾಡಿ, ಅಲ್ಲಿ ಪುನಃ ಸೃಷ್ಟಿಕಾಲದವರೆಗೆ ಸುಪ್ತರಾಗಿದ್ದು, ನಂತರ ಮುಂದಿನ ಬ್ರಹ್ಮಕಲ್ಪದಲ್ಲಿ ತಮತಮಗೆ ಯೋಗ್ಯವಾದ ಸ್ಥಾನಗಳನ್ನು ಹೊಂದುತ್ತಾರೆ. ಒಂದೇ ಬ್ರಹ್ಮಕಲ್ಪದಲ್ಲಿ ಸ್ವಪೂರ್ಣತೆಯನ್ನು ಸಾಧಿಸಿ ಬ್ರಹ್ಮದೇವನೊಂದಿಗೆ ಲಿಂಗಭಂಗದಿಂದ ಪರಮಾತ್ಮನ ಉದರಪ್ರವೇಶ ಮಾಡುವವರು ಅಲ್ಪಾಧಿಕಾರಿಗಳು-ಅವರು ಪ್ರಳಯಕಾಲ ಮುಗಿದು ಸೃಷ್ಟಿಕಾಲ ಬರುವವರೆಗೆ ಸುಪ್ತರಾಗಿರುವುದಿಲ್ಲ-ಧ್ಯಾನಂಗತರಾಗಿ ಆನಂದದಿಂದಿರುತ್ತಾರೆ.

ಚರಮದೇಹದಿಂದ ಉತ್ಕ್ರಮಣ ಹೊಂದುವ ಜ್ಞಾನಿಜೀವನು, ತಾನು ಹೊರಡುವ ಸುಷುಮ್ನಾದಿ ನಾಡಿಗತ ಸೂರ್ಯರಶ್ಮಿಗಳನ್ನನುಸರಿಸಿ ಮುಂದೆ ಪ್ರಯಾಣ ಮಾಡುತ್ತಾನೆ. ರಾತ್ರಿಕಾಲದಲ್ಲಿ ಸೂರ್ಯರಶ್ಮಿಗಳಿಲ್ಲದ ಕಾರಣ ಜ್ಞಾನಿಗೆ ರಾತ್ರಿ ಮರಣವು ಸಂಭವಿಸುವುದಿಲ್ಲವೆಂಬುದು ಸರಿಯಲ್ಲ. ನಾಡಿಗಳಿಗೆ ದೇಹವಿರುವವರೆಗೂ (ರಾತ್ರಿ ಸಹ) ಸೂರ್ಯರಶ್ಮಿಗಳ ಸಂಬಂಧವಿರುತ್ತದೆ.

ಆದ್ದರಿಂದ ರಾತ್ರಿ ಮರಣವು ಜ್ಞಾನಿಗೂ ಕೂಡುತ್ತದೆ. ನಾಡಿಗಳಲ್ಲಿ ಸೂರ್ಯನ ಸಹಸ್ರ ರಶ್ಮಿಗಳೂ ಸದಾ ಇರುತ್ತವೆ. ದಕ್ಷಿಣಾಯನ ರಶ್ಮಿಗಳು ಐನೂರು-ಉತ್ತರಾಯಣ ರಶ್ಮಿಗಳೂ ಅಷ್ಟೇ. ಉತ್ತರಾಯಣ ರಶ್ಮಿಗಳ ವ್ಯಾಪ್ತಿಯುಳ್ಳದ್ದು ಸುಷುಮ್ನಾ ನಾಡಿ. ಸುಷುಮ್ನಾ ನಾಡಿ ಶುಭ್ರವರ್ಣವುಳ್ಳದ್ದು. ಬ್ರಹ್ಮನಾಡಿಯಿಂದ ಹೊರಡುವ ಜ್ಞಾನಿಗಳಿಗೆ ದಕ್ಷಿಣಾಯನ ಕಾಲದಲ್ಲಿ ಸಂಭವಿಸುವ ದೇಹತ್ಯಾಗವು ಸಹ ಸ್ವಯೋಗ್ಯ ಉತ್ತಮ ಲೋಕ ಪ್ರಾಪಕವಾಗುತ್ತದೆ. ದಕ್ಷಿಣಾಯನದಲ್ಲಿ ಮರಣಹೊಂದಿದವರು ನಿಯಮೇನ ಸಂಸಾರಕ್ಕೆ ತಿರಿಗಿ ಬರುವರೆಂದು ತಿಳಿಯುವುದು ಸರಿಯಲ್ಲ. **'ದಕ್ಷಿಣೇ ಮರಣಾದ್ಯಾತಿ ಸ್ವರ್ಗಂ ಬ್ರಹ್ಮೋತ್ತ-ರಾಯಣೇ'**—ಎಂದರೆ, ದಕ್ಷಿಣಾಯನದಲ್ಲಿ ಮೃತನಾದವನು ಸ್ವರ್ಗವನ್ನೂ ಉತ್ತರಾಯಣದಲ್ಲಿ ಮರಣಹೊಂದಿದವನು ಪರಬ್ರಹ್ಮನನ್ನೂ ಹೊಂದುವ-ನೆಂದು ಹೇಳುವ ಸ್ಮೃತಿಗಳ ತಾತ್ಪರ್ಯವನ್ನು ಸರಿಯಾಗಿ ಗ್ರಹಿಸಬೇಕು. ಜ್ಞಾನಿಗಳು ದ್ವಿವಿಧರು — ಜ್ಞಾನಯೋಗಿ, ಕರ್ಮಯೋಗಿಗಳೆಂದು. ಉತ್ತರಾಯಣ-ದಕ್ಷಿಣಾಯನಗಳೆಂಬ ಎರಡು ಮಾರ್ಗಗಳೂ, ಉಭಯ ವಿಧ ಜ್ಞಾನಿಗಳಿಗೆ, ಉತ್ಕ್ರಮಣ ಕಾಲದಲ್ಲಿ ಸ್ಮರಣಾರ್ಥವಾಗಿ ಹೇಳಲ್ಪಡುತ್ತವೆ. ಉತ್ತರಾಯಣ ದಕ್ಷಿಣಾಯನಗಳೆಂಬ ಕಾಲ ವಿಶೇಷಗಳಲ್ಲಿ ಮರಣ-ಹೊಂದಿದವರ ಗತಿಗಳನ್ನು 'ಉತ್ತರ-ದಕ್ಷಿಣ' ಶಬ್ದಗಳು ಹೇಳುವುದಿಲ್ಲ. ಪರಂತು, ಉತ್ತರಾಯಣ - ದಕ್ಷಿಣಾಯನಗಳಿಗೆ ಅಭಿಮಾನಿಗಳಾದ ತನ್ನಾಮಕ ದೇವತೆಗಳಿಂದ ಅಧಿಷ್ಠಿತವಾದ ಲೋಕಗಳು ದೊರೆಯುವ ಮಾರ್ಗಗಳನ್ನು ಹೇಳುತ್ತವೆ. ಆ ಮಾರ್ಗಗಳು ಉತ್ತರಾಯಣ-ದಕ್ಷಿಣಾಯನ ರಶ್ಮಿಗಳಿಂದ ಪ್ರದರ್ಶಿತವಾಗುತ್ತವೆ. ಈ ರಶ್ಮಿಗಳು ನಾಡಿಗಳಲ್ಲಿಯೇ ವ್ಯಾಪಿಸಿದ್ದು ಮಾರ್ಗಪ್ರದರ್ಶಕವಾಗುತ್ತವೆ. ಆದ್ದರಿಂದ ಜ್ಞಾನಿಯು ಗುರೂಪದಿಷ್ಟ ಮಾರ್ಗಸ್ಮರಣೆಯುಳ್ಳವನಾಗಿ, ತನ್ನ ಮಾರ್ಗಪ್ರಕಾಶಕ ರಶ್ಮಿಯುಳ್ಳ ನಾಡಿಯಿಂದ ಹೊರಡಬೇಕು. **'ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ । ತತ್ರಪ್ರಯಾತಾಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ । ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ-ಪ್ರಾಪ್ಯ ನಿವರ್ತತೇ ॥** (ಗೀತಾ) —'ಅಗ್ನಿ, ಜ್ಯೋತಿ, ಅಹಸ್ಸು(ಹಗಲು), ಶುಕ್ಲಪಕ್ಷ, ಉತ್ತರಾಯಣದ ಆರು ಮಾಸಗಳು, ಮತ್ತು ಉತ್ತರಾಯಣ,

ಇವುಗಳಿಗೆ ಅಭಿಮಾನಿಗಳಾದ ದೇವತಾಲೋಕಗಳಿಗೆ ಹೋದ ಜ್ಞಾನಿಗಳು ಬ್ರಹ್ಮನನ್ನೇ (ಚತುರ್ಮುಖ ಅಥವಾ ಪರಬ್ರಹ್ಮ-ಇವರಿಂದ ಅಧಿಷ್ಠಿತವಾದ ಸತ್ಯಲೋಕ ಅಥವಾ ಅಮುಕ್ತ ವೈಕುಂಠಾದಿಗಳನ್ನು ಯಥಾಯೋಗ್ಯವಾಗಿ) ಹೊಂದುತ್ತಾರೆ. ಧೂಮ, ರಾತ್ರಿ , ಕೃಷ್ಣಪಕ್ಷ, ದಕ್ಷಿಣಾಯನದ ಆರುಮಾಸಗಳು ಮತ್ತು ದಕ್ಷಿಣಾಯನ ಇವುಗಳ ಅಭಿಮಾನಿ ದೇವತಾಲೋಕಗಳಿಗೆ ಹೋದ ಯೋಗಿಗಳು ಚಂದ್ರಜ್ಯೋತಿಯನ್ನು ಹೊಂದಿ ಹಿಂತಿರುಗಿ(ಭೂಲೋಕಕ್ಕೆ) ಬರುತ್ತಾರೆ (ಪುನರ್ಜನ್ಮವನ್ನು ಹೊಂದುತ್ತಾರೆ). ಇಲ್ಲಿ ಹೇಳಲಾಗಿರುವ ಬ್ರಹ್ಮ – ಚಂದ್ರಗತಿಗಳು ಕೇವಲ ಮರಣಕಾಲ ಮಹಿಮೆಯಿಂದ ದೊರೆಯುವುವಲ್ಲ. ಕಾಲವು ವಿವಕ್ಷಿತವಾಗಿದ್ದರೆ, ಈ ಶ್ಲೋಕಗಳಲ್ಲಿರುವ 'ಅಗ್ನಿ-ಧೂಮ' ಶಬ್ದಗಳಿಗೆ ಸ್ಥಾನವಿಲ್ಲ-ಅವು ಕಾಲವಾಚಕ ಶಬ್ದಗಳಲ್ಲ. ಚಂದ್ರಗತಿಯ ನಿರೂಪಣೆಯಲ್ಲಿ ಸಹ 'ಯೋಗೀ ಪ್ರಾಪ್ಯ ನಿವರ್ತತೇ' ಎಂದಿದೆ. ಇಲ್ಲಿಯೂ ಯೋಗಿಯೇ (ಜ್ಞಾನಿಯೇ) ಪ್ರಸಕ್ತನೆಂದು ತಿಳಿಯಬಹುದು. ಹಾಗಾದರೆ, ಜ್ಞಾನಿಯು ಹಿಂತಿರುಗುವುದೇಕೆಂಬ ಪ್ರಶ್ನೆಯು ಸಹಜವಾಗಿ ಉದ್ಭವಿಸುತ್ತದೆ. ಜ್ಞಾನಿಯು ತಾನು ಹೋಗಬೇಕಾದ ಮಾರ್ಗವನ್ನು ಸರಿಯಾಗಿ ಚಿಂತಿಸಿ (ಸ್ಮರಣೆಗೆ ತಂದುಕೊಂಡು) ಹೊರಡದೇ ಇದ್ದಲ್ಲಿ, ತಪ್ಪು ಮಾರ್ಗದಲ್ಲಿ ಹೋಗಿ, ಹಿಂತಿರುಗಿ ಬಂದು, ಮತ್ತೊಂದು ದೇಹದಿಂದ ಉತ್ಕ್ರಮಣಹೊಂದಿ ಸರಿಯಾದ ಮಾರ್ಗದಲ್ಲಿ ಹೋಗಬೇಕಾಗುವುದೆಂಬುದನ್ನು 'ಯೋಗೀ' ಶಬ್ದವು ಸೂಚಿಸುತ್ತದೆ. **'ಅನನುಸ್ಮರತಃ ಕಾಲೇ ಸ್ಮರಣಂ ಪ್ರಾಪ್ಯವೈಗತಿಃ'** ಎಂಬ ಪ್ರಮಾಣವು ಇದನ್ನೇ ಹೇಳುತ್ತದೆ. ಎರಡನೆಯದಾದ ಧೂಮಾದಿ ಮಾರ್ಗವು) (ಧೂಮಾದ್ಯಭಿಮಾನಿ ದೇವತಾಧಿಷ್ಠಿತ ಲೋಕಗಳು ದೊರೆಯುವ ಮಾರ್ಗವು) ಪ್ರವೃತ್ತ ಕರ್ಮದಲ್ಲಿ ಆಸಕ್ತರಾದ (ಫಲಾಪೇಕ್ಷೆಯಿಂದ ಕರ್ಮಗಳನ್ನಾಚರಿಸುವ) ಕರ್ಮಿಗಳಿಂದ ಪ್ರಾಪ್ಯವಾದುದೂ ಆಗಿದೆ.[14] ಇವರು ಆಯಾ ಲೋಕಗಳಲ್ಲಿ ಯಥಾಯೋಗ್ಯವಾಗಿ

14. 'ದ್ರವ್ಯಮೂಷ್ಮ ವಿಪಾಕಶ್ಚ ಧೂಮೋ ರಾತ್ರಿರಪಕ್ಷಯಃ । ಅಯನಂ ದಕ್ಷಿಣಂ ಸೋಮೋದರ್ಶಓಷಧಿವೀರುಧಃ ॥ ಅನ್ನಂ ರೇತ ಇತಿಕ್ಷ್ಮೇಶ ಪಿತೃಯಾನಂ ಪುನರ್ಭವಃ । ಏಕೈಕಸ್ಯಾನುಪೂರ್ವ್ಯಾಚ್ಚ ಭೂತ್ವಾ ಭೂತ್ವೇಹ ಜಾಯತೇ ॥' (ಭಾಗವತ) ಶ್ಲೋಕಗಳ ತಾತ್ಪರ್ಯ ಹೀಗಿದೆ :— (ಪುರೋಡಾಶಾದಿ) ದ್ರವ್ಯ, (ಹೋಮಾದಿ ಜನ್ಯ) ಅಪೂರ್ವ ಫಲ, ಧೂಮಾಭಿಮಾನಿ ದೇವತೆ, ರಾತ್ರ್ಯಭಿಮಾನಿ

ಆದರಾತಿಥ್ಯಗಳನ್ನು ಹೊಂದಿ, ಸ್ವಯೋಗ್ಯ ಸುಖಭೋಗಗಳನ್ನೂ ಪಡೆದು, ಪುನಃ ಹುಟ್ಟುತ್ತಾರೆ. ಜ್ಞಾನಿಗಳ ಮಾರ್ಗಕ್ರಮಣ ವಿವರಗಳು ಮುಂದಿನ ಪರಿಚ್ಛೇದದಲ್ಲಿ ಪ್ರಸಕ್ತವಾಗುತ್ತವೆ.

ಬ್ರಹ್ಮಜ್ಞಾನಿಯು ದೇಹತ್ಯಾಗ ಮಾಡುವ ಪ್ರಕಾರವನ್ನು ಗುರೂಪದೇಶ-ದಿಂದ ತಿಳಿದಿರುತ್ತಾನೆ. **ಅದರ ನಿರ್ಣಯವು ಹೀಗಿದೆ :-** ದೇಹತ್ಯಾಗದಲ್ಲಿ ನಿಶ್ಚಿತ ಬುದ್ಧಿಯುಳ್ಳವನಾಗಿ ಧ್ಯಾನದಲ್ಲಿ ಕೂಡಬೇಕು. ಸಮಾಧಿಯಲ್ಲಿ ಸ್ವಬಿಂಬ-ದರ್ಶನವುಳ್ಳವನಾಗಿ, (ದರ್ಶನ ಬಲದಿಂದ ಶರೀರಗ್ಲಾನಿರಹಿತನಾಗಿರುತ್ತಾನೆ) ಹಿಮ್ಮಡಿಯಿಂದ ಗುದದ್ವಾರವನ್ನು ಮುಚ್ಚಿ (ಒತ್ತಿ ಹಿಡಿದು), ಮೂಲಾಧಾರ ಚತುರ್ದಶ ಪದ್ಮದಿಂದ ಉದಾನವಾಯುವನ್ನು ನಾಭಿ - ಹೃದಯ - ಉರ (ಎದೆ), ತಾಲುಮೂಲ (ಗಂಟಲು), ಭ್ರೂಮಧ್ಯ (ಹುಬ್ಬುಗಳ ಮಧ್ಯೆ), ಮೂರ್ಧಾ (ನೆತ್ತಿ), ಹೀಗೆ ಆರು ಸ್ಥಾನಗಳಿಗೆ, ಕ್ರಮದಿಂದ ಮೇಲೆತ್ತಿಕೊಳ್ಳುತ್ತ ಬರಬೇಕು. ಮೂಲಾಧಾರ ಚತುರ್ದಳ ಪದ್ಮದಿಂದ ಉದಾನವಾಯುವನ್ನು ಮೇಲೆಳೆದು ನಾಭಿಯ ಷಡ್ದಳದಲ್ಲಿಯೂ, ನಂತರ ಬ್ರಹ್ಮನಾಡಿ (ಸುಷುಮ್ನಾ ಮಧ್ಯಸ್ಥನಾಡಿ) ದ್ವಾರಾ ಹೃದಯದ ದಶದಳ ಪದ್ಮದಲ್ಲಿಯೇ ತಂದು, ಮನೋನಿಗ್ರಹವುಳ್ಳವನಾಗಿ, ಉರಸ್ಸಿನಲ್ಲಿರುವ ದ್ವಾದಶದಳ ಪದ್ಮದಲ್ಲಿ ತರಬೇಕು.[15] ಆ ಉದಾನ ವಾಯು, ಬ್ರಹ್ಮನಾಡಿಯನ್ನು ಬಿಟ್ಟು ಅನ್ಯನಾಡಿಯನ್ನು

---

ದೇವತೆ, ಕೃಷ್ಣಪಕ್ಷಾಭಿಮಾನಿದೇವತೆ, ದಕ್ಷಿಣಾಯನದೇವತೆ, ಚಂದ್ರ, ಪರ್ವ ಕಾಲಾಭಿಮಾನಿ, ಲತಾಬಳ್ಳಿಗಳ ಅಭಿಮಾನಿ ದೇವತೆಗಳು, ಅನ್ನ ಮತ್ತು ರೇತಸ್ಸು, ಇವುಗಳನ್ನು ಕ್ರಮದಿಂದ ಹೊಂದಿ, ಹೇ ರಾಜನ್! ಕರ್ಮಿಯು (ಪ್ರವೃತ್ತಕರ್ಮ ಪರನಾದ ಜೀವನು) ಈ ಭೂಲೋಕದಲ್ಲಿ ಮತ್ತೆ ಹುಟ್ಟುತ್ತಾನೆ.

ಸೂಚನೆ :- ಅನ್ನದ್ವಾರಾ (ತದ್ರೂಪದಿಂದ) ಪಿತೃದೇಹವನ್ನೂ ನಂತರ ರೇತೋದ್ವಾರಾ ಮಾತೃಗರ್ಭವನ್ನೂ, ಜೀವನು ಹೊಂದುತ್ತಾನೆಂಬುದು ಸಾಮಾನ್ಯ ನಿಯಮ.

15. 'ಪ್ರಾಣಾಪಾನಾವಿಡಾಯಾಂ ಚ ಪಿಂಗಳಾಯಾಂ ಚ ವರ್ತತಃ ।
ವ್ಯಾನಃ ಸಂಧಿಷು ಸರ್ವತ್ರ ಉದಾನೋ ಬ್ರಹ್ಮನಾಡಿಗಃ ॥'

ಎಂಬ ಶ್ರುತಿಯು, ಇಡಾ, ಪಿಂಗಳಾ ನಾಡಿಗಳಲ್ಲಿ ಪ್ರಾಣ, ಅಪಾನ ವಾಯುಗಳೂ, ವ್ಯಾನನು ಸರ್ವಸಂಧಿಗಳಲ್ಲಿಯೂ, ಉದಾನನು ಬ್ರಹ್ಮನಾಡಿಯಲ್ಲಿಯೂ ಪ್ರವರ್ತಿಸುತ್ತಿರುವರೆಂದು ಹೇಳುತ್ತದೆ.

ಪ್ರವೇಶಿಸದಂತೆ ಎಚ್ಚರದಿಂದ (ಗಮನವಿಟ್ಟು) ಮೆಲ್ಲಮೆಲ್ಲಗೆ ಕಂಠದಲ್ಲಿರುವ (ತಾಲುಮೂಲ) ಷೋಡಶದಳ ಪದ್ಮವನ್ನು ಸೇರಿಸಬೇಕು. ಅಲ್ಲಿಂದ ಭ್ರೂಮಧ್ಯ-ದಲ್ಲಿರುವ ದ್ವಿದಳಪದ್ಮಕ್ಕೆ ತಂದು, ಕರ್ಣ-ಅಕ್ಷಿ-ನಾಸಿಕಾದಿ ಮಾರ್ಗಗಳನ್ನು ನಿರೋಧಿಸಿ, ಮನಸ್ಸಿನಿಂದ ಪರಮಾತ್ಮನನ್ನೇ ಚಿಂತಿಸುತ್ತ , ಅರ್ಧ ಮುಹೂರ್ತ-ಪರ್ಯಂತ ಅಲ್ಲಿ ನಿಂತು, ಗುರೂಪದಿಷ್ಟ ಮಾರ್ಗ ಮತ್ತು ಗಮ್ಯಸ್ಥಾನಗಳನ್ನು ಸ್ಮರಿಸಿ (ತಪ್ಪು ಮಾರ್ಗ ಹಿಡಿಯಲು ಅವಕಾಶವಿಲ್ಲದಂತೆ), ನೆತ್ತಿಯನ್ನು ಭೇದಿಸಿಕೊಂಡು (ಒಡೆದು-ಸೀಳಿ) ಶರೀರವನ್ನು ಬಿಟ್ಟು ಹೊರಡಬೇಕು.[16] ಬ್ರಹ್ಮನಾಡಿಯಿಂದ, ಚರಮ ದೇಹವನ್ನು ಬಿಟ್ಟು ಹೊರಡುವ ಜ್ಞಾನಿಗೆ ಗುರೂಪದೇಶ ಗುರ್ವನುಗ್ರಹಗಳಿಂದ, ಈ ದೇಹತ್ಯಾಗ ಪ್ರಕಾರದ ವಿಶಿಷ್ಟ ಜ್ಞಾನವಿರುತ್ತದೆ. ಈ ಜ್ಞಾನವು ಚತುರ್ಗುಣೋಪಾಸಕರಿಂದ ಆರಂಭವಾಗುವ ಸರ್ವಮೋಕ್ಷಾಧಿಕಾರಿ ಜೀವರಿಗೂ ಅವಶ್ಯಕ. ಹೀಗಿದ್ದರೂ ಭಕ್ತಿಯೋಗಿಗಳಕ್ಕಿಂತ (ಭಕ್ತಿ ಪ್ರಚುರಮಾರ್ಗವುಳ್ಳವರಕಿಂತ) ಶ್ವಾಸನಿರೋಧಾದಿ ಸಮಾಧಿಯೋಗ ಸಾಧನೆಯಲ್ಲಿ ಹೆಚ್ಚು ಆಸಕ್ತರಾದವರಿಗೆ ಈ ಜ್ಞಾನ ಮತ್ತು ಅವರ ಅನುಷ್ಠಾನಗಳು ಅತಿಶಯವಾಗಿರುತ್ತವೆ.[17]

---

16. ಇತ್ಥಂ ಮುನಿಸ್ತೂಪರಮೇದ್ವ್ಯವಸ್ಥಿತೋ ವಿಜ್ಞಾನದೃಗ್ವೀರ್ಯ **ಸುರಂಧಿತಾಶಯಃ** । ಸ್ವಪಾರ್ಷ್ಣ್ಯಾಪೀಡ್ಯ ಗುದಂ ತತೋನಿಲಂ ಸ್ಥಾನೇಷು ಷಟ್ಸೂನ್ನಮಯೇಜ್ಜಿತಕ್ಲಮಃ ॥ ನಾಭ್ಯಾಂ ಸ್ಥಿತಂ ಹೃದ್ಯಧಿರೋಪ್ಯ ತಸ್ಮಾದುದಾನ ಗತ್ಯೋರಸಿ ತಂ ನಯೇನ್ಮುನಿಃ । ತತೋಽನುಸಂಧಾಯ ಧಿಯಾ ಮನಸ್ವೀ ಸ್ವ ತಾಲುಮೂಲಂ ಶನಕೈರ್ನಯೇತ ॥ ತಸ್ಮಾದ್ಭ್ರುವೋರಂತರಮುನ್ನಯೇತ ನಿರುದ್ಧ ಸಪ್ತಾಶ್ಚಪಥೋಽನಪೇಕ್ಷಃ । ಸ್ಥಿತ್ವಾ ಮುಹೂರ್ತಾರ್ಧಮಕುಂಠದೃಷ್ಟಿಃ ನಿರ್ಭಿದ್ಯಮೂರ್ಧನ್ವಿಸೃಜೇತ್ಪರಂಗತಃ ॥ ಎಂಬ ಈ (ಭಾಗವತ) ಶ್ಲೋಕಗಳ ತಾತ್ಪರ್ಯವೇ ಈ ಮೇಲೆ ಹೇಳಿದಂತಿದೆ.

17. 'ಪಾನೇನ ತೇ ದೇವ ಕಥಾ ಸುಧಾಯಾಃ ಪ್ರವೃದ್ಧ ಭಕ್ತ್ಯಾ ವಿಶದಾಶಯಾ ಯೇ । ವೈರಾಗ್ಯಸಾರಂ ಪ್ರತಿಲಭ್ಯಬೋಧಂ ಯಥಾಂಜಸಾ ತ್ವಾಪುರಕುಂಠಧಿಷ್ಣ್ಯಂ ॥ ತಥಾಽಪರೇತ್ವಾತ್ಮ ಸಮಾಧಿಯೋಗ ಬಲೇನ ಜಿತ್ವಾ ಪ್ರಕೃತಿಂ ಬಲಿಷ್ಠಾಂ । ತ್ವಾಮೇವ ಧೀರಾ ಪುರುಷಂ ವಿಶಂತಿ ತೇಷಾಂ ಶ್ರಮಃ ಸ್ಯಾನ್ನತು ಸೇವಯಾ ತೇ ॥ (ಭಾಗವತ)

ಇವುಗಳ ಭಾವಾರ್ಥ :— ಹೇ ದೇವ! ನಿನ್ನ ಪಾವನಚರಿತ್ರೆಗಳೆಂಬ ಅಮೃತ ಪಾನದಿಂದ ಅಭಿವೃದ್ಧವಾದ ಭಕ್ತಿಯಿಂದ ಶುದ್ಧಾಂತಃಕರಣರಾದ ಜನರು, ಜ್ಞಾನ ವೈರಾಗ್ಯಗಳ ದಾರ್ಢ್ಯದಿಂದ ವೈಕುಂಠಾದಿ ನಿತ್ಯ ಸುಖಸ್ಥಾನಗಳನ್ನು ಹೊಂದುತ್ತಾರೆ.

ಹೀಗೆ ಜ್ಞಾನಿಮರಣವು ಅತ್ಯಂತ ವಿಲಕ್ಷಣವಾದುದು. ಇದು ಬ್ರಹ್ಮ ಸಾಕ್ಷಾತ್ಕಾರ ಲಭ್ಯವಾದ ಎರಡನೆಯ ಫಲವು.

## ಪರಿಚ್ಛೇದ ೩

## ಮಾರ್ಗ

ಪರಮಾತ್ಮನ ಪ್ರಾಪ್ತಿಗಾಗಿ ದುಡಿಯುವ ಯೋಗ್ಯಜೀವರು, ಜ್ಞಾನ ಯೋಗಿಗಳು ಮತ್ತು ಕರ್ಮಯೋಗಿಗಳೆಂಬ ಎರಡು ದೊಡ್ಡ ವಿಭಾಗಗಳಲ್ಲಿ ಸಮಾವೇಶಗೊಳ್ಳುತ್ತಾರೆ. ಭಕ್ತಿಯೋಗಿಗಳೆಂದು, ಕೆಲವು ಸಂದರ್ಭಗಳಲ್ಲಿ, ಪ್ರತ್ಯೇಕ ನಿರೂಪಿಸಲ್ಪಡುವ ಉತ್ತಮಾಧಿಕಾರಿಗಳಾದ ದೇವತೆಗಳು ಜ್ಞಾನ-ಯೋಗಿಗಳೆಂಬ ಮೊದಲಿನ ವರ್ಗದಲ್ಲಿ ಸೇರುತ್ತಾರೆ. 'ಜ್ಞಾನಸ್ಯ ಭಕ್ತಿಭಾಗತ್ವಾತ್ ಭಕ್ತಿರ್ಜ್ಞಾನಮಿತೀರ್ಯತೇ' ಎಂಬ (ಅನುವ್ಯಾಖ್ಯಾನ) ಪ್ರಮಾಣದಂತೆ, ಜ್ಞಾನವು ಭಕ್ತಿಯ ಭಾಗವೇ ಆದ್ದರಿಂದ, ಭಕ್ತಿಯೂ ಜ್ಞಾನವೆಂದೇ ಹೇಳಲ್ಪಡುತ್ತದೆ. ಕರ್ಮಯೋಗಿಗಳೆಂಬುವರು, ಯದ್ಯಪಿ ಜ್ಞಾನಭಕ್ತಿಗಳುಳ್ಳವರೇ ಆದರೂ, ಕರ್ಮವೇ ಪ್ರಚುರ (ಬಹಳ) ವಾಗುಳ್ಳವರಾದ್ದರಿಂದ, ಕರ್ಮಯೋಗಿಗಳೆಂದು ಕರೆಯಲ್ಪಡುತ್ತಾರೆ. ಇವರು ಸರ್ವದಾ ನಿಷ್ಕಾಮ್ಯ ಕರ್ಮಗಳಲ್ಲಿ ಆಸಕ್ತರಾಗಿರುವುದಿಲ್ಲ. ಹಾಗೆ ನಿಷ್ಕಾಮ್ಯಕರ್ಮದಲ್ಲಿ ತೊಡಗಿದ ನಂತರ, ಕ್ರಮವಾಗಿ ಸಾಧನಪೂರ್ತಿಯನ್ನು ಹೊಂದಿ ಬ್ರಹ್ಮದರ್ಶನವನ್ನು ಪಡೆಯುತ್ತಾರೆ. ಕರ್ಮವು ಪ್ರವೃತ್ತ - ನಿವೃತ್ತವೆಂದು ಎರಡು ವಿಧ. ಫಲಾಪೇಕ್ಷೆಯಿಂದ ಆಚರಿಸುವ ವಿಧ್ಯುಕ್ತ ಕರ್ಮಗಳು ಪ್ರವೃತ್ತವೆಂದೂ, ಫಲಾಶೆಯನ್ನು ಬಿಟ್ಟು ವಿಷ್ಣುಪ್ರೀತ್ಯರ್ಥವಾಗಿ ಆಚರಿಸುವ ವಿಹಿತಕರ್ಮವು ನಿವೃತ್ತವೆಂದೂ

---

ಧೀರರಾದ ಹಠಯೋಗಿಗಳಾದರೋ ಶ್ವಾಸನಿರೋಧಾದಿಗಳಿಂದ ಸಮಾಧಿಯನ್ನು ಸಾಧಿಸಿ, ಆದರಿಂದ ದೊರೆತ ಯೋಗಬಲದಿಂದ ಬಲಿಷ್ಠ ಪ್ರಕೃತಿಯನ್ನು ಜಯಿಸಿ, ಭಕ್ತಿಯೋಗಿಗಳಂತೆ ನಿನ್ನನ್ನೇ (ವೈಕುಂಠಸ್ಥಾನಗಳನ್ನೇ) ಹೊಂದುತ್ತಾರೆ. ಆದರೆ, ಅವರ ಮಾರ್ಗವು ವಿಶೇಷ ಶ್ರಮದಾಯಕವು; ನಿನ್ನ ಸೇವಾನಿರತ ಭಕ್ತರಿಗೆ ಆ ಶ್ರಮವಿಲ್ಲ; ನಿನ್ನ ಪ್ರಾಪ್ತಿಗೆ ಸಾಧನಗಳಾದ ಶ್ರವಣಾದಿಗಳೂ ಸುಖಪ್ರದಗಳೇ ಆಗಿರುವುವು.

ಕರೆಯಲ್ಪಡುತ್ತವೆ. ಉಭಯ ಕರ್ಮಾನುಷ್ಠಾನಪರರೂ ಯೋಗವುಳ್ಳವರೇ- ಭಗವಂತನ ಪ್ರಾಪ್ತಿಗಾಗಿ ದುಡಿಯುವವರೇ. ಪ್ರವೃತ್ತ ಕರ್ಮಾಸಕ್ತರು ಕರ್ಮಿಗಳು; ನಿವೃತ್ತ ಕರ್ಮಾಸಕ್ತರು ಕರ್ಮಯೋಗಿಗಳು. ಉಭಯರೂ ವಿಹಿತಕರ್ಮಾನುಷ್ಠಾನಪರರು. ಫಲಾಪೇಕ್ಷೆಯನ್ನೂ ಸ್ವತಂತ್ರ ಕರ್ತೃತ್ವಾಭಿ- ಮಾನವನ್ನೂ (ಕಾಮಸಂಕಲ್ಪಗಳನ್ನು) ತ್ಯಜಿಸುವ ಹಂತಕ್ಕೆ ಏರಿರದವರು ಕರ್ಮಿಗಳು. ವಿಹಿತವನ್ನೇ ಆಚರಿಸುವುದರಿಂದ, ಕರ್ಮಿಗಳು ಕರ್ಮಯೋಗಿ- ಗಳಾಗುವ ಮಾರ್ಗದಲ್ಲಿರುವರೆನ್ನಬಹುದು.

ಜ್ಞಾನಿಗಳು (ಬ್ರಹ್ಮದರ್ಶನವನ್ನು ಪಡೆದವರು) ಮತ್ತು ಕರ್ಮಿಗಳು, ದೇಹದಿಂದ ಉತ್ಕ್ರಮಣಹೊಂದಿದ ನಂತರ ಪ್ರಯಾಣಮಾಡುವ ಮಾರ್ಗಗಳನ್ನು ಆಗಮಗಳು ವಿವಿಧನಾಮಗಳಿಂದ ಕರೆದರೂ, ಆ ಮಾರ್ಗಗಳು ಎರಡೇ ಎಂದು ನಿರ್ಣಯಿಸಲಾಗಿದೆ. 'ದ್ವಾವೇವ ಮಾರ್ಗೌ ಪ್ರಥಿತಾವರ್ಚಿರಾದಿರ್ವಿಪಶ್ಚಿತಾಮ್ । ಧೂಮಾದಿಃ ಕರ್ಮಿಣಾಂ ಚೈವ ಸರ್ವವೇದ ವಿನಿರ್ಣಯಾತ್'।। ಎಂಬ (ಬ್ರಹ್ಮತರ್ಕ) ವಾಕ್ಯವು, ಈ ನಿರ್ಣಯವನ್ನು ನಿರೂಪಿಸುತ್ತದೆ. ದೇವಯಾನ- ಪಿತೃಯಾನ; ಬ್ರಹ್ಮ-ಚಂದ್ರಗತಿಗಳು; ಸೂರ್ಯ-ಚಂದ್ರಗತಿಗಳು ; ಅರ್ಚಿ-ಧೂಮ ಮಾರ್ಗಗಳು ಇತ್ಯಾದಿ ನಾಮಗಳಿಂದ ಈ ಎರಡು ಮಾರ್ಗಗಳು, ಸಂದರ್ಭಾನುಸಾರವಾಗಿ ವ್ಯವಹರಿಸಲ್ಪಡುತ್ತವೆ. ಜ್ಞಾನಿಗಳು ಹೋಗುವ ಮಾರ್ಗವು ಬ್ರಹ್ಮಯಾನವೆಂದೂ ಕರೆಯಲ್ಪಡುತ್ತದೆ. ಏಕೆಂದರೆ, ಈ ಮಾರ್ಗದಿಂದ ಹೋದವರು, ಬ್ರಹ್ಮಲೋಕವನ್ನು (ಕಾರ್ಯ ಬ್ರಹ್ಮನೆಂದು ಕರೆಯಲ್ಪಡುವ) ಚತುರ್ಮುಖನ ಲೋಕವಾದ ಸತ್ಯಲೋಕವನ್ನೂ, ಪರಬ್ರಹ್ಮನ ಲೋಕಗಳಾದ ವೈಕುಂಠಾದಿಗಳನ್ನೂ ಸ್ವಯೋಗ್ಯತಾನುಸಾರವಾಗಿ ಹೊಂದುತ್ತಾರೆ. ದೇವಯಾನ- ವೆಂಬುದು ಬ್ರಹ್ಮಯಾನದ ಪ್ರಭೇದವೇ. ಹೀಗಿರುವ ಈ ಮಾರ್ಗಗಳು ವಿವಿಧ ಲೋಕಗಳ ಮುಖಾಂತರ (ಮೂಲಕ ಹಾದು) ಹೋಗುತ್ತವೆ. ಆ ಲೋಕಗಳು ಪ್ರತ್ಯೇಕವಾಗಿ ಒಂದೊಂದೂ ಒಬ್ಬೊಬ್ಬ ದೇವತೆಯಿಂದ ಅಧಿಷ್ಠಿತವಾದುದು. ಧೂಮಾಭಿಮಾನಿಯಿಂದ ಅಧಿಷ್ಠಿತಲೋಕವು ಮೊದಲು ಸಿಗುವ ಮಾರ್ಗವು ಧೂಮಮಾರ್ಗವೆನಿಸುತ್ತದೆ. ಈ ಮಾರ್ಗದಿಂದ ಹೋದವರು ತಿರಿಗಿ ಭೂಮಿಯಲ್ಲಿ ಹುಟ್ಟುತ್ತಾರೆ. ಈ ಮಾರ್ಗದಲ್ಲಿ ಹೋಗುವವರು ಪ್ರಾಯಃ

ಕರ್ಮಿಗಳು.[18] ಜ್ಞಾನಿಗಳು ಸ್ಪಷ್ಟಸ್ಮರಣೆಯಿಲ್ಲದೇ ಈ ಮಾರ್ಗದಲ್ಲಿ ಬಂದರೆ, ಅವರು ಹಿಂದಿರುಗಿ ಭೂಮಿಯಲ್ಲಿ ಇನ್ನೊಂದು ದೇಹದಲ್ಲಿ ಬಂದು ಅದನ್ನು ತ್ಯಜಿಸಿ ಸರಿಯಾದ ಮಾರ್ಗದಿಂದ ತಮ್ಮ ಗುರಿಯನ್ನು ಮುಟ್ಟುತ್ತಾರೆ. ಪ್ರಕೃತ, ಬ್ರಹ್ಮದರ್ಶನದ ಫಲವಾಗಿ ಜ್ಞಾನಿಗೆ ದೊರೆಯುವ ಅರ್ಚಿರಾದಿ ಮಾರ್ಗವನ್ನು ವಿವರವಾಗಿ ತಿಳಿಯಬೇಕಾಗಿದೆಯಷ್ಟೆ. ಪ್ರಸಂಗತ್ವೇನ ಧೂಮಾದಿಮಾರ್ಗವನ್ನು ಹೇಳಿದ್ದಾಯಿತು. ಜ್ಞಾನಿಯ ಮಾರ್ಗದಲ್ಲಿ ಮೊದಲಿಗೆ ಹತ್ತುವುದು, ಪ್ರಧಾನಾಗ್ನಿಯ ಪುತ್ರನಾದ 'ಅರ್ಚಿ' ನಾಮಕ ದೇವತಾಲೋಕವು. ಆದರಿಂದ ಈ ಮಾರ್ಗವು ಅರ್ಚಿರಾದಿ ಮಾರ್ಗವೆಂದು ಕರೆಯಲ್ಪಟ್ಟಿದೆ.

ಪ್ರಾರಬ್ಧಕರ್ಮವನ್ನು ಭೋಗದಿಂದ ಕಳೆದು, ಚರಮದೇಹದಿಂದ ಉತ್ಕ್ರಮಣಹೊಂದುವ ಜ್ಞಾನಿಯು, ಅಪ್ರತೀಕಾಲಂಬನನಾಗಲಿ, ಪ್ರತೀಕಾ-ಲಂಬನನಾಗಲಿ, ಬ್ರಹ್ಮನಾಡಿಯಿಂದಾಗಲಿ ಅಥವಾ ಸುಷುಮ್ನಾ ಪ್ರಭೇದಗಳಾದ ಪ್ರಕಾಶಿನೀ ಮೊದಲಾದವುಗಳಲ್ಲೊಂದರಿಂದಾಗಲಿ, ಅಥವಾ ಸುಷುಮ್ನಾ ಬಲಪಾರ್ಶ್ವದಲ್ಲಿರುವ ಪಿಂಗಳಾದಿ ನಾಡಿಯಿಂದ ಆಗಲಿ, ದೇಹವನ್ನು ಬಿಟ್ಟು ಹೊರಟು, ಮೊದಲಿಗೆ ಅರ್ಚಿ ದೇವತಾಲೋಕವನ್ನು ಹೊಂದುತ್ತಾನೆ. ಮುಂದೆ ಕ್ರಮವಾಗಿ, ಮುಖ್ಯವಾಯುಪುತ್ರನಾದ 'ಆತಿವಾಹಿಕ'ನೆಂಬ ದೇವತಾ-ಲೋಕವನ್ನೂ, (ಹಗಲಿಗೆ ಅಭಿಮಾನಿಯಾದ) ಅಹರಭಿಮಾನಿ ಲೋಕವನ್ನೂ, ಶುಕ್ಲಪಕ್ಷಾಭಿಮಾನಿ ಲೋಕವನ್ನೂ, ಉತ್ತರಾಯಣಾಭಿಮಾನಿ ಲೋಕವನ್ನೂ, ಸಂವತ್ಸರಾಭಿಮಾನಿ ಲೋಕವನ್ನೂ, ತಟಿಲ್ಲೋಕವನ್ನೂ, ವರುಣಲೋಕವನ್ನೂ, ದಕ್ಷಪ್ರಜೇಶ್ವರನ ಲೋಕವನ್ನೂ, ಸೂರ್ಯಲೋಕವನ್ನೂ ಹೊಂದುತ್ತಾನೆ. ಅಲ್ಲಿಂದ ಮುಂದೆ ಚಂದ್ರಲೋಕವನ್ನೂ, ವೈಶ್ವಾನರಲೋಕ-ಧ್ರುವಲೋಕ-ಭಾರತೀಲೋಕ-ಮುಖ್ಯವಾಯುಲೋಕಗಳನ್ನೂ ಹೊಂದುತ್ತಾನೆ. ಅಂತಿಮ ಪ್ರಾಪ್ಯ ವಾಯುದೇವನಿಂದ, ಜ್ಞಾನಿಗಳು, 'ಸ ಏನಾನ್ ಬ್ರಹ್ಮ ಗಮಯತಿ' ಎಂಬ (ಛಾಂದೋಗ್ಯ) ಶ್ರುತಿಯು ಹೇಳುವಂತೆ, ಸ್ವಸ್ಥಾನಗಳನ್ನು (ಅಪ್ರತೀಕಾಲಂಬನರು ಅಮುಕ್ತ ವೈಕುಂಠಾದಿ ಭಾಗಗಳನ್ನೂ ಪ್ರತೀಕಾಲಂಬನರು

18. ಪಿತೃಯಾನದಲ್ಲಿ ಬಂದು ಚಂದ್ರನನ್ನು ಹೊಂದಿ, ಮುಂದೆ ಮಾತೃಗರ್ಭದವರೆಗಿನ ಮಾರ್ಗವನ್ನು ಈ ಹಿಂದೆ ನಿರೂಪಿಸಿದೆ. ಅದನ್ನು ಇಲ್ಲಿ ಗಮನಿಸಬಹುದು.

ಸ್ವಯೋಗ್ಯತಾನುಗುಣವಾಗಿ ಸತ್ಯಲೋಕವನ್ನೂ ಅದರ ಕೆಳಗಿನ ಲೋಕಗಳನ್ನೂ) ಹೊಂದಿಸಲ್ಪಡುತ್ತಾರೆ.[19]

ಅರ್ಚಿರಾದಿ ಮಾರ್ಗದಲ್ಲಿ ಬರುವವರೆಲ್ಲರೂ, ಒಂದಾದಮೇಲೆ ಮತ್ತೊಂದರಂತೆ, ಹೇಳಲಾದ ಎಲ್ಲ ಲೋಕಗಳನ್ನೂ ಅತಿಕ್ರಮಿಸುವರೆಂದು ತಿಳಿಯಕೂಡದು. ಅಲ್ಪಾಧಿಕಾರಿಗಳಾದ ಕೆಲವು ಜೀವರು ಸ್ವಯೋಗ್ಯತಾನು-ಗುಣವಾದ ಜ್ಞಾನ ಪರಿಪಕ್ವತೆಯನ್ನು ಹೊಂದುವ ಮೊದಲೇ, ಅತಿಶಯವಾದ ಭಕ್ತಿಯನ್ನು ಹೊಂದಿ, ಅದರ ಪ್ರಭಾವದಿಂದ ಅರ್ಚಿರಾದಿ ಮಾರ್ಗದಲ್ಲಿ

---

19. 'ಉತ್ಕ್ರಾಂತಸ್ತು ಶರೀರಾತ್ಸ್ವಾದ್ಗಚ್ಛತ್ಯರ್ಚಿಷಮೇವ ತು ।
ತತೋಹಿ ವಾಯೋಃ ಪುತ್ರಂ ಚ ಯೋಸೌ ನಾಮ್ನಾತಿವಾಹಕಃ ॥
ತತೋಹಃ ಪೂರ್ವಪಕ್ಷಂ ಚಾಪ್ಯುದಕ್ಸಂವತ್ಸರಂ ತಥಾ ।
ತಟಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ ।
ಸೋಮಂ ವೈಶ್ವಾನರಂ ಚೇಂದ್ರ ಧ್ರುವಂ ವೈವೀಂ ದಿವಂ ತಥಾ ।
ತತೋ ವಾಯುಂ ಪರಂ ಪ್ರಾಪ್ಯ ತೇನೈತಿ ಪುರುಷೋತ್ತಮಂ ॥

ಎಂಬ (ಬ್ರಹ್ಮತರ್ಕ) ವಾಕ್ಯಗಳು, ಜ್ಞಾನಿಮಾರ್ಗಸ್ಥ ಲೋಕಗಳನ್ನು ನಿರೂಪಿಸುತ್ತವೆ. ಇರುವುವೇ 14 ಲೋಕಗಳೆಂದು ಹೇಳುವುದು ಬ್ರಹ್ಮಾಂಡದ ವಿಭಾಗ ದೃಷ್ಟಿಯಿಂದ ಮತ್ತು ಆ ಲೋಕಗಳ ಅಧಿಪತಿಗಳೂ ಈ ಲೋಕಾಧಿಪತ್ಯ ದೃಷ್ಟಿಯಿಂದಲೇ. ಇಲ್ಲಿ ಉಕ್ತವಾದ ಲೋಕಗಳು, ಉಕ್ತ ಆಯಾ ದೇವತೆಗಳ ಅಧಿಕಾರಕ್ಕೊಳಪಟ್ಟ ಪ್ರದೇಶಗಳು (ಲೋಕಭಾಗಗಳು) ಮಾತ್ರವೆಂದು ತಿಳಿಯಬೇಕು. 'ತತೋವಾಯುಂ ಪರಂ-ಪ್ರಾಪ್ಯತೇನೈತಿ ಪುರುಷೋತ್ತಮಂ' ಎಂಬುದು, 'ಸ ಏನಾನ್ ಬ್ರಹ್ಮಗಮಯತಿ' ಎಂಬ (ಛಾಂದೋಗ್ಯ) ಶ್ರುತ್ಯರ್ಥ ವಿವರಣರೂಪವಾದ ವಾಕ್ಯವು. ಈ ಶ್ರುತಿ-ಯಲ್ಲಿರುವ 'ಬ್ರಹ್ಮ' ಶಬ್ದವು, ಅಧಿಕಾರಿ ಭೇದದಿಂದ. ಚತುರ್ಮುಖ-ಬ್ರಹ್ಮನನ್ನೂ-ಪರಬ್ರಹ್ಮನನ್ನೂ ಹೇಳುತ್ತದೆ. ಬ್ರಹ್ಮ ಶಬ್ದಕ್ಕೆ ಈ ಎರಡರಲ್ಲಿ ಯಾವುದೊಂದು ಅರ್ಥವನ್ನು ಮಾತ್ರ ತಿಳಿದು, ಅಪ್ರತೀಕಾಲಂಬನರು ಮತ್ತು ಪ್ರತೀಕಾಲಂಬನರೆಂಬ ಉಭಯ ವರ್ಗದವರಿಗೂ ಆ ಬ್ರಹ್ಮನ ಪ್ರಾಪ್ತಿಯನ್ನು ಹೇಳುವುದು ದೋಷಯುಕ್ತ-ವಾಗುತ್ತದೆಂದು, 'ಓಂ ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯಥಾ ಚ ದೋಷಾತ್ತತ್ಕ್ರತುಶ್ಚ ಓಂ' ಎಂಬ ಸೂತ್ರವು ನಿರ್ಣಯಿಸಿರುತ್ತದೆ. ಮುಖ್ಯ ವಾಯುದೇವನು ಜ್ಞಾನಿಗಳನ್ನು ಯಾವ ಬ್ರಹ್ಮಲೋಕವನ್ನು (ಸತ್ಯಲೋಕವನ್ನಾಗಲಿ ಅಮುಕ್ತ ವೈಕುಂಠಾದಿಗಳನ್ನಾಗಲಿ) ಮುಟ್ಟಿಸಿದರೂ ಅಲ್ಲಿ ಪುರುಷೋತ್ತಮನ ವಿಶೇಷ ಸನ್ನಿಧಾನವಿರುತ್ತದೆ. ಜ್ಞಾನಿಗಳು ಶ್ರೀಹರಿ ದರ್ಶನದಿಂದ ಆನಂದಿಸುತ್ತಾ ಅಲ್ಲಿ ಪ್ರಳಯಕಾಲದವರೆಗೆ ವಾಸಿಸುತ್ತಾರೆ.

ಬರುವುದುಂಟು. ಹಾಲಿನ ಪ್ರಮಾಣವು (ಅಳತೆಯು) ಹೆಚ್ಚದಿದ್ದರೂ ಉಕ್ಕಿ ಬಂದಾಗ ಅತಿಶಯವು (ಅಧಿಕಪ್ರಮಾಣವು) ಕಂಡುಬರುವಂತೆ ಮತ್ತು ಮುಕ್ತರ ಸ್ವಯೋಗ್ಯ ಪೂರ್ಣಾನಂದಕ್ಕೆ ಅತಿಶಯವಿರುವಂತೆ, ಸಂಪಾದಿತ ಜ್ಞಾನದಿಂದ ಉದಯಿಸುವ ಭಕ್ತಿಭಾವಕ್ಕಿಂತ ಅತಿಶಯವಾದ ಭಕ್ತಿಯೂ ಹುಟ್ಟುವುದುಂಟು. ಇಂಥ ಕೆಲವರು ಜ್ಞಾನಪರಿಪಾಕವನ್ನು ದೊರಕಿಸಿಕೊಳ್ಳಲು ತಮ್ಮ ಮನಮೆಚ್ಚುವ ಮಾರ್ಗಸ್ಥಲೋಕಗಳಲ್ಲಿ ಯಾವುದಾದರೊಂದು ಕಡೆ ನಿಂತು ಹರಿಧ್ಯಾನಾದಿ-ಗಳಿಂದ ಪಕ್ವರಾಗಿ ಮುಂದೆ ಹೊರಡುವುದುಂಟು. ಮತ್ತೆ ಕೆಲವರು ಮಾರ್ಗಸ್ಥಲೋಕಗಳ ಸುಖವಿಶೇಷಗಳನ್ನು ಭೋಗಿಸುತ್ತ ಅಲ್ಲಲ್ಲಿ ಕೆಲವು ಕಾಲ ನಿಲ್ಲುವುದುಂಟು. ಇನ್ನು ಕೆಲವರು (ಅತ್ಯಲ್ಪಾಧಿಕಾರಿಗಳು) ಮಾರ್ಗದಲ್ಲಿ ಅಂತರಿಕ್ಷಾದಿ ಪ್ರದೇಶಗಳಲ್ಲಿ ಅಥವಾ ಮೇರುಪರ್ವತದ ಮೇಲಿರುವ ವೈಜಯಂತಾದಿ ಸಭಾದೇಶಗಳಲ್ಲಿ, ಪ್ರಳಯ ಪರ್ಯಂತ ನಿಲ್ಲುವುದೂ ಉಂಟು. ಇಂಥವರು ಮುಖ್ಯ ವಾಯುಲೋಕವನ್ನಾಗಲಿ, ಬ್ರಹ್ಮನನ್ನಾಗಲಿ (ಚತುರ್ಮುಖ ಅಥವಾ ಪರಬ್ರಹ್ಮ ಯಾರೊಬ್ಬರನ್ನಾಗಲಿ) ಹೊಂದುವುದಿಲ್ಲ. ಅವರು ತಾವು ನಿಂತಲ್ಲಿಯೇ ಶ್ರೀಹರಿ ದರ್ಶನಾದಿಗಳಿಂದ ಆನಂದಿಸುತ್ತ, ಪುನರ್ಜನ್ಮರಹಿತರಾಗಿ ಪ್ರಳಯಪರ್ಯಂತ ಇರುತ್ತಾರೆ. ಈ ನಿರ್ಣಯಗಳನ್ನೊಳಗೊಂಡ ಪ್ರಮೇಯಗಳನ್ನು, ಸತ್ತತ್ವ ರತ್ನಮಾಲಾ ಗ್ರಂಥಕಾರರು ಹೀಗೆ ಸಂಗ್ರಹಿಸಿದ್ದಾರೆ:- **'ತತ್ರಾಪಿಹ್ಯಲ್ಪಕಾ ಕೇಚಿನ್ಮಧ್ಯೇ ತಿಷ್ಠಂತಿ ಮೋದಿತಾಃ । ತತಃ ಸಾಧನ ಸಂಪತ್ತ್ಯಾ ಹ್ಯೂರ್ಧ್ವಂ ಯಾಂತ್ಯಪಿ ಕೇಚನ । ಅರ್ಚಿರಾದಿ ಪಥಾಹ್ಯೇವಂ ಗತಾಸ್ತೇ ಯೋಗ್ಯತಾ ಕ್ರಮಾತ್ । ಸಾಂತಾನಿಕೇಷು ಲೋಕೇಷು ವಸಂತಿಹ್ಯಾಲಯಂ ಶುಭಾಃ ॥'** ಈ ಪ್ರಮೇಯಗಳು, **'....ಅಂತರಿಕ್ಷೇ ಚ ಕೇಚನ । ಅಪಕ್ವಾಯೇ ನ ತೇ ಯಾಂತಿ ವಾಯುಂ ವಾ ಹರಿಮೇವವಾ । ಸ್ಥಾನಮಾತ್ರಾಶ್ರಿತಾಸ್ತೇ ತು ಪುನರ್ಜನ್ಮ ವಿವರ್ಜಿತಾಃ ॥'** ಎಂಬಲ್ಲಿ ಸ್ಪಷ್ಟಗೊಳಿಸಲ್ಪಟ್ಟಿವೆ. ಈ ಜೀವರು ನಿಲ್ಲುವ ಸ್ಥಳದಿಂದ ಪುನರ್ಜನ್ಮ ಹೊಂದುವುದಿಲ್ಲವೆಂಬ ಕಾರಣದಿಂದಲೂ, ಅವು ಪ್ರಳಯಪರ್ಯಂತವಿರುವ ಸ್ಥಾನಗಳಾದ್ದರಿಂದಲೂ ಸಾಂತಾನಿಕ ಲೋಕಗಳೆಂದು ಕರೆಯಲ್ಪಡುತ್ತವೆ. **'ಅಪುನರಾವೃತ್ತಿತ್ವೇನ ಸಂತತತ್ವಾನ್ನಾಮ್ನಾ ಸಾಂತಾನಿಕಾನ್ ವಿದುಃ'** ಎಂದು ಸಾಂತಾನಿಕ ಲೋಕಗಳೆಂಬುದರ ಅರ್ಥ ವಿವರಣೆಯಿದೆ.

ಅರ್ಚಿರಾದಿ ಲೋಕಗಳ ದ್ವಾರಾ ಪ್ರಯಾಣಮಾಡುವ ಜ್ಞಾನಿಗಳಿಗೆ, ಆಯಾ ಲೋಕಗಳ ಅಧಿಷ್ಠಾತೃದೇವತೆಗಳಿಂದ ಯಥಾಯೋಗ್ಯವಾದ ಆದರ-ಪೂಜೆಗಳು ದೊರೆಯುತ್ತವೆ. '**ತತ್ರ ತತ್ರ ಸ್ಥಿತೈರ್ದೇವೈಃ ಪ್ರಾಪ್ಯಾನುಜ್ಞಾಂ ಚ ಪೂಜಿತಃ । ಪುಂದ್ವಾರೇಣ ಸ್ವದೃಷ್ಟ್ಯಾವಾ ಗಚ್ಛತಿ ಹ್ಯುತ್ತರೋತ್ತರಂ ॥**' — ಎಂದರೆ, ಜ್ಞಾನಿಜೀವನು, ಆಯಾ ಲೋಕದ ದೇವತೆಗಳಿಂದ ಯಥಾ ಯೋಗ್ಯವಾಗಿ ಸತ್ಕರಿಸಲ್ಪಡುತ್ತಾನೆ ಮತ್ತು ಸ್ವಯಂ ಬಂದು ಅಥವಾ ದೂತ ಮುಖದಿಂದ, ಆ ದೇವತೆಗಳಿಂದ ಮುಂದಕ್ಕೆ ಬೀಳ್ಕೊಡಲ್ಪಟ್ಟು ಮುಂದೆ ಪ್ರಯಾಣಮಾಡುತ್ತಾನೆ. ಈ ಜ್ಞಾನಿಗಳನ್ನು ಈ ಲೋಕಗಳ ದೇವತೆಗಳು (ಅರ್ಚಿರಾದಿಗಳು) ಆದರಿಸಿ ಪೂಜಿಸುವುದೇನೂ ಆಶ್ಚರ್ಯವಲ್ಲ. ಸುಷುಮ್ನಾದಿ ನಾಡಿಗಳಿಂದ ಹೊರಡುವ ಜ್ಞಾನಿಗಳೊಂದಿಗೆ, ಶ್ರೀಹರಿಯೂ, ಮುಖ್ಯ-ಪ್ರಾಣನೂ, ಇತರ ಪರಿವಾರ ದೇವತೆಗಳೂ ಅಂಶದಿಂದಿರುತ್ತಾರೆ. ಈ ವಿಷಯದಲ್ಲಿ ಬೃಹದಾರಣ್ಯ ಶ್ರುತಿಯು ಹೀಗೆ ಹೇಳುತ್ತದೆ :— 'ತದ್ಯಥಾ ರಾಜಾನಮಾಯಾಂತಮುಗ್ರಾಃ ಪ್ರತ್ಯೇನಸಃ ಸೂತ ಗ್ರಾಮಣ್ಯೋಽನ್ನೈಃ ಪಾನೈರಾವಸಥೈಃ ಪ್ರತಿಕಲ್ಪಂತೇ ಅಯಮಾಯಾತ್ಯ ಯಮಾಗಚ್ಛತೀತ್ಯೇವಂ ಹೈವಂ ವಿದಂ ಸರ್ವಾಣಿಭೂತಾನಿ ಪ್ರತಿಕಲ್ಪಂತ ಇದಂ ಬ್ರಹ್ಮಾಯಾತೀದ-ಮಾಗಚ್ಛತೀತಿ' **ಇದರ ಅರ್ಥ** :- ತದ್ಯಥಾ-ಅದು ಹೇಗೆಂದರೆ, ಆಯಾತಂ-ಬರುತ್ತಿರುವ, ರಾಜಾನಂ-ರಾಜನನ್ನು, ದೃಷ್ಟ್ವಾ- ತಿಳಿದು, ಉಗ್ರಾಃ-ಅಂಗರಕ್ಷಕರೂ, ಪ್ರತ್ಯೇನಸಃ-ಯೋಧರೂ, ಸೂತಗ್ರಾಮಣ್ಯಃ- ಸಾರಥಿ ಮತ್ತು ಪ್ರಜಾಮುಖಂಡರು (ಆಯಾ ಪ್ರದೇಶದವರು), ಅನ್ನೈಃ ಪಾನೈಃ ಆವಸಥೈಃ-ಅನ್ನಪಾನ ವಾಸಸ್ಥಳಾದಿಗಳಿಂದ, ಪ್ರತಿಕಲ್ಪಂತೇ-ವ್ಯವಸ್ಥೆಗೊಳಿಸಿ (ರಾಜನನ್ನು) ಸತ್ಕರಿಸುವಂತೆ, ಅಯಂ-ಧ್ವಜವು, ಆಯಾತಿ-ಬರುತ್ತದೆ ; (ಆದ್ದರಿಂದ) ಅಯಂ-ರಾಜನು, ಆಗಚ್ಛತಿ-ಬಂದೇ ಬರುವನು, ಏವಂ-ಹೀಗೆ, ಏವಂ ವಿದಂ-ಬರುತ್ತಿರುವ ಅಪರೋಕ್ಷಜ್ಞಾನಿಯನ್ನು ತಿಳಿದು, ಅವನೊಡನೆ ರಾಜನಾದ ಪರಮಾತ್ಮನೂ ಇರುವನೆಂದರಿತು, ಸರ್ವಾಣಿಭೂತಾನಿ-ಅರ್ಚಿರಾದಿ ದೇವತೆಗಳು, ಹಾಗೂ ಅವರ ಪ್ರಜೆಗಳೂ, ಪ್ರತಿಕಲ್ಪಂತೇ-ಸತ್ಕರಿಸುತ್ತಾರೆ. ಪ್ರಸಕ್ತ ಉಪನಿಷದ್ವಾಕ್ಯಾರ್ಥವನ್ನು ವಿವರಿಸುವ ಭಾಷ್ಯಭಾಗವು, ಈ ಲೋಕಗಳಲ್ಲಿ

ಜ್ಞಾನಿಗಳಿಗೆ ದೊರೆಯುವ ಆದರ ಸತ್ಕಾರಗಳ ಕಾರಣವನ್ನು ಸ್ಪಷ್ಟಗೊಳಿಸುತ್ತದೆ. **'ತದಾ ವಿಷ್ಣೋಃ ಸ್ವತೇಜಸಾ । ದ್ಯೋತತೇ ಹೃದಯಾಗ್ರಂ ಚ ತೇನ ದ್ವಾರೇಣ ಕೇಶವಃ ।। ನಿಷ್ಕ್ರಮೇಜ್ಜೀವಮಾದಾಯ ಪ್ರಾಣ ಏನಮನುವ್ರಜೇತ್ । ಪ್ರಾಣಮನ್ಯೇ ತಥಾ ದೇವಾ ವಿದ್ಯಾಕರ್ಮಚ ಯೋಗ್ಯತಾ । ಕರ್ಮಾಭಿಮಾನೀ ಗರುಡೋ ಬ್ರಹ್ಮ ಜ್ಞಾನಾಭಿಮಾನವಾನ್ ।। ಪೂರ್ವಪ್ರಜ್ಞಾಯೋಗ್ಯತಾ ಸ್ಯಾದ್ರಮಾತದಭಿಮಾನಿನೀ । ಏತೇಽಪಿ ವಿಷ್ಣುಂ ಗಚ್ಛಂತಂ ಅನುಯಾಂತಿ ಸದೈವ ತು ।। ದೇವಲೋಕೇ ಚಿರಂ ರತ್ವಾ ಯಸ್ತು ಮುಕ್ತಿಂ ವ್ರಜಿಷ್ಯತಿ । ಸ ತು ತದ್ದೇವತಾದ್ವಾರೇಣೋತ್ಕ್ರಾಮತಿ ನ ಸಂಶಯಃ ।।' 'ಇದಂ ಮುಕ್ತ-ಜೀವಸ್ವರೂಪಮಾಯಾತಿ । ಅತೋಽನೇನ ಸಹೇದಂ ಪರಂಬ್ರಹ್ಮಾಽಯಾತೀತಿ ಪರಬ್ರಹ್ಮಣಃ ಪೂಜಾರ್ಥಂ ಪ್ರತಿಕಲ್ಪಂತೇ । ಯಥಾರಾಜ್ಞೋ ಧ್ವಜಾದಿಕಂ ದೃಷ್ಟ್ವಾ ಯಂ ಧ್ವಜ ಆಗಚ್ಛತಿ ತಸ್ಮಾದ್ರಾಜಾಽಯಾತೀತಿ ಪೂಜಾಂ ಪ್ರತಿಕಲ್ಪತೇ ತದ್ವತ್ । ಯದಾ ಮುಕ್ತೋ ವ್ರಜತ್ಯೂರ್ಧ್ವಂ ತದಾ ತತ್ಸಹಿತೋ ಹರಿಃ । ನಿಯಮಾತ್ ದೃಶ್ಯತೇ ದೇವೈರಮುಕ್ತೇ ನಿಯಮೋ ನ ತು ।।'** ಈ ವಾಕ್ಯಗಳ **ಭಾವಾರ್ಥ-ವೇನೆಂದರೆ:—** 'ಆಗ ವಿಷ್ಣು ತೇಜಸ್ಸಿನಿಂದ ಹೃದಯಕಮಲದ ಅಗ್ರಭಾಗವು ಪ್ರಕಾಶಿತವಾಗುತ್ತದೆ. **ಆ ಪ್ರಕಾಶಿತ ಮಾರ್ಗದಿಂದ ಕೇಶವನು ಜೀವನೊಂದಿಗೆ ಹೊರಡುತ್ತಾನೆ.** ಆತನನ್ನು ಮುಖ್ಯಪ್ರಾಣನೂ ಇತರ ದೇವತೆಗಳೂ ಅನುಸರಿಸಿ ಹೊರಡುತ್ತಾರೆ. ವಿದ್ಯಾಕರ್ಮಯೋಗ್ಯತಾಭಿಮಾನಿ ದೇವತೆಗಳೂ ಹೊರಡುವರು. **ಬ್ರಹ್ಮನು ವಿದ್ಯಾಭಿಮಾನಿಯು; ಗರುಡನು ಕರ್ಮಾಭಿಮಾನಿಯು;** ಪೂರ್ವಪ್ರಜ್ಞೆ-ಯೆಂದರೆ ಅನಾದಿ ಸಿದ್ಧಜ್ಞಾನ - ಅದೇ ಯೋಗ್ಯತೆಯೆಂಬುದು - ಅದಕ್ಕೆ ಅಭಿಮಾನಿಯು (ಆದರ ನಿಯಾಮಕಳು) ರಮಾದೇವಿಯು. ಯಾರು ಸೂರ್ಯಾದಿ ಯಾವ ದೇವತಾಲೋಕದಲ್ಲಿ ಚಿರಕಾಲ ಕ್ರೀಡಿಸಿ ಸ್ವಸ್ಥಾನವನ್ನು ಸೇರಿ ಮುಕ್ತನಾಗುವವರೋ, ಅವರು ಸೂರ್ಯಾದಿ ಆಯಾ ದೇವತೆಗಳಿಂದ ಅಭಿಮನ್ಯವಾದ ಚಕ್ಷುರಾದಿ ದ್ವಾರಗಳಿಂದ ದೇಹವನ್ನು ತ್ಯಜಿಸುತ್ತಾರೆ. ಮುಕ್ತಜೀವನು ಬರುತ್ತಾನೆ - ಆ ಜೀವ ಸ್ವರೂಪದೊಂದಿಗೆ ಪರಬ್ರಹ್ಮನೂ ಬರುತ್ತಾನೆ, ಹೀಗೆಂದು ಅರ್ಚಿರಾದಿ ದೇವತೆಗಳು ತಿಳಿದು, ಪೂಜಾದಿ ಸತ್ಕಾರಗಳನ್ನು ಸಿದ್ಧಪಡಿಸಿಕೊಂಡು ನಿರೀಕ್ಷಿಸುತ್ತಿರುತ್ತಾರೆ - ರಾಜ ಚಿನ್ಹೆಯಾದ

ಧ್ವಜವನ್ನು ಕಂಡು ರಾಜಾಗಮನವನ್ನು ತಿಳಿದು, ಆತನ ಪೂಜೆಗೆ ಸಿದ್ಧರಾಗುವ ಪ್ರಜೆಗಳಂತೆ. ಊರ್ಧ್ವಲೋಕಗಳಿಗೆ ಹೋಗುವ ಜೀವನ್ಮುಕ್ತರೊಂದಿಗೆ ತಪ್ಪದೇ ಬರುವ ಶ್ರೀಹರಿಯನ್ನು, ಮಾರ್ಗಸ್ಥಲೋಕಗಳ ದೇವತೆಗಳು ಕಾಣುತ್ತಾರೆ. ಅಮುಕ್ತ ಜೀವರೊಂದಿಗೆ ಸಹ ಶ್ರೀಹರಿಯು ಇದ್ದೇ ಇರುವನು ; ಆದರೆ ಆತನನ್ನು ದೇವತೆಗಳು ಸದಾ ಕಾಣುತ್ತಾರೆಂಬ ನಿಯಮವಿಲ್ಲ.

ಹೀಗೆ ಜ್ಞಾನಿಜೀವರು ಪ್ರಾರಬ್ಧಭೋಗಾನಂತರ ಚರಮದೇಹವನ್ನು ತೊರೆದು ಹೊರಟು ಅರ್ಚಿರಾದಿ ಲೋಕಗಳ ದ್ವಾರಾ, ತಾವು ಪ್ರಳಯ ಪರ್ಯಂತ ವಾಸಿಸಬೇಕಾದ ವೈಕುಂಠ-ಸತ್ಯಲೋಕಾದಿ ಸ್ಥಾನವಿಶೇಷಗಳನ್ನು ಸೇರುತ್ತಾರೆ. **ತೇಜೋರೂಪರಾಗಿ ವಿರಾಜಿಸುತ್ತ**, ಅಲ್ಲಿ ಹರಿಧ್ಯಾನಾದಿಗಳಲ್ಲಿ ಆಸಕ್ತರಾಗಿದ್ದು, ಪ್ರಳಯಕಾಲ ಪ್ರಾಪ್ತವಾಗಲು, ಪುನಃ ಚತುರ್ಮುಖನನ್ನು ಸೇರಿ ಆತನೊಂದಿಗೆ ವಿರಜಾಸ್ನಾನದಿಂದ ಲಿಂಗದೇಹವನ್ನು ತ್ಯಜಿಸಿ, ಆನಂದ ಮಾತ್ರವಪುಷರಾಗಿ (ಚಿದಾನಂದದೇಹಿಗಳಾಗಿ) ಲಕ್ಷ್ಮೀದ್ವಾರಾ ಪರಮಾತ್ಮನನ್ನು (ಚತುರ್ಮುಖನೊಂದಿಗೆ) ಪ್ರವೇಶಿಸಿ ಧ್ಯಾನಾಸಕ್ತರಾಗಿ ಆನಂದಿಸುತ್ತಾರೆ.

## ಪರಿಚ್ಛೇದ ೪

## ಭೋಗ

ಬ್ರಹ್ಮದರ್ಶನದ ಮುಖ್ಯಫಲವಾದ ನಿತ್ಯಾನಂದಭೋಗವು ಸರ್ವಮುಕ್ತ ಸಾಮಾನ್ಯವಾದರೂ ಭೋಗಪ್ರಕಾರದಲ್ಲಿ ಬಹು ವೈವಿಧ್ಯವಿದೆ. ಆನಂದ ಭೋಗಕ್ಕೆ ಅವ್ಯವಹಿತ ಪೂರ್ವಕಾರಣವಾದುದು ಜೀವಸ್ವರೂಪದ ಆವಿರ್ಭಾವವು. ಈ ಆವಿರ್ಭಾವವಾಗಲು, ಸ್ವರೂಪವನ್ನು ಅನಾದಿಯಿಂದ ಆಚ್ಛಾದಿಸಿರುವ ಲಿಂಗದೇಹವು ನಷ್ಟವಾಗಬೇಕು. ಲಿಂಗದೇಹಭಂಗವೂ ಬ್ರಹ್ಮದರ್ಶನದ ಫಲವೇ. ಆದರೂ ಇದನ್ನು ಪ್ರತ್ಯೇಕ ಫಲವೆಂದು ಪರಿಗಣಿಸದೆ, ಭೋಗರೂಪಫಲದಲ್ಲಿ ಅಂತರ್ಭಾವಗೊಳಿಸಲು ಬರುತ್ತದೆ.

ಸೂಕ್ಷ್ಮ ಪ್ರಕೃತ್ಯಂಶ ನಿರ್ಮಿತ ಷೋಡಶ ಕಲಾತ್ಮಕವಾದುದು ಲಿಂಗ ದೇಹ.[20] ಇದು ಜೀವಸ್ವರೂಪವನ್ನು ಅನಾದಿಕಾಲದಿಂದ ಆಚ್ಛಾದಿಸಿದೆ-ಜೀವಸ್ವರೂಪಕ್ಕೆ ತೊಡಿಸಿದ ಬಿಗಿಯಾದ ಕವಚದಂತಿದೆ. ನಾಗರಹಾವಿನ ಪೊರೆಯು, ಹಾವಿನ ತೀವ್ರಗತಿ ಮತ್ತು ತೀಕ್ಷ್ಣತೆಗಳನ್ನು ಕುಂದಿಸುವಂತೆ, ಜೀವಸ್ವರೂಪದ ಜ್ಞಾನಾನಂದಾದಿ ಗುಣಗಳ ಪ್ರಭಾವವನ್ನು ಉಡುಗಿಸಿರುತ್ತದೆ, ಈ ಲಿಂಗದೇಹ. ಇದರಿಂದ ಮುಕ್ತನಾದ ಜೀವನು ಪೊರೆಬಿಟ್ಟ ಹಾವಿನಂತೆ ತನ್ನ ಸ್ವಭಾವ ಗುಣಗಳ ಪೂರ್ಣವಿಕಾಸವನ್ನು ಹೊಂದುತ್ತಾನೆ. ಲಿಂಗದೇಹದ ಭಂಗವು ಸರ್ವಜ್ಞಾನಿಗಳಿಗೂ, ಚತುರ್ಮುಖ ಬ್ರಹ್ಮದೇವನೊಂದಿಗೆ ದೊರೆಯುತ್ತದೆ. ಪ್ರಳಯಕಾಲ ಬರಲು, ಸಕಲ ಜ್ಞಾನಿಗಳೂ (ಅಪ್ರತೀಕಾಲಂಬನರು, ಪ್ರತೀಕಾಲಂಬನರು ಮತ್ತಿತರರೆಲ್ಲರು) ಅಮುಕ್ತ ವೈಕುಂಠ, ಸತ್ಯಲೋಕಾದಿ ಸ್ಥಾನಗಳಿಂದ ಚತುರ್ಮುಖನಲ್ಲಿಗೆ ಬಂದು ಸೇರುತ್ತಾರೆ. ಸರ್ವರೂ ಬ್ರಹ್ಮದೇವನಿಂದ ಪುಷ್ಕಲ ಬಿಂಬೋಪದೇಶವನ್ನು ಹೊಂದಿ, ಸ್ಫುಟತರ ಸ್ವಪೂರ್ಣ ಬಿಂಬಾಪರೋಕ್ಷವನ್ನು ಹೊಂದುತ್ತಾರೆ. ನಂತರ ಬ್ರಹ್ಮನೊಂದಿಗೆ ವಿರಜಾನದಿಯಲ್ಲಿ ಸ್ನಾನಮಾಡುತ್ತಾರೆ. ಅಲ್ಲಿ ಎಲ್ಲರ ಲಿಂಗದೇಹಗಳೂ ಕಳಚಿ ಬಿದ್ದುಹೋಗುತ್ತವೆ. ಅದರೊಂದಿಗೆ (ಲಿಂಗದೇಹದೊಂದಿಗೆ) ಅವಶಿಷ್ಟ ಪ್ರಾರಬ್ಧಕರ್ಮವೂ ನಿಶ್ಶೇಷವಾಗಿ ನಾಶಹೊಂದುತ್ತದೆ - ಪ್ರಾರಬ್ಧಕರ್ಮದ ಗಂಧ ಸಹ ಇಲ್ಲದ ಸ್ವಚ್ಛಸ್ವರೂಪ ಮಾತ್ರ ನಿಲ್ಲುತ್ತದೆ.

ವಿರಜಾನದಿಯು ಶ್ರೀ ಮಹಾಲಕ್ಷ್ಮಿಯ ರೂಪಾಂತರವೇ ಆದುದು. ಆದ್ದರಿಂದ ಅಪ್ರಾಕೃತವಾದುದು. ಪ್ರಳಯಕ್ಕೆ ಮೊದಲು ವಿರಜಾನದಿಯು ಬ್ರಹ್ಮಾಂಡದೊಳಗೆ ಸತ್ಯಲೋಕದಮೇಲಿರುವ ವೈಕುಂಠದ ಸುತ್ತಲೂ ಪ್ರವಹಿಸುತ್ತಿರುವುದು. ವೈಕುಂಠಲೋಕವು ಶ್ರೀ-ಭೂ-ದುರ್ಗಾನಾಮಕ ಮೂರು ಭಾಗಗಳುಳ್ಳದ್ದು.[21] — ಅವು, ಆಯಾ ನಾಮಕ ಲಕ್ಷ್ಮೀರೂಪಗಳಿಂದ

20. ರತ್ನ 3 ಪುಟ 292ನ್ನು ಲಿಂಗದೇಹ ಸಂಬಂಧವಾದ ವಿವರಗಳನ್ನು ನೋಡಿ-ಕೊಳ್ಳಬಹುದು.

21. 'ಅನಂತಾಸನ ವೈಕುಂಠನಾರಾಯಣಪುರೇಷು ಯೇ ।
ಶ್ರೀ ಭಾಗಾಃ ಶುದ್ಧ ಸತ್ತ್ವಸ್ಥಾ.... । ಸತ್ತ್ವಾಧಿಕಸ್ತು

ನಿಯವ್ಯವಾದವುಗಳು. ಇವುಗಳಲ್ಲಿ ಶ್ರೀಭಾಗವು ಅಪ್ರಾಕೃತವು - ಸೃಷ್ಟ್ಯುಪಯುಕ್ತ ಪ್ರಾಕೃತಗುಣ ನಿರ್ಮಿತವಲ್ಲ; ಉಳಿದೆರಡೂ ತ್ರಿಗುಣಾತ್ಮಕವು. ಶ್ರೀ ಭಾಗದಲ್ಲಿಯೂ ವೈಕುಂಠನಾಮಕ ಶ್ರೀವಿಷ್ಣುವು ಶ್ರೀದೇವಿಯೊಂದಿಗೆ ವಿಹರಿಸುವ ಸಾರ್ವಭೌಮ ನಗರವು (ವೈಕುಂಠಪುರಿ) ಲಕ್ಷ್ಯಾತ್ಮಕವಾದುದು-ಲಕ್ಷ್ಮೀದೇವಿಯೇ ಆ ರೂಪದಿಂದಿರುವಳು.[22] ಶ್ರೀವಿಷ್ಣುಭೋಗದ ಸಕಲ ವಸ್ತುಸ್ವರೂಪಳಾಗಿ ಶ್ರೀದೇವಿಯೇ ಇದ್ದು, ತನ್ನ ಪತಿಯನ್ನು ಸೇವಿಸುತ್ತಾಳೆ. ಈ ನಗರಿಯನ್ನು ಆಕೆಯೇ ವಿರಜಾನದೀರೂಪದಿಂದ ಸುತ್ತುವರಿದು ಪ್ರವಹಿಸುತ್ತಾಳೆ. ಉಳಿದ ಶ್ರೀಭಾಗವು ಶುದ್ಧ ಸತ್ತ್ವಾತ್ಮಕವಾದುದು. ಪ್ರಕೃತಿ-ತತ್ವವು ಅನಂತವಾದುದು-ಪರಿಮಿತಿರಹಿತವಾದುದು. ಅದರಲ್ಲಿ ಒಂದು ಭಾಗವನ್ನು ಮಾತ್ರ ಶ್ರೀಹರಿಯು ಜಗತ್ತಿನ ಸೃಷ್ಟಿಗೆ ಉಪಾದಾನ ಕಾರಣವನ್ನಾಗಿ ಉಪಯೋಗಿಸುತ್ತಾನೆ. ಈ ಪ್ರಕೃತಿಯು ತ್ರಿಗುಣಾತ್ಮಕವಾದುದು (ಸತ್ವ-ರಜ-

---

ಭೂ ಭಾಗೋ ದುರ್ಗಾಭಾಗಸ್ತಮೋಧಿಕಃ । ವೈಕುಂಠಾದಿ
ತ್ರಿಕೇ ಯೋಽಸ್ತಿ ಸರ್ಗೇ ಸರ್ಗೇಥ ಜಾಯತೇ ।
ಅಮುಕ್ತಾಸ್ತತ್ರ ನಂದಂತಿ ಸ ನಶ್ಯತಿ ಲಯೇ ಲಯೇ ॥
ಶ್ರೀಭಾಗಃ ಶುದ್ಧ ಸತ್ತ್ವಾತ್ಮಾ ಮುಕ್ತೈರೇವ ನಿಷೇವಿತಃ ।
ಯಥಾ ಯಥೈವ ಮುಕ್ತೇಚ್ಛಾ ಫಲಪುಷ್ಪಾದಿಕಂ ತಥಾ ॥
ಸತ್ತ್ವತೋ ಜಾಯತೇ ಶೀಘ್ರಮಿಚ್ಛಾಂತೇ ತತ್ರಲೀಯತೇ ।
ತರಂಗಾ ಇವ ತೋಯೇಷು ತದಾತ್ಮಾನೋಽಪಿ ತಲ್ಲಯಾಃ ॥

ಎಂಬೀ ಮೊದಲಾದ (ವಿಷ್ಣುರಹಸ್ಯ) ಶ್ಲೋಕಗಳಲ್ಲಿ, ವೈಕುಂಠಲೋಕ ವಿಭಾಗಗಳು ಮತ್ತು ಅಲ್ಲಿರುವ ವೈಭವಗಳು ಪ್ರತಿಪಾದಿಸಲ್ಪಟ್ಟಿವೆ. ಈ ಮುಂದೆ ಪ್ರಸಕ್ತವಾಗುವ ಮುಕ್ತರ ಭೋಗಪ್ರಕಾರ ನಿರೂಪಣೆಯಲ್ಲಿ ಈ ಶ್ಲೋಕಗಳ ತಾತ್ಪರ್ಯವನ್ನು ಕಾಣುತ್ತೀರಿ.

22. ಶ್ರೀ ಭೂ ದುರ್ಗಾಭಾಗಗಳುಳ್ಳ ವಿಶಾಲ ವೈಕುಂಠಲೋಕವೂ ಲಕ್ಷ್ಮ್ಯಾತ್ಮಕ ವೈಕುಂಠನಗರಿಯೂ, ಮುಕ್ತ ಬ್ರಹ್ಮಾದಿಗಳು ವಾಸಿಸುವ ಶುದ್ಧ ಸತ್ತ್ವಾತ್ಮಕ ಶ್ರೀಭಾಗ ವೈಕುಂಠವೂ, 'ವೈಕುಂಠ'ವೆಂಬ ನಾಮದಿಂದಲೇ ವ್ಯವಹರಿಸಲ್ಪಡುವುದನ್ನು ವೇದಾದಿ ಆಗಮಗಳಲ್ಲಿ ಕಾಣುತ್ತೇವೆ. ವೈಕುಂಠ ಶಬ್ದಕ್ಕೆ ಸಂದರ್ಭೋಚಿತವಾದ ಅರ್ಥವನ್ನು ತಿಳಿಯಬೇಕು. 'ವಿಮಲಾಕೃತಿಃ ಪ್ರಕೃತಿರೇವ ಮಹಾಮಣಿ ಹೇಮಮಯ್ಯಖಿಲ-ವಸ್ತುಮಯೀ ।' ಎಂದು ಸುಮಧ್ವವಿಜಯದಲ್ಲಿ ವರ್ಣಿತವಾದುದು ಶ್ರೀಹರಿಯ ವಿಶಾಲ ಅರಮನೆಗಳನ್ನೊಳಗೊಂಡ ಲಕ್ಷ್ಮೀಸ್ವರೂಪದ ವೈಕುಂಠನಗರಿಯು.

ತಮಗಳೆಂಬ ತ್ರಿಗುಣಸ್ವರೂಪವಾದುದು). ಸೃಷ್ಟಿಯಲ್ಲಿ ಉಪಯೋಗಿಸಲ್ಪಡದ ಪ್ರಕೃತಿಯಲ್ಲಿರುವ ಸತ್ವಗುಣವು 'ಶುದ್ಧಸತ್ವ'ವೆಂದು ಕರೆಯಲ್ಪಡುತ್ತದೆ. ವೈಕುಂಠಪುರಿಯನ್ನುಳಿದ ಶ್ರೀಭಾಗ ವೈಕುಂಠವು ಶುದ್ಧ ಸತ್ವಗುಣನಿರ್ಮಿತ ಗೃಹಾರಾಮಾದಿ ವಸ್ತುಗಳಿಂದ ಪೂರ್ಣವಾದುದು. ಆದ್ದರಿಂದ ಅದು ವಿಕಾರ ರಹಿತವಾದುದು-ನಿತ್ಯವಾದುದು-ದುಃಖಾದಿಗಳ ಸ್ಪರ್ಶ ರಹಿತವಾದುದು. ಅಲ್ಲಿ ಕ್ರೀಡಿಸುವ ಮುಕ್ತಬ್ರಹ್ಮಾದಿ ದೇವತೆಗಳು ನಾನಾ ಭೋಗಗಳನ್ನು ಅನುಭವಿಸುತ್ತ ಆನಂದಿಸುತ್ತಾರೆ. ಪ್ರಾಕೃತ ವೈಕುಂಠ ಭಾಗಗಳು (ಭೂದುರ್ಗಾ ಭಾಗಗಳು), ಗೃಹ-ಆರಾಮಾದಿಗಳ ರಚನಾದೃಷ್ಟಿಯಿಂದ ಶ್ರೀಭಾಗವನ್ನು ಕೆಲಮಟ್ಟಿಗೆ ಹೋಲುತ್ತವೆ. ಅಲ್ಲಿ ಮುಕ್ತರೂ ಇರುತ್ತಾರೆ. ಆದರೆ ಅವರು ತಾರತಮ್ಯದಲ್ಲಿ ಶ್ರೀಭಾಗದಲ್ಲಿರುವ ಮುಕ್ತರಗಿಂತ ಅಧಮರು (ಕೆಳಗಿನವರು). ಅಲ್ಲದೇ ಅಮುಕ್ತದೇವಾದಿ ಉತ್ತಮಾಧಿಕಾರಿಗಳು, ಸಾಧನಪೂರ್ತಿಯಾದ ನಂತರ ಮುಖ್ಯವಾಯುದೇವನಿಂದ ಇಲ್ಲಿಗೆ ಕರೆತರಲ್ಪಡುತ್ತಾರೆ. ಇವರು ಮುಕ್ತಸದೃಶ ಭೋಗಗಳನ್ನು ಹೊಂದುತ್ತಾ, ಪ್ರಳಯಕಾಲವನ್ನು ನಿರೀಕ್ಷಿಸುತ್ತ ವಾಸಿಸುತ್ತಾರೆ.

ವೈಕುಂಠನಗರಿಗೂ ಅದರ ಸುತ್ತಲಿರುವ ಶುದ್ಧ ಸತ್ವಾತ್ಮಕ ಶ್ರೀಭಾಗ ವೈಕುಂಠಕ್ಕೂ ಮಧ್ಯೆ, ವೈಕುಂಠದ (ನಗರಿಯ) ಸುತ್ತಲೂ ವಿರಜಾನದಿಯು ಪ್ರವಹಿಸುತ್ತಿರುವುದಷ್ಟೆ. ವಿರಜಾನದೀ ಸಹಿತವಾದ ನಿತ್ಯವೈಕುಂಠಲೋಕವು, ಮಹಾಪ್ರಳಯಕಾಲದಲ್ಲಿ, ಎಂದರೆ — ಆವರಣಗಳಿಂದ ಸಹಿತವಾದ ಬ್ರಹ್ಮಾಂಡವು ಲಯಹೊಂದಿ, ತ್ರಿಗುಣಗಳೂ ಲಯಹೊಂದುತ್ತಿರಲು (ಗುಣ ವೈಷಮ್ಯವೇ ಸೃಷ್ಟಿ-ಗುಣಸಾಮ್ಯವೇ ಲಯ) ಬ್ರಹ್ಮಾಂಡದ ಹೊರಗೆ (ಬಹಿಃ) ಸೂಕ್ಷ್ಮ ಸೃಷ್ಟಿಯಲ್ಲಿ ಸೃಷ್ಟರಾದ ತತ್ವಾಭಿಮಾನಿ ದೇವತೆಗಳು ಉತ್ತರೋತ್ತರ ಸ್ವಬಿಂಬದೇವತೆಗಳಲ್ಲಿ ಪ್ರವೇಶಿಸುತ್ತಿರುವಾಗ-ಬ್ರಹ್ಮಾಂಡದ ಆವರಣಗಳಲ್ಲಿ ಕಡೆಯದಾದ ಸತ್ವಗುಣದ ಆವರಣಕ್ಕೂ, ಅದರ ಹೊರಗಿರುವ ನಿತ್ಯವೂ ಅನಂತವೂ ಆದ ಅವ್ಯಾಕೃತಾಕಾಶಕ್ಕೂ ಮಧ್ಯೆ ಬರುತ್ತದೆ. ಆಗ, ಗರುಡ ಶೇಷ ಮಾರ್ಗಗಳಿಂದ ಬಂದು ಚತುರ್ಮುಖನನ್ನು ಪ್ರವೇಶಿಸಿದ ಸರ್ವರೂ ಹೊರಗೆ ಬಂದು ವಿರಜಾನದಿಯಲ್ಲಿ ಸ್ನಾನಮಾಡುತ್ತಾರೆ. ಆದರಿಂದ ಲಿಂಗ ದೇಹವು

ನಷ್ಟವಾಗುತ್ತದೆ - ಪ್ರಾರಬ್ಧಕರ್ಮವೂ ನಿಶ್ಶೇಷವಾಗುತ್ತದೆ.[23] '**ಪ್ರಾರಬ್ಧ ಕರ್ಮಶೇಷಶ್ಚ ವಿರಜಾತರಣಾವಧಿಃ**' — ವಿರಜಾನದಿಯಲ್ಲಿ ಸ್ನಾನ ಮಾಡಿ ಅದನ್ನು ದಾಟಿ ಹೋಗುವವರೆಗೆ ಮಾತ್ರ ಪ್ರಾರಬ್ಧಕರ್ಮಶೇಷದ ಸ್ಪರ್ಶಾವಕಾಶವೆಂಬ ಪ್ರಸಿದ್ಧ ಪ್ರಮಾಣವೂ ಇದನ್ನೇ ಹೇಳುತ್ತದೆ. ಶ್ರೀ ಹರಿಯು ವೈಕುಂಠಾದಿ ನಿತ್ಯಮುಕ್ತ ಲೋಕಗಳನ್ನು ತನ್ನ ಉದರದಲ್ಲಿಟ್ಟುಕೊಳ್ಳಲು, ಬ್ರಹ್ಮಾದಿ ಮುಕ್ತಜೀವರೆಲ್ಲರೂ ಸ್ವಸ್ವರೂಪ ದೇಹದಿಂದ, ಶ್ರೀ ಹರಿಯ ಉದರವನ್ನು ಪ್ರವೇಶಿಸಿ ಧ್ಯಾನಂಗತರಾಗುತ್ತಾರೆ. ಪುನಃ ಸೃಷ್ಟಿ ಕಾಲ ಬರುವ-ವರೆಗೆ ಸ್ವರೂಪಾನಂದಭೋಗವುಳ್ಳವರಾಗುತ್ತಾರೆ. ಬ್ರಹ್ಮಾಂಡವು ಸೃಷ್ಟ-ವಾಗಲು, ವೈಕುಂಠಾದಿ ಮುಕ್ತಲೋಕಗಳು, ಬ್ರಹ್ಮಾಂಡದಲ್ಲಿ ಸ್ವಸ್ಥಾನಗಳಲ್ಲಿ ವ್ಯಕ್ತಗೊಳಿಸಲ್ಪಡುತ್ತವೆ.[24] ಬ್ರಹ್ಮನೂ, (ಆ ಕಲ್ಪದ) ಬ್ರಹ್ಮನೊಂದಿಗೆ ಮುಕ್ತರಾದ

23. ಅಂತಿಮಾವರಣ ವ್ಯೋಮ್ನೋರಂತರಾ ವಿರಜಾನದೀ ।
ತದಾ ಚತುರ್ಮುಖೇ ಪ್ರವಿಷ್ಟಾಃ ಸರ್ವೇ ಬಹಿರ್ನಿರ್ಗತ್ಯ
ವಿರಜಾಯಾಂ ಸ್ನಾಸ್ಯಂತಿ । ತೇನ ನಿಶ್ಶೇಷಾರಬ್ಧ
ನಿವೃತ್ತಿರ್ಲಿಂಗದೇಹಾದೇಃ ಸರ್ವಸ್ಯ ವಿನಾಶಶ್ಚ ।
ಇತ್ಯಾದಿ (ಸ.ರ.ಮಾ.) ವಾಕ್ಯಗಳು ಮೇಲೆ ಹೇಳಿದ ಪ್ರಮೇಯಗಳನ್ನು ಸಮರ್ಥಿಸುತ್ತವೆ.

24. ಬ್ರಹ್ಮಾಂಡ ಮತ್ತು ಅದರ ಆವರಣಗಳ ವಿಸ್ತಾರ, ವೈಕುಂಠಲೋಕ— ಅದರ ಸ್ಥಿತಿ ಮತ್ತು ವಿಸ್ತಾರ ಇತ್ಯಾದಿ ವಿವರಗಳನ್ನು ಸುದೀರ್ಘ ಶಾಸ್ತ್ರಾಭ್ಯಾಸದಿಂದಲೇ ತಿಳಿಯಬೇಕು. ಮಾನವ ಕಲ್ಪನೆಯನ್ನು ಮೀರಿದ ಈ ಅಂಶಗಳನ್ನು ಸಂಗ್ರಹದಿಂದ ಹೀಗೆ ಸೂಚಿಸಬಹುದು :— ಅಪಾರವಾದ ಅವ್ಯಾಕೃತ ಮಹಾಕಾಶದ ಏಕದೇಶದಲ್ಲಿ ಬ್ರಹ್ಮಾಂಡವಿದೆ. ಬ್ರಹ್ಮಾಂಡವು 50,00,00,000 (ಐವತ್ತು ಕೋಟಿ) ಯೋಜನ ವಿಸ್ತಾರವುಳ್ಳದ್ದು; (ಒಂದು ಯೋಜನವೆಂದರೆ ಸುಮಾರು 10 ಮೈಲಿ) ಇದರ ಖರ್ಪರ, ಅದರ ಮೇಲಿನ ಪೃಥ್ವೀ ಆವರಣ ಸಹ 100 ಕೋಟಿ ಯೋಜನ ; ಅದರ ಮೇಲೆ ಜಲಾವರಣ-ಅದರ ಮೇಲೆ ಕ್ರಮವಾಗಿ ತೇಜಸ್ಸು, ವಾಯು, ಆಕಾಶಗಳ ಆವರಣಗಳು ಒಂದಕ್ಕಿಂತ ಒಂದು 10 ಮಡಿ ಹೆಚ್ಚು ವಿಸ್ತಾರವುಳ್ಳದ್ದು; ಆಕಾಶದ ಮೇಲೆ ಅಹಂಕಾರತತ್ವ ; ಅದರ ಮೇಲೆ ಮಹತ್ತತ್ವ ; ಅದರ ಮೇಲೆ ತಮೋಗುಣ ; ಅದರ ಮೇಲೆ ರಜೋಗುಣ ; ಅದರ ಮೇಲೆ ಸತ್ವಗುಣ ; ತಮೋಗುಣದ ಎರಡರಷ್ಟು ವಿಸ್ತಾರ ರಜೋಗುಣದ ಆವರಣ ; ಇದರ ಎರಡರಷ್ಟು ಸತ್ವಗುಣದ ಆವರಣ. ಈ ಅಂತಿಮಾವರಣದ ವಿಸ್ತಾರ ನಾಲ್ಕು ಕ್ಷೋಣಿ ಯೋಜನ. ಇದರ ಮೇಲೆ

ಸರ್ವರೂ, ಶ್ವೇತದ್ವೀಪಕ್ಕೆ ಬಂದು, ಅಲ್ಲಿರುವ ಶ್ರೀ ನಾರಾಯಣನ ದರ್ಶನವನ್ನು ಪಡೆದು ನಾರಾಯಣನ ಅನುಜ್ಞೆಯಿಂದ ಸ್ವಯೋಗ್ಯ (ವೈಕುಂಠ, ಭೂಮ್ಯಂತರಿಕ್ಷ ಮಹರ್ಲೋಕಾದಿ) ಸ್ಥಾನಗಳನ್ನು ಸೇರಿ ಸ್ವೇಚ್ಛೆಯಿಂದ ವಿಹರಿಸುತ್ತ ಆನಂದಿಸುತ್ತಾರೆ. ಕೆಲವರು ಸತ್ಯ ಲೋಕಾದಿ ಮೇಲಿನ ಲೋಕಗಳಲ್ಲಿಯೂ, ಮಹಾಜ್ಞಾನಿಗಳಾದ ಮತ್ತೆ ಕೆಲವರು, ಕ್ಷೀರಸಮುದ್ರ - ಶ್ವೇತದ್ವೀಪ - ವೈಕುಂಠ - ಅನಂತಾಸನಗಳಲ್ಲಿಯೂ ಆನಂದದಿಂದ ವಿಹರಿಸುತ್ತಾರೆ. ಮುಕ್ತಲೋಕ-ಗಳೆಂದು ಪ್ರಸಿದ್ಧಗಳಾದ ವೈಕುಂಠ, ಶ್ವೇತದ್ವೀಪ, ಅನಂತಾಸನಗಳನ್ನು ಹೊಂದಿದವರಲ್ಲಿ ಸಹ, ಜ್ಞಾನಾಧಿಕ್ಯ ತಾರತಮ್ಯವನ್ನನುಸರಿಸಿ, ಆ ತ್ರಿಧಾಮ-ಗಳಲ್ಲಿರುವ ಶ್ರೀಹರಿಪುರಗಳ ಸಮೀಪ ಪ್ರದೇಶಗಳಲ್ಲಿರುತ್ತಾರೆ.

**ಮುಕ್ತಿಯು ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ ಮತ್ತು ಸಾಯುಜ್ಯ-ವೆಂದು ನಾಲ್ಕು ಪ್ರಕಾರವೆಂದು ಹೇಳಲಾಗಿದೆ.** ಇವುಗಳಿಗೆ ವಿವಿಧ ಯೋಗ್ಯತೆಯ ಜೀವರು ಅಧಿಕಾರಿಗಳು. ಮುಕ್ತರು ಭೂಮ್ಯಂತರಿಕ್ಷ ಸ್ವರ್ಗಾದಿ ಯಾವ ಸ್ಥಾನಗಳಲ್ಲಿದ್ದರೂ, ಅವರವರ ಯೋಗ್ಯತಾನುಗುಣವಾದ ಸಾಲೋಕ್ಯಾದಿ ಮುಕ್ತಿಗಳು, ಅಲ್ಲಲ್ಲೇ ಸಿದ್ಧವಿರುತ್ತವೆ. ಹೀಗಿದ್ದರೂ ಉತ್ತಮಾಧಿಕಾರಿಗಳು (ಉತ್ತರೋತ್ತರ - ಮೇಲೆ ಮೇಲಿನ ಅಧಿಕಾರಿ ಜೀವರು) ವೈಕುಂಠಾದಿ ಪ್ರಸಿದ್ಧ

---

ಅವ್ಯಾಕೃತಾಕಾಶ ಮತ್ತು ನಾರಾಯಣ-ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ರೂಪಗಳ ಅಪರಿಮಿತ ಆವರಣಗಳು-ಕಲ್ಪನಾತೀತವಾದವು. 100 ಕೋಟಿ ಶತಕೋಟಿ; 10 ಶತಕೋಟಿ=ಅರ್ಬುದ ; 10 ಅರ್ಬುದ=ನಿರ್ಬುದ ; 10 ನಿರ್ಬುದ=ಖರ್ವ ; 10 ಖರ್ವ=ಮಹಾಖರ್ವ ; 10 ಮಹಾಖರ್ವ=ಪದ್ಮ ; 10 ಪದ್ಮ=ಮಹಾಪದ್ಮ ; 10 ಮಹಾಪದ್ಮ ಕ್ಷೋಣಿ ; 10 ಕ್ಷೋಣಿ=ಮಹಾಕ್ಷೋಣಿ ; 10 ಮಹಾಕ್ಷೋಣಿ=ಶಂಖ ; 10 ಶಂಖ=ಮಹಾಶಂಖ ; 10 ಮಹಾಶಂಖ=ಒಂದು ದೀಪ್ತಿ. ಮುಂದಿನ ಸಂಖ್ಯೆಗಳು ಗಣನೆಗೆ ಅಗೋಚರ.

'ವೈಕುಂಠಃ ಕಲ್ಪಿತೋ ಯೇನ ಲೋಕೋ ಲೋಕ ನಮಸ್ಕೃತಃ ।' — ಇತ್ಯಾದಿ ವಾಕ್ಯಗಳು ವೈಕುಂಠಾದಿಗಳಿಗೆ ಉತ್ಪತ್ತಿಯನ್ನು ಹೇಳುವಂತೆ ತೋರುತ್ತವೆ. ನಿತ್ಯ-ವಾದುದಕ್ಕೆ ಉತ್ಪತ್ತಿಯೆಂದರೆ, ಅವರೆಗೆ ಪರಮಾತ್ಮನ ಉದರದಲ್ಲಿ ಅವ್ಯಕ್ತಸ್ಥಿತಿಯಲ್ಲಿದ್ದು ಬ್ರಹ್ಮಾಂಡದೊಳಗೆ ವ್ಯಕ್ತವಾಗುವುದೆಂದರ್ಥ— ಇದೇ ನಿತ್ಯ ಲೋಕಗಳಿಗೆ ಸೃಷ್ಟಿಯು.

ತ್ರಿಧಾಮಗಳಿಗೆ ಸಮೀಪದಲ್ಲಿರುವರೆಂಬುದು ಸಾಮಾನ್ಯ ನಿಯಮ.[25] ಭೂಮ್ಯಂತರಿಕ್ಷಾದಿಗಳಲ್ಲಿ ವಿಹರಿಸುವ ಮನುಷ್ಯಾದಿ ಮುಕ್ತರಿಗೂ ಯಥಾ-ಯೋಗ್ಯ ಸಾಲೋಕ್ಯಾದಿ ಮುಕ್ತಿಯು ಉಪಪನ್ನವಾಗುತ್ತದೆ. '**ಸ ಏವಾನ್ಯಸ್ವರೂಪೇಣ ಶಕ್ರಲೋಕ ಸಮೀಪಗಃ । ಇಜ್ಯೋ ಯಜ್ಞ ಪುಮಾನ್ನಾಮ-ಜ್ಞಾನಿನಾಂ ಗೃಹಿಣಾಂ ಪದಮ್ ॥ ಯತೀನಾಂ ಧ್ರುವ ಲೋಕಸ್ಥೋ ವನಿನಾಂ ಮೇರು ಮಧ್ಯಗಃ ।**' (ಭಾಗ-ತಾತ್ಪ) ಎಂಬ ತಾತ್ಪರ್ಯ ನಿರ್ಣಯ ವಾಕ್ಯಗಳು 'ಶ್ರೀಹರಿಯು, ಇಂದ್ರಲೋಕ ಸಮೀಪದಲ್ಲಿ ಬೇರೊಂದು ರೂಪದಿಂದಿರುವನು ; ಯಜ್ಞ ಪುರುಷನಾಮಕ ರೂಪದಿಂದ ಮುಕ್ತ ಗೃಹಸ್ಥರ ಸೇವೆಗಳನ್ನು ಸ್ವೀಕರಿಸುವನು ; ಧ್ರುವಲೋಕದಲ್ಲಿ ಮುಕ್ತ ಯತಿಗಳ ಉಪಾಸನಾರ್ಥವಾಗಿ ಒಂದು ರೂಪದಿಂದಿರುವನು ; ಮೇರು ಮಧ್ಯದಲ್ಲಿ ಮುಕ್ತ ವಾನಪ್ರಸ್ಥರ ಸೇವಾರ್ಥವಾಗಿ ಮತ್ತೊಂದು ರೂಪವನ್ನು ಸ್ಥಾಪಿಸಿರುವನು.' ಇತ್ಯಾದಿ ರಹಸ್ಯಗಳನ್ನು ನಿರೂಪಿಸುತ್ತದೆ. ಶ್ರೀಹರಿಯು, ಸದಾ ತನ್ನ ದಿವ್ಯ ಸುಂದರರೂಪ ದರ್ಶನದಿಂದ, ಮುಕ್ತರನ್ನು ಆನಂದಗೊಳಿಸುವ ಯಾವ ಸ್ಥಾನವಾದರೂ, ಅದು ಸಾಲೋಕ್ಯ ಮುಕ್ತಿಯು; ಶ್ರೀ ವಿಷ್ಣುವಿನಂತೆ ಚತುರ್ಭುಜಾದಿಗಳುಳ್ಳವರಾಗಿ, ಪೀತಾಂಬರಾದಿ ದಿವ್ಯ ವಸ್ತ್ರಾಲಂಕಾರಗಳಿಂದ ತಮ್ಮ ಸ್ವಾಮಿಯ ಸಾದೃಶ್ಯವುಳ್ಳ ರೂಪದಿಂದ, ಯಥೇಚ್ಛೆ ವಿಹರಿಸುವ ಮುಕ್ತರು ಸಾರೂಪ್ಯ ಮುಕ್ತರು; ಪರಮಾತ್ಮನನ್ನು ಪ್ರವೇಶಿಸಿ, ಪರಮಾತ್ಮನ ಕರಚರಣಾದ್ಯಂಗಗಳಿಂದ ಅನುಗ್ರಹಿಸಲ್ಪಟ್ಟ ಸ್ವಾಂಗಗಳಿಂದ (ತಮ್ಮ ಕರಚರಣಾದಿಗಳಿಂದ), ಪರಮಾತ್ಮನಿಂದ ಭುಕ್ತಾವಶಿಷ್ಟ ಸ್ವಯೋಗ್ಯ ಭೋಗಗಳನ್ನು ಪಡೆಯುವುದು ಮತ್ತು ಸ್ವೇಚ್ಛೆಯಿಂದ, ಪರಮಾತ್ಮನಿಂದ ಹೊರಗೆ ಬಂದು, ವಿವಿಧವಾಗಿ ಕ್ರೀಡಿಸುತ್ತ ಭೋಗಿಸುವುದು ಸಾಯುಜ್ಯ ಮುಕ್ತಿಯು.[26] ಹೀಗಿರುವ

25. 'ಸರ್ವಸ್ಥಾನೇಷ್ವಪಿ ಸಾಲೋಕ್ಯಾದ್ಯಸ್ತ್ಯೇವ । ಈಶ್ವರಸ್ಯ ಸರ್ವತ್ರಾವಸ್ಥಿತೇಃ । (ತತ್ವಪ್ರಕಾಶಿಕಾ)— ಈಶ್ವರನು ಸರ್ವತ್ರ ಇರುವುದರಿಂದ, ಎಲ್ಲ ಸ್ಥಾನಗಳಲ್ಲಿ ಸಾಲೋಕ್ಯಾದಿಗಳು ಇರುತ್ತವೆ. 'ತತ್ರಾಪಿ ಕ್ರಮಯೋಗೇನ ಜ್ಞಾನಾಧಿಕ್ಯಾತ್ಸಮೀಪಗಾಃ। (ಸ.ರ.ಮಾ.)— ಮುಕ್ತರಿಗೆ ದೊರೆಯುವ ವಿಹಾರಸ್ಥಾನಗಳು, ಜ್ಞಾನಾಧಿಕ್ಯ ಕ್ರಮ-ವನ್ನನುಸರಿಸಿ ತ್ರಿಧಾಮಗಳಿಗೆ ಸಮೀಪದಲ್ಲಿರುತ್ತವೆ.

26. 'ಓಂ ಅವಿಭಾಗೇನ ದೃಷ್ಟತ್ವಾತ್ ಓಂ' ಎಂಬ (ಬ್ರಹ್ಮಸೂತ್ರವು) ಹೀಗೆಂದು ನಿರ್ಣಯಿಸುತ್ತದೆ. 'ಯಾನೇವಾಹಂ ಶೃಣೋಮಿ ಯಾನ್ ಪಶ್ಯಾಮಿ ಯಾನ್

ವಿವಿಧ ಮುಕ್ತಿಗಳಲ್ಲಿ ಸಾಯುಜ್ಯ ಮುಕ್ತಿಯು ಉತ್ತಮಾಧಿಕಾರಿಗಳಾದ ದೇವತೆಗಳಿಗೆ ಮಾತ್ರ ಲಭ್ಯವು. ಅವರಲ್ಲಿ ಸಹ, ವಿಶಿಷ್ಟರಾದ ಸೂರ್ಯಚಂದ್ರಾದಿ ಅಂಗದೇವತೆಗಳು, ಸೃಷ್ಟಿಕಾಲದಲ್ಲಿ ಪರಮಾತ್ಮನ ವಿರಾಟ್‌ದೇಹದ ಚಕ್ಷುರಾದಿ ಅಂಗಗಳಿಂದ ಉತ್ಪನ್ನರಾಗಿ, ಆಯಾ ಅಂಗಾಶ್ರಿತರಾಗಿ ಅಂಗೋಪಾಸನೆಯಿಂದಲೇ ಮುಕ್ತರಾಗಿ ಆಯಾ ಅಂಗ ಸಾಯುಜ್ಯವನ್ನೇ ಹೊಂದುತ್ತಾರೆ.[27] ಚತುರ್ಮುಖ-ನೊಬ್ಬನೇ ಸರ್ವಾಂಗ ಸಾಯುಜ್ಯವನ್ನು ಪಡೆಯುವ ಅಧಿಕಾರಿಯು. ಶ್ರೀಹರಿಯ ಸರ್ವಾಂಗಗಳನ್ನು ಪ್ರವೇಶಿಸಿ, ಭಗವಂತನಿಂದ ಮಾತ್ರ ಭೋಗ್ಯ-ವಾದವುಗಳಿಂದ ಭಿನ್ನಗಳಾದ ಮತ್ತು ಮುಕ್ತಪ್ರೀತ್ಯರ್ಥವಾಗಿ ಶ್ರೀಹರಿಯು ಭೋಗಿಸುವ, ನಾನಾ ಭೋಗಗಳನ್ನು ಹೊಂದುತ್ತಾನೆ.[28] ಈ ಮಹಾಭಾಗ್ಯವು

---

ಜಿಘ್ರಾಮಿ ತಾನೇವೈತ ಇದಂ ಶರೀರಂ ವಿಮುಚ್ಯಾನುಭವಂತಿ' ಎಂಬ (ಚತುರ್ವೇದ) ಶ್ರುತಿಯು, ಪ್ರಾಕೃತ ಶರೀರವನ್ನು ತೊರೆದ ಮುಕ್ತರು, ನಾನು ಕೇಳುವುದನ್ನು ಕೇಳುತ್ತಾರೆ; ನೋಡುವುದನ್ನು ನೋಡುತ್ತಾರೆ; ಆಘ್ರಾಣಿಸುವುದನ್ನು ಮೂಸಿ ನೋಡುತ್ತಾರೆ; ನನ್ನಿಂದ ಭುಕ್ತವಾದ ಭೋಗಗಳನ್ನೇ ಭೋಗಿಸುತ್ತಾರೆಂದು ಹೇಳುತ್ತದೆ. 'ಆದತ್ತೇ ಹರಿ ಹಸ್ತೇನ ಹರಿದೃಷ್ಟ್ಯೈವ ಪಶ್ಯತಿ । ಗಚ್ಛೇಚ್ಚ ಹರಿಪಾದೇನ ಮುಕ್ತಸ್ಯೈಷಾ ಸ್ಥಿತಿರ್ಭವೇತ್ ॥' ಹರಿ ಹಸ್ತದಿಂದ ಕೊಡುತ್ತಾನೆ (ಸ್ವೀಕರಿಸುತ್ತಾನೆ) ; ಹರಿದೃಷ್ಟಿಯಿಂದ ನೋಡುತ್ತಾನೆ; ಹರಿಪಾದದಿಂದ ಸಂಚರಿಸುತ್ತಾನೆ; ಮುಕ್ತರ ಸ್ಥಿತಿಯು ಈ ಪ್ರಕಾರವಾದುದೆಂದು ವರ್ಣಿತವಾಗಿದೆ. ಇದು, ಸಾಯುಜ್ಯ ಮುಕ್ತರು ಶ್ರೀಹರಿಯನ್ನು ಪ್ರವೇಶಿಸಿದಾಗ, ನಡೆಸುವ ನಾನಾ ವ್ಯಾಪಾರಗಳ ವರ್ಣನ ರೂಪವೂ ಆಗಿದೆ. ಪ್ರತಿಬಿಂಬನಾದ ನಾನು-ನನ್ನ ಸ್ವರೂಪವು-ಬಿಂಬನಾದ ಶ್ರೀಹರಿಯ ವ್ಯಾಪಾರಗಳನ್ನೇ ಅನುಸರಿಸುತ್ತವೆಂಬ ಉಪಾಸನಾ ಕಾಲದ ಪೂರ್ವಸ್ಮರಣೆಯ ಪ್ರಭಾವದಿಂದ ಈ ವಿಧ ಅನುಸಂಧಾನವು ಸರ್ವಮುಕ್ತ ಸಾಮಾನ್ಯವೆಂಬುದೂ ಉಪಪನ್ನವೇ ಸರಿ.

27. ಸಾಯುಜ್ಯ ಮುಕ್ತಿಗೆ ಅರ್ಹರಾದ ಪರೀಕ್ಷಿದ್ರಾಜಾದಿ ಕೆಲವು ರಾಜರು 'ಪರೀಕ್ಷಿತ್ಪೂರ್ವ-ಕಾಣಾಂ ತು ತದ್ಭವೇತ್ಪಾದಮೂಲತಃ' ಎಂಬಲ್ಲಿ ಹೇಳಿದಂತೆ, ವಿಷ್ಣುಪಾದ ಪ್ರವೇಶಮಾತ್ರದಿಂದ ಸಾಯುಜ್ಯಭೋಗವೆಂದು ತಿಳಿಯಬೇಕು.

28. ಮುಕ್ತರ ಭೋಗಕ್ಕಾಗಿಯೇ ಪರಮಾತ್ಮನು ಸರ್ವಭೋಕ್ತನೂ ಆಗಿರುವನು. ಆತನಿಂದ ಭೋಗಿಸಲ್ಪಡದ ಯಾವ ಭೋಗವನ್ನೂ ಮುಕ್ತರು ಭೋಗಿಸುವುದಿಲ್ಲ. 'ಮುಕ್ತಾಃ ಪ್ರಾಪ್ಯಪರಂ ವಿಷ್ಣುಂ ತದ್ಭೋಗಾನ್ ಲೇಶತಃ ಕ್ವಚಿತ್ । ಬಹಿಷ್ಠಾನ್ ಭುಂಜತೇ ನಿತ್ಯಂ ನಾನಂದಾದೀನ್ ಕಥಂಚನ ॥' — ಸಾಯುಜ್ಯ ಮುಕ್ತರು, ಸರ್ವಪ್ರಕಾರದಿಂದ ಭಗವದಧೀನಗಳಾದ ತಮ್ಮ ಚಿನ್ಮಾತ್ರ ಇಂದ್ರಿಯಗಳಿಂದ, 'ಬಹಿಷ್ಠಾನ್ ನಾನಂದಾದೀನ್' ಎಂದರೆ, ಭಗವತ್ಸ್ವರೂಪಾತ್ಮಕವೂ ಲಕ್ಷ್ಮ್ಯಾತ್ಮಕವೂ

ಅನ್ಯರಿಗಿಲ್ಲ. ಮುಕ್ತಬ್ರಹ್ಮನು ಕಾಲವಿಶೇಷದಲ್ಲಿ ಸ್ತ್ರೀರೂಪವನ್ನು ಸಹ ಧರಿಸಿ, ಶ್ರೀಹರಿಯ ಅಂಗಸಂಗ ಸುಖವನ್ನೂ ಅನುಭವಿಸುವನೆಂದು ಹೇಳಲಾಗಿದೆ.[29]

ಹೀಗಿರುವ ನಾಲ್ಕು ಪ್ರಕಾರದ ಮುಕ್ತಿಯಲ್ಲಿ ಸ್ವಯೋಗ್ಯವಾದ ಯಾವುದೊಂದನ್ನು ಪಡೆದರೂ, ಮುಕ್ತನು, ಸ್ವಸ್ವರೂಪಗತ ಪೂರ್ಣಾನಂದದ ಆವಿರ್ಭಾವವುಳ್ಳವನಾಗಿ ದುಃಖಲೇಶದ ಸ್ಪರ್ಶವಿಲ್ಲದೇ, ವಿವಿಧ ಸುಖಪ್ರದ ಭೋಗಗಳನ್ನು ಹೊಂದುವ ನಿತ್ಯಸ್ಥಿತಿಯನ್ನು ಹೊಂದುತ್ತಾನೆ. ಮುಕ್ತರು, ಭೋಗ್ಯವಸ್ತುಗಳನ್ನು ವಿವಿಧ ಯತ್ನ ಪೂರ್ವಕ ಸಾಧನಗಳಿಂದ ದೊರಕಿಸಿ-ಕೊಳ್ಳಬೇಕಾಗಿಲ್ಲ - ಸಂಕಲ್ಪಮಾತ್ರದಿಂದ ಸಕಲವೂ ಸಿದ್ಧವಾಗುತ್ತದೆ. **'ಯಂ ಯಂ ಕಾಮಯತೇಽರ್ಥಮತ್ರ ಸಂಕಲ್ಪಮಾತ್ರಾತ್ ಸಕಲೋಪಿ ಸ ಸ್ಯಾತ್'** ಇತ್ಯಾದಿ ಪ್ರಮಾಣಗಳು, ಮುಕ್ತರಿಗೆ, ಅಪೇಕ್ಷಿತ ಸರ್ವಭೋಗ್ಯ ವಸ್ತುಗಳು ಇಚ್ಛಿಸುವ ಮಾತ್ರದಿಂದ ಸಿದ್ಧವಾಗುವುವೆಂದು ಹೇಳುತ್ತವೆ. ಆದ್ದರಿಂದ ಮುಕ್ತರು ಸತ್ಯಸಂಕಲ್ಪರು. ಅವರು ಪೂರ್ಣಕಾಮರೂ ಅಹುದು - ಇಚ್ಛಿಸಿದುದು ಎಂದೂ ದೊರೆಯದಿರುವುದಿಲ್ಲ - ಅಯೋಗ್ಯವಾದುದನ್ನು ಅವರು ಎಂದೂ ಇಚ್ಛಿಸುವುದಿಲ್ಲ. ಈ ವಿಧ ಮುಕ್ತಮಹಿಮೆಯು ಶ್ರೀಹರಿಯ ಪರಮ ಪ್ರಸಾದದಿಂದಲೇ ಲಭಿಸಿದುದು - ಮುಕ್ತರು ಶ್ರೀ ಹರ್ಯನುಗ್ರಹ ವಿಶೇಷ-ವುಳ್ಳವರಾದ್ದರಿಂದಲೇ ಸರ್ವಸಿದ್ಧಿಯುಳ್ಳವರು. ತಾವು ಶ್ರೀಹರಿಯ ನಿತ್ಯಾಧೀನರೆಂಬುದನ್ನು ಮುಕ್ತರಂತೆ ಅನ್ಯರು ಅರಿಯರು. ಸಂಸಾರಿ ಜೀವರಂತೆ, ಮುಕ್ತರು ತಮಗಿಂತ ಕೀಳಾದವರಿಂದ, ಎಂದೂ ನಿಯಮ್ಯರಾಗುವುದಿಲ್ಲ-

---

ಅಲ್ಲದ, (ಮುಕ್ತರ ಭೋಗಾರ್ಥವಾಗಿ ಶ್ರೀಹರಿಯು ಭೋಗಿಸುವ ಶುದ್ಧ ಸತ್ವಾತ್ಮಕ ಗಂಧಾದಿ) ಭೋಗ್ಯ ವಿಷಯಗಳನ್ನು, ತಮ್ಮ ಯೋಗ್ಯತೆಯಿದ್ದಷ್ಟು (ಪೂರ್ಣವಾಗಿ ಅಲ್ಲ) ಭೋಗಿಸುತ್ತಾರೆ.

29 'ತದ್ವಿದ್ಯಾ ಬಲೇನೈವ ವಿಷ್ಣುನಾ ರತಿಮಾಪ್ನುಯಾತ್ ॥ ತೇನೈವ ಕ್ರೀಡತೇ ನಿತ್ಯಂ ಸ್ತ್ರೀರೂಪೋ ಮಿಥುನೀ ಭವೇತ್ ॥ (ಛಾಂದೋಗ್ಯ ಭಾಷ್ಯ) —ಭೂಮ ಗುಣೋ-ಪಾಸನೆಯಲ್ಲಿ ಮುಖ್ಯಾಧಿಕಾರಿಯಾದ ಬ್ರಹ್ಮದೇವನು, ಆ ವಿದ್ಯಾಬಲದಿಂದಲೇ ವಿಷ್ಣುವಿನಿಂದ ಸದಾ ಕ್ರೀಡಿಸುತ್ತ ಸರ್ವಪ್ರಕಾರದ ತೃಪ್ತಿಯನ್ನು ಹೊಂದಿ ಆನಂದಿಸುತ್ತಾನೆ; ಸ್ತ್ರೀರೂಪನಾಗಿ ಶ್ರೀಹರಿಯನ್ನು ಕೂಡಿ ರತಿಸುಖವನ್ನೂ ಪಡೆಯುತ್ತಾನೆ.

ಸರ್ವದಾ ಸ್ವೋತ್ತಮರ ಅಧೀನರಾಗಿದ್ದರೂ, ಮಾತ್ಸರ್ಯಾದಿ ಸರ್ವದೋಷ ರಹಿತರಾದ್ದರಿಂದ, ಪರಮಾತ್ಮನ ಅನನ್ಯಾಧಿಪತಿತ್ವದಲ್ಲಿ ವಿರಾಜಮಾನ-ರಾಗಿರುತ್ತಾರೆ. ಸೃಷ್ಟಿಕಾಲ ಮುಗಿದು ಮಹಾಪ್ರಳಯಕಾಲ ಪ್ರಾಪ್ತವಾಗುವ-ವರೆಗೆ, ಮುಕ್ತರು ಬಹುಪರಿಯಿಂದ ಕ್ರೀಡಿಸಿ ಆನಂದ ವಿಶೇಷವನ್ನು ಅನುಭವಿಸಿ, ಪ್ರಳಯಕಾಲದಲ್ಲಿ ನಿತ್ಯಲೋಕಗಳು ಶ್ರೀಹರಿಯ ಉದರ ಪ್ರವೇಶಗೊಳ್ಳಲು, ತಾವು ಶ್ರೀಹರಿಯ ಉದರವನ್ನು ಪ್ರವೇಶಿಸಿ, ಧ್ಯಾನಸ್ಥಿತರಾಗಿ ಸ್ವಸ್ವರೂಪಾನಂದವನ್ನು ಸದಾ ಅನುಭವಿಸುತ್ತಿರುವರು. ಪುನಃ ಸೃಷ್ಟಿಕಾಲ ಪ್ರಾಪ್ತವಾಗಿ ವೈಕುಂಠಾದಿಗಳು ಬ್ರಹ್ಮಾಂಡದೊಳಗೆ ಪ್ರಕಟವಾಗಲು, ಪೂರ್ವ-ದಂತೆ ವಿವಿಧ ವಿಚಿತ್ರ ಭೋಗಗಳಿಂದ ವಿಹರಿಸುತ್ತಾರೆ. ಈ ವಿಧ ನಿತ್ಯವ್ಯವಸ್ಥೆ-ಯನ್ನು, ಮುಕ್ತರ ಸೃಷ್ಟಿ, ಲಯಗಳೆಂದು ಒಂದು ದೃಷ್ಟಿಯಿಂದ ಕರೆದು, **'ಸ ಇದಂ ಸರ್ವಮಸೃಜತ'** ಇತ್ಯಾದಿ ಶ್ರುತಿ ವಾಕ್ಯಗಳಿಗೆ ಅಸಂಕುಚಿತವಾದ ಅರ್ಥವನ್ನೂ ತಿಳಿಯಲು ಬರುತ್ತದೆ.

ಹೀಗೆ, ಮುಕ್ತರಿಗೆ ನಿತ್ಯಾನಂದಭೋಗವನ್ನು ತತ್ವವಾದವು ಹೇಳಿದರೆ, ನಿರ್ವಿಶೇಷ ಬ್ರಹ್ಮಭಾವವನ್ನು ಹೊಂದುವುದೇ ಮೋಕ್ಷವೆಂದು ಮಾಯಾವಾದವು (ಅದ್ವೈತ ಮತವು-ಜೀವಬ್ರಹ್ಮರ ಐಕ್ಯವನ್ನು ಪ್ರತಿಪಾದಿಸುವುದರಲ್ಲಿ ತೋರುವ ಪ್ರಭೇದಗಳಿಂದ ಭಿನ್ನಮತಗಳೆಂದು ವ್ಯವಹರಿಸಲ್ಪಟ್ಟರೂ ಮೂಲತಃ ಒಂದೇ ಆದ ಈ ಮತವು) ಸಾರುತ್ತದೆ. ಮುಕ್ತಿಯು ನಿರ್ವಿಶೇಷವಾದರೆ (ಧರ್ಮ-ಶೂನ್ಯವೆಂದರೆ - ಅನಿರ್ವಚನೀಯವಾದ ಒಂದು ಅವಸ್ಥೆಯೆಂದರೆ) ಅಲ್ಲಿ ಆನಂದಾನುಭವವೆಂಬುದು ಕೂಡುವುದೇ ಇಲ್ಲ. ಈ ವಾದವು ವಿವೇಕಿಗಳಿಂದ ಎಂದೂ ಗ್ರಾಹ್ಯವಲ್ಲ-ಆದರಣೀಯವಲ್ಲ. ಮೋಕ್ಷವೇ ನಿರ್ವಿಶೇಷವಲ್ಲ. ಮುಕ್ತಿಯು ಹೇಗೆ ಮತ್ತು ಯಾವಾಗ ದೊರೆಯುತ್ತದೆ, ಎಂಬ ಮುಂತಾದ ಪ್ರಶ್ನೆಗಳಿಗೆ ಉತ್ತರಗಳು ಆ ಪಕ್ಷದಲ್ಲಿದ್ದರೆ, (ಜೀವ ಬ್ರಹ್ಮೈಕ್ಯ ಜ್ಞಾನವಾದನಂತರ ಎಂದು ಹೇಳಿದರೆ) ಮುಕ್ತಿಯು, ಜ್ಞಾನೋತ್ತರಕಾಲ ಸಂಬಂಧವುಳ್ಳದ್ದೆಂಬ ಮುಂತಾದ ವಿಶೇಷಯುಕ್ತವೆಂದಾಗುತ್ತದೆ. ಆ ಪ್ರಶ್ನೆಗಳಿಗೆ ಉತ್ತರವನ್ನೇ ಹೇಳದಿದ್ದರೆ 'ಅನುಕ್ತಿ' ಎಂಬ ನಿಗ್ರಹಸ್ಥಾನವುಂಟಾಗುತ್ತದೆ.[30] ಆನಂದಭೋಗಕ್ಕೆ

30. ರತ್ನ 2ರಲ್ಲಿ ನೋಡಿ.

ಅವಶ್ಯಕವಾದ ದೇಹವೂ, ಬುದ್ಧ್ಯಾದಿ ಅಂತಃಕರಣಗಳೂ ಚಕ್ಷುರಾದಿ ಇಂದ್ರಿಯಗಳೂ, ಮುಕ್ತನಿಗೆ ಇಲ್ಲವಾದ್ದರಿಂದ, ಮುಕ್ತನು ನಿತ್ಯಾನಂದಾನುಭವ-ವುಳ್ಳವನೆಂದು ತಿಳಿಯುವುದು ಯುಕ್ತವಲ್ಲೆಂಬ ವಾದವೂ ಸರಿಯಲ್ಲ. ಮುಕ್ತನಿಗೆ ದೇಹೇಂದ್ರಿಯಾದಿಗಳು ಇಲ್ಲವೆಂದರೆ, ಸಮಸ್ತ ಅನುಭವ (ಜ್ಞಾನ) ಶೂನ್ಯನೆಂದು ಪ್ರಾಪ್ತವಾಗಿ, ಮುಕ್ತನು ಪುರುಷಾರ್ಥವನ್ನು ಹೊಂದಿದವನೆಂದು ತಿಳಿಯು-ವುದು, ಅತ್ಯಂತ ಅಯುಕ್ತವಾಗುತ್ತದೆ - ಮುಕ್ತನಿಗೂ ಶಿಲಾದಿ ನಿರ್ಮಿತ ಪ್ರತಿಮೆಗೂ ವ್ಯತ್ಯಾಸವಿಲ್ಲದಂತಾಗುತ್ತದೆ. ದೇಹವಿದ್ದರೆ, ಉತ್ಪತ್ತಿ ಮೊದಲಾದ ಷಡೂರ್ಮಿಗಳಿರಬೇಕಾಗುವುದರಿಂದ ದೇಹವೇ ಇಲ್ಲವೆಂದು ತಿಳಿದು, ಆಶ್ರಯಸ್ಥಾನವಿಲ್ಲದ ಪ್ರಯುಕ್ತ ಬುದ್ಧ್ಯಾದಿ ಇಂದ್ರಿಯಗಳೂ ಇಲ್ಲವೆಂದು ಹೇಳುವ ವೈಶೇಷಿಕರ ಸಿದ್ಧಾಂತವೂ ಗ್ರಾಹ್ಯವಲ್ಲ. ದೇಹವಿದ್ದಲ್ಲಿ ಷಡೂರ್ಮಿ-ಗಳಿರಬೇಕೆಂಬ ನಿಯಮವಿಲ್ಲ. ಅಶುದ್ಧ ದೇಹವತ್ವರೂಪದ ಉಪಾಧಿಯು, ಮುಕ್ತನಲ್ಲಿಲ್ಲ. ಜ್ಞಾನಾನಂದಾತ್ಮಕ ದೇಹವುಳ್ಳ (ದೇಹದಿಂದ ಅಭಿನ್ನನಾದ) ಮುಕ್ತನಲ್ಲಿ ಷಡೂರ್ಮಿಗಳಿರಲು, ಉಪಾಧಿರಾಹಿತ್ಯದಿಂದ, ಅವಕಾಶವಿಲ್ಲ. ಮುಕ್ತನಿಗೆ ಯಾವ ವಿಧ ದೇಹವೂ ಇಲ್ಲವೆಂದು ತಿಳಿದರೆ, ಅದೇ ಯುಕ್ತಿಯಿಂದ ಈಶ್ವರನೂ (ಪರಬ್ರಹ್ಮನೂ) ಅದೇಹಿಯಾಗಬೇಕಾಗುವುದು. ಜ್ಞಾನೇಚ್ಛಾ ಪ್ರಯತ್ನಾದಿ ಯಾವ ಗುಣಗಳೂ ಇಲ್ಲದ ಈಶ್ವರನಿಗೂ, ಶಶವಿಷಾಣಾದಿ ಅಸದ್ವಸ್ತುಗಳಿಗೂ ಯಾವ ವಿಶೇಷವೂ ಇಲ್ಲವೆಂದಾಗುತ್ತದೆ. ಈಶ್ವರನು ಜ್ಞಾನೇಚ್ಛಾದಿ ಗುಣಗಳುಳ್ಳವನೆಂದೂ, ವಿಕಾರರಹಿತ, ಅಪ್ರಾಕೃತ, ಸ್ವರೂಪ-ನೆಂದೂ ಆಗಮಗಳಿಂದ ಸಿದ್ಧವಾಗುತ್ತದೆ. ಆದ್ದರಿಂದ ದೇಹವಿದ್ದರೂ (ಕರ-ಚರಣಾದ್ಯವಯವ ವಿಶಿಷ್ಟಚಕ್ಷುರಾದಿ ಇಂದ್ರಿಯಗಳುಳ್ಳವನಾದರೂ), ಪ್ರಾಕೃತ ದೇಹಸಂಬಂಧದಿಂದ ಸಂಭವಿಸುವ ದುಃಖ-ಅಜ್ಞಾನ-ಅನಿಷ್ಟಭೋಗಾದಿ ಸರ್ವದೋಷಗಳಿಂದ ದೂರನಾಗಿದ್ದಾನೆ. ಹೀಗೆಯೇ ಮುಕ್ತನೂ ಸಹ ಪ್ರಾಕೃತ ದೇಹರಹಿತನಾದ್ದರಿಂದ, ದುಃಖಾಜ್ಞಾನಾದಿ ದೋಷದೂರನಾಗಿರುವನೆಂದು ತಿಳಿಯುವಲ್ಲಿ ಯಾವ ಅನುಪಪತ್ತಿಯೂ ಇರುವುದಿಲ್ಲ. ಜನನ-ಮರಣ-ದುಃಖ-ಅಜ್ಞಾನ-ಅನಿಷ್ಟಭೋಗ-ಅತೃಪ್ತಿ ಮೊದಲಾದ ದೋಷಗಳು ಮುಕ್ತ-ನಲ್ಲಿಲ್ಲವೆಂದು ಸಾರುವ ಶ್ರುತ್ಯಾದಿ ಪ್ರಮಾಣಗಳಿಂದ, ಮುಕ್ತನ ಸ್ವರೂಪವು

(ದೇಹವು) ಮತ್ತು ಅದರ ಕರಚರಣಾದಿ ಅವಯವಗಳು, ಬುದ್ಧ್ಯಾದಿ ಇಂದ್ರಿಯಗಳು, ಎಲ್ಲವೂ ಜ್ಞಾನಾನಂದಾತ್ಮಕವಾದವುಗಳೇ ಎಂದೂ ಸಿದ್ಧ-ವಾಗುತ್ತವೆ. ಆದ್ದರಿಂದ ಮುಕ್ತನಿಗೆ ರೂಪಾದಿಗಳ ಜ್ಞಾನವಿದೆ-ವಿವಿಧ ಭೋಗಗಳೂ ಕೂಡುತ್ತವೆ.[31] ಸಂಸಾರಿ ಜೀವನಲ್ಲಿ ಸುಖದುಃಖಗಳು ಒಂದಿರುವಲ್ಲಿ ಮತ್ತೊಂದಿರುವುದನ್ನು ಕಂಡು, ಮುಕ್ತನಿಗೆ ದುಃಖಾದಿಗಳಿಲ್ಲವೆಂಬುದರಿಂದ ಸುಖಾದಿಗಳೂ ಇಲ್ಲವೆಂದು ತಿಳಿಯುವುದೂ ಸರಿಯಲ್ಲ. ಹೀಗೆಯೇ, ದೇಹವಿದ್ದಲ್ಲಿ ಸುಖದುಃಖಗಳ ಸಂಬಂಧವಿರುವುದರಿಂದ ಮುಕ್ತನಿಗೆ ದೇಹವೂ ಇಲ್ಲವೆಂದು ತರ್ಕಿಸಬಹುದಲ್ಲವೇ? ಮುಕ್ತನಿಗೆ ಪ್ರಾಕೃತ ದೇಹವಿಲ್ಲೆಂಬುದು ಉಭಯ ಸಮ್ಮತ ಮತ್ತು ಆಗಮಪ್ರಮಾಣಸಿದ್ಧವಾದುದು. ಅಪ್ರಾಕೃತವೂ ಚಿದಾತ್ಮಕವೂ ಆದ ಸ್ವರೂಪವೂ ಇಲ್ಲವೆಂದು ತಿಳಿಯುವುದು ಶೂನ್ಯವಾದಿಗಳಿಗೆ ಮಾತ್ರ ಶೋಭಿಸುತ್ತದೆ. ಕರಚರಣಾದ್ಯವಯವ ವಿಶಿಷ್ಟ ಆಕಾರವುಳ್ಳದ್ದು ಜೀವಸ್ವರೂಪ-ಅದನ್ನೇ ಸ್ವರೂಪದೇಹವೆನ್ನುವುದು. ಯಾವ ದೇಹವೂ ಇಲ್ಲೆಂದರೆ ಸ್ವರೂಪವೇ ಇಲ್ಲವೆಂದು ಹೇಳಿದಂತೆಯೇ ಸರಿ. ನಿರಾಕಾರ ವಸ್ತುವೆಂಬುದು ಶೂನ್ಯ ಭಿನ್ನವಲ್ಲ. ವಸ್ತುಮಾತ್ರಕ್ಕೆ ಆಕಾರವುಂಟು; ಅದು ಪ್ರಾಕೃತವಾಗಿರಬಹುದು - ಅಪ್ರಾಕೃತವಿರಬಹುದು; ಮಾನವ ಕಲ್ಪನೆಗೆ ಒಳಪಡಬಹುದು ಅಥವಾ ಕಲ್ಪನಾತೀತವಾಗಿರಬಹುದು (ವ್ಯಾಪ್ತವಾದುದ-ರಿಂದ-ಆಕಾಶಾದಿಗಳಂತೆ), ಯಾವ ಸ್ವರೂಪವೂ ಇಲ್ಲದ ವಸ್ತುವನ್ನು (ಶೂನ್ಯವನ್ನು) ವಸ್ತುವೆಂದು ವ್ಯವಹರಿಸುವವನು ಶೂನ್ಯವಾದಿಯೊಬ್ಬನೇ. '**ದುಃಖವ್ಯಾಪ್ತಂ ಸುಖಂ ಬುದ್ಧೇ ದೃಷ್ಟ್ವಾ ಮುಕ್ತೇರ್ನಿರಸ್ಯತಾ । ಸ್ವರೂಪಂ ಚ ನಿರಸ್ಯೇತ ಶೂನ್ಯವಾದಿ ತದಾ ಭವೇತ್ ॥**' ಎಂಬಲ್ಲಿ (ಮಧ್ವ ವಿಜಯ) ಪೂರ್ವೋಕ್ತ ವಿಷಯಗಳು ವಿಮರ್ಶಿಸಲ್ಪಟ್ಟಿವೆ. ಸಂಸಾರಬದ್ಧ ಜೀವನಲ್ಲಿ ದುಃಖವ್ಯಾಪ್ತವಾದ ಸುಖವನ್ನು ಕಂಡು, ಮುಕ್ತನು ದುಃಖರಹಿತನಾದ್ದರಿಂದ ಸುಖವಿಲ್ಲದವನೂ ಆಗಿರುವನೆಂದು ತಿಳಿದರೆ, ಇದೇ ಯುಕ್ತಿಯನ್ನು ಅನುಸರಿಸಿ, ದೇಹವಿದ್ದಲ್ಲಿ ದುಃಖವಿರುವುದನ್ನು ಕಂಡು, ಮುಕ್ತನಿಗೆ ಸ್ವರೂಪವನ್ನೂ ನಿರಾಕರಿಸಬಹುದು;

31. ಯಾರು ರೂಪಾದಿಗಳ ಜ್ಞಾನವುಳ್ಳವನಲ್ಲವೋ ಅವನು ಚೇತನವೂ ಅಲ್ಲ- ಶಿಲಾದಿ ಪ್ರತಿಮೆಯಂತೆ, ಎಂಬ ವ್ಯತಿರೇಕಾನುಮಾನದಿಂದಲೂ, ಮುಕ್ತನು ರೂಪಾದಿಗಳ ಜ್ಞಾನವುಳ್ಳವನು (ಸುಖಾದ್ಯನುಭವವುಳ್ಳವನು) ಎಂದು ಸಾಧಿಸಬಹುದು.

ಆಗ (ಮುಕ್ತನಿಗೆ ಸ್ವರೂಪವೂ ಇಲ್ಲವೆಂದಾಗ) ಹೀಗೆ ತರ್ಕಿಸುವವನು ಶೂನ್ಯವಾದಿಯೇ ಆಗುತ್ತಾನೆ. ಮುಕ್ತಸ್ವರೂಪವನ್ನು ನಿರ್ಣಯಿಸುವುದರಲ್ಲಿ ತರ್ಕವು ಅಪ್ರಯೋಜಕವೇ ಸರಿ.

ಹೀಗೆ, ಮುಕ್ತರು ಚಿದಾನಂದ ದೇಹಿಗಳಾದರೂ, ಶುದ್ಧ ಸತ್ತ್ವಾತ್ಮಕ (ಪ್ರಾಕೃತ) ದೇಹಗಳನ್ನು ಸ್ವೇಚ್ಛೆಯಿಂದ ಕಾಲವಿಶೇಷಗಳಲ್ಲಿ ಸ್ವೀಕರಿಸಿ, ಈ ಬಾಹ್ಯದೇಹಗಳಿಂದ ಸಹ, ವಿವಿಧಭೋಗಗಳನ್ನು ಹೊಂದಿ, ಅವುಗಳನ್ನು ತ್ಯಜಿಸುವುದೂ ಉಂಟು. ಹೀಗೆಂಬುದರಿಂದ, ಮುಕ್ತರಿಗೆ ಪ್ರಾಕೃತದೇಹ ಸ್ವೀಕಾರದಿಂದ ದುಃಖಾದಿ ದೋಷಗಳ ಸಂಬಂಧವಾಗುವುದೆಂದು ಭ್ರಮಿಸಕೂಡದು. 'ಮುಕ್ತರಿಗೆ ದೇಹವಿದ್ದರೂ ಇಲ್ಲದಿದ್ದರೂ ಭೋಗಗಳು ಕೂಡುವುದಿಲ್ಲ; ದೇಹವನ್ನು ಅಂಗೀಕರಿಸಿದರೆ ದುಃಖಪ್ರಸಂಗವು — ಇಲ್ಲದಿದ್ದರೆ ಭೋಗಾಭಾವಪ್ರಸಂಗ; ಪರಬ್ರಹ್ಮನ ದೇಹದಿಂದ ಮುಕ್ತರಿಗೆ ಭೋಗವೆಂದು ತಿಳಿಯುವುದು ಯುಕ್ತವಲ್ಲ — ಒಬ್ಬನ ದೇಹವು ಮತ್ತೊಬ್ಬನ ಭೋಗಾಶ್ರಯವಾಗುವುದು ಎಲ್ಲಿಯೂ ಕಂಡಿಲ್ಲ; ಮುಕ್ತರಿಗೆ ದುಃಖರಹಿತವಾದ ಸುಖಭೋಗವು ಕೂಡುವುದಿಲ್ಲ-ವಾದ್ದರಿಂದ ಮುಕ್ತಿಗೆ ಪುರುಷಾರ್ಥತ್ವವಿಲ್ಲ' ಇತ್ಯಾದಿ ಕೇವಲ (ಶುಷ್ಕ) ತರ್ಕವನ್ನಾಶ್ರಯಿಸಿದ ವಾದಗಳು ಸರ್ವಥಾ ಗ್ರಾಹ್ಯವಲ್ಲ. ಮುಕ್ತರು, ಪ್ರಾಕೃತ (ಶುದ್ಧ ಸತ್ತ್ವದ) ಬಾಹ್ಯದೇಹವನ್ನು ಅಂಗೀಕರಿಸುವರೆಂಬ ಪ್ರಕ್ರಿಯೆಯು ಈ ವಿಧ ತರ್ಕಪ್ರಯೋಗಕ್ಕೆ ಅವಕಾಶವೀಯಬಹುದು. ಆದರೆ, ಲೋಕಾನುಭವವು, ಅಲೌಕಿಕ ಮುಕ್ತಭೋಗ ವಿಷಯದಲ್ಲಿ ಪ್ರಮಾಣವಲ್ಲ. ಶ್ರುತಿಗಳು, ಜ್ಞಾನಾತ್ಮಕ ಸ್ವರೂಪ ದೇಹದಿಂದಲೂ, ಪ್ರಾಕೃತದೇಹ ಸ್ವೀಕಾರದಿಂದಲೂ, ಮುಕ್ತರು ನೋಡುವ, ಕೇಳುವ ಮುಂತಾದ ಎಲ್ಲ ವ್ಯಾಪಾರಗಳನ್ನು ನಿರ್ವಹಿಸುತ್ತಾರೆ; ನಿತ್ಯವೂ ಸುಖವನ್ನೇ ಭೋಗಿಸುತ್ತಾರೆ— ದುಃಖಲೇಶಗಳನ್ನು ಮುಟ್ಟುವುದಿಲ್ಲ, ಎಂದು ಸಾರುತ್ತವೆ. '**ಪರಂ ಅಭಿಪಶ್ಯತಿ, ಅಭಿಶೃಣೋತಿ ಜ್ಯೋತಿಷ್ಯೈವ ರೂಪೇಣ ಚಿತಾವಾ ಅಚಿತಾವಾ ನಿತ್ಯೇನ ವಾ ಅನಿತ್ಯೇನ ವಾ ಅಥಾನಂದೀ ಹ್ಯೇ ವೈಷಭವತಿ। ನಾನಾನಂದಂ ಕಿಂಚಿದುಪಸ್ಪೃಶತಿ**' ಎಂಬ (ಉದ್ದಾಲಕ) ಶ್ರುತಿಯು ಉಕ್ತಾರ್ಥವನ್ನು ನಿರೂಪಿಸುವ ಶ್ರುತಿಗಳಲ್ಲೊಂದಾಗಿದೆ. ಬ್ರಹ್ಮಸೂತ್ರಗಳು ಸಹ ನಾನಾಯುಕ್ತಿಗಳಿಂದ ಈ ನಿರ್ಣಯವನ್ನೇ ಸಾಧಿಸಿವೆ. ಬಾಹ್ಯದೇಹವಿಲ್ಲದಿದ್ದರೆ

ಭೋಗವೇ ಇಲ್ಲ, ಎಂಬುದು ಸರಿಯಲ್ಲ ಏಕೆಂದರೆ, ಸ್ವಪ್ನಾವಸ್ಥೆಯಲ್ಲಿ ಈ (ಜಾಗ್ರದವಸ್ಥೆಯ) ದೇಹವಿಲ್ಲ — ಆದರೂ ಭೋಗವು ಕಂಡಿದೆ; ಆದ್ದರಿಂದ ಮುಕ್ತರಿಗೆ ಬಾಹ್ಯದೇಹವಿಲ್ಲದಿದ್ದರೂ ಚಿದ್ದೇಹದಿಂದಲೇ ಭೋಗವು ಕೂಡುತ್ತದೆಂದು, '**ಓಂ ತನ್ವಭಾವೇ ಸಂಧ್ಯವದುಪಪತ್ತೇಃ ಓಂ**' ಎಂಬ ಸೂತ್ರವು ನಿರ್ಣಯಿಸುತ್ತದೆ. ಹಾಗೆಯೇ, '**ಓಂ ಭಾವೇ ಜಾಗ್ರದ್ವತ್ ಓಂ**' ಎಂಬ ಸೂತ್ರವು, ಜಾಗ್ರದವಸ್ಥೆಯಂತೆ ಬಾಹ್ಯದೇಹವಿದ್ದರೂ ಭೋಗವು ಕೂಡುತ್ತದೆಂದು ನಿರ್ಣಯಿಸಿ ಉಭಯತಾಪಿ (ಬಾಹ್ಯ ದೇಹವಿದ್ದರೂ ಇಲ್ಲದಿದ್ದರೂ) ಭೋಗವು ಸಂಭಾವ್ಯವೆಂದು ಸಮರ್ಥಿಸುತ್ತದೆ. '**ಸ್ವಪ್ನಸ್ಥಾನಾಂ ಯಥಾಭೋಗೋ ವಿನಾ ದೇಹೇನ ಯುಜ್ಯತೇ । ಏವಂ ಮುಕ್ತಾವಪಿ ಭವೇದ್ವಿನಾದೇಹೇನ ಭೋಜನಂ ॥ ಸ್ವೇಚ್ಛಯಾ ವಾ ಶರೀರಾಣಿ ತೇಜೋರೂಪಾಣಿ ಕಾನಿಚಿತ್ । ಸ್ವೀಕೃತ್ಯ ಜಾಗರಿತವದುಭ್ಕ್ತ್ವಾ ತ್ಯಾಗಃ ಕದಾಚನ ॥** ಎಂಬ (ಬ್ರಹ್ಮವೈವರ್ತ) ವಾಕ್ಯವು, 'ಸ್ವಪ್ನಾವಸ್ಥೆಯಲ್ಲಿರುವ (ಸಂಸಾರಿ) ಜೀವನಿಗೆ ಬಾಹ್ಯದೇಹವಿಲ್ಲದಿದ್ದರೂ ಭೋಗವು ಯುಕ್ತವಾಗುವಂತೆ, ಮುಕ್ತರಿಗೂ ಬಾಹ್ಯದೇಹವಿಲ್ಲದೇ ಭೋಗವು ಸಂಭವಿಸುತ್ತದೆ ಮತ್ತು ಮುಕ್ತರು ಸ್ವೇಚ್ಛೆಯಿಂದಲೇ ತೇಜೋರೂಪದ (ಶುದ್ಧ ಸತ್ತ್ವದ) ಬಾಹ್ಯ ದೇಹಗಳನ್ನು ಸ್ವೀಕರಿಸಿ, ಜಾಗ್ರದವಸ್ಥೆಯಲ್ಲಿ ಹೇಗೋ ಹಾಗೆ, ಭೋಗಗಳನ್ನು ಅನುಭವಿಸಿ, ನಂತರ ಆ ದೇಹಗಳನ್ನು ತ್ಯಜಿಸುವುದೂ ಉಂಟು,' ಎಂದು ಹೇಳಿ ಉಕ್ತನಿರ್ಣಯವನ್ನು ಸ್ಪಷ್ಟಗೊಳಿಸುತ್ತದೆ. ಇದೂ ಅಲ್ಲದೆ ಮುಕ್ತರು ಪರಮಾತ್ಮನ ವಿಶೇಷಾನುಗ್ರಹಕ್ಕೆ ಪಾತ್ರರಾದ್ದರಿಂದಲೂ, ಪರಮಾತ್ಮನ ಅಚಿಂತ್ಯಾದ್ಭುತ ಶಕ್ತಿಯ ಪ್ರಭಾವದಿಂದಲೂ, ಮುಕ್ತರ ಅಣು ಮಾತ್ರದ ಸ್ವರೂಪ ದೇಹವು, ಬೆಳೆದು ದೊಡ್ಡದಾಗುತ್ತದೆ.[32] ಹೀಗೆ ವೃದ್ಧಿ ಹೊಂದಿದ ಸ್ವರೂಪ ದೇಹದಿಂದ ಭೋಗಗಳನ್ನನುಭವಿಸುವುದು ಅನುಪಪನ್ನವಲ್ಲ. ಮತ್ತು ಅಲ್ಪ ಪರಿಮಾಣದ ಸ್ವರೂಪದಿಂದಲೇ, ಈಶ್ವರಾಚಿಂತ್ಯ ಶಕ್ತಿಯ ಪ್ರಭಾವದಿಂದ, ನಾನಾ ಪ್ರಕಾರದ ಭೋಗಗಳೂ ಕೂಡುತ್ತವೆ. **ದೇಹ ಪರಿಮಾಣಕ್ಕೂ ಭೋಗಕ್ಕೂ ಯಾವ ಪ್ರಕಾರದ ಸಂಬಂಧವೂ ಇಲ್ಲ**. ಹಾಗಿದ್ದರೆ, ಪರ್ವತಾಕಾರ ದೇಹವುಳ್ಳ ಗಜ, ತಿಮಿಂಗಿಲಾದಿಗಳ ಭೋಗವು ಮಾನವನಿಗೆ ಇಲ್ಲವಾಗಬೇಕಾದೀತು.

---

32. 'ಸ್ವರೂಪಂ ವರ್ಧತೇ ತೇಷಾಂ ಸರ್ವೇಷಾಂ ಪರಿಮಾಣತಃ । (ಸ.ರ.ಮಾ.)

ಪ್ರಾಕೃತ ದೇಹವನ್ನು ಸ್ವೀಕರಿಸಿದಾಗ ಮುಕ್ತರಿಗೆ, ಸುಖ ಭೋಗದೊಂದಿಗೆ ದುಃಖ ಭೋಗವೂ ಆಗಬಹುದೆಂದು ಶಂಕಿಸಲು ಕಾರಣವಿಲ್ಲ. ಮುಕ್ತರು ಶುದ್ಧ ಸತ್ತ್ವಾತ್ಮಕ (ಪ್ರಾಕೃತ) ದೇಹಗಳನ್ನು ತೆಗೆದುಕೊಳ್ಳುವುದು ಮತ್ತು ತ್ಯಜಿಸುವುದು, ಅವರ ಇಚ್ಛಾಮಾತ್ರದಿಂದ ಸಂಭವಿಸುತ್ತದೆ. ತ್ರಿಗುಣಾತ್ಮಕ (ಪ್ರಾಕೃತ) ದೇಹಗಳಂತೆ, ಆ ದೇಹಗಳ ಸ್ವೀಕಾರ-ತ್ಯಾಗಗಳಲ್ಲ; ಲೋಕಾನುಭವಸಿದ್ಧ ಜನನ ಮರಣಗಳಂತಲ್ಲ ಅದರಂತೆ ದುಃಖಜನಕವೂ ಅಲ್ಲ, ದೀಪಜ್ವಾಲೆಯು ಬತ್ತಿ ಮೊದಲಾದ ಪದಾರ್ಥದಲ್ಲಿ ಪ್ರವೇಶಿಸಿ ತೈಲವನ್ನು ಮಾತ್ರ ಸ್ವೀಕರಿಸಿ, ಕಪ್ಪು ಕೊಳೆ ಮೊದಲಾದ್ದನ್ನು ಪರಿತ್ಯಜಿಸುವಂತೆ, ಮುಕ್ತರ ಪ್ರಾಕೃತ ದೇಹ ಪ್ರವೇಶವೆಂದು ತಿಳಿಯಬೇಕು. '**ಓಂ ಪ್ರದೀಪವದಾವೇಶಃ ತಥಾಹಿ ದರ್ಶಯತಿ ಓಂ**' ಎಂಬ ಸೂತ್ರವು ಈ ನಿರ್ಣಯವನ್ನು ಹೇಳುತ್ತದೆ. ''**ಸರ್ವಭಕ್ಷೋಽಪಿ ಯುಕ್ತಾತ್ಮಾ ನಾದತ್ತೇ ಪಾಪಮಗ್ನಿವತ್**'' (ಭಾಗವತ), ಎಂದರೆ, ಬ್ರಹ್ಮಜ್ಞಾನಿಯು ಏನು ಭೋಗಿಸಿದರೂ, ಅಗ್ನಿಯು ಮಲವನ್ನು ತ್ಯಜಿಸಿ ಸಾರವನ್ನೇ ಗ್ರಹಿಸುವಂತೆ, ಪಾಪವನ್ನು (ದುಃಖಾದಿ ದೋಷಗಳನ್ನು) ಎಂದೂ ಸ್ವೀಕರಿಸುವುದಿಲ್ಲ - ಶುಭವನ್ನೇ (ಸುಖಾದಿಗಳನ್ನೇ) ಸ್ವೀಕರಿಸುವನೆಂದು ಹೇಳಲಾಗಿದೆ. ಬ್ರಹ್ಮಜ್ಞಾನಿಯ ಸಾಮರ್ಥ್ಯವೇ ಹೀಗಿರಲು, ಮುಕ್ತರು ಶುದ್ಧ ಸತ್ತ್ವಾತ್ಮಕ ಬಾಹ್ಯದೇಹವನ್ನು ಸ್ವೀಕರಿಸುವುದರಿಂದ, ದುಃಖಾದಿ ದೋಷಸ್ಪರ್ಶವುಳ್ಳವರಾಗುವುದಿಲ್ಲವೆಂದು ಹೇಳಲೇನು! ಹೀಗೆ ಮುಕ್ತರು ಸ್ವೇಚ್ಛೆಯಿಂದ ಸ್ವೀಕರಿಸುವ ಪ್ರಾಕೃತ ದೇಹಗಳಿಂದ ಭೋಗಿಸುವ ಭೋಗ್ಯವಸ್ತುಗಳೆಲ್ಲವೂ ಶುದ್ಧ ಸತ್ತ್ವಾತ್ಮಕವೇ. ಫಲಪುಷ್ಪಾದಿ ಸಕಲ ವಸ್ತುಗಳು ಮುಕ್ತರ ಇಚ್ಛೆಯಂತೆ ತತ್ಕಾಲದಲ್ಲಿ ರೂಪಗೊಂಡು ಭೋಗಾನಂತರ ನಷ್ಟವಾಗುತ್ತವೆ — ಸಾಗರದ ಅಲೆಗಳು ಸಾಗರಜಲದಿಂದ ರೂಪಗೊಂಡು ಜಲದಲ್ಲಿಯೇ ಲಯಹೊಂದುವಂತೆ.[33] (ಅನಂತಾಸನ, ವೈಕುಂಠ, ನಾರಾಯಣಪುರ (ಶ್ವೇತದ್ವೀಪ) ಗಳೆಂಬ ಮುಕ್ತಲೋಕಗಳು ಶುದ್ಧ ಸತ್ತ್ವಾತ್ಮಕ ಶ್ರೀಭಾಗಗಳಲ್ಲಿವೆ. ಈ ಮೂರುಲೋಕಗಳಲ್ಲಿರುವ ಭೂಭಾಗಗಳಲ್ಲಿ

33 ಇದೇ ಪರಿಚ್ಛೇದ 3ನೇ ಪ್ಯಾರಾದ ಟಿಪ್ಪಣಿಯಲ್ಲಿ ಉದಹರಿಸಿರುವ ವಿಷ್ಣುರಹಸ್ಯದ ಶ್ಲೋಕಗಳನ್ನು ಇಲ್ಲಿ ಓದಿಕೊಳ್ಳಬೇಕು. ಈ ಮುಂದಿನ ವಿವರಣೆಯು ಆ ಶ್ಲೋಕಗಳ ತಾತ್ಪರ್ಯವಾಗಿದೆ.

ಸತ್ವಗುಣವೇ ಅಧಿಕವಾಗಿ ರಜಸ್ತಮೋಗುಣಗಳು ಅತ್ಯಲ್ಪವಾಗಿರುತ್ತವೆ. ಅಲ್ಲಿರುವ ದುರ್ಗಾಭಾಗಗಳಲ್ಲಿ ತಮೋಗುಣವು ಅಧಿಕವಾಗಿರುತ್ತದೆ. ಈ ತ್ರಿಧಾಮಗಳ (ವೈಕುಂಠಾದಿ ಲೋಕಗಳ) ಭೂದುರ್ಗಾಭಾಗಗಳು ಪ್ರತಿ ಸೃಷ್ಟಿಯಲ್ಲಿ ಸೃಷ್ಟವಾಗುತ್ತವೆ. ಅಲ್ಲಿ ಅಮುಕ್ತರು ವಾಸಿಸುತ್ತಾರೆ. ಪ್ರತಿ ಪ್ರಳಯದಲ್ಲಿ ಇವು ನಾಶಹೊಂದುತ್ತವೆ. ಶುದ್ಧ ಸತ್ವಾತ್ಮಕ ಶ್ರೀ ಭಾಗವು ಮುಕ್ತ ಜನರಿಂದ ಮಾತ್ರ ಸೇವ್ಯವು. ಅಲ್ಲಿರುವ ಮುಕ್ತ ಜೀವರ ಇಚ್ಛೆಯಂತೆ ಫಲಪುಷ್ಪಾದಿ ಭೋಗ ವಸ್ತುಗಳು ಶುದ್ಧಸತ್ವಗುಣದಿಂದ ನಿರ್ಮಿತವಾಗುತ್ತವೆ — ಅವರ ಇಚ್ಛೆಯು ಪೂರ್ಣಗೊಂಡನಂತರ (ಭೋಗಾನಂತರ) ಅಲ್ಲಿಯೇ (ಸತ್ವಗುಣದಲ್ಲಿಯೇ) ಲಯ ಹೊಂದುತ್ತವೆ — ಜಲಾತ್ಮಕ ತರಂಗಗಳು ಜಲದಿಂದ ಉದ್ಭವಿಸಿ ಜಲದಲ್ಲಿಯೇ ಲಯ ಹೊಂದುವಂತೆ.

ಸ್ವರೂಪ ದೇಹದಿಂದಲೇ, ಈ ಮೊದಲು ಹೇಳಿದಂತೆ, ನಾನಾ ಸುಖ ಭೋಗಗಳು ಸಾಧ್ಯವಾಗುತ್ತಿರಲು, ಶುದ್ಧ ಸತ್ವಾತ್ಮಕ ಜ್ಯೋತಿರ್ಮಯ ಪ್ರಾಕೃತ ದೇಹಗಳನ್ನು ಮುಕ್ತರು ಸ್ವೀಕರಿಸುವುದೇಕೆಂಬ ಸಂಶಯವು ಉಚಿತವಲ್ಲ. ಏಕೆಂದರೆ, ದೇವಾದಿ ಉತ್ತಮ ಮುಕ್ತರು ವಶ್ಯಪ್ರಕೃತಿಗಳು ವಿಚಿತ್ರ ಭೋಗ-ಗಳನ್ನು ಭೋಗಮಾಡುವ ಕೌತುಕವುಳ್ಳವರು - ಅವರು ಪ್ರಾಕೃತ ದೇಹಗಳನ್ನು ಸ್ವೀಕರಿಸಿ ವಿಹರಿಸುತ್ತಾರೆ. ಅವರಿಂದ ಕೆಳಗಿನವರಾದ ಮುಕ್ತರಿಗೆ ಈ ಪ್ರಕಾರದ ಇಚ್ಛೆಯೂ ಹುಟ್ಟುವುದಿಲ್ಲ — ಅವರು ಆ ಪ್ರಕಾರದ ಭೋಗಾಧಿಕಾರಿಗಳೂ ಅಲ್ಲ — ಪ್ರಾಕೃತ ದೇಹವನ್ನು ಸ್ವೀಕರಿಸುವುದೂ ಇಲ್ಲ. ಈ ವಿವರಣೆಯು, **'ತಥೈವಾನಂದ ವೈಚಿತ್ರ್ಯ ಕೃತೇ ಮುಕ್ತಾ ಅಪೀಚ್ಛಯಾ । ಶುದ್ಧ ಸತ್ವಾತ್ಮಕಾನ್ಯೇವ ಜ್ಯೋತೀ ರೂಪಾಣಿ ಕಾನಿಚಿತ್ । ನಿಜದೇಹೈಃ ಸಂಪ್ರವಿಶ್ಯ ರಮಂತೇ ಲೀಲಯಾ ಕ್ವಚಿತ್ ॥** ಇತ್ಯಾದಿ (ಸ.ರ.ಮಾ) ವಾಕ್ಯಗಳಲ್ಲಿ ದೊರೆಯುತ್ತದೆ.

ಮುಕ್ತರಿಗೆ ಹಸಿವು, ತೃಷೆ (ಬಾಯಾರಿಕೆ), ಕಾಮಾದಿಗಳಿದ್ದು ಅವುಗಳ ಪರಿಹಾರದಿಂದ ತೃಪ್ತಿಯನ್ನು ಹೊಂದಲಿಕ್ಕಾಗಿ ನಾನಾ ಭೋಗಗಳನ್ನು ಭೋಗಿಸುವುದಾದರೆ, ಸಂಸಾರಿ ಜೀವರಂತೆ ಅವರೂ ದೋಷಯುಕ್ತರೆಂದು ಪ್ರಾಪ್ತವಾಗುತ್ತದೆಂಬ ವಾದವೂ ಸರಿಯಲ್ಲ. ಭೋಗ್ಯವಸ್ತುಗಳ ಅಭಾವವಿದ್ದಾಗ

ಮಾತ್ರ ಭೋಗೇಚ್ಛೆಯು ದೋಷವಾಗುವುದು. ಯಾವ ಯತ್ನವೂ ಇಲ್ಲದೇ ಸಂಕಲ್ಪ ಮಾತ್ರದಿಂದ ಸಕಲ ಭೋಗ್ಯವಸ್ತುಗಳು ಸಿದ್ಧವಾಗುತ್ತಿದ್ದರೆ, ಕಾಮಾದಿಗಳು (ನಾನಾ ಇಚ್ಛೆಗಳು) ದೋಷಗಳೆನಿಸುವುದಿಲ್ಲ. ಮುಕ್ತರ ಭೋಗೇಚ್ಛೆಯು, ಇಲ್ಲದ ಆನಂದವನ್ನು ಭೋಗದಿಂದ ಹೊಂದಲಿಕ್ಕಾಗಿ ಅಲ್ಲವೇ ಅಲ್ಲ — ಸ್ವರೂಪ-ದಲ್ಲಿಯೇ ಇರುವ ಆನಂದ ವೈಚಿತ್ರ್ಯದ ಅಭಿವ್ಯಕ್ತಿಗಾಗಿ ಮಾತ್ರ. ವಿಚಿತ್ರ ಸುಖವಿಶೇಷಗಳು ಮುಕ್ತ ಸ್ವರೂಪದಲ್ಲಿಯೇ ಇವೆ — ಸ್ವರೂಪಾತ್ಮಕವೇ ಆಗಿವೆ. ಆ ವಿಚಿತ್ರಗಳ ಅಭಿವ್ಯಕ್ತಿಗಾಗಿ ಭೋಗ ವಿಶೇಷಗಳು. ಮುಕ್ತರ ಸುಖವೈಚಿತ್ರ್ಯಗಳು ತಾರತಮ್ಯ ಕ್ರಮವನ್ನನುಸರಿಸಿ ವ್ಯಕ್ತವಾಗುತ್ತವೆ. ಉತ್ತಮರ ಸುಖವೈಚಿತ್ರ್ಯಗಳು ವಿಷಯ ಭೋಗವಿಲ್ಲದೇ ವ್ಯಕ್ತವಾಗುತ್ತವೆ. ವ್ಯಕ್ತವಾಗುವುದೆಂದರೆ ತತ್ಕಾಲದಲ್ಲಿ ಅನುಭವ ಗೋಚರವಾಗುವುದೆಂದರ್ಥ. ಕದಳೀ ಫಲಾದಿ ಭೋಗ್ಯವಸ್ತುಗಳ ಭೋಗದಿಂದ, ಲೋಕದಲ್ಲಿ ದೊರೆಯುವ ಸುಖಕ್ಕಿಂತ ಅಧಿಕ ಸುಖವು 'ಪ್ರಾಕಾಮ್ಯ' ಸಿದ್ಧಿಯುಳ್ಳ ಯೋಗಿಗೆ ಅದೇ ಕದಳೀಫಲ ಭಕ್ಷಣೆಯಿಂದ ದೊರೆಯುತ್ತದೆ. ಈ ಪ್ರಾಕಾಮ್ಯ ಸಿದ್ಧಿಯು ಮುಕ್ತ ಸಾಮಾನ್ಯವು (ಎಲ್ಲ ಮುಕ್ತರಿಗೆ ಇರುತ್ತದೆ). ದೇವಾದಿ ಉತ್ತಮ ಮುಕ್ತರಿಗೆ ವಿಷಯಭೋಗವಿಲ್ಲದೇ (ಕದಳೀ ಫಲವನ್ನು ಭಕ್ಷಿಸದೆ) ಅತಿಶಯವಾದ ತತ್ಸದೃಶ ಆನಂದ ಭೋಗವು ಲಭಿಸುತ್ತದೆ.[34]

ಹೀಗೆ ಮುಕ್ತರು ಸಂಕಲ್ಪಮಾತ್ರದಿಂದ ಸಕಲವನ್ನೂ ಹೊಂದುವ ಸಿದ್ಧಿಯುಳ್ಳವರಾದರೂ, ಪುತ್ರೋತ್ಪಾದನಾದಿ ಜಗದ್ವ್ಯಾಪಾರದಲ್ಲಿ (ಸೃಷ್ಟ್ಯಾದಿ ಕ್ರಿಯೆಗಳಲ್ಲಿ) ತೊಡಗುವುದಿಲ್ಲ. ಅವರಿಗೆ ಆ ಸಂಬಂಧ ವ್ಯಾಪಾರೇಚ್ಛೆಯೇ ಹುಟ್ಟುವುದಿಲ್ಲ. ಮುಕ್ತ ಬ್ರಹ್ಮದೇವನೂ (ಸೃಷ್ಟಿಕಾರ್ಯದಲ್ಲಿಯೇ ತೊಡಗುವ

34 'ವಿಷಯೇಭ್ಯೋಧಿಕ ಸುಖವ್ಯಕ್ತಿಃ ಪ್ರಾಕಾಮ್ಯಮಿಷ್ಯತೇ ॥ ಇಚ್ಛಾ ಮಾತ್ರೇಣಹೋತ್ತ-ಮಾನಾಂ ವೈಚಿತ್ರ್ಯ ವ್ಯಕ್ತಿರಿಷ್ಯತೇ ॥ ಕಾಮಭೋಗಾನ್ವಿವೈವೇಷಾಂ ಕಾಮಿತಾನಂದ ಸಂಭವಃ ॥ (ಸ.ರ.ಮಾ.) ಎಂಬಲ್ಲಿ ಉಕ್ತ ನಿರ್ಣಯದ ನಿರೂಪಣೆಯನ್ನು ಕಾಣಬಹುದು. ಈ ವಾಕ್ಯಗಳ ಭಾವಾರ್ಥ :— 'ಭೋಗ್ಯವಿಷಯಗಳಿಂದ ಸಾಮಾನ್ಯ ವಾಗಿ ದೊರೆಯುವ ಸುಖಕ್ಕಿಂತ ಅಧಿಕ ಸುಖವ್ಯಕ್ತವಾದರೆ, ಅದನ್ನು ಪ್ರಾಕಾಮ್ಯಸಿದ್ಧಿ ಎನ್ನುವರು, ಉತ್ತಮಾಧಿಕಾರಿಗಳ ಸುಖವೈಚಿತ್ರ್ಯವು, ವಿಷಯ-ಭೋಗವಿಲ್ಲದೇ ಇಚ್ಛಾಮಾತ್ರದಿಂದ, ವ್ಯಕ್ತವಾಗುತ್ತದೆ - ಅಪೇಕ್ಷಿತ ಪ್ರಕಾರ ಸುಖವು ದೊರೆಯುತ್ತದೆ.

ಪೂರ್ವಸಂಸ್ಕಾರಯುಕ್ತನೆಂದು ಕಂಡರೂ) ಜಗದ್ವ್ಯಾಪಾರ ವರ್ಜಿತ-ನಾಗಿರುತ್ತಾನೆ, ಮುಕ್ತರು ಸ್ವೋತ್ತಮರೆಲ್ಲರಿಂದಲೂ ನಿಯಮ್ಯರು. ಎಲ್ಲರಿಗೂ ಮುಕ್ತ ಬ್ರಹ್ಮನು ನಿಯಾಮಕನು — ಆತನು ಪರಮಾತ್ಮನಿಂದ ನಿಯಮ್ಯನು. ಹೀಗಿದ್ದರೂ ಸ್ವೋತ್ತಮ — ಸ್ವಾವರರಲ್ಲಿ (ಉಚ್ಚ-ನೀಚಮುಕ್ತರಲ್ಲಿ) ಪರಸ್ಪರ ಮಾತ್ಸರ್ಯಾದಿಗಳು ಎಂದೂ ಉಂಟಾಗುವುದಿಲ್ಲ-ಸರ್ವರೂ ಅನ್ಯೋನ್ಯ ಪ್ರೀತಿಯುಳ್ಳವರಾಗಿರುವರು. ಲೋಕದಲ್ಲಿ ಸಹ ಯೋಗ್ಯಗುರುಶಿಷ್ಯರಲ್ಲಿ ಮಾತ್ಸರ್ಯ ಕೋಪತಾಪಾದಿಗಳು ಕಂಡುಬರುವುದಿಲ್ಲ. ನಿರ್ದೋಷಿಗಳಾದ ಮುಕ್ತರಲ್ಲಿ ಈ ವಿಧ ದೋಷಗಳು ಹೇಗೆ ಉಂಟಾಗಬಹುದು? ಎಲ್ಲರೂ ಶ್ರೀಹರಿಯ ಪ್ರತಿಬಿಂಬರು-ಸ್ವೋತ್ತಮರ ಪ್ರತಿಬಿಂಬರೂ ಅಹುದು. ಮುಕ್ತರ ಆನಂದವು ಅವರವರ ಸ್ವರೂಪಗಳಿಂದ ಅಭಿನ್ನವೇ ಆದರೂ, ಅವರ ಆನಂದವು ಶ್ರೀಹರಿಯ ಮತ್ತು ಸ್ವೋತ್ತಮರ ಆನಂದಗಳಿಂದ ವಿಲಕ್ಷಣವಾಗಿರುವುದು— ಅವುಗಳ ಅಧೀನವೂ ಕಿಂಚಿತ್ ಸದೃಶವೂ ಆಗಿರುತ್ತದೆ. ಸಮುದ್ರದಂತೆ ಅಪಾರವಾದುದು ಶ್ರೀಹರಿಯ ಆನಂದವಾದರೆ ಮುಕ್ತರ ಆನಂದವು ಒಂದು ತುಂತುರು ಹನಿ ಮಾತ್ರ. ಹೀಗಿದ್ದರೂ ಎಲ್ಲ ಮುಕ್ತರ ಆನಂದದಲ್ಲಿ ಸಾಮ್ಯವಿರುವುದೆಂದು ಸರ್ವಥಾ ತಿಳಿಯಬಾರದು. ಮುಕ್ತರ ಆನಂದಗಳು ತಾರತಮ್ಯ ಕ್ರಮದಿಂದ ಉತ್ತರೋತ್ತರ ಅಧಿಕವೂ, ಪ್ರಕಾರ ವಿಶೇಷಗಳಿಂದ ಯುಕ್ತವೂ ಆಗಿರುತ್ತವೆ. ಬ್ರಹ್ಮದೇವನ ಆನಂದವು ಸರ್ವಮುಕ್ತ ಜೀವರ ಆನಂದಕ್ಕಿಂತ ಅತಿಶಯವಾದುದು. ಮುಕ್ತರ ಆನಂದವು ಹೀಗೆ ತಾರತಮ್ಯ-ವುಳ್ಳದ್ದಾದರೂ, ಕೆಳದರ್ಜೆಯ ಒಬ್ಬ ಸಾಮಾನ್ಯ ಮುಕ್ತ ಜೀವನ ಆನಂದವು ಸಹ, ಆತನ ಸಾಂಸಾರಿಕ ಸುಖದಿಂದ ಅತ್ಯಂತ ವಿಲಕ್ಷಣವೂ ಅನಂತಗುಣಾಧಿಕವೂ ಆಗಿರುವುದೆಂದು ನಿರ್ಣಯಿಸಲಾಗಿದೆ.

ಪ್ರತಿಕಲ್ಪದ ಬ್ರಹ್ಮದೇವನೊಡನೆ ಅನೇಕ ಮುಕ್ತಿಯೋಗ್ಯ ಜೀವರು ಮುಕ್ತರಾಗುವರಷ್ಟೇ. ಒಬ್ಬ ಬ್ರಹ್ಮನೊಂದಿಗೆ ಮುಕ್ತರಾದವರೆಲ್ಲರೂ ಪರಸ್ಪರ ಜ್ಞಾತಿಗಳಿದ್ದಂತೆ; ಬೇರೊಬ್ಬ (ಹಿಂದಿನ ಅಥವಾ ಮುಂದಿನ) ಬ್ರಹ್ಮನೊಡನೆ ಮುಕ್ತರಾಗುವವರು, ಇವರಿಗೆ ಅಜ್ಞಾತಿಗಳು. ಹೀಗೆ ವ್ಯವಹಾರಮಾತ್ರ — ಜ್ಞಾತಿ ಅಜ್ಞಾತಿಗಳೆಂಬ ಯಾವ ಭೇದವೂ ಇಲ್ಲದೇ ಸರ್ವಮುಕ್ತರು ಪರಸ್ಪರ

ಪ್ರೀತಿಯುಕ್ತರಾಗಿ, ಯಾವ ರೀತಿಯ ವಿರೋಧಾದಿಗಳಿಲ್ಲದೇ ಕ್ರೀಡಾದಿಗಳಲ್ಲಿ ಆಸಕ್ತರಾಗಿ ವಿಹರಿಸುತ್ತಾರೆ - ಪರಮಾನಂದದಿಂದ ಕಮಲಾನಾಥನನ್ನು ಸೇವಿಸುತ್ತಾರೆ - ಗುಣಗಳನ್ನು ಕೀರ್ತಿಸುತ್ತಾರೆ. ನೃತ್ಯಗಾನಾದಿಗಳಲ್ಲಿ ತೊಡಗಿ ಆನಂದಿಸುತ್ತಾರೆ.

ತ್ರಿಧಾಮಗಳ ಶ್ರೀ ಭಾಗಗಳಲ್ಲಿರುವ ಮುಕ್ತರು, ಅಲ್ಲಿ ವಿರಾಜಿಸುವ ಲಕ್ಷ್ಮೀಸ್ವರೂಪಗಳೇ ಆದ ರಮಾಧವನ ಅತ್ಯದ್ಭುತ ಭವನಗಳನ್ನು ನೋಡಿ ಆನಂದೋದ್ರೇಕವನ್ನು ಹೊಂದುತ್ತಾರೆ. ಆ ದಿವ್ಯಪ್ರಾಸಾದಗಳು ಲಕ್ಷ್ಮ್ಯಾತ್ಮಕ ಸುವರ್ಣ ರತ್ನಗಳಿಂದ ನಿರ್ಮಿತವಾದವುಗಳು — ಅನಂತಸೂರ್ಯ ತೇಜೋ-ಯುಕ್ತವಾದುವು. ಆ ಭವನಗಳು ಒಂದೊಂದೂ ವಿಶಾಲವಾದ ವಿಚಿತ್ರಶಾಲೆಗಳಿಂದ — ಸಭೆಗಳಿಂದ ಕೂಡಿವೆ. ಕವಿಗಳೂ — ಆದಿಕವಿಯಾದ ಬ್ರಹ್ಮದೇವನೂ ಸಹ ಉತ್ಪ್ರೇಕ್ಷಿಸಿ ವರ್ಣಿಸಲಾಗದ ವೈಭವದಿಂದ ಕೂಡಿ ವಿರಾಜಿಸುತ್ತವೆ. ಅಲ್ಲಿ ಶೇಷಶಯನ ಶ್ರೀಹರಿಯು ರಮಾಸಮೇತನಾಗಿ (ಪೂರ್ಣಾನಂದ ಸ್ವರೂಪನಾಗಿ) ಯಥೇಚ್ಛವಾಗಿ ವಿಹರಿಸುತ್ತಾನೆ. ಆ ದಿವ್ಯ ಭವನಗಳಲ್ಲಿ ಜಗನ್ಮಾತೆಯಾದ ಶ್ರೀಮಹಾಲಕ್ಷ್ಮೀ ದೇವಿಯು, ಗೃಹಕರ್ಮಗಳನ್ನು ನಿರ್ವಹಿಸುವ ಭೃತ್ಯವರ್ಗದ ಕೊರತೆಯೇ ಇಲ್ಲದಿದ್ದರೂ, ತಾನೇ ಎಲ್ಲ ಗೃಹಕರ್ಮಗಳನ್ನು ಮಾಡುತ್ತಾಳೆ. ಶ್ರೀಹರಿಯು ತನ್ನ ಅಸಂಖ್ಯ ವಿಲಕ್ಷಣ ಇಂದ್ರಿಯಗಳಿಂದ (ನಮ್ಮಂತೆ ಶ್ರೀಹರಿಯು ಪಂಚ ಅಥವಾ ದಶೇಂದ್ರಿಯಗಳನ್ನು ಮಾತ್ರವುಳ್ಳವನಲ್ಲ) ಭೋಗ್ಯವಾದ ಅನಂತ ವಿವಿಧ ಶುಭ ವಿಷಯಗಳನ್ನು ಭೋಗಿಸುತ್ತಾನೆ. ಶ್ರೀಹರಿಭೋಗ್ಯ ಸರ್ವವಸ್ತು ರೂಪದಿಂದ ಲಕ್ಷ್ಮೀದೇವಿಯು ತಾನೆ ಇದ್ದು, ಸ್ವಯಂ ಸದಾ ಪರಿಪೂರ್ಣನಾದ ತನ್ನ ಪತಿಯನ್ನು ಸೇವಿಸುತ್ತಾಳೆ. ಶ್ರೀಹರಿಪುರದ ಸುತ್ತಲೂ ಮುಕ್ತ ಬ್ರಹ್ಮಾದಿ ದೇವತೆಗಳ ವಿಚಿತ್ರ ಅದ್ಭುತ ಪ್ರಾಸಾದಗಳು ಬಹು ಸೂರ್ಯಕಾಂತಿಯುಕ್ತವಾಗಿ ಶೋಭಿಸುತ್ತವೆ. ಅನಾದಿಕಾಲದಿಂದ ಪ್ರತಿಕಲ್ಪದಲ್ಲಿ ಮುಕ್ತರಾದ ಅಸಂಖ್ಯ ಮುಕ್ತ ಬ್ರಹ್ಮಾದಿಗಳು ಅಲ್ಲಿ ವಾಸಿಸುತ್ತಾರೆ ಮುಂದೆ ಅನಂತ ಬ್ರಹ್ಮಾದಿ ದೇವತೆಗಳು ಮುಕ್ತರಾಗಿ ಅಲ್ಲಿಗೆ ಬರುತ್ತಾರೆ. ಅಲ್ಲಿರುವ ಒಂದೊಂದು ಭವನವೂ, ವಿಶಾಲ ಸಭಾಗಳಿಂದಲೂ ಉಪವನ-ಆರಾಮಾದಿಗಳಿಂದಲೂ ಕೂಡಿ ಅತಿ ವಿಶಾಲ ಪ್ರದೇಶವನ್ನು ಆಕ್ರಮಿಸಿಕೊಂಡಿರುತ್ತದೆ. ಹೀಗಿದ್ದರೂ ಅಲ್ಲಿ ಸ್ಥಳ ಸಂಕೋಚವಾಗಲಿ

ಪ್ರಜಾಸಾಂದ್ರತೆಯಾಗಲಿ ಎಂದೂ ಇಲ್ಲದೇ, ರಮಣೀಯವಾಗಿ, ಈ ನಗರಗಳು ವಿರಾಜಿಸುತ್ತವೆಂಬುದನ್ನು ಭಾವಿಸಿದರೆ, ವೈಕುಂಠಾದಿ ತ್ರಿಧಾಮಗಳ ಅದ್ಭುತ ಮಹಾತ್ಮ್ಯವು ಸ್ಪಷ್ಟವಾಗುತ್ತದೆ. ಮುಕ್ತಲೋಕಧಾರಕಳೂ ನಿಯಾಮಕಳೂ ಆದ ಶ್ರೀ ಮಹಾಲಕ್ಷ್ಮೀದೇವಿಯ ಶಕ್ತಿಯು ಅಚಿಂತ್ಯವಾದ್ದರಿಂದ, ಅಸಂಭಾವ್ಯ-ಗಳೆಂದು ತೋರುವ ಪರಿಸ್ಥಿತಿಗಳೆಲ್ಲವೂ ಉಪಪನ್ನವಾಗುತ್ತವೆ. ಅನಂತ ವಿಭವಗಳಿಂದ ಯುಕ್ತವಾದ ಈ ಮುಕ್ತಲೋಕಗಳಲ್ಲಿ ಮುಕ್ತರು ಅನುಭವಿಸುವ ಭೋಗಗಳು ಅಸದೃಶವಾದವುಗಳು - ವಿಲಕ್ಷಣವಾದವುಗಳು — ಮಾನವ ಕಲ್ಪನೆಯನ್ನು ಮೀರಿದವುಗಳು.

ಲಕ್ಷ್ಮೀ ಸ್ವರೂಪಗಳೇ ಆದ ವಸ್ತುಗಳ ಭೋಗವು ಮುಕ್ತಜೀವರಿಗೆ ಹೇಗೆ ಸಂಭವಿಸುವುದೆಂಬ ಸಂಶಯಕ್ಕೆ ಅವಕಾಶವಿಲ್ಲ. ಮಾತೃಸ್ತನ ಸ್ಪರ್ಶ ಪೂರ್ವಕ ಸ್ತನಪಾನಾದಿಗಳು, ತಾಯಿಯ ತೊಡೆಯಲ್ಲಿರುವ ಶಿಶುವಿಗೆ ಹೇಗೆ ಯಾವ ದೃಷ್ಟಿಯಿಂದಲೂ ಅನುಚಿತವೆನಿಸುವುದಿಲ್ಲವೋ ಹಾಗೆ ಜಗನ್ಮಾತೆಯಾದ ಮಹಾಲಕ್ಷ್ಮೀದೇವಿಯು ಮುಕ್ತರಕ್ಷಕಳೂ ಮುಖ್ಯ ಜನನಿಯೂ ಆಗಿರುವುದ-ರಿಂದ, ಮುಕ್ತರ ಭೋಗವಿಷಯದಲ್ಲಿ ಯಾವ ಸಂಶಯವೂ ಸಲ್ಲುವುದಿಲ್ಲ. ಜನನಿಯ ಮಡಿಲಲ್ಲಿ ಮಲಗಿ ಮುಕ್ತರು ಸ್ವಯೋಗ್ಯ ವಸ್ತುಗಳನ್ನೇ ಭೋಗಿಸುತ್ತಾರೆ. ಲಕ್ಷ್ಮ್ಯಾತ್ಮಕ ವಸ್ತುಗಳೊಂದಿಗೆ ಶುದ್ಧ ಸತ್ತ್ವಾತ್ಮಕ ಜಲ, ಪಾಯಸ, ಭಕ್ಷ್ಯಾದಿ ಭೋಗ್ಯ ವಸ್ತುಗಳು ಮಿಶ್ರವಾಗಿರುತ್ತವೆ. ಮುಕ್ತರು ಸ್ವಯೋಗ್ಯತೆಯನ್ನನುಸರಿಸಿ, ಇವುಗಳನ್ನು ಭೋಗಿಸುತ್ತಾರೆಂದು ತಿಳಿದರೆ ಯಾವ ರೀತಿಯ ಸಂಶಯಕ್ಕೂ ಅವಕಾಶವಿಲ್ಲ.[35]

---

35 'ಅರಣ್ಯಾದಿ ಜಲೇಷು ರಮಾಸ್ವರೂಪ ಭೂತೇಷು ಮುಕ್ತ ಭೋಗಾರ್ಥಂ ಶುದ್ಧ ಸತ್ವರೂಪ ಜಲ ಸಂಮೇಲನಮಸ್ತಿ । ತದ್ಭೋಗ ಏವ ಮುಕ್ತಾನಾಂ ...' ಇತ್ಯಾದಿ (ಸ.ರ.ಮಾ.) ವಾಕ್ಯಗಳು, 'ಅರ ಮತ್ತು ಣ್ಯ ಎಂಬ ಅಮೃತ ಸಮುದ್ರಗಳು (ಭೂ ದುರ್ಗಾಭಾಗಗಳನ್ನು ಶ್ರೀ ಭಾಗದಿಂದ ಬೇರ್ಪಡಿಸುವ ಈ ಜಲಾಶಯಗಳು) ಶ್ರೀಹರಿ ಭೋಗಾರ್ಥ ಲಕ್ಷ್ಮ್ಯಾತ್ಮಕ ಜಲವುಳ್ಳವುಗಳಾದರೂ, ಆ ಜಲದೊಂದಿಗೆ ಮುಕ್ತರ ಭೋಗಕ್ಕಾಗಿ ಶುದ್ಧ ಸತ್ವದ ಜಲವೂ ಮಿಶ್ರವಾಗಿರುತ್ತದೆ - ಮುಕ್ತರು ಭೋಗಿಸುವುದು ಈ ಜಲವನ್ನೇ' ಎಂದು ಹೇಳುತ್ತವೆ. ಈ ನಿರೂಪಣೆಯು ಮುಕ್ತರಿಂದ ಭೋಗ್ಯವಾದ ಭೋಗ್ಯವಸ್ತುಗಳ ಸ್ವರೂಪ ವಿಷಯಕರ ಸಂಶಯವನ್ನು ಪರಿಹರಿಸುತ್ತದೆ.

ಮುಕ್ತಲೋಕಗಳ ಶ್ರೀ ಭಾಗಗಳಲ್ಲಿ ನಾನಾ ಭೋಗಗಳನ್ನು ಅನುಭವಿಸುವ ಉತ್ತಮಾಧಿಕಾರಿಗಳೊಂದಿಗೆ, ಅಪ್ರತೀಕಾಲಂಬನರ ವರ್ಗಕ್ಕೆ ಸೇರಿದ ಕೆಲವು ವಿಶಿಷ್ಟರಾಜರು, ಋಷಿಗಳು, ಗಂಧರ್ವರು, ಅಪ್ಸರಾಸ್ತ್ರೀಯರೇ ಮೊದಲಾದವರು ಇರುವುದುಂಟು. ಅಲ್ಲಿ ವಿಹರಿಸುವ ಗರುಡಶೇಷಾದಿ ಉತ್ತಮರ ಭೃತ್ಯರಾದ ಗಂಧರ್ವ-ಅಪ್ಸರಾದಿಗಳು ಇದ್ದೇ ಇರುತ್ತಾರೆ. ಆದರೆ ಅವರ ಭೋಗಗಳೇ ಪ್ರತ್ಯೇಕವಾಗಿರುತ್ತವೆಂಬುದನ್ನು ಲೋಕಾನುಭವದಿಂದಲೂ ಗ್ರಹಿಸಬಹುದು. ಉತ್ತಮರ ಸ್ಥಾನದಲ್ಲಿದ್ದ ಮಾತ್ರಕ್ಕೆ ಉತ್ತಮರ ಭೋಗಗಳೂ ಇತರರಿಗೆ ಇರುತ್ತವೆಂಬ ನಿಯಮವಿಲ್ಲಷ್ಟೆ. ಮುಕ್ತಶೇಷಾದಿಗಳಕಿಂತ ಅತಿಶಯವಾದ ಸುಖಭೋಗಗಳಿಂದ ಆನಂದಿಸುವ ಮುಕ್ತಬ್ರಹ್ಮರು, ಗೀರ್ವಾಣ ಗಂಧರ್ವಾದಿ ಸೇವ್ಯ ಪಾದಪದ್ಮಗಳುಳ್ಳವರಾಗಿ, ವಾಣ್ಯಾದಿ ದೇವತೆಗಳಿಂದ ಸ್ತುತಿಸಲ್ಪಡುತ್ತ, ಮುಕ್ತಾಧಿಪರೆನಿಸಿ ವಿರಾಜಿಸುತ್ತಿರುವರು. ಸರ್ವಮುಕ್ತರೂ ನಿತ್ಯತರುಣರು. ಮಹಾ ಸ್ಫುರದ್ರೂಪಿಗಳು. ದೇವತೆಗಳೆಲ್ಲರೂ (ಸ್ವರೂಪದಿಂದಲೇ) ಗೃಹಸ್ಥ-ಜೀವರು – ತಮ್ಮ ನಿಯತ ಪತ್ನಿಯರಿಂದ ಕೂಡಿಯೇ ಮುಕ್ತರಾಗುತ್ತಾರೆ. ಮುಕ್ತ ದಂಪತಿಗಳಲ್ಲಿ ಪರಸ್ಪರ ವಿರಹಾದಿ ದುಃಖಕಾರಣಗಳಿಗೆ ಅವಕಾಶವೇ ಇಲ್ಲ. ಇವರ ವಿಚಿತ್ರ ಭೋಗಗಳು ಸಂಸಾರಿ ಜೀವರ ಕಲ್ಪನೆಗೆ ಸಿಲುಕವು. ಶ್ರೀಹರಿಯ ಅನುಗ್ರಹದಿಂದ ಎಲ್ಲ ಮುಕ್ತರು ನಾನಾ ಪ್ರಕಾರದ ವೈಭವಯುಕ್ತ ಭೋಗಗಳನ್ನು ಅನಂತಕಾಲದಲ್ಲಿ ಸಹ (ಸರ್ವದಾ) ಅನುಭವಿಸುತ್ತಾರೆ. ಹೀಗಿರುವ ಮಹಾ ವೈಭವಯುಕ್ತ ನಿತ್ಯಾ ನಂದಸ್ಥಿತಿಯು (ಮೋಕ್ಷವು) ತತ್ತ್ವವಾದಿಗಳ ಸಿದ್ಧಾಂತ ಜ್ಞಾನನಿಶ್ಚಯದಿಂದ ದೊರೆಯುವ ಮಹಾ ಫಲವಾಗಿದೆ. ಇದೇ ಪರಮ ಪುರುಷಾರ್ಥವು.[36] ಇದಕ್ಕಿಂತ ಅಧಿಕವಾದ ಮತ್ತೊಂದು ಲಾಭವಿಲ್ಲ.

---

36. 'ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ ಮನೋವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ । ಸುರಾದ್ಯಾನರಾಂತಾ ಮುಕುಂದ ಪ್ರಸಾದಾದಿಮಂ ಮೋಕ್ಷಮೇತೇ ಭಜಂತೇ ಸದೇತಿ ।। — (ಮಹಾನಂದ ಸ್ಥಿತಿರೂಪದ ಮೋಕ್ಷವನ್ನು ದೊರಕಿಸುವ ಶಾಸ್ತ್ರವಾದ) ಶ್ರೀಮದಾನಂದತೀರ್ಥ ಭಗವತ್ಪಾದರ ಭಾಷ್ಯಭಾವವನ್ನು, ಮನುಷ್ಯೋತ್ತಮರಿಂದ ಆರಂಭಿಸಿ ದೇವತೆಗಳವರೆಗಿನ ಮುಕ್ತಿಯೋಗ್ಯ ಜೀವರು ಯಾರಾಗಲಿ, ಅಧ್ಯಯನ ಪ್ರವಚನಗಳಿಂದ (ಅರ್ಥಾನುಸಂಧಾನ ಮತ್ತು

ಇದಕ್ಕಾಗಿಯೇ ಸರ್ವರೂ ಸದಾ ಯತ್ನಿಸಬೇಕು. ಅನ್ಯಲೌಕಿಕ ಫಲೋದ್ದೇಶ ಸಾಧನೆಗಾಗಿ ದುಡಿದರೆ, ಜೀವಿತವನ್ನು ವ್ಯರ್ಥಗೊಳಿಸಿದಂತೆಯೇ ಸರಿ.

**'ಓಂ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ಓಂ'** ಎಂಬ ವೇದಾಂತ ಸೂತ್ರಗಳ ಕಡೆಯ ಸೂತ್ರವು, **'ನ ಚ ಪುನರಾವರ್ತತೇ'** — ಎಂಬ (ಛಾಂದೋಗ್ಯ) ಮೊದಲಾದ ಶ್ರುತಿಗಳು ಹೇಳುವಂತೆ, ಮುಕ್ತನಾದವನು ಎಂದೂ ಸಂಸಾರಕ್ಕೆ ಹಿಂತಿರುಗಿ ಬರುವುದಿಲ್ಲವೆಂಬುದನ್ನೇ ಸತ್ಯವೆಂದು ನಿರ್ಣಯಿಸಿ ನಿರೂಪಿಸುತ್ತದೆ. ಕಮಲಾನಾಥನ ದಿವ್ಯ ಸುಂದರ ಮೂರ್ತಿಯ ನಿತ್ಯಸಂದರ್ಶನದಿಂದಲೂ, ಧ್ಯಾನದಿಂದಲೂ ಮತ್ತು ಚಿತ್ರ ವಿಚಿತ್ರ ಭೋಗ-ಗಳಿಂದಲೂ, ಶ್ರಮಾದಿ ದುಃಖ ಲೇಶವೂ ಇಲ್ಲದೇ, ನಿತ್ಯಾನಂದ ಪೂರ್ಣರಾಗಿ ಕ್ರೀಡಿಸುವ ಮುಕ್ತರ ಅವಸ್ಥಾ ವಿಶೇಷವು ವರ್ಣನಾತೀತವಾದುದು. ಮಹಾ ಪುಣ್ಯವಿಶೇಷದಿಂದ, ಪುಣ್ಯತಮವಾದ ಈ ಭಾರತ ಭೂಮಿಯಲ್ಲಿ, ಮನುಷ್ಯರಾಗಿ ಹುಟ್ಟಿರುವ ಸರ್ವರೂ, ಮೋಕ್ಷ ಲಾಭವನ್ನೇ ಸದಾ ಮುಖ್ಯ ಗುರಿಯನ್ನಾಗಿಟ್ಟುಕೊಂಡು, ಆ ದಿಕ್ಕಿನಲ್ಲಿ ಮುಂದರಿಯಲು ಸರ್ವಪ್ರಯತ್ನ-ವನ್ನೂ ಕೈಗೊಳ್ಳಬೇಕು. ಈ ಸದ್ಬುದ್ಧಿಯನ್ನು ಸರ್ವ ಸುಜನರಿಗೆ ಶ್ರೀ ಹರಿ-ವಾಯುಗಳು ಕರುಣಿಸಲೆಂದು ಪ್ರಾರ್ಥಿಸಿ, ಈ ಸಂದೇಶ ರತ್ನಮಾಲೆಯನ್ನು ನಿರ್ವ್ಯಾಜ ಭಕ್ತಿಯಿಂದ, ಶ್ರೀಹರಿಪಾದಗಳಲ್ಲಿ ಅರ್ಪಿಸಿ, ದೃಢತರ ಭಕ್ತಿಯನ್ನು ದಯಪಾಲಿಸೆಂದು ಶ್ರೀಹರಿಯನ್ನೇ ಶರಣುಹೊಂದಿ ಯಾಚಿಸುತ್ತೇನೆ.

**'ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ'**
**॥ ಶ್ರೀ ಕೃಷ್ಣಾರ್ಪಣಮಸ್ತು ॥**
**ಓಂ ತತ್ಸತ್**

---

ವಾಗಿಂದ್ರಿಯಗಳಿಂದ) ಸ್ವಶಕ್ತ್ಯಾನುಸಾರ, ಆವರ್ತನೆ ಮಾಡುವರೋ (ಜ್ಞಾನನಿಶ್ಚಯ-ವನ್ನು ಪಡೆಯುವರೋ) ಅವರು, ಮೋಕ್ಷಪ್ರದನಾದ ಶ್ರೀಹರಿಯ ಪ್ರಸಾದದಿಂದ, ತಪ್ಪದೇ (ನಿಯಮೇನ) ಈ (ಇಲ್ಲಿಯವರೆಗೆ ವರ್ಣಿಸಿದ) ಮೋಕ್ಷವನ್ನು ಹೊಂದುತ್ತಾರೆಂದು ಶ್ರೀ ಸುಮಧ್ವ ವಿಜಯದಲ್ಲಿ, ತತ್ತ್ವವಾದಿಗಳ ಸಿದ್ಧಾಂತ ಜ್ಞಾನ ನಿಶ್ಚಯದ ಫಲವು ವರ್ಣಿತವಾಗಿದೆ.

# ಶ್ರೀಸರ್ವಜ್ಞಾಚಾರ್ಯ ಸೇವಾ ಸಂಘ

ದಾವಣಗೆರೆ-577002 ದೂರವಾಣಿ: 08192-230340

## ಸಂಘದಿಂದ ಪ್ರಕಾಶಿತವಾಗಿ ಲಭ್ಯವಿರುವ ಗ್ರಂಥಗಳ ಪಟ್ಟಿ

| | | |
|---|---|---|
| 1. | ಶ್ರೀ ಸತ್ತತ್ವರತ್ನಮಾಲಾ (ಮರುಪ್ರಕಟಣೆ: 2018) | 300.00 |
| 2. | ಶ್ರೀವಿಷ್ಣುರಹಸ್ಯ (ಮರುಪ್ರಕಟಣೆ : 2015) | 550.00 |
| 3. | ಶ್ರೀಮದ್ಭಾಗವತ ಸಾರೋದ್ಧಾರ (ಮರುಪ್ರಕಟಣೆ: 2017) | 80.00 |
| 4. | ಪ್ರಾತಃಸಂಕಲ್ಪಗದ್ಯಮ್ (ಮರುಪ್ರಕಟಣೆ : 2016) | 80.00 |
| 5. | ಸಂದೇಶರತ್ನಮಾಲಾ (ಮರುಪ್ರಕಟಣೆ : 2019) | 280.00 |
| 6. | ಶ್ರೀ ಮುಕುಂದ ಗುಣಮಾಲಾ | 20.00 |
| 7. | ಶ್ರೀಮತ್ ಭಾಗವತ ಪ್ರದೀಪಿತ ಸೂತ್ರಾರ್ಥಸಾರ (ಪ್ರಕಟಣೆ : 2012) | 400.00 |
| 8. | ಶ್ರೀ ಕೃಷ್ಣಾರ್ಜುನ ಸಂವಾದ ('ಗೀತಾ ವಿವೃತ್ತಿ'ಯ ಅನುವಾದ) | 140.00 |
| 9. | ತತ್ವಸುವ್ವಾಲಿ-ವ್ಯಾಖ್ಯಾನ ಸಹಿತ (ಮರುಪ್ರಕಟಣೆ : 2016) | 140.00 |
| 10. | ಲಕ್ಷ್ಮೀಶೋಭನ ಹಾಡು-ವ್ಯಾಖ್ಯಾನ ಸಹಿತ (ಮರುಪ್ರಕಟಣೆ : 2016) | 50.00 |
| 11. | ವೈಕುಂಠವರ್ಣನೆ - ವ್ಯಾಖ್ಯಾನ ಸಹಿತ (ಮರುಪ್ರಕಟಣೆ : 2016) | 180.00 |
| 12. | ಉಪನ್ಯಾಸ ಭಾರತೀ (ಪ್ರಕಟಣೆ : 2013)<br>(ಸುಮಧ್ವವಿಜಯದ 15ನೇ ಸರ್ಗದಲ್ಲಿರುವ ಹಲವು ಮತಗಳ ಚಿಂತನೆ) | 60.00 |
| 13. | ಶ್ರೀಮದೈತರೇಯೋಪನಿಷತ್ (ಭಾಷ್ಯಾರ್ಥ ಸಂಗ್ರಹ)<br>(ಪ್ರಕಟಣೆ : ನವೆಂಬರ್ 2013) | 110.00 |
| 14. | ಕೋಲುಹಾಡು ಮತ್ತು ಸಂಕೀರ್ಣ ಕೀರ್ತನೆಗಳು<br>(ಪ್ರಕಟಣೆ :ಜೂನ್ 2014) ವಿವರಣೆ ಸಹಿತ | 75.00 |
| 15. | ಗುಂಡಕ್ರಿಯೆ, ಹರಿಸರ್ವೋತ್ತಮಸಾರ ಮತ್ತು ಸ್ವಪ್ನಪದ<br>(ಪ್ರಕಟಣೆ : ನವೆಂಬರ್ 2014) ವಿವರಣೆ ಸಹಿತ | 135.00 |
| 16. | ಸಪ್ತ ಸುಳಾದಿಗಳು ಮತ್ತು ಶ್ರೀ ಹರಿಭಜನ ಪದ್ಧತಿ<br>(ಪ್ರಕಟಣೆ : ಏಪ್ರಿಲ್ 2015) ವಿವರಣೆ ಸಹಿತ | 70.00 |
| 17. | ಶ್ರೀಮದ್ ಬ್ರಹ್ಮ ಸೂತ್ರಾಣುಭಾಷ್ಯಮ್ | 15.00 |
| 18. | ಮಾಧ್ವಭೂಷಣ ಶ್ರೀ ಬಿ. ಭೀಮರಾಯರು ಮತ್ತು<br>ಅವರ ಗ್ರಂಥಗಳ ಸಂಕ್ಷಿಪ್ತ ಪರಿಚಯ | 10.00 |

ವೇದಗಳ ನಿತ್ಯತ್ವ ಮತ್ತು ಅಪೌರುಷೇಯತ್ವ ಸಮರ್ಥನೆಯನ್ನು ಚಾರಿತ್ರಿಕ, ಶಾಸ್ತ್ರೀಯ ಹಾಗೂ ವೈಜ್ಞಾನಿಕ ದೃಷ್ಟಿಕೋಣಗಳಿಂದ ವಿಮರ್ಶಿಸಿ, ಸಾಧಿಸಲ್ಪಟ್ಟಿದೆ... ನಾನಾ ಸಂಶಯಗಳ ಪರಿಹಾರ ಮಾರ್ಗವನ್ನು ಮನಮುಟ್ಟುವಂತೆ ಲೇಖಕರು ವಿವರಿಸಿದ್ದಾರೆ.

**ಕೀರ್ತಿಶೇಷ ಪೂಜ್ಯ ಮಾಹುಲಿ ಗೋಪಾಲಾಚಾರ್ಯ**

(ಪ್ರಥಮ ಪ್ರಕಟಣೆಯ ಮುನ್ನುಡಿಯಲ್ಲಿ)

.........ಶ್ರೀಮದಾಚಾರ್ಯರ ತತ್ತ್ವವಾದವನ್ನು ಮನಮುಟ್ಟುವಂತೆ ತಲುಪಿಸಲು ಶ್ರೀಯುತ ಬಿ.ಭೀಮರಾಯರ ಗ್ರಂಥಗಳು ಸಹಾಯಕವಾಗಿವೆ, .....ನಾಸ್ತಿಕ್ಯನಿರಾಸ ಮುಂತಾದ ಗ್ರಂಥಗಳು..... ತತ್ತ್ವಪ್ರಚಾರದ ಕುಡಿಗಳು

**ಪಂ|| ವಿದ್ಯಾಸಿಂಹಾಚಾರ್ಯ ಮಾಹುಲೀ**

(ಕುಲಪತಿ, ಶ್ರೀವಾಣಿವಿಹಾರ ವಿದ್ಯಾಮಂದಿರ, ಮುಂಬೈ)

ವಿಚಾರವಾದಿಗಳು ಎಂಬ ಗುಂಪು ಚಾರ್ವಾಕರಂತೆ..... ಚಾರ್ವಾಕರು ಪ್ರತ್ಯಕ್ಷವೊಂದೇ ಪ್ರಮಾಣವೆನ್ನುತ್ತಾರೆ; ವಿಚಾರವಾದಿಗಳು ವಿಜ್ಞಾನ ಹೇಳುವುದಷ್ಟೇ ಸತ್ಯವೆನ್ನುತ್ತಾರೆ...... ಧರ್ಮಾದಿಗಳನ್ನು ವಿರೋಧಿಸುತ್ತಾರೆ. .....ಆಸ್ತಿಕರಾಗಿ ಜೀವನದಲ್ಲಿ ಸಾರ್ಥಕ್ಯ ಪಡೆಯುವಂತೆ ಶ್ರೀಮದಾಚಾರ್ಯರು ಆದೇಶ ನೀಡಿದ್ದಾರೆ. ಈ ತತ್ತ್ವಗಳ ಸಾರ, ಪ್ರಮಾಣಗಳ ಮತ್ತು ವೇದಪ್ರಾಮಾಣ್ಯದ ಅರಿವು ಇತ್ಯಾದಿ ಅಗತ್ಯವೆನಿಸುವ ಮುಖ್ಯ ವಿವರಗಳು ಈ ಕೃತಿಯಲ್ಲಿ ಒದಗಿಸಲ್ಪಟ್ಟಿದೆ.... 'ನಾಸ್ತಿಕ್ಯನಿರಾಸ' ಹಾಗೂ ಉಳಿದ ಭಾಗಗಳು ತುಂಬಾ ಸಾರ್ಥಕವಾದ ರಚನೆಗಳಾಗಿವೆ. ಪ್ರಶಂಶನೀಯವಾಗಿದೆ.

**ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯ**

ನಿರ್ದೇಶಕರು, ವ್ಯಾಸಮಧ್ವ ಪ್ರತಿಷ್ಠಾನ



ಮಾನವ ಎಂದರೆ ಆಲೋಚನಾ ಸಂಪತ್ತು ಉಳ್ಳವ. ಭೌತಿಕ ವಸ್ತುಗಳಾದ ಮೌಲ್ಯವುಳ್ಳ ರತ್ನ, ಮುತ್ತು, ಹವಳ ಇತ್ಯಾದಿ ಹರಳುಗಳು ಸಂಪತ್ತನ್ನು ಸೂಚಿಸುತ್ತವೆ. ಸಾರ್ಥಕ ಬದುಕಿಗೆ ಅವಶ್ಯವಾಗಿರುವ ಬೌದ್ಧಿಕ ರತ್ನಗಳನ್ನು ಖ್ಯಾತ ಬರಹಗಾರರಾದ ದಾವಣಗೆರೆ ಭೀಮರಾವ್‌ರವರು ವಿಶಿಷ್ಟ ಕ್ರಮದಲ್ಲಿ ಒಂದು ಹಾರದಂತೆ ಪೋಣಿಸಿ ಜಿಜ್ಞಾಸುಗಳು ಪಠಿಸುವ ಸ್ತೋತ್ರಕ್ಕೆ ಆಶ್ರಯವಾದ ಕಂಠಕ್ಕೆ ಅಲಂಕಾರ ಪ್ರಾಯವಾಗುವಂತೆ ತಯಾರಿಸಿ ಕೊಟ್ಟಿದ್ದಾರೆ.

ವಿಶೇಷವಾಗಿ ಇಂದಿನ ಪೀಳಿಗೆಯವರು ವಿಜ್ಞಾನ ವೃತ್ತದಲ್ಲಿಯ ಸಂಗತಿಗಳಿಗೆ ತಮ್ಮ ಮನ ಒಡ್ಡುತ್ತಾರೆ. ಅವರುಗಳ ಗಮನ ಅಲೌಕಿಕ ವಿಷಯಗಳ ಕಡೆಗೆ ಹರಿಯಲಿ ಎಂದು ಲೇಖಕರು ಆಶಿಸಿ 'ವಿಜ್ಞಾನ ಮತ್ತು ಮಾನವನ ಗುರಿ' ಮುಂತಾದ ವಿಷಯಗಳುಳ್ಳ ರತ್ನಗಳನ್ನು ಆಯ್ದು ಅವರ ಮುಂದಿಟ್ಟಿದ್ದಾರೆ. ಇವುಗಳ ಪ್ರಯೋಜನವನ್ನು ಎಲ್ಲ ಆಸ್ತಿಕರು ಪಡೆದುಕೊಳ್ಳಬೇಕೆಂದು ಪ್ರಕಾಶಕರು ಬಯಸುತ್ತಾರೆ.

**ಸರ್ವಜ್ಞಾಚಾರ್ಯ**
**ಸೇವಾ ಸಂಘ**

Rs. 280/-

॥ ಶ್ರೀವೇಂಕಟೇಶಾಯ ನಮಃ ॥

# ಶ್ರೀವೇಂಕಟೇಶ ಮಾಹಾತ್ಮ್ಯೆ

## ೧ನೆಯ ಅಧ್ಯಾಯ

(ಶ್ರಿಯಃ ಕಾಂತಾಯ ಕಲ್ಯಾಣನಿಧಯೇ ನಿಧಯೇಽರ್ಥಿನಾಂ
ಶ್ರೀವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಲಂ ॥)

ಬ್ರಹ್ಮರುದ್ರಾದಿಯರಿಂದ ಪೂಜಿತನೂ ವೇಂಕಟಾಚಲಪತಿಯೂ ಆದ ನಿನ್ನನ್ನು, ಹೇ ರಮಾರಮಣನೇ, ಶ್ರೀ ಶ್ರೀನಿವಾಸನೇ, ನಾನು ಸೇವಿಸುತ್ತೇನೆ; ನನ್ನ ಇಹಪರಗಳಲ್ಲಿಯ ಕಷ್ಟಗಳನ್ನು ಕಳೆದು ಇಷ್ಟವೆಲ್ಲವನ್ನೂ ನನಗೆ ದಯಪಾಲಿಸು.

ಶೌನಕಾದಿ ಮುನಿಗಳು ಸೂತಪುರಾಣಿಕರನ್ನು ಕುರಿತು ಮಾತನಾಡುತ್ತಾರೆ :— 'ಹೇ ಸೂತರೆ, ನಾವು ತಮ್ಮಿಂದ ಒಡ್ಡಿ ಕ್ಷೇತ್ರದ ಶ್ರೀರಂಗನಾಥನ, ಕಾಳಹಸ್ತಿಪತಿಯಾದ ರುದ್ರದೇವರ, ಜಗನ್ನಾಥಸ್ವಾಮಿಯಾದ ಶ್ರೀವಿಷ್ಣುವಿನ ಅಸದೃಶವಾದ ಮಹಿಮೆಯನ್ನು ಕೇಳಿದೆವು. ಈಗ, ಇನ್ನು, ವೇಂಕಟಗಿರೀಶನಾದ ಶ್ರೀ ಶ್ರೀನಿವಾಸನ ಮಹಿಮೆಯನ್ನು ಕೇಳಬಯಸುವೆವು.' ಹೀಗೆಂದೊಡನೆಯೆ ಸೂತರು :— 'ಬ್ರಾಹ್ಮಣವರ್ಯರೇ, ನೀವು ವೇಂಕಟಾಚಲಪತಿಯ ಚರಿತೆಯನ್ನು ಕೇಳಬಯಸಿದುದು ಸಂತೋಷಕರವು. ಈ ಚರಿತೆಯನ್ನು ನಾನು ಈ ಮುಂಚೆ ಪರಮತೇಜಸ್ವಿಗಳಾದ ಶ್ರೀಬಾದರಾಯಣಮುನಿಗಳಿಂದ ಕೇಳಿ ತಿಳಿದಿದ್ದೇನೆ. ಅದನ್ನೇ ಧ್ಯಾನಕ್ಕೆ ತಂದು ನಾನು ನಿಮಗೆ ವಿವರಿಸಿ ಹೇಳುವೆನು; ಚಿತ್ತಗೊಟ್ಟು ಕೇಳಿರಿ.'

ಸೂತರು ಅನ್ನುತ್ತಾರೆ — ಪೂರ್ವದಲ್ಲಿ ಪರಮಧಾರ್ಮಿಕನಾದ ಜನಕನೆಂಬ ಅರಸನಿದ್ದನು. ಅಹಂಕಾರ ಮಮಕಾರಗಳಿಲ್ಲದೆ, ಸದಾ ತೃಪ್ತನಾಗಿದ್ದು, ಶ್ರೀವಿಷ್ಣುಸರ್ವೋತ್ತಮಜ್ಞಾನವುಳ್ಳವನಾಗಿ, ಶ್ರೀವಾಸುದೇವನ ಅನುಗ್ರಹಕ್ಕೆ ಆತನು ಮುಖ್ಯ ಪಾತ್ರನಾಗಿದ್ದನು. ಆತನಿಗೆ ಶ್ರೀಹರಿಭಕ್ತನಾದ ಕುಶಧ್ವಜನೆಂಬ ತಮ್ಮನಿದ್ದನು. ಅಣ್ಣನ ಅಪ್ಪಣೆಯಂತೆ ಈತನು ರಾಜ್ಯಕಾರಭಾರದಲ್ಲಿ ದಕ್ಷನಾಗಿದ್ದನು. ಜನಕರಾಜನಿಗೆ ಜಾನಕಿ